# ಬೆಂಗಳೂರು ನಗರದ ವೀರಶೈವ ಮಠಗಳು
# ಒಂದು ಸಾಂಸ್ಕೃತಿಕ ಅಧ್ಯಯನ





ಡಾ|| ಬಿ.ಸಿ. ವೀರಪ್ಪ



ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

# ಬೆಂಗಳೂರು ನಗರದ
# ವೀರಶೈವ ಮಠಗಳು-ಒಂದು ಸಾಂಸ್ಕೃತಿಕ ಅಧ್ಯಯನ

ಡಾ|| ಬಿ.ಸಿ. ವೀರಪ್ಪ, ಎಂ.ಎ., ಬಿ.ಇಡಿ., ಪಿಎಚ್.ಡಿ.




ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು
೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ, ಜಯನಗರ
ಬೆಂಗಳೂರು - ೫೬೦೦೮೨



## ಅರ್ಪಣೆ

ನಮ್ಮ ನಾಡಿನ ಮಹಾನ್ ಚೇತನರೂ
ನಿತ್ಯ ನಿರಂತರ ಜ್ಞಾನಾನ್ನದಾನಿಗಳೂ
ಶರಣ ಕುಲ ಸರ್ವಾಚಾರ ಸಂಪನ್ನರೂ
ಬಸವತತ್ವ ಅನುಷ್ಠಾನದ ಸಾಕಾರ ರೂಪಿಗಳೂ
ಈ ಶತಮಾನದ ವಿರಕ್ತ ವೀರಾಗ್ರಗಣ್ಯರೂ
ಪರಮ ಪೂಜ್ಯರೂ ಆದ

**ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು**

ಶ್ರೀ ಸಿದ್ಧಗಂಗಾ ಕ್ಷೇತ್ರ
ಇವರ ಚರಣ ಕಮಲಗಳಲ್ಲಿ ಈ ಗ್ರಂಥ ಪುಷ್ಪದ ಸಮರ್ಪಣೆ

ಡಾ॥ ಬಿ.ಸಿ. ವೀರಪ್ಪ

## ಪ್ರಕಾಶಕರ ನುಡಿ

ಇದು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಒಂದು ಮಹತ್ವದ ಸಂಶೋಧನ ಕೃತಿ. ಪರಿಷತ್ತಿನ ಧ್ಯೇಯೋದ್ದೇಶಗಳಲ್ಲಿ ವೀರಶೈವ ಮತ್ತು ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನಾತ್ಮಕ ಮತ್ತು ವೈಚಾರಿಕ ಗ್ರಂಥಗಳ ಪ್ರಕಟಣೆಯೂ ಒಂದಾಗಿದೆ. 'ಶರಣ ಸಂಪದ' ಮಾಲಿಕೆಯಲ್ಲಿ ಪ್ರಕಟವಾಗಿರುವ ನಾಡಿನ ಪ್ರಸಿದ್ಧ ವಿದ್ವಾಂಸರ ಎಂಟು ಉಪಯುಕ್ತ ಕೃತಿಗಳೇ ಅಲ್ಲದೆ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ ಸಂಪುಟಗಳೂ ಸೇರಿದಂತೆ ಈಗಾಗಲೇ ಇಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ಪರಿಷತ್ತು ಪ್ರಕಟಿಸಿದೆ.

ಭಾರತದಲ್ಲಿ ಭಕ್ತಿ ಚಳುವಳಿಯ ಸಾಮಾಜಿಕ ಆಯಾಮಗಳನ್ನು ಕುರಿತಂತೆ ಪರಿಷತ್ತು ಕೇಂದ್ರ ಸಾಹಿತ್ಯ ಅಕಾಡಮಿ ಸಹಯೋಗದಲ್ಲಿ ನಡೆಸಿದ ರಾಷ್ಟ್ರಮಟ್ಟದ ವಿಚಾರ ಸಂಕಿರಣದಲ್ಲಿ ಮಂಡಿತವಾದ ವಿದ್ವತ್ಪೂರ್ಣ ಪ್ರಬಂಧ ಸಂಕಲನವಾದ ''ಡೈಮೆನ್‌ಷನ್ಸ್ ಆಫ್ ಭಕ್ತಿ ಮೂಮೆಂಟ್ ಇನ್ ಇಂಡಿಯಾ'' ಪರಿಷತ್ತಿನ ಮತ್ತೊಂದು ಪ್ರತಿಷ್ಠಿತ ಪ್ರಕಟಣೆ. ರೆ ॥ ಉತ್ತಂಗಿ ಚೆನ್ನಪ್ಪನವರ ''ಅನುಭವ ಮಂಟಪ'' ಕೃತಿಯನ್ನು ಈಗಾಗಲೇ ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಲ್ಲಿ ಹೊರತಂದಿದ್ದು ಈಗ ತಮಿಳು, ತೆಲುಗು ಮತ್ತು ಮಲೆಯಾಳಂ ಭಾಷೆಗಳಲ್ಲೂ ಹೊರತರಲಾಗುತ್ತಿದೆ. ''ಶರಣ ಕಿರಣ'' ಶರಣರ ಜೀವನ ಮತ್ತು ಸಂದೇಶ ಕುರಿತಂತೆ ಪ್ರಕಟಿಸಲಾಗಿರುವ ಒಂದು ಕಿರು ವಿಶ್ವಕೋಶವೇ ಆಗಿದೆ.

ಪ್ರಸ್ತುತದ ''ಬೆಂಗಳೂರು ನಗರದ ವೀರಶೈವ ಮಠಗಳು - ಒಂದು ಸಾಂಸ್ಕೃತಿಕ ಅಧ್ಯಯನ'' ಪರಿಷತ್ತಿನ ಮೊದಲ ಬೃಹತ್ ಪ್ರಕಟಣೆ. ಇದು ಬೆಂಗಳೂರು ವಿಶ್ವವಿದ್ಯಾಲಯವು ಅಂಗೀಕರಿಸಿರುವ ನಿಬಂಧ. ಈ ನಿಬಂಧದ ಸಂಶೋಧಕರು: ಈಗ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿಗಳಾಗಿರುವ ಡಾ ॥ ಬಿ.ಸಿ. ವೀರಪ್ಪ ಅವರು. ನಿಬಂಧಕ್ಕೆ ಮಾರ್ಗದರ್ಶಕರು : ಹಿರಿಯ ಸಂಶೋಧಕರಾದ ಡಾ ॥ ಎಂ.ಎ. ಜಯಚಂದ್ರ ಅವರು. ಮೌಲ್ಯಮಾಪಕರು: ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ ॥ ಎಂ.ಎಂ. ಕಲಬುರ್ಗಿ ಮತ್ತು ಪ್ರಸಿದ್ಧ ವಿದ್ವಾಂಸರಾದ ಡಾ ॥ ಸಿ.ಪಿ. ಕೃಷ್ಣಕುಮಾರ್ ಅವರು.

ಈ ನಿಬಂಧ ಬೆಂಗಳೂರು ನಗರದಲ್ಲಿ ಒಂದು ಕಾಲದಲ್ಲಿ ಅತ್ಯಂತ ಕ್ರಿಯಾಶೀಲವಾಗಿ ಜನಸೇವೆ ಸಲ್ಲಿಸುತ್ತಿದ್ದ ವೀರಶೈವ ಮಠಗಳನ್ನು ಕುರಿತ ಒಂದು ವಿಸ್ತೃತ ಮತ್ತು ವಿಶೇಷ ಅಧ್ಯಯನ. ಒಂಬತ್ತು ಅಧ್ಯಾಯಗಳಲ್ಲಿ ಮೂಡಿ ಬಂದಿರುವ ಈ ನಿಬಂಧ ಕೇವಲ ಬೆಂಗಳೂರು ನಗರದ ವೀರಶೈವ ಮಠಗಳ ಇತಿಹಾಸವನ್ನಷ್ಟೇ ಅಲ್ಲದೆ ನಗರದ ಐತಿಹಾಸಿಕ ಹಿನ್ನೆಲೆಯನ್ನೂ ಸಂಕ್ಷಿಪ್ತವಾಗಿ ತಿಳಿಸುತ್ತದೆ. ಈ ಅಧ್ಯಯನವನ್ನು ಬಹಳ ಜನ ವಿದ್ವಾಂಸರು ಮೆಚ್ಚಿಕೊಂಡಿದ್ದಾರೆ.

ಡಾ ॥ ಬಿ.ಸಿ. ವೀರಪ್ಪ ಅವರ ಈ ವಿಶೇಷ ಅಧ್ಯಯನ ಗ್ರಂಥರೂಪದಲ್ಲಿ ಬೇಗ ಹೊರಬರಬೇಕೆಂಬುದು ಅದರ ಬೆರಳಚ್ಚಿನ ಪ್ರತಿಯನ್ನು ಓದಿದವರೆಲ್ಲರ ಅಭಿಪ್ರಾಯವಾಗಿತ್ತು. ವೀರಪ್ಪನವರು ಈ ಕುರಿತು ನಮ್ಮೊಡನೆ ಪ್ರಸ್ತಾಪಮಾಡಿದಾಗ ಪರಿಷತ್ತಿನಿಂದಲೇ ಪ್ರಕಟಿಸುವುದೆಂದು ತೀರ್ಮಾನಿಸಲಾಯಿತು. ಆದರೆ ಈ ಬೃಹತ್ ಪ್ರಮಾಣದ ಗ್ರಂಥದ ಪ್ರಕಟಣೆಗೆ ಗಣನೀಯ ಪ್ರಮಾಣದ ಹಣದ ಅಗತ್ಯವೂ ಇತ್ತು. ಆ ಸಂದರ್ಭದಲ್ಲಿ ಬೆಂಗಳೂರು ಮಹಾನಗರಪಾಲಿಕೆಯ ಪೂಜ್ಯ ಮಹಾಪೌರರಾದ ಶ್ರೀಮತಿ ಪ್ರೇಮಾ ಕಾರಿಯಪ್ಪ ಮತ್ತು ಆಯುಕ್ತರಾದ ಶ್ರೀ ಅಶೋಕ ದಳವಾಯಿ ಅವರನ್ನು ಕಂಡು ಈ ನಿಬಂಧದ ಪ್ರಕಟಣೆಗೆ ಮಹಾನಗರ ಪಾಲಿಕೆಯಿಂದ ನೆರವು ನೀಡಬೇಕೆಂದು ಮನವಿಮಾಡಿಕೊಂಡೆ. ಅವರು ತುಂಬು ಹೃದಯದಿಂದ ನಿಬಂಧದ ಮಹತ್ವವನ್ನು ಮನಗಂಡು ಉದಾರ ನೆರವು ನೀಡಲು ಒಪ್ಪಿದರು. ಜೊತೆಗೆ ಬೆಂಗಳೂರು ನಗರದ

ಕೆಲವು ವೀರಶೈವ ಸೇವಾ ಸಂಸ್ಥೆಗಳು ಹಾಗೂ ಸಾಹಿತ್ಯಾಸಕ್ತರೂ ನೆರವಾದರು. ಅವರೆಲ್ಲರ ನೆರವಿನ ಫಲವಾಗಿ ಈ ಮಹತ್ವದ ಗ್ರಂಥವನ್ನು ಪ್ರಕಟಿಸಲು ಪರಿಷತ್ತಿಗೆ ಸಾಧ್ಯವಾಯಿತು.

ಪ್ರಕಟಣೆಗೆ ಗಣನೀಯವಾದ ನೆರವನ್ನು ನೀಡಿದ ಬೆಂಗಳೂರು ಮಹಾನಗರ ಪಾಲಿಕೆಯ ಪೂಜ್ಯ ಮಹಾಪೌರರು ಮತ್ತು ಸರ್ವ ಸದಸ್ಯರನ್ನೂ ಅಧಿಕಾರ ವರ್ಗದವರನ್ನೂ ಪರಿಷತ್ತು ಕೃತಜ್ಞತೆಗಳೊಂದಿಗೆ ಮನತುಂಬಿ ನೆನೆಯುತ್ತದೆ. ಹಾಗೆಯೇ, ನಮ್ಮ ಪ್ರಯತ್ನಕ್ಕೆ ಯಶಸ್ಸು ದೊರಕಲು ಉದಾರ ಹೃದಯದಿಂದ ನೆರವಾದ ವೀರಶೈವ ಸಂಘ ಸಂಸ್ಥೆಗಳು ಮತ್ತು ವ್ಯಕ್ತಿಗಳಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ನಾವು ಕಂಡಂತೆ ನಮ್ಮ ರಾಜ್ಯದಲ್ಲಿ ಸಾವಿರಾರು ವೀರಶೈವ ಮಠಗಳಿವೆ. ಈ ಮಠಗಳು ನಾಡಿನ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಬದುಕಿಗೆ ಶತಶತಮಾನಗಳಿಂದ ತಮ್ಮದೇ ಆದ ಕೊಡುಗೆ ಸಲ್ಲಿಸುತ್ತ ಬಂದಿವೆ. ಈಗಲೂ ಆ ಸೇವೆಯನ್ನು ಮುಂದುವರಿಸಿವೆ. ಆದರೆ ಬೆಂಗಳೂರು ನಗರದಲ್ಲಿ ಇದ್ದವೆಂದು ಈ ನಿಬಂಧದಲ್ಲಿ ದಾಖಲಾಗಿರುವ 74 ಮಠಗಳ ಅಸ್ತಿತ್ವ ಈಗ ಇಲ್ಲವಾಗಿ ಕೇವಲ ಹತ್ತಾರು ಮಠಗಳು ಮಾತ್ರ ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬಂದಿರುವುದು ಕಾಣಬರುತ್ತದೆ. ವೀರಶೈವ ಧರ್ಮ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ಮಾತ್ರವಲ್ಲ, ನಾಡಿನ ರಾಜಧಾನಿ ಬೆಂಗಳೂರು ನಗರದ ಸಾಂಸ್ಕೃತಿಕ ದೃಷ್ಟಿಯಿಂದಲೂ ಇದು ಒಂದು ದೊಡ್ಡ ನಷ್ಟವೆಂದೇ ಹೇಳಬೇಕು.

ಏನೇ ಇರಲಿ, ಡಾ॥ ಬಿ.ಸಿ. ವೀರಪ್ಪ ಅವರು ತಮ್ಮ ಪಿಹೆಚ್‌ಡಿ ಪದವಿಯ ಅಧ್ಯಯನಕ್ಕಾಗಿ ಈ ವಿಷಯವನ್ನು ಆರಿಸಿಕೊಂಡು ತುಂಬ ಶ್ರದ್ಧಾಸಕ್ತಿಗಳಿಂದ ಕೆಲಸಮಾಡಿದ್ದಾರೆ. ಅಗತ್ಯ ಆಧಾರಗಳಿಗಾಗಿ 97 ಕನ್ನಡ ಗ್ರಂಥಗಳು, 18 ಸಂಭಾವನಾ ಗ್ರಂಥಗಳು ಹಾಗೂ ಸ್ಮರಣ ಸಂಪುಟಗಳು, 10 ನಿಯತಕಾಲಿಕೆಗಳು ಹಾಗೂ ಇತರ 17 ದಾಖಲೆಗಳು, 23 ಆಂಗ್ಲ ಗ್ರಂಥಗಳು ಹಾಗೂ ವಿಶ್ವಕೋಶ ಮತ್ತಿತರ ಪ್ರಕಟಣೆಗಳಿಂದ ಆಕರವನ್ನು ಪಡೆದಿದ್ದಾರೆ. ರಾಜ್ಯ ಪತ್ರಾಗಾರದಲ್ಲಿರುವ 103ಕ್ಕೂ ಹೆಚ್ಚು ಕಡತಗಳನ್ನು ಹುಡುಕಿ ಮಾಹಿತಿ ಪಡೆದಿದ್ದಾರೆ. ಕೆಲವು ಮಠಗಳಲ್ಲಿ ಹಾಗೂ ಖಾಸಗಿ ವ್ಯಕ್ತಿಗಳಿಂದ ದೊರೆತ ದಾಖಲೆಗಳು ಮತ್ತು ಹೇಳಿಕೆಗಳನ್ನೂ ಸಂಗ್ರಹಿಸಿದ್ದಾರೆ. ನಿಬಂಧದ ಪ್ರತಿಯೊಂದು ಅಧ್ಯಾಯ ಮತ್ತು ಮಠಗಳ ಪರಿಚಯದ ಕೊನೆಯಲ್ಲೂ ಕೊಟ್ಟಿರುವ ಅಡಿ ಟಿಪ್ಪಣಿಗಳ ಒಟ್ಟು ಸಂಖ್ಯೆಯೇ 1802 ರಷ್ಟಿದೆ. ಈ ಅಡಿ ಟಿಪ್ಪಣಿಗಳನ್ನೇ ಹಿಡಿದು ಹುಡುಕ ಹೊರಟರೆ ಸಾವಿರ ಪುಟಗಟ್ಟಲೇ ಆಗುವಷ್ಟು ಮಾಹಿತಿ ದೊರಕೀತು. ಇದೊಂದು ಬೃಹತ್ ಪ್ರಮಾಣದ ಆಕರ ಮತ್ತು ದಾಖಲೆಗಳನ್ನು ಆಧರಿಸಿದ ಮಹತ್ವದ ನಿಬಂಧವೆಂದೇ ನಾವು ಭಾವಿಸಿದ್ದೇವೆ. ಇಂತಹ ಶಾಸ್ತ್ರೀಯ ಅಧ್ಯಯನದ ದಾಖಲೆಯ ಗ್ರಂಥವನ್ನು ಪ್ರಕಟಿಸಲು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಸಹಜವಾಗಿಯೇ ಅಭಿಮಾನಪಡುತ್ತದೆ.

ಈ ನಿಬಂಧ ಕೇವಲ ಬೆಂಗಳೂರು ನಗರದಲ್ಲಿ ಹಿಂದೆ ಇದ್ದ ಮತ್ತು ಈಗ ಉಳಿದಿರುವ ವೀರಶೈವ ಮಠಗಳ ಸ್ಥಿತಿಗತಿಗಳ ಸಮೀಕ್ಷೆಗೆ ಮಾತ್ರ ಸೀಮಿತವಾಗಿಲ್ಲ. ಬೆಂಗಳೂರು ನಗರದ ಐತಿಹಾಸಿಕ ಹಿನ್ನೆಲೆ, ಮಠಗಳ ಅರ್ಥ, ವೀರಶೈವ ಮಠಗಳ ಪ್ರಭೇದಗಳು, ಪದ್ಧತಿ ಪರಂಪರೆ, ವೀರಶೈವ ಧರ್ಮಸ್ವರೂಪ, ಶರಣ ಸಿದ್ಧಾಂತ- ಹೀಗೆ ನಾನಾ ವಿಷಯಗಳ ಪರಿಚಯವನ್ನು ಮಾಡಿ ಕೊಡುತ್ತದೆ. ಇಲ್ಲಿನ ವೀರಶೈವ ಮಠಗಳು, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ ಮತ್ತು ಸಾಮಾಜಿಕವಾಗಿ ಸಲ್ಲಿಸಿಕೊಂಡು ಬಂದ ಸೇವೆಯನ್ನು ಈ ಕೃತಿ ದಾಖಲುಮಾಡಿದೆ. ಒಟ್ಟಾರೆ, ಜನರಲ್ಲಿ ಐತಿಹಾಸಿಕ ಪ್ರಜ್ಞೆಯನ್ನು ಬೆಳೆಸಲು ಈ ನಿಬಂಧ ಒಳ್ಳೆಯ ಪ್ರೇರಣೆ ನೀಡುತ್ತದೆನ್ನುವಲ್ಲಿ ಸಂಶಯವಿಲ್ಲ.

ಇಂತಹ ಮೌಲಿಕವಾದ ನಿಬಂಧ ಸಿದ್ಧಪಡಿಸಿದ ಡಾ॥ ಬಿ.ಸಿ. ವೀರಪ್ಪನವರನ್ನು ಪರಿಷತ್ತು ಅಭಿನಂದಿಸುತ್ತದೆ. ಗ್ರಂಥವನ್ನು ಆಕರ್ಷಕ ಮುಖಪುಟ ವಿನ್ಯಾಸದೊಂದಿಗೆ ತುಂಬ ಅಚ್ಚುಕಟ್ಟಾಗಿ, ಅಂದವಾಗಿ ಮುದ್ರಿಸಿಕೊಟ್ಟ ಸತ್ಯಶ್ರೀ ಪ್ರಿಂಟರ್ಸ್ ಅವರಿಗೆ ವಂದನೆಗಳು. ಪ್ರಕಾಶನಕ್ಕೆ ನೆರವಾದ ಸಮಸ್ತರನ್ನೂ ಮತ್ತೊಮ್ಮೆ ನೆನೆಯುತ್ತೇವೆ.

ಬೆಂಗಳೂರು
1.8.2001

**ಗೊ.ರು. ಚನ್ನಬಸಪ್ಪ**
ಅಧ್ಯಕ್ಷ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

# ಮುನ್ನುಡಿ

ಡಾ॥ ಬಿ.ಸಿ. ವೀರಪ್ಪನವರ ಪಿಎಚ್.ಡಿ. ನಿಬಂಧ ''ಬೆಂಗಳೂರು ನಗರದ ವೀರಶೈವ ಮಠಗಳು : ಒಂದು ಸಾಂಸ್ಕೃತಿಕ ಅಧ್ಯಯನ'' ಎಂಬೀ ಕೃತಿಗೆ ಮುನ್ನುಡಿ ಬರೆಯಲು ನನಗೆ ಬಹು ಸಂತೋಷವೆನ್ನಿಸಿದೆ.

ಅದು ಸಂಪ್ರಬಂಧವಿರಲಿ, ಸಂಶೋಧನ ಕೃತಿಯಿರಲಿ ನೀವು ನೋಡಬೇಕಾದುದು ಅದು ಆಯ್ಕೆಮಾಡಿಕೊಂಡಿರುವ ವಸ್ತು ನಿಜವಾಗಿಯೂ ವಿಚಾರಾರ್ಹವೇ, ಅದು ಸಂಶೋಧನೆಗೊಂಡು ತಿಳಿಯದ ವಿಷಯಗಳು ಆ ಮೂಲಕ ಹೊರಗೆ ಬರುವ ಸಾಧ್ಯತೆಗಳಿವೆಯೇ ಎಂಬುದನ್ನು. ಮತ್ತು ತನ್ನ ಸಂಶೋಧನೆಯನ್ನು ಒಬ್ಬ ವ್ಯಕ್ತಿ ಎಷ್ಟು ಗಂಭೀರವಾಗಿ ಪರಿಭಾವಿಸಿ, ಒಂದು ಶಿಸ್ತಿನಿಂದ ಶ್ರಮಪೂರ್ವಕ ಪ್ರಯತ್ನದಿಂದ ಅದನ್ನು ಕೈಗೊಂಡಿದ್ದಾನೆಂಬುದು ಅವನ ಬರಹದಿಂದಲೇ ವ್ಯಕ್ತವಾಗುತ್ತದೆ. ಆ ವಸ್ತುವಿನ ಬಗ್ಗೆ ನಡೆಯುವ ಸಂಶೋಧನೆಯಿಂದ ಪ್ರಯೋಜನವಿದೆಯೇ ಇಲ್ಲವೇ ಎಂಬುದು ಬಹು ಅಮುಖ್ಯ. ಒಂದು ವಿಷಯಕವಾದ ನಮ್ಮ ಜ್ಞಾನವನ್ನು ಪ್ರಮಾಣಾತ್ಮಕವಾಗಿ ಮಾತ್ರವಲ್ಲ ಗುಣಾತ್ಮಕವಾಗಿಯೂ ಹೆಚ್ಚಿಸಬಲ್ಲ ಬರಹವೇ ಸಂಶೋಧನಾತ್ಮಕ ಎಂಬ ಹೆಸರಿಗೆ ಅರ್ಹವಾಗಲು ಅರ್ಹವಾದುದು.

ಬೆಂಗಳೂರು ನಗರದಲ್ಲಿ ಅರವತ್ತಕ್ಕೆ ಮೇಲ್ಪಟ್ಟು ವೀರಶೈವ ಮಠಗಳಿದ್ದು ಇಂದು ಕ್ರಿಯಾತ್ಮಕವಾಗಿ ಜೀವಂತವಾಗಿರುವ ಮಠಗಳು ಕೆಲವೇ ಆಗಿದ್ದರೂ ಹಲವು ಮಠಗಳು ಈಗ ಹೆಸರುಗಳಲ್ಲಿ ಮಾತ್ರ ಉಳಿದಿರುವುದು ಎಲ್ಲರಿಗೂ ತಿಳಿದ ವಿಷಯ. ಭಾರತದಲ್ಲಿ ಕ್ರೈಸ್ತಮಠಗಳನ್ನು ಹೊರತುಪಡಿಸಿದರೆ ಸಾಮಾಜಿಕವಾಗಿ ಶ್ರಮಿಸಿರುವ ವಿಷಯದಲ್ಲಿ ವೀರಶೈವ ಮಠಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ಒಟ್ಟು ಆ ಹಿನ್ನೆಲೆಯಲ್ಲಿ ಡಾ॥ ವೀರಪ್ಪನವರು ಬೆಂಗಳೂರು ನಗರದ ವೀರಶೈವ ಮಠಗಳ ಚರಿತ್ರೆ, ರಚನೆ, ಸಾಂಸ್ಕೃತಿಕ ಚಟುವಟಿಕೆಗಳನ್ನು ಬಹು ಸಮಗ್ರವಾಗಿ ಅಧ್ಯಯನ ಮಾಡಿದ್ದಾರೆಂಬುದು ಒಮ್ಮೆ ಅವರ ಕೃತಿಯನ್ನವಲೋಕಿಸಿದವರಿಗೆ ಸ್ಪಷ್ಟವಾಗುತ್ತದೆ. ಆ ಬಗ್ಗೆ ಕೆಲಸ ಮಾಡಲು ಹೊರ ನೋಟಕ್ಕೆ ಮಾಹಿತಿ ದೊರಕುವುದಿಲ್ಲವೆಂಬ ಭಾವನೆ ಇದ್ದರೂ ಅವರು ಆ ಭಾವನೆಯನ್ನು ತಮ್ಮ ವ್ಯಾಪಕವಾದ ಆಕರಶೋಧ, ಕ್ಷೇತ್ರಕಾರ್ಯಗಳ ಮೂಲಕ ಹೋಗಲಾಡಿಸಿದ್ದಾರೆ. ಮಠಗಳಲ್ಲಿ ಸುಲಭವಾಗಿ ಲಭ್ಯವಾಗದ ಕಾಗದ ಪತ್ರಗಳನ್ನೂ ಕರ್ನಾಟಕ ರಾಜ್ಯ ಪತ್ರಾಗಾರದಲ್ಲಿ ಲಭ್ಯವಾಗುವ ರೆವಿನ್ಯೂ ದಾಖಲೆಗಳನ್ನೂ ಮತ್ತು ಅಂತಹ ಹಲವು ಬಗೆಯ ದಾಖಲೆಗಳನ್ನೂ ಸಂಗ್ರಹಿಸಿ, ಶಾಸನ, ತಾಮ್ರಪಟ, ಸಾಹಿತ್ಯ ಕೃತಿಗಳಂತೂ ಸರಿಯೇ, ಎಲ್ಲ ಕಡೆಯಿಂದ ಸಂಗ್ರಹಿಸಿರುವ ವಿಷಯ ವೈವಿಧ್ಯವು ಆಶ್ಚರ್ಯವನ್ನು ಹುಟ್ಟಿಸುತ್ತದೆ. ಬೆಂಗಳೂರು ನಗರದ ಚರಿತ್ರೆ, ವೀರಶೈವ ಧರ್ಮದ ಚರಿತ್ರೆ ಇವುಗಳ ಹಿನ್ನೆಲೆಯಲ್ಲಿ, ಗುರುಪೀಠ-ವಿರಕ್ತ ಪೀಠಗಳ ರೂಪ ಸ್ವರೂಪಗಳಲ್ಲಿ ಇರುವ ಭೇದದ ಹಿನ್ನೆಲೆಯಲ್ಲಿ ಆ ಎಲ್ಲ ಮಠಗಳ ಹಿಂದಿನಿಂದ ಆಧುನಿಕ ಕಾಲದವರೆಗಿನ ಇತಿಹಾಸವನ್ನು ನಿರೂಪಿಸಿ, ಅವುಗಳ ಸಾಂಸ್ಕೃತಿಕ ಚಟುವಟಿಕೆಗಳನ್ನು ಎತ್ತಿ ಹಿಡಿದಿದ್ದಾರೆ. ನಮಗೆ ತಿಳಿಯದ ನೂರಾರು ಹೊಸ ಅಂಶಗಳು ಈ ಕೃತಿಯಲ್ಲಿವೆ. ಮೂಲ ಸಾಮಗ್ರಿಯ ಜೊತೆ ಸಾಕಷ್ಟು ಪರಾಮರ್ಶನ ಗ್ರಂಥ ಲೇಖನಗಳನ್ನು ಓದಿ ಅವುಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಂಡು ಒಬ್ಬ ಪ್ರಾಮಾಣಿಕ ಸಂಶೋಧಕನಂತೆ ಅವುಗಳಿಗೆ ಸೂಕ್ತ ಸ್ಥಾನವನ್ನು ನಿಬಂಧದಲ್ಲಿ ನೀಡಿದ್ದಾರೆ. ಹಲವು ಸಂಗತಿಗಳನ್ನು ನಿರ್ಭಯವಾಗಿ ನಿರೂಪಿಸಿದ್ದಾರೆ. ಸತ್ಯವನ್ನು, ಸತ್ಯವನ್ನು ಮಾತ್ರ ಹೇಳಬೇಕೆಂಬ ಸಂಶೋಧಕನಿಗೆ ಅಂತಹ ಆತ್ಮವಿಶ್ವಾಸವಿದ್ದರೆ ಅದು ಸ್ವಾಭಾವಿಕ.

ಇಲ್ಲಿನ ಅಪೂರ್ವ ಮಾಹಿತಿಯು ಹೆಚ್ಚಿನ ಸಂಶೋಧನೆಗೆ ಬಳಕೆಯಾಗುವುದಲ್ಲದೆ ಅನುಬಂಧಗಳು ಅಜ್ಞಾತವಾಗಿದ್ದ ಆಕರಗಳ ಕಡೆ ತೋರ್ಬೆರಳಾಗಿಯೂ ನಿಲ್ಲುತ್ತವೆ. ಈ ನಿಬಂಧ ಡಾ॥ ವೀರಪ್ಪನವರ ಹಲವು ವರ್ಷಗಳ ನಿರಂತರ ಶ್ರಮದ

ಪ್ರತೀಕ. ಈ ಮಾದರಿಯನ್ನನುಸರಿಸಿ ಕರ್ನಾಟಕದ ಬೇರೆಬೇರೆ ಮಠಗಳ ಸಾಂಸ್ಕೃತಿಕ ಅಧ್ಯಯನಗಳು ನಡೆಯುವ ಅಗತ್ಯವಿದೆ, ಮತ್ತು ವೀರಶೈವ ಧರ್ಮದ ಸಾಮಾಜಿಕ ಇತಿಹಾಸದ ಪುನಾರಚನೆಯನ್ನು ಮಾಡಲು ಅಪೂರ್ವ ಸಾಮಗ್ರಿ ಲಭ್ಯವಿದ್ದು, ಆ ವಿಷಯವಾಗಿ ಹೆಚ್ಚಿನ ಕೆಲಸ ನಡೆಯುವ ಅಗತ್ಯವಿದೆ. ಅಂತಹ ಅಧ್ಯಯನಗಳಿಗೆ ಈ ನಿಬಂಧ ಪ್ರಚೋದನೆಯಾಗಲಿ ಎಂದು ಹಾರೈಸುತ್ತೇನೆ.

ಇಂತಹ ನಿಬಂಧಗಳಿಗೆ ಪಿಎಚ್.ಡಿ. ಪದವಿ ದೊರಕುವುದಾದರೆ ಆ ಪದವಿಗಳ ಬೆಲೆ ಎಂದೂ ಇಳಿಯುವುದಿಲ್ಲವೆಂಬ ಮಾತು ಹೇಳಬೇಕಾದ್ದನ್ನೆಲ್ಲ ಹೇಳುತ್ತದೆ. ನಾನಾಗಲೇ ಅನ್ಯತ್ರ ವ್ಯಕ್ತಪಡಿಸಿದ್ದೇನೆ-ಡಾ. ಆ.ನೇ. ಉಪಾಧ್ಯೆಯವರು ಒಮ್ಮೆ ನನಗೆ ಹೇಳಿದ ಮಾತು ಬಹು ಪ್ರಿಯವಾದುದು, ಅತ್ಯಂತ ಅರ್ಥಗರ್ಭಿತವಾದುದು- "ಪಿಎಚ್.ಡಿ., ಎಂಬುದು ಒಬ್ಬ ವ್ಯಕ್ತಿ ಸಂಶೋಧನೆ ಮಾಡಿದ್ದಾನೆ ಎಂಬುದಕ್ಕಿಂತ ಅವನು ಸಂಶೋಧನೆ ಮಾಡಬಲ್ಲ ಎನ್ನುವುದರ ಬಗ್ಗೆ ಒಂದು ವಿಶ್ವವಿದ್ಯಾಲಯ ಕೊಟ್ಟ ಶಿಫಾರಸು ಪತ್ರ". ಪಿಎಚ್.ಡಿ. ನಿಬಂಧವು ಎಷ್ಟೇ ಆಗಲಿ ಒಂದು ಪದವಿಗಾಗಿ ಮಾರ್ಗದರ್ಶಕರ ನೇತೃತ್ವದಲ್ಲಿ ಸಿದ್ಧಪಡಿಸಿದ್ದು. ಅದು ಅಲ್ಲಲ್ಲಿ ಹಸಿ ಹಸಿಯಾಗಿರುವುದು ಸ್ವಾಭಾವಿಕವೇ. ಆ ಪದವಿಯನ್ನು ಪಡೆದಾದ ಮೇಲೆ ಒಬ್ಬ ವ್ಯಕ್ತಿ ಸಂಶೋಧನೆಗಳನ್ನು ಮುಂದುವರಿಸುತ್ತ ಸಂಶೋಧನ ಮನೋಧರ್ಮವನ್ನು ಬೆಳಸಿಕೊಂಡು, ಹೆಚ್ಚು ಹೆಚ್ಚು ಸಂಶೋಧನಗಳನ್ನು ಮಾಡುತ್ತ ಅದರಲ್ಲೇ ಸಂತೋಷ ತೃಪ್ತಿಪಡುವುದು ಬಹು ಮುಖ್ಯ. ಸಂಶೋಧಕ ಹೊಸದನ್ನು ಕಂಡು ಹಿಡಿದ ಎಂಬ ಮಾತು ಸರಿಯೇ; ಅಂತೆಯೇ ಆ ಹೊಸದು ತಾನು ಹೊರಬರಲು ಆ ಸಂಶೋಧಕನನ್ನು ಆರಿಸಿಕೊಂಡಿತು ಎಂಬುದೂ ನಿಜವೇ. ಪಾಶ್ಚಾತ್ಯ ದೇಶಗಳಲ್ಲಿ ಅಂತಹ ಮೌಲಿಕ ಶೋಧಗಳನ್ನು ಮಾಡಿ ಎಷ್ಟು ಸಂಪ್ರಬಂಧಗಳನ್ನು ಪ್ರಕಟಿಸಿದನು ಎಂಬುದರ ಮೇಲೆ ಸಂಶೋಧನ ಮೌಲ್ಯಮಾಪನ ನಡೆಯುತ್ತದೆ. ಈ ದೃಷ್ಟಿಯೇ ಸರಿಯಾದುದು ಎಂದು ಮತ್ತೆ ಹೇಳಬೇಕಾಗಿಲ್ಲ.

**ಎಂ. ಚಿದಾನಂದಮೂರ್ತಿ**

# ಹಾರೈಕೆ

ಶ್ರೀಮತಿ ಪ್ರೇಮಾ ಕಾರಿಯಪ್ಪ
ಮಹಾಪೌರರು
ಬೆಂಗಳೂರು ಮಹಾನಗರ ಪಾಲಿಕೆ
ಬೆಂಗಳೂರು

ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿರುವ ಡಾ|| ಬಿ.ಸಿ. ವೀರಪ್ಪನವರು 'ಬೆಂಗಳೂರು ನಗರದ ವೀರಶೈವ ಮಠಗಳು – ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯವನ್ನು ಕುರಿತು ವಿಶೇಷವಾದ ಸಂಶೋಧನೆಯನ್ನು ನಡೆಸಿ, ಬೆಂಗಳೂರು ವಿಶ್ವವಿದ್ಯಾಲಯದಿಂದ ಡಾಕ್ಟೊರೇಟ್ ಪದವಿಯನ್ನು ಪಡೆದು ನಗರ ಪಾಲಿಕೆಗೆ ಒಳ್ಳೆಯ ಗೌರವವನ್ನು ತಂದಿದ್ದಾರೆ. ಇದೀಗ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನಂತಹ ಹಿರಿಯ ಸಂಸ್ಥೆಯಿಂದ ಈ ಮಹಾಪ್ರಬಂಧದ ಪ್ರಕಟಣೆಯಾಗುತ್ತಿರುವುದು ಸಂತೋಷದ ಸಂಗತಿ. ಇಂತಹ ಒಂದು ಅಪೂರ್ವ ಸಂಶೋಧನ ಗ್ರಂಥ ಪ್ರಕಟಣೆಗಾಗಿ ಮಹಾಪೌರರ ನಿಧಿಯಿಂದ ನೆರವಾಗುವ ಅವಕಾಶ ದೊರೆತದ್ದು ನನಗೆ ಹರ್ಷವುಂಟುಮಾಡಿದೆ. ಬೆಂಗಳೂರಿನ ವೀರಶೈವ ಮಠಗಳಷ್ಟೇ, ಅಲ್ಲದೆ, ಈ ಗ್ರಂಥವು ಮಹಾನಗರದ ಇತಿಹಾಸದ ಮೇಲೂ ವಿಶೇಷ ಬೆಳಕು ಚೆಲ್ಲುತ್ತದೆ. ಅಜ್ಞಾತವಾಗಿದ್ದ ಅನೇಕ ವಿಚಾರಗಳನ್ನು ಒಳಗೊಂಡಿದೆ. ಇತಿಹಾಸಾಸಕ್ತರೆಲ್ಲರೂ ಈ ಗ್ರಂಥವನ್ನು ಓದುವಂತಾಗಲೆಂದು ಹಾರೈಸುತ್ತೇನೆ.

ಪ್ರೇಮಾ ಕಾರಿಯಪ್ಪ

# ಅರಿಕೆ

ಗ್ರಾಮಾಂತರ ಭಾಗದಿಂದ ಬಂದವನಾದ ನನಗೆ ಮೊದಲಿನಿಂದಲೂ ವೀರಶೈವ ಮಠಾಧೀಶರ ಬಗೆಗೆ ವಿಶೇಷವಾದ ಗೌರವಾದರಗಳು ಇದ್ದುವು. ಇದಕ್ಕೆ ಕಾರಣವೂ ಇತ್ತು. ನನ್ನ ಹುಟ್ಟೂರಾದ ಬೈಯಂಡಹಳ್ಳಿ ಒಂದು ಪುಟ್ಟಗ್ರಾಮ. ಸಾಮಾನ್ಯವಾಗಿ ನಮ್ಮ ಹಿರಿಯರು ತಿಂಗಳಲ್ಲಿ ಒಮ್ಮೆಯಾದರೂ ಊರಿಗೆ ಸಮೀಪದ ಯಾರಾದರೂ ಒಬ್ಬಿಬ್ಬರು ಮಠಾಧೀಶರನ್ನು ಮನೆಗೆ ಆಹ್ವಾನಿಸಿ ಅವರಿಗೆ ಪೂಜೋಪಚಾರ ಮಾಡುತ್ತಿದ್ದುದು ರೂಢಿಯಲ್ಲಿತ್ತು. ಇಂತಹ ಸಂದರ್ಭದಲ್ಲಿ ಶಿವಪೂಜೆಗೆ ಅಗತ್ಯವಾದ ಹೂವುಪತ್ರೆಗಳನ್ನು ಸಂಗ್ರಹಿಸಿ ಕೊಡುವುದು ನನ್ನ ಪಾಲಿನ ವಿಶೇಷ ಕರ್ತವ್ಯವಾಗಿತ್ತು.

1980-81ರ ಸಾಲಿನಲ್ಲಿ ನಾನು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ವಿದ್ಯಾರ್ಥಿಯಾಗಿದ್ದೆ. ಇದೇ ಸಂದರ್ಭದಲ್ಲಿ 1981ರ ಮೇ ತಿಂಗಳಲ್ಲಿ ನಮ್ಮ ಊರಿನಲ್ಲಿ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮವು ಏರ್ಪಾಟಾಗಿತ್ತು. ಈ ವಿಶೇಷ ಸಮಾರಂಭಕ್ಕೆ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ನೇತೃತ್ವದಲ್ಲಿ ನನ್ನ ಪೂಜ್ಯ ಗುರುಗಳಾದ ಡಾ॥ ಎಂ. ಚಿದಾನಂದ ಮೂರ್ತಿ ಹಾಗೂ ಪಂ॥ ಚನ್ನಪ್ಪ ಎರೇಸೀಮೆ ಇವರೇ ಮೊದಲಾದ ಗಣ್ಯರು ಆಗಮಿಸಿದ್ದರು. ಅಂದು ನಮ್ಮ ಮನೆಯಲ್ಲಿ ಈ ಗಣ್ಯರನ್ನು ಉಪಚರಿಸುವ ಅವಕಾಶ ನಮ್ಮದಾಗಿತ್ತು. ಅಲ್ಲಿ ಚನ್ನಪ್ಪ ಎರೇಸೀಮೆ ಅವರು 'ಏನಯ್ಯಾ, ಒಳ್ಳೆಯ ಗುರುಗಳ ಸಂಪರ್ಕದಲ್ಲಿರುವ ನೀನು ಡಾಕ್ಟೊರೇಟ್ ಪದವಿಯನ್ನು ಮಾಡಬಾರದೇಕೆ?' ಎಂಬುದಾಗಿ ಉತ್ತೇಜಿಸಿದ್ದರು. ಅವರು ಅಂದು ಹಾರೈಸಿದ್ದ ಈ ಮಾತುಗಳಿಗೆ ಮುಂದೊಂದು ದಿನ ಚಾಲನೆ ದೊರೆಯಬಹುದೆಂಬ ಕಲ್ಪನೆ ಕೂಡ ನನಗೆ ಇರಲಿಲ್ಲ.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಬೆಂಗಳೂರಿನ ಕನ್ನಡಪರ ಹೋರಾಟಗಳಿಗೆ ಕೇಂದ್ರ ಭೂಮಿಕೆಯಾಗಿದ್ದ ಸರ್ಪಭೂಷಣ ಮಠವು ನನ್ನ ಜೀವನದಲ್ಲಿ ಒಂದು ಹೊಸ ತಿರುವಿಗೆ ಕಾರಣವಾಯಿತು. 1988ರಿಂದ ಕನ್ನಡ ಶಕ್ತಿಕೇಂದ್ರದ ಸಕ್ರಿಯ ಕಾರ್ಯಕರ್ತನಾಗಿದ್ದ ನಾನು ಪ್ರತಿ ಬುಧವಾರ ಸಂಜೆ ಈ ಮಠದಲ್ಲಿ ನಡೆಯುತ್ತಿದ್ದ ಸಭೆಗೆ ತಪ್ಪದೆ ಹಾಜರಾಗುತ್ತಿದ್ದೆ. ಅಲ್ಲಿ ನನ್ನ ಆತ್ಮೀಯ ಗೆಳೆಯರಾಗಿದ್ದ ಎಸ್. ಶಿವಲಿಂಗಯ್ಯ ಹಾಗೂ ರಾ.ನಂ. ಚಂದ್ರಶೇಖರ್ ಇವರು ಸಾಹಿತ್ಯದ ವಿದ್ಯಾರ್ಥಿಯಾಗಿದ್ದ ನಾನು ಒಂದು ಸಂಶೋಧನೆಯನ್ನು ಮಾಡುವುದು ಒಳ್ಳೆಯದೆಂದು ಸದಾ ಹೇಳುತ್ತಿದ್ದರು. ಇಂತಹುದೇ ಸಂದರ್ಭವೊಂದರಲ್ಲಿ ನಮ್ಮ ಮೇಷ್ಟ್ರು (ಡಾ. ಎಂ. ಚಿದಾನಂದ ಮೂರ್ತಿಗಳವರು) ''ಬೆಂಗಳೂರಿನ ವೀರಶೈವ ಮಠಗಳು ಸಂಶೋಧನೆಗೆ ಒಂದು ಒಳ್ಳೆಯ ವಸ್ತುವಾಗಲಿವೆ. ಏಕೆಂದರೆ, ನಾಡಪ್ರಭು ಕೆಂಪೇಗೌಡರ ಕಾಲದಿಂದಲೂ ಇಲ್ಲಿನ ಮಠಗಳು ಸಾಕಷ್ಟು ಜನಮಾನ್ಯತೆ ಗಳಿಸಿವೆ. ಇವುಗಳ ಬಗೆಗೆ ಇದುವರೆಗೆ ಯಾರೂ ಗಂಭೀರವಾದ ಪ್ರಯತ್ನ ಮಾಡಿಲ್ಲ'' ಎಂದಿದ್ದರು. ಇದೇ ಸೂಚನೆಯನ್ನು ಅನುಸರಿಸಿ, ಅವರೇ ಪರಿಚಯಿಸಿಕೊಟ್ಟ ಡಾ॥ ಎಂ.ಎ. ಜಯಚಂದ್ರ ಅವರ ಮಾರ್ಗದರ್ಶನದಲ್ಲಿ 1992ರ ಫೆಬ್ರುವರಿಯಿಂದ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ವಿದ್ಯಾರ್ಥಿಯಾಗಿ ನನ್ನ ಸಂಶೋಧನೆಯನ್ನು ಪ್ರಾರಂಭಿಸಿದೆ. ಇಲ್ಲಿ ನಾನೇ ನನ್ನ ಸಂಶೋಧನೆಯನ್ನು ಪ್ರಾರಂಭಿಸಿದೆ ಎನ್ನುವುದಕ್ಕಿಂತ ನನ್ನ ಹಿತೈಷಿಗಳಾದ ಡಾ॥ ಸಿ.ಯು. ಮಂಜುನಾಥ್ ಹಾಗೂ ನನ್ನ ಮಡದಿ ಅನ್ನಪೂರ್ಣ ಇವರ ಒತ್ತಾಯಗಳು ಈ ನಿಟ್ಟಿನಲ್ಲಿ ನನ್ನನ್ನು ತೊಡಗಿಸಿದ್ದುವು ಎನ್ನುವುದೇ ಬಹುತೇಕ ಸರಿಯಾದ ಮಾತು.

ಪ್ರಾರಂಭದ ದಿನಗಳಲ್ಲಿ ಈ ಸಂಶೋಧನೆ ಅನೇಕ ಎಡರು ತೊಡರುಗಳಿಗೆ ಒಳಗಾಗಿತ್ತಾದರೂ, ಮುಂದಿನ ನಾಲ್ಕು ವರ್ಷಗಳಲ್ಲಿ ನನ್ನ ನಿರೀಕ್ಷೆಗೂ ಮೀರಿ ಪ್ರಗತಿಯನ್ನು ಕಂಡಿತ್ತು. ಮುಂದೆ 1997ರ ಅಂತ್ಯದ ವೇಳೆಗೆ ''ಬೆಂಗಳೂರು ನಗರದ ವೀರಶೈವ ಮಠಗಳು ಒಂದು ಸಾಂಸ್ಕೃತಿಕ ಅಧ್ಯಯನ'' ಎಂಬ ವಿಷಯವಾಗಿ ಮಹಾಪ್ರಬಂಧವನ್ನು ಅಚ್ಚಿನ ರೂಪದಲ್ಲಿ

ಸಿದ್ಧಪಡಿಸಿ ವಿಶ್ವವಿದ್ಯಾಲಯಕ್ಕೆ ಒಪ್ಪಿಸುವ ಹಂತಕ್ಕೆ ಬಂದು ಮುಟ್ಟಿತು. ನಂತರ 1998ರ ಜೂನ್ ಹದಿನೈದರಂದು ವಿಶ್ವವಿದ್ಯಾಲಯವು ಈ ವಿಷಯದ ಮೇಲೆ ನನಗೆ ಡಾಕ್ಟೊರೇಟ್ ಪದವಿಯನ್ನು ನೀಡಿತು.

ಈ ಐದಾರು ವರ್ಷಗಳ ಸಂಶೋಧನಾ ಕಾಲದಲ್ಲಿ ನನಗಾದ ಅನುಭವ ಅಪಾರವಾದದ್ದು. ಇಲ್ಲಿ ಅನೇಕ ಹೊಸ ವಿಚಾರಗಳು ಬೆಳಕು ಕಂಡಿವೆ ಎಂಬುದು ನನ್ನ ವಿನಮ್ರ ಅನಿಸಿಕೆ. ನಗರದ ವೀರಶೈವ ಮಠಗಳಿಗೆ ಸಂಬಂಧಿಸಿದಂತೆ ಸವಿಸ್ತಾರವೆನ್ನಬಹುದಾದ ವಿಷಯ ಸಂಗ್ರಹವಿಲ್ಲಿದೆ. ಆದರೂ ಸಮಗ್ರತೆಯ ದೃಷ್ಟಿಯಿಂದ ಇಲ್ಲಿ ಕೆಲವೊಂದು ಕೊರತೆಗಳು ಇದ್ದೇ ಇವೆ. ಇಂತಹ ಒಂದು ಪ್ರಾಮಾಣಿಕ ಪ್ರಯತ್ನಕ್ಕೆ ನೆರವಾದ ಎಲ್ಲಾ ಮಠಾಧೀಶರು, ಗುರು ಹಿರಿಯರು ಹಾಗೂ ಹಿತೈಷಿಗಳನ್ನು ಇಲ್ಲಿ ಸ್ಮರಿಸಬೇಕಾದದ್ದು ನನ್ನ ಆದ್ಯ ಕರ್ತವ್ಯ.

ಸಂಶೋಧನೆಯ ಪ್ರತಿಯೊಂದು ಘಟ್ಟದಲ್ಲೂ ನನಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡಿ, ನನ್ನ ಬರವಣಿಗೆಯ ಮೊನಚನ್ನು ಬಹಳಷ್ಟು ಕಡೆ ತಿದ್ದಿ, ಆ ಸಂದರ್ಭದಲ್ಲಿ ನಾನು ಅವರಿಗೆ ಕೊಡುತ್ತಿದ್ದ ಎಲ್ಲಾ ತೊಂದರೆಗಳನ್ನು ಸಹಿಸಿಕೊಂಡು ನಿತ್ಯ ನನ್ನ ಯಶಸ್ಸನ್ನೇ ಹಾರೈಸುತ್ತಾ, ನನ್ನ ಮಾರ್ಗದರ್ಶಿಗಳಾಗಿದ್ದವರು ಡಾ॥ ಎಂ.ಎ. ಜಯಚಂದ್ರ ಹಾಗೂ ಅಷ್ಟೇ ಒತ್ತಾಸೆಯಿಂದ ಸದಾ ನನ್ನ ಉತ್ತೇಜಕರಾಗಿದ್ದ ಶ್ರೀಮತಿ ಜಿ.ಎಸ್. ವಸಂತಮಾಲಾ ಜಯಚಂದ್ರ ಅವರು. ನನ್ನ ಪ್ರಗತಿಯನ್ನು ಮೇಲಿಂದ ಮೇಲೆ ವಿಚಾರಿಸುತ್ತಾ, ಅನೇಕ ಸಂದರ್ಭಗಳಲ್ಲಿ ಈ ಸಂಶೋಧನೆಗೆ ನೆರವಾದ ಡಾ॥ ಎಸ್. ವಿದ್ಯಾಶಂಕರ, ಎಸ್. ಶಿವಣ್ಣ, ಪ್ರೊ॥ ಎನ್. ಬಸವಾರಾಧ್ಯ, ಡಾ॥ ಎಚ್.ಎಂ. ಮರುಳಸಿದ್ಧಯ್ಯ, ಪ್ರೊ॥ ಆರ್. ರಾಚಪ್ಪ, ಟಿ.ಆರ್. ಮಹಾದೇವಯ್ಯ ಹಾಗೂ ಎಷ್ಟೋ ವೇಳೆ ನಾನಿದ್ದಲ್ಲಿಗೇ ಬಂದು ನಿರಂತರವಾಗಿ ನನಗೆ ಪ್ರೋತ್ಸಾಹ ನೀಡುತ್ತಾ ಬಂದ ವಿದ್ವಾನ್ ಜಿ.ವಿ. ಶಿವಸ್ವಾಮಿ, ಪಂ॥ ಷಣ್ಮುಖಯ್ಯ ಅಕ್ಕೂರಮಠ ಇವರೆಲ್ಲರಿಗೂ ಎಷ್ಟು ಕೃತಜ್ಞತೆಗಳನ್ನು ಹೇಳಿದರೂ ಸಾಲದು.

ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಉಪ ಪತ್ರಪಾಲಕರಾಗಿದ್ದ ಎಸ್. ಮಲ್ಲಿಕಾರ್ಜುನಯ್ಯ, ನಗರ ಭೂದಾಖಲೆ ಇಲಾಖೆಯ ಉಪನಿರ್ದೇಶಕರಾಗಿದ್ದ ಎಸ್.ವಿ. ಗಣೇಶ್, ನಗರ ಮುಜರಾಯಿ ಇಲಾಖೆಯ ವಲಯ ವ್ಯವಸ್ಥಾಪಕರಾಗಿದ್ದ ಜಿ.ಎಂ. ಹಿರೇಮಠ ಇವರುಗಳು ಈ ಸಂಶೋಧನೆಗೆ ಸಾಕಷ್ಟು ಉಪಯುಕ್ತವಾದ ಹಾಗೂ ಹಳೆಯವಾದ ಅನೇಕ ದಸ್ತಾವೇಜು ಮಾಹಿತಿಗಳನ್ನು ಒದಗಿಸಿಕೊಟ್ಟಿದ್ದಾರೆ. ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ. ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥ ಭಂಡಾರದ ಮುಖ್ಯ ಗ್ರಂಥಪಾಲಕರಾಗಿದ್ದ ಸಿ.ಕೆ.ಪಟ್ಟಣಶೆಟ್ಟಿ ಅವರು ನನ್ನ ವಿಶೇಷ ಅಧ್ಯಯನಕ್ಕೆ ಅಗತ್ಯವಾದ ಬಹಳಷ್ಟು ಗ್ರಂಥಗಳನ್ನು ಒದಗಿಸಿಕೊಟ್ಟಿರುತ್ತಾರೆ. ಬಸವ ಸಮಿತಿ, ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಮಿಥಿಕ್ ಸೊಸೈಟಿಯ ಗ್ರಂಥ ಭಂಡಾರಗಳ ಉಪಯೋಗವನ್ನು ಇಲ್ಲಿ ಸ್ಮರಿಸುತ್ತೇನೆ.

ನಗರದ ಮಠಗಳ ಸಂಶೋಧನೆಗೆ ಪೂರಕವಾಗಿ ವಿಶೇಷ ಸಂದರ್ಭಗಳಲ್ಲಿ ದರ್ಶನದ ಅವಕಾಶ ನೀಡಿ ಉಪಯುಕ್ತ ಮಾಹಿತಿಗಳನ್ನು ಆಶೀರ್ವದಿಸಿದ್ದ ಚಿತ್ರದುರ್ಗ ಬೃಹನ್ಮಠದ ಲಿಂ॥ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳವರಿಗೂ; ಸಿದ್ಧಗಂಗಾ ಕ್ಷೇತ್ರದ ಡಾ॥ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೂ; ಬಿಜಾಪುರದ ಜ್ಞಾನಯೋಗಾಶ್ರಮದ ಶ್ರೀ ಸಿದ್ಧೇಶ್ವರ ಸ್ವಾಮಿಗಳವರಿಗೂ; ಹೊಳವನಹಳ್ಳಿ ಮಠಾಧ್ಯಕ್ಷರಾಗಿದ್ದ ಶತಾಯುಷಿ ಲಿಂ॥ ಸಿದ್ಧಲಿಂಗ ಸ್ವಾಮಿಗಳವರಿಗೂ; ರಾಜಾಪುರ ಸಂಸ್ಥಾನದ ಷ॥ ಬ್ರ॥ ಶ್ರೀ ರೇಣುಕ ಶಿವಾಚಾರ್ಯ ಸ್ವಾಮಿಗಳವರಿಗೂ ಹಾಗೂ ಕಂಚುಗಲ್ ಬಂಡೇಮಠದ ಲಿಂ॥ ಶ್ರೀ ಶಿವರುದ್ರ ಸ್ವಾಮಿಗಳವರಿಗೂ ಭಕ್ತಿಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಇಲ್ಲಿನ ಮಠಗಳ ವಿಚಾರವಾಗಿ ಅನೇಕ ಸಂದರ್ಭಗಳಲ್ಲಿ ನನ್ನ ಗಮನ ಸೆಳೆದು ಅಗತ್ಯ ಮಾಹಿತಿಗಳನ್ನು ಒದಗಿಸಿಕೊಟ್ಟಿದ್ದ ಹಿರಿಯ ಬಂಧುಗಳು ಗಮಕವಿದ್ವಾನ್ ಚೆನ್ನಬಸಪ್ಪ, ಕಂತೆ ಕಾಯಕದ ಶಿವಲಿಂಗಯ್ಯ, ಗಾಂಧಿನಗರದ ವೈ.ಸಿ. ಬಸಪ್ಪ, ಮಲೆನಾಡು ಪತ್ರಿಕೆಯ ಗುರುಬಸಪ್ಪ ಶೆಟ್ಟಿ, ರಾಜಾಜಿನಗರದ ಬಿ.ಕೆ. ಶಿವಯ್ಯ ಶಾಸ್ತ್ರಿ, ನರಗುಂದದೇವರ ಮಠದ ನಂಜೇಮರಿ, ಮರಿಸ್ವಾಮಿ ಮಠದ ರೇವಮ್ಮ, ದೊಡ್ಡಮಠದ ಗಂಗಮ್ಮ, ಮಾಮೂಲು ಪೇಟೆಯ ಗೌರಮ್ಮ, ಬಾಣಾವರದ ಗೌರಮ್ಮ, ವಿಭೂತಿಪುರ ಮಠದ ಸದಾಶಿವಯ್ಯ ಇವರೆಲ್ಲರಿಗೂ ಆಭಾರಿಯಾಗಿದ್ದೇನೆ.

ಈ ಸಂಶೋಧನೆಗಾಗಿ ಮೊದಲ ಮೂರು ವರ್ಷಗಳ ಕಾಲ ಶಿಷ್ಯ ವೇತನವನ್ನು ನೀಡಿ ಪ್ರೋತ್ಸಾಹಿಸಿದ ಬಸವ ಸಮಿತಿಯ ಅಧ್ಯಕ್ಷರೂ, ಮಾಜಿ ಉಪರಾಷ್ಟ್ರಪತಿಗಳೂ ಆದ ಡಾ॥ ಬಿ.ಡಿ. ಜತ್ತಿಯವರಿಗೂ; ಪ್ರಧಾನ ಕಾರ್ಯದರ್ಶಿಗಳಾಗಿದ್ದ ಸಿ.ಎ. ಜಮಖಂಡಿ ಮಠ ಅವರಿಗೂ; ಮಹಾಪ್ರಬಂಧಕ್ಕೆ ಸಿದ್ಧತೆಯ ಕೊನೆಯ ಒಂದು ವರ್ಷ ಕಾಲ ಪಾಲಿಕೆಯಿಂದ ನನಗೆ ಸಂಬಳ

ಸಹಿತ ರಜೆ ಸೌಲಭ್ಯ ಕಲ್ಪಿಸಿಕೊಟ್ಟಿದ್ದ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರಾಗಿದ್ದ ಡಾ॥ ಎ. ರವೀಂದ್ರ ಅವರಿಗೂ ಇದಕ್ಕೆ ಕಾರಣರಾಗಿದ್ದ ರಾಜ್ಯದ ಅಂದಿನ ಬಂದಿಖಾನೆ ಸಚಿವರಾಗಿದ್ದ ವಿ. ಸೋಮಣ್ಣನವರಿಗೂ ಹಾಗೂ ಅಂದಿನ ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾಗಿದ್ದ ಎಸ್.ಬಿ. ಮುದ್ದಪ್ಪನವರಿಗೂ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಮಹಾಪ್ರಬಂಧದ ಮೌಲ್ಯಮಾಪಕರಾಗಿ ಉತ್ತಮ ಅಭಿಪ್ರಾಯಗಳನ್ನು ನೀಡಿದ ಡಾ॥ ಎಂ.ಎಂ. ಕಲಬುರ್ಗಿ ಹಾಗೂ ಪ್ರೊ. ಸಿ.ಪಿ. ಕೃಷ್ಣಕುಮಾರ್ ಅವರಿಗೂ ತುಂಬು ಅಭಿಮಾನದಿಂದ ಈ ಗ್ರಂಥಕ್ಕೆ ಕಳಸವಿಟ್ಟಂತೆ ಮುನ್ನುಡಿಯನ್ನು ಬರೆದುಕೊಟ್ಟ ಪೂಜ್ಯ ಗುರುಗಳಾದ ಡಾ॥ ಎಂ. ಚಿದಾನಂದಮೂರ್ತಿ ಅವರಿಗೂ ಜೊತೆಗೆ ಈ ಗ್ರಂಥ ಪ್ರಕಟಣೆಗೋಸ್ಕರ ವಿಶೇಷ ಧನ ಸಹಾಯವನ್ನು ನೀಡಿದ ಬೆಂಗಳೂರು ಮಹಾನಗರ ಪಾಲಿಕೆಯ ಪೂಜ್ಯ ಮಹಾಪೌರರಾದ ಶ್ರೀಮತಿ ಪ್ರೇಮಾ ಕಾರಿಯಪ್ಪಅವರಿಗೂ ನಾನು ಎಷ್ಟು ಋಣಿಯಾಗಿದ್ದರೂ ಸಾಲದು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ನಮ್ಮ ನಾಡಿನ ಹೆಸರಾಂತ ಸಾಹಿತ್ಯ ಹಾಗೂ ಸಾಂಸ್ಕೃತಿಕ ಸಂವರ್ಧನೆಯ ಸಂಸ್ಥೆ. ವೀರಶೈವ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈ ಸಂಸ್ಥೆಯು ಅನೇಕ ಸಂಶೋಧನ ಹಾಗೂ ವೈಚಾರಿಕ ಕೃತಿಗಳನ್ನು ಹೊರತಂದು ವಿದ್ವತ್ ವಲಯದಲ್ಲಿ ಸಾಕಷ್ಟು ಮನ್ನಣೆ ಗಳಿಸಿದೆ. ಇಂತಹ ಪ್ರತಿಷ್ಠಿತ ಸಂಸ್ಥೆಯ ಮೂಲಕ ಈ ಮಹಾಪ್ರಬಂಧದ ಪ್ರಕಟಣೆಗೆ ಅವಕಾಶ ದೊರತಿದ್ದು ನನ್ನ ಸುಕೃತ. ಇದಕ್ಕೆ ಕಾರಣಕರ್ತೃಗಳಾದ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಗೌರವಾಧ್ಯಕ್ಷರುಗಳಾದ ಸುತ್ತೂರು ಸಂಸ್ಥಾನದ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು ಮತ್ತು ತರಳಬಾಳು ಜಗದ್ಗುರು ಡಾ॥ ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ಹಾಗೂ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಇವರುಗಳಿಗೆ ನನ್ನ ಹೃತ್ಪೂರ್ವಕ ಪ್ರಣಾಮಗಳು.

ಗ್ರಂಥ ಸಮರ್ಪಣೆಗಾಗಿ ಅನುಮತಿಯನ್ನು ಕೋರಿದಾಗ ಸಮ್ಮತಿಯ ಆಶೀರ್ವಾದವನ್ನು ದಯಪಾಲಿಸಿದ ಸಿದ್ಧಗಂಗಾ ಶ್ರೀಗಳವರಾದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು.

ಅಲ್ಪಕಾಲದಲ್ಲೇ ಈ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಸತ್ಯಶ್ರೀ ಪ್ರಿಂಟರ್ಸ್‌ನ ಮಾಲೀಕರು, ಸಿಬ್ಬಂದಿ ವರ್ಗದವರು ಹಾಗೂ ಸುಂದರವಾದ ಮುಖಪುಟ ವಿನ್ಯಾಸವನ್ನು ರಚಿಸಿಕೊಟ್ಟ ಜೆ. ವೆಂಕಟೇಶ್; ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ್ದ ಈ ಮಹಾಪ್ರಬಂಧದ ಒಪ್ಪಿಗೆ ಪ್ರತಿಗಳನ್ನು ಹಾಗೂ ಛಾಯಾಚಿತ್ರಗಳನ್ನು ಸಿದ್ಧಪಡಿಸಿಕೊಟ್ಟಿದ್ದ ಗೆಳೆಯ ಡಾ॥ ಎಂ. ಬೈರೇಗೌಡ; ಅಗತ್ಯವಾದ ಎಲ್ಲಾ ನೆರಳಚ್ಚು ಪ್ರತಿಗಳನ್ನು ಸಿದ್ಧಪಡಿಸಿಕೊಡುತ್ತಿದ್ದ ಎನ್. ಶಿವಕುಮಾರ್; ನನ್ನ ಅಧ್ಯಯನದ ಉದ್ದಕ್ಕೂ ಪೂರ್ಣ ಬೆಂಬಲವಾಗಿ ನಿಂತ ನನ್ನ ಮಾವನವರಾದ ಹೆಚ್.ವಿ. ಶಿವರುದ್ರಯ್ಯ, ಬಂಧುಗಳಾದ ಹೆಚ್.ಸಿ. ಪರಮಶಿವಯ್ಯ, ಎಂ. ಮಹಾದೇವಯ್ಯ ಹಾಗೂ ಹೆಚ್. ಗಂಗಪ್ಪ ಇವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ.

ಈ ಸಂಶೋಧನೆಗೆ ಯಾವತ್ತೂ ಆಶೀರ್ವಾದ ನೀಡಿದ್ದ ನನ್ನ ತಂದೆ-ತಾಯಿಗಳಾದ ಶ್ರೀ ಬಿ.ಆರ್. ಚೆನ್ನಪ್ಪ-ಶ್ರೀಮತಿ ಬಸಮ್ಮ ಇವರಿಗೂ; ನಿತ್ಯ ನನ್ನ ಹೆಗಲೆಣೆಯಾಗಿ ನಿಂತು ನಿರಂತರವಾಗಿ ನನಗೆ ಯಶಸ್ಸನ್ನೇ ಬಯಸುತ್ತಾ, ಜೊತೆಗೆ ಈ ಗ್ರಂಥದ ಕರಡಚ್ಚು ಪ್ರತಿಗಳನ್ನು ತಿದ್ದುವ ಜವಾಬ್ದಾರಿಯನ್ನೂ ಹೊತ್ತಿದ್ದ ಅರ್ಧಾಂಗಿ ಶ್ರೀಮತಿ ಹೆಚ್.ಎಸ್. ಅನ್ನಪೂರ್ಣಾಳಿಗೂ; ಮೇಲಾಗಿ ಈ ಗಂಭೀರ ಸಾಧನೆಗೆ ಸದಾ ಸಹಕರಿಸಿದ ನನ್ನ ನಲ್ಮೆಯ ಮಕ್ಕಳಾದ ಚಿ॥ ಬಿ.ವಿ. ರುದ್ರಪ್ರಸಾದ್, ಚಿ॥ ಬಿ.ವಿ. ಮಂಗಳ ಗೌರಿ ಹಾಗೂ ಈ ಕಾರ್ಯದಲ್ಲಿ ಪ್ರತ್ಯಕ್ಷ-ಪರೋಕ್ಷವಾಗಿ ಸಹಕಾರ ನೀಡಿದ ಎಲ್ಲಾ ಗುರು-ಹಿರಿಯರಿಗೂ ಸಹೃದಯ ಬಂಧುಗಳಿಗೂ ನನ್ನ ಆಭಾರ ಮನ್ನಣೆ.

ಕೊನೆಯದಾಗಿ, ನಮ್ಮ ನಾಡಿನ ಎಲ್ಲಾ ವರ್ಗದ ಜನತೆಯೂ ಈ ಗ್ರಂಥವನ್ನು ಓದುವಂತಾದರೆ ನನ್ನ ಶ್ರಮ ಸಾರ್ಥಕ ಎಂಬುದೆ ನನ್ನ ಸವಿನಯ ಅರಿಕೆ.

ದಿನಾಂಕ : 1.7.2001

ವಂದನೆಗಳೊಡನೆ,

**ಡಾ॥ ಬಿ.ಸಿ. ವೀರಪ್ಪ**

ನಂ. 4, 'ಬಿ' ಬ್ಲಾಕ್
ಪಾಲಿಕೆ ಅಧಿಕಾರಿಗಳ ವಸತಿಗೃಹ, ಪಿ. ಕಾಳಿಂಗರಾವ್ ರಸ್ತೆ
ಬೆಂಗಳೂರು - 560 027

A34-P1-02

# ಬೆಂಗಳೂರು ವಿಶ್ವವಿದ್ಯಾಲಯ

# Bangalore University

certifies that

*Veerappa B C* ಅವರು

ಯಥಾಯೋಗ್ಯವಾಗಿ ಈಗಾಗಲೇ ಪ್ರವೇಶ ಪಡೆದಿರುವರೆಂದು ಧೃಢೀಕರಿಸುತ್ತಾ

*has been duly admitted to the Degree of*

ಡಾಕ್ಟರ್ ಆಫ್ ಫಿಲಾಸಫಿ

**Doctor of Philosophy**

*(Faculty Of Arts - Kannada)*

ಪದವಿಗೆ ಅಗತ್ಯವಾದ ಅರ್ಹತೆಗಳನ್ನುಳ್ಳವರೆಂದು ಪರಿಗಣಿತವಾಗಿರುವ ಕಾರಣ

*in recognition of the fulfilment of requirements*

ಮೇಲೆ ಕಾಣಿಸಿದ ಪದವಿಗೆ ಅವರನ್ನು ಅಂಗೀಕರಿಸಲಾಗಿದೆ. ಆ ಪದವಿಯ ವಿವರಗಳು ಹೀಗಿವೆ.

*for the said degree as follows*

ಪದವಿಯನ್ನು ನೀಡಿದ ವರ್ಷ ........ *1998*

*Year of Acceptance :*

ಸಂಶೋಧನಾ ಪ್ರಬಂಧದ ಶೀರ್ಷಿಕೆ ........ *Bangalore Nagarada Veerashaiva Matagalu - Ondu Samskritika Adhyayana*

*Title of the Thesis*



ವಿಶ್ವವಿದ್ಯಾಲಯದ ಅಧಿಕಾರ ಮುದ್ರೆಯೊಡನೆ ನೀಡಲಾಗಿದೆ

*Given under the seal of the University*



ಬೆಂಗಳೂರು
*Bangalore*

ದಿನಾಂಕ
*Dated* 22.02.1999

ಕುಲಪತಿ
*Vice-Chancellor*

## ಪರಿವಿಡಿ

# ಅಧ್ಯಾಯ - ಒಂದು

# ೧. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಆಕರಗಳು

## ೧.೧. ಉದ್ದೇಶ

ಇಂದಿನ ಬೆಂಗಳೂರು ಮಹಾನಗರಕ್ಕೆ ಮೂಲತಃ ಒಂದು ಸಾವಿರ ವರ್ಷಗಳಷ್ಟು ಶಾಸನಾಧಾರಿತ ಇತಿಹಾಸವಿದೆ.[1] ಇನ್ನೂ ಒಂದು ಹೆಜ್ಜೆ ಮುಂದುವರೆಯುವ ಇತಿಹಾಸಕಾರರು ಗಂಗದೊರೆಗಳ ಕಾಲ (ಕ್ರಿ.ಶ. ೩೫೦-೧೦೫೦)ಕ್ಕಾಗಲೇ ಬೆಂಗಳೂರಿನ ಗವಿಗಂಗಾಧರೇಶ್ವರನ ಗುಡಿಯ ಭಾಗವು ಜೈನರ ಪ್ರಮುಖ ಆರಾಧನಾ ಕೇಂದ್ರವಾಗಿದ್ದಿತೆಂದೂ; ಇದೇ ಕೇಂದ್ರವು ಮುಂದೆ ಚೋಳದೊರೆಗಳ ಕಾಲಕ್ಕೆ (ಕ್ರಿ.ಶ.೧೦ ರಿಂದ ೧೨ನೆಯ ಶತಮಾನಗಳ ನಡುವೆ) ಶಕ್ತಿಯ ಉಪಾಸಕರಾಗಿದ್ದ ಶೈವರ ಆರಾಧನಾ ಕೇಂದ್ರವಾಗಿಯೂ ಇದ್ದಿತೆಂದೂ ಗುರುತಿಸಿರುವುದುಂಟು.[2] ನಂತರ ಕ್ರಿ.ಶ. ೧೨-೧೩ನೆಯ ಶತಮಾನಗಳ ವೇಳೆಗೆ ಹೊಯ್ಸಳರ ಪ್ರಭುತ್ವವೂ ಈ ಪಟ್ಟಣದ ಮೇಲಾಗಿತ್ತು ಎನ್ನುವುದಕ್ಕೆ ಈಗಿನ ಬೆಂಗಳೂರಿನ ಕೋಟೆಗೆ ಹೊಂದಿಕೊಂಡಂತೆ ರಚಿತವಾಗಿರುವ ಸಳನು ಹುಲಿಯನ್ನು ಕೊಲ್ಲುತ್ತಿರುವ ಚಿತ್ರವೇ ಉತ್ತಮ ಸಾಕ್ಷಿಯಾಗಿದೆ. ಅನಂತರ ೧೫-೧೬ನೆಯ ಶತಮಾನಗಳ ವೇಳೆಗೆ ವಿಜಯನಗರದ ಅರಸರ ಮಾಂಡಲಿಕರಾಗಿದ್ದ ಯಲಹಂಕ ಪ್ರಭುಗಳ ಕಾಲಕ್ಕೆ ಬೆಂಗಳೂರಿನ ಕೋಟೆಯೇ ಅವರ ಪ್ರಮುಖ ಆಡಳಿತ ಕೇಂದ್ರವಾಗಿ ರೂಪುಗೊಂಡಿತಲ್ಲದೆ; ಆಗ ಇಲ್ಲಿ ಅನೇಕ ಶಿವದೇವಾಲಯಗಳೂ, ಮಠ-ಮಾನ್ಯಗಳೂ, ಕೆರೆ-ಕುಂಟೆಗಳೂ ನಿರ್ಮಾಣವಾಗಿ 'ಕಲ್ಯಾಣನಗರ'ವೆಂದೇ ಪ್ರಸಿದ್ಧಿಗೆ ಬಂದಿತು.[3] ಶಿವಮತ ಪ್ರವರ್ತಕರೆನಿಸಿದ್ದ ಗೌಡದೊರೆಗಳ ಕಾಲಕ್ಕೆ ಬೆಂಗಳೂರು ಪಟ್ಟಣದಲ್ಲಿ ೬೩ ವೀರಶೈವ ಮಠಗಳಿದ್ದುದಾಗಿ ಈ ಭಾಗದ ಜನರು ಬಲವಾಗಿ ನಂಬಿದ್ದಾರೆ. ಮುಂದೆ ಮೈಸೂರಿನ ದೊರೆಗಳ ಕಾಲಕ್ಕೆ ಬೆಂಗಳೂರಿನ ಬಹಳಷ್ಟು ವೀರಶೈವ ಮಠಗಳಿಗೆ ಭೂದಾನಗಳು ಪ್ರಾಪ್ತವಾಗಿರುವುದನ್ನು ನಗರದ ಮುಜರಾಯಿ ಇಲಾಖಾ ದಾಖಲೆಗಳು ದೃಢಪಡಿಸುತ್ತವೆ.[4]

ಹೀಗೆ ಗಂಗ ಅರಸರ ಕಾಲದಿಂದ ಮೈಸೂರಿನ ಒಡೆಯರ ಕಾಲದವರೆಗೆ ವಿಭಿನ್ನ ಬಗೆಯ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಪ್ರಭಾವಗಳಿಗೆ ಒಳಗಾಗಿದ್ದ ಈ ಬೆಂಗಳೂರು ಪಟ್ಟಣವು ಸಾಮಾಜಿಕವಾಗಿ ಅನೇಕ ಸ್ಥಿತ್ಯಂತರಗಳನ್ನು ಕಂಡಿದೆ. ಈ ಹಿನ್ನೆಲೆಯಲ್ಲಿ ರೂಪುಗೊಂಡ ''ಬೆಂಗಳೂರು ನಗರದ ವೀರಶೈವಮಠಗಳ ಸಾಂಸ್ಕೃತಿಕ ಅಧ್ಯಯನ''ವನ್ನು ನಡೆಸುವುದೇ ಪ್ರಸ್ತುತ ಮಹಾಪ್ರಬಂಧದ ಮೂಲ ಉದ್ದೇಶವಾಗಿದೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆಗೂ ಗಂಭೀರವಾದ ಚಿಂತನೆಗಳಾಗಲಿ ಅಥವಾ ಗಹನವಾದ ಅಧ್ಯಯನಗಳಾಗಲಿ ನಡೆದಿರುವುದಿಲ್ಲ. ಆದರೂ ಸಮಗ್ರತೆಯ ದೃಷ್ಟಿಯಿಂದ ಸಂಕ್ಷಿಪ್ತವೆನಿಸಿದರೂ ಈ ನಿಟ್ಟಿನಲ್ಲಿ ಮೊಟ್ಟಮೊದಲ ಪ್ರಯತ್ನ ನಡೆಸಿದವರು ಪಂ॥ ಕೆ.ಪಿ. ಶಿವಲಿಂಗಯ್ಯನವರು. ಇವರು ೧೯೯೧ರಲ್ಲಿ ''ಬೆಂಗಳೂರಿನ ವೀರಶೈವ ಮಠಗಳು'' ಎಂಬ ಕಿರು ಲೇಖನವೊಂದನ್ನು ಸಿದ್ಧಗೊಳಿಸಿ;[5] ಅದರಲ್ಲಿ ಈ ನಗರದಲ್ಲಿ ಇದ್ದಿರಬಹುದಾದ ೩೯ ಮಠಗಳ ಪಟ್ಟಿ ಯೊಂದನ್ನು ಸಿದ್ಧಪಡಿಸಿ ಅವುಗಳ ಬಗೆಗೆ ಸಂಕ್ಷಿಪ್ತ ಮಾಹಿತಿ ನೀಡಿದ್ದರು. ಇದರ ಜೊತೆಗೆ ನಗರದ ಸರ್ಪಭೂಷಣ ಮಠ,[6] ಮಹಾಂತರಮಠ,[7] ನಿಜಗುಣಜಂಗಮಮಠ,[8] ನರಗುಂದದೇವರ ಮಠ,[9] ಇವೇ ಮೊದಲಾದ ಕೆಲವು ಮಠಗಳವರು ತಮ್ಮ ಮಠಗಳಿಗೆ ಸಂಬಂಧಿಸಿದ ಐತಿಹಾಸಿಕ ಪರಂಪರೆಯನ್ನು ಗುರುತಿಸಿಕೊಳ್ಳುವ ಪ್ರಯತ್ನ

ನಡೆಸಿರುವುದುಂಟು. ಆದರೂ ಇವೂ ಕೂಡ ಸಮಗ್ರತೆ ಹಾಗೂ ವಾಸ್ತವತೆಯ ದೃಷ್ಟಿಯಿಂದ ಅಪೂರ್ಣವಾಗಿಯೇ ಉಳಿದಿವೆ. ಹೀಗೆ ಅಧ್ಯಯನ ಯೋಗ್ಯವೂ ಅಸಮಗ್ರವೂ ಆಗಿರುವ ಬೆಂಗಳೂರಿನ ವೀರಶೈವ ಮಠಗಳನ್ನು ಕುರಿತು ಒಂದು ವ್ಯವಸ್ಥಿತವಾದ ಹಾಗೂ ಸಮಗ್ರವಾದ ಅಧ್ಯಯನ ವನ್ನು ನಡೆಸಬೇಕಾದ ಔಚಿತ್ಯ ಇಲ್ಲಿದೆ.

ಇಲ್ಲಿ ಬೆಂಗಳೂರಿನ ವೀರಶೈವ ಮಠಗಳು ಐತಿಹಾಸಿಕ ವಾಗಿ ಭವ್ಯವಾದ ಪರಂಪರೆಯುಳ್ಳವಾಗಿದ್ದು, ಇವುಗಳ ಪ್ರವರ್ಧಮಾನಕ್ಕಾಗಿ ರಾಜಮಹಾರಾಜರು ಹಾಗೂ ಅನೇಕ ಧನಿಕ ವರ್ತಕರು ಉದಾರ ದಾನ-ಧರ್ಮಗಳನ್ನು ನೀಡಿದ್ದಾರೆ. ತತ್ಫಲವಾಗಿ ಈ ಮಠಗಳು ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಹಾಗೂ ಸಾಹಿತ್ಯಕವಾಗಿ ಸಲ್ಲಿಸಿರಬಹುದಾದ ಸಾಂಸ್ಕೃತಿಕ ಸಂವರ್ಧನೆಗಳನ್ನು ಕುರಿತ ಅನೇಕ ಸ್ತುತ್ಯರ್ಹ ಮಾಹಿತಿಗಳನ್ನು ಸಂಗ್ರಹಿಸಿ ವಿಮರ್ಶಿಸುವ ಮುಖ್ಯ ಉದ್ದೇಶ ಈ ಅಧ್ಯಯನದಲ್ಲಿದೆ.

ಇದೇ ಸಂದರ್ಭದಲ್ಲಿ ಬೆಂಗಳೂರಿನ ವೀರಶೈವ ಮಠಗಳ ಅಧ್ಯಯನಕ್ಕೆ ಹಿನ್ನೆಲೆಯಾಗಿ ಪೂರಕವಾಗಿರುವ ಬೆಂಗಳೂರಿನ ಇತಿಹಾಸವನ್ನು ಕುರಿತಂತೆ ಪ್ರಾಚೀನ ಬೆಂಗಳೂರಿನ ಕಲ್ಪನೆಯನ್ನು (ಸಾಂದರ್ಭಿಕವಾಗಿ) ಕಟ್ಟಿಕೊಡುವ ಪ್ರಯತ್ನವನ್ನೂ ಕೂಡ ಇಲ್ಲಿ ಮಾಡಲಾಗಿದೆ. ಹಾಗೆಯೇ ಬೆಂಗಳೂರು ನಗರಕ್ಕೆ ಹೊಂದಿಕೊಂಡಂತೆ ವ್ಯಾಪಕವಾಗಿ ಸ್ಥಾಪಿತವಾಗಿದ್ದ ವೀರಶೈವಮಠಗಳ ಪ್ರಸ್ತುತತೆ, ಪ್ರಾಚೀನತೆ ಹಾಗೂ ಗುರುಪರಂಪರೆಯ ಜೊತೆಗೆ; ಸಾಮಾಜಿಕವಾಗಿ ಅವುಗಳ ಬಹುಮುಖ ಸ್ಪಂದನೆಗಳನ್ನು ಕುರಿತು ಸ್ಥೂಲವಾದ ಚರ್ಚೆಯನ್ನು ನಡೆಸಲಾಗಿದೆ. ಆ ಮೂಲಕ ಈಗಾಗಲೇ ಕಾಲಗರ್ಭದಲ್ಲಿ ಹುದುಗಿ ಹೋಗಿರುವ ಅನೇಕ ಬಗೆಯ ಕುತೂಹಲಕರ ಘಟನಾವಳಿಗಳ ಬಗೆಗೆ ವಿಶೇಷವಾಗಿ ಬೆಳಕು ಚೆಲ್ಲುವುದು ಇಲ್ಲಿನ ಪ್ರಧಾನ ಉದ್ದೇಶವಾಗಿದೆ. ಜೊತೆಗೆ ನಗರದ ವೀರಶೈವ ಮಠಗಳ ಅಧ್ಯಯನಕ್ಕೆ ಪೂರ್ವಭಾವಿಯಾಗಿ ಮಠಗಳ ಅರ್ಥ, ಹಿನ್ನೆಲೆ ಹಾಗೂ ಅವುಗಳ ಭೇದ-ಪ್ರಭೇದಗಳನ್ನು ಕುರಿತಂತೆ ವ್ಯಾಪಕವಾದ ಚರ್ಚೆಗೆ ಅವಕಾಶ ಮಾಡಿಕೊಡುವ ಪ್ರಯತ್ನವೂ ಈ ಅಧ್ಯಯನದಲ್ಲಿದೆ.

ಕಳೆದ ಎರಡು ಶತಮಾನಗಳಿಂದ ಬೆಂಗಳೂರಿನ ವೀರಶೈವ ಮಠಗಳು ಎಷ್ಟೊಂದು ಜನಪರವಾದ ಸೇವೆಗಳನ್ನು ಸಲ್ಲಿಸಿವೆ ಎಂದರೆ-ಇವು ಧರ್ಮಶಾಲೆಗಳಾಗಿ ಅಥವಾ ಕೂಲಿಮಠಗಳಾಗಿ ಸಲ್ಲಿಸಿರುವ ಅನ್ನದಾನ ಮತ್ತು ಜ್ಞಾನದಾನಗಳು ಅವಿಸ್ಮರಣೀಯವಾದುವು. ಹಾಗೆಯೇ ಈ ಮಠಗಳು ಕಲ್ಯಾಣ ಕೇಂದ್ರಗಳಾಗಿ, ಆರೋಗ್ಯ ಕೇಂದ್ರಗಳಾಗಿ, ವ್ಯವಹಾರಕೇಂದ್ರಗಳಾಗಿ ಜೊತೆಗೆ ಅಂತ್ಯಸಂಸ್ಕಾರದ ಕೇಂದ್ರಗಳಾಗಿಯೂ ಸೇವಾನಿರತವಾಗಿದ್ದ ವಿಚಾರಗಳನ್ನು ಈ ಹೊತ್ತಿನ ಸಮಾಜವು ಸ್ಮರಿಸ ಬೇಕಾಗಿದೆ. ಇಂತಹ ಅನೇಕ ವಿಚಾರಗಳನ್ನು ಒಳಗೊಂಡು ಇಲ್ಲಿನ ಮಠಗಳಲ್ಲಿ ಲಭ್ಯವಾಗಿರುವ ಹಲವಾರು ದಾಖಲೆಪತ್ರಗಳನ್ನು ನಮ್ಮ ಸಮಾಜಕ್ಕೆ ಪರಿಚಯಿಸ ಬೇಕಾಗಿದೆ. ಮೇಲಾಗಿ ಬಹಳ ಹಿಂದಿನಿಂದಲೂ ಇಲ್ಲಿನ ಮಠಗಳಲ್ಲಿ ನಿರಂತರವಾಗಿ ನಡೆಯುತ್ತಾ ಬಂದಿರುವ ಧಾರ್ಮಿಕ ಚಟುವಟಿಕೆಗಳಾದ ಸಾಮೂಹಿಕ ದೀಕ್ಷೆ, ಹಬ್ಬಗಳು, ಉತ್ಸವಾದಿ ಆಚರಣೆಗಳ ಜೊತೆಗೆ; ಮಠಾಧೀಶರು ನಡೆಸಿದ ಧಾರ್ಮಿಕ ಪ್ರವಾಸ ಹಾಗೂ ಪವಾಡಗಳನ್ನು ಕುರಿತು ಹೇಳಲೇಬೇಕಾದ ಅನೇಕ ಸಂಗತಿಗಳಲ್ಲಿ ಕೆಲವನ್ನಾದರೂ ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಮೇಲ್ಕಂಡ ವಿಚಾರಗಳಿಗೆಲ್ಲಾ ಕಳಸಪ್ರಾಯವಾಗಿ ಇಲ್ಲಿನ ಕೆಲವು ಮಠಾಧೀಶರು ಸ್ವತಃ ಕವಿಗಳೂ, ದಾರ್ಶನಿಕರೂ, ತತ್ತ್ವಜ್ಞರೂ ಆಗಿದ್ದುದು ಸಾಮಾನ್ಯವಾದ ವಿಚಾರವೇನಲ್ಲ. ಶ್ರೇಷ್ಠ ವಾಗ್ಗೇಯಕಾರರಾಗಿದ್ದ ಸರ್ಪಭೂಷಣ ಶಿವಯೋಗಿಗಳು, ಪ್ರಸಿದ್ಧ ಯಕ್ಷಗಾನ ಕವಿಗಳಾಗಿದ್ದ ಮಹಾಂತದೇಶಿಕರು, ಪ್ರಮುಖ ಪರಿಷ್ಕರಣಾ ಕಾರರಾಗಿದ್ದ ನಂಜುಂಡಸ್ವಾಮಿಗಳು ಹಾಗೂ ಆಯುರ್ವೇದ ಶಾಸ್ತ್ರದ ನಿಷ್ಣಾತರಾಗಿದ್ದ ಪಂ॥ ಶಿವಕುಮಾರಸ್ವಾಮಿಗಳು ಇವರೇ ಮೊದಲಾದ ಬೆಂಗಳೂರಿನ ಮಠಾಧೀಶರ ಸಾಹಿತ್ಯ ಸೇವೆಯನ್ನು ಪರಿಚಯಿಸುವ ಮಹೋದ್ದೇಶವೂ ಇಲ್ಲಿದೆ. ಹೀಗೆ ಬೆಂಗಳೂರಿನ ವೀರಶೈವ ಮಠಗಳ ಸಾರ್ವತ್ರಿಕ ಬದುಕನ್ನು ಕುರಿತು ಒಂದು ವ್ಯವಸ್ಥಿತವೂ, ವ್ಯಾಪಕವೂ ಹಾಗೂ ಅರ್ಥಪೂರ್ಣವೂ ಆದ, ಸಮಗ್ರವಾದ ಸಾಂಸ್ಕೃತಿಕ ಅಧ್ಯಯನವನ್ನು ನಡೆಸುವುದೇ ಇಲ್ಲಿನ ಪ್ರಧಾನ ಆಶಯ.

ಈ ಸಂದರ್ಭದಲ್ಲಿ 'ಸಾಂಸ್ಕೃತಿಕ' ಎಂಬ ಪದದ ಸ್ಪಷ್ಟೀಕರಣದ ಅಗತ್ಯವಿಲ್ಲಿದೆ. ಸಾಂಸ್ಕೃತಿಕ ಎಂಬುದು

ಸಂಸ್ಕೃತಿಗೆ ಸಂಬಂಧಿಸಿದ ವಿಚಾರ. ಇದು ನಾಗರಿಕತೆಗೆ, ಬುದ್ಧಿ ವಿಕಾಸಗಳಿಗೆ ಸಂಬಂಧಿಸಿದ್ದು.[10] ಮೂಲತಃ 'ಸಂಸ್ಕೃತಿ'[11] ಎಂದರೆ ಬುದ್ಧಿ ವಿಕಾಸ ಹಾಗೂ ಮಾನಸಿಕ ಪಕ್ವತೆ ಎಂದೇ ಅರ್ಥ. ಇದು ಯಾವುದೇ ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ ಅಥವಾ ಸಂವೇದನೆಗಳಿಗೆ ಸಂಬಂಧಪಟ್ಟ ವಿಚಾರ.[12] ಇದನ್ನೇ ನಾಗರಿಕತೆ ಎಂಬುದಾಗಿಯೂ ಕರೆಯುವುದುಂಟು.

ಈ 'ಸಂಸ್ಕೃತಿ' ಮತ್ತು 'ನಾಗರಿಕತೆ' ಎಂಬ ಪದಗಳನ್ನು ಆಂಗ್ಲಭಾಷೆಯಲ್ಲಿ 'Culture' ಮತ್ತು 'Civilization' ಎಂಬುದಾಗಿ ಕರೆಯಲಾಗುತ್ತದೆ. ಅನೇಕ ವೇಳೆ ಇವೆರಡೂ ಪದಗಳನ್ನು ವಿದ್ವಾಂಸರು ಸಮಾನ ಅರ್ಥಗಳಲ್ಲೇ ಬಳಸಿರುವುದುಂಟು. ಇಲ್ಲಿರುವ 'culture' ಎಂಬುದರ ಮೂಲ ಪದ 'Cult' ಅಥವಾ 'Cultus' ಎಂಬುದಾಗಿದ್ದು ಇದು ಗೌರವಿಸು; ಆರಾಧಿಸು; ಸೇವೆಮಾಡು ಇವೇ ಮೊದಲಾದ ಅರ್ಥಗಳನ್ನು ಒಳಗೊಂಡಿದೆ. ಕೆಲವೆಡೆ ಇದೇ ಪದ ದೈವಭಕ್ತಿ; ಆರಾಧನೆ ಎಂಬ ಅರ್ಥಗಳಲ್ಲೂ ಬಳಕೆಯಾಗಿದೆ.[13] ಒಟ್ಟಾರೆ ಸಂಸ್ಕೃತಿ ಎಂಬುದು ಯಾವುದೇ ಒಂದು ಜನಾಂಗದ ಅಥವಾ ಒಂದು ಸಮಾಜದ ಜೀವನ ವಿಧಾನ, ಆಚಾರ-ವಿಚಾರ, ಆಲೋಚನಾ ವಿಧಾನ ಇವೇ ಮೊದಲಾದ ವ್ಯವಹಾರಗಳಿಗೆ ಸಂಬಂಧಿಸಿದುದಾಗಿದೆ. ಇಲ್ಲಿ ಪ್ರತಿಯೊಬ್ಬ ಮನುಷ್ಯನೂ ಕೂಡ ಪ್ರಪಂಚವನ್ನು ಸ್ವತಂತ್ರವಾಗಿ ಗ್ರಹಿಸಲಾರ. ಆತನ ಸಮಾಜದೊಳಗಿನ ಆಲೋಚನಾ ವಿಧಾನ, ವ್ಯಾವಹಾರಿಕ ರೀತಿ-ನೀತಿ, ಸಂಪ್ರದಾಯ ಇವೇ ಮೊದಲಾದವು ಅವನ ದೃಷ್ಟಿಯನ್ನು ನಿಯಂತ್ರಿಸುತ್ತವೆ.[14] ಆದ್ದರಿಂದ ವ್ಯಕ್ತಿ ತಾನು ಹುಟ್ಟಿ ಬೆಳೆದ ಸಂಸ್ಕೃತಿಯ ಶಿಶುವೆಂಬುದನ್ನು ಇಲ್ಲಿ ಮರೆಯುವಂತಿಲ್ಲ. ಇಂಥದೇ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯವನ್ನು ಕುರಿತು ನಡೆಸಿರುವ ಸಾಂಸ್ಕೃತಿಕ ಅಧ್ಯಯನವನ್ನು ಮುಂದೆ ನೋಡಬಹುದಾಗಿದೆ.

### ೧.೨. ವ್ಯಾಪ್ತಿ

ಬೆಂಗಳೂರಿನ ಇತಿಹಾಸವನ್ನು ಅವಲೋಕಿಸಿದಾಗ ಈ ಪಟ್ಟಣಕ್ಕೆ ಐತಿಹಾಸಿಕ ಮಹತ್ವ ದೊರಕಿದ್ದು ಹಿರಿಯ ಕೆಂಪೇಗೌಡನ ಕಾಲದಲ್ಲಿ ಎಂಬುದು ಸ್ಪಷ್ಟವಾಗಿದೆ. ಈತನು ಯಲಹಂಕದ ಪ್ರಭುವಾಗಿದ್ದಾಗ ಬೆಂಗಳೂರನ್ನು ಕ್ರಿ.ಶ. ೧೫೩೭ರಲ್ಲಿ ತನ್ನ ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡು ಈ ಭಾಗವನ್ನು ಅಭಿವೃದ್ಧಿಗೆ ತಂದನು. ಆಗ ಬೆಂಗಳೂರಿನಲ್ಲಿ ವಿನೂತನ ಕೋಟೆ-ಕೊತ್ತಲುಗಳು, ಗುಡಿ-ಗೋಪುರಗಳು, ಕೆರೆ-ಕಾಲುವೆಗಳು ಇವೇ ಮೊದಲಾದ ಜನಪರವಾದ ಕಲ್ಯಾಣಕಾರ್ಯಗಳು ನಿರ್ಮಾಣವಾಗಿ ಈ ಪಟ್ಟಣಕ್ಕೆ "ಕಲ್ಯಾಣನಗರ"ವೆಂಬ ವಿಶೇಷ ಅಭಿಧಾನವು ಪ್ರಾಪ್ತವಾಗಿತ್ತು.[15] ಮುಂದೆ ಶಿವಭಕ್ತರಾಗಿದ್ದ ಈತನ ವಂಶಸ್ಥರು ಬೆಂಗಳೂರಿನಲ್ಲಿ ಅನೇಕ ವೀರಶೈವ ಮಠಗಳಿಗೆ ಪೋಷಕರಾಗಿದ್ದರು. ಈ ಮಾತಿಗೆ ಪೂರಕವಾಗಿ ಕ್ರಿ.ಶ. ೧೬೦೮ರ ಗುಮ್ಮಳಾಪುರದ ಶಾಸನ ಹಾಗೂ ಕ್ರಿ.ಶ. ೧೬೩೩ರ ಬೆಂಗಳೂರಿನ ಶಾಸನಗಳೂ ಸೇರಿದಂತೆ; ಕ್ರಿ.ಶ. ೧೬೫೦ರ ಶಾಂತವೀರದೇಶಿಕನ 'ಶಿವಲಿಂಗಚಾರಿತ್ರ', ಮತ್ತು 'ನಿರಂಜನವಂಶರತ್ನಾಕರ'ಗಳಲ್ಲೂ ಕೂಡ ಈ ಗೌಡದೊರೆಗಳಿಗೂ ಹಾಗೂ ಅನೇಕ ವೀರಶೈವ ಗುರು (ಮಠಾಧಿಪತಿ) ವರ್ಗದವರಿಗೂ ನಿಕಟವಾದ ಸಂಪರ್ಕವಿದ್ದುದನ್ನು ಗುರುತಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಬೆಂಗಳೂರಿನ ವೀರಶೈವ ಮಠಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಾಲಗಣನೆಯ ವ್ಯಾಪ್ತಿಯನ್ನು ೧೭ನೆಯ ಶತಮಾನದ ಆರಂಭದಿಂದ ೨೦ನೆಯ ಶತಮಾನಾಂತ್ಯದವರೆಗೆ ಎಂಬುದಾಗಿ ನಿರ್ಧರಿಸಿಕೊಳ್ಳಲಾಗಿದೆ.[16]

ಇನ್ನು ವಿಷಯ ವ್ಯಾಪ್ತಿಗೆ ಸಂಬಂಧಿಸಿದಂತೆ ಈಗಾಗಲೇ ಪ್ರಸ್ತಾಪವಾಗಿರುವ ಹಾಗೆ, ಬೆಂಗಳೂರಿನ ಸಂಕ್ಷಿಪ್ತ ಇತಿಹಾಸವನ್ನು ಹೇಳುವುದರ ಮೂಲಕ ಚಾರಿತ್ರಿಕವಾಗಿ ಇಲ್ಲಿನ ರಾಜಕೀಯ ಪರಿಸ್ಥಿತಿಯು ವೀರಶೈವ ಮಠ ಮಾನ್ಯಗಳಿಗೆ ಹೇಗೆ ಪೋಷಕವಾಗಿದ್ದವು ಎಂಬುದರ ಕಡೆಗೆ ಇಲ್ಲಿ ಹೆಚ್ಚಿನ ಒತ್ತು ನೀಡಲಾಗಿದೆ. ನಂತರ ಮಠಗಳ ಹಿನ್ನೆಲೆಯನ್ನು ಪ್ರಸ್ತಾಪಿಸುವಾಗ ವೀರಶೈವ ಮಠಗಳ ಉಗಮ, ವಿಕಾಸ ಹಾಗೂ ಅವುಗಳ ಪ್ರಗತಿಯನ್ನು ಕುರಿತು ವಿಶೇಷವಾದ ಚರ್ಚೆಗೆ ಅವಕಾಶ ಮಾಡಲಾಗಿದೆ. ಈ ಸಂದರ್ಭದಲ್ಲಿ ಹೊಸದಾದ ಸಂಗತಿಗಳನ್ನೇನೂ ಹೇಳಿಲ್ಲವಾದರೂ, ಪ್ರಸ್ತುತ ವಿಷಯಕ್ಕೆ ಪೂರಕವಾದ ಅನೇಕ ಮಾಹಿತಿಗಳನ್ನು ಒಂದೆಡೆ ಸಂಗ್ರಹಿಸಿಕೊಡುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಮುಂದೆ ಬೆಂಗಳೂರಿನ ವೀರಶೈವ ಮಠಗಳ ಐತಿಹಾಸಿಕ ಪರಂಪರೆಯನ್ನು ಹೇಳುವಾಗ ವಿಪುಲವಾಗಿ ದೊರಕಿರುವ ವಿಭಿನ್ನ ಮೂಲಗಳ ಆಕರ ಸಾಮಗ್ರಿಗಳು ಈ ಅಧ್ಯಯನಕ್ಕೆ

ಉಪಯುಕ್ತವಾಗಿವೆ. ಇದುವರೆಗೆ ಅಪರಿಚಿತವೂ ಅಜ್ಞಾತವೂ ಆಗಿದ್ದ ಅನೇಕ ವಿಚಾರಗಳು ಇಲ್ಲಿ ಬೆಳಕಿಗೆ ಬಂದಂತಾಗಿದೆ ಎನಿಸುತ್ತದೆ. ಈ ಶತಮಾನದ ಆರಂಭದ ವೇಳೆಗೆ ಬೆಂಗಳೂರು ಪಟ್ಟಣದಲ್ಲಿ ಇದ್ದ ೭೪ ಮಠಗಳ ಪಟ್ಟಿಯನ್ನು ಸಿದ್ಧಗೊಳಿಸಲಾಗಿದೆ. ಅವುಗಳನ್ನು ಅನುಕ್ರಮವಾಗಿ ಗುರುವರ್ಗದ, ವಿರಕ್ತವರ್ಗದ ಹಾಗೂ ಇನ್ನುಳಿದ ಮಠಗಳು ಎಂಬುದಾಗಿ ವರ್ಗೀಕರಿಸಿಕೊಂಡು ಅವುಗಳ ಹುಟ್ಟು, ಬೆಳವಣಿಗೆ ಹಾಗೂ ಗುರುಪರಂಪರೆಯನ್ನು ಹೇಳುವ ಮೂಲಕ ಅವುಗಳ ಐತಿಹಾಸಿಕ ಮಹತ್ವಗಳನ್ನು ಪರಿಚಯಿಸಲಾಗಿದೆ.

ಸ್ವಾತಂತ್ರ್ಯಪೂರ್ವದ ಬೆಂಗಳೂರಿನ ಹಲವಾರು ಮಠಗಳು ಉಚಿತ ಊಟ ಮತ್ತು ವಸತಿ ವ್ಯವಸ್ಥೆಯುಳ್ಳ ಶಿಕ್ಷಣ ಕೇಂದ್ರಗಳಾಗಿ ಸೇವೆ ಸಲ್ಲಿಸಿವೆ. ಅಂದು ಇಲ್ಲಿನ ಮಠಗಳಲ್ಲಿ ನಿರಂತರವಾಗಿ ನಡೆಯುತ್ತಿದ್ದ ವಿದ್ಯಾದಾನ ಹಾಗೂ ಅನ್ನದಾನಗಳಿಗೆ ಪೋಷಕವಾಗಿ ಅನೇಕ ಭಕ್ತಮಹಾಶಯರು ಹಾಗೂ ರಾಜಮಹಾರಾಜರುಗಳು ನೀಡಿರುವ ಉದಾರ ದಾನಧರ್ಮಗಳ ದೃಷ್ಟಾಂತಗಳು ಇಲ್ಲಿವೆ. ಹಾಗೆಯೇ ಈ ಮಠಗಳು, ಸ್ಥಳ-ಪರಸ್ಥಳಗಳಿಂದ ಬಂದಂಥಾ ಅತಿಥಿ ಅಭ್ಯಾಗತರುಗಳಿಗೆ ಹಾಗೂ ಬಹಳಷ್ಟು ನಿರ್ಗತಿಕರಿಗೆ ಉಚಿತ ದಾಸೋಹ ಕೇಂದ್ರಗಳಾಗಿ; ಪಟ್ಟಣದ ಜನತೆಯ ಸಾಂಸ್ಕೃತಿಕ ಬದುಕಿಗೆ ವಿನೂತನ ಚೈತನ್ಯದ ಕೇಂದ್ರಗಳಾಗಿ; ಜನಸಾಮಾನ್ಯರ ಆರೋಗ್ಯ, ನ್ಯಾಯನಿರ್ಣಯ, ಕಲ್ಯಾಣ ಹಾಗೂ ಹಣಕಾಸು ಮತ್ತಿತರ ವ್ಯವಹಾರ ಕೇಂದ್ರಗಳಾಗಿ; ಜೊತೆಗೆ ವೀರಶೈವ ಮತ ಬಾಂಧವರ ಅಂತ್ಯಸಂಸ್ಕಾರದ ಕೇಂದ್ರಗಳಾಗಿಯೂ ಸಮಾಜಸೇವಾ ನಿರತವಾಗಿದ್ದ ಹಲವು ಹತ್ತು ವಿಚಾರಗಳನ್ನು ಇಲ್ಲಿನ ವಿಷಯವ್ಯಾಪ್ತಿಯ ಪರಿಶೀಲನೆಗೆ ಒಳಪಡಿಸಲಾಗಿದೆ.

ಇದೇ ರೀತಿ ಇಲ್ಲಿನ ಮಠಗಳು ನಡೆಸುತ್ತಿದ್ದ ಧಾರ್ಮಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ-ಸಾಮೂಹಿಕ ಲಿಂಗದೀಕ್ಷೆ, ಹಬ್ಬಹರಿದಿನಗಳ ಆಚರಣೆ, ಉತ್ಸವಾದಿ ಜಯಂತಿಗಳ ಸಂದರ್ಭದಲ್ಲಿ ಸಾರ್ವತ್ರಿಕವಾಗಿ ನಡೆಯುತ್ತಿದ್ದ ಆಚರಣೆಗಳ ಬಗೆಗೆ ವಿಶೇಷವಾಗಿ ಬೆಳಕು ಚೆಲ್ಲಲಾಗಿದೆ. ಜೊತೆಗೆ ಇಲ್ಲಿನ ಮಠಾಧೀಶರು ಹಿಂದೆ ನಡೆಸಿದರೆನ್ನಲಾಗುವ ಪವಾಡಗಳು ಹಾಗೂ ಪ್ರವಾಸ (ಸರ್ಕೀಟು)ಗಳು ಅತ್ಯಂತ ಕುತೂಹಲಕರ ಸಂಗತಿಗಳನ್ನು ಒಳಗೊಂಡಿವೆ. ಮೇಲಾಗಿ ಬೆಂಗಳೂರಿನ ಕೆಲವು ಮಠಾಧೀಶರು ನಡೆಯಿಸಿರುವ ಸಾಹಿತ್ಯ ಕೃಷಿ ಹಾಗೂ ಸಾಹಿತ್ಯ ಪ್ರಸಾರ ಮತ್ತು ಪ್ರಕಟಣೆಗಳು ಅವಿಸ್ಮರಣೀಯ ವಾದ ಸಾಹಿತ್ಯ ಸೇವೆಗಳಾಗಿವೆ. ಈ ಎಲ್ಲಾ ಮಹತ್ವದ ವಿಚಾರಗಳನ್ನು ವಿಶದವಾಗಿ ಪರಿಚಯ ಮಾಡಿಕೊಡುವ ಮೂಲಕ, ಇಲ್ಲಿನ ಮಠಗಳ ಸಮಾಜೊಧಾರ್ಮಿಕ ಹಾಗೂ ಸಾಹಿತ್ಯಕ ಚಟುವಟಿಕೆಗಳ ಬಗೆಗೆ ವ್ಯಾಪಕವಾದ ಚರ್ಚೆಗೆ ಅವಕಾಶ ಮಾಡಿಕೊಡಲಾಗಿದೆ.

## ೧.೩. ಆಕರಗಳು

ಬೆಂಗಳೂರಿನ ವೀರಶೈವ ಮಠಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಬಹಳಷ್ಟು ಮೂಲಗಳ ಆಕರ ಸಾಮಗ್ರಿಗಳು ಲಭ್ಯವಾಗಿವೆ. ಅದರಲ್ಲಿ ಮೊದಲಿಗೆ ಹೆಸರಿಸಬಹುದಾದ ಕ್ರಿ.ಶ. ೧೬೩೩ರ ಬೆಂಗಳೂರಿನ ಶಾಸನ ಹಾಗೂ ಕ್ರಿ.ಶ. ೧೭೬೧ರ ಬೇಲಿಮಠದ ಶಾಸನಗಳು ವಿಶೇಷವಾಗಿ ಗುರುತಿಸಲ್ಪಡುತ್ತವೆ. ಇದರ ಜೊತೆಗೆ [17] ಕ್ರಿ.ಶ. ೧೮೦೦ ರಿಂದ ಕ್ರಿ.ಶ. ೧೮೪೫ರ ಅವಧಿಯೊಳಗೆ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆ ಯಲ್ಲಿ ಇಲ್ಲಿನ ಮಠಾಧಿಪತಿಗಳಿಗೆ ಪ್ರಾಪ್ತವಾಗಿರುವ ೧೮ ಭೂದಾನ ಸನ್ನದುಗಳು[18] ನಗರದ ಮಠಗಳ ಐತಿಹಾಸಿಕ ಪರಂಪರೆಯನ್ನು ಕುರಿತು ವಿಶೇಷವಾದ ಬೆಳಕು ಚೆಲ್ಲುತ್ತವೆ. ಈ ಮಧ್ಯೆ ದೇಶದ ಪೇಟೆಶೆಟ್ಟಿಯಜಮಾನರುಗಳು ಹಾಗೂ ಇನ್ನುಳಿದ ಕೆಲವು ಭಕ್ತಜನರು ತಮ್ಮ ಕುಲಗುರುಗಳಿಗೆ ಸಮರ್ಪಿಸಿರುವ ವಿಭಿನ್ನ ಬಗೆಯ ೭ ದಾನಪತ್ರಗಳು ಲಭ್ಯವಾಗಿವೆ. ಇವು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಪೂರ್ವ ಮಾಹಿತಿಗಳನ್ನು ಒದಗಿಸಿ ಕೊಡುತ್ತವೆ. ಇದೇ ಸಂದರ್ಭದಲ್ಲಿ ಬೆಂಗಳೂರಿನ ಕೆಲವು ಮಠಾಧೀಶರೂ ಹಾಗೂ ಪೇಟೆ ಶೆಟ್ಟಿಯಜಮಾನರುಗಳೂ ಮೈಸೂರು ಸಂಸ್ಥಾನದವರಿಗೆ ಬರೆದುಕೊಂಡಿರುವ ಅಹವಾಲುಗಳೂ ಮತ್ತು ಮಹಾರಾಜ ರಿಂದ ಇವರುಗಳಿಗೆ ಪ್ರಾಪ್ತವಾಗಿರುವ ಕೆಲವು ನಿರೂಪಗಳೂ ಕೂಡ ಮೇಲ್ಕಂಡ ವಿಷಯದ ಅಧ್ಯಯನಕ್ಕೆ ಅಧಿಕೃತ ಮಾಹಿತಿಗಳನ್ನು ಒದಗಿಸುವ ಮಹತ್ವದ ಆಕರಗಳಾಗಿವೆ.

ರಾಜ್ಯ ಪತ್ರಾಗಾರ ಇಲಾಖೆ (ವಿಧಾನಸೌಧದ ನೆಲಮಾಹಡಿ)ಯಂತೂ ಬೆಂಗಳೂರಿನ ಮಠಗಳಿಗೆ ಸಂಬಂಧಿಸಿದಂತೆ ಅಪಾರ ಮಾಹಿತಿಗಳುಳ್ಳ ಕಣಜವಿದ್ದಂತೆ.

ಕಳೆದ ನೂರುವರ್ಷಗಳ ಅವಧಿಯಲ್ಲಿ ನಗರದ ಮಠಗಳಿಗೂ ರಾಜ್ಯ ಮುಜರಾಯಿ ಇಲಾಖೆಗೂ ನಡುವೆ ನಡೆದಿರುವ ಅನೇಕ ವ್ಯವಹಾರ ಪತ್ರಗಳುಳ್ಳ ಕಡತ (File) ಗಳು ಇಲ್ಲಿವೆ. ಅವುಗಳಲ್ಲಿ ಮೇಲ್ಕಂಡ ವಿಷಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ೮೩ ಮುಜರಾಯಿ ಇಲಾಖಾ ಕಡತಗಳನ್ನು ನೆರಳಚ್ಚು ಮೂಲಕ ಸಂಗ್ರಹಿಸಿಕೊಂಡು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ದಾಖಲೆಗಳು ಸರಿಸುಮಾರು ೧೮೦೦ ರಿಂದ ೧೯೪೫ರ ವರೆಗೂ ನಗರದ ಮಠಗಳನ್ನು ಕುರಿತು ಸಮೃದ್ಧವಾದ ಮಾಹಿತಿಗಳನ್ನು ಒದಗಿಸಿಕೊಡುತ್ತವೆ. ಇವು ಇಲ್ಲಿನ ಮಠಗಳ ಆಸ್ತಿ-ಪಾಸ್ತಿ, ಗುರುಪರಂಪರೆ, ಮಠಗಳ ಹಳೆಯ ನಕ್ಷೆ ಹಾಗೂ ಹಿಂದಿನ ಬೆಂಗಳೂರಿನ ಸ್ವರೂಪಗಳನ್ನು ಕುರಿತಂತೆ ವೈವಿಧ್ಯಮಯ ವಿಷಯಗಳನ್ನು ಕುರಿತು ಬೆಳಕು ಚೆಲ್ಲುತ್ತವೆ. ಜೊತೆಗೆ ನಗರದ ಬಹಳಷ್ಟು ಮಠಗಳ ಆಸ್ತಿ-ಪಾಸ್ತಿಗಳು ನಗರದ ನೂತನ ಬಡಾವಣೆಗಳ ವಿಸ್ತರಣೆಗಾಗಿ, ನಗರದ ಕೇಂದ್ರ ಕಾರಾಗೃಹದ ನಿರ್ಮಾಣಕ್ಕಾಗಿ ಹಾಗೂ ನಗರದ ರೈಲು ನಿಲ್ದಾಣದ ವಿಸ್ತರಣೆಗಾಗಿ ಬಳಕೆಯಾದ ವಿವರಗಳುಳ್ಳ ಅನೇಕ ಮಾಹಿತಿಗಳು ಈ ಕಡತಗಳಿಂದ ಲಭ್ಯವಾಗಿವೆ.

ನಗರದ ಕೆಲವು ಮಠಗಳಲ್ಲಿ ಗಣನೀಯ ಪ್ರಮಾಣದ ಮೋಡಿ ಪತ್ರಗಳು ಲಭ್ಯವಾಗಿದ್ದು, ಅವು ಪ್ರಸ್ತುತ ಅಧ್ಯಯನಕ್ಕೆ ವಿಶೇಷವಾದ ಚಾಲನೆಯನ್ನು ನೀಡುತ್ತವೆ. ಸುಮಾರು ಕ್ರಿ.ಶ. ೧೭೫೦ ರಿಂದ ೧೯೦೦ರ ಅವಧಿಯೊಳಗಿನವು ಎಂದು ಗುರುತಿಸಬಹುದಾದ ಇಂತಹ ಅನೇಕ ಮೋಡಿ ಪತ್ರಗಳನ್ನು ಸರಳಕನ್ನಡ ರೂಪಕ್ಕೆ ಬರೆದುಕೊಂಡು ಅವುಗಳಲ್ಲಿನ ಮಹತ್ವದ ಮಾಹಿತಿಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಜೊತೆಗೆ ಇಲ್ಲಿನ ಮಠಗಳ ಪರವಾಗಿ ನ್ಯಾಯಾಲಯಗಳು, ತಾಲ್ಲೂಕು ಕಚೇರಿ, ನಗರ ಭೂಮಾಪನಾ ಇಲಾಖೆ ಹಾಗೂ ನಗರದ ಮುನಿಸಿಪಲ್ ಕಚೇರಿಗಳೊಂದಿಗೆ ನಡೆದಿರುವ ಅನೇಕ ವ್ಯವಹಾರ ಪತ್ರಗಳು ಲಭ್ಯವಾಗಿದ್ದು ಅವುಗಳಿಂದಲೂ ಸಾಕಷ್ಟು ಮಾಹಿತಿಗಳು ದೊರೆಯುತ್ತವೆ. ಇದೇ ರೀತಿ ಮಠಾಧಿಪತಿಗಳ ಕೆಲವು ಖಾಸಗಿ ಪತ್ರಗಳು, ದಿನಚರಿ, ಮತ್ತಿತರ ವ್ಯವಹಾರಪತ್ರಗಳು ಹಾಗೂ ಮಠಗಳ ಪರವಾದ ವಿವಿಧ ವಿಶೇಷ ಸಮಾರಂಭಗಳಿಗೆ ಸಂಬಂಧಿಸಿದ ಕೆಲವು ಮುದ್ರಿತ ಕರಪತ್ರಗಳು ದೊರಕಿದ್ದು ಅವು ಈ ಅಧ್ಯಯನಕ್ಕೆ ಬಹಳ ಸಹಕಾರಿಯಾಗಿವೆ.

ಇನ್ನು ಇಲ್ಲಿನ ಮಠಗಳ ಆವರಣ, ಪೂಜಾಮಂಟಪ. ಗದ್ದುಗೆ ಹಾಗೂ ಇವುಗಳ ಮೇಲಿರುವ ಶಿಲಾಫಲಕ ಇವೇ ಮೊದಲಾದವು ಕೂಡ ಈ ಅಧ್ಯಯನಕ್ಕೆ ಪೂರಕ ಸಾಮಗ್ರಿಗಳನ್ನು ಒದಗಿಸುತ್ತವೆ . ಹಾಗೆಯೇ ನಗರದ ಜನತೆಯಲ್ಲಿ ಇಂದಿಗೂ ಮನೆಮಾತಾಗಿರುವ ಕೆಲವು ವಿಶೇಷ ನಂಬಿಕೆಗಳು, ಆಚರಣೆಗಳು ಹಾಗೂ ಪವಾಡಗಳು ಮತ್ತು ಕೆಲವು ಹಿರಿಯ ತಲೆಮಾರಿನ ಜನತೆಯ ಜೊತೆಗೆ, ಇಲ್ಲಿನ ಮಠಾಧೀಶರು ಒದಗಿಸುವ ಮಠ-ಮಾನ್ಯಗಳನ್ನು ಕುರಿತಾದ ವಿಶೇಷ ತಿಳಿವಳಿಕೆ ಇವೇ ಮುಂತಾದ ಹಲವು ಮೌಖಿಕ ಮಾಹಿತಿಗಳೂ ಕೂಡ ಸದರಿ ಅಧ್ಯಯನಕ್ಕೆ ಪೋಷಕವಾಗಿವೆ. ಇವುಗಳ ಜೊತೆಗೆ ಸಾಹಿತ್ಯಕ ವಿಚಾರಗಳಿಗೆ ಸಂಬಂಧಿಸಿದಂತೆ ಇಲ್ಲಿನ ಮಠಾಧೀಶರು ಸ್ವತಃ ರಚಿಸಿರುವ ಬಹುತೇಕ ಕೃತಿಗಳನ್ನು ಹಾಗೂ ಮಠಗಳ ಪರವಾಗಿ ಹೊರಬಂದಿರುವ ಎಲ್ಲಾ ಪ್ರಕಟಣೆಗಳನ್ನೂ, ಹಳೆಯ ವೃತ್ತಪತ್ರಿಕೆಗಳನ್ನೂ ಸೂಕ್ತವಾಗಿ ಬಳಸಿಕೊಳ್ಳಲಾಗಿದೆ.

ಹೀಗೆ ಮೇಲ್ಕಂಡ ರೀತಿಯ ನಾನಾ ಮೂಲದ ಅನೇಕ ಬಗೆಯ ಆಕರ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು ಪ್ರಸ್ತುತ ಮಹಾಪ್ರಬಂಧಕ್ಕೆ ಒಂದು ವ್ಯವಸ್ಥಿತವಾದ ಸ್ವರೂಪವನ್ನು ನೀಡುವ ಪ್ರಯತ್ನ ಮಾಡಲಾಗಿದೆ.

---

**ಅಡಿಟಿಪ್ಪಣಿಗಳು**

1. Mysore Archaeological Report. 1914-15. p. 16.
2. ಎಂ.ಫಜ್ಲುಲ್‌ಹಸನ್. ಕೆಂಪೇಗೌಡನ ಕಾಲಕ್ಕೂ ಹಿಂದಿನ ಬೆಂಗಳೂರಿನ ಇತಿಹಾಸ. ಪು. ೧. (ಇದೊಂದು ಬಿಡಿಲೇಖನ ಪ್ರತಿ. ಕೃಪೆ : ಡಾ. ಎಂ. ಚಿದಾನಂದಮೂರ್ತಿ)
3. ಎಸ್.ಕೆ. ನರಸಿಂಹಯ್ಯ. ಮಾಗಡಿಕೆಂಪೇಗೌಡ. ಪು. ೨೩, ೨೪.
4. Register of Muzrai Institution in Bangalore Taluk - 1902. p. 180-185.

5. ಪಂ॥ ಕೆ.ಪಿ. ಶಿವಲಿಂಗಯ್ಯ. ಬೆಂಗಳೂರಿನ ವೀರಶೈವ ಮಠಗಳು. ಸೇವಾಸಂಪದ. ಸಂ: ಗೊ.ರು. ಚನ್ನಬಸಪ್ಪ. ಪು. ೩೯೧-೪೦೪.
6. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನಚರಿತ್ರೆ. ಧಾರವಾಡ. ೧೯೫೨.
7. ಡಾ। ಜ.ಚ.ನಿ. ರೇಣುಕಗೀತೆ. ನಮ್ಮ ಮಾತು. ೧೯೮೭. ಪು. ೧೩, ೨೧.
8. ಷಣ್ಮುಖಯ್ಯ ಅಕ್ಕೂರಮಠ. ಬೆಂಗಳೂರು ಜಂಗಮಮಠದ ಶ್ರೀ ನಿಜಗುಣಸ್ವಾಮಿಗಳ ಜೀವನದರ್ಶನ. ಶೂನ್ಯ ಸಂಪಾದನೆ ಒಂದು ಅಧ್ಯಯನ. ಸಂ: ಡಾ। ಸಾ.ಶಿ. ಮರುಳಯ್ಯ. ೧೯೮೯. ಪು. ೨೪, ೪೦.
9. ಟಿ.ಆರ್. ಮಹಾದೇವಯ್ಯ. (ಸಂ) ಧರ್ಮದೀಪ್ತಿ. ಪು. ೧೯೮೨. ಪು. ೨, ೫.
10. ಕನ್ನಡ ನಿಘಂಟು. ಸಂ-೮. ಕನ್ನಡ ಸಾಹಿತ್ಯ ಪರಿಷತ್ತು. ಪು. ೮೪೫೦.
11. ಡಿ.ವಿ. ಗುಂಡಪ್ಪನವರು ತಮ್ಮ ಸಂಸ್ಕೃತಿ ಎಂಬ ಹೊತ್ತಗೆಯಲ್ಲಿ - ಸಂಸ್ಕೃತಿ ಎಂಬ ಮಾತು ತೀರಾ ಇತ್ತೀಚಿನದು. ಬಹುಶಃ ಇಂಗ್ಲೀಷ್‌ನ 'Culture' ಎಂಬ ಪದಕ್ಕೆ ಸಮಾನಾರ್ಥಕವಾಗಿ ಹುಟ್ಟಿಕೊಂಡಿದೆ. 'ಸಂಸ್ಕೃತಿ' 'Culture' ಎಂಬ ಅರ್ಥದಲ್ಲಿ ''ಹೆಚ್ಚಾಗಿ ಪ್ರಯೋಗವಾಗುತ್ತಿರುವುದು ಸುಮಾರು ನೂರು ವರ್ಷಗಳಿಂದೀಚೆಗೆ'' ಎಂದು ಹೇಳಿದ್ದಾರೆ. (ಉದ್ಧೃತಃ ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೪)
12. ಹೆಚ್ಚಿನ ವಿವರಗಳಿಗಾಗಿ ನೋಡಿ-ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೪-೭ ಮತ್ತು ಡಾ। ಎಚ್. ತಿಪ್ಪೇರುದ್ರಸ್ವಾಮಿ. ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪು. ೩-೧೫.
13. ಡಾ। ಎಚ್. ತಿಪ್ಪೇರುದ್ರಸ್ವಾಮಿ. ಅದೇ. ಪು. ೬.
14. ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಪು. ೭.
15. ಎಸ್.ಕೆ. ನರಸಿಂಹಯ್ಯ. ಪೂರ್ವೋಕ್ತ. ಪು. ೨೩, ೨೪.
16. ಸೂಚನೆ : ಆದರೂ ಇತ್ತೀಚಿನ ದಿನಗಳಲ್ಲಿ ಬೆಂಗಳೂರಿನ ಕೆಲವು ವೀರಶೈವ ಮಠಗಳ ಆಸ್ತಿ-ಪಾಸ್ತಿಗಳು ಹಾಗೂ ಮಠಾಧಿಪತ್ಯಗಳ ವಿಷಯವಾಗಿ ವಿವಾದಗಳುಂಟಾಗಿದ್ದು, ಅವು ನ್ಯಾಯಾಲಯದ ಮೊರೆಹೊಕ್ಕಿವೆ. ಈ ಮಧ್ಯೆ ಅಲ್ಲಿ ನಡೆಯುತ್ತಿರುವ ಧಾರ್ಮಿಕ ಚಟುವಟಿಕೆಗಳು ಪಕ್ಷಭೇದಗಳನ್ನು ಅನುಸರಿಸತೊಡಗಿವೆ. ಆದ ಕಾರಣ ಇಂತಹ ವಿವಾದಗ್ರಸ್ತವಾದ ಕೆಲವು ವಿಚಾರಗಳಿಗೆ ಇಲ್ಲಿ ಎಡೆಗೊಡದೆ, ಆದಷ್ಟೂ ಸ್ವಾತಂತ್ರ್ಯಪೂರ್ವದ ಚಟುವಟಿಕೆಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿರುತ್ತದೆ.
17. ಬೆಂಗಳೂರಿನ ಕೆಲವು ಮಠಗಳಲ್ಲಿ ಅನೇಕ ತಾಮ್ರ ಶಾಸನಗಳಿದ್ದುದಾಗಿಯೂ, ಮಠಾಧೀಶರ ಬೇಜವಾಬ್ದಾರಿಯಿಂದ ಅವುಗಳು ಕಣ್ಮರೆಯಾಗಿ ಹೋದುದಾಗಿಯೂ ಬೇಲಿಮಠದ ಶಿವರುದ್ರಸ್ವಾಮಿಗಳು ಹಾಗೂ ಗಂಜಾಂಮಠದ ಚಿದ್ಘನ ಸ್ವಾಮಿಗಳು ಹೇಳುತ್ತಾರೆ.
ಈಗ ದೊರಕಿರುವ ಏಕೈಕ ತಾಮ್ರಶಾಸನವು ನಗರದ ದೊಡ್ಡಮಠದಲ್ಲಿದೆ. 6' × 10' ಅಂಗುಲಗಳ ಅಳತೆಯಲ್ಲಿರುವ ಈ ಶಾಸನವನ್ನು ಪೂಜಾಗೃಹದಲ್ಲಿ ಪೂಜೆಗಿಡಲಾಗಿದೆ. ದುರ್ದೈವವೆಂದರೆ ಪ್ರತಿನಿತ್ಯ ಇದನ್ನು ಒಪ್ಪವಾಗಿಡುವ ದೃಷ್ಟಿಯಿಂದ ಉಜ್ಜಿ ಉಜ್ಜಿ ಇದರಲ್ಲಿದ್ದ ಲಿಪಿಗಳೆಲ್ಲಾ ಸವೆದು ಹೋಗಿದ್ದು, ಓದಲಿಕ್ಕಾಗದ ಸ್ಥಿತಿಯನ್ನು ಮುಟ್ಟಿದೆ.
18. ಇವುಗಳಲ್ಲಿ ಒಂಬತ್ತು ಸನ್ನದುಗಳು ಮಾತ್ರ ಲಭ್ಯವಾಗಿದ್ದು ಅವುಗಳ ನೆರಳಚ್ಚು ಪ್ರತಿಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ.

ಅಧ್ಯಾಯ – ಎರಡು

# ಬೆಂಗಳೂರು ನಗರದ ಹಿನ್ನೆಲೆ

## ( ಸಂಕ್ಷಿಪ್ತ ಇತಿಹಾಸ )

---

# ಅಧ್ಯಾಯ - ಎರಡು

# ೨. ಬೆಂಗಳೂರು ನಗರದ ಹಿನ್ನೆಲೆ ( ಸಂಕ್ಷಿಪ್ತ ಇತಿಹಾಸ )

ಭಾರತದ ಮಹಾನಗರಗಳಲ್ಲಿ ಐದನೆಯ ಅತಿದೊಡ್ಡ ನಗರ ಬೆಂಗಳೂರು. ತನ್ನ ಸುತ್ತಮುತ್ತಲಿನ ಹಲವು ಉಪನಗರಗಳೂ ಸೇರಿದಂತೆ ಈ ಮಹಾನಗರದಲ್ಲಿಂದು ಒಂದು ಕೋಟಿಗೂಮಿಕ್ಕು ಜನಸಂಖ್ಯೆ ಇದೆ. ಇತ್ತೀಚೆಗೆ ದಕ್ಷಿಣ ಏಷ್ಯಾದಲ್ಲೇ ಅತಿ ವೇಗವಾಗಿ ಬೆಳೆಯುತ್ತಿರುವ ಈ ನಗರದ ಮುಖ್ಯ ಆಕರ್ಷಣೆ ಉತ್ತಮ ಹವಾಮಾನ ಹಾಗೂ ಪ್ರಶಾಂತವಾದ ಪರಿಸರವೇ ಆಗಿದೆ. ದೇಶ ವಿದೇಶದ ನಾನಾಭಾಗದ ಜನಾಂಗದವರು ಇಲ್ಲಿ ನೆಲೆಸಿರುವ ಕಾರಣ ಸರ್ವಜನಾಂಗದ ಶಾಂತಿಯ ತೋಟವಿದೆನಿಸಿದೆ. ರಾಜ್ಯದ ರಾಜಧಾನಿಯೂ ಬೆಡಗಿನ ತಾಣವೂ ಆಗಿರುವ ಈ ಮಹಾನಗರಿಯು, ಸಮುದ್ರಮಟ್ಟದಿಂದ ಮೂರುಸಾವಿರದ ನೂರು ಅಡಿಗಳಷ್ಟು ಎತ್ತರದಲ್ಲಿರುವುದರಿಂದ,[1] ಸರ್ವಋತುಗಳಲ್ಲೂ ಜನವಸತಿಗೆ ಯೋಗ್ಯವಾದ ಸ್ಥಳವಾಗಿದೆ. ರಾಷ್ಟ್ರದ ಎಲ್ಲಾ ಪ್ರಮುಖ ಭಾಗಗಳಿಗೂ ಉತ್ತಮ ಸಂಪರ್ಕವುಳ್ಳದ್ದಾಗಿದ್ದು, ಕಲೆ, ವಾಣಿಜ್ಯ, ಕೈಗಾರಿಕೆ, ವಿದ್ಯಾಭ್ಯಾಸ ಹೀಗೆ ಹಲವು ಹತ್ತು ದೃಷ್ಟಿಯಿಂದ ಹೆಮ್ಮರವಾಗಿ ಬೆಳೆದು ನಿಂತಿದೆ. ನಗರದ ಉದ್ದಗಲಕ್ಕೂ ಬೆಳೆದು ನಿಂತಿರುವ ಆಕರ್ಷಕ ಸೌಧಗಳ ನಡುವೆ, ಬಹುತೇಕ ರಸ್ತೆಗಳ ಬದಿಯಲ್ಲಿ ಎದ್ದುಕಾಣುವ ಸಾಲುಮರಗಳ ಹಸಿರು ವನಸಿರಿ, ನೋಟಕರ ಕಣ್ಮನಗಳನ್ನು ಸೂರೆಗೊಳ್ಳದಿರಲಾರವು. ಈ ಕಾರಣಕ್ಕಾಗಿಯೇ ಬಹಳ ಹಿಂದಿನಿಂದಲೂ ಈ ನಗರವನ್ನು ಭಾರತದ 'ಉದ್ಯಾನ ನಗರ'ವೆಂಬುದಾಗಿ ಕರೆಯುತ್ತಿದ್ದುದುಂಟು. ಇಂದಿಗೂ ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಮಟ್ಟದ ಪ್ರಮುಖ ನಗರಗಳಲ್ಲಿ ಇದೊಂದು ಎಂಬುದನ್ನು ಸಾಬೀತು ಪಡಿಸಲು, ಇತ್ತೀಚೆಗೆ ಇಲ್ಲಿ ನಡೆದ 'ವಿಶ್ವ ಸುಂದರಿ ಸ್ಪರ್ಧೆ' ಒಂದು ಉತ್ತಮ ನಿದರ್ಶನವಾಗಿದೆ.[2] ಒಟ್ಟಾರೆ ದಕ್ಷಿಣ ಭಾರತದ ಕೆಲವೇ ಪ್ರಮುಖ ಪ್ರೇಕ್ಷಣೀಯ ಸ್ಥಳಗಳಲ್ಲಿ ಬೆಂಗಳೂರು ನಗರವೂ ಒಂದು ಎಂಬುದನ್ನು ಮರೆಯುವಂತಿಲ್ಲ.

### ೨.೧. ಯಲಹಂಕ ಪ್ರಭುಗಳಿಗೂ ಹಿಂದಿನ ಬೆಂಗಳೂರು

ಬೆಂಗಳೂರಿನ ಪ್ರಾಚೀನತೆಯನ್ನು ಕುರಿತು ಇತಿಹಾಸಕಾರರು ಈಗಾಗಲೇ ಸಾಕಷ್ಟು ಬೆಳಕು ಚೆಲ್ಲಿದ್ದಾರೆ. ಈ ಭಾಗದ ಸುತ್ತಮುತ್ತ ದೊರಕಿರುವ ನವ ಶಿಲಾಯುಗದ ಪಳೆಯುಳಿಕೆಗಳನ್ನಾಧರಿಸಿ, ಇಲ್ಲಿಗೆ ಮೂರು ಸಾವಿರ ವರ್ಷಗಳಷ್ಟು ಹಿಂದಿನಿಂದಲೇ ಬೆಂಗಳೂರು ಪಟ್ಟಣವು ಮಾನವ ವಸತಿಗೆ ಯೋಗ್ಯವಾದ ಸ್ಥಳವಾಗಿತ್ತು[3] ಎಂಬುದಾಗಿ ಹೇಳುವುದುಂಟು. ಇತ್ತೀಚೆಗೆ ಬೆಂಗಳೂರಿನ ಯಶವಂತಪುರದ ಬಳಿ ರೋಮನ್ ಸಾಮ್ರಾಟ ಕ್ಯಾಲಿಗುಲನ ಕಾಲದ ಕೆಲವು ಬೆಳ್ಳಿ ನಾಣ್ಯಗಳು ದೊರಕಿರುವುದರಿಂದ,[4] ಈ ಭಾಗವು ಕ್ರಿಸ್ತಶಕದ ಆರಂಭದ ವೇಳೆಗಾಗಲೇ ರೋಮ್‌ನ ಸಂಪರ್ಕವುಳ್ಳ ಒಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿದ್ದಿರಬೇಕೆಂದು ಊಹಿಸಲಾಗಿದೆ.[5]

ದಕ್ಷಿಣ ಭಾರತದಲ್ಲಿ ಅತ್ಯಂತ ಪ್ರಾಚೀನವಾದ ಊರುಗಳಲ್ಲೊಂದು ಬೆಂಗಳೂರು. ಇದನ್ನು ಗಂಗ ವಂಶದ ಅರಸರು ಕ್ರಿ.ಶ.೫ನೆಯ ಶತಮಾನದ ವೇಳೆಗೆ ತಮ್ಮ ಬೆಂಗಾವಲುಗಳಿಗಾಗಿ ನಿರ್ಮಾಣ ಮಾಡಿಸಿದ್ದರು.[6] ಗಂಗರ ಕಾಲ (ಕ್ರಿ.ಶ. ೩೫೦-೧೦೫೦)ದಲ್ಲಿ ಬೆಂಗಳೂರು ''ಗಂಗವಾಡಿ ತೊಂಬತ್ತಾರುಸಾವಿರ ಪ್ರಾಂತ್ಯ''ದಲ್ಲಿತ್ತು.[7] ಆಗ ಈ ಭಾಗದಲ್ಲಿ ಜೈನರ ಪ್ರಾಬಲ್ಯ ಬಹಳವಾಗಿದ್ದುದರಿಂದ ಈಗಿನ ಗವಿ ಗಂಗಾಧರೇಶ್ವರನ ದೇಗುಲವು ಜೈನ ಯತಿಗಳ ಪ್ರಮುಖ ಆರಾಧನಾ ಕೇಂದ್ರವಾಗಿತ್ತು ಎಂಬುದಾಗಿ ಫಜ್ಲುಲ್‌ಹಸನ್ ಹೇಳುತ್ತಾರೆ.

ಈಗ ಬೆಂಗಳೂರಿನಲ್ಲಿ ಉಳಿದಿರುವ ಕೋಟೆಗೆ ಹೊಂದಿಸಿ ಕಟ್ಟುವಾಗಲೇ ಜೋಡಿಸಿರುವ, ''ಹೊಯ್ಸಳರ ಲಾಂಛನ''[8]ವಾದ ಸಳನು ಹುಲಿಯನ್ನು ತಿವಿದು ಕೆಡವುತ್ತಿರುವ ವಿಗ್ರಹವನ್ನು ನೋಡಿದರೆ, ಈ ಕೋಟೆಯು ಹೊಯ್ಸಳರ ಆಡಳಿತದಲ್ಲಿ ಕಟ್ಟಿದ್ದಿರಬೇಕೆಂದೂ; ಕ್ರಿ.ಶ. ೧೨೬೦ರಲ್ಲಿ ಹೊಯ್ಸಳರ ನರಸಿಂಹದೇವನ ಆಳ್ವಿಕೆಯಲ್ಲಿ ''ಯಲಹಂಕ''ದ ನೆಲೆವೀಡಿನಲ್ಲಾಳುತ್ತಿದ್ದ ಮಹಾ ಮಂಡಲೇಶ್ವರ ದೇಚರಸನು ಈ ಬೆಂಗಳೂರು ಕೋಟೆ ಯನ್ನು ಕಟ್ಟಿಸಿದ್ದಿರಬಹುದೆಂದೂ; ಇಮ್ಮಡಿ ಕೆಂಪೇಗೌಡನ ತಂದೆಯಾದ ಹಿರಿಯ ಕೆಂಪೇಗೌಡನಿಗೂ ಹಿಂದಿನಿಂದಲೇ ಈ ಕೋಟೆಯು ಇತ್ತೆಂದೂ; ಇದರ ಹಳೆಯ ಹೆಸರು ''ದೇವರಾಯಪಟ್ಟಣ''ವೆಂದೂ; ಇದರ ಪ್ರತಿನಾಮವೇ ಈಗಿನ ''ಬೆಂಗಳೂರು'' ಎಂದೂ ಕರ್ಲಮಂಗಲಂ ಶ್ರೀಕಂಠಯ್ಯನವರು ಹೇಳಿದ್ದಾರೆ.[9] ಆರ್.ನರಸಿಂಹಾಚಾರ್ ಅವರು ತಮ್ಮ ಅಧಿಕೃತ ವರದಿಯಲ್ಲಿ, ಕ್ರಿ.ಶ. ೯ನೆಯ ಶತಮಾನಕ್ಕೆ ಸೇರಿದ್ದೆಂದು ಉಲ್ಲೇಖಿಸಿರುವ ಬೇಗೂರಿನ ಶಾಸನ (ವೀರಗಲ್ಲು)ದಲ್ಲಿ[10] ''ಬೆಂಗಳೂರು'' ಎಂಬ ಪದ ಪ್ರಯೋಗವಾಗಿರುವುದನ್ನು ಗುರುತಿಸಿದ್ದಾರೆ.[11] ಇದನ್ನಾಧರಿಸಿ ಎಂ.ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟರು - ''ಬೆಂಗಳೂರಿಗೆ ಸಮೀಪದ ಬೇಗೂರಿನಲ್ಲಿರುವ ಈ ವೀರಗಲ್ಲಿನಲ್ಲಿ 'ಬೆಂಗಳೂರು' ಎಂಬ ಪದ ಪ್ರಯೋಗವಾಗಿರುವುದರಿಂದ, ಪ್ರಚಲಿತವಾಗಿರುವ ವೀರಬಲ್ಲಾಳನ ಬೆಂದಕಾಳೂರಿನ ಕಥೆಗಿಂತ ಸುಮಾರು ಎರಡು ಶತಮಾನಗಳಷ್ಟು ಹಿಂದೆಯೇ ಬೆಂಗಳೂರು ಅಸ್ತಿತ್ವದಲ್ಲಿತ್ತು'' ಎಂದಿದ್ದಾರೆ.[12]

ಬೇಗೂರಿನಲ್ಲಿ ದೊರಕಿರುವ ನಾಲ್ಕೂ ಶಾಸನಗಳಲ್ಲೂ 'ನಾಗತ್ತರ'ನ ಹೆಸರು ಉಲ್ಲೇಖವಾಗಿದ್ದು, ಬಾಣವಂಶ ದವನಾಗಿದ್ದ ಈತ ಗಂಗರ ಅಧೀನ ಸೇವೆಯಲ್ಲಿದ್ದುದಾಗಿ ದೇವರಕೊಂಡಾರೆಡ್ಡಿ ಗುರುತಿಸಿದ್ದಾರೆ.[13] ಆದ್ದರಿಂದ ಹೊಯ್ಸಳರ ಕಾಲಕ್ಕೂ ಮೊದಲೆ ಕನ್ನಡ ನಾಡಿನ ಪ್ರಸಿದ್ಧ ಅರಸು ಮನೆತನಗಳಲ್ಲಿ ಒಂದಾಗಿದ್ದ ಗಂಗ ದೊರೆಗಳ ಕಾಲ (ಕ್ರಿ.ಶ. ೩೫೦-೧೦೫೦)ದಲ್ಲೇ ಬೆಂಗಳೂರು ಅಸ್ತಿತ್ವದಲ್ಲಿದ್ದುದು ಸ್ಪಷ್ಟವಾದಂತಾಗಿದೆ.

ಆರ್. ನರಸಿಂಹಾಚಾರ್ ಅವರು ಗುರುತಿಸಿರುವ ಬೇಗೂರಿನ ಶಾಸನದ ಕಾಲ ಕ್ರಿ.ಶ. ೮೯೦. ಅಲ್ಲಿಂದ ಮುಂದೆ ಹಿರಿಯ ಕೆಂಪೇಗೌಡನು ಬೆಂಗಳೂರು ಕೋಟೆಯನ್ನು ನಿರ್ಮಿಸಿದನೆಂದು ಹೇಳುವ ಕಾಲ ಕ್ರಿ.ಶ. ೧೫೩೭. ಈ ನಡುವಿನ ಆರುನೂರು ಐವತ್ತು ವರ್ಷಗಳ ಅವಧಿಯಲ್ಲಿ ಈ ಭಾಗವನ್ನು ಗಂಗರು, ಚೋಳರು, ಹೊಯ್ಸಳರು ಹಾಗೂ ವಿಜಯನಗರದ ಅರಸರು ರಾಜ್ಯವಾಳಿದ್ದಾರೆ. ಗಂಗರ ಕಾಲದಲ್ಲಿ ಬೆಂಗಳೂರು ''ಗಂಗವಾಡಿ ತೊಂಬತ್ತಾರು ಸಾವಿರ ಪ್ರಾಂತ್ಯ''ದೊಳಗಿತ್ತು. ಚೋಳರ ಕಾಲ (ಕ್ರಿ.ಶ. ೧೦ರಿಂದ ೧೨ನೆಯ ಶತಮಾನದ ನಡುವೆ)ದಲ್ಲಿ ಈ ಭಾಗ ''ವಿಕ್ರಮ ಚೋಳಮಂಡಲ'' ವೆಂದೇ ಕರೆಸಿಕೊಂಡಿತ್ತು.[14] ಈ ಹಿನ್ನೆಲೆಯಲ್ಲಿ ದೊಮ್ಮಲೂರು ಮತ್ತು ಅಲಸೂರಿನಲ್ಲಿರುವ ಚೋಳರ ವಾಸ್ತುಶಿಲ್ಪಗಳನ್ನಾಧರಿಸಿ ೧೦ನೆಯ ಶತಮಾನದ ವೇಳೆಗಾಗಲೇ ಬೆಂಗಳೂರು ಸಮೃದ್ಧವಾದ ಪಟ್ಟಣವಾಗಿದ್ದಿರಬೇಕು ಎಂಬುದಾಗಿ ಸೂರ್ಯನಾಥ ಕಾಮತ್ ಹೇಳುತ್ತಾರೆ.[15]

ಮುಂದೆ ಹೊಯ್ಸಳರ ಕಾಲ (ಕ್ರಿ.ಶ. ೧೨೪೭)ದ ಶಾಸನವೊಂದರಲ್ಲಿ ಬೆಂಗಳೂರಿನ ದೊಡ್ಡಕೆರೆಯ ಕೆಳಗಿರುವ ಕೆಲವು ಜಮೀನುಗಳನ್ನು ಮಡಿವಾಳದ ಸೋಮೇಶ್ವರ ದೇವಾಲಯಕ್ಕೆ ದತ್ತಿಬಿಟ್ಟ[16] ವಿವರ ಗಳಿವೆ.[17] ಇಲ್ಲಿ ಉಕ್ತವಾಗಿರುವ 'ದೊಡ್ಡಕೆರೆ'ಯನ್ನು ಎಂ. ಫಜ್ಲುಲ್‌ಹಸನ್ ಅವರು 'ಧರ್ಮಾಂಬುಧಿಕೆರೆ'ಯೇ ಆಗಿರಬೇಕೆಂದು ಊಹಿಸಿ, ಬಹುಶಃ ಅಣ್ಣಮ್ಮ ದೇಗುಲದ ಪಕ್ಕದಲ್ಲಿ ಆಗ ಬೆಂಗಳೂರು ಇದ್ದಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[18] ಆದರೆ ಬೆಂಗಳೂರಿನ ನರಗುಂದ ದೇವರ ಮಠದ ೧೮೪೪ರ ದಾಖಲೆ[19] ಹಾಗೂ ಸರ್ಪಭೂಷಣ ಮಠದ ೧೮೭೬ರ ದಾಖಲೆಗಳನ್ನು ನೋಡಿದಾಗ ಅಲ್ಲಿ ಧರ್ಮಾಂಬುಧಿಕೆರೆಯನ್ನೇ ಸ್ಪಷ್ಟವಾಗಿ 'ದೊಡ್ಡಕೆರೆ'[21] ಎಂದು ಕರೆಯಲಾಗಿದೆ. ಮೇಲಾಗಿ 'ದೊಡ್ಡಕೆರೆ'ಯ ಹಿಂಭಾಗ (ಧರ್ಮಾಂಬುಧಿ ಕೆರೆ ಏರಿ ಹಿಂಭಾಗ)ವೆಂದಾಗ ಈಗಿನ ಅರಳೆಪೇಟೆಯ ಭಾಗವೇ ಆಗಿತ್ತೆಂಬುದು ನಿಶ್ಚಯವಾದ ಮಾತಾಗಿದೆ. ಆದ್ದರಿಂದ ಮೇಲ್ಕಂಡ ಶಾಸನದಲ್ಲಿ ಉಲ್ಲೇಖವಾಗಿರುವ ''ದೊಡ್ಡಕೆರೆಯೇ ಧರ್ಮಾಂಬುಧಿಕೆರೆ'' ಯಾಗಿದ್ದು, ಇದರ ಹಿಂಭಾಗದಲ್ಲಿರುವ ''ಅರಳೆಪೇಟೆ'' ಅಥವಾ ಅರಳೆಪೇಟೆಗೆ ಪೂರ್ವಭಾಗದಲ್ಲಿರುವ ದೊಡ್ಡಪೇಟೆಯ ಪ್ರದೇಶವೆಲ್ಲಾ ಹಿಂದೆ (ಕ್ರಿ.ಶ. ೧೨೪೭ರಲ್ಲಿ) ಬೆಂಗಳೂರೇ ಆಗಿತ್ತೆಂದು ಸುಲಭವಾಗಿ ಗ್ರಹಿಸ ಬಹುದಾಗಿದೆ.[22] ಇಲ್ಲಿ ಈಗಾಗಲೇ ಇತಿಹಾಸಕಾರರು ಗುರುತಿಸಿದ್ದಂತೆ,[23] ಧರ್ಮಾಂಬುಧಿ

(ದೊಡ್ಡ) ಕೆರೆಯು ಹಿರಿಯ ಕೆಂಪೇಗೌಡನ ಅಥವಾ ಅವನ ಮನೆತನದ ದೊರೆಗಳಿಂದ ನಿರ್ಮಾಣವಾದುದಲ್ಲ. ಮೇಲಾಗಿ ೧೩ನೆಯ ಶತಮಾನದ ವೇಳೆಗಾಗಲೇ ಈ ಕೆರೆಯು ಅಸ್ತಿತ್ವದಲ್ಲಿತ್ತು ಎಂಬುದು ಮುಖ್ಯ ವಿಚಾರವಾಗಿದೆ. ಜೊತೆಗೆ ಮೇಲ್ಕಂಡ ಶಾಸನವು (ಕ್ರಿ.ಶ. ೧೨೪೭) ಹೊಯ್ಸಳರ ಇಮ್ಮಡಿ ನರಸಿಂಹನ ಮಗ ಸೋಮೇಶ್ವರನ ಕಾಲ (ಕ್ರಿ.ಶ. ೧೨೨೩-೧೨೫೩)ಕ್ಕೆ ಸೇರಿದುದಾಗಿದೆ.[24] ಅಂದರೆ ಹೊಯ್ಸಳರ ಸೋಮೇಶ್ವರನೇ ಮಡಿವಾಳದ ಈ ಸೋಮೇಶ್ವರ ದೇಗುಲವನ್ನು ನಿರ್ಮಾಣ ಮಾಡಿಸಿದನೆಂದು ಹೇಳಲು ಆಧಾರವಿಲ್ಲವಾದರೂ ಸದರಿ ದೇವಾಲಯಕ್ಕೆ ಈತ ಉದಾರ ದಾನಧರ್ಮಗಳನ್ನು ನೀಡಿದ್ದನೆಂದು ತಿಳಿಯಬಹುದಾಗಿದೆ. ಇಷ್ಟೆಲ್ಲಾ ಮಾಹಿತಿಗಳ ಹಿನ್ನೆಲೆಯಲ್ಲಿ ೧೧ನೆಯ ಶತಮಾನಕ್ಕೂ ಮೊದಲೇ ಅಸ್ತಿತ್ವದಲ್ಲಿದ್ದ ಬೆಂಗಳೂರು ಪ್ರದೇಶಕ್ಕೆ ೧೩ನೆಯ ಶತಮಾನದ ವೇಳೆಗೆ ಕೋಟೆಯನ್ನು ನಿರ್ಮಿಸಿದ್ದಿರಬಹುದೆಂಬ ಕರ್ಲಮಂಗಲಂ ಶ್ರೀಕಂಠಯ್ಯನವರ ಅಭಿಪ್ರಾಯವನ್ನು[25] ತಳ್ಳಿಹಾಕುವಂತಿಲ್ಲ.

ಅನಂತರ ಕ್ರಿ.ಶ. ೧೩೧೦ರಲ್ಲಿ ದಕ್ಷಿಣ ಹಿಂದೂಸ್ಥಾನದ ಮೇಲೆ ದಂಡಯಾತ್ರೆಯನ್ನು ಕೈಗೊಂಡ ಮಲ್ಲಿಕಾಫರನು ದ್ವಾರಸಮುದ್ರವನ್ನು ಸೂರೆಗೊಂಡ ನಂತರ ಬಾಣಾವರ, ಚಿಕ್ಕನಾಯಕನಹಳ್ಳಿ, ತುಮಕೂರು, ಶಿವಗಂಗೆ ಮಾರ್ಗವಾಗಿ, 'ಬೆಂಗಳೂರಿನ ಮೂಲಕ' ಸೇಲಮ್ ದಾರಿಯಲ್ಲಿ ಮಧುರೆಗೆ ಹೋದುದಾಗಿ ತಿಳಿದುಬರುತ್ತದೆ.[26] ಇದೇ ವೇಳೆಗೆ ದಕ್ಷಿಣದ ಪಲ್ಲವ ಮತ್ತು ಚೋಳರ ಆಡಳಿತ ವ್ಯವಸ್ಥೆಯು ಆಂತರಿಕ ಹಾಗೂ ಬಾಹ್ಯ ಒತ್ತಡಗಳಿಗೆ ಗುರಿಯಾಗಿತ್ತು. ತತ್ಫಲವಾಗಿ ಇದುವರೆಗೆ ರೂಢಿಯಲ್ಲಿದ್ದ ವೀರಬಣಜಿಗ, ಅಯ್ಯಾಹೊಳೆ ಐನೂರ್ವರು ಇವೇ ಮುಂತಾದ ಆಡಳಿತಾತ್ಮಕ ಸಂಘಟಿತ ಸಂಸ್ಥೆಗಳು ಹಿಮ್ಮುಖವಾಗತೊಡಗಿದ್ದುವು.[27] ಇದೇ ಸಂದರ್ಭಕ್ಕೆ ಉತ್ತರ ಹಿಂದೂಸ್ಥಾನದಲ್ಲಾಗಿದ್ದ ಮಹಮದೀಯರ ಧಾಳಿಯಿಂದಾಗಿ ಅನೇಕ ಹಿಂದೂ ಯೋಧರು ದಕ್ಷಿಣದ ಕಡೆಗೆ ಬಂದು ನೆಲಸತೊಡಗಿದ್ದರು. ಇದರಿಂದಾಗಿ ಸ್ಥಳೀಯ ಹಾಗೂ ಪ್ರಾದೇಶಿಕ ಅಧಿಕಾರದ ಸ್ವರೂಪದಲ್ಲಿ ಸಾಮಂತಾಧಿಪತ್ಯ ಪ್ರಾರಂಭವಾಗಿತ್ತು.[28] ಈ ಹಿನ್ನೆಲೆಯಲ್ಲಿ ಯಲಹಂಕ ನಾಡಪ್ರಭುಗಳ ಆಡಳಿತ ರೂಪುಗೊಂಡಿತ್ತು.

### ೨.೨. ಬೆಂಗಳೂರು : ಹೆಸರಿನ ಹಿನ್ನೆಲೆ

ಬೆಂಗಳೂರಿನ ಹೆಸರಿಗೆ ಸಂಬಂಧಿಸಿದಂತೆ ಅನೇಕ ಜಿಜ್ಞಾಸೆಗಳು ಹುಟ್ಟಿಕೊಂಡಿವೆ. ಹಿಂದೆ ಕ್ರಿ.ಶ. ೫ನೆಯ ಶತಮಾನದ ವೇಳೆಗೆ ಗಂಗ ಅರಸರು ತಮ್ಮ ರಾಜ್ಯದ 'ಬೆಂಗಾವಲಾಳು'ಗಳಿಗಾಗಿ ಕಟ್ಟಿಕೊಟ್ಟ ಊರಾದ್ದರಿಂದ ಮೊದಲು ಇದನ್ನು 'ಬೆಂಗಾವಲಾಳೂರು' ಎಂದೇ ಕರೆಯಲಾಗುತ್ತಿತ್ತು. ಕಾಲಾನಂತರ ಇದೇ 'ಬೆನ್ಗಾಲಾಳೂರು' ಆಗಿ, ಈಗ 'ಬೆಂಗಳೂರು' ಆಗಿದೆ ಎಂದು ಹ.ಕ. ರಾಜೇಗೌಡ ಹೇಳುತ್ತಾರೆ.[29]

ಈ ಭಾಗದಲ್ಲಿ ಪ್ರಚಲಿತವಾಗಿರುವ ಕಥೆಯೊಂದರ ಪ್ರಕಾರ-'ಹೊಯ್ಸಳರ ವೀರಬಲ್ಲಾಳನು ಬೇಟೆಗಾಗಿ ಇಲ್ಲಿಗೆ ಬಂದಾಗ, ಅವನಿಗೆ ಬಹಳ ಹಸಿವಾಗಿದ್ದಿತಂತೆ. ಆಗ ಅಜ್ಜಿಯೊಬ್ಬಳು ಆತನಿಗೆ ಬೆಂದಕಾಳುಗಳನ್ನು ನೀಡಿ ಸಂತೃಪ್ತಿ ಪಡಿಸಿದಳಂತೆ. ಬಲ್ಲಾಳನು ತಾನು ತಿಂದ ಬೆಂದಕಾಳನ್ನೇ ಆಧರಿಸಿ ಈ ಸ್ಥಳಕ್ಕೆ ''ಬೆಂದಕಾಳೂರು'' ಎಂದೇ ಹೆಸರಿಸಿದನಂತೆ. ಇದೇ ಕಾಲಕ್ರಮದಲ್ಲಿ ''ಬೆಂಗಳೂರು'' ಆಯಿತೆಂಬುದಾಗಿ ಎಸ್.ಕೆ. ನರಸಿಂಹಯ್ಯನವರು ಸಂಗ್ರಹಿಸಿದ್ದಾರೆ.[30]

ಇದೇ ಸಂಗತಿಯನ್ನು ಕುರಿತು ಎಂ.ವಿ. ಕೃಷ್ಣರಾವ್ ಅವರು - 'ಬೆಂದಕಾಳೂರಿನ ಹೆಸರಿಗೆ ಸಂಬಂಧಿಸಿದಂತೆ ಪ್ರಚಲಿತವಾಗಿರುವ ಹೊಯ್ಸಳರ ಬಲ್ಲಾಳನ ಕಥೆ ಶಾಸನಾಧಾರಿತವಲ್ಲ. ಕೇವಲ ಇದೊಂದು ಸ್ಥಳಪುರಾಣ ಮಾತ್ರ. ಈ ಹಳೆ ಬೆಂಗಳೂರಿಗೆ ಹಿಂದೆ ''ಶಿವನಸಮುದ್ರ''ವೆಂಬ ಹೆಸರಿತ್ತು. ಇದು ಹಿಂದೆ ಈಗಿನ ಹೆಬ್ಬಾಳದ ಒಳಗೆರೆಯ ಬಳಿ ಇತ್ತು. ಬೆಂದಕಾಳೂರಿನ ಪ್ರಕರಣಕ್ಕಿಂತ (೧೧ನೆಯ ಶತಮಾನ) ಹಿಂದೆಯೇ ಬೆಂಗಳೂರು ಎಂಬ ಗ್ರಾಮ ಅಲ್ಲಿತ್ತು. ಅದು ಕೆಂಪೇಗೌಡನ ಕಾಲಕ್ಕಾಗಲೇ ನಶಿಸಿಹೋಗಿತ್ತು' ಎಂಬುದಾಗಿ ಸೂಚಿಸಿದ್ದಾರೆ.[31] ಇವರ ಪ್ರಕಾರ ಹಿಂದೆ ಈ ಪ್ರಾಂತ್ಯವು ವಿಶಾಲವಾದ, ಹೆಮ್ಮರಗಳಿಂದ ಕೂಡಿದ್ದ ವನಪ್ರದೇಶವಾಗಿತ್ತು. ಕಾಲಕ್ರಮದಲ್ಲಿ ಈ ಕಾಡನ್ನು ಕಡಿದು, ವನವನ್ನೆಲ್ಲಾ ಸುಟ್ಟು, ನಾಡನ್ನಾಗಿ ಪರಿವರ್ತಿಸಲಾಯಿತು. ಆದ್ದರಿಂದ ಈ ಊರಿಗೆ ಮೊದಲು ''ಬೆಂದಕಾಡೂರು'' ಎಂಬ ಹೆಸರಿತ್ತು. ಅನಂತರ ಅದು ''ಬೆಂಗಾಡೂರು'' ಆಗಿ, ಈಗ ''ಬೆಂಗಳೂರು'' ಆಗಿದೆ.[32]

ದೊಡ್ಡಬೇಗೂರಿನ ನಾಗತ್ತರನ ಶಾಸನ (ಕ್ರಿ.ಶ. ಸುಮಾರು ೯೦೦)ದ ಪ್ರಕಾರ ಬೆಂಗಳೂರು ಇದ್ದ ಈ ಭಾಗವನ್ನು 'ಬೆಂಪೂರು' ನಾಡೆಂದೇ ಗುರುತಿಸಲಾಗಿದೆ.[33] ಜೊತೆಗೆ ಆ ಕಾಲದ ಬೆಂಗಳೂರಿನ ಸುತ್ತಾ ಕೋಟೆ ಇದ್ದುದು ಸ್ಪಷ್ಟವಾಗಿದೆ.[34] ಬಹುಶಃ ಈ ಬೆಂಗಳೂರು ಬೇಗೂರಿನ ಸಮೀಪವೇ ಇದ್ದಿರಬೇಕೆಂದು ಎಚ್.ಎಸ್. ಗೋಪಾಲರಾವ್ ಅಭಿಪ್ರಾಯಪಡುತ್ತಾರೆ.[35] ಹೀಗೆ ಹೆಬ್ಬಾಳದ ಬಳಿಯ ಬೆಂಗಳೂರು, ಬೇಗೂರಿನ ಬಳಿಯ ಬೆಂಗಳೂರು ಹಾಗೂ ದೊಡ್ಡಕೆರೆಯ ಬಳಿಯ ಬೆಂಗಳೂರು ಇವು ಮೂರು ಬೇರೆಬೇರೆಯೇ ಅಥವಾ ಒಂದೇ ಇರಬಹುದೇ? ಎಂಬುದರ ಬಗೆಗೆ ಇನ್ನೂ ಹೆಚ್ಚಿನ ಶೋಧಗಳು ನಡೆಯಬೇಕಾಗಿದೆ.

### ೨.೩. ಯಲಹಂಕ ಪ್ರಭುಗಳ ಕಾಲ

ಹದಿನಾಲ್ಕನೆಯ ಶತಮಾನದ ವೇಳೆಗೆ ಉತ್ತರ ಹಿಂದೂಸ್ಥಾನದಲ್ಲಿ ಮಹಮದೀಯರ ಪ್ರಾಬಲ್ಯ ಬಹಳವಾಗಿತ್ತು. ಇದೇ ವೇಳೆಗೆ ದಕ್ಷಿಣದ ಓರಂಗಲ್ಲು (ಕ್ರಿ.ಶ. ೧೩೨೧) ಹಾಗೂ ದ್ವಾರಸಮುದ್ರ (ಕ್ರಿ.ಶ. ೧೩೨೭)ಗಳು ಮಹಮದೀಯರ ಧಾಳಿಯಿಂದ ಧ್ವಂಸವಾಗಿದ್ದುವು. ಆಗ ದಕ್ಷಿಣ ಭಾರತದ ಎಲ್ಲೆಡೆಗೂ ಅರಾಜಕತೆಯು ಆವರಿಸತೊಡಗಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯ ನಿವಾರಣೆಗಾಗಿ ವಿಜಯನಗರ ಸಾಮ್ರಾಜ್ಯದ ಉದಯ (ಕ್ರಿ.ಶ. ೧೩೩೬)ವಾಗಿತ್ತು. ಇದುವರೆಗೂ ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಮುಖವಾಗಿದ್ದ ಬ್ರಾಹ್ಮಣ ಕೇಂದ್ರೀಕೃತ ಆಡಳಿತ ವ್ಯವಸ್ಥೆಯು ಕಾಲಕ್ರಮದಲ್ಲಿ ಕುಸಿಯತೊಡಗಿ, ಮುಂದೆ ಯೋಧವರ್ಗದ ಆಡಳಿತ ವ್ಯವಸ್ಥೆಯು ಪ್ರಾರಂಭವಾಗತೊಡಗಿತ್ತು.[36] ಇಂತಹ ಬದಲಾವಣೆಯ ಗೊಂದಲಗಳ ನಿವಾರಣೆಗಾಗಿ ನಾಡ ಪ್ರಭುಗಳ ಆಡಳಿತ ಪದ್ಧತಿಯು ಮೊದಲಾಯಿತು. ಜೊತೆಗೆ ನಗರೀಕರಣದ ವ್ಯವಸ್ಥೆಯು ಆರಂಭವಾಗಿ ಇವುಗಳ ರಕ್ಷಣೆಗಾಗಿ ಸುರಕ್ಷಿತ ಕೋಟೆ ಕೊತ್ತಲಗಳ ನಿರ್ಮಾಣ ಅನಿವಾರ್ಯವಾಯಿತು.[37] ಹೀಗೆ ಯೋಧಪ್ರಧಾನವಾದ ಮತ್ತು ಯುದ್ಧೋನ್ಮುಖವಾದ, ದಕ್ಷಿಣದ ಆಗಿನ ಏಕೈಕ ಹಿಂದೂ ಸಾಮ್ರಾಜ್ಯವೆನಿಸಿದ್ದ, ವಿಜಯನಗರದ ಮಾಂಡಲಿಕ ಅರಸರೇ ಯಲಹಂಕ ಪ್ರಭುಗಳು.

ಯಲಹಂಕವು ಕೆಂಪೇಗೌಡನ ವಂಶಸ್ಥರಿಗೂ ಮೊದಲಿನಿಂದಲೇ ಇತ್ತು. ಚೋಳದೊರೆಗಳ ಕಾಲದಲ್ಲಿ ಇದನ್ನು 'ಇಳೈಪಾಕ್ಕ' ನಾಡು ಎಂದೂ, ಹೊಯ್ಸಳರ ಕಾಲದಲ್ಲಿ 'ಎಲಹಕ್ಕ' ನಾಡು ಎಂದೂ, ಗೌಡ ದೊರೆಗಳ ಕಾಲದಲ್ಲಿ 'ಯಲಹಂಕ'ನಾಡು ಎಂದೂ ಕರೆಯಲ್ಪಡುತ್ತಿತ್ತು.[38] ಯಲಹಂಕ ಪ್ರಭುಗಳ ವಂಶಸ್ಥರ ಮೂಲಪುರುಷನನ್ನು ಕೆಲವರು ಆವತಿ ಗ್ರಾಮದ ರಣಭೈರೇಗೌಡನೆಂದೂ,[39] ಮತ್ತೆ ಕೆಲವರು ಯಲಹಂಕ ನಾಡನ್ನು ಆಳಿದ ದೇಚರಸನೆಂದೂ[40] ಹೇಳುವುದುಂಟು. ಆದರೆ ಶಾಸನಾಧಾರಿತವಾಗಿ ಹಾಗೂ ಅಧಿಕೃತವಾಗಿ ನಮಗೆ ಮೊದಲು ದೊರಕುವ ಅರಸ ಜಯಗೌಡ.[41] ಈತನು ವಿಜಯನಗರದ ಆಧಿಪತ್ಯದಲ್ಲಿ ಪ್ರಜಾಪೀಡಕರಾಗಿದ್ದ ಸಣ್ಣಪುಟ್ಟ ಪಾಳೆಯಗಾರರನ್ನು ಸದೆಬಡಿದು ಕ್ರಿ.ಶ. ೧೪೧೮ರ ವೇಳೆಗೆ ಯಲಹಂಕ ನಾಡನ್ನು ತನ್ನ ವಶಕ್ಕೆ ತೆಗೆದುಕೊಂಡನು. ಗೌಡ ದೊರೆಗಳ ಪ್ರಥಮ ಅರಸನಾಗಿದ್ದ ಈತನು ಆಗ ವಿಜಯನಗರದ ಅಧಿಪತಿಯಾಗಿದ್ದ ಪ್ರೌಢದೇವರಾಯನಿಂದ ಮಾನ್ಯತೆ ಪಡೆದು, 'ಯಲಹಂಕ ಭೂಪಾಲ'ನೆಂಬ ಅಭಿಧಾನವನ್ನು ಪಡೆದಿದ್ದನು.[42] ಮುಂದೆ ಈತನ ವಂಶಜರು ಕ್ರಿ.ಶ. ೧೫೩೭ರವರೆಗೂ ಯಲಹಂಕವನ್ನೇ ತಮ್ಮ ರಾಜಧಾನಿಯನ್ನಾಗಿ ಇರಿಸಿಕೊಂಡು ಮಾಂಡಲಿಕ ಅರಸರಾಗಿ ರಾಜ್ಯವಾಳಿದರು.[43]

ಒಮ್ಮೆ ಕೆಂಪನಂಜೇಗೌಡನ ಮಗ ಹಿರಿಯ ಕೆಂಪೇಗೌಡನು, ತನ್ನ ಮಿತ ಪರಿವಾರದೊಂದಿಗೆ ಯಲಹಂಕದ ದಕ್ಷಿಣ ಭಾಗಕ್ಕೆ ಬಂದನು. ಆಗ ಇಲ್ಲಿ 'ಶಿವನಸಮುದ್ರ'ವೆಂಬ ಹಳ್ಳಿಯನ್ನು ಕಂಡು ಆಕರ್ಷಿತನಾಗಿ, ಇಲ್ಲೆ ವಿನೂತನವಾದ ಪಟ್ಟಣವೊಂದನ್ನು ನಿರ್ಮಿಸಿ, ಅದನ್ನೇ ರಾಜಧಾನಿಯನ್ನಾಗಿ ಮಾಡಿಕೊಳ್ಳಲು ನಿರ್ಧರಿಸಿದನು.[44] ಅದೇ ಪ್ರಕಾರ ವಿಜಯನಗರದ ಅರಸರ ಅನುಮತಿ ಪಡೆದು 'ಕ್ರಿ.ಶ.೧೫೩೭ರಲ್ಲಿ ಬೆಂಗಳೂರು ಪಟ್ಟಣವನ್ನು ನಿರ್ಮಿಸಿ', ಅದರ ಸುತ್ತ ಮಣ್ಣಿನ ಕೋಟೆಯನ್ನು ಕಟ್ಟಿಸಿದುದಾಗಿ ತಿಳಿದುಬರುತ್ತದೆ.[45] ಮತ್ತೊಂದು ವಾದದ ಪ್ರಕಾರ ೧೩ನೆಯ ಶತಮಾನದ ಉತ್ತರಾರ್ಧದಲ್ಲಿ ಹೊಯ್ಸಳರ ನರಸಿಂಹದೇವನ ಆಳ್ವಿಕೆಯಲ್ಲಿ ''ಯಲಹಂಕ''ದ ನೆಲೆವೀಡನ್ನಾಳುತ್ತಿದ್ದ ಮಹಾಮಂಡಲೇಶ್ವರ ''ದೇಚರಸ''ನು ಈ ಬೆಂಗಳೂರಿನ

ಕೋಟೆಯನ್ನು ಕಟ್ಟಿಸಿದ್ದಿರಬೇಕೆಂದೂ; ಹಿರಿಯ ಕೆಂಪೇಗೌಡನಿಗೂ ಮೊದಲೇ ಇದು ನಿರ್ಮಾಣವಾಗಿದ್ದುದಾಗಿ ಹೇಳುವುದುಂಟು.[46] ಆದರೆ ಅಗರದ ಸತ್ಯವಾಕ್ಯಪೆರ್ಮಾಡಿಯ ಕಾಲದ ಶಾಸನವೊಂದರಲ್ಲಿ ''ಬೆಂಗಳೂರ ಕೋಟೆ'' ಎಂಬ ಮಾತು ಪ್ರಸ್ತಾಪವಾಗಿದೆ.[47] ಈ ಸತ್ಯವಾಕ್ಯ ಪೆರ್ಮಾಡಿಯ ಕಾಲ ಕ್ರಿ.ಶ. ೮೬೮-೯೦೫ ಆಗಿರುವುದರಿಂದ, ೯ನೆಯ ಶತಮಾನದ ವೇಳೆಗಾಗಲೇ 'ಬೆಂಗಳೂರಿನ ಕೋಟೆ' ಇತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಹಿರಿಯ ಕೆಂಪೇಗೌಡನು ಸಾಕಷ್ಟು ಪ್ರಾಚೀನವೂ, ಪ್ರಸಿದ್ಧಿಯೂ ಪಡೆದಿದ್ದ ಬೆಂಗಳೂರಿನ ಪ್ರದೇಶವನ್ನು ಪುನರ್ ನವೀಕರಿಸಿ ಕ್ರಿ.ಶ. ೧೫೩೭ರಲ್ಲಿ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿರಬೇಕು.

### ೨.೩.೧. ಹಿರಿಯಕೆಂಪೇಗೌಡ (ಕ್ರಿ.ಶ. ೧೫೧೩-೧೫೬೯)

ಹಿರಿಯ ಕೆಂಪೇಗೌಡನು ಕೃಷ್ಣದೇವರಾಯನ ಕಾಲ (ಕ್ರಿ.ಶ. ೧೫೦೯-೧೫೨೯)ಕ್ಕಾಗಲೇ ವಿಜಯನಗರದ ಸಾಮಂತನಾಗಿದ್ದುದರಿಂದ[48] ಹಲವಾರು ಬಾರಿ ಹಂಪೆಗೆ ಭೇಟಿ ನೀಡಿದ್ದನು. ಹಂಪೆಯ ಮಾದರಿಯಲ್ಲೇ ತಾನೂ ಬೆಂಗಳೂರಿನ ಪುನರ್ನಿರ್ಮಾಣ ಮಾಡುವ ಕನಸು ಕಂಡಿದ್ದನು. ತತ್ಫಲವಾಗಿ ಈ ಪಟ್ಟಣದ ಸುತ್ತ ನವ ದ್ವಾರಗಳುಳ್ಳ[49] ವ್ಯವಸ್ಥಿತವಾದ ಕೋಟೆ, ಕೋಟೆಯ[50] ಸುತ್ತ ನವ ತಟಾಕ (ಕೆರೆ)ಗಳನ್ನೂ, ಜೊತೆಗೆ ಅನೇಕ ಗುಡಿಗೋಪುರಗಳನ್ನೂ ನಿರ್ಮಿಸುವುದರ ಮೂಲಕ ಬೆಂಗಳೂರು ಪಟ್ಟಣವನ್ನು ಪ್ರಸಿದ್ಧ ಕೇಂದ್ರವನ್ನಾಗಿ ಮಾರ್ಪಡಿಸಿದ್ದನು.[51] ಗೌಡನ ಇಷ್ಟೆಲ್ಲಾ ಪರಿಶ್ರಮಗಳನ್ನು ಗಮನಿಸಿದ್ದ ಅಚ್ಯುತರಾಯನು ಮುಂದೆ ಬೆಂಗಳೂರಿನ ಅಭಿವೃದ್ಧಿಗಾಗಿ ೩೦,೦೦೦ ಪಗೋಡಗಳ ಆದಾಯವುಳ್ಳ ಹಳೇ ಬೆಂಗಳೂರು, ವರ್ತೂರು, ಯಲಹಂಕ, ಬೇಗೂರು, ಅಲಸೂರು, ಕೆಂಗೇರಿ, ತಲಘಟ್ಟಪುರ, ಜಿಗಣಿ, ಕುಂಬಳಗೋಡು, ಕನ್ನಳ್ಳಿ, ಬಾಣಾವರ ಮತ್ತು ಹೆಸರುಘಟ್ಟ ಇವು ಹನ್ನೆರಡು ಹೋಬಳಿಗಳಿಗೆ ಸೇರಿದ್ದ ವಹಿವಾಟು ಉತ್ಪನ್ನವನ್ನು ಗೌಡನಿಗೆ ಬಿಟ್ಟುಕೊಟ್ಟಿದ್ದನು.[52]

ಕೋಟೆಯ ದಕ್ಷಿಣ ಬದಿಗೆ ಈಗಿನ ವೆಂಕಟರಮಣ ಸ್ವಾಮಿ ದೇಗುಲವಿರುವ ಬಳಿ ಕಲ್ಯಾಣಬಸವೇಶ್ವರನ ದೇಗುಲವನ್ನೂ, ಗವಿಪುರದಲ್ಲಿ ಗವಿ ಗಂಗಾಧರೇಶ್ವರನ ಗುಡಿ ಹಾಗೂ ವೀರಭದ್ರಸ್ವಾಮಿ ಗುಡಿಗಳನ್ನೂ, ಸುಂಕೇನಹಳ್ಳಿಯ ಬಳಿ ದೊಡ್ಡಬಸವೇಶ್ವರನ ಗುಡಿಯನ್ನೂ ಈತನೇ ನಿರ್ಮಿಸಿದ್ದನು.[53] ತನ್ನ ಕುಲದೇವತೆಯಾಗಿದ್ದ ಕೆಂಪಮ್ಮನ ಹೆಸರಿನಲ್ಲಿ ಕೆಂಪಾಂಬುಧಿ ಕೆರೆಯನ್ನು ನಿರ್ಮಾಣ ಮಾಡಿಸಿ, ತನ್ನ ಆರಾಧ್ಯ ದೈವವಾಗಿದ್ದ ಭೈರವನ ಹೆಸರಿನಲ್ಲಿ 'ಭೈರವನಾಣ್ಯ'ಗಳನ್ನೂ ಮುದ್ರಿಸಿ ಚಲಾವಣೆಗೆ ತಂದನು.[54] ಅಪ್ರತಿಮ ಶಿವಭಕ್ತನಾಗಿದ್ದ ಈತ ಅನೇಕ ಶಿವದೇವಾಲಯಗಳಿಗೆ ಕಾರಣನಾಗಿದ್ದುದಲ್ಲದೆ ಸದಾ ಶಿವಲಿಂಗದ ಆರಾಧಕನಾಗಿದ್ದನು. ತನ್ನ ಹಿರಿಯರು ಅಪೂರ್ಣಮಾಡಿದ್ದ ಅಲಸೂರಿನ ಸೋಮೇಶ್ವರ ದೇಗುಲಕ್ಕೆ ಸುಂದರವಾದ ಗರ್ಭಗುಡಿಯನ್ನೂ ನಿರ್ಮಿಸಿಕೊಟ್ಟಿದ್ದನು.[55] ಹೀಗೆ ತನ್ನ ಬದುಕಿನುದ್ದಕ್ಕೂ ದೇವಾಲಯ, ಕೆರೆ-ಕುಂಟೆ, ಮಠ-ಮಾನ್ಯ, ಅನ್ನಛತ್ರ, ವಿಹಾರಾದಿ ಆರಾಮಗಳ ನಿರ್ಮಾಣದ ಜೊತೆಗೆ, ಸದಾ ಪ್ರಜಾರಂಜಕನಾಗಿದ್ದು 'ನವಬೆಂಗಳೂರಿನ ನಿರ್ಮಾಪಕ'ನೆನಿಸಿದ್ದನು.[56] ಎಸ್.ಕೆ.ನರಸಿಂಹಯ್ಯನವರು ಹೇಳಿರುವಂತೆ ''ಹಿರಿಯ ಕೆಂಪೇಗೌಡನು ತನ್ನ ಅಧಿಕಾರಾವಧಿಯಲ್ಲಿ ದೇಶ ಕಾಲ ಪರಿಸ್ಥಿತಿಯನ್ನರಿತು ದೇವತಾ ಕಾರ್ಯಗಳನ್ನೂ, ಪರೋಪಕಾರಗಳನ್ನೂ ಸದಾ ನೆರವೇರಿಸುವ ಧನಿಕ ವರ್ತಕ ಮಂಡಲಿಯವರು ಇರಲಿಕ್ಕೂ; ಭಕ್ತಿ, ಜ್ಞಾನ, ವೈರಾಗ್ಯ, ದೇಶಾಭಿಮಾನ, ಧೈರ್ಯೋತ್ಸಾಹ, ಉದ್ಯೋಗತತ್ಪರತೆಗಳನ್ನು ವೃದ್ಧಿಗೊಳಿಸುವ ಆಸ್ತಿಕ ಧರ್ಮಸಂಘಗಳು, ಮಠಗಳು, ಧರ್ಮಛತ್ರಗಳು, ಅನಾಥರ ರಕ್ಷಣಾಲಯಗಳು, ಕೂಲಿಮಠ(ಶಾಲೆ)ಗಳು ಇವೇ ಮೊದಲಾದ ಕಲ್ಯಾಣಕಾರಕ ಅಭಿವೃದ್ಧಿಕಾರ್ಯಗಳನ್ನು ಸಾಧಿಸಿ ಬೆಂಗಳೂರು ಪಟ್ಟಣವನ್ನು ''ಕಲ್ಯಾಣನಗರ''ವನ್ನಾಗಿ ನಿರ್ಮಾಣ ಮಾಡಿಸಿದ್ದನು.[57] ಈತನ ಕಾಲದಲ್ಲಿ ನಿರ್ಮಾಣವಾಗಿದ್ದ ಅನೇಕ ಮಠ-ಮಂದಿರಗಳಿಗೆ, ಅನ್ನಛತ್ರಗಳಿಗೆ, ಸುಕ್ಷೇತ್ರಗಳಿಗೆ, ಅವು ಶಾಶ್ವತವಾಗಿ ನಡೆದು ಬರುವ ಅನುಕೂಲಕ್ಕಾಗಿ ಮುಂದೆ ಇವನ ಮಗ ಇಮ್ಮಡಿ ಕೆಂಪೇಗೌಡನೂ ಉದಾರ ದಾನ ದತ್ತಿಗಳನ್ನು ನೀಡಿದ್ದನು.[58] ಇಷ್ಟೆಲ್ಲಾ ಸಮೃದ್ಧವಾಗಿದ್ದ ಆಡಳಿತದ ನಡುವೆಯೂ ತನ್ನ ವಿರೋಧಿಗಳ ಕುಯುಕ್ತಿಯಿಂದಾಗಿ, ರಾಮರಾಯನ ಕೈದಿಯಾಗಿ ಆನೆಗೊಂದಿಯಲ್ಲಿ ಕೆಲವು ವರ್ಷಗಳ ಸೆರೆವಾಸವನ್ನು ಅನುಭವಿಸಬೇಕಾಯಿತು.[59] ಸೆರೆಯಿಂದ ಬಿಡುಗಡೆ ಹೊಂದಿದ ಮೇಲೂ ಐದು ವರ್ಷಗಳ ಆಳ್ವಿಕೆ ನಡೆಸಿದ ಹಿರಿಯ ಕೆಂಪೇಗೌಡನು ಕ್ರಿ.ಶ. ೧೫೭೦ರಲ್ಲಿ ಮರಣ[60] ಹೊಂದಿದನು.[61]

ಹೀಗೆ ದಕ್ಷ ಆಡಳಿತಗಾರನಾಗಿ, ನಾಡಿನ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದ್ದರ ಜೊತೆಗೆ; ವಿಶೇಷವಾಗಿ ಶಿವಮತದ ಪ್ರವರ್ತಕನೆನಿಸಿದ್ದಾಗ್ಯೂ, ಸರ್ವಧರ್ಮ ಜನಾಧರಣೀಯನಾಗಿದ್ದು; ಆಧುನಿಕ ಬೆಂಗಳೂರು ಪಟ್ಟಣವನ್ನು ನಿರ್ಮಾಣ ಮಾಡಿದ ಕೀರ್ತಿಗೆ ಪಾತ್ರನಾಗಿದ್ದಾನೆ.

### ೨.೩.೨. ಇಮ್ಮಡಿ ಕೆಂಪೇಗೌಡ (ಕ್ರಿ.ಶ. ೧೫೬೯-೧೬೩೮)

ಇಮ್ಮಡಿ ಕೆಂಪೇಗೌಡನು ಕ್ರಿ.ಶ.೧೫೬೯ ರಿಂದ ಅಧಿಕಾರಕ್ಕೆ ಬಂದನು.[62] ಈತನು ಅಧಿಕಾರಾರೂಢನಾಗಿದ್ದಾಗ ವಿಜಯನಗರದ ಪರವಾಗಿ ವೆಂಕಟಪತಿರಾಯನು ಪೆನುಗೊಂಡೆಯ ಮಂಡಲಾಧೀಶನಾಗಿ ಆಡಳಿತ ನಡೆಸುತ್ತಿದ್ದನು. ಪ್ರಾರಂಭದ ದಿನಗಳಲ್ಲಿ 'ಚಿಕ್ಕರಾಯ'ನೆಂದೇ ಪ್ರಸಿದ್ಧಿಯಾಗಿದ್ದ ಇಮ್ಮಡಿ ಕೆಂಪೇಗೌಡನು ಐವತ್ತೈದು ವರ್ಷಗಳ ಕಾಲ ಬೆಂಗಳೂರು ರಾಜಧಾನಿಯ ಮೂಲಕ ವೈಭವದ ಆಡಳಿತ ನಡೆಸಿದನು.[63] ತನ್ನ ತಂದೆಯಂತೆ ಈತನೂ ಕೂಡ ವಿಜಯನಗರದ ಅಧೀನ ಅರಸನಾಗಿದ್ದುಕೊಂಡು ಯಲಹಂಕ ನಾಡನ್ನು ಮತ್ತಷ್ಟು ವಿಸ್ತರಿಸಿದನು. ಇವನ ಕಾಲದಲ್ಲಿ ಬೆಂಗಳೂರು, ನೆಲಮಂಗಲ, ರಾಮನಗರ, ಮಾಗಡಿ, ಕುಣಿಗಲ್ಲು ಹಾಗೂ ತುಮಕೂರಿನ ಕೆಲವು ಭಾಗಗಳು ಈತನ ಆಡಳಿತಕ್ಕೆ ಒಳಪಟ್ಟಿದ್ದುವು.[64] ಅತೀವ ದೈವಭಕ್ತನಾಗಿದ್ದ ಈತ ಶಿವಮತದ ಅಭಿಮಾನಿಯಾಗಿದ್ದು ಮಠ-ಮಾನ್ಯಗಳ ಜೊತೆಗೆ ಅನೇಕ ಶಿವದೇವಾಲಯಗಳ ನಿರ್ಮಾಣಕ್ಕೆ ಕಾರಣನಾಗಿದ್ದನು. ಬೆಂಗಳೂರಿನ ಕೆಂಪಾಪುರ ಹಾಗೂ ಹೆಸರುಘಟ್ಟದ ಐಗಂಡಪುರ(ಐವರುಕಂಡಪುರ) ಅಗ್ರಹಾರಗಳು ಈತನ ಕಾಲದಲ್ಲಿ ನಿರ್ಮಾಣವಾಗಿದ್ದುವು.[65] ಕೋಟೆಗೆ ದಕ್ಷಿಣದಲ್ಲಿ ಕಾರಂಜಿಕೆರೆ, ಅಗ್ರಹಾರದ ಗಿಡ್ಡೇಗೌಡನ (ಬಿನ್ನಿಮಿಲ್)ಕೆರೆ, ಚಕ್ಕರಾಯನಕೆರೆ, ಅಲಸೂರು ಕೆರೆ ಇವೇ ಮೊದಲಾದ ಕೆರೆಗಳನ್ನು ನಿರ್ಮಿಸಿದ್ದನು. ಇದುವರೆಗೂ "ದೇವರಾಯಪಟ್ಟಣ"ವೆಂದೇ ಕರೆಯುವ ಪ್ರತೀತಿಯುಳ್ಳದ್ದಾಗಿದ್ದ ಬೆಂಗಳೂರು ಪಟ್ಟಣವನ್ನು ಸಮಗ್ರ ರೀತಿಯಿಂದ ಅಭಿವೃದ್ಧಿಪಡಿಸಿ, ಮುಂದೆ ಈ ಊರು ಬೆಳೆಯುವ ರೀತಿಯನ್ನು ನಿರೀಕ್ಷಿಸಿ ನಾಲ್ಕೂ ದಿಕ್ಕಿಗೆ ನಾಲ್ಕು ಗಡಿಗೋಪುರಗಳನ್ನು ನಿರ್ಮಾಣ ಮಾಡಿಸಿದ್ದನು.[66]

ಇಮ್ಮಡಿ ಕೆಂಪೇಗೌಡನು ತನ್ನ ತಂದೆಯು ಅಪೂರ್ಣ ಮಾಡಿದ್ದ ಅಲಸೂರಿನ ಸೋಮೇಶ್ವರ ದೇವಾಲಯವನ್ನು ಸಂಪೂರ್ಣಗೊಳಿಸಿದನು. ಇದಕ್ಕಾಗಿ ಬೇಲೂರಿನಿಂದ ಸುಪ್ರಸಿದ್ಧ ಶಿಲ್ಪಿಗಳನ್ನು ಕರೆಸಿ ದೇಗುಲದ ವಿಶಾಲ ಗೋಪುರ, ಪ್ರಾಕಾರ, ನವರಂಗ, ಹಜಾರ ಮುಂತಾದವುಗಳನ್ನು ರಚಿಸಿ, ಜೊತೆಗೆ ಪಕ್ಕದಲ್ಲಿ ಮೀನಾಕ್ಷಿ ಅಮ್ಮನವರ ದೇಗುಲವನ್ನೂ ನಿರ್ಮಾಣ ಮಾಡಿಸಿದ್ದನು.[67] ಮುಖ್ಯ ದೇಗುಲದ ಹೊರಗೋಡೆಯ ಮೇಲೆ ಕೆತ್ತಿಸಿರುವ ಗಿರಿಜಾ ಕಲ್ಯಾಣದ ಭಿತ್ತಿಚಿತ್ರಗಳು ಇಂದಿಗೂ ಮನೋಜ್ಞವಾಗಿವೆ.

ಇಮ್ಮಡಿ ಕೆಂಪೇಗೌಡನ ಶೌರ್ಯ ಸಾಹಸಗಳನ್ನೂ, ಕೀರ್ತಿ ಪ್ರತಿಷ್ಠೆಗಳನ್ನೂ ಕುರಿತು ಬಿಂಬಿಸುವ 'ಕೆಂಪೇಗೌಡನ ಜಯ ಪ್ರಶಸ್ತಿ'ಯು ಐತಿಹಾಸಿಕವಾಗಿ ವಿಶೇಷ ಸಂಗತಿಗಳನ್ನು ಹೊರಚೆಲ್ಲುತ್ತದೆ. ಇದರ ಕರ್ತೃವಾದ ಗುರುನಂಜೇಶನು ವಾಸ್ತವವಾಗಿ ಈತನ ಗುರುವೇ ಆಗಿರಬೇಕು.[68] ಇತ್ತೀಚೆಗೆ ಬೆಳಕು ಕಂಡಿರುವ ಗುಮ್ಮಳಾಪುರದ ಶಾಸನವೊಂದರಲ್ಲಿ (ಕ್ರಿ.ಶ. ೧೬೦೬) "ಯಲಹಂಕ ನಾಡ ಪ್ರಭುವಾದ ಇಮ್ಮಡಿ ಕೆಂಪೇಗೌಡನು ಭಾರದ್ವಾಜ ಗೋತ್ರದ ಪಡಿವಿಡಿ ವರ್ಗದ ಕೊಲ್ಲಿಪಾಕಿಯ ರೇವಣ ಸಿದ್ಧೇಶ್ವರನ ಸಂಪ್ರದಾಯದವರಾದ ಗುಮ್ಮಳಾಪುರದ ಸಿಂಹಾಸನದ ಕರ್ತೃವಾದ ನಂಜೇದೇವರುಅಯ್ಯನವರ ಪೌತ್ರರಾದ ಚನ್ನಮಲ್ಲಿಕಾರ್ಜುನದೇವರ ಪುತ್ರರಾದ ನಂಜೇದೇವಪ್ಪ ಅಯ್ಯನವರಿಗೆ ಮೇಲೂರಿಗೆ ಸೇರಿದ ಗುಮ್ಮಳಾಪುರ[69]ವನ್ನು ದಾನವಾಗಿ ನೀಡಿದ ವಿವರಗಳಿವೆ."[70] ಇಲ್ಲಿ ಉಲ್ಲೇಖವಾಗಿರುವ ಮಠ 'ವೀರಶೈವ ಗುರುವರ್ಗ'ಕ್ಕೆ ಸೇರಿದ ಮಠವಾಗಿದ್ದು, 'ನಂಜೇದೇವಪ್ಪ ಅಯ್ಯ'ನವರಲ್ಲಿ ಇಮ್ಮಡಿ ಕೆಂಪೇಗೌಡನು ಭಕ್ತಿಯುಳ್ಳವನಾಗಿದ್ದುದು ವ್ಯಕ್ತವಾಗಿದೆ. ಆದ್ದರಿಂದ ಜಯಪ್ರಶಸ್ತಿಯ ಕರ್ತೃವಾದ 'ಸದ್ಗುರುನಂಜೇಶ'ನೇ ಶಾಸನದಲ್ಲಿ ಉಕ್ತವಾಗಿರುವ 'ನಂಜೇದೇವಪ್ಪ ಅಯ್ಯನವರು' ಎಂಬುದು ನಿಶ್ಚಯವಾದಂತಾಗಿದೆ.[71] ಜೊತೆಗೆ ಇಮ್ಮಡಿ ಕೆಂಪೇಗೌಡನ ಗುರುವಾಗಿದ್ದ ನಂಜೇದೇವಪ್ಪಅಯ್ಯ (ಗುರುನಂಜೇಶ)ನವರಿಗಿಂತ ಹಿಂದೆ ಇದ್ದ ಇಬ್ಬರು ಅಯ್ಯನವರು (ಗುರು)ಗಳ ಹೆಸರು ಇಲ್ಲಿ ಉಲ್ಲೇಖವಾಗಿರುವುದರಿಂದ, ಯಲಹಂಕ ಪ್ರಭುಗಳ ಕಾಲದಲ್ಲಿ ವೀರಶೈವ ಗುರುಗಳ ಪ್ರಭಾವ ಸಾಕಷ್ಟು ಇದ್ದಿರಬೇಕು. ಮೇಲಾಗಿ ಹಿರಿಯ ಕೆಂಪೇಗೌಡನ ಕಾಲಕ್ಕೆ

ವೀರಶೈವ ಮಠಾಧೀಶರುಗಳು ಬೆಂಗಳೂರು ಮತ್ತು ಸುತ್ತಮುತ್ತಲ ಪ್ರಾಂತ್ಯದಲ್ಲಿ ಇದ್ದುದಕ್ಕೆ ಮೇಲ್ಕಂಡ ಶಾಸನವು ಬಲವಾದ ಆಧಾರವಾಗಿದೆ. ಇಲ್ಲಿ ಬರುವ ನಂಜೇದೇವಪ್ಪಅಯ್ಯನವರು ಇಮ್ಮಡಿ ಕೆಂಪೇಗೌಡನ ಸಮಕಾಲೀನನಾಗಿದ್ದ ಹೊಸಕೋಟೆಯ ಪಾಳೆಯಗಾರ ಸುಗಟೂರು ಮುಮ್ಮಡಿತಮ್ಮೇಗೌಡನಿಗೂ ಗುರುವಾಗಿದ್ದ ರೆಂಬುದಾಗಿ ಸರ್ಜಾಪುರದ ಶಾಸನದಿಂದ ತಿಳಿದು ಬರುತ್ತದೆ.[72]

ಬೆಂಗಳೂರಿನ ಪ್ರಭುವೆನಿಸಿದ್ದ ಇಮ್ಮಡಿ ಕೆಂಪೇಗೌಡನು-ಶಿವಲಿಂಗಾರ್ಯರ ಪುತ್ರ ವೀರಣಾರ್ಯರು ಬೆಂಗಳೂರಿಗೆ ಬಂದಾಗ ಅವರನ್ನು ಸ್ವಾಗತಿಸಿ, ''ನಿಲಯ, ಹಿತ್ತಿಲ, ಬಿತ್ತಿ, ಮಹಾಕೂಪಂಗಳಂ ನಿರ್ಮಿಸಿ ನೀವಿರ್ಪುದೆಂದು ವೀರಣಾರ್ಯರ್ಗಂಗೊಪ್ಪಿಸಿದ್ದನು,''[73] ಎಂಬುದಾಗಿ ಶಾಂತವೀರದೇಶಿಕನ (ಕ್ರಿ.ಶ. ೧೬೫೦) ಶಿವಲಿಂಗ ಚಾರಿತ್ರದಲ್ಲಿ ಉಲ್ಲೇಖವಾಗಿದೆ.

'ನಿರಂಜನವಂಶರತ್ನಾಕರ'ದಲ್ಲಿ ಉಲ್ಲೇಖವಾಗಿರುವ[74] ಮಾಗಡಿಯ ನಾಡಗೌಡನೇ ಇಮ್ಮಡಿ ಕೆಂಪೇಗೌಡ ನಾಗಿದ್ದು, ಈತ ಕಲ್ಯಾಣದ ಬಸವ ಪರಂಪರೆಯ ೨೨ನೆಯ ಗುರುವಾಗಿದ್ದ ಗಗನದಾರ್ಯರ ಶಿಷ್ಯತ್ವ ಪಡೆದು ಅವರಿಂದ ಶಿವಲಿಂಗಧಾರಣೆ ಮಾಡಿಸಿಕೊಂಡುದಾಗಿ ತಿಳಿದು ಬರುತ್ತದೆ.[78] ಇದೇ ವೇಳೆಗೆ ಗೌಡನ ಆಧಿಪತ್ಯದೊಳಗೆ ''ಅರವತ್ತಾರು ವೀರಶೈವ ವಿರಕ್ತಮಠಗಳು'' ಪ್ರಾರಂಭವಾದುದಾಗಿ ಗುರುತಿಸಲಾಗಿದೆ. ಇದುವರೆಗೂ 'ಚತುರ್ಥಗೋತ್ರ'ದವನೆಂದೇ ಗುರುತಿಸಿಕೊಳ್ಳುತ್ತಿದ್ದ ಇಮ್ಮಡಿಕೆಂಪೇಗೌಡನು ಗಗನದಾರ್ಯರ ಶಿಷ್ಯತ್ವ ಪಡೆದ ಮೇಲೆ 'ಸದಾಶಿವಗೋತ್ರ'ದವನೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ.[76]

ಬೆಂಗಳೂರಿನ ಶಾಸನ (ಕ್ರಿ.ಶ.೧೬೩೩) ಒಂದರಲ್ಲಿ - ''ಇಮ್ಮಡಿ ಕೆಂಪೇಗೌಡರ ಅಯ್ಯನವರಿಗೆ (ಗುರುಗಳಿಗೆ) ಗುಜ್ಜರಿ ವಿಶ್ವನಾಥ ಎಂಬುವವರು 'ಧರ್ಮಶಾಲಾ ಮಠ'ವೊಂದನ್ನು ಕಟ್ಟಿಸಿಕೊಟ್ಟ''[77] ವಿವರಗಳಿವೆ. ಬಹುಶಃ ಇಲ್ಲಿ ಬರುವ ಅಯ್ಯನವರು ಗುಮ್ಮಳಾಪುರದ ಶಾಸನದಲ್ಲಿ ಉಕ್ತವಾಗಿರುವ ನಂಜೇದೇವಪ್ಪಅಯ್ಯನವರೇ ಆಗಿರಬೇಕು. ಅಲ್ಲದೆ ಈ ಶಾಸನವು ಚಿಕ್ಕಪೇಟೆಯ ಭಾಗದಲ್ಲೇ ದೊರಕಿರುವುದರಿಂದ ಬಾಳೆಹೊನ್ನೂರಿನ ಶಾಖೆಯ ಮಹಾಂತರಮಠವೇ ಇದಾಗಿರಬೇಕೆಂದು ಊಹಿಸಲವಕಾಶವಿದೆ. ಒಟ್ಟಾರೆ ಬೆಂಗಳೂರಿನ ಭಕ್ತರೊಬ್ಬರು ಇಮ್ಮಡಿಕೆಂಪೇಗೌಡನ ಗುರುವಾಗಿದ್ದ ನಂಜೇದೇವಪ್ಪ ಅಯ್ಯ(ಗುರುನಂಜೇಶ)ನವರಿಗೆ ಇಲ್ಲೊಂದು ಮಠವನ್ನು ನಿರ್ಮಾಣ ಮಾಡಿಸಿಕೊಟ್ಟಿದ್ದುದು ಸ್ಪಷ್ಟವಾಗಿದೆ.

ಪ್ರಸಿದ್ಧ ಕವಿಯಾಗಿದ್ದ ವಿರೂಪಾಕ್ಷಪಂಡಿತ (ಕ್ರಿ.ಶ. ೧೬ನೆಯ ಶತಮಾನ)ನು, ತನ್ನ 'ಚೆನ್ನಬಸವ ಪುರಾಣ'ದಲ್ಲಿ ಇಮ್ಮಡಿ ಕೆಂಪೇಗೌಡನ ಸಮಕಾಲೀನರಾಗಿದ್ದ ಬಿಜ್ಜಾವರದ ಚಿಕ್ಕಣಗೌಡ, ಸುಗಟೂರಿನ ತಮ್ಮಣಗೌಡಾದಿಗಳೊಂದಿಗೆ ಯಲಹಂಕದ ದೊರೆಗಳು ವೀರಶೈವ ಭಕ್ತರಾಗಿದ್ದು ನಿತ್ಯ ಜಂಗಮ ದಾಸೋಹ ನಡೆಸುತ್ತಿದ್ದುದಾಗಿ ವರ್ಣಿತ ವಾಗಿದೆ.[78] ಆ ಕಾಲದಲ್ಲಿ ವಿಜಯನಗರದ ಆಧಿಪತ್ಯಕ್ಕೆ ಒಳಪಟ್ಟಿದ್ದ ಮೈಸೂರಿನ ಒಡೆಯರು, ಯಲಹಂಕದ ಪ್ರಭುಗಳು, ಕೆಳದಿ, ಸ್ವಾದಿ, ಇಕ್ಕೇರಿ, ಪುಂಗನೂರು, ಸುಗಟೂರು, ಬಿಳಗಿ, ಬಿಜ್ಜಾವರ, ಕೊಡಗು ಇವೇ ಮೊದಲಾದ ನಾಡ ಅಧಿಪತಿಗಳೆಲ್ಲಾ ವೀರಶೈವ ಅರಸು ಮನೆತನಗಳವರೇ ಆಗಿದ್ದುದು[79] ಗಮನಾರ್ಹ.

ವಿಜಯನಗರದ ಕಾಲ (ಕ್ರಿ.ಶ. ೧೩೩೬-೧೬೪೬)ದಲ್ಲಿ ಸಾಮಾನ್ಯವಾಗಿ ವೀರಶೈವರಿಗೆ ಬಿಟ್ಟ ಉಂಬಳಿಗ್ರಾಮ ಗಳನ್ನು 'ಪುರ'[80]ಗಳೆಂದೂ, ಬ್ರಾಹ್ಮಣರಿಗೆ ಬಿಟ್ಟ ಉಂಬಳಿ ಗ್ರಾಮಗಳನ್ನು 'ಅಗ್ರಹಾರ'ಗಳೆಂದೂ ಕರೆಯುವುದು ರೂಢಿಯಲ್ಲಿತ್ತು.[81] ಇದೇ ಸಂದರ್ಭದಲ್ಲಿ ಯಲಹಂಕ ಪ್ರಭುಗಳ ಕಾಲದಲ್ಲಿ (ಕ್ರಿ.ಶ. ೧೪೧೮-೧೭೨೮) ಇಂತಹ ನೂರಾರು ಪುರಗಳು ವೀರಶೈವರ ಮಠ-ಮಾನ್ಯಗಳ ಉಂಬಳಿ ಗ್ರಾಮಗಳಾಗಿ ಹುಟ್ಟಿಕೊಂಡಿರುವಂತಿದೆ. ಇಂದಿಗೂ ಬೆಂಗಳೂರು ನಗರದ ಉತ್ತರ ಮತ್ತು ದಕ್ಷಿಣ ತಾಲ್ಲೂಕುಗಳೆರಡೂ ಸೇರಿ ಎಪ್ಪತ್ತುನಾಲ್ಕು ಪುರಗಳಿರುವು ದನ್ನು ಗುರುತಿಸ ಬಹುದಾಗಿದೆ.[82] ಇವುಗಳಲ್ಲಿ ಬಹುತೇಕ ಪುರಗಳು ಹಿರಿಯ ಹಾಗೂ ಇಮ್ಮಡಿ ಕೆಂಪೇಗೌಡರುಗಳ ಕಾಲ (ಕ್ರಿ.ಶ. ೧೫೧೩-೧೬೩೮)ದಲ್ಲಿ ಹುಟ್ಟಿಕೊಂಡವು ಗಳಾಗಿವೆ.

'ಕೆಂಪೇಗೌಡನಜಯಪ್ರಶಸ್ತಿ'ಯಲ್ಲಿ ವರ್ಣಿತ ವಾಗಿರುವಂತೆ ಇಮ್ಮಡಿ ಕೆಂಪೇಗೌಡನು ಅಸಮಾನ ಶೂರನೂ, ವೈರಿಕುಲಕಂಟಕನೂ, ಸಮಕಾಲೀನ

ರಾಯರುಗಳಲ್ಲಿ ಅಗ್ರಗಣ್ಯನೂ ಆಗಿದ್ದನು. ತನ್ನ ನೆರೆಯ ನಾಡಪ್ರಭುವಾಗಿದ್ದ ಇಮ್ಮಡಿ ತಮ್ಮಭೂಪಾಲನು ಶಿವೈಕ್ಯ (ಕ್ರಿ.ಶ.೧೬೧೨) ನಾದಾಗ ಲಂಡ ಅಯ್ಯಮಗೌಡನು ಆತನ ರಾಜ್ಯ, ಭಂಡಾರ, ಬೊಕ್ಕಸಾದಿಗಳನ್ನು ತನ್ನ ವಶ ಮಾಡಿಕೊಂಡಿದ್ದನು. ಆಗ ಪೆನುಗೊಂಡೆಯ ಮಂಡಲಾಧಿಪತಿ ವೆಂಕಟಪತಿರಾಯನ ಆಣತಿಯಂತೆ ಲಂಡ ಅಯ್ಯಮನನ್ನು ತರಿದು ಮುಮ್ಮಡಿತಮ್ಮಭೂಪಾಲನಿಗೆ ಸಂಸ್ಥಾನವನ್ನು ಉಂಟುಮಾಡಿದನು.[83] ಮುಂದೆ ಕ್ರಿ.ಶ.೧೬೩೫ರ ವೇಳೆಗೆ ಮಂಡಲಾಧಿಪತಿಯಾಗಿದ್ದ ವೆಂಕಟಪತಿರಾಯನು ತನ್ನ ರಾಜ್ಯಾಧಿಕಾರವನ್ನೇ ಉಳಿಸಿಕೊಳ್ಳುವುದು ಕಷ್ಟವಾದಾಗ, ಇಮ್ಮಡಿ ಕೆಂಪೇಗೌಡನ ಸಹಾಯ ಕೋರಿದ್ದನು.[84] ಆಗ ಚತುರನೂ ಸಮರಾಂಗ ಪ್ರವೀಣನೂ ಆಗಿದ್ದ ಗೌಡನು ತನಗೆ ಸಖ್ಯವಾಗಿದ್ದ ಪಾಳೆಯಗಾರರನ್ನೆಲ್ಲಾ ಕೂಡಿಕೊಂಡು ಪೆನುಗೊಂಡೆಯ ದುರ್ಗಕ್ಕೆ ಮುತ್ತಿಗೆ ಹಾಕಿ, ಶತ್ರು ಪಾಳೆಯವನ್ನು ಬಗ್ಗುಬಡಿದು ಮತ್ತೊಮ್ಮೆ ರಾಯನಿಗೆ ಪಟ್ಟಕಟ್ಟಿ ನರಪತಿಯ ಸಿಂಹಾಸನಕ್ಕೆ ದಿಕ್ಕು ಕಾಣಿಸಿದನು. ಗೌಡನ ಅಪ್ರತಿಮ ಸಾಹಸವನ್ನು ಮೆಚ್ಚಿದ ವೆಂಕಟಪತಿರಾಯನು ''ಸ್ವಾಮಿದ್ರೋಹರಗಂಡ'' ಎಂಬ ಬಿರುದನ್ನಿತ್ತು ಗೌರವಿಸಿದನು.[85] ಈ ಸಂದರ್ಭದಲ್ಲಿ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನ ಕೀರ್ತಿಯು ಸಮಕಾಲೀನ ಪಾಳೆಯಗಾರರಾಗಿದ್ದ ತಲಕಾಡು, ನಂದಿ, ಶ್ರೀರಂಗ, ಮೈಸೂರು, ಹೊಳೆನರಸೀಪುರ, ಹೊಸಹೊಳಲು ಮುಂತಾದೆಡೆಗಳಲ್ಲಿ ಅಲ್ಲದೆ; ಮಳವಳ್ಳಿ, ಮದ್ದೂರು, ಚನ್ನಪಟ್ಟಣ, ಕೋಲಾಳ, ಹೊಸಕೋಟೆ, ಗಜಶಿಲಾಪುರ, ಶಿವಗಂಗೆ, ಕುಣಿಗಲ್ಲು, ಗೂಳೂರು, ಪೆನುಗೊಂಡೆ, ಬಳ್ಳಾಪುರ, ಕಾಶಿ, ಕೇದಾರ, ದಿಳ್ಳಿ, ಅಹಮದ್‌ನಗರ, ಆಗ್ರ, ಬಂಕಾಪುರ ಇವೇ ಮುಂತಾದ ದೇಶವಿದೇಶಗಳಲ್ಲೆಲ್ಲಾ ಹರಡಿದ್ದು, ಈತನನ್ನು ''ಬಸವೇಶ''ನೆಂದು ಹೊಗಳುತ್ತಿದ್ದುದಾಗಿ ''ಕೆಂಪೇಗೌಡನ ಯಶಃ ಪ್ರಕೀರ್ತನೆ''ಗಳಲ್ಲಿ ಗುಣಗಾನ ಮಾಡಲಾಗಿದೆ.[86]

ಈ ಮಧ್ಯೆ ಈತನ ಅಭ್ಯುದಯವನ್ನು ಸಹಿಸದ ಶ್ರೀರಂಗಪಟ್ಟಣದ ಶ್ರೀರಂಗರಾಯನು ಗೌಡನ ಮೇಲೆರಗಿ ಕೊನೆಗೆ ಸೋತು ತನ್ನ ಆನೆ ಕುದುರೆಗಳನ್ನೆಲ್ಲಾ ಗೌಡನಿಗೇ ಒಪ್ಪಿಸಬೇಕಾಯಿತು.[87] ಹೀಗೆ ಯಲಹಂಕದ ನಾಡ ಪ್ರಭುಗಳಲ್ಲಿ ಇಮ್ಮಡಿ ಕೆಂಪೇಗೌಡನು ಬಹಳ ಪ್ರತಿಷ್ಠಿತನಾಗಿದ್ದು, ಮಾಂಡಲಿಕ ಮನ್ನೆಯರಲ್ಲಿ ಅಗ್ರಗಣ್ಯನೆನಿಸಿ, ವೀರಶೈವ ಮತಾವಲಂಬಿಯೂ ಹಾಗೂ ಮತಪ್ರವರ್ತಕನೂ ಆಗಿದ್ದುದರಿಂದ 'ಬಸವೇಶ'ನೆಂದು ಹೊಗಳಿಸಿಕೊಂಡಿದ್ದಾನೆ. ಇವನ ನಂತರದ ಅರಸರೆಲ್ಲಾ ತಾವು ''ಸದಾಶಿವಗೋತ್ರ''ದವರೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.[88] ವೀರಭದ್ರ ಹಾಗೂ ಭೈರವ ಇವು ಇವರ ಮನೆ ದೇವರುಗಳಾಗಿದ್ದುದರಿಂದ, ಇದರ ಕುರುಹಾಗಿ ''ವೀರಭದ್ರವರಹ'' ಹಾಗೂ ''ಭೈರವನಾಣ್ಯ''ಗಳನ್ನು ಚಲಾವಣೆಗೆ ತಂದಿದ್ದರು.[89] ಇವರ ಆಡಳಿತದ ಅವಧಿಯಲ್ಲಿ ಬೆಂಗಳೂರು, ಮಾಗಡಿ, ಶಿವಗಂಗೆ ಇನ್ನೂ ಮುಂತಾದೆಡೆಗಳಲ್ಲಿ ಅನೇಕ 'ವೀರಭದ್ರ ದೇವಾಲಯ'ಗಳು ನಿರ್ಮಾಣವಾಗಿವೆ.[90] ತಮ್ಮ ನಾಡಿನಾದ್ಯಂತ ಇವರು ಮುನ್ನೂರಕ್ಕೂ ಮಿಕ್ಕು ವೀರಶೈವಮಠಗಳಿಗೆ ಕಾರಣಕರ್ತರಾಗಿದ್ದು[91]ದಲ್ಲದೆ ಅವುಗಳಿಗೆ ಉದಾರವಾದ ದಾನ ಧರ್ಮಗಳನ್ನೂ ನೀಡಿದ್ದರು. ಇದೇ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ಅರವತ್ತು ನಾಲ್ಕು ವೀರಶೈವ ಮಠಗಳು ನಿರ್ಮಾಣವಾಗಿದ್ದುದಾಗಿ[92] ಅನೇಕ ವಿದ್ವಾಂಸರು ಗುರುತಿಸಿದ್ದಾರೆ.[93]

ಇಮ್ಮಡಿ ಕೆಂಪೇಗೌಡನು ಬೆಂಗಳೂರಿನಲ್ಲಿ ಆಡಳಿತಾರೂಢನಾಗಿದ್ದಾಗ ವಿಜಯನಗರದ ಮಂಡಲಾಧಿಪತಿಯಾಗಿ ವೆಂಕಟಪತಿರಾಯನು ಪೆನುಗೊಂಡೆಯಲ್ಲೂ, ಬಿಜಾಪುರದಲ್ಲಿ ಮೊಹಮದ್ ಆದಿಲ್‌ಷಾನೂ, ಶ್ರೀರಂಗಪಟ್ಟಣದಲ್ಲಿ ರಾಜ ಒಡೆಯರೂ ದೊರೆಗಳಾಗಿದ್ದರು. ಇದೇ ವೇಳೆಗೆ ಬಸವಾಪಟ್ಟಣ, ಇಕ್ಕೇರಿ, ನಾಗಮಂಗಲ, ಸುಮುಕಿಬೇಗೂರು, ಚೆನ್ನಪಟ್ಟಣ, ಸೋಲೂರು ಮೊದಲಾದ ಸ್ಥಳಗಳಲ್ಲಿದ್ದ ಪಾಳೆಯಗಾರರು ಪ್ರಬಲವಾಗಿ ಬೇರೂರಿಕೊಂಡು, ತಮ್ಮ ತಮ್ಮೊಳಗೆ ಅಂತಃ ಕಲಹ ನಿರತರಾಗಿದ್ದರು. ಇದೇ ಸಮಯವನ್ನು ಸಾಧಿಸಿದ ಬಿಜಾಪುರದ ಸುಲ್ತಾನನು ತನ್ನ ಸೇನಾಧಿಪತಿಗಳಾಗಿದ್ದ ರಣದುಲ್ಲಾಖಾನ್ ಮತ್ತು ಷಾಹಜಿಗಳೊಂದಿಗೆ ಕಳುಹಿಸಿದ್ದ ಅಪಾರ ಸೇನೆಯು, ಕ್ರಿ.ಶ. ೧೬೩೮ರಲ್ಲಿ ಬೆಂಗಳೂರು ಕೋಟೆಯನ್ನು ಮುತ್ತಿಗೆ ಹಾಕಿತು.[94] ನೆರೆಯ ಪಾಳೆಯಗಾರರ ಕುತಂತ್ರದಿಂದಾಗಿ ಸುಲ್ತಾನನ ಅಪಾರ ಸೇನೆಯ ಎದುರಿಗೆ ಇಮ್ಮಡಿ ಕೆಂಪೇಗೌಡನು ಖಾನನ ಕೈಸೆರೆಯಾದನು. ವಿಧಿಯಿಲ್ಲದೆ ತಾನು ಕಟ್ಟಿ ಬೆಳೆಯಿಸಿದ್ದ

ಬೆಂಗಳೂರಿನ ಆಯಕಟ್ಟಿನ ದುರ್ಗವನ್ನು ಬಿಟ್ಟುಕೊಟ್ಟು ಅಪಾರ ಪೊಗದಿಯನ್ನೂ ತೆತ್ತು, ಜೊತೆಗೆ ತನ್ನ ಮಗನೊಬ್ಬನನ್ನೂ ಕೈಸೆರೆಗಟ್ಟಿ, ತಾನು ಕುಣಿಗಲ್ಲು ಕಡೆಗೆ ಹೋದುದಾಗಿ 'ಕಂಠೀರವ ನರಸರಾಜ ವಿಜಯ'ದಲ್ಲಿ ಹೇಳಿದೆ.[95] ಮುಂದೆ ಮಾಗಡಿಯನ್ನು ತನ್ನ ಮುಖ್ಯ ಕಾರಾಸ್ಥಾನವನ್ನಾಗಿ ಮಾಡಿಕೊಂಡು ಅಲ್ಲಿ ಹದಿನಾಲ್ಕು ವರ್ಷಗಳ ಕಾಲ ರಾಜ್ಯವಾಳಿದನು. ಅಂದಿನಿಂದ ಈತನನ್ನು ಮಾಗಡಿಕೆಂಪೇಗೌಡನೆಂದು ಕರೆಯುವುದೇ ಹೆಚ್ಚು ರೂಢಿಗತವಾಯಿತು.[96] ಇಲ್ಲಿಗೆ ಯಲಹಂಕ ಪ್ರಭುಗಳ 'ನೂರಾ ಒಂದು' ವರ್ಷಗಳ ಬೆಂಗಳೂರಿನ ಆಡಳಿತವು ಕೊನೆಗೊಂಡಂತಾಯಿತು.

### ೨.೪. ಮರಾಠರ ಆಡಳಿತ ( ಕ್ರಿ.ಶ. ೧೬೩೮-೧೬೮೭ )

ಇಮ್ಮಡಿಕೆಂಪೇಗೌಡನ[97] ಯಶಸ್ಸನ್ನು ಸಹಿಸದ ಪಾಳೆಯಗಾರರ ಒಳಸಂಚಿನಿಂದಾಗಿ ಬಿಜಾಪುರದ ಆದಿಲ್‌ಷಾನು ಕ್ರಿ.ಶ. ೧೬೩೮ರಲ್ಲಿ ಬೆಂಗಳೂರು ಕೋಟೆಯನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡನು. ಆಗ ಸೇನಾಧಿಪತಿ ರಣದುಲ್ಲಾಖಾನನ ಜೊತೆಗೆ, ತನ್ನ ಮರಾಠ ಸೈನ್ಯದೊಂದಿಗೆ ಸಹಾಯಕನಾಗಿ ಬಂದಿದ್ದ ಷಾಹಜಿ ಬೋನ್ಸ್ಲೆಗೆ (ಬಿಜಾಪುರದ ಸುಲ್ತಾನನ ಎರಡನೆಯ ಸೇನಾಧಿಪತಿ) ಬೆಂಗಳೂರು ಪ್ರಾಂತ್ಯವು ಜಹಗೀರಾಗಿ ದೊರೆಯಿತು.[98] ಷಾಹಜಿಗೆ ಬಿಜಾಪುರದ ಸುಲ್ತಾನನು ಬೆಂಗಳೂರು ನಗರವನ್ನು ಬಳುವಳಿಯಾಗಿ ನೀಡುವಂತೆ ಅಪ್ಪಣೆ ಮಾಡಿದ್ದನೆಂದೂ, ಅದರಂತೆ ರಣದುಲ್ಲಾಖಾನನು ಬೆಂಗಳೂರು ಪ್ರಾಂತ್ಯವನ್ನು ಷಾಹಜಿಗೆ ಒಪ್ಪಿಸಿದ್ದಾಗಿ ಗೋವಿಂದವೈದ್ಯನ 'ಕಂಠೀರವ ನರಸರಾಜ ವಿಜಯ'ದಿಂದ ವ್ಯಕ್ತವಾಗಿದೆ.[99]

ಮುಂದೆ ಷಾಹಜಿಯು ಬೆಂಗಳೂರಿನಲ್ಲಿ ೨೭ ವರ್ಷಗಳ ಕಾಲ (ಕ್ರಿ.ಶ. ೧೬೩೮-೧೬೬೪) ಆಡಳಿತ ನಡೆಸಿದನು. ಮೊದಲಿಗೆ ಈ ಭಾಗದ ಅಶಾಂತಿಗೆ ಕಾರಣರಾಗಿದ್ದ ಸೊಕ್ಕಿನ ಪಾಳೆಯಗಾರರನ್ನೆಲ್ಲಾ ಸದೆಬಡಿದು ಶಾಂತಿ ನೆಲೆಸುವಂತೆ ಮಾಡಿದನು. ಬಹುತೇಕ ಬೆಂಗಳೂರಿನಲ್ಲೇ ವಾಸವಾಗಿರುತ್ತಿದ್ದ ಈತ ಕೆಲವು ಕಾಲ ಕೋಲಾರ ಹಾಗೂ ದೊಡ್ಡಬಳ್ಳಾಪುರಗಳಲ್ಲೂ ತನ್ನ ಸೇನಾ ತುಕಡಿಗಳೊಂದಿಗೆ ನಲೆಸಿರುತ್ತಿದ್ದುದುಂಟು.[100] ಈತನ ಕಾಲದಲ್ಲಿ ಬೆಂಗಳೂರಿನಲ್ಲಿ ಮರಾಠಿ ಭಾಷೆಯು ಪ್ರಾಬಲ್ಯಕ್ಕೆ ಬಂದಿತು. ಈತ ಸುಲ್ತಾನನೊಂದಿಗೆ ವ್ಯವಹರಿಸುತ್ತಿದ್ದ ಪತ್ರಗಳೆಲ್ಲಾ ಪರ್ಷಿಯನ್ ಭಾಷೆಯಲ್ಲೇ ಇರುತ್ತಿದ್ದವು.[101] ಆ ಕಾಲದ ಬೆಂಗಳೂರು ಪ್ರಾಂತ್ಯವನ್ನು ''ಬಿಜಾಪುರ ಕರ್ನಾಟಕ''ವೆಂದೇ ಗುರುತಿಸಲಾಗುತ್ತಿತ್ತು.[102]

ಷಾಹಜಿಯ ಕಾಲದ ಬೆಂಗಳೂರು ನಗರವನ್ನು ಕುರಿತು ಮರಾಠಿ ಕವಿ 'ಸದಾಶಿವಮಹದೇವ'ನು ತನ್ನ 'ಶಿವಭಾರತ'ದಲ್ಲಿ ಹೀಗೆ ಹೇಳಿದ್ದಾನೆ. -''ಈ ಬೆಂಗಳೂರು ಎಂಬ ನಗರವು ಭಾರಿ ಕೋಟೆಗಳಿಂದಲೂ ಆಳವಾದ ಕಂದಕಗಳಿಂದಲೂ ಕೂಡಿದ್ದು ಆಕರ್ಷಕವಾದ ನಗರವಾಗಿತ್ತು. ಕೋಟೆಯ ಸುತ್ತಲೂ ದೊಡ್ಡ ದೊಡ್ಡ ಕೆರೆಗಳಿದ್ದುವು. ಕೋಟೆಯ ಗೋಡೆಗಳು ಭದ್ರವಾಗಿದ್ದು ಪಟ್ಟಣದ ಒಳಭಾಗದಲ್ಲಿ ಅರಮನೆ ಇದ್ದಿತು. ಅರಮನೆಯ ಮೇಲೆ ಬಣ್ಣಬಣ್ಣದಬಾವುಟಗಳು ಹಾರಾಡುತ್ತಿದ್ದುವು. ಕೆಲವು ಮನೆಗಳ ಗೋಡೆಗಳ ಮೇಲೆ ಅಂದವಾದ ಚಿತ್ರಗಳನ್ನು ವಿವಿಧ ಬಣ್ಣಗಳಿಂದ ಬಿಡಿಸಲಾಗಿತ್ತು. ಈ ಬಣ್ಣದ ಚಿತ್ರಗಳು ಎಂಥವರನ್ನಾದರೂ ಆಕರ್ಷಿಸುತ್ತಿದ್ದುವು. ಬೆಲೆ ಬಾಳುವ ಪದಾರ್ಥಗಳನ್ನು ಮಾರಾಟ ಮಾಡುವ ಮಳಿಗೆಗಳು ಈ ನಗರದ ಅಂಗಡಿ ಬೀದಿಗಳಲ್ಲಿ ಕಾಣಿಸುತ್ತಿದ್ದುವು. ಇಲ್ಲಿ ಬೇಕಾದಷ್ಟು ನವಿಲುಗಳೂ, ಪಾರಿವಾಳಗಳೂ ಇವೆ. ಈ ನಗರದಲ್ಲಿರುವ ದೇವಾಲಯಗಳು ದೊಡ್ಡವಾಗಿ ಇದ್ದುವಲ್ಲದೆ ಅಂದವಾಗಿಯೂ ಇವೆ. ಈ ದೇವಾಲಯಗಳ ಕಂಭಗಳ ಮೇಲೆ ಸೊಗಸಾದ ವಿಗ್ರಹಗಳನ್ನು ಬಿಡಿಸಿರುವುದು ನಿಜವಾಗಿಯೂ ಆಕರ್ಷಕ ಹಾಗೂ ಮನೋಹರವಾಗಿದೆ.''[103]

ಷಾಹಜಿಯ ಮಗ ಶಿವಾಜಿಯು ವೀರನೂ ಪರಾಕ್ರಮಿಯೂ ಆಗಿದ್ದು ಬಿಜಾಪುರದ ಸುಲ್ತಾನನ ಬದ್ಧದ್ವೇಷಿಯಾಗಿದ್ದನು. ಇದೇ ಕಾರಣಕ್ಕಾಗಿ ಸುಲ್ತಾನನು ನೇರವಾಗಿ ಶಿವಾಜಿಯನ್ನು ಎದುರಿಸಲಾಗದೆ ಕುತಂತ್ರದಿಂದ ಷಾಹಜಿಯನ್ನು ಬಂಧಿಸಿ (ಕ್ರಿ.ಶ.೧೬೪೯) ಕೆಲಕಾಲ ಸೆರೆಯಲ್ಲಿರಿಸಿದ್ದನು. ಆಗ ಮೊಗಲ್ ಬಾದಶಹನಾಗಿದ್ದ ಶಹಜಹಾನನು ಮಧ್ಯಸ್ಥಿಕೆ ವಹಿಸಿ ಷಾಹಜಿಯನ್ನು ಬಂಧಮುಕ್ತನನ್ನಾಗಿ ಮಾಡಿಸಿದ್ದನು.[104] ಕೊನೆಗೆ ಷಾಹಜಿಯು ತನ್ನ ೭೦ನೆಯ ವಯಸ್ಸಿನಲ್ಲಿ (ಕ್ರಿ.ಶ. ೧೬೬೪) ಶಿವಮೊಗ್ಗಾದ ಬಸವಾಪಟ್ಟಣದ ಬಳಿ ಕುದುರೆಯ ಮೇಲೆ ಕುಳಿತು ಬೇಟೆಯಾಡುತ್ತಿದ್ದಾಗ ಬಿದ್ದು ಮೃತನಾದನು.[105]

ಷಾಹಜಿಯು ನಂತರ ಈತನ ಮಗ ವೆಂಕಾಜಿ (ಏಕೋಜಿ)ಯು ಕ್ರಿ.ಶ. ೧೬೬೪ರಿಂದ ಅಧಿಕಾರಕ್ಕೆ ಬಂದನು. ಆಗ ಶಿವಾಜಿಯು ಪೂನಾ ಜಹಗೀರಿನ ಅಧಿಪತಿಯಾಗಿದ್ದನು. ಕೆಲವು ಕಾಲ ವೆಂಕಾಜಿಯ ಪರವಾಗಿ ರಘುನಾಥ ನಾರಾಯಣ ಎಂಬ ಮೇಧಾವಿಯೊಬ್ಬ ಬೆಂಗಳೂರಿನ ಆಡಳಿತ ನಡೆಸಿದ್ದುಂಟು.[106] ಮುಂದೆ ಕ್ರಿ.ಶ. ೧೬೭೫ರ ವೇಳೆಗೆ ವೆಂಕಾಜಿಯು ತಂಜಾವೂರನ್ನು ವಶಪಡಿಸಿಕೊಂಡಮೇಲೆ ಅದನ್ನೆ ತನ್ನ ಮುಖ್ಯ ನೆಲೆಯನ್ನಾಗಿ ಮಾಡಿಕೊಂಡನು. ಆಗ ದೂರದ ಊರಿನಿಂದ ಬೆಂಗಳೂರನ್ನು ನಿಯಂತ್ರಿಸುವುದು ಕಷ್ಟವಾಗಿ, ಬೆಂಗಳೂರು ಪಟ್ಟಣವನ್ನು ಶ್ರೀರಂಗಪಟ್ಟಣದ ಚಿಕ್ಕದೇವರಾಜ ಒಡೆಯರಿಗೆ ಮೂರು ಲಕ್ಷ ರೂಗಳಿಗೆ ಮಾರಾಟ ಮಾಡುವ ಹವಣಿಕೆಯಲ್ಲಿದ್ದನು. ಇದೇ ಸಂದರ್ಭವನ್ನು ಹೊಂಚುಹಾಕಿದ್ದ ಮೊಗಲರ ಔರಂಗಜೇಬನ ದಂಡನಾಯಕ ಖಾಸಿಂಖಾನನು ಕ್ರಿ.ಶ. ೧೬೮೭ರಲ್ಲಿ ಬೆಂಗಳೂರು ಪಟ್ಟಣವನ್ನು ಅನಾಯಾಸವಾಗಿ ಸೆರೆಹಿಡಿದನು.[107] ಆಗ ಮೊಗಲ್ ದೊರೆಯು ಈ ಪಟ್ಟಣ ಪ್ರಾಂತ್ಯವನ್ನು ಚಿಕ್ಕದೇವರಾಜ ಒಡೆಯರಿಗೆ ಭೋಗ್ಯವಾಗಿ (ಇಜಾರಾ) ನೀಡಲಾಗಿ,[108] ಮುಂದೆ ಬೆಂಗಳೂರು, ಮೈಸೂರು ಒಡೆಯರ ಒಡೆತನದಲ್ಲಿ ಉಳಿಯುವಂತಾಯಿತು.

'ವೆಂಕಾಜಿಯ ಕಾಲದಲ್ಲೂ (ಕ್ರಿ.ಶ. ೧೬೬೪-೧೬೮೭) ಬೆಂಗಳೂರಿನಲ್ಲಿ ಕೆಂಪೇಗೌಡರ ಕಾಲದ ಕೆರೆ ಕಾಲುವೆಗಳೂ, ಗುಡಿ-ಗೋಪುರಗಳೂ, ಕೋಟೆ-ಕೊತ್ತಲುಗಳೂ ಚೆನ್ನಾಗಿಯೇ ಇದ್ದವು. ಕಲ್ಯಾಣ ಬಸವೇಶ್ವರನ (ಕೋಟೆವೆಂಕಟರಮಣಸ್ವಾಮಿ) ದೇಗುಲ, ಗವಿಗಂಗಾಧರೇಶ್ವರನ ದೇಗುಲ ಹಾಗೂ ಅಲಸೂರಿನ ಸೋಮೇಶ್ವರ ದೇಗುಲಗಳು ಉತ್ತಮ ಸ್ಥಿತಿಯಲ್ಲೇ ಇದ್ದವು. ಕಾರಂಜಿ ಕೆರೆ, ಧರ್ಮಾಂಬುಧಿ ಕೆರೆ ಹಾಗೂ ಸಂಪಂಗಿ ಕೆರೆಗಳಿಂದ ಕೋಟೆಯ ಕಂದಕಕ್ಕೆ ನೀರು ಹಾಯಿಸಲಾಗುತ್ತಿತ್ತು. ಕೋಟೆಯ ಸುತ್ತ ಮುಳ್ಳಿನಪೊದೆ ಹಾಗೂ ಸೀಗೆಬೇಲಿಗಳಿದ್ದು ಮಣ್ಣಿನಕೋಟೆಗೆ ಒಂಬತ್ತು ಬಾಗಿಲುಗಳಿದ್ದವು.'[109] ಹಿಂದೆ ಈಗಿನ ಚಿಕ್ಕಪೇಟೆಯ ವೆಂಕುಸಾಹೂಜಿ ಗಲ್ಲಿಯಲ್ಲಿ ಷಾಹಜಿಯೆ ನಿರ್ಮಿಸಿದ್ದ 'ಗೌರಿವಿಲಾಸ'ವೆಂಬ ಅರಮನೆಯಿತ್ತು. ವೆಂಕಾಜಿ ಇದೇ ಅರಮನೆಯಲ್ಲೆವಾಸಿಸುತ್ತಿದ್ದನು.[110] ಮಲ್ಲೇಶ್ವರದ ಕಾಡುಮಲ್ಲೇಶ್ವರನ ದೇಗುಲವನ್ನು ವೆಂಕಾಜಿಯೇ ನಿರ್ಮಿಸಿದ್ದೆಂಬ ಪ್ರತೀತಿ ಇದೆ. ಈ ದೇಗುಲದ ನಿತ್ಯಪೂಜೆಗಾಗಿ ಈತ ದತ್ತಿಬಿಟ್ಟ ವಿಚಾರ, ದೇವಾಲಯದ ಬಳಿಯ ಬಂಡೆಗಲ್ಲಿನ ಶಾಸನವೊಂದರಿಂದ ತಿಳಿದು ಬರುತ್ತದೆ.[111] ಈಗಿನ ಗವಿಪುರದ ಗವಿಗಂಗಾಧರೇಶ್ವರನ ಗುಡಿಗೆ ಮುಂಭಾಗದಲ್ಲಿರುವ "ಗೋಸಾಯಿಮಠ" ವೆಂಕಾಜಿಯ ಕಾಲದಲ್ಲೆ ನಿರ್ಮಾಣವಾದುದೆಂದು ಹೇಳುವುದುಂಟು.[112] ಹೀಗೆ ಮರಾಠರ ಪ್ರಾಬಲ್ಯದಲ್ಲೂ ಕೂಡ ಬೆಂಗಳೂರು ಪಟ್ಟಣ, ಗೌಡಮನೆತನದವರ ಬಹುತೇಕ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದುದು ಗಮನಾರ್ಹ ಸಂಗತಿಯಾಗಿದೆ.

**೨.೫. ಮೈಸೂರಿನ ದೊರೆಗಳ ಆಡಳಿತ**

ಬೆಂಗಳೂರು ಪಟ್ಟಣವು ೧೬೮೭ರಿಂದ ಚಿಕ್ಕದೇವರಾಜ ಒಡೆಯರ ಆಡಳಿತಕ್ಕೆ ಒಳಪಟ್ಟಿತು. ಮೈಸೂರಿನ ಒಡೆಯರ ಸಂತತಿಯಲ್ಲಿ ಹದಿನಾಲ್ಕನೆಯವರಾಗಿದ್ದ ಇವರು ದಕ್ಷ, ಚಾಣಾಕ್ಷ ಹಾಗೂ ಸಮರ್ಥ ಆಡಳಿತ ಚತುರರಾಗಿದ್ದರು. ತಮ್ಮ ಬೊಕ್ಕಸದ ತುಂಬಾ ಐಶ್ವರ್ಯವನ್ನು ಸಂಗ್ರಹಿಸಿದ್ದರಾದ ಕಾರಣ ಇವರನ್ನು 'ನವಕೋಟಿ ನಾರಾಯಣ' ಎಂದೇ ಕರೆಯಲಾಗುತ್ತಿತ್ತು.[113] ಬೆಂಗಳೂರು ಇವರ ವಶವಾದ ಮೇಲೆ ಇಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಪೇಟೆಯೊಳಗೆ ಅಂಗಡಿ ಬೀದಿಗಳನ್ನು ನಿರ್ಮಿಸಿ ವ್ಯಾಪಾರಕ್ಕೆ ಸೂಕ್ತ ಪ್ರೋತ್ಸಾಹ ನೀಡಿದ್ದರು. ಹಿರಿಯ ಕೆಂಪೇಗೌಡನು ನಿರ್ಮಿಸಿದ್ದ ಮಣ್ಣಿನ ಕೋಟೆಯೊಳಗೆ ದಕ್ಷಿಣದ ಭಾಗದಲ್ಲಿ ಚಿಕ್ಕಮಣ್ಣಿನ ಕೋಟೆಯೊಂದನ್ನು ಕಟ್ಟಿಸಿದ್ದರು. ಇದರೊಳಗೇ ಅಂದಿನ ಸರ್ಕಾರಿ ಕಛೇರಿಗಳಿದ್ದವು.[114] ಮಹಾರಾಜರ ಅರಮನೆ, ಮಂತ್ರಿ ಮಹೋದಯರ ನಿವಾಸ ಹಾಗೂ ರಕ್ಷಣಾ ಸಿಬ್ಬಂದಿಯವರು ಇಲ್ಲಿದ್ದುದಾಗಿ ತಿಳಿದುಬರುತ್ತದೆ.[115]

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಬೆಂಗಳೂರಿನ ಕೋಟೆಗೆ ದಕ್ಷಿಣ ದಿಗ್ಭಾಗಕ್ಕಿದ್ದು ಶಿಥಿಲಾವಸ್ಥೆಯಲ್ಲಿದ್ದ ಕಲ್ಯಾಣಬಸವೇಶ್ವರನ ದೇಗುಲವನ್ನು ವೆಂಕಟರಮಣ ಸ್ವಾಮಿ ದೇಗುಲವನ್ನಾಗಿ ಪರಿವರ್ತಿಸಲಾಯಿತು. ಆಗ ಬೆಂಗಳೂರಿನ ಪಾರುಪತ್ತೆಗಾರನಾಗಿದ್ದ ಮಾಲಾರಂಗಯ್ಯ (೨ನೆಯ ಪಾರುಪತ್ತೆಗಾರ)ನು ಬುದ್ಧಿವಂತಿಕೆಯಿಂದ ಕೋಟೆಯೊಳಗೆ ಪಾಳುಬಿದ್ದಿದ್ದ ಬಸವೇಶ್ವರನ ಗುಡಿ

ಯೊಳಗೆ ವೆಂಕಟರಮಣಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪಿಸಿ, ಇಲ್ಲಿದ್ದ ಬಸವೇಶ್ವರನ ವಿಗ್ರಹವನ್ನು ಮಾಮೂಲುಪೇಟೆಗೆ ವರ್ಗಾಯಿಸಿದ್ದಾಗಿಯೂ, ಈ ಘಟನೆಯು ಕ್ರಿ.ಶ. ೧೬೯೦ರಲ್ಲಿ ನಡೆದಿರುವುದಾಗಿ ಹೇಳುವುದುಂಟು.[116] ಮುಂದೆ ಕಂಠೀರವ ನರಸರಾಜ ಒಡೆಯರು ಈ ದೇಗುಲಕ್ಕೆ ಬೆಂಗಳೂರಿಗೆ ಸಮೀಪದ ಬೇಗೂರು ಹೋಬಳಿ ಕೊತ್ತನೂರು ಗ್ರಾಮವನ್ನೇ ದತ್ತಿಯಾಗಿ ಬಿಟ್ಟ ವಿಚಾರಗಳು ತಿಳಿದುಬರುತ್ತವೆ.[117]

ಚಿಕ್ಕದೇವರಾಜ ಒಡೆಯರ ಕಾಲದಿಂದ ಮುಂದೆ ಹೈದರಾಲಿಯ ಕಾಲದವರೆಗೆ (ಕ್ರಿ.ಶ. ೧೬೮೭-೧೭೬೧) ಒಟ್ಟು ಇಪ್ಪತ್ತಾರು ಮಂದಿ ಪಾರುಪತ್ತೆಗಾರರು ಬೆಂಗಳೂರಿನ ಆಡಳಿತ ನಡೆಸಿದರು.[118] ಮೊದಲು ಆಡಳಿತದ ಅನುಕೂಲಕ್ಕಾಗಿ ಬೆಂಗಳೂರು ಪ್ರಾಂತ್ಯವನ್ನು ಹನ್ನೆರಡು ಹೋಬಳಿಗಳಾಗಿ ವಿಂಗಡಿಸಲಾಗಿತ್ತು.[119] ಮೊಗಲರ ಆಡಳಿತ ಪದ್ಧತಿಗನುಸಾರವಾಗಿ ಬೆಂಗಳೂರಿನ ಆಡಳಿತವನ್ನು ಹದಿನೆಂಟು ಇಲಾಖೆ[120]ಗಳನ್ನಾಗಿ ವಿಭಜಿಸಲಾಗಿತ್ತು ಇದೇ ಪದ್ಧತಿಯೇ ಮುಂದಿನ ಅಠಾರ ಕಛೇರಿಗೆ ನಾಂದಿಯಾಯಿತು.[121] ಇವರು ಹಿಂದೆ ಪಾಳೆಯಗಾರರ ಕಾಲದಲ್ಲಿದ್ದ ಮುದ್ರೆಯುಂಗುರಗಳನ್ನು ರದ್ದುಪಡಿಸಿ, ತಾವು ಹೊಸದಾಗಿ ''ದೇ'' ಎಂಬ ಅಂಕಿತವುಳ್ಳ ಮುದ್ರೆಯುಂಗುರಗಳನ್ನು ಜಾರಿಗೆ ತಂದರು. ಪ್ರತಿಯೊಂದು ಪೇಟೆಯ ಭಾಗಗಳಿಗೂ ಪೇಟೆ ಶೆಟ್ಟಿ, ಯಜಮಾನ ಹಾಗೂ ದೇಶದ ಶಾನುಭಾಗರುಗಳುಳ್ಳ ಆಡಳಿತ ಮಂಡಲಿಯನ್ನು ಜಾರಿಗೊಳಿಸಿದ್ದರು.[122] ೧೭ನೆಯ ಶತಮಾನದ ಅಂತ್ಯದ ವೇಳೆಗೆ ಬೆಂಗಳೂರಿನ ಪೇಟೆಗಳಲ್ಲೂ ಈ ಪದ್ಧತಿ ಜಾರಿಯಲ್ಲಿತ್ತು.

ಕ್ರಿ.ಶ. ೧೭೬೧ರಲ್ಲಿ ಬೆಂಗಳೂರು ಪ್ರಾಂತ್ಯವನ್ನು ಇಮ್ಮಡಿ ಕೃಷ್ಣರಾಜಒಡೆಯರು ಹೈದರಾಲಿಖಾನನಿಗೆ ಜಹಗೀರಾಗಿ ನೀಡಿದ್ದರು.[123] ಅಲ್ಲಿಂದೀಚೆಗೆ ಬೆಂಗಳೂರಿನ ಇತಿಹಾಸವೇ ಸಂಪೂರ್ಣವಾಗಿ ಬದಲಾಯಿತೆನ್ನಬಹುದು. ಹೈದರನ ಕಾಲದಲ್ಲಿ ಬೆಂಗಳೂರಿನ ಆಡಳಿತವು 'ಪಾರುಪತ್ತೆಗಾರ'ರಿಗೆ ಬದಲಾಗಿ 'ಖಿಲ್ಲೇದಾರ'ರ ಆಡಳಿತಕ್ಕೆ ಒಳಪಟ್ಟಿತ್ತು. ಖಿಲ್ಲೇದಾರ್ ಇಬ್ರಾಹಿಂ ಖಾನ್ ಎಂಬುವನು, ಪಟ್ಟಣದ ಕೋಟೆಯ ದಕ್ಷಿಣ ಒಳಾಂಗಣದಲ್ಲಿದ್ದು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಿರ್ಮಾಣವಾಗಿದ್ದ ಮಣ್ಣಿನ ಕೋಟೆಯನ್ನು ಕೆಡವಿಸಿ, ಹೊಸದಾಗಿ ತಾನೊಂದು ವಿನೂತನ ಕಲ್ಲಿನಕೋಟೆ[124] ಯನ್ನು ಕ್ರಿ.ಶ. ೧೭೬೨ರಲ್ಲಿ ನಿರ್ಮಿಸಿದ್ದನು.[125] ಇದರ ಉತ್ತರದ ಮಹಾದ್ವಾರಕ್ಕೆ 'ದಿಲ್ಲಿಗೇಟ್' ಎಂತಲೂ, ದಕ್ಷಿಣದ ಮಹಾದ್ವಾರಕ್ಕೆ 'ಮೈಸೂರುಗೇಟ್' ಎಂತಲೂ ಹೆಸರಿಸಿದ್ದನು. ಈತನ ಕಾಲದಲ್ಲೇ (ಕ್ರಿ.ಶ. ೧೭೮೧) ಕೋಟೆಯ ವೆಂಕಟ ರಮಣಸ್ವಾಮಿ ದೇಗುಲದ ಹಿಂಭಾಗಕ್ಕೆ ಬೃಹತ್ ಅರಮನೆಯ ನಿರ್ಮಾಣ ಕಾರ್ಯ ಪ್ರಾರಂಭವಾಗಿತ್ತು. ಆದರೆ ಕ್ರಿ.ಶ. ೧೭೮೨ರಲ್ಲಿ ಹೈದರನು ಬೆನ್ನುಪಣಿರೋಗದಿಂದ ಮೃತನಾದನು.[126] 'ಈತನ ೨೨ ವರ್ಷಗಳ ಆಡಳಿತಾವಧಿಯಲ್ಲಿ ಬೆಂಗಳೂರಿಗೆ ಎಲ್ಲಿಲ್ಲದ ಪ್ರಾಶಸ್ತ್ಯ ಬಂದಿತ್ತು. ಶ್ರೀರಂಗಪಟ್ಟಣವೇ ಈತನ ಮುಖ್ಯ ಆಡಳಿತ ಕೇಂದ್ರವಾಗಿದ್ದಾಗ್ಯೂ, ಬೆಂಗಳೂರು ಈತನ ಪ್ರಮುಖ ಸೇನಾ ನೆಲೆಯಾಗಿತ್ತೆಂದು' ಎಲ್.ಬಿ. ಬೌರಿಂಗ್ ಸೂಚಿಸಿದ್ದಾರೆ.[127]

ಅನಂತರ ಕ್ರಿ.ಶ. ೧೭೮೩ರ ಜನವರಿ ೨ ರಿಂದ ಅಧಿಕಾರಕ್ಕೆ ಬಂದ ಟಿಪ್ಪುಸುಲ್ತಾನನು ತನ್ನ ತಂದೆಯು ಅಪೂರ್ಣಗೊಳಿಸಿದ್ದ ಬೆಂಗಳೂರು ಅರಮನೆಯನ್ನು ಕ್ರಿ.ಶ. ೧೭೯೧ರ ವೇಳೆಗೆ ಪೂರ್ಣಗೊಳಿಸಿದನು.[128] ಈತನ ಕಾಲದಲ್ಲಿ ಮೈಸೂರಿನ ಅರಸರಿಗೂ ಹಿಂದಿನಿಂದ ನಡೆದು ಬಂದಿದ್ದ 'ದೇವಾದಾಯ',[129] 'ಬ್ರಹ್ಮಾದಾಯ'[130]ಗಳನ್ನು ಸರ್ಕಾರವು ಮುಟ್ಟುಗೋಲು ಹಾಕಿಕೊಂಡಿತು.[131] ತನ್ನ ಆಡಳಿತದಲ್ಲಿ ಹಣಕಾಸಿನ ಕೊರತೆಯುಂಟಾದಾಗಲೆಲ್ಲಾ ದೇವಾಲಯಗಳ ಇಡುಗಂಟನ್ನು ಬಳಸಿಕೊಂಡಿದ್ದರ ಫಲವಾಗಿ ಅನೇಕ ದೇವಾಲಯಗಳು, ಮಠ-ಮಾನ್ಯಗಳು ಅವಸಾನದ ಅಂಚಿಗೆ ತಲುಪಿದವು. ಈತನ ಕಾಲದಲ್ಲಿ ಗುರುತಿಸಬೇಕಾದ ಮತ್ತೊಂದು ಸಂಗತಿ ಏನೆಂದರೆ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಆಡಳಿತ ವ್ಯವಹಾರಗಳೆಲ್ಲಾ ಕನ್ನಡದಲ್ಲೇ ನಡೆಯುತ್ತಿದ್ದವು. ಹುಜೂರಿಗೆ ಸಂಬಂಧಿಸಿದ ಪತ್ರಗಳು ಮಾತ್ರ ಪರ್ಷಿಯನ್ ಭಾಷೆಯಲ್ಲೇ ಇರುತ್ತಿದ್ದವು.[132]

ಈ ಮಧ್ಯೆ ಕ್ರಿ.ಶ. ೧೭೯೧ರಲ್ಲಿ ಲಾರ್ಡ್ ಕಾರನ್‌ವಾಲೀಸನ ಆಂಗ್ಲರ ಸೇನೆಯು ಬೆಂಗಳೂರಿನ ಕೋಟೆಯನ್ನು ಮುತ್ತಿಗೆ ಹಾಕಿತ್ತು.[133] ಆಗ ಬೆಂಗಳೂರು ಪಟ್ಟಣವು ಆಂಗ್ಲರ ಕೈವಶವಾದಾಗ ಇಲ್ಲಿನ ನೈಜ ಚಿತ್ರಣವನ್ನು ಲಾರ್ಡ್ ವ್ಯಾಲೆಂಷಿಯಾ ಎಂಬ ಆಂಗ್ಲ

ಬರಹಗಾರನು ಹೀಗೆ ಗುರುತಿಸಿದ್ದಾನೆ. "ಬೆಂಗಳೂರು ಪೇಟೆ ಸಾಕಷ್ಟು ವಿಶಾಲವಾಗಿತ್ತು. ಜನರು ಕಿಕ್ಕಿರಿದು ತುಂಬಿರುತ್ತಿದ್ದರು. ಕೋಟೆಯ ಬಾಗಿಲುಗಳು ಸದಾ ಕಾವಲುಗಾರರಿಂದ ತುಂಬಿರುತ್ತಿದ್ದವು. ನಾನು ಕಂಡ ಹಾಗೆ ಟಿಪ್ಪುಸುಲ್ತಾನನ ಕೋಟೆಯ ಗೋಡೆಗಳೆಲ್ಲಾ ಬಿದ್ದು ಹೋಗಿದ್ದವು. ಲಾರ್ಡ್‌ಕಾರನ್‌ವಾಲೀಸನು ಕೋಟೆಯನ್ನು ವಶಪಡಿಸಿಕೊಂಡ ಮೇಲೆ ಕೋಟೆಯ ನಾಶಕ್ಕೆ ಅವಕಾಶ ಕೊಟ್ಟಿರಲಿಲ್ಲ. ಆದರೆ ಮುಂದೆ ಈ ಕೋಟೆಯು ಆಂಗ್ಲರ ರಕ್ಷಣಾ ಸ್ಥಾನವಾದೀತೆಂದು ಭಾವಿಸಿ, ತಾನೇ ತನ್ನ ಸೈನಿಕರಿಂದ ಕೋಟೆಯ ಗೋಡೆ ಗಳನ್ನೆಲ್ಲಾ ಕೆಡವಿಸಿದ್ದನು.ಆದರೆ ಮುಂದೆ ಅಧಿಕಾರಕ್ಕೆ ಬಂದ ದಿವಾನ್ ಪೂರ್ಣಯ್ಯನು ಈ ಕೋಟೆಯ ದುರಸ್ತಿ ಮಾಡಿಸಿದನು."[134]

ಕೊನೆಗೆ ೧೭೯೯ರ ಮೇ ೪ ರಂದು ನಡೆದ ಶ್ರೀರಂಗಪಟ್ಟಣದ ನಿರ್ಣಾಯಕ ಯುದ್ಧದಲ್ಲಿ 'ಮೈಸೂರಿನ ಹುಲಿ' ಎಂದೇ ಖ್ಯಾತನಾಗಿದ್ದ ಟಿಪ್ಪುಸುಲ್ತಾನನು ಮರಣ ಹೊಂದಿದನು.[135] ಮೈಸೂರು ಪ್ರಾಂತ್ಯದಲ್ಲಿ ಹೈದರನೊಂದಿಗೆ ಆರಂಭವಾಗಿದ್ದ ೪೦ ವರ್ಷಗಳ ಮುಸಲ್ಮಾನರ ಆಳ್ವಿಕೆಯು ಟಿಪ್ಪುವಿನ ಅಂತ್ಯದೊಂದಿಗೆ ಮುಕ್ತಾಯವಾಯಿತು. ಫ್ರಾನ್ಸಿಸ್‌ಬುಖಾನನ್ ಎಂಬ ಆಂಗ್ಲ ಪ್ರವಾಸಿಯ ಬರಹದ ಪ್ರಕಾರ ಈತ ದಿನಾಂಕ ೧೦.೫.೧೮೦೦ರಲ್ಲಿ ಬೆಂಗಳೂರಿಗೆ ಬಂದಾಗ, "ಕೋಟೆಯ ಸುತ್ತ ಕಂದಕಗಳಿದ್ದವು. ಹೊರ ಪಕ್ಕದಲ್ಲಿ ವಿಶಾಲವಾದ ಸೀಗೆ ಬೇಲಿಗಳಿದ್ದವು. ಕೋಟೆಯ ಒಳಗೆ ಅಲ್ಲಲ್ಲಿ ಮದ್ದುಗುಂಡಿನ ಭಂಡಾರಗಳಿದ್ದವು. ಪೇಟೆಯ ಬೀದಿಗಳಲ್ಲಿ ಹಾಳು ಸುರಿಯುತ್ತಿತ್ತು. ಯುದ್ಧದ ಭೀತಿಯಿಂದ ಪಟ್ಟಣವನ್ನು ತೊರೆದು ಓಡಿ ಹೋಗಿದ್ದ ವರ್ತಕ ಜನರೆಲ್ಲಾ ಮತ್ತೆ ಬರಲಾರಂಭಿಸಿದ್ದರು. ಕೋಟೆಯ ಆಗ್ನೇಯ ಭಾಗಕ್ಕೆ ಬಹಳಷ್ಟು ಗುಡಿಸಲುಗಳಿದ್ದವು. ಅಲ್ಲಿದ್ದವರು ಸುಲ್ತಾನನ ಅರಮನೆಯ ಊಳಿಗದವರೇ ಆಗಿದ್ದರು."[136]

ಟಿಪ್ಪುವಿನ ಮರಣದ ನಂತರ ೧೭೯೯ರ ಜೂನ್ ೩೦ರಂದು ಮೈಸೂರಿನ ನಜರಾಬಾದ್‌ಕೋಟೆಯ ಅರಮನೆಯಲ್ಲಿ ಮುಮ್ಮಡಿಕೃಷ್ಣರಾಜ ಒಡೆಯರಿಗೆ ಪಟ್ಟಾಭಿಷೇಕ ವಾಯಿತು.[137] ಇದುವರೆಗೆ ಸ್ವತಂತ್ರ ಸಂಸ್ಥಾನವಾಗಿದ್ದ ಮೈಸೂರು ಸಂಸ್ಥಾನವು, ೧೭೯೯ರ ನಂತರ ಆಂಗ್ಲರ ಅಧೀನಕ್ಕೆ ಒಳಪಟ್ಟ ಆಶ್ರಿತ ಸಂಸ್ಥಾನವಾಗಿ ಮಾರ್ಪಾಟಾ ಯಿತು. ಆಗ ಸಂಸ್ಥಾನದ ಪ್ರಥಮ ದಿವಾನ ಪದವಿಯನ್ನು ಅಲಂಕರಿಸಿದವರೇ ದಿವಾನ್ ಪೂರ್ಣಯ್ಯನವರು. ಇವರು ಇದುವರೆಗೆ ಸಾಕಷ್ಟು ಶಿಥಿಲವಾಗಿದ್ದ ಬೆಂಗಳೂರು ಪಟ್ಟಣದ ಪುನರ್ನಿರ್ಮಾಣಕ್ಕೆ ಬಹುವಾಗಿ ಶ್ರಮಿಸಿದ್ದರು. ತಮ್ಮ ಅಧಿಕಾರದ ಅವಧಿಯಲ್ಲಿ ಇವರು ಬೆಂಗಳೂರಿನ ಅನೇಕ ದೇವಾಲಯಗಳ ಪುನರ್ನಿರ್ಮಾಣದ ಜೊತೆಗೆ,[138] ಹಲವಾರು ವೀರಶೈವ ಮಠ-ಮಾನ್ಯಗಳಿಗೆ ದಾನ ದತ್ತಿಗಳನ್ನು ಕೊಡಿಸಿದ್ದ ದಾಖಲೆಗಳಿವೆ.[139] ಇವರ ಕಾಲದಲ್ಲೆ ಶ್ರೀರಂಗಪಟ್ಟಣದಲ್ಲಿ ನೆಲೆ ನಿಂತಿದ್ದ ಆಂಗ್ಲರ ಫೌಜು ೧೮೦೭ರಲ್ಲಿ ಬೆಂಗಳೂರಿಗೆ ವರ್ಗಾಯಿಸಲ್ಪಟ್ಟು ಮುಂದೆ ಈ ನಗರವು ಆಂಗ್ಲರ ಮೂಲ ಸೇನಾ ನೆಲೆಯಾಗಿ (British Contonment) ರೂಪುಗೊಂಡಿತು.[140] ೧೮೦೯ರ ವೇಳೆಗೆ ಮೈಸೂರಿನಲ್ಲೇ ಕೇಂದ್ರೀಕೃತವಾಗಿದ್ದ ಅನೇಕ ಸರಕಾರಿ ಕಛೇರಿಗಳು ಬೆಂಗಳೂರಿಗೆ ವರ್ಗಾಯಿಸಲ್ಪಟ್ಟವು. ಹನ್ನೆರಡು ವರ್ಷಗಳ ಕಾಲ ದಿವಾನ್ ಪದವಿಯಲ್ಲಿದ್ದ ಪೂರ್ಣಯ್ಯನವರು ೧೮೧೧ರಲ್ಲಿ ನಿವೃತ್ತರಾದರು.[141] ಇವರ ನಂತರ ೧೮೩೧ರ ವರೆಗೆ ಏಳು ಜನ ದಿವಾನರುಗಳು ಸಂಸ್ಥಾನದ ಅಧಿಕಾರಿಗಳಾಗಿ ಕಾರ್ಯನಿರ್ವಹಿಸಿದ್ದಾರೆ.

೧೮೧೧ರಿಂದ ಅಧಿಕೃತವಾಗಿ ಆಡಳಿತವನ್ನು ವಹಿಸಿಕೊಂಡ ಮುಮ್ಮಡಿಕೃಷ್ಣರಾಜ ಒಡೆಯರು ೧೮೩೧ರ ವರೆಗೂ ಆಡಳಿತಾರೂಢರಾಗಿದ್ದರು. ೧೮೧೧ರಲ್ಲಿ ಬೆಂಗಳೂರಿಗೆ ಭೇಟಿ ನೀಡಿದ್ದ ಮಹಾರಾಜರಿಗೆ ಅದ್ದೂರಿ ಸ್ವಾಗತ ನೀಡಲಾಗಿತ್ತು.[142] ನಗರದ ಸಮಗ್ರ ಅಭಿವೃದ್ಧಿಗಾಗಿ ಗಮನ ಹರಿಸಿದ್ದ ಪ್ರಯುಕ್ತ ಇದುವರೆಗೆ ಕೇವಲ ತಾಲ್ಲೂಕು ಕೇಂದ್ರವಾಗಿದ್ದ ಬೆಂಗಳೂರು, ಈಗ ಫೌಜುದಾರಿ ಕೇಂದ್ರವಾಗಿ ರೂಪುಗೊಂಡಿತ್ತು. ಈ ಸಂದರ್ಭದಲ್ಲಿ ದೂರದ ಬಳ್ಳಾರಿ, ರಾಯಚೂರು, ಧಾರವಾಡ, ಹುಬ್ಬಳ್ಳಿ, ನರಗುಂದ ಹಾಗೂ ಹೊರಗಿನ ಮುಂಬೈ ಮತ್ತು ಹೈದರಾಬಾದ್ ಪ್ರಾಂತ್ಯಗಳಿಂದಲೂ ಭಾರೀ ವರ್ತಕ ಮಂಡಳಿಯವರು ಬೆಂಗಳೂರಿಗೆ ಬರುವಂತಾಯಿತು.[143] ಇವರ ಆಡಳಿತಾವಧಿಯಲ್ಲಿ ನಗರದ ಅನೇಕ ವೀರಶೈವ ಮಠಗಳಿಗೆ[144] ಹಾಗೂ ದೇವಾಲಯಗಳಿಗೆ [145] ದಾನದತ್ತಿಗಳನ್ನು ನೀಡಿದುದಕ್ಕೆ ಸಾಕಷ್ಟು ಆಧಾರಗಳಿವೆ.

೧೮೩೧ರಲ್ಲಿ ಸಂಸ್ಥಾನದಲ್ಲಿ ಉಂಟಾಗಿದ್ದ ಆಂತರಿಕ ಗಲಭೆಗಳಿಗೆ ಮಹಾರಾಜ ಸರ್ಕಾರವೇ ಕಾರಣವೆಂದು ದೂಷಿಸಿದ ಆಂಗ್ಲ ಸರ್ಕಾರವು, ಮುಮ್ಮಡಿಕೃಷ್ಣರಾಜ ಒಡೆಯರ ಅಧಿಕಾರವನ್ನು ಮುಟ್ಟುಗೋಲು ಹಾಕಿಕೊಂಡಿತು.[146] ಮುಂದೆ ೧೮೩೧ರಿಂದ ೧೮೮೧ರ ವರೆಗೆ ೫೦ ವರ್ಷಗಳ ಕಾಲ ಕಮಿಷನರುಗಳ ಆಡಳಿತ ಜಾರಿಯಲ್ಲಿತ್ತು. ಈ ಅವಧಿಯಲ್ಲಿ ಬಂದುಹೋದ ಹನ್ನೆರಡು ಜನ ಕಮಿಷನರುಗಳ ಆಡಳಿತದಲ್ಲಿ ಬೆಂಗಳೂರಿನ ಬೆಳವಣಿಗೆಗೆ ವಿಶೇಷ ಆದ್ಯತೆ ನೀಡಲಾಗಿ, ನಗರದ ನವ ನಿರ್ಮಾಣವು ರೂಪುಗೊಂಡಿತು.[147]

೧೮೫೨ರ ವೇಳೆಗೆ ಬೆಂಗಳೂರಿನಲ್ಲಿ ಪ್ರತ್ಯೇಕವಾದ ಮುಜರಾಯಿ ಇಲಾಖಾ ಕಛೇರಿಯನ್ನು ತೆರೆಯಲಾಗಿತ್ತು. ೧೮೫೮ರಲ್ಲಿ ಆಂಗ್ಲ ಸರ್ಕಾರದ ಪ್ರಥಮ ಪ್ರೌಢಶಾಲೆಯನ್ನು ಪ್ರಾರಂಭಿಸಲಾಗಿತ್ತು. ಇಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಬೋಧಿಸಲಾಗುತ್ತಿತ್ತು. ೧೮೫೯ರಲ್ಲಿ ಮೊಟ್ಟಮೊದಲ ರೈಲುಮಾರ್ಗವು ಬೆಂಗಳೂರು ಮತ್ತು ಜೋಲಾರಪೇಟೆ ಮಾರ್ಗಗಳ ನಡುವೆ ಪ್ರಾರಂಭವಾಗಿತ್ತು. ೧೮೬೧ರಲ್ಲಿ ಬೆಂಗಳೂರು ಷಹರು (ನಗರ) ಹಾಗೂ ಲಷ್ಕರು(ದಂಡು) ಪ್ರದೇಶಗಳಲ್ಲಿ ಪ್ರತ್ಯೇಕವಾದ ಮುನಿಸಿಪಾಲಿಟಿ ಆಡಳಿತಗಳು ಜಾರಿಗೆ ಬಂದವು.[148] ೧೮೬೨ರಲ್ಲಿ ಸಂಸ್ಥಾನದಲ್ಲಿ ಜನಗಣತಿ ಪ್ರಾರಂಭವಾಯಿತು. ಆಗ ಬೆಂಗಳೂರು ಪಟ್ಟಣದಲ್ಲಿದ್ದ ಒಟ್ಟು ಜನಸಂಖ್ಯೆ ೩೬,೩೦೨ರಷ್ಟು ಮಾತ್ರ.[149] ೧೮೬೩ರಲ್ಲಿ ಮೈಸೂರು ಸಂಸ್ಥಾನದಲ್ಲಿ ಮೊಟ್ಟಮೊದಲಿಗೆ ಸರ್ವೆಸೆಟ್ಲ್‌ಮೆಂಟ್ ಇಲಾಖೆಯು ಪ್ರಾರಂಭವಾಗಿತ್ತು. ಇದರಿಂದಾಗಿ ದೇವಾಲಯ ಹಾಗೂ ಮಠ-ಮಾನ್ಯಗಳಿಗೆ ನೀಡಿದ್ದ ಇನಾಂತಿ ಜಮೀನುಗಳ ಪುನರ್ ಪರಿಷ್ಕಾರ ಕಾರ್ಯ ನಡೆದು, ನಿಜವಾದ ದಾನದ ಭೂಮಿಗಳನ್ನು ಗುರುತಿಸಲಾಯಿತು. ೧೮೬೪ರಲ್ಲಿ ಬೆಂಗಳೂರಿನ ಕೋಟೆಯ ಸುತ್ತಲಿದ್ದ ಕಂದಕಗಳನ್ನು ಮುಚ್ಚಿಸಲಾಯಿತು. ೧೮೬೨-೬೮ರಲ್ಲಿ ಬೆಂಗಳೂರು ಪೇಟೆಯೊಳಗಿದ್ದ ಎಲ್ಲಾ ಸ್ಮಶಾನಗಳನ್ನೂ ಸಹ ಮುಚ್ಚಿಸಲಾಯಿತು.[150]

ಮುಂದೆ ೧೮೮೧ರ ಮಾರ್ಚಿ ೨೫ರಂದು ಮೈಸೂರಿನಲ್ಲಿ ಚಾಮರಾಜೇಂದ್ರ ಒಡೆಯರಿಗೆ ಪಟ್ಟಾಭಿಷೇಕವಾಯಿತು. ಆಗ ೫೦ ವರ್ಷಗಳ ಕಮಿಷನರುಗಳ ಆಡಳಿತ ಕೊನೆಗೊಂಡು ಮತ್ತೆ ದಿವಾನರುಗಳ ಆಡಳಿತ ಪ್ರಾರಂಭವಾಯಿತು. ಇದುವರೆಗೆ ಮೈಸೂರಿನಲ್ಲೇ ಉಳಿದಿದ್ದ ಅನೇಕ ಸರ್ಕಾರಿ ಕಛೇರಿಗಳೆಲ್ಲಾ ಈಗ ಬೆಂಗಳೂರಿಗೆ ವರ್ಗವಾಗಿದ್ದವು. ದಿವಾನರುಗಳೂ ಬೆಂಗಳೂರಿನಲ್ಲೇ ಇರುವಂತೆ ನಿಷ್ಕರ್ಶೆ ಮಾಡಲಾಗಿತ್ತು. ೧೮೯೨ರಲ್ಲಿ ಬಸವನಪುರ (ಬಸವನಗುಡಿ) ಹಾಗೂ ಮಲ್ಲೇಶ್ವರದ ನೂತನ ಬಡಾವಣೆಗಳ ಕಾರ್ಯ ಪ್ರಾರಂಭವಾಗಿತ್ತು. ಮತ್ತೆ ೧೮೯೮ರ ವೇಳೆಗೆ ಬೆಂಗಳೂರಿನಲ್ಲಿ ಪ್ರಬಲವಾದ ಪ್ಲೇಗುರೋಗ ಕಾಣಿಸಿಕೊಂಡು ಸಾವಿರಾರು ಮಂದಿ ಸತ್ತುದಲ್ಲದೆ, ಪಟ್ಟಣದ ಬಹುತೇಕ ಮಂದಿ ಮನೆ-ಮಠಗಳನ್ನು ತೊರೆದು ಎಷ್ಟೋ ದಿನಗಳವರೆಗೆ ಪಟ್ಟಣದಿಂದ ಹೊರಗಿದ್ದುದುಂಟು.[151] ಈ ಮಧ್ಯೆ ೧೮೮೧ರಲ್ಲಿ ರಾಜ್ಯದ ಆಡಳಿತವನ್ನು ಪುನಃ ಮೈಸೂರು ಅರಸು ಮನೆತನಕ್ಕೆ ವಹಿಸಿಕೊಡಲಾಗಿತ್ತಾದರೂ; ಬ್ರಿಟೀಷರು ದಂಡು ಪ್ರದೇಶದಲ್ಲಿ ೧೯೪೭ರ ವರೆಗೂ ತಮ್ಮ ಆಳ್ವಿಕೆಯನ್ನು ಮುಂದುವರೆಸಿದ್ದರು. ಮುಂದೆ ೧೯೪೯ರಲ್ಲಿ ದಂಡು ಪ್ರದೇಶದ ಪುರಸಭೆ ಹಾಗೂ ಬೆಂಗಳೂರು ಪುರಸಭೆಗಳೆರಡನ್ನೂ ಒಂದುಗೂಡಿಸಿ ಬೆಂಗಳೂರು ನಗರ ಕಾರ್ಪೊರೇಷನನ್ನು ರೂಪಿಸಲಾಯಿತು.[152]

---

ಅಡಿಟಿಪ್ಪಣಿಗಳು

1. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ. ಕನ್ನಡ ಅಧ್ಯಯನ ಸಂಸ್ಥೆ. ಮೈಸೂರು. ಪು. ೧೦೩೦.
2. ಇತ್ತೀಚೆಗೆ ೧೯೯೬ರ ನವೆಂಬರ್ ೨೩ರಂದು ಬೆಂಗಳೂರಿನ ಚಿನ್ನಸ್ವಾಮಿ ಕ್ರಿಕೆಟ್ ಕ್ರೀಡಾಂಗಣದಲ್ಲಿ ಎ.ಬಿ.ಸಿ. ಎಲ್. ಸಂಸ್ಥೆಯ ವತಿಯಿಂದ ವಿಶ್ವಸುಂದರಿ ಸ್ಪರ್ಧೆ ನಡೆದುದನ್ನು ಇಲ್ಲಿ ಸ್ಮರಿಸಬಹುದಾಗಿದೆ.
3. ಡಾ। ಸೂರ್ಯನಾಥಕಾಮತ್. ಬೆಂಗಳೂರು - ಒಂದು ಲೇಖನ. ಬೆಂಗಳೂರುದರ್ಶನ. ೧೯೭೫. ವಿಶೇಷ ಸಂಚಿಕೆ. ಪುಟ ೧೭.
4. ಇವುಗಳನ್ನು ಈಗ ಬೆಂಗಳೂರಿನ ಸರ್ಕಾರಿ ಮ್ಯೂಸಿಯಂನಲ್ಲಿ ಸಂಗ್ರಹಿಸಿ ಇಡಲಾಗಿದೆ.
5. ಬಿ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೭.
6. ಹ.ಕ.ರಾಜೇಗೌಡ. ಕೆಂಪೇಗೌಡನ ಜೀವನಚರಿತ್ರೆ. ಯಲಹಂಕ ಪ್ರಭುಗಳು ಒಂದು ಅಧ್ಯಯನ. ಸಂ:ಡಾ. ರಾಮೇಗೌಡ. ಪು. ೯೬.

7. ಎಂ.ಫುಜ್ಲುಲ್‌ಹಸನ್. ಕೆಂಪೇಗೌಡನ ಕಾಲಕ್ಕೂ ಹಿಂದಿನ ಬೆಂಗಳೂರಿನ ಇತಿಹಾಸ. ಪು. ೧. (ಇದೊಂದು ಬಿಡಿ ಲೇಖನ. ಕೃಪೆ : ಡಾ। ಎಂ. ಚಿದಾನಂದಮೂರ್ತಿಯವರು.)
8. ನೋಡಿ : ಈ ಚಿತ್ರವನ್ನು ಕೊಡಲಾಗಿದೆ.
9. ಕೆಂಪೇಗೌಡನ ಜಯಪ್ರಶಸ್ತಿ. ಸಂ : ಕರ್ಲಮಂಗಲಂ ಶ್ರೀಕಂಠಯ್ಯ. ಮುನ್ನುಡಿ. ಪು. ೩೬.
10. ವೀರಗಲ್ಲಿನಲ್ಲಿರುವ ಶಾಸನ ಪಾಠ "ಶ್ರೀಮತ್ ನಾಗತರನ ಮನೆವಗ ತಿಪ್ಪೋರ್ವೊಣ ಶಟ ಬೆಂಗಳೂರು ಕಾಳಗದೊಳ್ ನಾಗತರನ ಮಗಂ ಬಟ್ಟಣ ಪತ್ತಿ ಸತ್ತಂ."
11. Mysore Archaeological Report. 1914-15. P-16.
12. ಡಾ। ಎಂ.ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ. ಕರ್ನಾಟಕ ಇತಿಹಾಸ ದರ್ಶನ. ಪು. ೫೦೪.
13. ಡಾ। ದೇವರಕೊಂಡಾರೆಡ್ಡಿ. ದೊಡ್ಡಬೇಗೂರಿನ ನಾಗತ್ತರನ ಶಾಸನ. ಇತಿಹಾಸ ದರ್ಶನ. ಸಂ-೩. ೧೯೮೮. ಪು. ೧೫೮, ೧೫೯.
14. ಎಂ. ಫಜ್ಲುಲ್‌ಹಸನ್. ಪೂರ್ವೋಕ್ತ. ಅದೇ ಪುಟ.
15. ಕರ್ನಾಟಕ ರಾಜ್ಯ ಗೆಜೆಟಿಯರ್. ಭಾಗ-೩. ಪು. ೫೫೩.
16. ಬೆಂಗಳೂರಿನ ಸುಂಕೇನಹಳ್ಳಿಯಲ್ಲಿ ದೊರೆತಿದ್ದ ಮತ್ತೊಂದು ಹೊಯ್ಸಳರ ಕಾಲದ ಶಾಸನದಲ್ಲಿಯೂ, ಸುಂಕೇನಹಳ್ಳಿಯ ಆಸುಪಾಸಿನ ಭಾಗದ ಭೂಮಿಯನ್ನು ಮಡಿವಾಳ ಗ್ರಾಮದ ಸೋಮೇಶ್ವರ ದೇವಾಲಯಕ್ಕೆ ದತ್ತಿ ನೀಡಿದ್ದ ವಿಚಾರಗಳಿವೆ. (Epigraphia Carnatica, IX. Bangalore-69)
17. Epigraphia Carnatica, IX. Bangalore-68.
18. ಎಂ.ಫಜ್ಲುಲ್‌ಹಸನ್. ಪೂರ್ವೋಕ್ತ. ಅದೇ ಪುಟ.
19. ನರಗುಂದದೇವರಮಠದ ತೋಟದಸ್ವಾಮಿ (ಇಮ್ಮಡಿ)ಯವರು ಬೆಂಗಳೂರು ಡಿವಿಜನ್ ಸೂಪರಿಂಟೆಂಡೆಂಟ್ ಅವರಿಗೆ ಬರೆದುಕೊಂಡ ಮನವಿ ಅರ್ಜಿ. ದಿ: ೧೮.೪.೧೮೪೪.
20. ಸರ್ಪಭೂಷಣಮಠದ ಗುರುಸ್ವಾಮಿಗಳು ನಂದಿದುರ್ಗ ಡಿವಿಜನ್ ಕಮಿಷನರರಿಗೆ ಬರೆದುಕೊಂಡ ಅಹವಾಲು. ದಿ:೩೧.೧೨.೧೮೭೬.
21. ದೊಡ್ಡಕೆರೆಯು ಈಗಿನ ನಗರ ರೈಲುನಿಲ್ದಾಣದ ಮುಂಭಾಗದಲ್ಲಿರುವ ನಗರ ಕೇಂದ್ರ ಬಸ್ ನಿಲ್ದಾಣದ ಪ್ರದೇಶವೇ ಆಗಿದ್ದು, ಹಿಂದೆ ಅಮೃತಸಾಗರವೆಂದು ಪ್ರಸಿದ್ಧಿಯಾಗಿದ್ದ ಧರ್ಮಾಂಬುಧಿ ಕೆರೆಯಿದ್ದ ಸ್ಥಳವಾಗಿತ್ತು. (ನರಗುಂದ ದೇವರಮಠದ ದಾಖಲೆಗಳು).
22. ಏಕೆಂದರೆ ೧೮೦೦ಕ್ಕೂ ಹಿಂದಿನಿಂದಲೇ ಅಣ್ಣಮ್ಮನ ದೇಗುಲವಿರುವ ಭಾಗವನ್ನು ಹನುಮಂತಪುರವೆಂದು ಕರೆಯುತ್ತಿದ್ದುದಾಗಿ ಗೊಟ್ಟೂರಯ್ಯ (ಗೋದೂರಯ್ಯ)ನವರ ಮಠದ ದಾಖಲೆಗಳಿಂದ ವ್ಯಕ್ತವಾಗುತ್ತದೆ.
23. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೨ ಮತ್ತು ಸೂರ್ಯನಾಥ ಯು.ಕಾಮತ್. ಕರ್ನಾಟಕ ರಾಜ್ಯ ಗೆಜೆಟಿಯರು. ಭಾಗ-೩. ಪು.೫೫೩.
24. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ. ಮೈಸೂರು ವಿಶ್ವವಿದ್ಯಾಲಯ. ಪು. ೧೬೨೫.
25. ಕೆಂಪೇಗೌಡನ ಜಯಪ್ರಶಸ್ತಿ. ಸಂ:ಕರ್ಲಮಂಗಲಂ ಶ್ರೀಕಂಠಯ್ಯ. ಮುನ್ನುಡಿ. ಪು. ೩೬.
26. ಎಂ.ಫಜ್ಲುಲ್‌ಹಸನ್. ಕೆಂಪೇಗೌಡನ ಕಾಲಕ್ಕೂ ಹಿಂದಿನ ಬೆಂಗಳೂರಿನ ಇತಿಹಾಸ. ಪು. ೨.
27. ಡಾ। ವಿ. ಶ್ರೀನಿವಾಸನ್. ಯಲಹಂಕ ನಾಡಪ್ರಭುಗಳ ಆಡಳಿತ ವ್ಯವಸ್ಥೆ. ಬೆಂಗಳೂರು ಕೆಂಪೇಗೌಡರ ವಂಶಸ್ಥರು. ಸಂ:ಪ್ರೊ। ಎಂ.ಎಚ್. ಕೃಷ್ಣಯ್ಯ. ಡಾ। ದೇವರಕೊಂಡಾರೆಡ್ಡಿ. ಪು. ೯೦.
28. ಅದೇ.
29. ಹ.ಕ. ರಾಜೇಗೌಡ. ಕೆಂಪೇಗೌಡನ ಜೀವನ ಚರಿತ್ರೆ. ಯಲಹಂಕ ಪ್ರಭುಗಳು ಒಂದು ಅಧ್ಯಯನ. ಸಂ: ಡಾ। ರಾಮೇಗೌಡ. ಪು. ೯೬.
30. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೨೧.
31. ಡಾ। ಎಂ.ವಿ. ಕೃಷ್ಣರಾವ್. ಬೆಂಗಳೂರು ಕೆಂಪೇಗೌಡ. ಪು. ೭೮.
32. ಅದೇ. ಅನುಬಂಧ-೨. ಪು. ೧೪೫.
33. ದೇವರಕೊಂಡಾರೆಡ್ಡಿ. ದೊಡ್ಡಬೇಗೂರಿನ ನಾಗತ್ತರನ ಶಾಸನ. ಇತಿಹಾಸದರ್ಶನ. ಸಂ-೩. ೧೯೮೮. ಪು. ೧೫೮.
34. ಅದೇ. ಪು. ೧೫೯.
35. ಎಚ್.ಎಸ್. ಗೋಪಾಲರಾವ್. ಬೆಂಗಳೂರು ಕೆಂಪೇಗೌಡ. ಬೆಂಗಳೂರು ಕೆಂಪೇಗೌಡರ ವಂಶಸ್ಥರು. ಸಂ : ಪ್ರೊ। ಎಂ.ಎಚ್. ಕೃಷ್ಣಯ್ಯ ಮತ್ತು ಡಾ। ದೇವರಕೊಂಡಾರೆಡ್ಡಿ. ಪು. ೨೫.
36. ಡಾ। ವಿ. ಶ್ರೀನಿವಾಸನ್. ಯಲಹಂಕ ನಾಡಪ್ರಭುಗಳ ಆಡಳಿತ ವ್ಯವಸ್ಥೆ. ಬೆಂಗಳೂರು ಕೆಂಪೇಗೌಡರ ವಂಶಸ್ಥರು. ಸಂ : ಪ್ರೊ। ಎಂ.ಎಚ್. ಕೃಷ್ಣಯ್ಯ ಮತ್ತು ಡಾ। ದೇವರಕೊಂಡಾರೆಡ್ಡಿ. ಪು. ೯೦, ೯೧.
37. ಅದೇ.

38. ಡಾ. ಎಂ.ವಿ. ಕೃಷ್ಣರಾವ್. ಬೆಂಗಳೂರು ಕೆಂಪೇಗೌಡ. ಪು. ೧೮.
39. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೧೮.
40. ಕರ್ಲಮಂಗಲಂ ಶ್ರೀಕಂಠಯ್ಯ. ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ. ಪು. ೩೦.
41. Mysore Archaeological Report. 1943. P.16, 51.
42. ಆರ್. ವೆಂಕಟೇಶಮೂರ್ತಿ. ಯಲಹಂಕ ಪ್ರಭುಗಳ ರಾಜಧಾನಿಗಳು. ಬೆಂಗಳೂರು ಕೆಂಪೇಗೌಡರ ವಂಶಸ್ಥರು. ಸಂ:ಪ್ರೊ। ಎಂ.ಎಚ್. ಕೃಷ್ಣಯ್ಯ ಮತ್ತು ಡಾ। ದೇವರಕೊಂಡಾರೆಡ್ಡಿ. ಪು. ೪೯.
43. ಯಲಹಂಕ ಪ್ರಭುಗಳ ವಂಶಾವಳಿ :

| | |
|---|---|
| ರಣಭೈರೇಗೌಡ | ಕ್ರಿ.ಶ. ೧೩೬೭-೧೪೧೮ |
| ಜಯಗೌಡ | ಕ್ರಿ.ಶ. ೧೪೧೮-೧೪೩೩ |
| ಗಿಡ್ಡೇಗೌಡ | ಕ್ರಿ.ಶ. ೧೪೩೩-೧೪೪೩ |
| ಕೆಂಪನಂಜೇಗೌಡ | ಕ್ರಿ.ಶ. ೧೪೪೩-೧೫೧೩ |
| ಹಿರಿಯ ಕೆಂಪೇಗೌಡ | ಕ್ರಿ.ಶ. ೧೫೧೩-೧೫೬೯ |
| ಇಮ್ಮಡಿಕೆಂಪೇಗೌಡ | ಕ್ರಿ.ಶ. ೧೫೬೯-೧೬೫೮ |
| ಮುಮ್ಮಡಿಕೆಂಪೇಗೌಡ | ಕ್ರಿ.ಶ. ೧೬೫೮-೧೬೭೮ |
| ದೊಡ್ಡವೀರಪ್ಪಗೌಡ | ಕ್ರಿ.ಶ. ೧೬೭೮-೧೭೦೫ |
| ಮುಮ್ಮಡಿ ಕೆಂಪವೀರಪ್ಪಗೌಡ | ಕ್ರಿ.ಶ. ೧೭೦೫-೧೭೨೮ |

44. ಮೂಲತಃ ಯಲಹಂಕ ವಂಶದ ಗೌಡ ದೊರೆಗಳು ಆಳುತ್ತಿದ್ದ ಮೂಲಭೂಮಿಯೇ ''ಮೊರಸುನಾಡು'' ಆಗಿತ್ತು. ಇವರನ್ನು ಕಂಚಿಯ ಕಡೆಯವರೆಂದೂ, ಆ ನಾಡಿಗೆ ''ಮೊರಸುನಾಡು'' ಎಂದು ಹೆಸರಿದ್ದುದಾಗಿ ಹೇಳಿದರೆ ಇತಿಹಾಸಕ್ಕೆ ಅಪಚಾರ ಮಾಡಿದಂತಾಗುತ್ತದೆಂದು ಕರ್ಲಮಂಗಲಂ ಶ್ರೀಕಂಠಯ್ಯ ಹೇಳುತ್ತಾರೆ. (ಕೆಂಪೇಗೌಡ ಜಯಪ್ರಶಸ್ತಿ.ಪು. ೭೮)
45. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೨೧.
46. ಕರ್ಲಮಂಗಲಂ ಶ್ರೀಕಂಠಯ್ಯ. ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ. ಪು. ೩೬
47. ಡಾ। ದೇವರಕೊಂಡಾರೆಡ್ಡಿ. ದೊಡ್ಡಬೇಗೂರಿನ ನಾಗತ್ತರನ ಶಾಸನ. ಇತಿಹಾಸ ದರ್ಶನ. ಸಂ-೩. ೧೯೮೮. ಪು ೧೫೮, ೧೫೯.
48. Epigraphia Carnatica IX. Bangalore - 57.
49. ನವದ್ವಾರಗಳು ಯಾವುವೆಂದರೆ ಅಲಸೂರು ಬಾಗಿಲು, ಯಲಹಂಕದ ಬಾಗಿಲು, ಯಶವಂತಪುರದ ಬಾಗಿಲು, ಸೊಂಡೆಕೊಪ್ಪದ ಬಾಗಿಲು, ಅಗ್ರಹಾರದ ಬಾಗಿಲು, ಕೆಂಗೇರಿ ಬಾಗಿಲು, ಬಸವನ ಬಾಗಿಲು (ದೊಡ್ಡ ಬಸವನ ಗುಡಿಗೆ ಅಭಿಮುಖವಾಗಿದ್ದದ್ದು), ಜಿಗಣಿ ಬಾಗಿಲು, ಸರ್ಜಾಪುರದ ಬಾಗಿಲು.
50. ಗೌಡನು ನಿರ್ಮಿಸಿದ ಕೋಟೆಯ ಮಹಾದ್ವಾರ ನಿಲ್ಲದೇ ಹೋದಾಗ ಸ್ವತಃ ಗೌಡನ ಸೊಸೆಯಾಗಿದ್ದ ಲಕ್ಷ್ಮಮ್ಮ ತಾನೇ ಬಲಿದಾನವಾದ ಸ್ವಾರಸ್ಯಕರ ಕಥೆಯೊಂದುಂಟು.
51. ಡಾ। ಎಂ.ವಿ. ಕೃಷ್ಣರಾವ್. ಬೆಂಗಳೂರು ಕೆಂಪೇಗೌಡ. ಪು. ೫೨.
52. C. Hayavadana Rao. Mysore Gazetteer- Vol-v. 1930. P.43.
53. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೨೪, ೨೫.
54. C. Hayavadana Rao. Mysore Gazetteer-Vol-v. 1930. P.43.
55. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೩೨.
56. ಡಾ। ಎಂ.ವಿ. ಕೃಷ್ಣರಾವ್. ಬೆಂಗಳೂರು ಕೆಂಪೇಗೌಡ. ಪು. ೫೫.
57. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೨೩, ೨೪.
58. ಅದೇ. ಪು. ೨೮, ೨೯.
59. C. Hayavadana Rao. Mysore Gazetteer Vol-v. 1930. P.43.
60. ಕರ್ಲಮಂಗಲಂ ಶ್ರೀಕಂಠಯ್ಯನವರು 'ಹಿರಿಯಕೆಂಪೇಗೌಡನು ''ಭೈರವನಾಣ್ಯ''ವನ್ನು ತನ್ನ ಟಂಕಸಾಲೆಯಲ್ಲಿ ಮುದ್ರಿಸಿದ್ದರಿಂದ, ಇವನು ವಿಜಯನಗರದಲ್ಲಿ ೫ ವರ್ಷ ಸೆರೆಯಲ್ಲಿದ್ದನು. ೫೩ ವರ್ಷಗಳ ಕಾಲ ರಾಜ್ಯವಾಳಿದ ಈತ ೧೫೬೯ರಲ್ಲಿ ನಿಧನನಾದನು' ಎಂದು ಗುರುತಿಸಿದ್ದಾರೆ. (ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ.ಪು. ೭೫)
61. ಡಾ। ಶಿವಣ್ಣ. ಯಲಹಂಕ ಪ್ರಭುಗಳ ಇತಿಹಾಸ. ಯಲಹಂಕ ನಾಡಪ್ರಭುಗಳು ಒಂದು ಅಧ್ಯಯನ. ಪ್ರ.ಸಂ : ಡಾ। ರಾಮೇಗೌಡ. ಪು. ೧೬.

62. ಹಿರಿಯಕೆಂಪೇಗೌಡನ ನಂತರ ಆವನ ಮಗ ಗಿಡ್ಡೇಗೌಡನು ಅಧಿಕಾರಕ್ಕೆ ಬಂದನೆಂದೂ ಆತನು ಕ್ರಿ.ಶ. ೧೫೬೦ ರಿಂದ ೧೫೮೫ರ ವರೆಗೂ ಅಧಿಕಾರದಲ್ಲಿದ್ದನೆಂದೂ ಅನಂತರ ಇಮ್ಮಡಿಕೆಂಪೇಗೌಡನು ಅಧಿಕಾರಕ್ಕೆ ಬಂದುದಾಗಿ ಡಾ। ಶಿವಣ್ಣ ಸೂಚಿಸಿದ್ದಾರೆ. (ಯಲಹಂಕ ನಾಡಪ್ರಭುಗಳು ಒಂದು ಅಧ್ಯಯನ. ಪ್ರ.ಸಂ. : ಡಾ। ರಾಮೇಗೌಡ. ಪು. ೧೪.)

63. ಡಾ। ಎಂ.ವಿ. ಕೃಷ್ಣರಾವ್. ಬೆಂಗಳೂರು ಕೆಂಪೇಗೌಡ. ಪು. ೧೧೯

64. ಡಾ। ವಿ.ಶ್ರೀನಿವಾಸನ್. ಯಲಹಂಕ ನಾಡಪ್ರಭುಗಳ ಆಡಳಿತ ವ್ಯವಸ್ಥೆ. ಬೆಂಗಳೂರು ಕೆಂಪೇಗೌಡರ ವಂಶಸ್ಥರು. ಸಂ : ಪ್ರೊ। ಎಂ.ಎಚ್. ಕೃಷ್ಣಯ್ಯ ಮತ್ತು ಡಾ। ದೇವರಕೊಂಡಾರೆಡ್ಡಿ. ಪು. ೮೮.

65. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೩೩.

66. ಕರ್ಲಮಂಗಲಂ ಶ್ರೀಕಂಠಯ್ಯ. ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ. ಪು. ೩೬.

67. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೨.

68. ಕೆಂಪೇಗೌಡನ ಜಯಪ್ರಶಸ್ತಿಯ ಕರ್ತೃವಾದ ಗುರುನಂಜೇಶ್ವರನು ಶಿವದ್ವಿಜಬ್ರಾಹ್ಮಣನಿರಬೇಕೆಂದು ಕರ್ಲಮಂಗಲಂ ಶ್ರೀಕಂಠಯ್ಯ (ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ ಪು.೨) ನವರು ಹೇಳಿದ್ದಾರೆ. ಡಾ. ಬಿ. ನಂಜುಂಡಸ್ವಾಮಿಯವರು ಜಯಪ್ರಶಸ್ತಿಯ ಕರ್ತೃ ವಾಸ್ತವವಾಗಿ ಒಬ್ಬ ವೀರಶೈವಕವಿ ಎಂತಲೂ ಗುರುನಂಜೇಶ್ವರನ ಶಿಷ್ಯರಲ್ಲಿ ಒಬ್ಬನಾಗಿದ್ದ ಆತನೇ 'ಗಂಗೇಶ' ಎಂಬ ಅಂಕಿತದ ''ಹೊನ್ನಕವಿ'' ಎಂಬುದಾಗಿ ಪ್ರತಿಪಾದಿಸಿದ್ದಾರೆ. (ಸರ್ಪಭೂಷಣ ಶ್ರೀ. ಸಂ : ಜಿ.ವಿ. ಶಿವಸ್ವಾಮಿ ಮತ್ತು ಎಚ್.ಎಸ್. ಸಿದ್ಧಗಂಗಪ್ಪ. ಲೇಖನ : ಗೌಡಕುಲವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿಯ ಕತೃ ''ಹೊನ್ನಕವಿ''. ಪು.೫೯-೬೩)

69. ಆನೆಕಲ್ಲಿನಿಂದ ದಕ್ಷಿಣದ ಕಡೆಗೆ ಎಂಟು ಕಿ.ಮೀ. ದೂರದಲ್ಲಿರುವ 'ಗುಮ್ಮಳಾಪುರ'ವು ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಡೆಂಕಣಿಕೋಟೆ ತಾಲ್ಲೂಕಿಗೆ ಸೇರಿದೆ. ಇಂದಿಗೂ ಕೂಡ ಇಲ್ಲೊಂದು ವೀರಶೈವ ಗುರುವರ್ಗದ ಮಠವಿದ್ದು ಇದು ಬಾಳೆಹೊನ್ನೂರು ಶಾಖೆಗೆ ಸೇರಿದ ಮಠವೆಂದು ತಿಳಿದುಬರುತ್ತದೆ.

70. ಡಾ। ದೇವರಕೊಂಡಾರೆಡ್ಡಿಯವರ ಸ್ವಂತ ಸಂಗ್ರಹ (ಉದ್ಧೃತ : ಪಿ.ವಿ. ಕೃಷ್ಣಮೂರ್ತಿ. ಕೆಂಪೇಗೌಡನ ಜಯಪ್ರಶಸ್ತಿ : ಒಂದು ಚಾರಿತ್ರಿಕ ಪರಿಶೀಲನೆ. ಇತಿಹಾಸ ದರ್ಶನ. ಸಂ-೪. ೧೯೮೯. ಪು. ೧೧೮)

71. ಪಿ.ವಿ. ಕೃಷ್ಣಮೂರ್ತಿ. ಪೂರ್ವೋಕ್ತ. ಪು. ೧೧೮.

72. ಅದೇ ಪುಟ.

73. ಡಾ। ಎಂ.ವಿ. ಕೃಷ್ಣರಾವ್. ಬೆಂಗಳೂರು ಕೆಂಪೇಗೌಡ. ಪು. ೧೯೪-೧೯೬. (ಶಿವಲಿಂಗಾರ್ಯರ ಪುತ್ರ ವೀರಣಾರ್ಯ ಎಂಬ ವೀರಶೈವ ಗುರುಗಳು ಬೆಂಗಳೂರಿಗೆ ಬಂದಾಗ ಅವರಿಗೆ ಇಮ್ಮಡಿ ಕೆಂಪೇಗೌಡನು ಮೇಲ್ಕಂಡ ಸವಲತ್ತುಗಳನ್ನು ಒದಗಿಸಿಕೊಟ್ಟ ಸ್ಥಳ ಈಗಿನ ಗವಿಪುರವೇ ಆಗಿದ್ದಿರಬೇಕೆಂದು ಎಂ.ಜಿ. ನಾಗರಾಜ್ (ಶ್ರೀಗೌರಿಶಂಕರ ದರ್ಶನ. ಪು.೧೪,೧೫.) ಅವರು ಅಭಿಪ್ರಾಯಪಟ್ಟಿದ್ದಾರೆ.

74. ನಿರಂಜನವಂಶರತ್ನಾಕರ. ಸಂ: ಫ.ಗು. ಹಳಕಟ್ಟಿ (ವಿಜಾಪುರ. ೧೯೩೨) ಪು. ೫೮.

75. ಕರ್ಲಮಂಗಲಂ ಶ್ರೀಕಂಠಯ್ಯ. ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ. ಪು. ೪೦.

76. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೮.

77. Epigraphia Carnatica, IX. Bangalore-2. (ಬೆಂಗಳೂರಿನ ಚಿಕ್ಕಪೇಟೆಯ ತೂಗದ ಅಚ್ಚಪ್ಪನ ಮನೆಯ ಮಗ್ಗುಲಿಗಿದ್ದ ಶಾಸನ.)

78. ವಿರೂಪಾಕ್ಷಪಂಡಿತನ ಚನ್ನಬಸವಪುರಾಣ. ಸಂ-೨. ಕನ್ನಡ ಸಾಹಿತ್ಯ ಪರಿಷತ್ತು. ೧೯೬೬. ಸಂಧಿ ೬೩. ಪು. ೫೫, ೫೬.

(ಪರಮಜಂಗಮಕಿನ್ನು ದಾಸೋಹಮಂ ಮಾಳ್ಪ
ದೊರೆಗಳಂ ಪೇಳ್ವೆನಾ ನಂಜರಾಯಂ ಮುಂದೆ
ನಿರುತದಿಂ ಕೆಂಜ ಸೋಮಣ್ಣನಾಯಕ ಯೆಳಂದೂರರಸು ಚೆನ್ನೊಡೆಯರು।
ಕೇತಸಾಗರದ ಚಿಕ್ಕಣಸೆಟ್ಟಿಗಳು ವಿ
ಖ್ಯಾತಿಬಿಜ್ಜಾವರದ ಪ್ರಭುವೆ ಚಿಕ್ಕಣಗೌಡ
ಸಾತಿಶಯದಿಂದೆ ಸುಕುಟೂರ ತಮ್ಮಣಗೌಡನೆಸೆವ ತಗಡೂರ ಪ್ರಭುವು।

ಬರಗಿರಿಯ ದೇವಿನಾಯಕನು ಬುಕ್ಕಣ್ಣೊಡೆಯ
ನಿರದಲ್ಲಿ ಸಿದ್ಧಮಲ್ಲಿನಾಯಕಂ ಮತ್ತೆ ಶಿವ
ಶರಣನಾ ಸಂಕಣ್ಣನಾಯಕಂ ಜಂಬೂರದಾ ನಿವಾಸದ ದೊರೆಗಳು॥
ಪ್ರೀತಿಯಿಂ ತಳಕಾಡ ಚಂದ್ರಶೇಖರನುರುವ
ದಾತನಾ ಭೋಗವಾಡಿಯ ಲಿಂಗರಾಯನತಿ
ಭೂತಹಿತನುಡುವಂಕನಾಡ ಪ್ರಭು ಮೊದಲಾಗಿ ದಾಸೋಹಮಂ ಮಾಳ್ಪರು॥)

79. ಜಿ.ಎಂ. ಉಮಾಪತಿಶಾಸ್ತ್ರಿ. (ಸಂ) ವಿವೇಕಚಿಂತಾಮಣಿ. ಪ್ರಸ್ತಾವನೆ. ಪು. ೪೬.

80. ''ಪುರ'' : ಹಿಂದೆ ವೀರಭದ್ರನ ನೃತ್ಯ ಮಾಡುವವರನ್ನು 'ಪುರವಂತ'ರೆಂದು ಕರೆಯಲಾಗುತ್ತಿತ್ತು. (ಕನ್ನಡ ನಿಘಂಟು. ಸಂ-೬. ಕನ್ನಡ ಸಾಹಿತ್ಯ ಪರಿಷತ್ತು. ಪು. ೫೯೨). ಸಾಮಾನ್ಯವಾಗಿ ಮಠ-ಮಾನ್ಯಗಳನ್ನು ಹೊಂದಿ, ಒಂದು ನಿಶ್ಚಿತ ಸ್ಥಳದಲ್ಲೇ ನೆಲೆಸಿದ್ದ ಜಂಗಮರನ್ನೂ ಪುರವಂತರೆಂದು ಕರೆದಿರುವುದುಂಟು. (ಕನ್ನಡ ನಿಘಂಟು. ಸಂ-೬. ಪು. ೫೯೦) ಹೀಗೆ ಶಿವಶರಣರಿಗೆ, ಜಂಗಮರಿಗೆ, ವೀರಮಾಹೇಶ್ವರರಿಗೆ ದತ್ತಿಯಾಗಿ ಬಿಟ್ಟಿದ್ದ ಗ್ರಾಮಗಳೆಲ್ಲಾ ಹಿಂದೆ ''ಪುರ''ಗಳೆಂದು ಕರೆಸಿಕೊಂಡಿರುವುದು ಸಾಮಾನ್ಯವಾಗಿತ್ತು.

81. ಚನ್ನಮಲ್ಲಿಕಾರ್ಜುನ. ''ಚಂಪಾರಣ್ಯ ಮಠಗಳು.'' ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು. ಸಂ:ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ. ಪು. ೧೭೦.
82. ಕರ್ನಾಟಕ ಗ್ರಾಮಸೂಚಿ. ಕನ್ನಡ ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪು. ೯೦-೯೪.
83. ಕೆಂಪೇಗೌಡನ ಜಯಪ್ರಶಸ್ತಿ. ಭಾಗ-೧. ಸಂ: ಕರ್ಲಮಂಗಲಂ ಶ್ರೀಕಂಠಯ್ಯ. ಪು. ೧-೬.
84. ಕೆಂಪೇಗೌಡನ ಜಯ ಪ್ರಶಸ್ತಿ. ಭಾಗ-೨. ಪು. ೨.
85. ಕೆಂಪೇಗೌಡನ ಜಯಪ್ರಶಸ್ತಿ. ಭಾಗ-೨. ಪು.೨೨, ೩೧.
86. ಉದ್ಧೃತ : ಪಿ.ವಿ.ಕೃಷ್ಣಮೂರ್ತಿ. ಯಲಹಂಕ ಪ್ರಭುಗಳ ಇತಿಹಾಸ ರಚನೆಗೆ ಇರುವ ಆಕರ ಸಾಮಗ್ರಿಗಳು. ಬೆಂಗಳೂರು ಕೆಂಪೇಗೌಡರ ವಂಶಸ್ಥರು. ಸಂ:ಪ್ರೊ। ಎಂ.ಎಚ್. ಕೃಷ್ಣಯ್ಯ, ದೇವರಕೊಂಡಾರೆಡ್ಡಿ. ಪು. ೧೪, ೧೫.
87. ಏಕಾಂಮ್ರದೀಕ್ಷಿತನ ವೀರಭದ್ರವಿಜಯ. ನಾಲ್ಕನೇ ಉಲ್ಲಾಸ (ಉದ್ಧೃತ : ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೪೩.)
88. Epigraphia Carnatica. IX. Magadi 4, 8 and Appendix, Magadi. 83.
89. ಡಾ। ವಿ. ಶ್ರೀನಿವಾಸನ್. ಯಲಹಂಕ ನಾಡಪ್ರಭುಗಳ ಆಡಳಿತ ವ್ಯವಸ್ಥೆ. ಬೆಂಗಳೂರು ಕೆಂಪೇಗೌಡರ ವಂಶಸ್ಥರು. ಸಂ:ಪ್ರೊ। ಎಂ.ಎಚ್. ಕೃಷ್ಣಯ್ಯ ಮತ್ತು ಡಾ। ದೇವರಕೊಂಡಾರೆಡ್ಡಿ. ಪು. ೧೦೨.
90. ಅರಳೆಪೇಟೆ, ಗವಿಪುರ, ಕೆಂಗೇರಿ, ವಿಭೂತಿಪುರ, ತಿಂಡ್ಲು, ಸಾವನದುರ್ಗ, ಶಿವಗಂಗೆ, ಹೊಸಕೋಟೆ, ಮಾಸ್ತೇನ ಹಳ್ಳಿ, ಮಲ್ಲಸಂದ್ರ, ಕಿತ್ತನಹಳ್ಳಿ, ದೇವರಹೊಸಹಳ್ಳಿ, ಇನ್ನೂ ಮುಂತಾದೆಡೆ ವೀರಭದ್ರಸ್ವಾಮಿ ದೇಗುಲಗಳು ಇಂದಿಗೂ ಇವೆ. ಇವುಗಳೆಲ್ಲಾ ಕೆಂಪೇಗೌಡರ ಕಾಲದಲ್ಲಾದುವೆಂದು ಸ್ಥಳೀಯ ಜನರು ನಂಬಿದ್ದಾರೆ. ಇದಕ್ಕೆ ಸಾಕ್ಷಿ ಎಂಬಂತೆ ನಗರದ ವಿಮಾನ ನಿಲ್ದಾಣದ ಬಳಿಯಿರುವ ವಿಭೂತಿಪುರದ ಮಠದೊಳಗೆ ವೀರಭದ್ರಸ್ವಾಮಿ ದೇಗುಲವಿದೆ. ಇಲ್ಲಿ ಗರ್ಭಗುಡಿಗೆ ಮುಂಭಾಗ (ಬಲಭಾಗ)ದ ಕಂಭವೊಂದರ ಮೇಲೆ ಇಮ್ಮಡಿಕೆಂಪೇಗೌಡನು ತನ್ನ ಅರಸಿಯರಾದ ಕೆಂಪಮ್ಮ ಮತ್ತು ಲಿಂಗಮ್ಮನವರ ಜೊತೆಗೆ ಕೈಜೋಡಿಸಿ ನಿಂತಿರುವ ಭಕ್ತ ವಿಗ್ರಹಗಳಿವೆ. ಇಲ್ಲಿ ರಾಯನು ಸರ್ವಾಲಂಕೃತನಾಗಿ ಹುರಿಮೀಸೆಯೊಂದಿಗೆ ರಾಜ ಠೀವಿಯಿಂದ ನಿಂತಿರುವ ಚಿತ್ರ ಆಕರ್ಷಕವಾಗಿದೆ. ಅರಳೆಪೇಟೆಯ ವೀರಭದ್ರನ ಗುಡಿಯಲ್ಲೂ ಇಂಥದೇ ಚಿತ್ರಗಳನ್ನು ಗುರುತಿಸಬಹುದಾಗಿದೆ.
91. Mysore Archaeological Report. 1914-15. P-3.
92. ನಗರದ ದೊಡ್ಡಮಠ, ಕಲ್ಲುಮಠ, ದೇಶದಮಠ, ಮರಿಸ್ವಾಮಿಮಠ, ಕೊಳಲಮಠ, ಮಹಾಂತರಮಠ ಇವೇ ಮೊದಲಾದ ಮಠಗಳೆಲ್ಲಾ ಯಲಹಂಕ ಪ್ರಭುಗಳ ಕಾಲದಲ್ಲೇ ನಿರ್ಮಾಣವಾದುದಾಗಿ ಜಿ.ಎಂ. ಉಮಾಪತಿಶಾಸ್ತ್ರಿ (ವಿವೇಕ ಚಿಂತಾಮಣಿ. ಪ್ರಸ್ತಾವನೆ ಪು. ೪೮.) ಹೇಳುತ್ತಾರೆ.
93. ೧.ಜಿ.ಎಂ. ಉಮಾಪತಿಶಾಸ್ತ್ರಿ. ವಿವೇಕ ಚಿಂತಾಮಣಿ. ಪ್ರಸ್ತಾವನೆ. ಪು. ೪೮. ೨. ಎಂ.ಜಿ. ನಂಜುಂಡಾರಾಧ್ಯ. ತ್ರಿವಿಧ ದಾಸೋಹಿ ಗೌಡರ ವೀರಭದ್ರಪ್ಪ. ಪು. ೧೭. ೩. ಕೆ.ಪಿ. ಶಿವಲಿಂಗಯ್ಯ. ಬೆಂಗಳೂರಿನ ವೀರಶೈವಮಠಗಳು. ಸೇವಾಸಂಪದ. ಸಂ: ಗೊ.ರು. ಚನ್ನಬಸಪ್ಪ. ಪು. ೪೦೩.
94. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೮೪.
95. ಉದ್ಧೃತ : ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೪೮.
96. ಕರ್ಲಮಂಗಲಂ ಶ್ರೀಕಂಠಯ್ಯ. ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ. ಪು. ೭೬.
97. ಪಿ.ಅಬ್ದುಲ್‌ಸತ್ತಾರ್ ಅವರು - ''ಯಲಹಂಕ ಪ್ರಭುಗಳ ವಂಶದಲ್ಲೇ ಇಮ್ಮಡಿ ಕೆಂಪೇಗೌಡನು (ಕ್ರಿ.ಶ. ೧೫೭೯-೧೬೫೬) ಅತಿ ಹೆಚ್ಚು ಪ್ರಸಿದ್ಧನಾದ ಅರಸನಾಗಿದ್ದನು. ಈತನು ಶಿವಾಜಿಯ ತಂದೆಯಾದ ಷಾಹಜಿಯ ಜೊತೆ ಏಳು ಬಾರಿ ಯುದ್ಧ ಮಾಡಿ ಎಂಟನೆಯ ಸಲ ಆತನನ್ನು ಸೋಲಿಸಿ ಮತ್ತೆ ಬೆಂಗಳೂರನ್ನು ಕಿತ್ತುಕೊಂಡ'' ನೆಂಬುದಾಗಿ ಪ್ರತಿಪಾದಿಸಿದ್ದಾರೆ. (ಪ್ರಬುದ್ಧಕರ್ನಾಟಕ. ಮೈಸೂರು ವಿಶ್ವವಿದ್ಯಾಲಯ. ೧೯೮೪. ಸಂಪುಟ-೬೬. ಸಂಚಿಕೆ-೩. ಪು. ೨೭.)
98. ಆಗ ಬೆಂಗಳೂರಿನ ಜೊತೆಗೆ ಸಿರಾ. ತುಮಕೂರು, ಕೋಲಾರ, ದೊಡ್ಡಬಳ್ಳಾಪುರ ಮುಂತಾದವುಗಳನ್ನೊಳಗೊಂಡಂತೆ ಷಾಹಜಿಗೆ ಜಹಗೀರಾಗಿ ದತ್ತಿ ನೀಡಲಾಗಿತ್ತು ಎಂದು ಸೂರ್ಯನಾಥ ಕಾಮತ್ (ಕರ್ನಾಟಕ ರಾಜ್ಯ ಗೆಜೆಟಿಯರು. ಭಾಗ-೩. ೧೯೮೬. ಪು. ೫೫೩) ಅವರು ಸೂಚಿಸಿದ್ದಾರೆ.
99. ಗೋವಿಂದವೈದ್ಯನ ಕಂಠೀರವ ನರಸರಾಜ ವಿಜಯ. ಸಂಧಿ-೧೨. ಪ. ೬೬.
100. C. Hayavadana Rao. Mysore Gazetteer. Vol-V, 1930. P-46.
101. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೭೫.
102. C. Hayavadana Rao. Ibid.
103. ಉದ್ಧೃತ : ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೫೮-೫೯.
104. ಅದೇ .ಪು. ೭೬.
105. C. Hayavadana Rao. Mysore Gazetteer. Vol-V, 1930. P-48. [ಇದೇ ಸಂಗತಿಯನ್ನು ಬ.ನ. ಸುಂದರರಾವ್ ಅವರು (ಬೆಂಗಳೂರಿನ ಇತಿಹಾಸ. ಪು. ೭೬)- ಕ್ರಿ.ಶ. ೧೬೬೩ರಲ್ಲಿ ಶಿವಮೊಗ್ಗಾ ಜಿಲ್ಲಾ, ಚನ್ನಗಿರಿತಾಲ್ಲೂಕು, ಹೋದಿಗೆರೆಯಲ್ಲಿ ಕುದುರೆ ಸವಾರಿ ಮಾಡುತ್ತಿದ್ದಾಗ ಮುಗ್ಗರಿಸಿ ಬಿದ್ದು ಸತ್ತುದಾಗಿ ಸೂಚಿಸಿದ್ದಾರೆ.]

106. C. Hayavadana Rao, Ibid.
107. ಶ್ರೀಮನ್ಮಹಾರಾಜರ ವಂಶಾವಳಿ. ಭಾಗ-೧. (೧೯೧೬. ಮೈಸೂರು ಸಂಸ್ಥಾನ) ಪು. ೧೧೦.
108. ಸೂರ್ಯನಾಥ ಯು. ಕಾಮತ್. ಕರ್ನಾಟಕ ರಾಜ್ಯ ಗೆಜೆಟಿಯರು. ಭಾಗ-೩. ೧೯೮೬. ಪು. ೫೫೩.
109. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೯೬.
110. ಅದೇ. ಪು. ೯೭.
111. ಶಾಸನದ ಪಾಠ : "ಸೌಮ್ಯ ಸಂವತ್ಸರದ ಮಾರ್ಗಶಿರ ಶುದ್ಧ 2 ರಲ್ಲೂ ಶ್ರೀಮತ್ತು ಮಲ್ಲಪುರದ ಮಲ್ಲಿಕಾರ್ಜುನ ದೇವರ ದೇವಮಾನ್ಯಕ್ಕೆ ಯಕೋಜಿರಾಯನ ಬೆಂಗಳೂರು ಮಹಾನಾಡು ಕೇಳಲಿಕ್ಕಾಗಿ ಮೇದರನಿಂಗನಹಳ್ಳಿಯ ಧರ್ಮಕ್ಕೆ ಕೊಟ್ಟನು. ಕೋಟಿಚಂದ್ರ ಸೂರ್ಯರು ಉಳ್ಳಕಾಲವು ಧರ್ಮಕ್ಕೆ ಕೊಟ್ಟನು. ಯಿ ಧರ್ಮಕ್ಕೆ ನಕ್ರ ಮಾಡಿದವರು ಕತ್ತೆಯ ಕಾಗಿಯ ಚಾಂಡಾಲರ ಜಲ್ಮದಲ್ಲಿ ಹುಟ್ಟುವರು. ಮುಸಲಮಾನನಾದವನು ಮಕ್ಕೆಯಲ್ಲಿ ಹಂದಿ ತಿಂದ ಬ್ರಾಹ್ಮಣ ಚೆತ್ರಿ ವೈಸ್ಯ ಸೂದ್ರರು ಕಾಶಿಯಲಿ ಗೋವ ಕೊಂದ ಪಪಕ್ಕೆ ಹೋಗುವ."
112. ಹೇಳಿಕೆ : ಲಿಂಗರಾಜು (೫೬). ಗೋಸಾಯಿಮಠದ ನಿವಾಸಿ. ಬೆಂಗಳೂರು.
113. C. Hayavadana Rao. Mysore Gazetteer, Vol-V. 1930. P-49, 50.
114. ಚಿಕ್ಕದೇವರಾಜಒಡೆಯರು ೧೬೮೭ರಲ್ಲಿ ಬಿಜಾಪುರದ ಸುಲ್ತಾನನ ಕಡೆಯವರಿಂದ ಬೆಂಗಳೂರು ಪಟ್ಟಣವನ್ನು ಮೂರು ಲಕ್ಷ ರೂ.ಗಳ ಶುದ್ಧ ಕ್ರಯಕ್ಕೆ ಕೊಂಡಾಗ, ತಾಲ್ಲೂಕು ಕಛೇರಿಗಾಗಿ ಮೊದಲು ಚಿಕ್ಕಪೇಟೆಯ ಮುಖ್ಯರಸ್ತೆಯಲ್ಲಿದ್ದ ಕರಿಸಿದ್ಧೇಶ್ವರಮಠದ ಆವರಣದಲ್ಲಿ ಸ್ಥಳಾವಕಾಶ ಒದಗಿಸಿದ್ದುದಾಗಿ ತಿಳಿದು ಬರುತ್ತದೆ. (Revenue Commissioner Court- File No : 28-55/1911-12. Date 15.12.1911. Bangalore. P. 114.)
115. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೧೦೧.
116. B. Ramakrishna Rao, Bangalore past and present, P.6.
117. Epigraphia Carnatica. Vol-IX. Bangalore. 118.
118. ಇವರಲ್ಲಿ ಮೊದಲನೆಯ ಪಾರುಪತ್ತೆಗಾರನೇ ದಳವಾಯಿ ದೊಡ್ಡಯ್ಯ, ಕೊನೆಯ ಪಾರುಪತ್ತೆಗಾರನೇ ಕತ್ತಿ ಗೋಪಾಲರಾಜ ಅರಸು ಎಂಬುವನು.
119. ಕಸಬಾ, ವರ್ತೂರು, ಬೇಗೂರು, ವಸಂತಪುರ, ಕೆಂಗೇರಿ, ಯಶವಂತಪುರ, ಯಲಹಂಕ, ಕೃಷ್ಣರಾಜಪುರ, ಅಲಸೂರು, ಹೆಸರುಘಟ್ಟ, ಹೆಬ್ಬಾಳ ಮತ್ತು ನಾಗವಾರ.
120. ಆಗ ಈ ೧೮ ಇಲಾಖೆಗಳನ್ನು ೧೮ ಚಾವಡಿಗಳೆಂದು ಕರೆಯಲಾಗುತ್ತಿತ್ತು. ಅವುಗಳಾವುವೆಂದರೆ-೧. ನಿರೂಪದ ಚಾವಡಿ. ೨. ಆಯಕಟ್ಟಿನ ಚಾವಡಿ, ೩. ವಿಚಾರದಚಾವಡಿ. (ಹೋಬಳಿ), ೪. ವಿಚಾರದ ಚಾವಡಿ (ಪಟ್ಟಣ), ೫. ಸೀಮೆಯ ಕಂದಾಚಾರದ ಚಾವಡಿ, ೬. ಬಾಗಿಲ ಕಂದಾಚಾರದ ಚಾವಡಿ, ೭. ಸುಂಕದಚಾವಡಿ, ೮. ಪೊಮ್ಮಿನಚಾವಡಿ. ೯. ತೋಡಾಯದಚಾವಡಿ, ೧೦. ಪಟ್ಟಣ ಅಷ್ಟಾಗ್ರಾಮದಚಾವಡಿ. ೧೧. ಹೋಬಳಿ ಅಷ್ಟಾಗ್ರಾಮುದಚಾವಡಿ, ೧೨. ಬೆಣ್ಣೆಯಚಾವಡಿ, ೧೩. ಪಟ್ಟಣದಚಾವಡಿ. ೧೪. ಬೇಹಿನಚಾವಡಿ, ೧೫. ಸಮುಖದಚಾವಡಿ, ೧೬. ದೇವಸ್ಥಾನದ ಚಾವಡಿ, ೧೭. ಕಬ್ಬಿಣದ ಚಾವಡಿ, ೧೮. ಹೊಗೆಸೊಪ್ಪಿನ ಚಾವಡಿ.
121. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೧೦೪.
122. ಶ್ರೀಮನ್ಮಹಾರಾಜರ ವಂಶಾವಳಿ. ಭಾಗ-೧. ಮೈಸೂರು ಗೌರ್ನಮೆಂಟ್ ಪ್ರೆಸ್. ೧೯೧೬, ಪುಟ ೧೨೦. ೧೨೧, ಮತ್ತು ೧೨೫.
123. C. Hayavadana Rao, Mysore Gazetteer, Vol-V. 1930. P-50, 51.
124. ಹೈದರನು ಕ್ರಿ.ಶ. ೧೬೮೦ರಲ್ಲಿ ದಕ್ಷಿಣದ ಆರ್ಕಾಟನಲ್ಲಿ ನಡೆದ ಭೀಕರ ಕದನದಲ್ಲಿ ಆಂಗ್ಲರ ಸೇನಾನಿ ಕರ್ನಲ್ ಬೈಲಿಯನ್ನು ಸೆರೆಹಿಡಿದನು. ಆಗ ಆತನನ್ನು ತಂದು ಬೆಂಗಳೂರಿನ ಕೋಟೆಯೊಳಗೆ ೩ ವರ್ಷಗಳ ಕಾಲ ಸೆರೆಯಲ್ಲಿ ಇರಿಸಿದ್ದುದಾಗಿ ಅಲ್ಲಿನ ಗುಹೆಯಂತಿರುವ ಸಣ್ಣ ಕೊಠಡಿಯ ಮೇಲಿನ ಶಿಲಾಫಲಕದಿಂದ ತಿಳಿದು ಬರುತ್ತದೆ.
125. M. Fazlul Hasan. Bangalore Through the Centuries. P. 83.
126. ಬ.ನ. ಸುಂದರರಾವ್. 'ಬೆಂಗಳೂರು ಬೆಳೆದುಬಂದ ಬಗೆ'. ಶ್ರೀ ಕೆ.ಎಂ. ನಂಜಪ್ಪ ಅಭಿನಂದನಾಗ್ರಂಥ. (೧೯೮೬) ಪು. ೫೯.
127. ಉದ್ಧೃತ : ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೧೮೨.
128. ಈ ಸಂದರ್ಭದಲ್ಲಿ ಕೋಟೆಯ ವೆಂಕಟರಮಣಸ್ವಾಮಿ ದೇಗುಲವು ಸಂಪೂರ್ಣ ನಾಶವಾಗಿತ್ತೆಂದೂ ಮುಂದೆ ಕ್ರಿ.ಶ. ೧೮೦೦ರಲ್ಲಿ ದಿವಾನ್ ಪೂರ್ಣಯ್ಯನಿಂದ ಪುನರ್‌ನಿರ್ಮಾಣವಾದ ಸೂಚನೆಗಳಿವೆ. (ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೭೭). ವಿಶಾಲವಾದ ಮೈದಾನದಲ್ಲಿ ನಿರ್ಮಾಣವಾಗಿದ್ದ ಈ ಭವ್ಯ ಅರಮನೆಯ ಸುತ್ತಲಿನ ಭಾಗಗಳನ್ನು ಆಂಗ್ಲರ ಕಾಲದಲ್ಲಿ ಕೆಡವಿ ಮಧ್ಯಭಾಗವನ್ನು ಮಾತ್ರ ಉಳಿಸಿಕೊಳ್ಳಲಾಯಿತು. ಅರಮನೆಯೊಳಗೆ ಸಿಕ್ಕ ಶಾಸನದ ಪ್ರಕಾರ ಈ ಅರಮನೆಯು ಸುಖದ ಆಗರವಾಗಿತ್ತು. ಸ್ವರ್ಗಕ್ಕೆ ಕಿಚ್ಚಾಗಿತ್ತು. (Mysore Gazetteer, Vol-V. P-98.)
129. 'ದೇವಾದಾಯ' : ದೇವಸ್ಥಾನಕ್ಕೆ ದಾನ ಮಾಡಿದ ಭೂಮಿ ಅಥವಾ ಜಮೀನು. ಇದನ್ನು ದೇವಮಾನ್ಯವೆಂದೂ ಕರೆಯುವುದುಂಟು. (ಕನ್ನಡ ನಿಘಂಟು.ಸಂ-೪. ಕನ್ನಡ ಸಾಹಿತ್ಯ ಪರಿಷತ್ತು. ಪು. ೪೦೬೭)

130. 'ಬ್ರಹ್ಮಾದಾಯ': ಬ್ರಾಹ್ಮಣರಿಗೆ ಅದರಲ್ಲೂ ಪುರೋಹಿತ ಅಥವಾ ಅರ್ಚಕರಿಗೆ ದಾನವಾಗಿ ನೀಡಿದ ಭೂಮಿ. ಇದನ್ನು ಬ್ರಹ್ಮದೇಯವೆಂದೂ ಕರೆಯುವುದುಂಟು (ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು. ೬೬೮೦)
131. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೦೭.
132. ಅದೇ. ಪು. ೨೬೨.
133. C. Hayavadana Rao. Mysore Gazetteer, Vol-V. 1930. P.49, 51.
134. B. Ramakrishna Rao. Bangalore past and present. p.9.
135. C. Hayavadana Rao. Mysore Gazetteer. Vol-V. P. 99.
136. ಉದ್ಧೃತ : ಬ. ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೮೯.
137. ಅದೇ. ಪು. ೩೦೨.
138. ಅದೇ. ಪು. ೨೭೭.
139. Muzrai File No:21/1906. Sl.No: 1-4. p.7. (Goduraiah Mutt).
140. ಶ್ರೀಮನ್ಮಹಾರಾಜರ ವಂಶಾವಳಿ. ಭಾಗ-೨. ಮೈಸೂರು ಪ್ರೆಸ್. ೧೯೨೨. ಪು. ೨೪.
141. ಅದೇ. ಪು. ೨೬.
142. ಅದೇ. ಪು. ೪೩.
143. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೯೮.
144. ಮುಮ್ಮಡಿಕೃಷ್ಣರಾಜಒಡೆಯರ ಕಾಲದಲ್ಲಿ ಬೆಂಗಳೂರು ಪಟ್ಟಣಕ್ಕೆ ಹೊಂದಿಕೊಂಡಿದ್ದ ೧೮ ವೀರಶೈವ ಮಠಗಳಿಗೆ ಭೂದಾನ ನೀಡಲಾಗಿತ್ತು. ಅವುಗಳಾವುವೆಂದರೆ - ಬೇಲಿಮಠ, ಗುರುವಣ್ಣದೇವರಮಠ, ತಿಪ್ಪಶೆಟ್ಟಿಮಠ, ಗೋದೂರಯ್ಯಮಠ, ದೊಡ್ಡಮಠ, ದೇಶದಮಠ, ನಿರಂಜನಯ್ಯನಮಠ, ಜಂಗಮಮಠ ಮಾಮೂಲುಪೇಟೆ, ಜಂಗಮಮಠ ಸುಂಕೇನಹಳ್ಳಿ, ಜಂಗಮಮಠ ಶಿವನಹಳ್ಳಿ, ಕರಿಸಿದ್ಧೇಶ್ವರಮಠ, ಬಸವಲಿಂಗಶಾಸ್ತ್ರಿಮಠ, ಕೊಳಲ ಮಠ, ಮರಿಸ್ವಾಮಿಮಠ, ಮಹಾಲಿಂಗಸ್ವಾಮಿಮಠ, ಅಂಕಲೇಶ್ವರಮಠ, ಗವಿಮಠ, ವಿಭೂತಿಪುರದಮಠ. (Register of Muzrai Institution in Bangalore Taluk-1902. P.180-185)
145. ೧೮೨೨ರಲ್ಲಿ ಮುಮ್ಮಡಿಕೃಷ್ಣ ರಾಜಒಡೆಯರಿಂದ ಅರಳೆಪೇಟೆಯ ವೀರಭದ್ರ ದೇವರಿಗೆ ನೀಡಿರುವ ಭೂದಾನ ಸನ್ನದು ಲಭ್ಯವಾಗಿದೆ.
146. ಶ್ರೀಮನ್ಮಹಾರಾಜರ ವಂಶಾವಳಿ. ಭಾಗ-೨. ಮೈಸೂರು ಪ್ರೆಸ್. ೧೯೨೨. ಪು. ೧೦೧.
147. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೨೪.
148. ಶ್ರೀಮನ್ಮಹಾರಾಜರ ವಂಶಾವಳಿ. ಭಾಗ-೨. ಮೈಸೂರು ಪ್ರೆಸ್. ೧೯೨೨. ಪು. ೧೦೮-೧೧೨.
149. ಅನಂತರ ಬೆಂಗಳೂರು ಜನಸಂಖ್ಯಾ ಬೆಳವಣಿಗೆಯ ಒಂದು ನೋಟ:

| | | | |
|---|---|---|---|
| 1862 | 36,302 | 1941 | 4,06,760 |
| 1881 | 62,317 | 1951 | 7,78,977 |
| 1891 | 80,285 | 1961 | 11,99,931 |
| 1901 | 1,59,046 | 1971 | 16,53,779 |
| 1911 | 1,89,485 | 1981 | 29,13,537 |
| 1921 | 2,37,496 | 1991 | 40,00,000 |
| 1931 | 3,06,470 | | |

150. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೫೯-೩೬೨.
151. ಅದೇ. ಪು. ೪೦೧, ೪೧೬, ೪೨೧.
152. ಸೂರ್ಯನಾಥ ಯು. ಕಾಮತ್. ಕರ್ನಾಟಕ ರಾಜ್ಯ ಗೆಜೆಟಿಯರು, ಭಾಗ-೩. ೧೯೮೬. ಪು. ೫೫೩.

# ಅಧ್ಯಾಯ - ಮೂರು

# ಮಠಗಳು

---

# ಅಧ್ಯಾಯ - ಮೂರು
# ೩. ಮಠಗಳು

### ೩.೧. ಅರ್ಥ

ಮಠವೆಂದರೆ ಮೂಲತಃ ಮುನಿಗಳ ವಾಸ ಸ್ಥಾನವೆಂದರ್ಥ. ಸಂಸ್ಕೃತದ ನಿಘಂಟುಕಾರನಾದ ಅಮರಸಿಂಹನು ಮಠಃ ಛಾತ್ರಾದಿ ನಿಲಯಃ[1] ಎಂದಿದ್ದಾನೆ. ಅಂದರೆ ವಿದ್ಯಾರ್ಥಿಗಳು ವಾಸಿಸುವ ಸ್ಥಳವೇ ಮಠ. ಇಲ್ಲಿ ಗುರುಗಳೂ, ಶಿಷ್ಯರೂ, ಸನ್ಯಾಸಿಗಳೂ, ಬ್ರಹ್ಮಚಾರಿಗಳೂ, ವಾಸಮಾಡುತ್ತಿದ್ದರು. ಇಲ್ಲಿ ವಿದ್ಯೆ, ಜ್ಞಾನ, ಮತ, ಧರ್ಮಗಳ ಪ್ರಸಾರಕಾರ್ಯ ನಡೆಯುತ್ತಿತ್ತು.[2]

ವೇದಗಳ ಕಾಲದಲ್ಲಿ ವನವಾಸಿಗಳಾಗಿದ್ದ ಋಷಿ ಮುನಿಗಳು ತಮ್ಮ ಆಶ್ರಮಗಳಲ್ಲಿ ವಿದ್ಯಾರ್ಥಿಗಳಿಗಾಗಿ ಪರ್ಣಶಾಲೆಗಳನ್ನು ರಚಿಸಿ ಅಲ್ಲಿ ಅವರಿಗೆ ವಿದ್ಯೆ ಕಲಿಸುತ್ತಿದ್ದರು. ಇವೇ 'ಗುರುಕುಲ'ಗಳು. ಈ ಗುರುಕುಲದ ಪರ್ಯಾಯ ನಾಮವೇ ಮಠ.[3] ಪ್ರಾಚೀನ ಭಾರತದಲ್ಲಿ ತತ್ವಚಿಂತನೆ ಮತ್ತು ಧರ್ಮಬೋಧನೆ ಅರಣ್ಯಗಳ ನಡುವಿನ ಆಶ್ರಮಗಳಲ್ಲೇ ನಡೆಯುತ್ತಿತ್ತು. ಈ ಮಾದರಿಯ ವಿಧಾನವನ್ನು ಪ್ರಾಚೀನ ಗ್ರೀಸ್‌ನಲ್ಲಿ 'ಜಿಮ್ನಾಶಿಯಂ' ಎಂದು ಕರೆಯಲಾಗುತ್ತಿತ್ತು.[4]

'ಮಠ' ಎಂಬ ಪದಕ್ಕೆ ಆಂಗ್ಲ ಭಾಷೆಯಲ್ಲಿ 'Monastery' ಎಂಬ ಪದವಿದೆ. ಇದು ಗ್ರೀಕ್ ಮೂಲದ 'Monachos' ನಿಂದ ಬಂದಿದ್ದು, 'Living alone' ಎಂಬ ಅರ್ಥವನ್ನು ಒಳಗೊಂಡಿದೆ.[5] 'ಏಕಾಂತತೆ' ಅಥವಾ 'ಮುಕ್ತತೆ' ಎಂಬುದೇ ಇದರ ತಾತ್ಪರ್ಯ. 'ಮ್ಯಾಕ್‌ಡೊನೆಲ್'ರ ಸಂಸ್ಕೃತ ಶಬ್ದಕೋಶದಲ್ಲಿ ಒಬ್ಬ ಸನ್ಯಾಸಿಯ ಇಲ್ಲವೆ ವಿದ್ಯಾರ್ಥಿಯ ಕುಟೀರ; ಒಂದು ಧಾರ್ಮಿಕ ಪಾಠಶಾಲೆ[6] ಎಂದು ವ್ಯಾಖ್ಯಾನಿಸಲಾಗಿದೆ. ''ಶಬ್ದಕಲ್ಪದ್ರುಮ'' ದಲ್ಲಿ ಮಠವನ್ನು 'ಆಧ್ಯಾತ್ಮ ಗುರುವೊಬ್ಬನ ನಿವಾಸ ಸ್ಥಾನ; ವಿದ್ಯಾಭ್ಯಾಸಕ್ಕಾಗಿ ಅಲ್ಲಿಗೆ ಬರುವವರಿಗೆ ಆಶ್ರಯ ಕೊಡುವ ಸ್ಥಾನ' ಎಂದು ವಿವರಿಸಲಾಗಿದೆ.[7] ನ್ಯಾಯಾಂಗದ ಪರಿಭಾಷೆಯಲ್ಲಿ ಹೇಳುವುದಾದರೆ ಮಠವು ಸನ್ಯಾಸಿಗಳ ಸಂಸ್ಥೆ. ಒಬ್ಬ ಉನ್ನತ ಅಧಿಕಾರಿ ಇದರ ಅಧ್ಯಕ್ಷನಾಗಿರುತ್ತಾನೆ. ಒಂದು ವಿಶಿಷ್ಟ ಸಂಪ್ರದಾಯದ ಸನ್ಯಾಸಿಗಳ ಉಪಯೋಗ ಹಾಗೂ ಅನುಕೂಲಕ್ಕಾಗಿ ಅದು ಸ್ಥಾಪಿತವಾಗಿರುತ್ತದೆ.[8] ಒಟ್ಟಾರೆ ಮಠವೆಂದರೆ ಸನ್ಯಾಸಿಗಳು ವಾಸಿಸುವ ಸ್ಥಳ ಅಥವಾ ಕುಟೀರ; ತಪಸ್ಸಿನ, ಜ್ಞಾನಾನ್ವೇಷಣೆಯ ಕೇಂದ್ರ. ಕಾಲಕ್ರಮೇಣ ಆಶ್ರಮ, ಗುರುಮನೆ, ಗುರುಕುಲಗಳಾಗಿ ಮಾರ್ಪಟ್ಟು ಮುಂದೆ ವಿದ್ಯಾಪ್ರಸಾರ, ಜ್ಞಾನಪ್ರಸಾರ, ಮತಪ್ರಸಾರ ಮಾಡುವ ಕೇಂದ್ರವಾಗಿ ಬೆಳೆಯಿತು.

### ೩.೨. ಮಠಗಳ ಹಿನ್ನೆಲೆ

ಭಾರತೀಯ ಇತಿಹಾಸದಲ್ಲಿ ಕ್ರಿ.ಪೂ. ೫ನೆಯ ಶತಮಾನದಷ್ಟು ಪುರಾತನ ಕಾಲದಿಂದಲೇ ಗುರುಕುಲ ಗಳಿದ್ದುದಾಗಿ ತಿಳಿದು ಬರುತ್ತದೆ. ರಾಮಾಯಣದ ಕಾಲದಲ್ಲಿ ಅನೇಕ ಋಷಿಮುನಿಗಳ ಆಶ್ರಮಗಳು, ತಪೋಕೇಂದ್ರಗಳು ಕರ್ನಾಟಕದಲ್ಲಿದ್ದುವು. ಮುಂದೆ ಪ್ರಾಚೀನ ಕಾಲದ ಬೌದ್ಧ ವಿಹಾರಗಳು ಹಾಗೂ ಜೈನಬಸದಿಗಳು ಇಂದಿನ ಮಠಗಳ ಸ್ವರೂಪವನ್ನೇ ಹೊಂದಿದ್ದವು.[9] ಅಶೋಕನ ಕಾಲ (ಕ್ರಿ.ಪೂ. ೩ನೆಯ ಶತಮಾನ)ಕ್ಕಾಗಲೇ ಬೌದ್ಧವಿಹಾರಗಳು ಹುಟ್ಟಿದ್ದಿರ ಬೇಕು.[10] ಈ ಹಿನ್ನೆಲೆಯಲ್ಲಿ ''ಭಾರತೀಯ ಇತಿಹಾಸದಲ್ಲಿ ಬೌದ್ಧ ಧರ್ಮದ ನವೋದಯದ ಕಾಲಕ್ಕೆ ಸನ್ಯಾಸಿ ಮಠಗಳು ಅಸ್ತಿತ್ವದಲ್ಲಿದ್ದ ಬಗೆಗೆ ಸ್ಪಷ್ಟ ಸೂಚನೆಗಳು ದೊರೆಯುತ್ತವೆ. ಮಠ ಇಲ್ಲವೆ ಸನ್ಯಾಸಿಗಳ ನಿವಾಸಕ್ಕೆ ಬೌದ್ಧರು 'ವಿಹಾರ' ಅಥವಾ 'ಸಂಘ' ಎನ್ನುತ್ತಿದ್ದರು''

ಎಂಬ ಕೆರ್ನ್ಸ್ ಅವರ ಮಾತುಗಳು[11] ಮೇಲಿನ ಸೂಚನೆಗೆ ಪೋಷಕವಾಗಿವೆ. ಬೌದ್ಧ ಧರ್ಮದಲ್ಲಿ ಮಠಗಳಿಗೆ ಉನ್ನತವಾದ ಸ್ಥಾನವಿತ್ತು. ಬೌದ್ಧ ಸನ್ಯಾಸಿಗಳನ್ನು ಪರಿವ್ರಾಜಕರೆಂದು ಕರೆಯುತ್ತಿದ್ದರು. ಮನುಷ್ಯ ತನ್ನ ಕೈಯಲ್ಲಿ ಕಮಲ ಹಿಡಿದಿರುವುದು ಬೌದ್ಧ ಸಂಘದ ಚಿನ್ಹೆ. ಇದು ಸ್ವಚ್ಛತೆಯ ಸ್ವರೂಪ. ಬೌದ್ಧ ಮಠಗಳನ್ನು ವಿಹಾರಗಳೆಂದು ಕರೆಯಲಾಗುತ್ತಿತ್ತು. ಈ ಸಂಘ ಅಥವಾ ವಿಹಾರಗಳು ಹಿಂದಿನ ಆಶ್ರಮ ಅಥವಾ ಗುರುಕುಲಗಳ ರೀತಿ ಅರಣ್ಯ ಕೇಂದ್ರೀಕೃತವಾಗಿರದೆ ಪಟ್ಟಣ ಕೇಂದ್ರೀಕೃತವಾಗಿದ್ದುದು ಒಂದು ವಿಶೇಷವಾಗಿತ್ತು.

ಧರ್ಮಕ್ಕೆ ಸಂಘಟನಾ ಸ್ವರೂಪ ಬಂದದ್ದೇ ಬೌದ್ಧ ಹಾಗೂ ಜೈನ ಧರ್ಮಗಳ ಕಾಲದಲ್ಲಿ.[12] ಮಠಗಳಂತಹ ಧಾರ್ಮಿಕ ಕೇಂದ್ರಗಳು ಪ್ರಾರಂಭವಾದದ್ದೇ ಆಗ. ಜನಸಾಮಾನ್ಯರನ್ನು ಗಮನದಲ್ಲಿ ಇರಿಸಿಕೊಂಡಿದ್ದ ಈ ಧರ್ಮಗಳು 'ಸಂಘ' ಸ್ವರೂಪದ ಧರ್ಮೋಪದೇಶ ಕೈಗೊಂಡವು.[13] ಮುಂದೆ ವೈದಿಕ ಮತ್ತು ಅವೈದಿಕ ಪಂಥಗಳು ಕೂಡ ಇಂಥದೇ ಸಂಘಟನೆಯನ್ನು ಅನುಸರಿಸಿ ಧರ್ಮಪ್ರಚಾರವನ್ನು ಕೈಗೊಂಡವು.

ಮಠಗಳ ಇತಿಹಾಸವನ್ನು ಗುರುತಿಸುವಾಗ ಕ್ರಿ.ಶ. ೮ನೆಯ ಶತಮಾನವು ಮಹತ್ವದ ಘಟ್ಟವಾಗಿದೆ. ಇದು ಬೌದ್ಧ ಮತ್ತು ಜೈನ ಧರ್ಮಗಳ ವಿರುದ್ಧ ಹಿಂದೂ ಧರ್ಮವು ಪುನರುತ್ಥಾನಗೊಂಡ ಕಾಲ. ಹಿಂದೂ ಧರ್ಮದ ಪರಂಪರೆಯಲ್ಲಿ ಪ್ರಪ್ರಥಮವಾಗಿ ಒಂದು ನಿರ್ದಿಷ್ಟ ಮಾದರಿಯ ಮಠಗಳನ್ನು[14]ನಿರ್ಮಾಣ ಮಾಡಿದವರು ಶಂಕರಾಚಾರ್ಯರು.[15] ಇವರು ಬೌದ್ಧ ಧರ್ಮವನ್ನು ವಿರೋಧಿಸಿದರೂ, ಬುದ್ಧನು ಉಪದೇಶಿಸಿದ ಸನ್ಯಾಸದ, ಆದರ್ಶದ ಪರವಾಗಿದ್ದರು. ಹಿಂದೂ ಸಂಸ್ಕೃತಿಯಲ್ಲಿ ಬೌದ್ಧ ಸನ್ಯಾಸಿ ಸಂಸ್ಥೆಗಳನ್ನು ಅಳವಡಿಸಿ, ಅವಕ್ಕೆ ವೈದಿಕ ಹೊದಿಕೆಯನ್ನು ಕೊಟ್ಟರು.[16] ಹಿಂದೂ ಧರ್ಮದಲ್ಲಿದ್ದ ಕಳಂಕ ರೂಪದ ಕೀಳು ಪದ್ಧತಿಗಳನ್ನು ಮೂಲೋತ್ಪಾಟನೆ ಮಾಡಿ, ಹಿಂದೂ ಧರ್ಮದ ತತ್ವ ಪ್ರಚಾರ ಮಾಡುವುದು ಇವರ ಮಠಗಳ ಮುಖ್ಯ ಉದ್ದೇಶವಾಗಿತ್ತು.

ಇತ್ತೀಚೆಗೆ ಭಾರತೀಯ ಮಠಗಳನ್ನು ಕುರಿತು ಅಧ್ಯಯನ ನಡೆಸಿದ Hindu Religious Endowment Commission ಪ್ರಕಾರ ''ಕೇವಲಾದ್ವೈತ ಸಿದ್ಧಾಂತ ಪ್ರವರ್ತಕರೂ, ಬೌದ್ಧ ಮತ್ತು ಜೈನ ಧರ್ಮಗಳ ಪ್ರಭಾವವನ್ನು ಬಹುಮಟ್ಟಿಗೆ ಕಡಿಮೆ ಮಾಡಿ ವೇದೋಪನಿಷತ್ ಪ್ರತಿಪಾದಿತ ಧರ್ಮವನ್ನು ಪುನರುತ್ಥಾನಗೊಳಿಸಿದವರೂ ಆದ, ಆದಿ ಶಂಕರಾಚಾರ್ಯರೇ ಮೊಟ್ಟಮೊದಲು ಇಂದಿನ ಮಾದರಿ ಮಠಗಳನ್ನು ಸ್ಥಾಪಿಸಲಾರಂಭಿಸಿದವರು.''[17] ಮೊದಲಿಗೆ ಭಾರತದಾದ್ಯಂತ ತಮ್ಮ ವ್ಯಾಪಕತೆಯನ್ನು ಹರಡಿದ್ದ ಬೌದ್ಧ ಮತೀಯರು ಬೌದ್ಧವಿಹಾರ ಹಾಗೂ ಸಂಘಾರಾಮಗಳನ್ನು ನಿರ್ಮಿಸಿದ್ದರು. ಇವೇ ಮುಂದೆ ಹಿಂದೂ ಮತೀಯರು ಮಠಗಳನ್ನು ನಿರ್ಮಿಸಿಕೊಳ್ಳಲು ಮೂಲ ಪ್ರೇರಣೆಗಳಾಗಿದ್ದಿರಬೇಕು. ಮುಂದೆ ಆದಿ ಶಂಕರಾಚಾರ್ಯರನ್ನು ಅನುಸರಿಸಿ ರಾಮಾನುಜ, ಮಧ್ವ ಮತ್ತು ಶೈವ ಮೊದಲಾದ ಬೇರೆ ಬೇರೆ ಮತ ಧರ್ಮಗಳ ಮಠಗಳು ನಿರ್ಮಾಣವಾದುದಾಗಿ ವರದಿಯಲ್ಲಿ ಹೇಳಿದೆ. ಆದರೆ ಆದಿಶಂಕರಾಚಾರ್ಯರಿಗಿಂತ ಬಹಳ ಹಿಂದೆಯೇ (ಕ್ರಿ.ಶ. ೬ನೆಯ ಶತಮಾನಕ್ಕಿಂತ ಮುಂಚೆ) ಆಗಮ ಪ್ರಾಮಾಣ್ಯದ ರೀತ್ಯ ವೀರಶೈವ ಪಂಚಾಚಾರ್ಯರ ಪಂಚಪೀಠಗಳಿದ್ದುದಾಗಿ ಪ್ರತಿಪಾದನೆಗಳಿವೆ.[18] ಬಹುಶಃ ಇದೇ ವೇಳೆಗೆ ಭರತ ಖಂಡದಲ್ಲೇ ಬಹು ಪ್ರಾಚೀನ ಧರ್ಮಗಳಲ್ಲೊಂದಾದ ಶೈವ ಅಥವಾ ಲಾಕುಳ ಶೈವರಲ್ಲಿ ಮಠಗಳಿದ್ದುದಕ್ಕೆ ಸಾಕಷ್ಟು ಆಧಾರಗಳಿವೆ.[19] ಬಹು ದೊಡ್ಡ ದೇವಾಲಯಗಳ[20] ನಿರ್ಮಾಣಕಾರರಾಗಿದ್ದ ಶೈವ ಯತಿಗಳು ದೇವಾಲಯಗಳಲ್ಲೆ ವಾಸಮಾಡುತ್ತಾ ಆಧ್ಯಾತ್ಮ ಸಾಧನೆಯ ಜೊತೆಗೆ ವಿದ್ಯಾಪ್ರಸಾರವನ್ನೂ ನಡೆಸುತ್ತಿದ್ದರು. ಆಗಿನ ಅವರ ದೇವಸ್ಥಾನವೇ ಮಠವಾಗಿ, ಮಠವೇ ಶಾಲೆಯೂ ಆಗಿತ್ತು.[21] ಕರ್ನಾಟಕದಲ್ಲಿ ಅಂತಹ ಲಾಕುಳ ಶೈವರ ಅತ್ಯಂತ ಪ್ರಾಚೀನ ದೇವಾಲಯ ಬಾದಾಮಿಯ ಬಳಿಯಿರುವ ಮಹಾ ಕೂಟೇಶ್ವರ (ಮಕುಟೇಶ್ವರ). ಇದರ ಕಾಲ ಕ್ರಿ.ಶ. ೬೦೨.[22] ಈ ಹಿನ್ನೆಲೆಯಲ್ಲಿ ''ಕರ್ನಾಟಕದಲ್ಲಿ ಆರನೆಯ ಶತಮಾನದ ವೇಳೆಗೆ ಶೈವಧರ್ಮವಿತ್ತು. ಬೌದ್ಧ ಧರ್ಮೀಯರ ವಿಹಾರಗಳು ಸಂಘಾರಾಮಗಳಿಂದ ಪ್ರಭಾವಿತವಾಗಿದ್ದ ಶೈವ ಮಠಗಳು ಕ್ರಿ.ಶ. ೭ನೆಯ ಶತಮಾನದ ವೇಳೆಗಾಗಲೇ ಅಸ್ತಿತ್ವದಲ್ಲಿದ್ದುವು,'' ಎಂಬ ಕಪಟರಾಳ ಕೃಷ್ಣರಾಯರ ಮಾತುಗಳು[23] ಒಪ್ಪತಕ್ಕವೇ ಆಗಿವೆ.

ಕ್ರಿ.ಶ. ೧೦-೧೨ನೆಯ ಶತಮಾನಗಳಲ್ಲಿ ಲಾಕುಳ ಶೈವ ಪರಂಪರೆಯ ಅನೇಕ ದೇವಾಲಯ[24]- ಮಠಗಳು ನಾಡಿನ

ನಾನಾಭಾಗಗಳಲ್ಲಿ ಹರಡಿದ್ದುದಕ್ಕೆ ಶಾಸನಾಧಾರಗಳಿವೆ. ಮಲಕಾಪುರದ ಶಾಸನ (ಕ್ರಿ.ಶ. ೧೨೬೧)ದ ಪ್ರಕಾರ-ಕ್ರಿ.ಶ. ೧೧ನೆಯ ಶತಮಾನದ ಪೂರ್ವಾರ್ಧದಲ್ಲಿ ಪ್ರಾರಂಭವಾಗಿದ್ದ ಮಯೂರ ಮಠ ಮತ್ತು ಗೋಳಕಿ ಮಠಗಳು[25] ಪ್ರಾಚೀನ ಚೇದಿ ಪ್ರಾಂತ್ಯದಲ್ಲಿ ಕ್ರಿ.ಶ. ೧೩ನೆಯ ಶತಮಾನದವರೆಗೂ ತಮ್ಮ ಪರಂಪರೆಯನ್ನು ಮುನ್ನಡೆಸಿಕೊಂಡು ಬಂದಿದ್ದವು.[26] ಲಾಕುಳ ಶೈವರ ಬಹು ಮುಖ್ಯ ಕೇಂದ್ರ ಬಳ್ಳಿಗಾವೆಯ ಕೇದಾರೇಶ್ವರ ಮಠ ಅಥವಾ ಕೋಡಿಯಮಠ.[27] ಇದು ಕ್ರಿ.ಶ. ೧೧-೧೨ನೆಯ ಶತಮಾನಗಳಲ್ಲಿ ಪ್ರಸಿದ್ಧ ಶೈವ ಕೇಂದ್ರವಾಗಿ ದಕ್ಷಿಣದ ಕೇದಾರವೆಂದೇ ಪ್ರಸಿದ್ಧಿಯಾಗಿತ್ತು.[28] ನೈಷ್ಠಿಕ ಬ್ರಹ್ಮಚಾರಿಗಳ[29] ವಾಸಸ್ಥಾನವೂ ಆಗಿತ್ತು.[30]

ಪ್ರಾಚೀನ ಕರ್ನಾಟಕದಲ್ಲಿ ದೇವಾಲಯ ಮತ್ತು ಮಠಗಳಿಗೆ ನಿಕಟವಾದ ಸಂಬಂಧವಿತ್ತು. ಸಾಮಾನ್ಯವಾಗಿ ಇಲ್ಲಿ ದೇವಾಲಯವೇ ಮುಖ್ಯವಾಗಿದ್ದು ಮಠ ಅದರ ಅಂಗವಾಗಿತ್ತು. ಮಠವಿದ್ದುದು ದೇವಾಲಯದ ಮುಖ್ಯಸ್ಥರಾಗಿದ್ದ ಮುನಿ (ಸ್ಥಾನಪತಿ)ಗಳ ವಾಸಸ್ಥಳವಾಗಿ ಮಾತ್ರ.[31] ಹೀಗಾಗಿ ಮಠಗಳ ಹೆಸರು ಹೇಳುವಾಗ ದೇವಾಲಯಗಳ ಹೆಸರನ್ನು ಸೂಚಿಸಿಯೇ ಹೇಳಲಾಗುತ್ತಿತ್ತು. ಉದಾ : ಮುಳುಗುಂದದ ನಗರೇಶ್ವರದ ಮಠ, ವಿಕ್ರಮಪುರದ ಶ್ರೀ ಸ್ವಯಂಭು ನಗರೇಶ್ವರ ದೇವರಮಠ, ಶ್ರೀ ಪರ್ವತದಗಸ್ತ್ಯೇಶ್ವರದ ಮಠ ಇತ್ಯಾದಿ. ಕರ್ನಾಟಕದಲ್ಲಿ ಲಾಕುಳ ಶೈವಧರ್ಮವು ಪ್ರಚಾರವಾದ ಬಳಿಕವೆ ( ಕ್ರಿ.ಶ. ೬-೭ನೆಯ ಶತಮಾನದಿಂದ ಈಚೆಗೆ) ಈ ಬಗೆಯ ದೇವಸ್ಥಾನದ ಅಂಗವಾದ ಮಠಗಳು ಕಾಣಿಸಿಕೊಳ್ಳಲಾರಂಭಿಸಿದ್ದು.[32]

ಶೈವಗುರುಗಳು ವಾಸವಾಗಿದ್ದ ದೇವಸ್ಥಾನಗಳೇ 'ಸ್ಥಾನ'ಗಳಾಗಿದ್ದುವು. ದೇವಾಲಯದ ಮುಖ್ಯಸ್ಥನನ್ನು 'ಸ್ಥಾನಿಕ' ಅಥವಾ 'ಸ್ಥಾನಪತಿ' ಎಂದು ಕರೆಯಲಾಗುತ್ತಿತ್ತು. ಇಂತಹ ಸ್ಥಾನಪತಿಯು ಸನ್ಯಾಸಿಯಾಗಿದ್ದು, ದೇವಸ್ಥಾನದಲ್ಲಿ ಅಥವಾ ಅದಕ್ಕೆ ಸಂಬಂಧಿಸಿದ ಮಠದಲ್ಲಿ ವಾಸಿಸುತ್ತಾ, ಅದರ ಆಡಳಿತದ ಮೇಲ್ವಿಚಾರಕನಾಗಿ ತಪಸ್ವಿಯಾಗಿ, ವಿದ್ಯಾದಾನ ಮಾಡುತ್ತಿದ್ದನು. ಇಂತಹ ಶೈವ ಸನ್ಯಾಸಿಯನ್ನು ಸ್ಥಾನಾಚಾರ್ಯ[33]ನೆಂದೂ; ಇವರಿದ್ದ ಕೇಂದ್ರಗಳಿಗೆ ನೈಷ್ಠಿಕಸ್ಥಾನ[34]ವೆಂದೂ ಕರೆಯಲಾಗುತ್ತಿತ್ತು.[35] ಈ ಪ್ರಾಚೀನ ದೇವಾಲಯ-ಮಠಗಳು ಏಕಕಾಲದಲ್ಲಿ ಸಮಾಜೊಧಾರ್ಮಿಕ ಸೇವಾ ಕ್ಷೇತ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದುದು ಸಾಮಾನ್ಯವಾಗಿತ್ತು. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಲಾಕುಲೀಶ, ಪಾಶುಪತ, ಕಾಳಾಮುಖ, ಶೈವಮುನಿಗಳು ಸ್ಥಾನಪತಿಗಳಾಗಿದ್ದ ಸಮಯದಲ್ಲಿ ತಾವಿದ್ದ ದೇವಾಲಯಗಳನ್ನೇ ಮಠಗಳನ್ನಾಗಿ ಮಾತ್ರವಲ್ಲದೆ, ಶ್ರೇಷ್ಠ ಧಾರ್ಮಿಕ ಮತ್ತು ಶೈಕ್ಷಣಿಕ ಕೇಂದ್ರಗಳನ್ನಾಗಿ ಮಾಡಿದ್ದರು.[36] ಸುಮಾರು ೧೧ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೆ ಇಂತಹ ಅಪಾರ ಸಂಖ್ಯೆಯ ಶೈವಮಠಗಳು ಉತ್ತುಂಗಸ್ಥಿತಿಯಲ್ಲಿದ್ದವು.[37] ಈ ಮಧ್ಯೆ ಬಸವಾದಿ ಪ್ರಮಥ'ರ ಉತ್ಕರ್ಷದ ಫಲವಾಗಿ ವೀರಶೈವ ಧರ್ಮದೊಂದಿಗೆ ಸರಿಸಾಟಿಯಾಗಿ ನಿಲ್ಲಲಾಗದ ಬಹುತೇಕ ಶೈವಮಠಗಳು ವೀರಶೈವಮಠಗಳಾಗಿ ಪರಿವರ್ತನೆ ಯಾಗಿಬಿಟ್ಟವು.[38] ಉದಾಹರಣೆಗೆ ಬೆಳಗಾವಿ ಜಿಲ್ಲೆಯ ಪೂವಲ್ಲಿ(ಹೂಲಿ) ಮಠವು ಹಿಂದೆ ರಾಜಮಹಾರಾಜರಿಂದ ಪೂಜಿತರಾಗಿದ್ದ ಶೈವಗುರುಗಳ ಪ್ರಸಿದ್ಧ ಕೇಂದ್ರವಾಗಿತ್ತು. ಕಾಲಾನಂತರದಲ್ಲಿ ಈಗ ಅದು ವೀರಶೈವ ಮಠವಾಗಿ ಪರಿವರ್ತನೆಯಾಗಿದೆ. ಅದರಲ್ಲೂ ವಿಶೇಷವಾಗಿ ಉತ್ತರಕರ್ನಾಟಕದಲ್ಲಿಯ ಹಾಗೂ ಇತರ ಕಡೆಗಳಲ್ಲಿಯ ಅನೇಕ ದೇವಸ್ಥಾನಗಳು, ಮಠಗಳು ವೀರಶೈವರಿಗೆ ವರ್ಗಾಯಿಸಲ್ಪಟ್ಟವು.[39] ೧೨ನೆಯ ಶತಮಾನದ ಪ್ರಸಿದ್ಧ ವಚನಕಾರ ಸಿದ್ಧರಾಮನು ಮೊದಲು ಲಾಕುಳ ಪಾಶುಪತ ಶೈವಪಂಥಕ್ಕೆ ಸೇರಿದವನಾಗಿದ್ದು ಮುಂದೆ ಚನ್ನಬಸವಣ್ಣ ನಿಂದ ದೀಕ್ಷೆ ಪಡೆದು, ವೀರಶೈವನಾಗುತ್ತಾನೆ.[40] ಈ ದೃಷ್ಟಿಯಿಂದ ''ಈಗಿನ ವೀರಶೈವ ಜಂಗಮರಿಗೆ ಕಾಳಾಮುಖ ಗುರುಗಳೆ ಪೂರ್ವಜರು''[41] ಎಂಬ ಕಪಟರಾಳ ಕೃಷ್ಣರಾಯರ ಮಾತು ಸತ್ಯಕ್ಕೆ ಹತ್ತಿರವೆನ್ನಬಹುದು. ಒಟ್ಟಾರೆ ಇಂದಿನ ವೀರಶೈವರ ಗುರು-ವಿರಕ್ತರ ಮಠಗಳಿಗೆ ಸರ್ವವಿಧದಲ್ಲಿಯೂ ಹಿಂದಿನ ಶೈವಮಠಗಳೇ ಮಾದರಿ ಎಂದರೆ ತಪ್ಪಾಗಲಾರದು.

ಶೈವದೇವಾಲಯ-ಮಠಗಳಲ್ಲಿ ಆಚಾರ್ಯರಾಗಿದ್ದ ಸ್ಥಾನಪತಿಗಳ ವಿದ್ವತ್ತು ತಪಃಪ್ರಭಾವಗಳನ್ನು,[42] ಅಲ್ಲಿ ನಡೆಯುತ್ತಿದ್ದ ಅನ್ನಸತ್ರ, ಔಷಧಾಲಯ, ವಿದ್ಯಾಭ್ಯಾಸವನ್ನು[43] ಮತ್ತು ರಾಜಮಹಾರಾಜರು,[44]

ಅಧಿಕಾರಿವರ್ಗದವರು ಹಾಗೂ ಸಾಮಾನ್ಯರೂ ಕೂಡ ಅಲ್ಲಿನ ಆಚಾರ್ಯರಿಗೆ ಕಾಲು ತೊಳೆದು, ಊರು, ಭೂಮಿ, ಧನಕನಕಾದಿಗಳನ್ನು ಇತ್ತುದು[45] ಇವೇ ಮೊದಲಾದ ವಿಷಯಗಳನ್ನು ಹಲವಾರು ಶಾಸನಗಳು ತಿಳಿಸುತ್ತವೆ. ಇಂಥ ಮಠಗಳ ಸ್ಥಾನಾಚಾರ್ಯರನ್ನು ಶಾಸನಗಳು ''ರಾಜಗುರು''ಗಳೆಂದು ಬಣ್ಣಿಸಿವೆ.[46] ಇದರಿಂದ ಆ ಕಾಲದ ಶೈವ ದೇವಾಲಯ-ಮಠಗಳೂ ಅಲ್ಲಿನ ಸ್ಥಾನಾಚಾರ್ಯರುಗಳೂ ಎಷ್ಟೊಂದು ಪ್ರಭಾವಶಾಲಿಗಳಾಗಿದ್ದಿರಬಹುದೆಂದು ವ್ಯಕ್ತವಾಗುತ್ತದೆ. ಹೀಗೆ ಕರ್ನಾಟಕದ ಇತಿಹಾಸದಲ್ಲಿ ಕ್ರಿ.ಶ.೬-೭ನೆಯ ಶತಮಾನದ ವೇಳೆಗಾಗಲೇ ಕಾಣಸಿಗುವ ಶೈವದೇವಾಲಯ-ಮಠಗಳು ಕ್ರಿ.ಶ.೧೦ ರಿಂದ ೧೪ನೆಯ ಶತಮಾನದವರೆಗೆ ಸಮೃದ್ಧವಾದ ಧಾರ್ಮಿಕ ಮತ್ತು ಶೈಕ್ಷಣಿಕ ಕೇಂದ್ರಗಳಾಗಿದ್ದವು. ಮುಂದಿನ ವೀರಶೈವ ಮಠ-ಮಾನ್ಯಗಳಿಗೆ ಆದರ್ಶಪ್ರಾಯವಾಗಿದ್ದ ಈ ಶೈವ ದೇಗುಲ-ಮಠಗಳು ೧೫ನೆಯ ಶತಮಾನದ ವೇಳೆಗೆ ವೀರಶೈವ ಮಠಗಳೊಂದಿಗೆ ವಿಲೀನವಾಗಿ ಹೋದಂತೆ ತೋರುತ್ತವೆ.

### ೩.೩. ವೀರಶೈವ ಧರ್ಮದ ಹಿನ್ನೆಲೆ

ವೀರಶೈವಧರ್ಮವು ಕರ್ನಾಟಕದ ಪ್ರಮುಖ ಧರ್ಮಗಳಲ್ಲಿ ಒಂದು ಪ್ರಬಲವಾದ ಧರ್ಮ. ಬಹುತೇಕ ಕನ್ನಡ ನಾಡಿನಲ್ಲೆ ರೂಪುಗೊಂಡ ಈ ಧರ್ಮವು ಕಾಲಾನಂತರದಲ್ಲಿ ನೆರೆಯ ಮಹಾರಾಷ್ಟ್ರ, ಆಂಧ್ರಪ್ರದೇಶ ಹಾಗೂ ತಮಿಳುನಾಡುಗಳಿಗೂ ವ್ಯಾಪಿಸಿತು. ವೈದಿಕ ವಿರೋಧಿ ಚಿಂತನೆಗಳ ಹಿನ್ನೆಲೆಯಲ್ಲಿ ಪ್ರಾರಂಭವಾದ ಈ ಧರ್ಮವು ಶಿವಾಗಮಗಳ ತಳಹದಿಯ ಮೇಲೆ ಬೆಳೆದುಬಂದಿದೆ.

ವೀರಶೈವ ಧರ್ಮವು ಶೈವಧರ್ಮದ ವಿಕಸಿತರೂಪವೆಂದು ಬೇರೆ ಹೇಳಬೇಕಾಗಿಲ್ಲ. 'ವೀರ' ಎಂಬುದೇ ಈ ಶಾಖೆಯ ವೈಶಿಷ್ಟ್ಯ. ಶಿವನಲ್ಲಿ ಅಚಲವಾದ ಭಕ್ತಿ-ನಿಷ್ಠೆಗಳಿರುವುದನ್ನು ಇದು ಸೂಚಿಸುತ್ತದೆ ಎಂಬುದಾಗಿ ಪಾರಮೇಶ್ವರಾಗಮ ಹಾಗೂ ವೀರಶೈವ ಶಿರೋಮಣಿಗಳು ಹೇಳುತ್ತವೆ.[47] ಯಾರು ತನ್ನ ಕರಸ್ಥಲದಲ್ಲಿ ಇಷ್ಟಲಿಂಗವನ್ನಿಟ್ಟು ಅದರಲ್ಲೇ ತನ್ನ ಸರ್ವಸ್ವವನ್ನು ಲೀನಗೊಳಿಸಿ ಬಾಹ್ಯ ಪ್ರಪಂಚದಿಂದ ನಿರ್ಲಿಪ್ತನಾಗಿ ಲಿಂಗಪೂಜೆಯನ್ನು ಮಾಡುವನೋ ಅವನೇ ವೀರಶೈವ ಎನ್ನಿಸಿಕೊಳ್ಳುತ್ತಾನೆ.[48] ವೀರಶೈವರು ವೇದಪಾಠಕರಲ್ಲ. ಯಜ್ಞಯಾಗಾದಿಗಳ ವಿರೋಧಿಗಳು. ಅತಿವರ್ಣಾಶ್ರಮಿಗಳಾದ ಇವರು 'ಇಷ್ಟಲಿಂಗ'[49]ವನ್ನಲ್ಲದೆ ಇನ್ನಾವುದೇ ಬಗೆಯ ಶಿವ ಅಥವಾ ಶಿವೇತರ ದೇವರುಗಳನ್ನು ಆರಾಧಿಸುವುದಿಲ್ಲ.

ವೀರಶೈವಧರ್ಮದ ಪ್ರಾರಂಭಿಕ ಇತಿಹಾಸವು ಮುಸುಕಾಗಿಯೇ ಉಳಿದಿದೆಯಾದರೂ; ಅದು ಸುಸಂಘಟಿತವಾಗಿ ಹಾಗೂ ವ್ಯವಸ್ಥಿತ ರೂಪದಲ್ಲಿ ಪ್ರಚಾರಕ್ಕೆ ಬಂದುದು ಬಸವಣ್ಣನವರ ಕಾಲ (೧೨ನೆಯ ಶತಮಾನ) ದಲ್ಲಿ ಎಂಬುದು ಎಲ್ಲಾ ವಿದ್ವಾಂಸರುಗಳೂ ಒಪ್ಪತಕ್ಕ ವಿಚಾರವೇ[50] ಆಗಿದೆ. ಆಗ ಬಸವಾದಿ ಪ್ರಮಥರು ನಡೆಸಿದ ವಚನಚಳುವಳಿಯು ವೀರಶೈವ ಧರ್ಮಕ್ಕೆ ಒಂದು ಹೊಸ ಚಾಲನೆಯನ್ನು ನೀಡಿತು. ಮುಂದೆ ಹದಿಮೂರನೆಯ ಶತಮಾನದ ಆದಿಭಾಗದಲ್ಲಿ ಹೊಯ್ಸಳರ ಆಸ್ಥಾನದಲ್ಲಿದ್ದ ಕರಣಿಕ ಹರಿಹರ[51] ಹಾಗೂ ದಂಡನಾಯಕ ಕೆರೆಯಪದ್ಮರಸ[52] ಇವರ ಜೋಡಿ ನಡೆಸಿದ ವೀರಶೈವ ಧಾರ್ಮಿಕ ಪ್ರಸಾರಕಾರ್ಯ ಸ್ತುತ್ಯರ್ಹವಾದದ್ದು. ಅನಂತರ ವಿಜಯನಗರದ ಅರಸನಾಗಿದ್ದ ಪ್ರೌಢದೇವರಾಯ (ಕ್ರಿ.ಶ. ೧೪೨೯-೪೬) ಮತ್ತು ಆತನ ಅಮಾತ್ಯರುಗಳಾಗಿದ್ದ ಲಕ್ಕಣ್ಣದಂಡೇಶ ಹಾಗೂ ಜಕ್ಕಣಾರ್ಯ ಇವರೆಲ್ಲಾ ವೀರಶೈವ ಧರ್ಮದ ಪ್ರಸಾರಕ್ಕಾಗಿ ಅಪರಿಮಿತವಾದ ಸೇವೆ ಸಲ್ಲಿಸಿದ್ದಾರೆ. ಇವರ ಪೋಷಣೆಯಲ್ಲಿದ್ದ ಕಲ್ಲುಮಠದ ಪ್ರಭುದೇವ, ಕರಸ್ಥಲದ ನಾಗೀದೇವ, ವೀರಣ್ಣೊಡೆಯ ಇವರೇ ಮೊದಲಾದ ನೂರೊಂದು ವಿರಕ್ತರ ಸಾರ್ಥಕ ಸೇವೆಯಿಂದ ವೀರಶೈವ ಧರ್ಮವು ಸಮೃದ್ಧವಾಗಿ ಬೆಳೆಯಿತು.

ಮುಂದೆ ವೀರಶೈವಧರ್ಮಕ್ಕೆ ಮಹತ್ವದ ತಿರುವು ದೊರೆತದ್ದು ತೋಂಟದ ಸಿದ್ಧಲಿಂಗಯತಿ[53]ಗಳ ಕಾಲ (ಕ್ರಿ.ಶ. ೧೫೫೦)ದಲ್ಲಿ. ಇವರ ಶಿಷ್ಯ ಪರಂಪರೆ ಅಗಾಧವಾದುದಾಗಿತ್ತು. ಇವರ ಸಮರ್ಥ ನಾಯಕತ್ವದಲ್ಲಿ ಅಂದಿನ ಗುರು-ವಿರಕ್ತರ ಸಂಘಟನೆಯು ವೀರಶೈವ ಧಾರ್ಮಿಕ ಪರಂಪರೆಯನ್ನು ಕಾಪಾಡಿಕೊಂಡು ಬರಲು ಅಗತ್ಯವಾದ ಭೂಮಿಕೆಯು ಸಜ್ಜುಗೊಂಡಿತು. ತತ್ಫಲವಾಗಿ ವೀರಶೈವ ಧಾರ್ಮಿಕ ಗ್ರಂಥಗಳ ಸಂಕಲನ, ಗುರು-ವಿರಕ್ತರ ಸಂಘಟನೆ, ಮಠ-ಮಾನ್ಯಗಳ ಸ್ಥಾಪನೆ ಇವೇ ಮೊದಲಾದ ಬಸವಾದಿ ಪ್ರಮಥರು ಕಂಡಿದ್ದ ಕನಸುಗಳು ಈಗ

ನನಸಾಗತೊಡಗಿದ್ದವು. ಈ ಮೂಲಕ ಆಗ ವೀರಶೈವ ಸಂಪ್ರದಾಯವು[54] ಸಾಕಷ್ಟು ಪ್ರವರ್ಧಮಾನಕ್ಕೆ ಬಂದು ಮುಟ್ಟಿತು. ಇಪ್ಪತ್ತನೆಯ ಶತಮಾನದಲ್ಲೂ ವೀರಶೈವ ಧರ್ಮವು ನಾಡಿನ ಪ್ರಮುಖ ಧರ್ಮಗಳಲ್ಲಿ ಒಂದಾಗಿ ಉಳಿದಿದ್ದರೆ, ಇದಕ್ಕೆ ಬಹುಮಟ್ಟಿಗೆ ೧೫ ಮತ್ತು ೧೬ನೆಯ ಶತಮಾನಗಳಲ್ಲಿ ನಡೆಸಿದ ವೀರಶೈವ ಧಾರ್ಮಿಕ ನಾಯಕರ ಪ್ರಯತ್ನಗಳೇ ಕಾರಣವೆನ್ನಬಹುದು. ಮೇಲಾಗಿ ಭಕ್ತಿ, ಜ್ಞಾನ, ವೈರಾಗ್ಯಗಳ ತ್ರಿವಳಿ ಸಂಗಮದಂತಿರುವ ಈ ಧರ್ಮವು ಸರ್ವಧರ್ಮಗಳ ಸಾಕಾರರೂಪವಾಗಿರುವುದು ಮತ್ತೊಂದು ಕಾರಣವೆನ್ನಬಹುದು. ಹೀಗೆ ಸಾವಿರಾರು ಶಿವಶರಣರ ಆನುಭಾವಿಕ ಆತ್ಮಕಲ್ಯಾಣದ ನೆಲೆ ಇದಾಗಿರುವುದರ ಕಾರಣ, ವೀರಶೈವಧರ್ಮವು ವಿಶ್ವಧರ್ಮವೆನ್ನಿಸಿಕೊಳ್ಳಲು ಅಗತ್ಯವಾದ ಅರ್ಹತೆಗಳನ್ನೆಲ್ಲ ಪಡೆದಿರುವಂತಾಗಿದೆ.

### ೩.೪. ವೀರಶೈವ ಮಠಗಳು

ವೀರಶೈವ ಮಠಗಳೂ ಕೂಡ ವೀರಶೈವಧರ್ಮದಷ್ಟೇ ಪ್ರಾಚೀನವಾದ ಇತಿಹಾಸವನ್ನು ಹೊಂದಿದೆ. ಹನ್ನೆರಡನೆಯ ಶತಮಾನದ ಬಸವಾದಿ ಪ್ರಮಥರ ವಚನ ಚಳವಳಿಯೊಂದಿಗೆ ಪ್ರಚಲಿತವಾಗತೊಡಗಿದ ವೀರಶೈವಧರ್ಮದಲ್ಲಿ, ಮಠಗಳೂ ಸಹ ಗಣನೀಯ ಪ್ರಮಾಣದಲ್ಲಿ ಕಾಣಿಸಿಕೊಳ್ಳಲಾರಂಭಿಸಿದವು. ಮುಂದೆ ವೀರಶೈವ ಧರ್ಮೀಯರೇ ಪ್ರಧಾನವಾಗುಳ್ಳ ಪ್ರತಿಯೊಂದು ಗ್ರಾಮಗಳಲ್ಲೂ ಒಂದೊಂದು ವೀರಶೈವಮಠ ಕಡ್ಡಾಯವಾಗಿರುತ್ತಿತ್ತು. ಇಷ್ಟೆಲ್ಲಾ ವ್ಯಾಪಕವಾದ ಪ್ರಮಾಣದಲ್ಲಿದ್ದ ವೀರಶೈವ ಮಠಗಳ ಉಗಮ, ಪ್ರಗತಿ ಹಾಗೂ ಪರಂಪರೆಗಳನ್ನು ಕುರಿತು ಕೆಳಕಂಡಂತೆ ಪರಿಶೀಲಿಸಲಾಗಿದೆ.

#### ೩.೪.೧. ಉಗಮ

ವೀರಶೈವಮಠಗಳ ಉಗಮವನ್ನು ಕುರಿತು ಪ್ರಮುಖವಾಗಿ ಎರಡುಬಗೆಯ ಅಭಿಪ್ರಾಯಗಳು ಪ್ರಚಲಿತವಾಗಿವೆ. ಮೊದಲನೆಯದು ಸಾಂಪ್ರದಾಯಕ ನಂಬಿಕೆಗಳ ಪ್ರಕಾರ- ವೀರಶೈವಧರ್ಮ ಬಹಳ ಪುರಾತನವಾದುದು. ಐವರು ಆಚಾರ್ಯರಾದ ಪಂಚಾಚಾರ್ಯರು ಸ್ಥಾಪಿಸಿದ ಮಠಗಳೇ ಪಂಚಪೀಠಗಳಾದವು. ಈ ಪಂಚಾಚಾರ್ಯರು ನಾಲ್ಕು ಯುಗಗಳಲ್ಲಿಯೂ ಬೇರೆ ಬೇರೆ ಹೆಸರುಗಳಿಂದ ಅವತರಿಸಿ ವೀರಶೈವಧರ್ಮವನ್ನು ಉದ್ಧರಿಸಿದರು. ಕಲಿಯುಗದ ಆರಂಭದಲ್ಲಿ ಅವತರಿಸಿದ ರೇವಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮ ಮತ್ತು ವಿಶ್ವಾರಾಧ್ಯರು ಅನುಕ್ರಮವಾಗಿ ಬಾಳೆಹಳ್ಳಿ, ಉಜ್ಜಯಿನಿ, ಶ್ರೀಶೈಲ, ಕೇದಾರ ಮತ್ತು ಕಾಶಿ ಕ್ಷೇತ್ರಗಳಲ್ಲಿ ಪವಿತ್ರ ಪೀಠಗಳನ್ನು ಸ್ಥಾಪಿಸಿದರೆಂದು ಹೇಳಲಾಗುತ್ತದೆ.[55] ಈ ಪಂಚಪೀಠಗಳು ಇಂದಿಗೂ ಉಳಿದುಬಂದಿದ್ದು, ವೀರಶೈವಧರ್ಮ ಪ್ರಚಾರವನ್ನು ನಡೆಸುತ್ತಾ ಬಂದಿವೆಯಾದರೂ, ಮೇಲಿನ ಹೇಳಿಕೆಗಳಿಗೆ ವಿಶ್ವಸನೀಯವಾದ ಐತಿಹಾಸಿಕ ಆಧಾರಗಳ ಕೊರತೆಯಂತೂ ಇದ್ದೇ ಇದೆ. ಡಾ। ಎಸ್.ಸಿ. ನಂದಿಮಠ ಅವರು ಹೇಳಿರುವಂತೆ ''ಈ ಐದು ಜನ ಆಚಾರ್ಯರು ವೀರಶೈವರ ಪ್ರಥಮ ಬೋಧಕರು, ಅರ್ಥಾತ್ ಅವರೇ ವೀರಶೈವ ಮತಸ್ಥಾಪಕರು. ಇದು ಸಾಂಪ್ರದಾಯಕ ನಂಬಿಕೆ ಅಷ್ಟೆ. ಈ ವಿಷಯಗಳಿಗೆ ಸಂಬಂಧಿಸಿದಂತೆ ಸಪ್ರಮಾಣಿಕ ಐತಿಹಾಸಿಕ ಸಂಗತಿಗಳು ನಮಗೆ ಲಭ್ಯವಿಲ್ಲ.''[56]

ಎರಡನೆಯದಾಗಿ, ಕಲ್ಯಾಣಪಟ್ಟಣದಲ್ಲಿ ಕ್ರಿ.ಶ. ೧೧೫೬ರಲ್ಲಿ ಬಸವೇಶ್ವರನಿಂದ ಸ್ಥಾಪಿಸಲ್ಪಟ್ಟ 'ಶೂನ್ಯ ಸಿಂಹಾಸನ'ಕ್ಕೆ[57] ಅಲ್ಲಮಪ್ರಭುವು ಪ್ರಥಮ ಗುರುವಾಗಿ ಅಲಂಕರಿಸಲ್ಪಟ್ಟದ್ದು ಐತಿಹಾಸಿಕ ಸಂಗತಿ. ವೀರಶೈವ ಧರ್ಮದ ತತ್ವಗಳನ್ನು ಚರ್ಚಿಸಲು ಬಸವಣ್ಣನು ಸ್ಥಾಪಿಸಿದ ಮಹಾಸಭೆ (ಅನುಭವಮಂಟಪ)ಗೆ ಪ್ರಭುದೇವ ಅಧ್ಯಕ್ಷನಾಗಿದ್ದ. ಕಲ್ಯಾಣದಲ್ಲಿಯ 'ಶೂನ್ಯ ಸಿಂಹಾಸನ'ವೆಂಬ ಹೆಸರಿನ ವೀರಶೈವ ಆಚಾರ್ಯಪೀಠವನ್ನು ಇವನು ಏರಿ ವೀರಶೈವ ವಿರಕ್ತಪರಂಪರೆಗೆ ಮೊದಲಿಗನಾದನು.[58] ಅಲ್ಲಿಂದ ನಿರಂಜನ ನಿರಾಭಾರಿ ಜಂಗಮ ಸಂಪ್ರದಾಯವು ಪ್ರಾರಂಭವಾಯಿತು.[59] ಇಂದಿನ ಸಾವಿರಾರು ವಿರಕ್ತ ಮಠಗಳಿಗೆ ಈ ಶೂನ್ಯ ಸಿಂಹಾಸನವೇ ಮೂಲ ಪೀಠವಾಗಿದೆ. ಶೂನ್ಯಸಿಂಹಾಸನದ ಪೀಠಾಧಿಕಾರವನ್ನು ಶಿವಾನುಭವ ಚರಂತಿಗೆಯ ಪಟ್ಟವೆಂದೂ[60] ಕರೆಯುತ್ತಾರೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಹಾಗೂ ನಂತರದ ಶೂನ್ಯ ಸಂಪಾದನೆಗಳೂ ಮತ್ತು ಹಲವಾರು ವೀರಶೈವ ಪುರಾಣ ಗ್ರಂಥಗಳೂ ಶೂನ್ಯಸಿಂಹಾಸನದ ಐತಿಹಾಸಿಕತೆಯ ಬಗೆಗೆ ವಿಶೇಷವಾಗಿ ಬೆಳಕು ಚಲ್ಲುತ್ತವೆ. ಹೀಗೆ ಕಲ್ಯಾಣ ಪಟ್ಟಣದಲ್ಲಿ ಪ್ರಾರಂಭವಾದ ವಿರಕ್ತ ಪರಂಪರೆಯು ವಿಜಯನಗರದ ಪ್ರೌಢದೇವರಾಯನ ಕಾಲಕ್ಕೆ ನೂರೊಂದು ವಿರಕ್ತರಿಂದ ಮುಂದುವರೆಯಿತು. ಅನಂತರ ವಾಣಿಜ್ಯಪುರವೆಂದು ಹೆಸರಾಗಿದ್ದ ಹರದನಹಳ್ಳಿ

ಯಲ್ಲಿ ಗೋಸಲ ಸಿದ್ಧೇಶ್ವರರು ಪ್ರಭುಸ್ವಾಮ್ಯನ್ವಯವನ್ನು ಉಜ್ವಲಗೊಳಿಸಿದ ಮಹಂತರು. ಅವರ ಶಿಷ್ಯಪರಂಪರೆಯ ಧ್ರುವತಾರೆ ತೋಂಟದ (ಎಡೆಯೂರು) ಸಿದ್ಧಲಿಂಗೇಶ್ವರರು. ಇವರಿಂದಲೇ ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಗಳು ಪುನರುಜ್ಜೀವನಗೊಂಡು ಕರ್ನಾಟಕದಲ್ಲಿ ಮಾತ್ರವಲ್ಲದೆ ನೆರೆಯ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳುನಾಡುಗಳಲ್ಲೂ ವ್ಯಾಪಕವಾಗಿ ಪ್ರಚಾರಗೊಂಡವು.[61]

ಹೀಗೆ ಪಂಚಪೀಠಗಳೇ ಬಹು ಪ್ರಾಚೀನವಾದುವೆಂದು ಸಾರುವ ಗುರುವರ್ಗದ ಅಥವಾ ಪಟ್ಟದ ಮಠಗಳವರ ಪರವಾದ ಹೇಳಿಕೆಯನ್ನೂ; ಹಾಗೂ ಹನ್ನೆರಡನೆಯ ಶತಮಾನದಲ್ಲಿದ್ದ ಬಸವಾದಿ ಶರಣರಿಂದ ರಚಿತವಾದ ಶೂನ್ಯಪೀಠವೇ ಪ್ರಥಮ ವಿರಕ್ತಪೀಠವೆಂದೂ ಹೇಳುವ ವಿರಕ್ತರ ಮಠಗಳ ಪರವಾದ ಐತಿಹಾಸಿಕ ಹೇಳಿಕೆಗಳನ್ನೂ ಮುಂದೆ ವಿಶದವಾಗಿ ಚರ್ಚಿಸಲಾಗುವುದು.

### ೩.೪.೨. ಪಂಚಾಚಾರ್ಯರು

ವೀರಶೈವ ಸಮಾಜದ ಪೀಠಾಚಾರ್ಯರನ್ನು ಕುರಿತು ಹೇಳುವ ಶಿವಾಗಮ[62]ಗಳಲ್ಲಿ ಪಾಶುಪತಾಗಮ, ಸುಪ್ರಭೇದಾಗಮ, ಸ್ವಯಂಭುವಾಗಮ, ವೀರಾಗಮ ಇವೇ ಮೊದಲಾದವು ಪ್ರಮುಖವಾಗಿವೆ. ಇವುಗಳಲ್ಲಿ ಪಾಶುಪತಾಗಮ ಮೊದಲು ಹುಟ್ಟಿದುದು.[63] ಇದರಲ್ಲಿ ಪಂಚಾಚಾರ್ಯರನ್ನು ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯ ಎಂದು ಗುರುತಿಸಲಾಗಿದೆ. ಸುಪ್ರಭೇದಾಗಮದಲ್ಲಿ[64] ಐವರು ಆಚಾರ್ಯರನ್ನೂ ರೇವಣಾರಾಧ್ಯ, ಮರುಳಾರಾಧ್ಯ ಎಂದು ಆರಾಧ್ಯರೆಂದೇ ಸಂಬೋಧಿಸಲಾಗಿದೆ.[65] ಈ ಆಗಮಗಳಲ್ಲಿ ಪಂಚಾಚಾರ್ಯರನ್ನು ಮಹಾಂತರು ಎಂದು ಗುರುತಿಸಲಾಗಿದೆ.[66] ಸ್ವಯಂಭುವಾಗಮದಲ್ಲೂ[67] ವೀರಶೈವರಲ್ಲಿ ಪ್ರಚಾರದಲ್ಲಿರುವ ಪಂಚಾಚಾರ್ಯರ ಪ್ರಸ್ತಾಪವಾಗಿದೆ. ಜೊತೆಗೆ ಅದರಲ್ಲಿ ಕಲ್ಯಾಣದ ಪ್ರಭುಸ್ವಾಮಿಯು ಮೇಲಿನ ಆಚಾರ್ಯರಿಗೆ ಪೂಜ್ಯನೆಂದು ಹೇಳಿರುವುದು ಒಂದು ವಿಶೇಷ.[68] ಇದಕ್ಕೆ ಪೂರಕವಾಗಿ ಅಚಿಂತ್ಯಾಗಮದಲ್ಲೂ ರೇಣುಕಾದಿ ಆಚಾರ್ಯರು ಮೊದಲು ಹುಟ್ಟಿದವರಾದರೂ ಧರ್ಮಬೋಧನೆಯಲ್ಲಿ ಶಿಷ್ಯ ಶಾಪಕ್ಕಂಜಿ ಪರಶಿವನಲ್ಲಿ ಮೊರೆಹೋದಾಗ, ಪರಶಿವ ತನ್ನ ಶಿಖಾಮಧ್ಯದಲ್ಲಿದ್ದ ನಿರಂಜನ ಜಂಗಮನನ್ನು ಇವರೊಂದಿಗೆ ಕಳುಹಿಸಿಕೊಟ್ಟ ವಿಚಾರ ಬರುತ್ತದೆ.[69] ಈ ನಿರಂಜನ ಜಂಗಮನೇ ಶೂನ್ಯಪೀಠಾಧೀಶ ಅಲ್ಲಮ ಪ್ರಭು ಎಂಬುದು ನಂಬಿಕೆಯಾಗಿದೆ. ಹೀಗೆ ಆಗಮೋಕ್ತವಾಗಿ ಪರಮೇಶ್ವರನ ಅಪ್ಪಣೆಯ ಮೇರೆಗೆ ನಾಲ್ಕೂ ಯುಗಗಳಲ್ಲೂ ಬೇರೆಬೇರೆ ಹೆಸರುಗಳಿಂದ ಭೂಲೋಕದಲ್ಲಿ ಉದ್ಭವಿಸಿದ ಪಂಚಾಚಾರ್ಯರು[70] ವೀರಶೈವ ಧರ್ಮವನ್ನು ಉದ್ಧರಿಸಿದರು. ಇವರೇ ಕಲಿಯುಗದಲ್ಲಿನ ಪಂಚಾಚಾರ್ಯರುಗಳಾಗಿ ಪರಮೇಶ್ವರನ ಪಂಚಮುಖಗಳಾದ[71] ಸದ್ಯೋಜಾತ ಮುಖದಿಂದ ರೇವಣಸಿದ್ಧರೂ, ವಾಮದೇವಮುಖದಿಂದ ಮರುಳಸಿದ್ಧರೂ, ಅಘೋರ ಮುಖದಿಂದ ಏಕೋರಾಮರೂ, ತತ್ಪುರುಷ ಮುಖದಿಂದ ಪಂಡಿತಾರಾಧ್ಯರೂ ಮತ್ತು ಈಶಾನ ಮುಖದಿಂದ ವಿಶ್ವಾರಾಧ್ಯರೂ ಆವಿರ್ಭವಿಸಿ, ಅನುಕ್ರಮವಾಗಿ ಬಾಳೆಹಳ್ಳಿ, ಉಜ್ಜಯಿನಿ, ಕೇದಾರ, ಶ್ರೀಶೈಲ ಹಾಗೂ ಕಾಶಿಗಳಲ್ಲಿರುವ ಗುರುಪೀಠಗಳಿಗೆ ಕಾರಣಕರ್ತೃಗಳಾದರೆಂದೂ[72] ತಿಳಿದುಬರುತ್ತದೆ.

ಇವೇ ಮಾತುಗಳನ್ನು ಆಧರಿಸಿ ಇ. ಥರ್ಸ್ಟನ್ ಅವರು –''ಈ ಐವರು ಮಹಾಗೋತ್ರಕರ್ತರು ಭರತ ಖಂಡದ ಬೇರೆ ಬೇರೆ ಭಾಗಗಳಲ್ಲಿ ಐದು ದೊಡ್ಡ ಮಠಗಳನ್ನು ಸ್ಥಾಪಿಸಿದರು--- ಇವು ಸಿಂಹಾಸನದ ಮಠಗಳೆಂದು ಕರೆಯಲ್ಪಡುತ್ತವೆ''[73] ಎಂದಿದ್ದಾರೆ. ಜಿ.ಆರ್. ಜೋಯಿಸರ್ ಅವರೂ ಕೂಡ ಇಂಥದೇ ವಿವರಣೆಗಳನ್ನು ನೀಡಿ ''ಈ ಐದು ಪಂಚಪೀಠಗಳೇ ಪ್ರಾಚೀನ ವೀರಶೈವ ಮಠಗಳೆಂದೂ''[74] ತಿಳಿಸುತ್ತಾರೆ. ಆರ್. ಜಿ. ಭಂಡಾರ್ಕರ್ ಅವರು ವೀರಶೈವರ ದೀಕ್ಷಾಕ್ರಮವನ್ನು ಪ್ರಸ್ತಾಪ ಮಾಡುವಾಗ- ''ಮಧ್ಯದ ಕಲಶವು ಗುರುಸ್ಥಾನದ ಪ್ರಾಚೀನ ಆಚಾರ್ಯರ ಪ್ರತಿನಿಧಿಗಳೆನಿಸಿದ ವಿಶ್ವಾರಾಧ್ಯರದೆಂದೂ, ಮಿಕ್ಕ ನಾಲ್ಕು ಕಲಶಗಳು ರೇವಣಸಿದ್ಧ, ಮರುಳಸಿದ್ಧ, ಏಕೋರಾಮ ಮತ್ತು ಪಂಡಿತಾರಾಧ್ಯ ಎಂಬ ನಾಲ್ವರು ಆಚಾರ್ಯರಿಗೆ ಸಂಬಂಧಪಟ್ಟವೆ. ಈ ಐದೂ ಕಲಶಗಳು ಶಿವನ ಸದ್ಯೋಜಾತಾದಿ ಪಂಚಕಲಶಗಳಾಗಿ ಪ್ರತಿಷ್ಠಾಪಿಸಲ್ಪಡುತ್ತವೆ. ಈ ಆಚಾರ್ಯರು ಶಿವನ ಪಂಚಮುಖಗಳಿಂದ ಅವತರಿಸಿದವರಾಗಿರುತ್ತಾರೆ,''[75] ಎಂಬ ಇತ್ಯಾದಿ ವಿವರಣೆ ನೀಡಿದ್ದಾರೆ.

ಇಷ್ಟೆಲ್ಲಾ ವಿಚಾರಗಳು ಆಗಮ ಶಾಸ್ತ್ರಗ್ರಂಥ ಗಳಿಗನುಸಾರ ಸಾಂಪ್ರದಾಯಕ ವಿವರಗಳನ್ನು ನೀಡಬಲ್ಲವೇ ಹೊರತು, ಐತಿಹಾಸಿಕವಾಗಿ ನಿರ್ದಿಷ್ಟ ಅಭಿಪ್ರಾಯಗಳನ್ನು ರೂಪಿಸುವಲ್ಲಿ ಅಸಮರ್ಥವಾಗಿವೆ.

### ೩.೪.೩. ಚತುರಾಚಾರ್ಯರು

ಮೊದಲಿಗೆ ಇದ್ದವರು ಚತುರಾಚಾರ್ಯರು ಮಾತ್ರ. ಐದನೆಯ ಆಚಾರ್ಯರು ಕಾಲಾನಂತರದಲ್ಲಿ ಆಮೇಲೆ ಸೇರ್ಪಡೆಯಾದವರು ಎಂಬ ಮಾತಿದೆ. ಈ ಮಾತಿಗೆ ಪೂರಕವಾಗಿ ಅನೇಕ ಆಧಾರಗಳಿವೆ. ಪಂಚಾಚಾರ್ಯರ ಪ್ರಾಚೀನತೆಯನ್ನು ಕುರಿತು ಅನೇಕ ಶಿವಾಗಮಗಳಲ್ಲಿ ಬಂದಿರುವ ವಿಚಾರಗಳನ್ನು ನಾವೀಗಾಗಲೇ ಗಮನಿಸಿದ್ದೇವೆ. ಈ ಶಿವಾಗಮಗಳನ್ನೇ ಆಧಾರವಾಗಿರಿಸಿಕೊಂಡು ರಚಿತವಾದದ್ದು ನಿಜಗುಣಶಿವಯೋಗಿಗಳ 'ವಿವೇಕ ಚಿಂತಾಮಣಿ'. ಇದು ಆಗಮ ಶಾಸ್ತ್ರದ ಕನ್ನಡ ಜ್ಞಾನಕೋಶವಿದ್ದಂತೆ. ಶೈವಾಗಮಗಳಲ್ಲಿಯ ಅಸಂಖ್ಯಾತ ವಿಷಯಗಳನ್ನು ಸಂಗ್ರಹವಾಗಿ ಕನ್ನಡದಲ್ಲೆ ಹೇಳಿದ ಅಪೂರ್ವ ಗ್ರಂಥವಿದು.[76] ಇದರಲ್ಲಿ ಚತುರಾಚಾರ್ಯರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯರನ್ನು ಮಾತ್ರ ಉಲ್ಲೇಖಿಸಲಾಗಿದೆ.[77] ಇಲ್ಲಿ ಐದನೆಯ ಆಚಾರ್ಯರಾದ ವಿಶ್ವಾರಾಧ್ಯರ ಪ್ರಸ್ತಾಪವಿರುವುದಿಲ್ಲ. ಹಾಗೆ ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'[78], ಕೆಳದಿಯ ಹಿರಿಯ ಬಸವಪ್ಪನಾಯಕನ 'ಶಿವತತ್ತ್ವರತ್ನಾಕರ'[79] ದಲ್ಲೂ 'ವೀರಶೈವ ಗುರು ಪರಂಪರೆ'ಯ ಎಂಟನೆ ಪಟಲದಲ್ಲೂ[80] ಹಾಗೂ ಮೊದಲು ಹುಟ್ಟಿದ್ದಿರಬಹುದಾದ ಕೆಲವು 'ಮಠಸ್ಥಲ' ಗಳಲ್ಲೂ[81] ಚತುರಾಚಾರ್ಯರ ಪ್ರಸ್ತಾಪವೇ ಇದೆ. ಮೇಲಾಗಿ ಚತುರಾಚಾರ್ಯರನ್ನೇ ಪ್ರಧಾನವಾಗಿರಿಸಿಕೊಂಡು ರಚಿತವಾದ ಸಂಪಾದನೆಯ ಪರ್ವತೇಶನ ಚತುರಾಚಾರ್ಯಚಾರಿತ್ರವೂ ಕೂಡ ಪಂಚಾಚಾರ್ಯರನ್ನು ಸ್ಮರಿಸಿದೆಯಾದರೂ ಮೊದಲ ನಾಲ್ವರು ಆಚಾರ್ಯರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯರನ್ನು ಮಾತ್ರವೇ ವರ್ಣಿಸುತ್ತದೆ.[82] ಹೀಗೆ ಒಂದೆಡೆ ಸಾಂಪ್ರದಾಯಕವಾಗಿ ಪಂಚಾಚಾರ್ಯರ ಪರಂಪರೆಯೇ ನಡೆದುಬಂದಿದೆಯಾದರೂ, ಇನ್ನೊಂದೆಡೆ ಕನ್ನಡದ ಕವಿಗಳು ಮಾತ್ರ ಚತುರಾಚಾರ್ಯರ ಪುರಾಣವನ್ನೇ ಬರೆದಿರುವುದು ವಿಶೇಷ.

ಇದಕ್ಕೂ ಮುನ್ನ ಹನ್ನೆರಡನೆಯ ಶತಮಾನದಲ್ಲಿ ರಚಿತವಾಗಿ ಕನ್ನಡದ ಉಪನಿಷತ್ತುಗಳೆಂದೇ ಹೆಸರಾದ ಶಿವಶರಣರ ವಚನಗಳಲ್ಲೂ ಕೂಡ ರೇವಣಸಿದ್ಧಾದಿ ಚತುರಾಚಾರ್ಯರ ಹೆಸರುಗಳೇ ಪ್ರಸ್ತಾಪವಾಗಿದ್ದು, ಐದನೆಯ ಆಚಾರ್ಯರ ಉಲ್ಲೇಖವಿರುವುದಿಲ್ಲ. ಹಾವಿನಹಾಳ ಕಲ್ಲಯ್ಯ[83], ಮೆರೆಮಿಂಡಯ್ಯ,[84] ಆದಯ್ಯ[85] ಇವರೇ ಮೊದಲಾದ ವಚನಕಾರರು ಚತುರಾಚಾರ್ಯರನ್ನು ಸ್ಮರಿಸಿದ್ದಾರೆ. ಮುಂದೆ ಹದಿನಾರನೆಯ ಶತಮಾನದ ತೋಂಟದ ಸಿದ್ಧಲಿಂಗೇಶ್ವರರ ವಚನಗಳಲ್ಲೂ ಚತುರಾಚಾರ್ಯರ ಪ್ರಸ್ತಾಪವಾಗಿದೆ.[86] ಆದರೆ ಇಡೀ ವಚನ ಸಾಹಿತ್ಯದಲ್ಲಿ ಎಲ್ಲಿಯೂ ಐದನೆಯ ಆಚಾರ್ಯರಾದ ವಿಶ್ವಾರಾಧ್ಯರ ಪ್ರಸ್ತಾಪವಾಗದೆ ಇರುವುದು ಗಮನಾರ್ಹ ಸಂಗತಿ. 'ಬಹುಶಃ ಮೊದಲು ಬಸವಾದಿ ಶರಣರ ಕಾಲಕ್ಕೆ ಚತುರಾಚಾರ್ಯರೇ ಇದ್ದು, ಆಮೇಲೆ ಹದಿನಾಲ್ಕು ಹದಿನೈದನೆಯ ಶತಮಾನದ ವೇಳೆಗೆ ಐದನೆಯ ಆಚಾರ್ಯರು[87] ಉದ್ಭವವಾಗಿರಬೇಕು' ಎಂಬ ಡಾ। ಎಂ. ಚಿದಾನಂದಮೂರ್ತಿ ಅವರ ಮಾತು[88] ಇಲ್ಲಿ ಗಮನಾರ್ಹ. ಇದೇ ಸಂದರ್ಭದಲ್ಲಿ ಸಿ.ಪಿ.ಬ್ರೌನ್[89] ಮತ್ತು ಎಲ್.ಕೆ ಅನಂತ ಕೃಷ್ಣಅಯ್ಯರ್[90] ಇವರೇ ಮೊದಲಾದ ವಿದ್ವಾಂಸರೂ ಕೂಡ 'ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ ಹಾಗೂ ಪಂಡಿತಾರಾಧ್ಯ ಈ ನಾಲ್ವರೇ (ಬಸವನಿಗಿಂತ ಪೂರ್ವದ) ವೀರಶೈವ ಧರ್ಮದ ಮೊದಲ ಪೀಠಾಚಾರ್ಯರೆಂದು' ಹೇಳಿರುವುದನ್ನು ನಾವಿಲ್ಲಿ ಗಮನಿಸಬಹುದು.

### ೩.೪.೪. ಐತಿಹಾಸಿಕ ಪರಿಶೀಲನೆ

ಸಾಂಪ್ರದಾಯಕ ಹೇಳಿಕೆಗಳ ಪ್ರಕಾರ ಬಸವಯುಗದ ರೇವಣಸಿದ್ಧರೇ ಬೇರೆ, ಆದಿಜಗದ್ಗುರು ರೇಣುಕಾಚಾರ್ಯರೇ ಬೇರೆ ಎಂಬ ನಂಬಿಕೆ ಇದೆ. ಆದಿರೇಣುಕರು ರಾಮಾಯಣದ ಕಾಲದಲ್ಲಿ ಅಗಸ್ತ್ಯ ಮಹರ್ಷಿಗೆ ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನೂ, ನೂರೊಂದು ಸ್ಥಲಗಳನ್ನೂ ಬೋಧಿಸಿದವರೆಂದೂ; ಈ ಬೋಧನೆಗಳನ್ನೊಳಗೊಂಡದ್ದೆ 'ಸಿದ್ಧಾಂತಶಿಖಾಮಣಿ' ಎಂಬ ಸಂಸ್ಕೃತ ಗ್ರಂಥವೆಂದೂ ಹೇಳುವುದುಂಟು.[91] ಆದರೆ

ಅನೇಕ ಜನ ವಿದ್ವಾಂಸರು ಪೀಠಾಚಾರ್ಯರಲ್ಲಿ ಪ್ರಥಮ ಗುರುವಾದ ರೇವಣಸಿದ್ಧರೇ ರೇಣುಕಾಚಾರ್ಯರೆಂದೂ, ರೇಣುಕ-ರೇವಣ ಅಭಿನ್ನರೆಂದೂ ಹಲವು ಆಧಾರ ಗಳೊಂದಿಗೆ ವಾದಿಸಿದ್ದಾರೆ.[92] ಸಿದ್ಧಾಂತ ಶಿಖಾಮಣಿಯಲ್ಲೂ ಕೂಡ ರೇಣುಕರನ್ನು ರೇವಣಸಿದ್ಧ (ರೇವಣಸಿದ್ಧಶೇಖರಃ) ಎಂದು ಕರೆದಿದೆ.[93] ರೇವಣಸಿದ್ಧ ಎಂಬುದು ಕೈಲಾಸದಲ್ಲಿ ರೇಣುಕ ಗಣೇಶ್ವರನಾಗಿದ್ದವನು ಭೂಮಿಗೆ ಬಂದು ಕೊಲ್ಲಿಪಾಕಿಯಲ್ಲಿ ಜನಿಸಿದಾಗ ಕಟ್ಟಿದ ಹೆಸರಾಗಿದೆ.[94] ಕನ್ನಡದ ಕವಿಗಳ ದೃಷ್ಟಿಯಲ್ಲಿ ಕೈಲಾಸದ ರೇಣುಕರೇ ಭೂಲೋಕದ ರೇವಣಸಿದ್ಧರಾಗಿದ್ದಾರೆ.

ರೇವಣಸಿದ್ಧರು ಬಸವೇಶ್ವರನ ಕಾಲದಲ್ಲಿಯೂ, ಅವನ ತರುವಾಯವೂ (ಕ್ರಿ.ಶ. ೧೧೬೭ರ ನಂತರ) ಬದುಕಿದ್ದುದಾಗಿ, ಸಿರಿವಾಳ ಶಾಸನ (ಕ್ರಿ.ಶ. ೧೧೮೭) ಹಾಗೂ ಚೌಡದಾನಪುರದ (ಮಹಾದೇವರ ಶಾಸನ-೧) ಶಾಸನಗಳು ತಿಳಿಸುತ್ತವೆ.[95] 'ಮುಕ್ತಿಕಂಠಾಭರಣ' ಎಂಬ ವಚನಗ್ರಂಥದಲ್ಲಿ ಅಲ್ಲಮಪ್ರಭು, ಬಸವಣ್ಣ, ಚನ್ನಬಸವಣ್ಣಾದಿಗಳು ಇದ್ದ ಕಾಲದಲ್ಲಿಯೇ ರೇವಣಸಿದ್ಧರೂ[96] ಹಾಗೂ ಅವರ ಮಗ ರುದ್ರಮುನೀಶ್ವರನೂ ಕಲ್ಯಾಣದ 'ಚೆಂಗಣಿಗಿಲೆಮಂಟಪ'ದಲ್ಲಿದ್ದುದಾಗಿ ತಿಳಿದುಬರುತ್ತದೆ.[97] ಇಲ್ಲೆಲ್ಲಿಯೂ ರೇವಣಸಿದ್ಧರನ್ನು ಪೀಠಾಚಾರ್ಯರೆಂದಾಗಲೀ ಅಥವಾ ಪೀಠಾಧೀಶರೆಂದಾಗಲೀ ಸಂಬೋಧಿಸಿರುವುದಿಲ್ಲ. ಜೊತೆಗೆ ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋಗುವವರೆವಿಗೂ (ಕ್ರಿ.ಶ. ೧೧೬೭) ಈ ಪಂಚಪೀಠಗಳಾವುವೂ ನಿರ್ಮಾಣವಾಗಿರಲಿಲ್ಲ.[98] ಅನಾದಿ ವೀರಶೈವ ಸಂಗ್ರಹದಲ್ಲಿ ''ನಕಾರಾದಿ ಚತುರಕ್ಷರ ಕಲಶಮೂರ್ತಿಗಳೇ ರೇಣುಕಗಣೇಶ್ವರ, ಮರುಳಶಂಕೇಶ್ವರ, ಏಕೋರಾಮೇಶ್ವರ, ಪಂಡಿತೇಶ್ವರರೆಂಬ ಚತುರಾಚಾರ್ಯರು. ಈ ಚತುರ್ ಬ್ರಹ್ಮಲಿಂಗ ಮೂರ್ತಿಗಳ ಭಕ್ತ್ಯುಪಚಾರಂಗಳಂ ಕೈಕೊಳ್ಳುತ್ತ ಈಶಾನಬ್ರಹ್ಮ, ಯಕಾರಮಂತ್ರಮೂರ್ತಿಕಲಶ, ಸರ್ವಾನುಗ್ರಹಕರ್ತ ಸದಾಶಿವ ಗುರು ಮಧ್ಯೆ ಕಲಶವೆ ಪಂಚಮ ಕಲಶವೆನಿಸಿ ಬಸವೇಶ್ವರನಿದ್ದನು'' ಎಂದು ಬಣ್ಣಿಸಿದೆ.[99] ಬಸವೇಶ್ವರನ ತರುವಾಯ ಈ ನಾಲ್ವರು ಆಚಾರ್ಯರೂ ವೀರಶೈವ ಮತದ ಹೀನಸ್ಥಿತಿಯನ್ನು ನೋಡಿ ಅದರ ಪುನರುದ್ಧಾರಕ್ಕಾಗಿ ಕಾಶಿಯ ವಿಶ್ವಾರಾಧ್ಯರನ್ನು ತಮ್ಮ ಗುರುಗಳನ್ನಾಗಿ ಮಾಡಿಕೊಂಡುದಾಗಿ 'ಪಂಚಬ್ರಹ್ಮೋದಯಭಾಷ್ಯ'ದಲ್ಲಿ ಹೇಳಿದೆ.[100] ಇವೆ ಮಾತುಗಳನ್ನು ಅನುಸರಿಸಿ, ''ಚತುರಾಚಾರ್ಯರು ಬಸವೇಶ್ವರನ ಕಾಲದಲ್ಲಿಯೇ ಆಚಾರ್ಯರಾಗಿದ್ದರೆಂದೂ; ಈ ನಾಲ್ವರೂ ಘನರುದ್ರಮುನಿಯೊಂದಿಗೆ ಸೌರಾಷ್ಟ್ರ ಸೋಮೇಶ್ವರನಲ್ಲಿಗೆ ಹೋದಮೇಲೆ, ವಿಶ್ವಾರಾಧ್ಯರನ್ನು ಸೇರಿದ ಐವರಾಚಾರ್ಯರಿಗೆ ಗುರುವಾಗಿ ಘನರುದ್ರಮುನಿಗಳನ್ನು ಏರ್ಪಡಿಸಿದರೆಂದೂ; ಈ ಕೆಲಸವು ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋದಮೇಲೆ (ಕ್ರಿ.ಶ. ೧೧೬೭ರಿಂದ ೧೧೮೭ರ ಒಳಗೆ) ಕೆಲವೇ ವರ್ಷಗಳಲ್ಲಿ ನಡೆದಿರಬೇಕೆಂದೂ; ಕಳಚುರಿಯ ಸೋವಿದೇವರು ರುದ್ರಮುನಿಪನನ್ನು ಹೊಗಳಿ ಮಂಗಳವಾಡದಲ್ಲಿ ಶಾಸನವನ್ನು ಬರೆಯಿಸಿದ ಮೇಲೆ (ಕ್ರಿ.ಶ. ೧೧೭೭) ಈ ಕೆಲಸವು ನಡೆದಿರಬೇಕೆಂದೂ'' ಚನ್ನಮಲ್ಲಿಕಾರ್ಜುನರು ವಿವರಿಸಿರುತ್ತಾರೆ.[101] ಅವರ ಪ್ರಕಾರ ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶಿವಶರಣರ ಸಮಕಾಲೀನರಾಗಿದ್ದ ರೇವಣಸಿದ್ಧ ಹಾಗೂ ಅವರ ಮಗ ರುದ್ರಮುನಿ ಇವರೇ ಪಂಚಪೀಠಗಳ ನಿರ್ಮಾಣಕ್ಕೆ ಕಾರಣರೆಂದು ಕೆಲವು 'ಮಠಸ್ಥಲ'ಗಳನ್ನು ಉಲ್ಲೇಖಿಸಿ ಹೇಳುತ್ತಾರೆ.[102] ಬಿ. ಶಿವಮೂರ್ತಿಶಾಸ್ತ್ರಿಗಳ ವಾದವೂ ಕೂಡ ಇದೇ ಆಗಿದೆ.[103]

### ೩.೪.೫. ಶೂನ್ಯಪೀಠದ ಇತಿಹಾಸ

ಕಲ್ಯಾಣ ಪಟ್ಟಣದಲ್ಲಿ ಬಸವೇಶ್ವರನು ಕ್ರಿ.ಶ. ೧೧೫೭ರಲ್ಲಿ ಸ್ಥಾಪಿಸಿದ ಶೂನ್ಯ ಸಿಂಹಾಸನವನ್ನು ಅಲ್ಲಮಪ್ರಭುವು ಆರೋಹಣ ಮಾಡುವುದರೊಂದಿಗೆ ಶೂನ್ಯಪೀಠದ ಪ್ರತಿಷ್ಠಾಪನೆಯಾಯಿತು ಎಂಬ ವಿಷಯ ಈಗಾಗಲೇ ಪ್ರಸ್ತಾಪವಾಗಿದೆ. ವೀರಶೈವ ಧರ್ಮದ ಮೂಲ ನಿಯಮಗಳನ್ನು ವಿಧಿಸುವಲ್ಲಿ ಮೊಟ್ಟಮೊದಲಿನ ಗುರುವಾಗಿದ್ದ ಬಸವೇಶ್ವರನು[104] ನಿರ್ಮಾಣ ಮಾಡಿದ ಅನುಭವಮಂಟಪ[105] ದೊಳಗಿನ ಅಧ್ಯಕ್ಷಪೀಠವೇ ಶೂನ್ಯಸಿಂಹಾಸನ. ಈ ಶೂನ್ಯಸಿಂಹಾಸನವೇ ಮುಂದಿನ ವೀರಶೈವ ಮಠಗಳಿಗೆಲ್ಲಾ ಮೂಲ ಚಿಲುಮೆ ಎಂಬುದಾಗಿ ಹೇಳುವುದುಂಟು.[106]

'ಶೂನ್ಯ' ಎಂದರೆ ಆಕಾರವಿಲ್ಲದ್ದು; ನಿರವಯ; ಬಯಲು[107] ಎಂಬ ಅರ್ಥಗಳಿವೆ. ವೀರಶೈವ ಧಾರ್ಮಿಕ ಸಾಹಿತ್ಯದಲ್ಲಿ ಶೂನ್ಯ ಎಂಬ ಮಾತನ್ನು 'ಅಷ್ಟಾವರಣಗಳ ಬೆಲೆಯನ್ನರಿತು, ಷಟ್‌ಸ್ಥಲ ಮಾರ್ಗವಾಗಿ ಉಪಾಸನೆ ಮಾಡಿದ ಸಾಧಕನಿಗೆ ಸಾಧನೆಯ ಅಂತ್ಯದಲ್ಲಿ ಒದಗುವ ಬ್ರಹ್ಮಸಾಕ್ಷಾತ್ಕಾರ ಎಂಬ ಅರ್ಥ'ದಲ್ಲಿ ಉಪಯೋಗಿಸಲಾಗಿದೆ. ಅಷ್ಟೇ ಅಲ್ಲ ಸೃಷ್ಟಿಪೂರ್ವದ ಪರವಸ್ತುವನ್ನೂ ಶೂನ್ಯವೆಂದೇ ಕರೆಯುತ್ತಾರೆ. ಆ ಶೂನ್ಯವೇ ಬಯಲು.'[108] ಶೂನ್ಯಪೀಠವು ಶಿವಧರ್ಮತತ್ತ್ವಗಳನ್ನು ತಿಳಿಸುವ ಅಥವಾ ಬೋಧಿಸುವ ಪೀಠವೇ ಆಗಿದೆ. ಇದು ಕೇವಲ ಭೌತಿಕವಾದ ಪೀಠವಲ್ಲ. ಆಧ್ಯಾತ್ಮ ಚಿಂತನೆಯ ಮಹೋನ್ನತ ಪದವಿಯೂ ಹೌದು. ಇಂತಹ ಮಹೋನ್ನತ ಪದವಿಯನ್ನು ಏರಿದ ಮೊಟ್ಟಮೊದಲ ಐತಿಹಾಸಿಕ ವ್ಯಕ್ತಿಯೇ ಅಲ್ಲಮಪ್ರಭು. ಹನ್ನೆರಡನೆಯ ಶತಮಾನದ ಅನುಭವಮಂಟಪದಲ್ಲಿ, ಪ್ರಭುದೇವರ ಅಧ್ಯಕ್ಷತೆಯಲ್ಲಿ ಅಸಂಖ್ಯಾತ ಶಿವಶರಣರು ಸೇರಿ ಧರ್ಮ ಗೋಷ್ಠಿಗಳನ್ನು ನಡೆಸುತ್ತಿದ್ದರು. ಹೀಗೆ ''ಅಂದಿನ ಅನುಭವ ಮಂಟಪವು ಕೇವಲ ಶಿವಶರಣರ ಮೇಳವಾಗಿರಲಿಲ್ಲ. ಅದೊಂದು ಧಾರ್ಮಿಕ ಅನುಭಾವದ ಪ್ರೌಢ ಪಾಂಡಿತ್ಯದಿಂದೊಡಗೂಡಿದ ಸಂಶೋಧನ ಕೇಂದ್ರವೂ ಆಗಿತ್ತು.''[109]

ಅನುಭವ ಮಂಟಪದೊಳಗಿನ ಧಾರ್ಮಿಕ ಚರ್ಚೆಗಳನ್ನು, ಅಲ್ಲಿನ ಶೂನ್ಯ ಸಿಂಹಾಸನದ ಸುತ್ತ ನಡೆದ ಅನುಭಾವದ ಚಿಂತನೆಗಳನ್ನು ಒಳಗೊಂಡ ಗ್ರಂಥವೇ ಶೂನ್ಯಸಂಪಾದನೆ.[110] 'ಶೂನ್ಯಸಂಪಾದನೆ ಎಂದರೆ ಭಗವಂತನ ಸಾಕ್ಷಾತ್ಕಾರಕ್ಕಾಗಿ ಶ್ರಮಿಸಿದವರ ವಚನಗಳ ಸಂಪಾದನೆ' ಎಂದರ್ಥ.[111] ಶೂನ್ಯವನ್ನು ಸಂಪಾದಿಸಿದ ಹಲವರ ಚರಿತ್ರೆಗಳು ಇಲ್ಲಿವೆ. ಹನ್ನೆರಡನೆಯ ಶತಮಾನದ ಅಲ್ಲಮನೇ ಇವರೆಲ್ಲರ ಕೇಂದ್ರ ವ್ಯಕ್ತಿಯಾಗಿದ್ದ. ಮುಂದೆ ಹದಿನೈದನೆಯ ಶತಮಾನದಲ್ಲಿ ಹುಟ್ಟಿದ ಪ್ರಭುಲಿಂಗಲೀಲೆಯ ಮಾದರಿಯಲ್ಲೆ ಶೂನ್ಯಸಂಪಾದನೆ ಹುಟ್ಟಿದೆ.[112] ಶೂನ್ಯಸಂಪಾದನೆಯನ್ನು ಒಂದು ರೀತಿಯಲ್ಲಿ ಪ್ರಭುಲಿಂಗಲೀಲೆಯ ಗದ್ಯಾವತಾರವೆನ್ನಬಹುದು.[113] ಶಿವಾನುಭವದ ವಚನಗಳ ಸಂಕಲನವಾದ ಈ ಗ್ರಂಥವು ವೀರಶೈವರಿಗೆ ಧಾರ್ಮಿಕ ಕೈಪಿಡಿಯಾಗಿದ್ದು, ಪವಿತ್ರಗ್ರಂಥವೂ ಆಗಿದೆ. ವಚನಗಳನ್ನು ಸಂಭಾಷಣೆಯ ಮೂಲಕ ಪೋಣಿಸಿರುವುದೇ ಇಲ್ಲಿನ ವೈಶಿಷ್ಟ್ಯ. ಎಂ.ಆರ್. ಶ್ರೀಯವರು ''ಶೂನ್ಯಸಂಪಾದನೆಯು ಕೇವಲ ಒಂದು ವಚನ ಸಂಕಲನೆಯಲ್ಲ, ಶಿವಾನುಭವದ ವಚನಗಳ ಸಂಕಲನೆ''[114] ಎಂದಿರುವುದು ಅರ್ಥ ಪೂರ್ಣವಾಗಿದೆ. ವಚನ ಸಾಹಿತ್ಯವೂ ಸೇರಿದಂತೆ ಹರಿಹರನಾದಿಯಾಗಿ ಮುಂದಿನ ಎಲ್ಲಾ ವೀರಶೈವ ಚರಿತ್ರಕಾರರೂ ಶೂನ್ಯ ಸಿಂಹಾಸನದ ಬಗೆಗೆ ಒಂದಿಲ್ಲೊಂದು ವಿಧವಾಗಿ ಬೆಳಕು ಚಲ್ಲಿರುವುದು ಗಮನಾರ್ಹ.

ಬಸವೇಶ್ವರನು ಒಂದೆಡೆ ಶೂನ್ಯ ಸಿಂಹಾಸನವನ್ನು ಸ್ಥಾಪಿಸಿ ಪ್ರಭುದೇವರನ್ನು ಮೊದಲ ಪೀಠಾಧ್ಯಕ್ಷನನ್ನಾಗಿ ಮಾಡುವ ಮೂಲಕ ನಿರಾಭಾರಿ ಜಂಗಮ[115] ಸಂಪ್ರದಾಯಕ್ಕೆ ಅಸ್ತಿಭಾರವನ್ನು ಹಾಕಿದ್ದಂತೆ; ಮತ್ತೊಂದೆಡೆ ವರ್ಗ ಮತ್ತು ವರ್ಣರಹಿತವಾದ ಸಮಾಜ ನಿರ್ಮಾಣಕ್ಕಾಗಿ ಹಾಗೂ ಶಿವಸಮಯದ ಜಾಗೃತಿಗಾಗಿ ಅಪರಿಮಿತವಾದ ಶಿವಶರಣರ ತಂಡವನ್ನೇ ಸಜ್ಜುಗೊಳಿಸಿದ್ದನು. ಸುಸಂಘಟಿತವಾಗಿದ್ದ ಇಂತಹ ಶರಣರ ಸಾಮಾಜಿಕ ಮತ್ತು ಧಾರ್ಮಿಕ ಸೇವಾ ಕ್ಷೇತ್ರಗಳೇ ಮುಂದಿನ ವೀರಶೈವ ಮಠಗಳಾಗಿ ಪ್ರಚಾರಕ್ಕೆ ಬಂದುವು. ಈ ಮಾತಿಗೆ ಪೂರಕವಾಗಿ ಹನ್ನೆರಡನೆಯ ಶತಮಾನದವೇಳೆಗೆ ಎಂತೆಂತಹ ಮಠಗಳು ಉದಯಿಸಿದ್ದವೆಂಬುದಕ್ಕೆ ಚೆನ್ನಬಸವಣ್ಣನ ಒಂದು ವಚನ ಉತ್ತಮ ಉದಾಹರಣೆಯಾಗಿದೆ. ಆ ವಚನದಲ್ಲಿ 'ದಾಸೋಹದ ಮಠಗಳು ಎರಡು ಲಕ್ಷದ ಎಂಬತ್ತೈದು ಸಾವಿರದ ಏಳುನೂರು ಎಪ್ಪತ್ತು, ನಿತ್ಯನೇಮಿಗಳ ಮಠಗಳು ಹತ್ತು ಸಾವಿರ, ವ್ರತಸ್ಥರ ಮಠಗಳು ಹದಿನೈದುಸಾವಿರ, ಅಕ್ಕ ಪ್ರಸಾದಿಗಳ ಮಠಗಳು ಹನ್ನೆರಡು ಸಾವಿರ, ಶೀಲಸಂಪನ್ನರ ಮಠಗಳು ಒಂದು ಸಾವಿರದ ಅರವತ್ತು ನಾಲ್ಕು' ಎಂಬ ಅಂಕಿ ಅಂಶಗಳಿವೆ.[116] ನಾವಿಲ್ಲಿ ಸಂಖ್ಯಾ ದೃಷ್ಟಿಯಿಂದ ಇಷ್ಟೊಂದು ಮಠಗಳಿದ್ದವೇ? ಎಂದು ಸಂಶಯ ಪಡಬಹುದಾದರೂ, ಇಂತಹ ಹಲವು ಬಗೆಯ ಮಠಗಳು ಆ ಕಾಲಕ್ಕಾಗಲೇ ಇದ್ದುವೆನ್ನಲು ಯಾವ ಸಂಶಯವೂ ಎದುರಾಗದು. ಒಂದೆಡೆ ದೇವಾಲಯ ಸಂಸ್ಕೃತಿಗೆ ವಿರೋಧಿಗಳಾಗಿದ್ದ ಶರಣರು, ಮತ್ತೊಂದೆಡೆ ತಮ್ಮ ತಮ್ಮ ಕುಟೀರಗಳನ್ನೇ ಸಮಾಜೋಧಾರ್ಮಿಕ

ಸೇವಾ ಕ್ಷೇತ್ರಗಳನ್ನಾಗಿ ಮಾಡಿ ಮಠೀಯ ಸಂಸ್ಕೃತಿಗೆ ನಾಂದಿಯಾಡಿದ್ದರು.

**೩.೪.೬. ಪೀಠಾಚಾರ್ಯರು ಶಿವಶರಣರು ಸಮಕಾಲೀನರು**

ಗುರು-ವಿರಕ್ತ ಪೀಠಗಳ ನಡುವೆ ಪ್ರಧಾನವಾಗಿ ಎದ್ದು ಕಾಣುವ ಅಂಶಗಳೇನೆಂದರೆ ಗುರುಪೀಠಗಳು ಪಂಚಾಚಾರ್ಯರನ್ನು ಎತ್ತಿ ಹಿಡಿದರೆ; ವಿರಕ್ತ ಪೀಠಗಳು ವಚನಕಾರರನ್ನು ಎತ್ತಿ ಹಿಡಿಯುತ್ತವೆ. ಗುರುಪೀಠಗಳು ಒತ್ತುಕೊಡುವ ಪಂಚಾಚಾರ್ಯರಲ್ಲಿ ಮೊದಲ ನಾಲ್ವರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ ಹಾಗೂ ಪಂಡಿತಾರಾಧ್ಯರೂ (ವಿಶ್ವಾರಾಧ್ಯರನ್ನುಳಿದು); ವಿರಕ್ತ ಪೀಠಗಳು ಒತ್ತು ಕೊಡುವ ಬಸವ, ಚನ್ನಬಸವ, ಅಲ್ಲಮ, ಸಿದ್ಧರಾಮ ಇವರೇ ಮೊದಲಾದ ವಚನಕಾರರೂ ಹೆಚ್ಚೂ ಕಡಿಮೆ ಸಮಕಾಲೀನರೆಂಬುದು ಡಾ। ಎಂ. ಚಿದಾನಂದ ಮೂರ್ತಿಯವರ ಅಭಿಪ್ರಾಯವಾಗಿದೆ.[117] ಈ ಮಾತಿಗೆ ಪೂರಕವಾದ ಅನೇಕ ಮಾಹಿತಿಗಳನ್ನು (ಹಿಂದೆ ಪ್ರಸ್ತಾಪವಾಗಿರುವಂತೆ) ಇಲ್ಲಿ ಒಂದೆಡೆ ಕಲೆ ಹಾಕಬಹುದಾಗಿದೆ.

'ಮುಕ್ತಿಕಂಠಾಭರಣ'ದಲ್ಲಿ[118] ಸ್ವತಃ ವಚನ ಕಾರರಾಗಿದ್ದ ರೇವಣಸಿದ್ಧರೂ ಮತ್ತು ಅವರ ಮಗ ರುದ್ರಮುನಿಯೂ ಬಸವಾದಿ ಶಿವಶರಣರಿದ್ದ ಕಾಲ ದಲ್ಲಿಯೇ ಕಲ್ಯಾಣದ 'ಚೆಂಗಣಿಗಿಲೆಮಂಟಪ' ದಲ್ಲಿ ದ್ದುದೂ[119]; 'ಮಠಸ್ಥಲ' ವೊಂದರಲ್ಲಿ ಬಸವೇಶ್ವರನಿಗೂ, ರೇವಣಸಿದ್ಧರ ಮಗ ರುದ್ರಮುನೀಶ್ವರನಿಗೂ ಲಿಂಗ ದೀಕ್ಷೆಯನ್ನು ಅನುಗ್ರಹಿಸಿದ ಗುರು ಒಬ್ಬರೇ ಸಂಗಮೇಶ್ವರ ದೇವರಾಗಿದ್ದುದೂ[120]; 'ಅನಾದಿ ವೀರಶೈವ ಸಂಗ್ರಹ'ದಲ್ಲಿ ಚತುರಾಚಾರ್ಯರ ಚತುರ್ಕಳಶಗಳ ನಡುವೆ ಪಂಚಮ ಕಳಶವಾಗಿ ಜಗದಾರಾಧ್ಯಬಸವೇಶ್ವರನಿದ್ದುದೂ[121]; 'ರುದ್ರಮುನಿದೇವರ ಕಾಲಜ್ಞಾನ'ದಲ್ಲಿ ರುದ್ರಮುನಿಯು ಚೆನ್ನಬಸವಣ್ಣನ ತತ್ತ್ವ ಪ್ರಚಾರಕ್ಕಾಗಿ ಶ್ರೀಶೈಲಕ್ಕೆ ಬಂದಿದ್ದುದೂ[122]; 'ನಿರಂಜನವಂಶರತ್ನಾಕರ'ದಲ್ಲಿ ಚೆನ್ನಬಸವಣ್ಣನು ಕಲ್ಯಾಣವನ್ನು ಬಿಟ್ಟು ಹೋಗುವಾಗ ರುದ್ರಮುನೀಶ್ವರನಿಗೆ ಶೂನ್ಯ ಸಿಂಹಾಸನದ ತಮ್ಮ ಚರಪಟ್ಟವನ್ನು ವಹಿಸಿದ್ದುದೂ[123]; 'ಪಂಚಬ್ರಹ್ಮೋದಯ ಭಾಷ್ಯ'ದಲ್ಲಿ ಬಸವೇಶ್ವರನು ಅಲ್ಲಮಪ್ರಭುವಿಗಾಗಿ ಏರ್ಪಡಿಸಿದ್ದ ಶೂನ್ಯ ಸಿಂಹಾಸನವನ್ನು, ಅವರೆಲ್ಲಾ ಕಲ್ಯಾಣವನ್ನು ಬಿಟ್ಟು ತೆರಳಿದ ಮೇಲೆ ರುದ್ರಮುನಿಯು ತಾನು ಶೂನ್ಯಸಿಂಹಾಸನವನ್ನು ಏಕೋರಾಮನಿಗೆ ವಹಿಸಿದ್ದುದೂ[124], ಇವೇ ಮೊದಲಾದ ಗ್ರಂಥಾಧಾರಿತ ಮಾಹಿತಿಗಳು ಮೇಲಿನ ಹೇಳಿಕೆಯನ್ನು ಪುಷ್ಟೀಕರಿಸುತ್ತವೆ.

ಶಾಸನಾಧಾರಿತವಾಗಿ ಪರಿಶೀಲಿಸುವುದಾದರೆ ನದೀಹರಹಳ್ಳಿ ಶಾಸನದ ಪ್ರಕಾರ ಬಿಜ್ಜಳನ ಕೊಲೆಯಾದ ಕಾಲ ಕ್ರಿ.ಶ. ೧೧೬೮. ಇದೇ ಸಮಯಕ್ಕೆ ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋಗಿರಬೇಕು.[125] ಆಮೇಲೆ ರೇವಣಸಿದ್ಧ ಮತ್ತು ಅವರ ಮಗ ರುದ್ರಮುನಿಗಳು ವೀರಶೈವ ಗುರುನಿರ್ಮಾಪಕರಾದರೆಂದೂ, ಕಳಚುರಿಯ ಸೋವಿದೇವನು ರುದ್ರಮುನಿಪನನ್ನು ಹೊಗಳಿ ಬರೆಯಿಸಿದ ಕ್ರಿ.ಶ. ೧೧೭೭ರ ಮಂಗಳವಾಡದ ಶಾಸನ[126] ಹಾಗೂ 'ರೇವಣ' ಮತ್ತು 'ರೇಣುಕ' ಅಭಿನ್ನರು[127] ಎಂಬುದನ್ನು ಹೇಳಿ ರೇವಣಸಿದ್ಧರಿಗೆ ಆಚಾರ್ಯರ ಲಕ್ಷಣಗಳನ್ನು ಬಣ್ಣಿಸುವ ಕ್ರಿ.ಶ. ೧೧೮೭ರ ಸಿರಿವಾಳ ಶಾಸನ[128], ಇವುಗಳನ್ನು ಗಮನಿಸಿದರೆ, ರೇವಣಸಿದ್ಧಾದಿ ಚತುರಾಚಾರ್ಯರೂ; ಬಸವಾದಿ ವಚನಕಾರರೂ ಹೆಚ್ಚೂ ಕಡಿಮೆ ಸಮಕಾಲೀನರಾಗಿದ್ದರು, ಹಾಗೂ ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋದ ಮೇಲೆ (ಕ್ರಿ.ಶ. ೧೧೬೮ರ ನಂತರ) ಆಚಾರ್ಯರ ಪೀಠಗಳು ಪ್ರಾರಂಭವಾಗಿ ಅನಂತರ ಆಚಾರ್ಯರ ಪ್ರಾಧಾನ್ಯತೆ ಹೆಚ್ಚಾಗಿರಬಹು ದೆಂದು ಊಹಿಸಬಹುದಾಗಿದೆ.

ಮೇಲಿನ ಎರಡೂ ಬಗೆಯ ಆಧಾರಗಳಿಗೂ ಕಳಸಪ್ರಾಯವಾದದ್ದು ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ. ಕೆಲವು ವಚನಕಾರರು ತಮ್ಮ ಕಾಲದ ಸಮಕಾಲೀನ ವಚನಕಾರರ ಜೊತೆಗೆ, ರೇವಣಾದಿಚತುರಾಚಾರ್ಯರನ್ನೂ ಸಮಾನ ಗೌರವಾದರಗಳಿಂದ ಸ್ಮರಿಸಿರುವುದು ಗಮನಾರ್ಹ. ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಆದಯ್ಯನೆಂಬ ಶರಣ ತನ್ನೊಂದು ವಚನದಲ್ಲಿ-

"ಬಸವನೆನ್ನ ಅಂಗ, ಮಡಿವಾಳನೆನ್ನ ಮನ,
ಪ್ರಭುವೆನ್ನ ಪ್ರಾಣ, ಚೆನ್ನಬಸವಣ್ಣನೆನ್ನ ಕರಸ್ಥಲದ ಲಿಂಗ,
-----" ಹಾಗೆ ಮುಂದುವರೆದು-

"ರೇವಣಸಿದ್ಧದೇವರೆನ್ನ ನೇತ್ರ,
ಸಿದ್ಧರಾಮ ತಂದೆಗಳೆನ್ನ ನೇತ್ರದ ದೃಕ್ಕು,
ಮರುಳಸಿದ್ಧ ದೇವರೆನ್ನ ಶ್ರೋತ್ರ,
ಪಂಡಿತಾರಾಧ್ಯರೆನ್ನ ಜಿಹ್ವೆ,
ಏಕೋರಾಮಯ್ಯಗಳೆನ್ನ ನಾಸಿಕ----"[129]

ಎಂಬಿತ್ಯಾದಿಯಾಗಿ ಆಚಾರ್ಯರನ್ನೂ ಶರಣರನ್ನೂ ಸಮಾನವಾಗಿ ಸ್ಮರಿಸಿದ್ದಾನೆ. ಇದೇ ರೀತಿ ಹಾವಿನಹಾಳ ಕಲ್ಲಯ್ಯನೂ ಕೂಡ-ಶಂಕರದಾಸಿಮಯ್ಯ, ಉರಿಲಿಂಗ ಪೆದ್ದಿ, ಘಟ್ಟಿವಾಳಯ್ಯ, ಅಜಗಣ್ಣ ಮುಂತಾದ ಶರಣಗಣಂಗಳನ್ನು ಸ್ಮರಿಸುತ್ತಾ, ಅವರ ನಡುವೆ -

"---ಎನ್ನ ಘ್ರಾಣದಲ್ಲಿ ಸ್ವಾಯತವಾದನಯ್ಯಾ
ಏಕೋರಾಮಿ ತಂದೆಗಳು,
ಎನ್ನ ಜಿಹ್ವೆಯಲ್ಲಿ ಸ್ವಾಯತವಾದನಯ್ಯಾ
ಪಂಡಿತಾರಾಧ್ಯರು,
ಎನ್ನ ನೇತ್ರದಲ್ಲಿ ಸ್ವಾಯತವಾದನಯ್ಯಾ
ರೇವಣಸಿದ್ಧೇಶ್ವರ ದೇವರು,
ಎನ್ನ ತ್ವಕ್ಕಿನಲ್ಲಿ ಸ್ವಾಯತವಾದನಯ್ಯಾ
ಸಿದ್ಧರಾಮೇಶ್ವರ ದೇವರು,
ಎನ್ನ ಶ್ರೋತ್ರದಲ್ಲಿ ಸ್ವಾಯತವಾದನಯ್ಯಾ
ಮರುಳಸಿದ್ಧೇಶ್ವರ ದೇವರು,---"

ಹೀಗೆ ಮುಂದುವರೆಸಿ-ಪ್ರಭುದೇವ, ಚೆನ್ನಬಸವಣ್ಣ, ಮಡಿವಾಳಯ್ಯ, ಸೊಡ್ಡಳ ಬಾಚರಸ, ಹಡಪದ ಅಪ್ಪಣ್ಣ, ಕಿನ್ನರಿಬ್ರಹ್ಮಯ್ಯ ಇವರೇ ಮೊದಲಾದ ಶರಣರನ್ನು ಸ್ಮರಿಸಿ, ಕೊನೆಗೆ - "ಎನ್ನ ಸರ್ವಾಂಗದಲ್ಲಿ ಸ್ವಾಯತವಾದರಯ್ಯ ಗಣಂಗಳು--ನಿಮ್ಮ ಶರಣರ ಶ್ರೀಪಾದಕ್ಕೆ ನಮೋ ನಮೋ---"[130] ಎಂದು ಭಕ್ತಿಯಿಂದ ಗೌರವಿಸಿದ್ದಾನೆ. ಇಂಥದೇ ಬಗೆಯ ಸ್ಮರಣೆಯನ್ನು ಮೆರೆಮಿಂಡಯ್ಯನ ವಚನವೊಂದರಲ್ಲೂ[131] ಕಾಣಬಹುದಾಗಿದೆ. ಇಲ್ಲಿ ಪಂಚಾಚಾರ್ಯರಲ್ಲಿ ಮೊದಲ ನಾಲ್ವರು ಆಚಾರ್ಯರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಇವರುಗಳೂ; ವಚನಕಾರರಾದ ಬಸವ, ಅಲ್ಲಮ, ಚೆನ್ನಬಸವ, ಘಟ್ಟಿವಾಳಯ್ಯ, ಉರಿಲಿಂಗ ಪೆದ್ದಿ, ಮಡಿವಾಳಮಾಚಯ್ಯ ಮುಂತಾದವರ ಹಾಗೆ "ಗಣಂಗಳು" "ಶರಣರು" ಎಂದೇ ಪರಿಗಣಿತರಾಗಿದ್ದಾರೆ. ಜೊತೆಗೆ ಈ ವಚನಗಳಲ್ಲಿ ಉಕ್ತವಾಗಿರುವ ಎಲ್ಲಾ ಶರಣರೂ ಸಮಕಾಲೀನರಾಗಿರುವ ರೀತಿಯಲ್ಲಿ, ಚತುರಾಚಾರ್ಯರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಇವರುಗಳೂ ಕೂಡ ಬಸವಾದಿ ಪ್ರಮಥರ ಹಾಗೆ ಅದೇ ಕಾಲದ ಸಮಕಾಲೀನರೇ ಆಗಿದ್ದು, ಅವರಂತೆಯೇ ಐತಿಹಾಸಿಕ ವ್ಯಕ್ತಿಗಳೇ ಆಗಿದ್ದಾರೆ. ಇಷ್ಟೆಲ್ಲಾ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ಚತುರಾಚಾರ್ಯರು ಹಾಗೂ ವಚನಕಾರರು, ಪರಸ್ಪರ ಸಮಕಾಲೀನರೇ ಆಗಿದ್ದರೆಂದು ಒಪ್ಪುವುದು ಆಧಾರಬದ್ಧವಾಗಿದೆ.

### ೩.೫. ಗುರುವರ್ಗದ ( ಪಂಚಪೀಠದ ) ಮಠಗಳು

ಈಗಾಗಲೇ ಪ್ರಸ್ತಾಪವಾಗಿರುವಂತೆ ವೀರಶೈವ ಧರ್ಮವು ಬಹಳ ಪ್ರಾಚೀನವಾದ ಧರ್ಮ. ಈ ಧರ್ಮದ ಸಾಂಪ್ರದಾಯಿಕ ನಂಬಿಕೆಗಳಿಗೆ ಇಂಬು ಕೊಡುವ 'ಪಾಶುಪತ', 'ಸುಪ್ರಭೇದ', 'ಸ್ವಯಂಭುವಾಗಮ'ಗಳೇ ಮೊದಲಾಗಿ; 'ವೀರಶೈವ ಸದಾಚಾರ ಸಂಗ್ರಹ', 'ವೀರಶೈವ ಧರ್ಮಸಿಂಧು', 'ಲಿಂಗಾಯತ ಮತೋತ್ಪತ್ತಿ ನಿರ್ಣಯ'- ಇವೇ ಮೊದಲಾದ ಗ್ರಂಥಾಧಾರಿತ ವಿವರಗಳ ಪ್ರಕಾರ ಒಂದೊಂದು ಯುಗದಲ್ಲೂ ಬೇರೆಬೇರೆ ಹೆಸರಿನ ಪಂಚಾಚಾರ್ಯರು ಪರಮೇಶ್ವರನ ಬೇರೆಬೇರೆ ಮುಖಗಳಿಂದ ಉದ್ಭವಿಸಿ ವೀರಶೈವ ಧರ್ಮವನ್ನು ಉದ್ಧರಿಸಿದರೆಂದು ತಿಳಿದುಬರುತ್ತದೆ. ಕಲಿಯುಗದಲ್ಲಿ ಉದಿಸಿದ ಪಂಚಾಚಾರ್ಯರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯ ಅನುಕ್ರಮವಾಗಿ ರಂಭಾಪುರಿ(ಬಾಳೇಹಳ್ಳಿ), ಉಜ್ಜಯಿನಿ, ಕೇದಾರ, ಶ್ರೀಶೈಲ[132] ಹಾಗೂ ಕಾಶಿಗಳಲ್ಲಿ ತಮ್ಮ ಮೂಲ ಪೀಠ (ಸಿಂಹಾಸನ ಅಥವಾ ಮಠ)ಗಳನ್ನು ಸ್ಥಾಪಿಸಿ ವೀರಶೈವ ಧರ್ಮವನ್ನು ಬೋಧಿಸಿದರು. ಇವೇ ಇಂದಿನ ಗುರುಸ್ಥಲದ ಅಥವಾ ಗುರುವರ್ಗದ ವೀರಶೈವರ ಪ್ರಸಿದ್ಧ ಪಂಚಪೀಠಗಳಾಗಿವೆ.[133] ಇವುಗಳನ್ನು ಸಿಂಹಾಸನದ ಮಠಗಳೆಂದೂ ಕರೆಯುವುದುಂಟು.

ಪಂಚಪೀಠಗಳ ಪೀಠಾಚಾರ್ಯರು ವೀರಶೈವ ಧಾರ್ಮಿಕ ಸಾಮ್ರಾಜ್ಯದ ಅಧಿಪತಿಗಳಿದ್ದಂತೆ. ಸಮಸ್ತ ವೀರಶೈವ ಸಮಾಜದ ಧಾರ್ಮಿಕ ಆಗುಹೋಗುಗಳ ಅಂತಿಮ ನಿರ್ಣಯದ ಹಕ್ಕು ಇವರದು. ವೀರಶೈವ ಸಮಾಜದ ಮೇಲೆ ಇವರಿಗೆ ಸಂಪೂರ್ಣ ಹತೋಟಿಯಿರುತ್ತದೆ.[134] ವೀರಶೈವರ ಗೋತ್ರ ಸೂತ್ರಗಳು

ಪ್ರಾರಂಭವಾಗಿದ್ದೆ ಇವರಿಂದ ಎಂಬುದು ಪ್ರಬಲವಾದ ನಂಬಿಕೆ. ಈ ಆಚಾರ್ಯರಿಂದ ಸ್ಥಾಪಿತವಾದ ಪಂಚಪೀಠಗಳಲ್ಲಿ ಯಾವುದಾದರೂ ಒಂದು ಪೀಠಕ್ಕೆ ಸಂಬಂಧಿಸಿದ ಒಂದು ಮಠ, ಪ್ರತಿಯೊಂದು ಗ್ರಾಮ ಇಲ್ಲವೆ ನಗರಗಳಲ್ಲೂ ಇದ್ದೇ ಇರುತ್ತದೆ.[135] ಪೀಠಾಧಿಪತಿಗಳು ತಮ್ಮ ಸೂತ್ರಿಕ ಶಿಷ್ಯರಾದ 'ಪಟ್ಟ, ಚರಂತಿ, ದೇಶಿಕ, ಅತೀತ'ರೆಂಬ ಮಹಂತಿನವರಿಂದ ಲಿಂಗವಂತ ಧರ್ಮೀಯರಿಗೆ ಅಗತ್ಯವಾದ ಧಾರ್ಮಿಕ ಆಚರಣೆಗಳನ್ನು ನಡೆಸಿಕೊಡುತ್ತಾರೆ.[136] ಧರ್ಮರಕ್ಷಣೆಯ ಜೊತೆಗೆ ಅಧರ್ಮದಿಂದ ನಡೆದವರನ್ನು ಶಿಕ್ಷಿಸುವ ಅಧಿಕಾರವೂ ಇವರಿಗಿರುತ್ತದೆ. ಸಾಮಾನ್ಯವಾಗಿ ವಿರಕ್ತ ಮಠಗಳನ್ನು ಹೊರತುಪಡಿಸಿ ಉಳಿದೆಲ್ಲಾ ವೀರಶೈವ ಮಠಗಳೂ ಒಂದಿಲ್ಲೊಂದು ಪೀಠಗಳಿಗೆ ಶಾಖಾ ಮಠಗಳಾಗಿರುತ್ತವೆ. ಪೀಠಾಧೀಶರೆಲ್ಲಾ ಪರಸ್ಪರ ಸಮಾನ ಗೌರವ ಉಳ್ಳವರಾಗಿದ್ದು, ಮಠ, ಸಿಂಹಾಸನ, ಕಿರೀಟ ಮುಂತಾದ ವೈಭವ ಹೊಂದಿ ಸಂಪೂರ್ಣ ಸ್ವತಂತ್ರರಾಗಿರುತ್ತಾರೆ. ಪ್ರತಿಯೊಂದು ಪೀಠಕ್ಕೂ ತನ್ನದೇ ಆದ ಪ್ರತ್ಯೇಕ ಗೋತ್ರ ಸೂತ್ರಗಳಿದ್ದು ಜೊತೆಗೆ ಹನ್ನೆರಡು ಉಪಸೂತ್ರ ಗಳಿರುತ್ತವೆ.[137]

ಪಂಚಪೀಠಾಧೀಶರಿಗೆ ಐದು ಉಪಾಚಾರ್ಯರ ವರ್ಗಗಳಿವೆ. ವೀರಶೈವ ಸದಾಚಾರ ಸಂಗ್ರಹದಲ್ಲಿ ಹೇಳಿರುವಂತೆ ಪಂಚಾಚಾರ್ಯರು ಐವರು, ಹಾಗೆಯೇ ಪಂಚವೃತ್ಯಾಚಾರ್ಯರು ಐವರು.[138] ೧. ಮಠದಯ್ಯ, (ಹಿರೇಮಠದಯ್ಯ) ೨. ಮಠಪತ್ತಿ, ೩. ಗಣಾಚಾರ್ಯ, ೪. ಗಣಕುಮಾರ, ೫. ಸ್ಥಾವರಿಕ. ಇವರೇ ಉಪಾಚಾರ್ಯರಾದ ಪಂಚವೃತ್ಯಾಚಾರ್ಯರು. ಇವರೆಲ್ಲರೂ ಸಮಾನ ಶೀಲರು, ಸಮಾನ ಸಂಸ್ಕಾರವುಳ್ಳವರೂ ಆಗಿರುತ್ತಾರೆ. ಪಂಚಾಚಾರ್ಯರು ಹೇಗೆ ಪರಮೇಶ್ವರನ ಪಂಚಮುಖಗಳಿಂದ ಉದ್ಭವಿಸಿದರು ಎಂಬ ಕಲ್ಪನೆ ಇದೆಯೋ ಹಾಗೆಯೇ ಪಂಚಾಚಾರ್ಯರ ನೆರವಿಗಾಗಿ ಪಂಚವೃತ್ಯಾಚಾರ್ಯರೂ ಕೂಡ ಪರಮೇಶ್ವರನ ಬೇರೆ ಬೇರೆ ಅಂಗಗಳಿಂದ ಹುಟ್ಟಿದವರೆಂಬ ನಂಬಿಕೆ ಇದೆ.[139]

### ೩.೫.೧. ಪಟ್ಟದ್ದೇವರ ಮಠಗಳು

ಈ ಪಂಚಾಚಾರ್ಯರಿಗೂ ಪಂಚವೃತ್ಯಾಚಾರ್ಯರಿಗೂ ನಡುವಿನ ಸ್ತರವೆ ಪಟ್ಟಾಧ್ಯಕ್ಷರದು. ದೇಶದ ಮಧ್ಯೆ ಆಯ್ದು ಭಾಗಗಳಲ್ಲಿರುವ ಪಟ್ಟಾಧ್ಯಕ್ಷರದು ಪಂಚಾಚಾರ್ಯರುಗಳ ನಂತರದ ಸ್ಥಾನ. ಇವರ ಮಠಗಳನ್ನು ಪಟ್ಟದ್ದೇವರಮಠ ಅಥವಾ ಹಿರಿಯಮಠ (ಹಿರೇಮಠ)ವೆಂದೂ ಕರೆಯುತ್ತಾರೆ. ಪಟ್ಟದ್ದೇವರ ಮಠದ ಪ್ರಾದೇಶಿಕ ವ್ಯಾಪ್ತಿಯು ಸಾಕಷ್ಟು ದೊಡ್ಡದಾಗಿರುತ್ತದೆ. ಸಾಮಾನ್ಯವಾಗಿ ಮೂವತ್ತು ನಲವತ್ತು ಊರುಗಳಿಗೆ ಒಂದರಂತೆ ಅಥವಾ ದೊಡ್ಡ ದೊಡ್ಡ ಪಟ್ಟಣಗಳಿಗೆ ಒಂದರಂತೆ ಪಟ್ಟದ ಮಠಗಳಿರುತ್ತವೆ.[140] ಪಟ್ಟದ್ದೇವರು ತಮಗೆ ನಿಗದಿಯಾದ ಪ್ರಾದೇಶಿಕ ಜನರ ಧಾರ್ಮಿಕ ಕಾರ್ಯಗಳ ನ್ಯಾಯ ನಿರ್ಣಯಗಳಿಗೆ ಅಧಿಕಾರವುಳ್ಳವರಾಗಿರುತ್ತಾರೆ.

ಪಟ್ಟಾಧ್ಯಕ್ಷರಲ್ಲಿ ಎರಡು ಬಗೆ. ೧. ಸ್ಥಿರಪಟ್ಟಾಧ್ಯಕ್ಷ, ೨. ಚರಪಟ್ಟಾಧ್ಯಕ್ಷ. ವೀರಶೈವ ಧರ್ಮಾಧಿಕಾರ ನಡೆಸುವುದಕ್ಕಾಗಿ ಓರ್ವ ಗುರುಗಳು ಸ್ವಸ್ಥಾನ (ಮಠ)ದಲ್ಲಿಯೇ ಇದ್ದುಕೊಂಡು ಅಧಿಕಾರ ನಡೆಸುತ್ತಾರೆ. ಅವರೆ ಸ್ಥಿರ ಪಟ್ಟಾಧ್ಯಕ್ಷರು. ಮತ್ತೊಬ್ಬ ಗುರುಗಳು ದೇಶದ ಮೇಲೆ ಸಂಚರಿಸುತ್ತಾ ಧರ್ಮಜಾಗೃತಿಯನ್ನು ಉಂಟುಮಾಡುತ್ತಾ ಧರ್ಮಾಧಿಕಾರವನ್ನು ನಡೆಸುವುದರಿಂದ ಅವರನ್ನು ಚರಪಟ್ಟಾಧ್ಯಕ್ಷರೆಂದು ಕರೆಯಲಾಗುತ್ತದೆ. ಇವರಿಬ್ಬರಿಗೂ ತಮ್ಮ ಉತ್ತರಾಧಿಕಾರತ್ವಕ್ಕಾಗಿ ನೇಮಿಸಿಕೊಂಡ ಉಪಚಾರ್ಯರುಗಳಿಗೆ 'ದೇಶಿಕ ಅಥವಾ ಚರಪತಿ' ಎಂದು ಕರೆಯುತ್ತಾರೆ.[141]

ಲಿಂಗವಂತ ಧರ್ಮೀಯರಿಗೆ ಲಿಂಗಧಾರಣೆ, ದೀಕ್ಷಾ, ವಿವಾಹಾದಿ ಸಂಸ್ಕಾರಗಳ ಸಂದರ್ಭದಲ್ಲಿ ಗುರುವರ್ಗದ ಸಂಪ್ರದಾಯದಂತೆ ಧಾರ್ಮಿಕ ಕಾರ್ಯಗಳನ್ನು ನಿರ್ದೇಶನ ಮಾಡುವ ಅಧಿಕಾರ 'ಸ್ಥಿರ-ಚರ' ಪಟ್ಟಾಧ್ಯಕ್ಷರಿಬ್ಬರಿಗೂ ಸಮಾನವಾಗಿರುತ್ತದೆ. ಪಂ॥ ಕಾಶಿನಾಥಶಾಸ್ತ್ರಿಯು ಹೇಳುವಂತೆ-''ಧಾರ್ಮಿಕ ಸಂಸ್ಕಾರಗಳನ್ನು ನಡೆಸುವಲ್ಲಿ ಉಭಯತರೂ ಸಮಾನ ಗುರುತ್ವವುಳ್ಳವರೇ ಆಗಿದ್ದು ಅಷ್ಟಾವರಣಾಂತರ್ಗತ ಗುರುಪದವಾಚ್ಯರೂ, ಜಂಗಮ ಪದ ವಾಚ್ಯರೂ ಆಗಿರುತ್ತಾರೆ.''[142] ಸಾಮಾನ್ಯವಾಗಿ ಸ್ಥಿರ ಪಟ್ಟಾಧ್ಯಕ್ಷರು ಬ್ರಹ್ಮಚಾರಿಗಳಾಗಿರುತ್ತಾರೆ. ಇವರ ಕೈಕೆಳಗೆ ಹಿರೇಮಠರೆಂಬ ಮಠಸ್ಥ (ಮಠದಯ್ಯ)ರಿದ್ದು ಪಟ್ಟಾಧ್ಯಕ್ಷರ ಪರವಾಗಿ ಪೌರೋಹಿತ್ಯ ನಡೆಸುತ್ತಾರೆ.

ಪಂಚ ವೃತ್ಯಾಚಾರ್ಯರಲ್ಲಿ ಮೊದಲಿಗರಾದ ಇವರು ಗೃಹಸ್ಥರೇ ಆಗಿದ್ದು ಸಾಮಾನ್ಯರ ಹಾಗೆ ವೇಷಭೂಷಣ ಉಳ್ಳವರಾಗಿರುತ್ತಾರೆ.[143] ಗ್ರಾಮೀಣಭಾಗದಲ್ಲಿ ಇವರನ್ನು ಅಯ್ಯನವರೆಂದು ಕರೆಯುವುದುಂಟು. ಪಟ್ಟಾಧ್ಯಕ್ಷರುಗಳಿಗೆ ಹಲವಾರು ಊರುಗಳ ಧಾರ್ಮಿಕ ಪ್ರಭುತ್ವವಿದ್ದರೆ, ಹಿರೇಮಠಸ್ಥರು ಆಯಾ ಊರಿನ ಧಾರ್ಮಿಕ ನಾಯಕತ್ವ ವಹಿಸುತ್ತಾರೆ. ಈ ಹಿರೇಮಠಸ್ಥರ (ಮಠದಯ್ಯಗಳ) ಕೈಕೆಳಗಿರುವವರೇ ಮಠಪತ್ತಿ, ಗಣಾಚಾರಿ ಮುಂತಾದವರು.[144] ಇವರುಗಳು ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಹಿರೇಮಠಸ್ಥರ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಾರೆ.

ಪಟ್ಟದ್ದೇವರ ಮಠಗಳಲ್ಲಿ ಎರಡು ಬಗೆ. ೧. ಪುತ್ರವರ್ಗದ ಮಠ, ೨. ಶಿಷ್ಯವರ್ಗದ ಮಠ. ಪುತ್ರವರ್ಗದ ಮಠದಲ್ಲಿ ಬ್ರಹ್ಮಚಾರಿಗಳಾದ ಪಟ್ಟದ್ದೇವರು ತಮ್ಮ ಅಣ್ಣ ತಮ್ಮಂದಿರ ಮಕ್ಕಳಲ್ಲಿ ಒಬ್ಬರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ನೇಮಿಸಿಕೊಳ್ಳುತ್ತಾರೆ. ಶಿಷ್ಯವರ್ಗದ ಮಠದಲ್ಲಿ ಪಟ್ಟದ್ದೇವರು ತಮ್ಮ ಶಿಷ್ಯವರ್ಗದವರಲ್ಲಿ ಒಬ್ಬನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಆರಿಸಿಕೊಳ್ಳುತ್ತಾರೆ. ಹಿಂದೆ ಪಟ್ಟದ್ದೇವರ ಮಠದ ಉಪಶಾಖಾ ಪಟ್ಟದ ಮಠಗಳು ಲಿಂಗವಂತರೆ ಪ್ರಧಾನವಾಗಿದ್ದ ಪ್ರತಿ ಊರಿಗೊಂದರಂತೆ ಇರುತ್ತಿದ್ದುವು.[145]

### ೩.೫.೨. ಪಂಚವೃತ್ಯಾಚಾರ್ಯರು

ಈ ಮೊದಲೇ ಪ್ರಸ್ತಾಪವಾದಂತೆ ಪರಶಿವನ ಪಂಚ ಅಂಗಗಳಿಂದ ಉದ್ಭವರಾದವರೆ (ಮಠದಯ್ಯ, ಮಠಪತ್ತಿ, ಗಣಾಚಾರ್ಯ, ಗಣಕುಮಾರ, ಸ್ಥಾವರಿಕ) ಪಂಚ ವೃತ್ಯಾಚಾರ್ಯರು. ಇವರಲ್ಲಿ 'ಮಠದಯ್ಯ ಅಥವಾ ಹಿರೇಮಠಸ್ಥನು ಉಳಿದವರಿಗೆಲ್ಲಾ ಮುಖ್ಯಸ್ಥನಾಗಿರುತ್ತಾನೆ. ಲಿಂಗವಂತರ ಸಂಸ್ಕಾರಾದಿ ಧಾರ್ಮಿಕ ಆಚರಣೆಗಳೆಲ್ಲವೂ ಈತನ ಮಾರ್ಗದರ್ಶನದಲ್ಲೆ ನಡೆಯುತ್ತವೆ. ಮಠಪತ್ತಿಯು[146] ಪೂಜಾಕೆಲಸಗಳನ್ನು ನಿರ್ವಹಿಸುತ್ತಾನೆ. ಗಣಾಚಾರಿಯು[147] ಮಂತ್ರಗಳನ್ನು ಪಠಿಸುವ ವೈದಿಕನಾಗಿರುತ್ತಾನೆ. ಗಣಕುಮಾರನು[148] ಆಯಾ ಸಂಸ್ಕಾರಗಳಿಗೆ ಬೇಕಾಗುವ ಪರಿಕರಗಳನ್ನು ಒದಗಿಸಿಕೊಡುತ್ತಾನೆ. ಸ್ಥಾವರಿಕನು[149] ಪೂಜಾಸಾಮಾನುಗಳನ್ನು ಅಣಿಗೊಳಿಸಿ ಸಂಸ್ಕಾರ ಕಾರ್ಯಗಳಿಗೆ ಸಜ್ಜುಗೊಳಿಸುತ್ತಾನೆ'[150] ಎಂಬುದಾಗಿ ನೀಲಕಂಠ ಶಿವಾಚಾರ್ಯ ಸ್ವಾಮಿಯವರು ಹೇಳಿರುತ್ತಾರೆ. ಬುದ್ಧಯ್ಯ ಸ್ವಾಮಿ ಪುರಾಣಿಕರು-''ಪಂಚ ವೃತ್ಯಾಚಾರ್ಯ ರಲ್ಲಿ ಮಠದಯ್ಯನು ಮಠಪತ್ತಿಯ ಸಹಾಯದಿಂದ ವೀರಶೈವರ ಲಿಂಗಧಾರಣೆಯಿಂದ ಅಂತ್ಯ ಸಂಸ್ಕಾರದವರೆಗೆ ಯಾವತ್ತೂ 'ದಶಕರ್ಮ'[151]ಗಳನ್ನು ವಿಧಿವತ್ತಾಗಿಯೂ ಕ್ರಮಬದ್ಧವಾಗಿಯೂ ಮಾಡತಕ್ಕದ್ದು. ಗಣಾಚಾರ್ಯನು ಗಣಕುಮಾರನ ಸಹಾಯದಿಂದ ತನ್ನ ವೀರ ವೃತ್ತಿಯಿಂದ ಎಲ್ಲರನ್ನು ಕಾಪಾಡುವನು. ಆದ್ದರಿಂದಲೇ 'ಗಂಡ ಬಿಟ್ಟರೂ ಗಣಾಚಾರ್ಯ ಬಿಡ' ಎಂಬ ಗಾದೆಯು ಮಾತಿರುವುದು. ಇನ್ನು ಸ್ಥಾವರಿಕನು ಎಲ್ಲಾ ಶಿವಾಲಯಗಳ ಮೇಲ್ವಿಚಾರಕನಾಗಿ ಯಾವತ್ತೂ ಸ್ಥಾವರಲಿಂಗಗಳ ಪೂಜಾದಿಗಳು ಯೋಗ್ಯ ರೀತಿಯಿಂದ ಸಾಗಿವೆಯೇ ಎಂಬುದನ್ನು ನೋಡತಕ್ಕದ್ದು,''[152] ಎಂಬುದಾಗಿ ಅವರ ಕಾರ್ಯವೈಖರಿಗಳನ್ನು ವಿವರಿಸಿದ್ದಾರೆ. ಹೀಗೆ ಆಯಾ ಗ್ರಾಮದ ಮಠದಯ್ಯನವರಿಗೆ ಅನುಕೂಲಕರವಾಗಿ ಹಾಗೂ ಸಮಾಜದ ಸೇವೆ ಮಾಡುವ ಉದ್ದೇಶದಿಂದ ಈ ಗಣಾಚಾರಿ, ಮಠಪತ್ತಿ ಮುಂತಾದವರನ್ನು ನೇಮಿಸಲಾಗಿತ್ತು. ಪಂಚವೃತ್ಯಾಚಾರ್ಯರುಗಳೆಲ್ಲಾ ಗೃಹಸ್ಥರೇ ಆಗಿರುತ್ತಾರೆ. ಗ್ರಾಮದ ಗುರುವೆನಿಸಿಕೊಂಡ ಮಠದಯ್ಯ ಗೃಹಸ್ಥನೇ ಆಗಿದ್ದರೂ ಮಠಾಧಿಪತ್ಯ ಹೊಂದಿರುತ್ತಾನೆ. ಈ ಮಠದಯ್ಯಗಳ (ಹಿರೇಮಠಸ್ಥರ) ಮಠಗಳು ಗುರುವರ್ಗದ ಮಠಗಳ ಶ್ರೇಣಿಯಲ್ಲಿ ಮೂರನೆಯ ಸ್ತರದ ಮಠಗಳಾಗಿರುತ್ತವೆ.

### ೩.೫.೩. ಕಾಯಕದಯ್ಯಗಳು

ಮೇಲಿನ ಪೀಠಗಳವರಿಗೆ ಗ್ರಾಮಗಳ ಧಾರ್ಮಿಕ ವೃತ್ತಾಂತಗಳನ್ನು ಆಗಾಗ್ಗೆ ತಿಳಿಸಲು ಕೆಲವರು ಕಾಯಕದಯ್ಯಗಳನ್ನು ನಿಯಮಿಸಲಾಗಿತ್ತು. ಇವರನ್ನು ಆಯಾ ಭಾಗದ ಪೀಠಾಧೀಶರ ಅಧೀನಕ್ಕೊಳಪಡಿಸಲಾಗಿತ್ತು. ಇವರು ಎಂಟು ದಿನಗಳಿಗೊಮ್ಮೆ ಆಯಾ ಪ್ರಾಂತ್ಯಗಳಿಗೆ ಎಡತಾಕಿ ಅಲ್ಲಿನ ಧಾರ್ಮಿಕ ವೃತ್ತಾಂತಗಳನ್ನೆಲ್ಲಾ ಪೀಠಾಧೀಶರಿಗೆ ಸವಿವರವಾಗಿ ತಿಳಿಸುತ್ತಿದ್ದರು.[153] ವೀರಶೈವ ಕರದರ್ಪಣದ ಪ್ರಕಾರ ಕಾಯಕದಯ್ಯಗಳಲ್ಲಿ ನಾಲ್ಕು ಬಗೆ. ೧. ಘಂಟೆಕಾಯಕ, ೨. ಗದ್ದುಗೆಕಾಯಕ, ೩. ಕಂಬದ ಕಾಯಕ, ೪. ಮುಳ್ಳಾವಿಗೆಕಾಯಕ.[154]

**೧. ಘುಂಟೆಕಾಯಕ**

ಘುಂಟೆಕಾಯಕದ ಅಯ್ಯಗಳು (ಜಂಗಮರು) ಸಾಮಾನ್ಯವಾಗಿ ಸರ್ವರೂ ಗ್ರಾಮದಲ್ಲೆ ತಂಗಿರುವಾಗ ತಮಗೆ ಗೊತ್ತಾದ ಮನೆಯ ಮುಂದೆ ಹೋಗಿ ಅಲ್ಲಿ ತಮ್ಮ ಧರ್ಮದ ಮಂಗಳ ವಿಜಯ ಧ್ವನಿಯ ಘುಂಟಾನಾದವನ್ನು ಮಾಡುತ್ತಿದ್ದರು. ಈ ಘುಂಟಾನಾದವನ್ನು ಕೇಳಿದ ಕೂಡಲೆ ಹೊರಗೆ ಬಂದ ಭಕ್ತಸಮೂಹ ಆ ಜಂಗಮರ ಪಾದಕ್ಕೆರಗಿ ತಮ್ಮ ಧಾರ್ಮಿಕ ಆಚಾರ ವಿಚಾರಗಳ ಕುಶಲ ಪ್ರಶ್ನೆಗಳನ್ನು ಕೇಳುತ್ತಿದ್ದರು. ಜಂಗಮರು ಅವರ ತಪ್ಪುಗಳನ್ನು ತಿದ್ದಿ, ಸೂಕ್ತ ಸಲಹೆಗಳನ್ನು ನೀಡಿ 'ಜ್ಞಾನಬೋಧಕನೂ, ಧರ್ಮಶಾಸಕನೂ ಆದ ಗುರು ಸ್ಮರಣೆಯನ್ನು ಮರೆಯಬೇಡಿ'ರೆಂದು ಅಭಯವಿತ್ತು ಹೊರಡುತ್ತಿದ್ದರು. ಭಕ್ತರ ಧಾರ್ಮಿಕ ಆಚರಣೆಗಳ ಪರಿಶೀಲನೆ ಹಾಗೂ ಅದಕ್ಕೆ ಅನುಗುಣವಾದ ಸೂಕ್ತ ತಿಳುವಳಿಕೆ, ಎಚ್ಚರಿಕೆಗಳನ್ನು ನೀಡುವುದು ಈ ಅಯ್ಯಗಳ ಕೆಲಸವಾಗಿತ್ತು.

**೨. ಗದ್ದುಗೆಕಾಯಕ**

ಗದ್ದುಗೆಕಾಯಕ ಅಥವಾ ಕಟ್ಟೆಕಾಯಕದ ಅಯ್ಯಗಳು ಘುಂಟೆಕಾಯಕದ ಅಯ್ಯಗಳಿಗಿಂತ ಸ್ವಲ್ಪ ಹೆಚ್ಚಿನ ಜವಾಬ್ದಾರಿಯುಳ್ಳವರಾಗಿರುತ್ತಾರೆ. ಮೊದಲು ಇವರು ತಮಗೆ ಬೇಕಾದ ಗ್ರಾಮದ ಪೂರ್ಣ ಮಾಹಿತಿಯನ್ನು ಗ್ರಹಿಸಿ, ಆ ಗ್ರಾಮದ ನಡುವಿನ ವಿಶಾಲ ಕಟ್ಟೆಯೊಂದರ ಮೇಲೆ ಆಸನಾರೂಢರಾಗಿ ಕುಳಿತು ಘುಂಟಾನಾದ ಮೊಳಗಿಸುತ್ತಿದ್ದರು. ಆಗ ಓಣಿಯ ಭಕ್ತರೆಲ್ಲರೂ ಬಂದು ಆ ಜಂಗಮರಿಗೆ ನಮಸ್ಕರಿಸಿ ಅವರು ಹೇಳುವ ಉಪದೇಶವನ್ನು ಕೇಳುತ್ತಿದ್ದರು. ಯಾರು ಧರ್ಮಬಾಹಿರನಾಗಿರುತ್ತಾನೋ ಅವನನ್ನು ಮರ್ಮದಿಂದ ತಿದ್ದಿ, ಅವನ ಅಂತರಂಗದಲ್ಲಿ ಪಾಪ-ಪುಣ್ಯಗಳ ಕರ್ಮ ವಿಶೇಷಗಳನ್ನು ಅರುಹಿ ಜಾಗೃತನನ್ನಾಗಿ ಮಾಡಿ ಗುರುಪೀಠಕ್ಕೆ ತೆರಳಿ ವರದಿ ಮಾಡುವುದು ಗದ್ದುಗೆಕಾಯಕದ ಅಯ್ಯಗಳ ಕೆಲಸವಾಗಿತ್ತು.

**೩. ಕಂಬದಕಾಯಕ**

ಸಂಬಂಧಪಟ್ಟ ಗ್ರಾಮದಲ್ಲಿ ದುರ್ಮಾರ್ಗಿಗಳಾದವರ ಪರಿಸ್ಥಿತಿ ಸುಧಾರಿಸದಿದ್ದಾಗ ಅಂಥವರ ಬಗೆಗೆ ಸಂಪೂರ್ಣ ಮಾಹಿತಿ ಸಂಗ್ರಹಿಸಿ ಗುರುಪೀಠದ ಆದೇಶಾನುಸಾರ ಈ ಕಂಬದ ಕಾಯಕದ ಅಯ್ಯಗಳು ಅಥವಾ ತೆಕ್ಕೆ ಕಾಯಕದ ಅಯ್ಯಗಳು ಗ್ರಾಮ ಪ್ರವೇಶ ಮಾಡುತ್ತಿದ್ದರು. ಈ ಜಂಗಮರು ನೇರವಾಗಿ ಆ ಅವಿವೇಕಿಯ ಮನೆಗೇ ಹೋಗಿ, ಮನೆಯೊಳಗಿನ ಕಂಬವೊಂದಕ್ಕೆ ತೆಕ್ಕೆ ಹಾಕಿಕೊಂಡು ಸತ್ಯಾಗ್ರಹ ಹೂಡುತ್ತಿದ್ದರು. ಈ ಸತ್ಯಾಗ್ರಹಿಗಳು ಮೌನವ್ರತ ಹಾಗೂ ಉಪವಾಸಾದಿಗಳಿಂದ ಒಂದೆರಡು ದಿನ ಹಾಗೆ ಕಾಲ ಕಳೆಯುವುದರೊಳಗೆ ದುರ್ಮಾರ್ಗಿ ಮತ್ತವನ ಕುಟುಂಬದವರು ಆತ್ಮಗತವಾಗಿ ದಂಡಿಸಲ್ಪಡುತ್ತಿದ್ದರು. ಹೀಗೆ ಆತ್ಮ ಶೋಧಕ್ಕೆ ಒಳಗಾದ ವ್ಯಸನಿಗೆ ತನ್ನ ತಪ್ಪಿನ ಅರಿವಾಗಿ, ಬಂದು ಆ ಜಂಗಮರ ಪಾದಕ್ಕೆರಗಿ ತಮ್ಮ ಆಜ್ಞಾನುಸಾರ ನಡೆಯುವುದಾಗಿ ವಚನಕೊಟ್ಟು ಅವರು ತಮ್ಮ ಸತ್ಯಾಗ್ರಹದಿಂದ ವಿಮುಖರಾಗುವಂತೆ ಪ್ರಾರ್ಥಿಸಿಕೊಳ್ಳುತ್ತಿದ್ದನು. ಆಗ ಆ ಜಂಗಮರು ತಮ್ಮ ಕಂಬದ ತೆಕ್ಕೆ ಕಾಯಕವನ್ನು ನಿಲ್ಲಿಸಿ ಆ ಭಕ್ತನಿಂದಲೇ ಆದರಾತಿಥ್ಯಗಳನ್ನು ಸ್ವೀಕರಿಸಿ ಅವನಿಗೆ ಸದ್ಬೋಧನೆಯನ್ನು ಮಾಡಿ ಗುರುಪೀಠಕ್ಕೆ ಹಿಂತಿರುಗುತ್ತಿದ್ದರು.

**೪. ಮುಳ್ಳಾವಿಗೆಕಾಯಕ**

ಮೇಲ್ಕಂಡ ಅಯ್ಯಗಳಿಂದ ಗ್ರಾಮವಾರ್ತೆಗಳನ್ನು ಗ್ರಹಿಸಿದ ಗುರುಪೀಠದವರು, ಮತ್ತೂ ಅವಿವೇಕಿಗಳಾಗೇ ಉಳಿದಿದ್ದ ಧರ್ಮಲಂಡರನ್ನು ಗುರುತಿಸಿ, ಅವರ ಬಳಿಗೆ ಈ ಮುಳ್ಳಾವಿಗೆ ಕಾಯಕದ ಪ್ರಧಾನ ಸತ್ಯಾಗ್ರಹಿ ಜಂಗಮಯ್ಯಗಳನ್ನು ಕಳುಹಿಸಿಕೊಡುತ್ತಿದ್ದರು. ಇವರು ಸಂಬಂಧಪಟ್ಟ ಗ್ರಾಮದ ಮಠಸ್ಥರಿಂದ ಈ ಧರ್ಮಲಂಡನ ಆಮೂಲಾಗ್ರ ವೃತ್ತಾಂತವನ್ನೆಲ್ಲಾ ಗ್ರಹಿಸಿ ಆತನ ಅವಿವೇಕಕ್ಕೆ ಉಗ್ರ ಪ್ರತಿಕ್ರಿಯೆ ತೋರಿ (ರೌದ್ರಾವತಾರಿಗಳಾಗಿ), ಆತನ ಮನೆಯ ಎದುರಿಗೆ ನಿಂತು ಕಠಿಣ ಸತ್ಯಾಗ್ರಹ ಪ್ರಾರಂಭಿಸುತ್ತಿದ್ದರು. ಕಬ್ಬಿಣದ ಮೊಳೆಗಳುಳ್ಳ ಮುಳ್ಳಾವಿಗೆಯ ಮೇಲೆ ನಿಂತು ಆತನನ್ನು ಗಂಭೀರವಾದ ಉಕ್ತಿಗಳಿಂದ ಎಚ್ಚರಿಸುತ್ತಿದ್ದರು. ಈ ಉಗ್ರ ಸತ್ಯಾಗ್ರಹದ ಅಯ್ಯಗಳಿಗೆ ತಮ್ಮ ಬಳಿ ನೆರೆದ ಎಲ್ಲಾ ಗ್ರಾಮಸ್ಥರ ಸಾಕ್ಷಿಯಾಗಿ, ಆತ ತಾನಿನ್ನು ಲಿಂಗಾಂಗಿ ಧರ್ಮಕ್ಕೆ ಚ್ಯುತಿಬಾರದಂತೆ ಧರ್ಮನಿಷ್ಠನಾಗಿ ಬಾಳುವುದಾಗಿ ಭಾಷೆ ಕೊಟ್ಟು, ತಪ್ಪು ಕಾಣಿಕೆಯನ್ನು ಅರ್ಪಿಸುತ್ತಿದ್ದನು. ಆಗ ಅಯ್ಯಗಳು ತಮ್ಮ ಉಗ್ರಸತ್ಯಾಗ್ರಹವನ್ನು ನಿಲ್ಲಿಸಿ ಆತನ

ಉಪಚಾರಗಳನ್ನು ಸ್ವೀಕರಿಸಿ ಇನ್ನು ಮುಂದೆ ಸದ್ಧರ್ಮ ನಿರತನಾಗಿ ಬಾಳುವಂತೆ ಹರಸಿ ಮುನ್ನಡೆಯುತ್ತಿದ್ದರು.[155]

ಹೀಗೆ ವಿಶಿಷ್ಟ ರೀತಿಯ ಕಾಯಕಗಳ ಮೂಲಕ ವೀರಶೈವ ಧರ್ಮದ ರಕ್ಷಣೆಯ ಜೊತೆಗೆ, ಭಕ್ತರಿಗೂ ಗುರುಗಳಿಗೂ ಸೇತುವೆಯಂತಿದ್ದ ಕಾಯಕದ ಅಯ್ಯಗಳು, ಪ್ರಾಮಾಣಿಕವಾದ ಸಮಾಜೊಧಾರ್ಮಿಕ ಸೇವಕರಾಗಿ ದುಡಿಯುತ್ತಿದ್ದರು. ಯಾವುದೇ ಮಠ-ಮಾನ್ಯಗಳ ಅಧಿಕಾರವಿಲ್ಲದ ಗೃಹಸ್ಥರೇ ಆಗಿದ್ದ ಇವರಿಗೆ ಭಕ್ತರು ಕೊಡುತ್ತಿದ್ದ ಕಾಣಿಕೆಯೇ ಜೀವನಾಧಾರವಾಗಿತ್ತು. ಸಾಮಾನ್ಯವಾಗಿ ಸದಾ ಚರಜಂಗಮರೇ ಆಗಿದ್ದ ಇವರು ಸೇವಾನಿರತರಾಗಿ ಗ್ರಾಮಗಳಿಗೆ ಬಂದಾಗ ಮಠದಯ್ಯನವರು ಉಚಿತ ಏರ್ಪಾಟುಗಳನ್ನು ಮಾಡಿಕೊಡುತ್ತಿದ್ದರು. ಕಾಯಕದಯ್ಯಗಳು ತಮ್ಮ ಶರೀರವನ್ನು ದಂಡಿಸಿ (ಶಾರೀರಿಕ ತಪಶ್ಚರ್ಯದಿಂದ) ಧರ್ಮೋನ್ನತಿ ಮಾಡುವವರಾಗಿದ್ದುದರಿಂದ "ಕಾಯೇನ ಧರ್ಮೋನ್ನತಿರ್ವಿಧಿಃ ಕ್ರಿಯತೇ ಇತಿ ಕಾಯಕಾಃ" ಎಂಬ ವ್ಯಾಖ್ಯಾನಕ್ಕೆ ಅರ್ಹರಾಗಿದ್ದರು.[156] ಹಿರೇಮಲ್ಲೂರ ಈಶ್ವರನ್ ಅವರು ಹೇಳಿರುವಂತೆ - "ಗ್ರಾಮೀಣ ವೀರಶೈವರ ಧಾರ್ಮಿಕ ಸ್ಥಿತಿಗತಿಗಳನ್ನು ಮೇಲಿಂದ ಮೇಲೆ ಪೀಠಾಚಾರ್ಯರಿಗೆ ತಿಳಿಸುವುದು ಈ ಕಾಯಕದಯ್ಯಗಳ ಕೆಲಸವಾಗಿತ್ತು. ಇವರು 'ಚರಜಂಗಮ'[157]ರಾಗಿದ್ದೂ, ಗೃಹಸ್ಥರಾಗಿದ್ದೂ ತಮ್ಮ ಧಾರ್ಮಿಕ ವೃತ್ತಿಕಾಯಕಗಳ ಮೂಲಕ ಹಳ್ಳಿಹಳ್ಳಿಗಳಲ್ಲಿ ಧರ್ಮಜಾಗೃತಿಯನ್ನುಂಟು ಮಾಡುತ್ತಿದ್ದರು."[158]

ಗುರುವರ್ಗದ ಶ್ರೇಣಿಯಲ್ಲಿ ಪಂಚಪೀಠಾಧಿಪತಿಗಳ ಆದಿಯಾಗಿ ಪಂಚವೃತ್ಯಾಚಾರ್ಯರವರೆಗೆ ಎಲ್ಲರೂ ಜಂಗಮರೇ[159] ಆಗಿರುತ್ತಾರೆ. ಸಿಂಹಾಸನಾಧಿಪತಿಗಳಾದ ಪಂಚಾಚಾರ್ಯರು ದೇಶದಲ್ಲಿ ವೀರಶೈವಧಾರ್ಮಿಕ ಜಗತ್ತಿನ ಉನ್ನತ ಅಧಿಪತಿಗಳಾಗಿದ್ದು ಪ್ರಥಮ ಶ್ರೇಣಿಯ ಗುರುಗಳಾಗಿರುತ್ತಾರೆ. ಇವರ ನಂತರದ ಸ್ಥಾನ ಪ್ರಾದೇಶಿಕ ಧರ್ಮಾಧಿಪತಿಗಳಾದ ಪಟ್ಟಾಧ್ಯಕ್ಷರು (ಪಟ್ಟಾಧಿಕಾರಿ-ಚರಾಧಿಕಾರಿ)ಗಳದು. ಇವರು ಪಂಚಪೀಠದ ಪ್ರತಿನಿಧಿಗಳೇ ಆಗಿದ್ದು ಗುರುವರ್ಗದ ಶ್ರೇಣಿಯಲ್ಲಿ ದ್ವಿತೀಯ ಸ್ಥಾನ ಪಡೆದಿರುತ್ತಾರೆ. ಪಂಚವೃತ್ಯಾಚಾರ್ಯರಲ್ಲಿ ಮೊದಲಿಗರಾದ ಮಠದಯ್ಯ ಅಥವಾ ಹಿರೇಮಠಸ್ಥರದು ಮೂರನೆಯ ಸ್ಥಾನ. ಹೀಗೆ ಗ್ರಾಮಮಟ್ಟದ ಹಿರೇಮಠಗಳ (ಗೃಹಸ್ಥಗುರು) ಮೇಲೆ ಪ್ರಾದೇಶಿಕ ಮಟ್ಟದ ಪಟ್ಟದ್ದೇವರ ಮಠಗಳು (ಬ್ರಹ್ಮಚಾರಿ ಗುರು), ಇವುಗಳಿಗೂ ಮೇಲ್ಪಟ್ಟು ದೇಶವ್ಯಾಪಿ ಮಟ್ಟದಲ್ಲಿ ಸಿಂಹಾಸನ (ಬ್ರಹ್ಮಚಾರಿಗುರು) ಮಠಗಳಾದ ಪಂಚಪೀಠಗಳಿರುತ್ತವೆ.[160] ಇನ್ನು ವೃತ್ಯಾಚಾರ್ಯರಾದ ಮಠಪತ್ತಿ, ಗಣಾಚಾರಿ, ಗಣಕುಮಾರ, ಸ್ಥಾವರಿಕ ಇವರದು ಗ್ರಾಮದ ಭಕ್ತರಿಗೂ ಹಿರೇಮಠಸ್ಥರಿಗೂ ನಡುವಿನ ವ್ಯವಹಾರವಾದರೆ; ಕಾಯಕದಯ್ಯಗಳಾದ ಘಂಟೆಕಾಯಕ, ಗದ್ದುಗೆಕಾಯಕ, ಕಂಬದಕಾಯಕ, ಮುಳ್ಳಾವಿಗೆ ಕಾಯಕದವರದು ನೇರವಾಗಿ ಪಂಚ ಪೀಠಾಧೀಶರಿಗೂ (ಕೆಲವು ವೇಳೆ ಪಟ್ಟಾಧ್ಯಕ್ಷರಿಗೂ) ಗ್ರಾಮಮಟ್ಟದ ಭಕ್ತರಿಗೂ ನಡುವಿನ ವ್ಯವಹಾರವಾಗಿರುತ್ತದೆ. ಈ ವೃತ್ಯಾಚಾರ್ಯರು, ಕಾಯಕದಯ್ಯಗಳು, ಇನ್ನುಳಿದ ವಸ್ತ್ರದವರು, ಕಂಥೆಯವರು, ಶಿವದಾರದವರು ಮುಂತಾದವರೆಲ್ಲಾ ಗೃಹಸ್ಥರೇ ಆಗಿದ್ದು ಜಂಗಮಜಾತಿಯ ಉಪಜಾತಿಗಳವರಾಗಿರುತ್ತಾರೆ. ಇವರುಗಳಿಗೆ ಮಠಾಧಿಪತಿಗಳಾಗುವ, ಗುರುತ್ವಪದವಿಗೇರುವ ಅವಕಾಶವಿರುವುದಿಲ್ಲ.[161] ಗುರು ವರ್ಗದವರಲ್ಲಿ ಮಠದಯ್ಯ (ಹಿರೇಮಠಸ್ಥ)ನಿಗೆ ಮಾತ್ರ ಧರ್ಮಭಿಕ್ಷೆ ಎತ್ತುವ ಅಧಿಕಾರವಿತ್ತು. ಉಳಿದ ವೃತ್ಯಾಚಾರ್ಯರುಗಳಿಗಾಗಲೀ ಅಥವಾ ಕಾಯಕದಯ್ಯಗಳಿಗಾಗಲೀ ಈ ಧರ್ಮಭಿಕ್ಷೆ ಎತ್ತುವ ಅಧಿಕಾರವಿರಲಿಲ್ಲ.[162]

ಹಿಂದಿನ ಕಾಲದಲ್ಲಿ ಪ್ರತಿಯೊಂದು ಗ್ರಾಮದಲ್ಲಿಯೂ ಪಂಚವೃತ್ಯಾಚಾರ್ಯರ ಜೊತೆಗೆ ಗ್ರಾಮದ ಶೆಟ್ಟಿ, ಯಜಮಾನ, ಬಣಕಾರ ಮುಂತಾದ ಭಕ್ತಪ್ರಮುಖರು ಸೇರಿ ವೀರಶೈವ ಧಾರ್ಮಿಕ ವ್ಯವಸ್ಥೆಯ ನೀತಿ-ನಿಬಂಧನೆಗಳನ್ನು ಕರಾರುವಕ್ಕಾಗಿ ನಡೆಸಿಕೊಂಡು ಹೋಗುತ್ತಿದ್ದರು. ಈ ರೀತಿ ವೀರಶೈವ ಧರ್ಮೀಯರಲ್ಲಿ ನಿತ್ಯನೈಮಿತ್ತಿಕ ಧಾರ್ಮಿಕ ಹವ್ಯ-ಕವ್ಯಗಳು ಸಾಂಗವಾಗಿ ಜರುಗುವಂತೆ ವ್ಯವಸ್ಥೆ ಮಾಡಿದ್ದವರು ಪ್ರಾಚೀನ ಪೀಠಾಚಾರ್ಯರು ಎಂಬ ನಂಬಿಕೆ ಇದೆ.[163] ಇಂತಹ ಅಳಿದುಳಿದ ವ್ಯವಸ್ಥೆಯನ್ನು ಗ್ರಾಮಾಂತರ ಭಾಗಗಳಲ್ಲಿ ಈಗಲೂ ಗುರುತಿಸಬಹುದಾಗಿದೆ. ಹೀಗೆ ಪಂಚಪೀಠಗಳು, ಪಟ್ಟ(ದ್ದೇವರ)ದ ಮಠಗಳು ಹಾಗೂ ಹಿರೇಮಠಗಳು ಇವೇ ಮೊದಲಾದ

ಗುರುಮಠಗಳು, ಗುರುವರ್ಗದ ಬೇರೆ ಬೇರೆ ಮಠೀಯ ಸಂಸ್ಥೆಗಳಾಗಿರುತ್ತವೆ.

### ೩.೬. ವಿರಕ್ತವರ್ಗದ ( ಶೂನ್ಯಪೀಠದ ) ಮಠಗಳು

೧. ಹಿನ್ನಲೆ : ವಿರಕ್ತರೆಂದರೆ ಸನ್ಯಾಸಿಗಳು. ಸನ್ಯಾಸಾಶ್ರಮದ ದೀಕ್ಷೆಯನ್ನು ಪಡೆದು ಸರ್ವಸಂಗ ಪರಿತ್ಯಾಗಿಗಳಾಗಿ ವೈರಾಗ್ಯಸಂಪನ್ನರಾದವರು. ಸದಾ ಸಂಚಾರಿಗಳಾದ ಇವರು 'ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚರಾತ್ರಿಯಂತೆ ಚರಿಸುತ್ತಾ, ಕರತಲಭಿಕ್ಷ ತರುತಲವಾಸ ಮಾಡುವವರು. ಇವರೆ ನಿರಾಭಾರಿ ಜಂಗಮರು' [164] ಎಂಬಿತ್ಯಾದಿಯಾಗಿ ವಿರಕ್ತರನ್ನು ಕುರಿತ ಮಾತುಗಳಿವೆ. 'ಜಂಗಮ'[165] ಎಂದರೆ ವೈರಾಗ್ಯಪರನಾದ ಸಂಚಾರಿ. ದೇಶದ ತುಂಬಾ ಜ್ಞಾನ, ವೈರಾಗ್ಯಕ್ಕಾಗಿ ಸಂಚರಿಸುವವನು. ಮೊದಲು ಗುರುವಿನಿಂದ ಅನುಗ್ರಹೀತನಾದವ ಭಕ್ತ (ವೀರಶೈವ) ನಾಗುತ್ತಾನೆ. ಭಕ್ತನಾದವನು ಆಮೇಲೆ ಸಂಸಾರವನ್ನು ತೊರೆದು ಸಂಚಾರವನ್ನು ಕೈಗೊಂಡು ಜಂಗಮನಾಗುತ್ತಾನೆ.[166] ಇಷ್ಟಾದರೂ ಇಂತಹ ಜಂಗಮ ಲೌಕಿಕ ಸುಖಗಳಿಂದ[167] ಅತೀತನಾದವನೇನಲ್ಲ. ವಿರಕ್ತತೆ ಇವೆಲ್ಲಕ್ಕೂ ಮೀರಿದ್ದು. ಚೆನ್ನಬಸವಣ್ಣ ಹೇಳುವಂತೆ - 'ಶ್ರೀಗುರು ಶಿಷ್ಯನ ಭವಿ ಪೂರ್ವಾಶ್ರಮವ ಕಳೆದು ಭಕ್ತನ ಮಾಡಿದ ಬಳಿಕ ಆ ಭಕ್ತ ಜಂಗಮನಾಗುತ್ತಾನೆ.'[168]

ಹನ್ನೆರಡನೆಯ ಶತಮಾನದಲ್ಲಿ ಜಂಗಮತ್ವಕ್ಕೆ ಹೆಚ್ಚಿನ ಮಾನ್ಯತೆ ಇತ್ತು. ''ಗುರುವಿನ ಗುರು ಜಂಗಮ''[169] ''ಗುರುವಿನ ಗುರು ಪರಮಗುರು ಜಂಗಮ''[170] ಎಂಬಿತ್ಯಾದಿ ವಚನಕಾರರ ಮಾತುಗಳು ಜಂಗಮತ್ವದ ಹಿರಿಮೆಗೆ ಹಿಡಿದ ಕನ್ನಡಿಯಂತಿವೆ. ಜಂಗಮತ್ವ ವಿರಕ್ತತ್ವದ ಹಿಂದಿನ ಹೆಜ್ಜೆ. ಜಂಗಮನಾದವನು ಸರ್ವಸ್ವವನ್ನೂ ತೊರೆದು ಸಂಪೂರ್ಣ ವೈರಾಗ್ಯಪರನಾದಾಗ ವಿರಕ್ತನಾಗುತ್ತಿದ್ದನು.[171] ಇಂತಹ ವಿರಕ್ತರನ್ನು 'ನಿರಾಭಾರಿ'ಗಳೆಂದು ಕರೆಯಲಾಗುತ್ತದೆ. ಈ ನಿರಾಭಾರಿ ವಿರಕ್ತ ಇಲ್ಲವೆ ಜಂಗಮ ಸಂಪ್ರದಾಯವು ವೀರಶೈವ ಸಮಾಜದಲ್ಲಿ ಹುಟ್ಟಿಕೊಂಡಿದ್ದೇ ಬಸವಾದಿ ಪ್ರಮಥರ ಕ್ರಾಂತಿಯ ಫಲವಾಗಿ.[172] ಇದನ್ನೇ ಕಪಟರಾಳ ಕೃಷ್ಣರಾಯರು ''ವೀರಶೈವರ ಹೊಸ ಗುರುವರ್ಗ''ವೆಂದು ಕರೆದಿದ್ದಾರೆ.[173] ಹನ್ನೆರಡನೆಯ ಶತಮಾನದಲ್ಲಿ ವಿರಕ್ತ ಸಮಯಾಚಾರಕ್ಕೆ ಪರಮ ಗುರುವಾಗಿದ್ದ ಅಲ್ಲಮಪ್ರಭುವು ನಿರಾಭಾರಿ ಜಂಗಮರ ರೀತಿ-ನೀತಿಗಳನ್ನು ಕುರಿತು ಹೇಳುತ್ತಾ, ''ನಿಸ್ಸಂಗಿ ಚ ನಿರಾಭಾರಿ ನಿಸ್ಸೀಮಂ ನಿರುಪಾಧಿಕಂ। ನಿರ್ದೇಹಂ ನಿರ್ಮಲಂ ನಿತ್ಯಂ ಸತ್ಯಂ ಜಂಗಮ ಲಕ್ಷಣಂ॥'' ಎಂಬ 'ಶಿವರಹಸ್ಯ'ದ ಜಂಗಮ ಲಕ್ಷಣವನ್ನು ಉದಾಹರಿಸಿ, ''ಹೊನ್ನು, ಹೆಣ್ಣು, ಮಣ್ಣಿನಾಸೆಯ, ಕೋಪತಾಪವ ಭ್ರಾಂತಿಭ್ರಮೆಯ ಬಿಟ್ಟು ಷಡುಲೋಭದ ರುಚಿ ಹಿಂಗಿ ಜಂಗಮವಾದಲ್ಲದೆ ಭವ ಹಿಂಗದು''[174] ಎಂದಿದ್ದಾನೆ. ವೀರಶೈವರ ಜಂಗಮತ್ವ[175] ನಿರಂಜನವಾದದ್ದು, ನಿರ್ಮಾಯವಾದದ್ದು, ಉಪನಿಷತ್ತುಗಳಲ್ಲಿ ಹೇಳಿರುವಂತೆ ಪರವಸ್ತುವಿನ ಲಕ್ಷಣವುಳ್ಳದ್ದು ಜಾತಿ ವಿರಹಿತವಾದದ್ದು.[176] ಶರಣರು ಗುರುತಿಸಿರುವಂತೆ ಜೀವ-ಆತ್ಮಗಳ ಸಂಬಂಧವಾದ ಶೂನ್ಯ ವಸ್ತುವಿನ ಜ್ಞಾನವುಳ್ಳ ಮಹಾನುಭಾವಿಯೆ ಜಂಗಮ[177] ಅಥವಾ ಗುರುವಿನ ಗುರು.[178] ಅಲ್ಲಮಪ್ರಭು ಇಂತಹ ಜ್ಞಾನವುಳ್ಳ ಶೂನ್ಯವಸ್ತುವಿನ ಮಹಾನುಭಾವಿಯಾದುದರಿಂದಲೇ ಆತನನ್ನು ಜಂಗಮನೆಂದೂ, ಜಗದ್ಗುರುವೆಂದೂ[179] ಬಸವೇಶ್ವರನು ಪೂಜಿಸಿದನಲ್ಲದೆ ಆತನು ಮಂಡಿಸಿದ ಪೀಠಕ್ಕೆ 'ಶೂನ್ಯಪೀಠ'[180] ಅಥವಾ 'ಶೂನ್ಯಸಿಂಹಾಸನ'ವೆಂದು[181] ಹೆಸರಾಯಿತು.[182] ಹೀಗೆ ಬಸವಣ್ಣನ ಕಾಲದಲ್ಲಿ ಕಲ್ಯಾಣದಲ್ಲಿ ಪ್ರಾರಂಭವಾದ ಶೂನ್ಯ ಪೀಠವೇ ಮುಂದಿನ ನಿರಾಭಾರಿ ಜಂಗಮ ಸಂಪ್ರದಾಯದ ಅಡಿಗಲ್ಲು. ಇದೇ ವಿರಕ್ತ ಪರಂಪರೆಯ ಮೂಲ ಪೀಠವು. 'ಲಿಂಗಾಯತ ಮತೋತ್ಪತ್ತಿ ನಿರ್ಣಯ'ದಲ್ಲಿ ವಿರಕ್ತರು ಹಾಗೂ ಅವರ ಹುಟ್ಟನ್ನು ಕುರಿತು - ''ಅನಾದಿ ಪರಶಿವನ ಚಿತ್ಕಳೆಯೆ ಶೂನ್ಯವೆನಿಸಿತ್ತು, ಆ ಶೂನ್ಯವೇ ನಿಷ್ಕಲವೆನಿಸಿತ್ತು, ಆ ನಿಷ್ಕಲವೆ ನಿರಂಜನವೆನಿಸಿತ್ತು, ಆ ನಿರಂಜನವೇ ಅಲ್ಲಮಪ್ರಭುವೆನಿಸಿದನು. ಆ ಅಲ್ಲಮಪ್ರಭುವಿನ ಸಂಪ್ರದಾಯಕರು ವಿರಕ್ತರಾದ ಕಾರಣ ಇಂಥ ವಿರಕ್ತರೇ ತ್ರಿಭುವನವರ್ತಿಗಳಾದ ದೇವದಾನವ ಮಾನವರುಗಳಿಂದ ಪೂಜ್ಯರು''[183] ಎಂದು ಹೇಳಿದೆ.

'ನಿರಂಜನವಂಶರತ್ನಾಕರ'ದಲ್ಲಿ ಶೂನ್ಯ ಸಿಂಹಾಸನದ ಆಧಿಪತ್ಯವನ್ನು ಶಿವಾನುಭವ ಚರಂತಿಗೆ ಪಟ್ಟ[184]ವೆಂದು ಕರೆಯಲಾಗಿದೆ. ಆದಿ ಜಗದ್ಗುರು ಅಲ್ಲಮನಿಂದ ಪ್ರಾರಂಭವಾಗುವ ಶಿವಾನುಭವ ಚರಂತಿಗೆಯ ಪಟ್ಟದ ಹತ್ತೊಂಬತ್ತನೆಯ ಗುರುವಾಗಿದ್ದ ತೋಂಟದ ಸಿದ್ಧಲಿಂಗೇಶ್ವರರು[185] (ಕ್ರಿ.ಶ. ೧೫೬೦) ಏಳುನೂರು

ಮಂದಿ ಚರಮೂರ್ತಿಗಳ ಶಿಷ್ಯಗಣಂಗಳಿಗೆ ಗುರುವಾಗಿದ್ದರು. ಆ ಕಾಲದ ಶಿಷ್ಯಗಣಂಗಳ ಸ್ವಭಾವಾನುಸಾರವಾಗಿ ಏಳುನೂರು ಬುಡಕಟ್ಟಿನ ಮಠಗಳು[186] ನಿರ್ಮಾಣವಾಗಿದ್ದುವು. ಈ ಏಳುನೂರು ಬುಡಕಟ್ಟಿನ ಚರಮೂರ್ತಿಗಳ ಕರಸಂಜಾತರಾದ ಮೂರುಸಾವಿರ ಮಂದಿ ವಿರಕ್ತಮಾಹೇಶ್ವರರಿದ್ದರು. ಇವರೆಲ್ಲರಿಗೂ ತೋಂಟದ ಸಿದ್ಧಲಿಂಗೇಶ್ವರರೇ ಜಗದ್ಗುರುಗಳಾಗಿದ್ದರು,[187] ಎಂದು ವರ್ಣಿಸಲಾಗಿದೆ. ಈ ಬೆಳವಣಿಗೆಗಳನ್ನು ಆಧರಿಸಿ ಜಿ.ಎಂ. ಉಮಾಪತಿಶಾಸ್ತ್ರಿ ಯವರು ''ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ ಪಟ್ಟಣದಲ್ಲಿ ಪ್ರಭುದೇವರಿಂದ ಪ್ರಾರಂಭವಾದ ನಿರಾಭಾರಿ ಜಂಗಮ ಸಂಪ್ರದಾಯವು ನಿರಂತರವಾಗಿ ನಡೆದು ಬಂದಿತು. ವಿಜಯ ಕಲ್ಯಾಣಪುರ (ವಿಜಯನಗರ)ವಾದ ವಿದ್ಯಾನಗರದಲ್ಲಿ ಈ ಪರಂಪರೆ ನೂರೊಂದು ವಿರಕ್ತರಿಂದ ಮುಂದುವರೆಯಿತು. ವಾಣಿಜ್ಯಪುರವಾದ ಹರದನಹಳ್ಳಿಯಲ್ಲಿ ಶ್ರೀ ಗೋಸಲಸಿದ್ದೇಶ್ವರರು ಪ್ರಭುಸ್ವಾಮ್ಯನ್ವಯವನ್ನು ಉಜ್ವಲಗೊಳಿಸಿದ ಮಹಂತರು. ಅವರ ಶಿಷ್ಯಪರಂಪರೆಯ ಧ್ರುವತಾರೆ ಎಡೆಯೂರು ಶ್ರೀ ತೋಂಟದ ಸಿದ್ಧಲಿಂಗೇಶ್ವರರು.[188] ಅವರಿಂದಲೇ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳುನಾಡುಗಳಲ್ಲಿ ವೀರಶೈವ ಮತ, ಸಾಹಿತ್ಯ, ಮತ್ತು ಸಂಸ್ಕೃತಿಗಳು ಪುನರುಜ್ಜೀವನಗೊಂಡವು''[189] ಎಂಬುದಾಗಿ ವಿರಕ್ತ ಪರಂಪರೆಯ ಹಿನ್ನೆಲೆಯನ್ನು ವಿವರಿಸಿದ್ದಾರೆ.

೨. ಸಮಯಭೇದಗಳು : 'ಸಮಯ' ಎಂದರೆ ಒಂದು ಒಪ್ಪಿತವಾದ ವ್ಯವಸ್ಥೆ; ಒಂದೇ ಬಗೆಯ ಧಾರ್ಮಿಕ ಆಚರಣೆಗಳಿಗೆ ಬದ್ಧವಾದ ನಿಯಮ ಅಥವಾ ಕಟ್ಟುಪಾಡು ಎಂದರ್ಥ.[190] ಈ ವಿರಕ್ತ ಪರಂಪರೆಯಲ್ಲಿ ಹದಿನೇಳನೆಯ ಶತಮಾನದ ಆರಂಭದ ವೇಳೆಗೆ ವಿಭಿನ್ನ ಬಗೆಯ ಸಮಯ ಭೇದಗಳು ಹುಟ್ಟಿಕೊಳ್ಳಲಾರಂಭಿಸಿದವು. ಶೂನ್ಯ ಸಿಂಹಾಸನದ ಇಪ್ಪತ್ತಮೂರನೆಯ ಚರಂತಿಗೆ ಪಟ್ಟಾಧಿಕಾರಿಗಳಾಗಿದ್ದ ಕಟ್ಟಿಗೆಹಳ್ಳಿಸ್ವಾಮಿಗಳ[191]ಕಾಲದ (ಕ್ರಿ.ಶ. ಸುಮಾರು ೧೬೨೦-೧೬೪೦)ವರೆಗೆ ನಿರಂಜನ ಪೀಠಾಧಿಕಾರಿಗಳು ಒಬ್ಬರೇ ಇದ್ದಂತೆ ತಿಳಿದುಬರುತ್ತದೆ. ಇವರ ಕಾಲದ ನಂತರ ಶೂನ್ಯಸಿಂಹಾಸನಾಧಿಕಾರಿಗಳ ಭಿನ್ನ ಸಮಯ ಭೇದಗಳು ಹುಟ್ಟಿಕೊಳ್ಳಲಾರಂಭಿಸಿದವು.[192] ಡಾ। ಎಂ. ಚಿದಾನಂದಮೂರ್ತಿಯವರು, ವೀರಶೈವಧರ್ಮದ ಇತಿಹಾಸದಲ್ಲಿ ಹದಿನೇಳನೆಯ ಶತಮಾನದ ಆದಿ ಭಾಗದಲ್ಲಿಕಾಣಿಸಿಕೊಂಡ ಐದು ಸಮಯಭೇದಗಳು[193] ಯಾವುವೆಂದರೆ ೧. ಕೆಂಪಿನಸಮಯ, ೨. ಕುಮಾರಸಮಯ, ೩. ಸಂಪಾದನೆಯಸಮಯ, ೪. ಚೀಲಾಳಸಮಯ, ೫. ಮುರಿಗಾಸಮಯ ಎಂದು ಹೇಳಿ; ಮುರಿಗಾ ಶಾಂತವೀರರ ಐವರು ಶಿಷ್ಯರಲ್ಲಿ ಮೊದಲ ನಾಲ್ವರು ಪರಸ್ಪರ ಭಿನ್ನಾಭಿಪ್ರಾಯಗಳು ಬಂದು ವಿರಕ್ತಸಂಪ್ರದಾಯದ ಅವರ ಹೆಸರಿನ ಸಮಯ[194] ಭೇದಗಳಿಗೆ ಕಾರಣರಾದರು,[195] ಎಂದಿದ್ದಾರೆ. ಚನ್ನಮಲ್ಲಿಕಾರ್ಜುನರು ಈ ಐದೂ ಸಮಯದ ಮೂಲ ಮಠಗಳನ್ನು ಪ್ರಸ್ತಾಪಿಸುತ್ತಾ, ''ಮುರಿಗಿ ಸಮಯಕ್ಕೆ[196] ಮೂಲಗುರುಗಳಾದ ಮುರಿಗಾ ಶಾಂತವೀರಸ್ವಾಮಿಗಳ ಮಠವೇ ಚಿತ್ರಕಲ್ ದುರ್ಗದ ಮಠ;[197] ಕುಮಾರ ಸಮಯಕ್ಕೆ ಮೂಲಗುರುಗಳಾದ ಕುಮಾರಸ್ವಾಮಿಗಳ ಮಠವೇ ಇಸಳೂರುಮಠ;[198] ಅನಂತರ ಕೆಳದಿ ಸೀಮೆಗೆ ಸೇರಿದ ಜಡೇದಮಠ; ಚೀಲಾಳ ಸಮಯಕ್ಕೆ ಮೂಲ ಗುರುಗಳಾದ ತೋಟದ ಸ್ವಾಮಿಗಳ ಮಠವೇ ಡಂಬಳದ ಮಠ;[199] ಸಂಪಾದನೆಯ ಸಮಯಕ್ಕೆ[200] ಮೂಲಗುರುಗಳಾದ ಸಿದ್ಧವೀರಸ್ವಾಮಿಗಳ ಮಠವೇ ಹಾಗಲವಾಡಿ ಮಠ; ನಂತರ ವಂಟಮುರಿಮಠ; ಕೆಂಪಿನ ಸಮಯಕ್ಕೆ ಮೂಲಗುರುಗಳಾದ ಕೆಂಪಿನಪ್ಪನವರ ಶಿಷ್ಯರಾದ ಸಂಗನ ಬಸವಪ್ಪನವರ ಮಠವೇ ಹುಮನಾಬಾದಿ ಕಲ್ಯಾಣಸೀಮೆ ಪೈಕಿ ಹುಲೆಕುಂಟೆಯ ಬಸವತೀರ್ಥಮಠವೆಂದೂ'' ವಿವರಿಸಿದ್ದಾರೆ.[201] ಈ ಐದು ಪ್ರಧಾನ ಸಮಯಭೇದಗಳ ಜೊತೆಗೆ ಇನ್ನೂ ಅನೇಕ ಸಮಯ ಭೇದಗಳಿದ್ದುದಾಗಿಯೂ,[202] ಕಾಲಾನಂತರದಲ್ಲಿ ಅವುಗಳೆಲ್ಲಾ ಮೂಲಭೇದಗಳಲ್ಲೇ ವಿಲೀನವಾದಂತೆಯೂ ತಿಳಿದುಬರುತ್ತದೆ.[203]

ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಎಲ್ಲಾ ಸಮಯಗಳವರೂ ಅಲ್ಲಮ ಪ್ರಭುವಿನ ಜೊತೆಗೆ ತೋಂಟದ ಸಿದ್ಧಲಿಂಗೇಶ್ವರರನ್ನೂ ತಮ್ಮ ಗುರುಗಳನ್ನಾಗಿ ಒಪ್ಪಿಕೊಂಡಿದ್ದಾರೆ. ಜೊತೆಗೆ ತಮ್ಮ ಪರಂಪರೆಯನ್ನು ಹೇಳಿಕೊಳ್ಳುವಾಗ ನಿರಾಭಾರಿಜಂಗಮ[204] ಅಲ್ಲಮಪ್ರಭು ಪರಂಪರೆ ಅಥವಾ ತೋಂಟದ ಸಿದ್ಧಲಿಂಗೇಶ್ವರ ಪರಂಪರೆ ಎಂದು ತಪ್ಪದೆ ಹೇಳಿಕೊಳ್ಳುತ್ತಾರೆ. ಇಲ್ಲಿ ನಿರಂಜನ ಜಂಗಮ[205] ಆದಿ

ಜಗದ್ಗುರು ಅಲ್ಲಮಪ್ರಭುವಿನ ಆದಿಯಾಗಿ ತೋಂಟದ ಸಿದ್ಧಲಿಂಗೇಶ್ವರರವರೆಗೆ ಆದ ಗುರುಪರಂಪರೆಯ ವೃಕ್ಷ ಒಂದೇ ಆಗಿದೆ.[206] ಸಮಯಭೇದಗಳು ಏನಿದ್ದರೂ ಅವು ಕ್ರಿ.ಶ. ೧೬೬೦ ರಿಂದ ಪ್ರಾರಂಭವಾಗಿ ಅವುಗಳ ಬಹುಭಾಗ ಕ್ರಿ.ಶ. ೧೭೨೦ರ ಸುಮಾರಿಗೆ ಆದವುಗಳಾಗಿವೆ.[207] ಆಗ ಮುರಿಗಾಶಾಂತವೀರರು (ಮುರಿಗೇಂದ್ರರು) ಹಾಗೂ ಅವರ ಶಿಷ್ಯ ಇಮ್ಮಡಿ ಗುರುಸಿದ್ಧ (ಮುರಿಗಾಗುರುಸಿದ್ಧ)ರ ಕಾಲವಾಗಿತ್ತು.[208]

ವಿರಕ್ತವರ್ಗದವರ ಸಮಯ ಭೇದಗಳ ಮೂಲಸ್ಥಾನ ಚಿತ್ರದುರ್ಗ ಬೃಹನ್ಮಠವೇ ಆಗಿದೆ.[209] ಅಲ್ಲಿನ ಶಿಖಾಪಟ್ಟ, ಶಿವಾನುಭವಪಟ್ಟಗಳ ನಡುವಿನ ಭಿನ್ನಾಭಿಪ್ರಾಯ ಗಳಿಂದಾಗಿಯೇ ಈ ಸಮಯ ಭೇದಗಳು ಹುಟ್ಟಿಕೊಳ್ಳಲಿಕ್ಕೆ ಕಾರಣವಾಗಿವೆ.[210] ಒಟ್ಟಿನಲ್ಲಿ 'ಈ ಸಮಯಭೇದಗಳು ಶೂನ್ಯಪೀಠ ಸಂಬಂಧವಾದ ಜಂಗಮವರ್ಗದವರ ಜಗಳದಿಂದ ಉಂಟಾದುವೇ ಹೊರತು, ಯಾವ ಹಿರಿಯ ಜಗದ್ಗುರುಗಳಾಗಲಿ, ಪೀಠಾಧೀಶರಾಗಲಿ ಸಂತೋಷದಿಂದ ಏರ್ಪಡಿಸಿಕೊಟ್ಟ ವ್ಯವಸ್ಥಿತ ಒಪ್ಪಂದಗಳೇನಲ್ಲ' ಎಂಬ ಚನ್ನಮಲ್ಲಿಕಾರ್ಜುನರ ಮಾತು[211] ಸಂದರ್ಭೋಚಿತ ವಾಗಿದೆ.

೩. **ಉತ್ತರಾಧಿಕಾರತ್ವದ ಅರ್ಹತೆ :** ವೀರಶೈವ ಗುರುವಿರಕ್ತರ ಪೀಠಗಳ ಉತ್ತರಾಧಿಕಾರಿಗಳಾಗ ಬೇಕಾದವರಿಗೆ ಕೆಲವೊಂದು ವಿಶೇಷವಾದ ಅರ್ಹತೆಗಳಿರ ಬೇಕಾಗಿತ್ತು. ಏಕೆಂದರೆ ಮಠಾಗಿಕಾರವನ್ನು ನಡೆಸತಕ್ಕ ಗುರುವು ತಾನು ಮೊದಲು ವಿದ್ಯಾವಿನೀತನೂ ಸದ್ಗುಣ ಸಂಪನ್ನನೂ ಆಗಿದ್ದರೆ, ತನ್ನ ಮಠದ ಭಕ್ತರನ್ನು ಸದಾಚಾರಸಂಪನ್ನರನ್ನಾಗಿ ಮಾಡಬಲ್ಲನು ಎಂಬುದು ವೀರಶೈವರ ಸದೃಢ ನಂಬಿಕೆಯಾಗಿತ್ತು. ಈ ಹಿನ್ನೆಲೆಯಲ್ಲಿ 'ಸುಶೀಲ, ಸುಸಂಪನ್ನ, ಒಳ್ಳೆಯ ಜಾತಕ, ಹಸ್ತಸಾಮುದ್ರಿಕೆ, ಮುಖಮುದ್ರಿಕೆಗಳ ಜೊತೆಗೆ ಅಯ್ಯಾಚಾರ ಹೊಂದಿದ ಅಯ್ಯನವರ (ಜಂಗಮರ[212]) ಮಗನೇ ಆಗಿರ ಬೇಕೆಂಬುದು[213] ಸಾಮಾನ್ಯ ನಿಯಮವಾಗಿತ್ತು. ಆದರೆ ಇತ್ತೀಚೆಗೆ ವಿರಕ್ತಮಠಗಳ ಉತ್ತರಾಧಿಕಾರಿಗಳಾಗಲು ಯಾವುದೇ ಜಂಗಮೇತರ ಭಕ್ತ ಜಾತಿಗಳ[214]ಲ್ಲಿನ ವಟುವಾದರೂ ಮೇಲ್ಕಂಡ ಲಕ್ಷಣಗಳಿದ್ದಲ್ಲಿ ಮಠಾಧಿಪತಿ ಯಾಗುವ ಅವಕಾಶಗಳಿವೆ.

ಮಠಾಧಿಪತಿಯಾಗತಕ್ಕವನು ಲೌಕಿಕ ಮತ್ತು ಪಾರಮಾರ್ಥಿಕ ವಿದ್ಯೆಗಳಲ್ಲಿ ಪಾರಂಗತನಾಗಿರಬೇಕು. ಉಪನಿಷತ್ತಿನ ಉಕ್ತಿಯಂತೆ-'ಸ ಗುರುಮೇವ ಅಭಿಗಚ್ಛೇತ್ ಶ್ರೋತ್ರಿಯಂ ಬ್ರಹ್ಮನಿಷ್ಠಂ!' ಅಂದರೆ ಗುರುವು ಶ್ರೋತ್ರೀಯನೂ, ಬ್ರಹ್ಮನಿಷ್ಠನೂ ಆಗಿರಬೇಕು. ಯಾರು ಶ್ರೋತ್ರಿಯೂ, ಬ್ರಹ್ಮನೂ ಆಗಿರುವನೋ ಅವನೇ ಗುರುಪದವಿಗೆ ಅರ್ಹನೆಂದು ಎಂ.ಜಿ. ನಂಜುಂಡಾರಾಧ್ಯರು ಹೇಳಿದ್ದಾರೆ.[215] 'ವೀರಶೈವಾಚಾರಕೌಸ್ತುಭ'ದಲ್ಲಿ ''ಗುರುಸ್ಥಾನಕ್ಕೆ ಬರುವವನು ಸತ್ಕುಲ ಪ್ರಸೂತನಾಗಿಯೂ ಸತ್ಯಶೀಲನಾಗಿಯೂ ಅಂಗವೈಕಲ್ಯಾದಿ ಯಾವುದೊಂದೂ ದೋಷವಿಲ್ಲದವನಾಗಿಯೂ ಅಯ್ಯಾಚಾರದ ಮನೆತನದವನಾಗಿಯೂ ಇದ್ದಾನೆಯೋ ಇಲ್ಲವೋ ಎಂಬುದನ್ನು ಶಾಸ್ತ್ರಜ್ಞರು ಚೆನ್ನಾಗಿ ಪರೀಕ್ಷಿಸಿ ಅಂಥ ಯೋಗ್ಯತೆಯಿದ್ದವರಿಗೆ ಮಾತ್ರ ಮಠಾಧಿಕಾರವನ್ನು ಕೊಡಿಸಬೇಕೆಂದು ಹೇಳಿದೆ.''[216] 'ಕ್ರಿಯಾಸಾರ'ದಲ್ಲೂ ಕೂಡ ''ಮಠಾಧಿಕಾರಿಗಳಾಗತಕ್ಕವರು ಮಠಸ್ಥಲದ ವಂಶಜರಾಗಿಯೂ, ವಿದ್ಯಾನೀತಿ ಸೌಜನ್ಯ ಶಮದಮಾದಿಗುಣ ಸಂಪತ್ತಿ ಸತ್ಕುಲ ಪ್ರಸೂತಿ ಮೊದಲಾದ ಸದ್ಗುಣವುಳ್ಳವರಾಗಿಯೂ ಇರಬೇಕೆಂದು'' ಹೇಳಲ್ಪಟ್ಟಿದೆ.[217]

ಶಿವಾಗಮೋಕ್ತವಾಗಿ ಗುರುಪೀಠಾಧಿಕಾರಿ (ಸಾಭಾರಿ[218]) ಯಾಗತಕ್ಕವನ ಗುಣಲಕ್ಷಣಗಳನ್ನು ಹೇಳುವುದಾದರೆ-''ಲಿಂಗದಲ್ಲಿ ಸಮುಪಸ್ಥಿತವಾದ, ಪರತತ್ತ್ವ ಬೋಧಕವಾದ, ಚಿತ್ಕಲೆಯ ಜಪಾಸಕ್ತನಾದ, ಶಾಂತನಾದ, ಸತ್ಯಸಂಧನಾದ, ನಿರ್ಮಾತ್ಸರ್ಯನಾದ, ಕಾಮಾದಿಗುಣರಹಿತನಾದ, ಏಕಪತ್ನೀವ್ರತಸ್ಥನಾದ, ಕರುಣಾಶಾಲಿಯಾದ, ವೇದಾಗಮಾದಿ ಸರ್ವತಂತ್ರ ಗಳಲ್ಲಿಯೂ ನಿಪುಣನಾದ, ಯಂತ್ರೋದ್ಧರಣ ಕ್ರಮವನ್ನು ಬಲ್ಲವನಾದ, ಸದಾಲಿಂಗಾರ್ಚನಾಸಕ್ತನಾದ, ಶಿವಭಕ್ತರಲ್ಲಿ ಪ್ರೀತಿಯುಳ್ಳವನಾದ, ಸದ್ವಂಶದಲ್ಲಿ ಹುಟ್ಟಿದವನಾದ ಈ ಎಲ್ಲಾ ಗುಣಗಳುಳ್ಳವನೇ ಗುರುಪೀಠಾರೋಹಣ ಮಾಡಲಿಕ್ಕೆ ಯೋಗ್ಯನೆಂದು'' ಸಂಪಿಗೆ ಸಿದ್ಧಲಿಂಗ ಶಾಸ್ತ್ರಿಗಳು (೧೯೧೩) ಹೇಳಿದ್ದಾರೆ.[219] ಹಾಗೆಯೇ ನಿರಂಜನಚರಪಟ್ಟಾಧಿಕಾರಿ(ವಿರಕ್ತ ನಿರಾಭಾರಿ[220]) ಯಾಗ ಬೇಕಾದವನು ''ಇಂದ್ರಿಯಗಳನ್ನೆಲ್ಲಾ ನಿಗ್ರಹಿಸಿಕೊಂಡಂಥ

ಸತ್ಯ ಶುದ್ಧಮನಸ್ಕನಾದ ಶಿವಾನುಭವ ಶಾಸ್ತ್ರ ವಿಶಾರದನಾದ, ಸನ್ಮಾರ್ಗ, ಸದ್ಭಾವ, ಸತ್ಕುಲ ಪ್ರಸೂತನಾದ, ಲಿಂಗ ಜಂಗಮ ಪೂಜಾನಿರತನಾದ, ಪರಸತಿ ಪರಧನಗಳಿಗೆಳಸದ, ಸದಾ ಪರವಸ್ತು ಪ್ರಿಯನಾದ, ಸಲ್ಲಕ್ಷಣಗಳುಳ್ಳ ಬುದ್ಧಿಶಾಲಿ ಸದ್ಗುಣ ಪ್ರಸೂತನಾದ ಮಠಸ್ಥಲ (ಅಯ್ಯಾಚಾರ)ದ ವಟುವಾಗಿರಬೇಕೆಂದು ಡಾ। ವಿ.ಎಸ್. ಕಂಬಿ ಹೇಳಿದ್ದಾರೆ.[221]

### ೩.೭. ಗುರು-ವಿರಕ್ತ ವರ್ಗದ ಮಠಗಳ ಒಂದು ಸಮೀಕ್ಷೆ

ಗುರು-ವಿರಕ್ತ ಪೀಠಾಧಿಕಾರಿಗಳ ನಡುವೆ ಉಡುಗೆ-ತೊಡುಗೆ, ಆಚಾರ-ವಿಚಾರ ಮುಂತಾದ ವಿಷಯಗಳಲ್ಲಿ ಮೇಲ್ನೋಟಕ್ಕೆ ಕೆಲವು ಸಾಂಕೇತಿಕ ಸಾಮ್ಯಗಳು ಕಂಡುಬರುತ್ತವೆಯಾದರೂ; ಗೋತ್ರ-ಸೂತ್ರಾದಿ ಮೂಲಕ್ರಿಯಾಚರಣೆಗಳ ಸಂಬಂಧವಾಗಿ ಸಾಕಷ್ಟು ಭಿನ್ನತೆಗಳಿರುವುದು ಎದ್ದು ಕಾಣುತ್ತದೆ. ಗುರು-ವಿರಕ್ತರಿಬ್ಬರೂ ಷಟ್‌ಸ್ಥಲ[222] ಮಾರ್ಗಾನುಸಾರಿಗಳೇ ಆಗಿದ್ದರೂ, 'ಸಾಭಾರಿ'ಗಳಾದ ಗುರುವರ್ಗದವರದು ಕ್ರಿಯಾಪ್ರಾಧಾನ್ಯ ಮಾರ್ಗ. ಇವರದು ಕರ್ಮದೀಕ್ಷೆ. 'ನಿರಾಭಾರಿ'[223] ವಿರಕ್ತವರ್ಗದವರದು ಜ್ಞಾನ ಪ್ರಾಧಾನ್ಯಮಾರ್ಗ. ಇವರದು ಲಯದೀಕ್ಷೆ.[224]

ಆಶ್ರಮಬದ್ಧರಾದ ಗುರುವರ್ಗದವರ ಮಠಗಳು ಸಾಮಾನ್ಯವಾಗಿ ಊರಿನ ಮಧ್ಯೆ ಇರುತ್ತವೆ. ಗುರುಗಳಾದವರು ಭಕ್ತರ ಮಧ್ಯದಲ್ಲಿಯೇ ಇದ್ದು, ಅವರ ಕಷ್ಟ-ಸುಖಗಳಲ್ಲಿ ಭಾಗಿಗಳಾಗುತ್ತಾ, ಅವರಿಗೆ ಲಿಂಗದೀಕ್ಷೆಯನ್ನು ಕೊಡುವುದರ ಮೂಲಕ ಮತ್ತು ಅವರ ಜನನ, ಮರಣ, ಮದುವೆ, ಹಬ್ಬಹರಿದಿನಗಳಲ್ಲಿ ಪೌರೋಹಿತ್ಯ ಕಾರ್ಯಗಳನ್ನೂ ನಡೆಸುವುದರ ಮೂಲಕ ಅವರ ಬದುಕಿನಲ್ಲಿ ಸನ್ಮಾರ್ಗವನ್ನು ತೋರಿಸುತ್ತಾರೆ. ಅಂತ್ಯದಲ್ಲಿ ಮೋಕ್ಷವನ್ನು ದಯಪಾಲಿಸುತ್ತಾರೆ. ಇದು ಗುರುವರ್ಗದವರ ಹಕ್ಕು. ಆಶ್ರಮಾತೀತರಾದ ವಿರಕ್ತ ವರ್ಗದವರು ಸಾಮಾನ್ಯವಾಗಿ ಊರ ಹೊರಗಿರುತ್ತಾರೆ. ಇವರಿಗೆ ಭಕ್ತರ ಪೌರೋಹಿತ್ಯಗಳನ್ನು ನಡೆಸುವ ಅಥವಾ ಲಿಂಗವಂತ ದೀಕ್ಷೆ ನೀಡುವ ಅಧಿಕಾರವಿರುವುದಿಲ್ಲ.[225] ಪ್ರಾಪಂಚಿಕ ವ್ಯವಹಾರಗಳಿಂದ ದೂರವಿರುವ ಇವರು ಮಠ-ಮಾನ್ಯಗಳನ್ನು ಕಟ್ಟಿಕೊಂಡು ಒಂದೆಡೆ ಶಾಶ್ವತವಾಗಿ ನಿಲ್ಲದೆ, ಆಸ್ತಿ-ಪಾಸ್ತಿಗಳ ಹಂಗಿಲ್ಲದೆ, ಇದೆಲ್ಲಕ್ಕೂ ಮೀರಿದ ಜ್ಞಾನಮಾರ್ಗದ (ಆಧ್ಯಾತ್ಮ ಸಾಧನೆಯ)ಲ್ಲಿ ಮಗ್ನರಾಗಿರುತ್ತಾರೆ.

ಸರ್ವಸಂಗ ಪರಿತ್ಯಾಗಿಗಳಾದ ನಿರಾಭಾರಿಗಳು ಬಾಹ್ಯಾಡಂಬರಕ್ಕೆ ದೂರ. ಸಾಭಾರಿಗಳು ಕೇವಲ ಬ್ರಹ್ಮಚಾರಿಗಳಷ್ಟೆ. ಹಿಂದಿನ ಗುರುವರ್ಗದವರು ವಿವಾಹಿತರೇ ಆಗಿರುತ್ತಿದ್ದರು.[226] ಇವರಿಗೆ ಸಿಂಹಾಸನ, ಕಿರೀಟ, ಪಲ್ಲಕ್ಕಿ ಮುಂತಾದ ಸಕಲವಸ್ತು ವಾಹನಾದಿ ಭೋಗ-ಭಾಗ್ಯಗಳ ಆಡಂಬರ ವೈಭವಗಳುಂಟು. ಸಾಭಾರಿಗಳಿಗೆ ಸಕಲ ವೈಭವಯುಕ್ತವಾದ ಪಂಚಸಿಂಹಾಸನ ಗಳಿದ್ದರೆ, ನಿರಾಭಾರಿಗಳಿಗೆ ಕೇವಲ ಆಧ್ಯಾತ್ಮಸಿರಿಯ ಶೂನ್ಯಸಿಂಹಾಸನವಿದೆ.

ಗುರು-ವಿರಕ್ತ ಪೀಠಗಳ ಉತ್ತರಾಧಿಕಾರತ್ವಕ್ಕೆ ಇರಬೇಕಾದ ಅರ್ಹತೆಗಳಲ್ಲಿ (ಗುರುವು ಏಕಪತ್ನಿ ವ್ರತಸ್ಥನೆಂಬುದೊಂದನ್ನು ಉಳಿದು) ಉಭಯರೂ ಸಮಾನರೇ ಆಗಿದ್ದಾರೆ. ಸಾಭಾರಿ-ನಿರಾಭಾರಿಗಳ ಉತ್ತರಾಧಿಕಾರತ್ವ[227] ಹಾಗೂ ಪಟ್ಟಾಧಿಕಾರತ್ವದ ವಿಧಿವಿಧಾನಗಳು ಸಾಮ್ಯವುಳ್ಳವೇ ಆಗಿದ್ದರೂ, ಕೆಲವೊಂದು ಭಿನ್ನತೆಗಳು ಎದ್ದು ಕಾಣುತ್ತವೆ. ಸಾಭಾರಿಗಳು ಪಂಚಕಳಸಗಳನ್ನು ಹೂಡಿದರೆ, ನಿರಾಭಾರಿಗಳು ಷಟ್ಕಳಸಗಳನ್ನು[228] ಹೂಡುತ್ತಾರೆ. ಆಮೇಲೆ ವಟುವಿಗೆ ಮಸ್ತಕಾಭಿಷೇಕವಾದ ನಂತರ ಹಸ್ತ-ಮಸ್ತಕ ಸಂಯೋಗವಾಗಿ ಪಾದೋದಕ ಪ್ರಸಾದಗಳ ವಿನಿಮಯ ಹಾಗೂ ಷಟ್‌ಸ್ಥಲ ಜ್ಞಾನೋಪದೇಶಗಳು ಉಭಯರಿಗೂ ಸಮಾನವಾಗಿಯೇ ನಡೆಯುತ್ತವೆ. ಇದೆಲ್ಲಾ ಮುಗಿದ ಮೇಲೆ ಶಿಷ್ಯರು ಭಿಕ್ಷೆಗೆ ಹೋಗುವಾಗ, ಬೆನ್ನಿಗೆ ನಿರಾಭಾರಿಯು ಶಿವಾನುಭವ ಗ್ರಂಥಗಳನ್ನು[229]ಕಟ್ಟಿಕೊಂಡು ಹೋದರೆ; ಸಾಭಾರಿಗೆ ಇಂತಹ ಆಚರಣೆಗಳಿರುವುದಿಲ್ಲ. ಇನ್ನು ಪಂಚಮುದ್ರೆಗಳು[230] ಉಭಯತರಿಗೂ ಸಮ್ಮತ ವಾಗಿರುತ್ತವೆ.

ಗುರುಪೀಠಸ್ಥರು ಸಾಮಾನ್ಯವಾಗಿ ಬ್ರಹ್ಮಚಾರಿ ಗಳಾಗಿರುತ್ತಾರೆ. ಬಯಸಿದರೆ ಗೃಹಸ್ಥರಾಗಲೂ ಬಹುದು.[231] ಇವರ ಮಠಗಳ (ಹಿರೇಮಠಗಳ)ಲ್ಲಿ ಪೂರ್ವಾಶ್ರಮದ ತಂದೆ-ತಾಯಿ, ಅಣ್ಣ-ತಮ್ಮಂದಿರೆಲ್ಲಾ ಒಟ್ಟಿಗೇ ಇರುವುದುಂಟು. ಇವರು ತಮ್ಮ

ಉತ್ತರಾಧಿಕಾರತ್ವಕ್ಕೆ ತಮ್ಮ ಅಣ್ಣ-ತಮ್ಮಂದಿರ ಮಕ್ಕಳಲ್ಲೇ ಒಬ್ಬರನ್ನು ಅಥವಾ ತಮ್ಮ ರಕ್ತ ಸಂಬಂಧಿಗಳಲ್ಲಿ ಒಬ್ಬರನ್ನು ಆರಿಸಿಕೊಳ್ಳುತ್ತಾರೆ. ಇವರದು ಪುತ್ರಸಂತಾನ. ಆದರೆ ವಿರಕ್ತ ಪೀಠಗಳವರದು ಇದಕ್ಕೆ ತದ್ವಿರುದ್ಧವಾದ ನೀತಿ. ಇವರು ಆಜನ್ಮ ಸನ್ಯಾಸಿಗಳು. ಇವರಿಗೆ ಸಂಸಾರ ನಿಷಿದ್ಧ. ಇವರು ವಿರಕ್ತಾಶ್ರಮ ದೀಕ್ಷೆಯನ್ನು ಪಡೆದಾಕ್ಷಣ ಇವರ ಪೂರ್ವಾಶ್ರಮದ ಸಂಬಂಧಗಳೆಲ್ಲಾ ಕಡಿದು ಹೋಗುತ್ತವೆ. ಇವರು ತಮ್ಮ ಉತ್ತರಾಧಿಕಾರತ್ವಕ್ಕಾಗಿ ತಮ್ಮ ಶಿಷ್ಯವರ್ಗದವರಲ್ಲಿ ಒಬ್ಬರನ್ನು ಆರಿಸಿಕೊಳ್ಳುತ್ತಾರೆ. ಇವರದು ಶಿಷ್ಯಸಂತಾನ. ಗುರುವರ್ಗದ ಉತ್ತರಾಧಿಕಾರಿ ಜಂಗಮನೇ, ಅಂದರೆ ಗುರುಸ್ಥಲ (ಮಠಸ್ಥಲ)ದವನೇ ಆಗಿರಬೇಕೆಂಬುದು ನಿರ್ಬಂಧ. ವಿರಕ್ತವರ್ಗದಲ್ಲಿ ಜಂಗಮೇತರರಿಗೂ ಈ ಅವಕಾಶ ಲಭ್ಯವಾಗಿದೆ.[232]

ಗುರುಪೀಠಸ್ಥರು ಸಾಮಾನ್ಯವಾಗಿ ಸಂಸ್ಕೃತಪರವಾದ ಸಿದ್ಧಾಂತ ಶಿಖಾಮಣಿ, ಶ್ರೀಕರಭಾಷ್ಯ, ಶಿವಾಗಮಗಳು ಇವೇ ಮೊದಲಾದ ಸಿದ್ಧಾಂತ ಗ್ರಂಥಗಳನ್ನು ಓಲೈಸಿದರೆ; ವಿರಕ್ತರಿಗೆ ವಚನವಾಙ್ಮಯದ ಕಡೆಗೆ ಹೆಚ್ಚಿನ ಒಲವು. ಬಸವಪುರಾಣ, ಪ್ರಭುಲಿಂಗಲೀಲೆ, ಶೂನ್ಯಸಂಪಾದನೆಗಳು ಮತ್ತಿತರ ಕನ್ನಡಪರ ಸಾಹಿತ್ಯ ಗ್ರಂಥಗಳನ್ನು ಇವರು ವಿಶೇಷವಾಗಿ ಆಧರಿಸುತ್ತಾರೆ.

ಹೀಗೆ ಪಂಚಾಚಾರ್ಯರನ್ನು ಎತ್ತಿಹಿಡಿಯುವ ಗುರುಪೀಠಗಳಿಗಾಗಲೀ ಅಥವಾ ವಚನಕಾರರನ್ನು ಎತ್ತಿಹಿಡಿಯುವ ವಿರಕ್ತ ಪೀಠಗಳಿಗಾಗಲೀ ಕೆಲವೊಂದು ಧಾರ್ಮಿಕ ವಿಧಿವಿಧಾನಗಳನ್ನು ಕುರಿತ ಕರ್ತವ್ಯಭೇದಗಳಿವೆಯೇ ಹೊರತು, ಇಬ್ಬರ ಧ್ಯೇಯೋದ್ದೇಶಗಳೂ ಒಂದೇ ಎಂಬುದನ್ನು ಮರೆಯುವಂತಿಲ್ಲ. ಡಾ। ಎಂ.ಚಿದಾನಂದ ಮೂರ್ತಿಯವರು ಹೇಳಿರುವಂತೆ "ಗುರು-ವಿರಕ್ತಪೀಠಗಳೆರಡೂ[233] ವೀರಶೈವ ಸಮಾಜದ ಭದ್ರತೆಗಾಗಿ, ಪ್ರಗತಿಗಾಗಿ ದುಡಿಯುತ್ತಿರುವ ಧಾರ್ಮಿಕ ಸಂಸ್ಥೆಗಳು. ಅವರೆಡೂ ವೀರಶೈವ ಸಮಾಜದ ಎರಡು ಕಣ್ಣುಗಳಿದ್ದಂತೆ."[234]

---

### ಅಡಿಟಿಪ್ಪಣಿಗಳು

1. ಅಮರಕೋಶ. ಸಂ:ರೈಸ್. ಪು. ೪೭.
2. ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು. ೬೮೬೦.
3. ಎಂ.ಜಿ. ನಂಜುಂಡಾರಾಧ್ಯ. 'ಸ್ಮರಣ ಸಂಪುಟ'. ಸಂ: ಡಾ। ಎಚ್.ಪಿ. ಮಲ್ಲೇದೇವರು. ಪು. ೮೩.
4. ಪಿ.ವ್ಹಿ. ಆಚಾರ್ಯ. ಮಠಗಳು ಅವು ಏನುಮಾಡಬಲ್ಲವು? ಚಿತ್ರಭೆ. ಸಂ : ಜಿ.ಎಚ್. ಹನ್ನೆರಡುಮಠ. ಪು. ೫೭೬.
5. The New Encyclopaedia Britannica. Vol - 12. p. 335.
6. ಡಾ। ಜಿ.ಶಿವರುದ್ರಪ್ಪ. 'ಕಾಯಕಪರಿಣಾಮಿ'. ಸಂ : ಶಾಂತರಸ ಮತ್ತು ಚನ್ನಬಸಪ್ಪ. ಪು. ೪೬೮.
7. ಅದೇ.
8. B.K. Mukherjea. The Hindu Law of Religious and Charitable Trust. P. 293
9. ಕನ್ನಡ ವಿಶ್ವಕೋಶ. ಸಂಪುಟ-೧೨. ಸಂ. : ಡಾ। ಎಚ್. ತಿಪ್ಪೇರುದ್ರಸ್ವಾಮಿ. ಪು. ೧೦೦೪.
10. ಆಗ ಅಶೋಕನು ಬೌದ್ಧಧರ್ಮ ಪ್ರಸಾರಕ್ಕಾಗಿ ಮಹಿಷಮಂಡಲಕ್ಕೆ ಧರ್ಮಪ್ರಚಾರಕರನ್ನು ಕಳುಹಿಸಿದ್ದುದಾಗಿ ಬೌದ್ಧ ಮೂಲಗಳಿಂದ ತಿಳಿದುಬರುತ್ತದೆ.
11. Kerns. Manual of Buddhism. p. 81.
12. ಮುಂದೆ ಇದು ಕ್ರೈಸ್ತ ಧರ್ಮಕ್ಕೂ ಮಾದರಿಯಾಗಿತ್ತು.
13. ಪಿ.ವ್ಹಿ. ಆಚಾರ್ಯ. ಪೂರ್ವೋಕ್ತ. ಪು. ೫೭೬.
14. ಶಂಕರಾಚಾರ್ಯರು ಭಾರತದ ನಾಲ್ಕು ದಿಕ್ಕುಗಳಿಗೆ ನಾಲ್ಕು ಮಠಗಳನ್ನು ಸ್ಥಾಪಿಸಿದ್ದರು. ಪೂರ್ವದಲ್ಲಿ ಪುರಿ, ಪಶ್ಚಿಮದಲ್ಲಿ ದ್ವಾರಕ, ಉತ್ತರದಲ್ಲಿ ಬದರಿ ಮತ್ತು ದಕ್ಷಿಣದಲ್ಲಿ ಶೃಂಗೇರಿಗಳಲ್ಲಿ ಅವರ ಮಠಗಳಿವೆ.
15. B.K. Mukherjea. The Hindu Law of Religious and Charitable Trust. P. 296
16. ಡಾ। ಜಿ. ಶಿವರುದ್ರಪ್ಪ. 'ಕಾಯಕಪರಿಣಾಮಿ'. ಸಂ : ಶಾಂತರಸ ಮತ್ತು ಚನ್ನಬಸಪ್ಪ. ಪು. ೪೬೯.

17. ಡಾ। ಬಿ.ವ್ಹಿ. ಮಲ್ಲಾಪುರ. ವೀರಶೈವಮಠಗಳ ಹಿನ್ನೆಲೆ. ವಿಶ್ವಪ್ರಭೆ. ಸಂ-೩. ಸಂ:ಜಿ.ಎಚ್. ಹನ್ನೆರಡುಮಠ. ಪು. ೫೦೩-೫೦೪.
18. ಜ.ಚ.ನಿ. ಶ್ರೀಶೈಲಪೀಠದರ್ಶನ. ಪು. ೮೭-೮೮.
19. ಶೈವಧರ್ಮಕ್ಕೆ ಲಾಕುಳ, ಪಾಶುಪತ, ಕಾಳಾಮುಖ ಎಂಬ ಬೇರೆ ಬೇರೆ ಹೆಸರುಗಳುಂಟು. ಶಾಸನಗಳಲ್ಲಿ ಇದನ್ನು ಶಿವಸಮಯ, ಶಿವಧರ್ಮ, ಲಗುಡಿಗಳಧರ್ಮ, ಕಾಳಾಮುಖ ಸಮಯ ಎಂದು ಮುಂತಾಗಿ ಕರೆಯಲಾಗಿದೆ. (ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೧೩೫.)
20. ಕನ್ನಡ ಸಂಸ್ಕೃತಿಗೆ ಲಾಕುಳ ಶೈವರ ಬಹುದೊಡ್ಡ ಕೊಡುಗೆ ದೇವಸ್ಥಾನ. ಇವರು ಊರೂರಿಗೂ ದೇವಾಲಯಗಳನ್ನು ನಿರ್ಮಿಸಿದ್ದರು. ಪ್ರಾಚೀನ ಕರ್ನಾಟಕದಲ್ಲಿ ದೇವಸ್ಥಾನವು ಶೈವ ಯತಿಗಳ ವಾಸಸ್ಥಾನವೂ ಆಗಿತ್ತು.
21. ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೧೩೮-೧೩೯.
22. ಅದೇ.
23. ಕಪಟರಾಳ ಕೃಷ್ಣರಾಯ. ಕರ್ನಾಟಕ ಲಾಕುಳ ಶೈವರ ಇತಿಹಾಸ. ಪು. ೧೦೦.
24. ದೇವಾಲಯುಗಳು ಅಶೋಕನ ಕಾಲ (ಕ್ರಿ.ಪೂ. ೩ನೆಯ ಶತಮಾನ)ದಿಂದ ಈಚಿನವು. ಕ್ರಿ.ಶ.ದ ಆರಂಭದ ವೇಳೆಗೆ ದೇವಸ್ಥಾನಗಳಿದ್ದುದಕ್ಕೆ ಶಾಸನಾಧಾರಗಳಿವೆ. ಮುಂದೆ ಕ್ರಿ.ಶ. ೧೫೦ರ ಕದಂಬರ ಪ್ರಾಕೃತ ಶಾಸನ ಮತ್ತು ಕ್ರಿ.ಶ. ೪೫೦ರ ತಾಳಗುಂದದ ಶಾಸನಗಳು ದೇವಾಲಯಗಳ ಬಗೆಗೆ ತಿಳಿಸುತ್ತವೆ. (ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೧೭೩ - ೧೭೪.)
25. 'ಗೋಳಕಿಮಠ'ವು ಡಾಹೇಲ ರಾಜ್ಯದಲ್ಲಿತ್ತು. ಡಾಹೇಲ ರಾಜ್ಯದ ಇನ್ನೊಂದು ಹೆಸರೇ ಚೇದಿಪ್ರಾಂತ್ಯ. ಈ ದೇಶವು ಗಂಗಾ ಮತ್ತು ನರ್ಮದಾ ನದಿಗಳ ಮಧ್ಯದಲ್ಲಿತ್ತು. ಈ ದೇಶದ ಅರಸರು ಕಲಚುರಿ ವಂಶದವರು. ಗೋಳಕಿ ಮಠದ ಗುರುಗಳೇ ಕಲಚುರಿ ಅರಸರ ಗುರುಗಳಾಗಿದ್ದರು. (ಕಪಟರಾಳ ಕೃಷ್ಣರಾಯ. ಕರ್ನಾಟಕ ಲಾಕುಳಶೈವರ ಇತಿಹಾಸ. ಪು. ೧೪೬.)
26. ಕಪಟರಾಳ ಕೃಷ್ಣರಾಯ. ಕರ್ನಾಟಕ ಲಾಕುಳಶೈವರ ಇತಿಹಾಸ. ಪು. ೩೨.
27. ಇದಕ್ಕೂ ಮುಂಚೆ ಬಳ್ಳಿಗಾವೆಯಲ್ಲಿ ೫ ಮಠಗಳಿದ್ದವು: ೧. ಪಂಚಮಠ, ೨. ಹಿರಿಯಮಠ, ೩. ಭೇರುಂಡೇಶ್ವರಮಠ, ೪. ಪಂಚಲಿಂಗಮಠ, ೫. ತ್ರಿಪುರಾಂತಕಮಠ.
28. Epigraphia Carnatica. Vol- vii. Shikaripur. 118. 1054. A.D.
29. ಶೈವಗುರುಗಳು ಅಖಂಡ ಬ್ರಹ್ಮಚಾರಿಗಳಾಗಿದ್ದುಕೊಂಡು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿದ್ದರೆ ಅವರನ್ನು ನೈಷ್ಠಿಕಬ್ರಹ್ಮಚಾರಿಗಳೆಂದು ಕರೆಯಲಾಗುತ್ತಿತ್ತು.
30. Epigraphia Carnatica Vol- vii. Shikaripur. 100. 1129 A.D.
31. ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೧೮೬-೧೮೭.
32. ಅದೇ. ಪು. ೧೮೮.
33. ಕಾಳಾಮುಖ ಆಚಾರ್ಯರಲ್ಲಿ ನಾಲ್ಕು ಪಂಗಡಗಳಿವೆ: ೧. ಪರ್ಷೆ, ೨. ಆವಳಿ, ೩. ಸಂತತಿ ಅಥವಾ ಸಂತಾನ, ೪. ಅನ್ವಯ. (ವಿಶ್ವಪ್ರಭೆ. ಸಂ-೩, ಪು. ೫೦೬.)
34. ನೈಷ್ಠಿಕ ಸ್ಥಾನಗಳಲ್ಲಿ ಭಾಷೆ, ಸಾಹಿತ್ಯ, ಧರ್ಮ, ತರ್ಕ, ನಾಟಕ ಇವೇ ಮೊದಲಾದ ವಿಷಯಗಳನ್ನು ಬೋಧಿಸಲಾಗುತ್ತಿತ್ತು. ಇಲ್ಲಿನ ಶಿಕ್ಷಣವು ಸಂಸ್ಕೃತ ಮಾಧ್ಯಮದಲ್ಲಿರುತ್ತಿತ್ತು.
35. ಡಾ। ಎಂ.ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೧೪೦.
36. ಡಾ। ಬಿ.ವ್ಹಿ. ಮಲ್ಲಾಪುರ. ವೀರಶೈವಮಠಗಳ ಹಿನ್ನೆಲೆ. ವಿಶ್ವಪ್ರಭೆ. ಸಂ-೩. ಸಂ: ಜಿ. ಎಚ್. ಹನ್ನೆರಡುಮಠ. ಪು. ೫೦೬.
37. ಉದಾಹರಣೆಗೆ ಬೆಳಗಾವಿ ಜಿಲ್ಲೆಯ ಹೂಲಿಮಠ (ಪೂವಲ್ಲಿಮಠ), ಶಿವಮೊಗ್ಗ ಜಿಲ್ಲೆಯ ಕೋಡಿಯಮಠ (ಕೇದಾರೇಶ್ವರಮಠ), ವಿಜಾಪುರ ಜಿಲ್ಲೆಯ ಸಾಲೋಟಗಿಮಠ ಮುಂತಾದವು.
38. S.C. Nandimath. A Hand Book of Virasaivism. P. 9-10.
39. G.S. Dikshit. 'Social and Religious Conditions of Karnataka Before Basava' (Sri Basaveswara Eighth Centenary Commemoration Volume) P. 123.
40. ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೧೫೩.
41. ಕಪಟರಾಳಕೃಷ್ಣರಾಯ. ಕರ್ನಾಟಕ ಲಾಕುಳಶೈವರ ಇತಿಹಾಸ. ಪು. ೧೩೦.
42. Epigraphia Carnatica-VII. Shikaripur 94. 1094 A.D; South Indian Inscriptions, IX. i. 24, 936. A.D.

43. Epigraphia Carnatica-VII. Shikaripur 102, 1162A.D; and 185, 1158 A.D.

44. 'ಭಾವಸಗಂಧವಾರಣ' ಎಂಬ ಬಿರುದಿನ ಸಾಮಂತನೊಬ್ಬ ಕ್ರಿ.ಶ. ೧೦೭೦ರಲ್ಲಿ ಕಲ್ಯಾಣದಲ್ಲಿ ತುಂಬೇಶ್ವರ ದೇವಸ್ಥಾನ-ಮಠವನ್ನೂ, ಮುಳ್ಗುಂದದಲ್ಲಿ ಶ್ರೀಫಾಳೇಶ್ವರ ದೇಗುಲ-ಮಠವನ್ನೂ, ನಂದವಾಡಿಗೆಯಲ್ಲಿ ಶ್ರೀನಾಗಲೇಶ್ವರ ದೇಗುಲ-ಮಠವನ್ನೂ ನಿರ್ಮಾಣ ಮಾಡಿಸಿದ ಶಾಸನಾಧಾರಗಳಿವೆ. (ಡಾ। ಎಂ.ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೧೭೪.)

45. South Indian Inscriptions-IX. i. 119.1085. A.D.

46. South Indian Inscriptions-IX. i. 31. 1252.A.D.

47. ಟಿ.ಎನ್. ಮಲ್ಲಪ್ಪ. ವೀರಶೈವದ ಉಗಮ ಮತ್ತು ಪ್ರಗತಿ. ಪು.೯.

48. ಚಂದ್ರಶೇಖರ ಶಾಸ್ತ್ರಿ ಹಿರೇಮಠ. ಬಸವತತ್ತ್ವರತ್ನಾಕರ. ಪು. ೪೮೨.

49. ವೀರಶೈವರಿಗೆ ಇಷ್ಟಲಿಂಗವು ಪರಬ್ರಹ್ಮಸ್ವರೂಪ, ಜಗತ್‌ಕಾರಣವಾದದ್ದು, ಅವಯವರಹಿತವಾದದ್ದು, ಅಗಮ್ಯವಾದದ್ದು, ಅಪ್ರಮೇಯವಾದದ್ದು, ವಾಙ್ಮನಕ್ಕಗೋಚರವಾದದ್ದು, ನಿರಾಕಾರವಾದ ಅಪರವಸ್ತುವಿನ ಸಾಕಾರರೂಪ. (ವೀರಶೈವ ತತ್ತ್ವಪ್ರಕಾಶ. ಸಂ : ಶಿ.ಶಿ.ಬಸವನಾಳ. ಪು. ೨೫೬.)

50. ಹೆಚ್ಚಿನ ವಿವರಗಳಿಗಾಗಿ ನೋಡಿ : ಡಾ। ಎಸ್.ಸಿ. ನಂದಿಮಠ. ವೀರಶೈವಧರ್ಮದ ಕೈಪಿಡಿ. ಅನು : ಪ್ರೇಮಾದೇವಿ ಮಳಿಮಠ. ಪು. ೬-೧೦; ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೩೬೭-೩೭೦; ಡಾ। ಹಿರೇಮಲ್ಲೂರ ಈಶ್ವರನ್. ಬಸವಣ್ಣ ಹಾಗೂ ಲಿಂಗಾಯತ ಧರ್ಮ. ಪು. ೩. ಹಾಗೂ ಇನ್ನಿತರ ಕೃತಿಗಳು.

51. ಹರಿಹರನ ರಗಳೆಗಳು ಕನ್ನಡ ಸಾಹಿತ್ಯಕ್ಕೆ ಎಷ್ಟೊಂದು ಮಹತ್ವದ ಕೃತಿಗಳೋ, ಅಷ್ಟೇ ಮಹತ್ವದವು ವೀರಶೈವಧರ್ಮ ಪ್ರಸಾರಕ್ಕೂ ಕೂಡ.

52. ಕೆರೆಯ ಪದ್ಮರಸನು-ಬಸವಣ್ಣನವರ ಹಿರಿಯ ಸಮಕಾಲೀನ ವಚನಕಾರನಾಗಿದ್ದ ಸಕಲೇಶ ಮಾದರಸನ ಮೊಮ್ಮಗ. ಈತನು ಸಾಕ್ಷಾತ್ ಶಿವನಿಂದಲೇ ಕೆರೆಯೊಂದನ್ನು ನಿರ್ಮಾಣ ಮಾಡಿಸಿದ್ದ ಹೆಗ್ಗಳಿಕೆಯುಳ್ಳವನು. ಈತನ ಮಗ ಕುಮಾರ ಪದ್ಮರಸನು ಹೊಯ್ಸಳರ ಆಸ್ಥಾನದಲ್ಲಿ ಆಂಧ್ರದ ವೈಷ್ಣವ ಮತವಾದಿಯಾಗಿದ್ದ ತ್ರಿಭುವನತಾತನನ್ನು ವಾದದಲ್ಲಿ ಸೋಲಿಸಿ ಆತನಿಗೆ ವೀರಶೈವ ಧರ್ಮವನ್ನು ಬೋಧಿಸಿದ್ದವನು.

53. ವೀರಶೈವ ಧಾರ್ಮಿಕ ಇತಿಹಾಸದಲ್ಲಿ ಅಲ್ಲಮಪ್ರಭುವನ್ನು ಬಿಟ್ಟರೆ, ಬಹಳ ಪ್ರಭಾವಶಾಲಿ ವ್ಯಕ್ತಿತ್ವ ತೋಂಟದ ಸಿದ್ಧಲಿಂಗ ಯತಿಗಳದು. ಧಾರ್ಮಿಕ ಸಂಘಟನಾ ಚತುರತೆಯಲ್ಲಿ ಇವರನ್ನು ಮೀರಿಸಿದ ಮತ್ತೊಬ್ಬ ಗುರುವಿಲ್ಲವೆನ್ನಬಹುದು.

54. ವೀರಶೈವ ಸಂಪ್ರದಾಯದಲ್ಲಿ ಹಿಂದೆ (ವಚನಚಳುವಳಿಯ ಕಾಲಕ್ಕೆ) 'ವೀರಮಾಹೇಶ್ವರನಿಷ್ಠೆ'ಗೆ ಮಹತ್ವದ ಸ್ಥಾನವಿತ್ತು. ಇದು ಶಿವಭಕ್ತನ ನಿಷ್ಠೆಯ ಪರಾಕಾಷ್ಠೆಯನ್ನು ಸೂಚಿಸುತ್ತದೆ. ಶಿವ ಅಥವಾ ಶಿವನ ಅವತಾರಿಗಳನ್ನು ನಿಂದಿಸುವವರ ನಾಲಗೆಯನ್ನು ಶಿವಭಕ್ತರು ಕತ್ತರಿಸಿದರೂ ಅವರಿಗೆ ಯಾವ ದೋಷವೂ ತಟ್ಟುವುದಿಲ್ಲ. ಪ್ರತಿಯಾಗಿ ಈ ಸಾಹಸವನ್ನು ಮೆರೆದವರಿಗೆ ಶಿವಲೋಕವು ದೊರೆಯುತ್ತದೆ. ಶಿವನಿಂದಕರ ಸಂಘದಿಂದ ದೋಷವುಂಟಾಗುತ್ತದೆ ಎಂಬುದಾಗಿ 'ಸೂಕ್ಷ್ಮಾಗಮ'ವು ವಿಧಿಸುತ್ತದೆ. (ರಂಗನಾಥದಿವಾಕರ. ವಚನಶಾಸ್ತ್ರರಹಸ್ಯ. ಪು. ೧೮೧)

55. ಅ. "ವೀರಶೈವಪಂಚಪೀಠಗಳು". ವೀರಶೈವಕರದರ್ಪಣ. ಸಂ: ಟಿ.ಎನ್. ಚನ್ನಪ್ಪ, ಬಿ. ಪುಟ್ಟಸ್ವಾಮಯ್ಯ (೧೯೨೭) ಪು. ೧-೬.
ಆ. "ವೀರಶೈವಾಚಾರ ನಿರ್ಣಯಚಿಂತಾಮಣಿ". ಪಂಚಮ ಜಂಗಮರ ಸತ್ಯಶಾಸ್ತ್ರ ಯಾವುದು. ಸಿದ್ಧಾಂತಿ ಮಲ್ಲೇಶ ಶಾಸ್ತ್ರಿ. ಹುಬ್ಬಳ್ಳಿ. ಪು. ೧೩, ೧೪.
ಇ. ಪಂಡಿತ ಕಾಶೀನಾಥಶಾಸ್ತ್ರಿ. ಶ್ರೀ ಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವ. ಪು. ೯೦-೯೪.
ಈ. ಹುಬ್ಬಳ್ಳಿ ಎರಡೆತ್ತಿನಮಠದ ಚನ್ನವೀರಸ್ವಾಮಿ. ಲಿಂಗಾಯತ ಮತೋತ್ಪತ್ತಿ ನಿರ್ಣಯ. (೧೮೮೮) ಪು. ೧೮. ಇನ್ನೂ ಮುಂತಾದವು.

56. ಡಾ। ಎಸ್.ಸಿ. ನಂದಿಮಠ. ವೀರಶೈವಧರ್ಮದ ಕೈಪಿಡಿ. ಅನು : ಪ್ರೇಮಾದೇವಿ ಮಳಿಮಠ. ಪು. ೧೪.

57. Dr. H.M. Sadasivaiah. A Comparative Studies of Two Virasaiva Monasteries. (1967-Mysore) P. 88. [ಚನ್ನಮಲ್ಲಿಕಾರ್ಜುನರು (ಸದ್ಧರ್ಮದೀಪಿಕೆ. ಸಂ-೧೩. ಸಂಚಿಕೆ-೪೯-೫೧. ಪು. ೬೭) ಶೂನ್ಯಸಿಂಹಾಸನದ ಸ್ಥಾಪನೆ ಕ್ರಿ.ಶ. ೧೧೫೬ ಎಂದೇ ಗುರುತಿಸಿದ್ದಾರೆ. ಕಳಚೂರಿ ಅರಸ ಬಿಜ್ಜಳನು ಕಲ್ಯಾಣ ಪಟ್ಟಣವನ್ನು ಆಳಿದ ಕಾಲ ಕ್ರಿ.ಶ. ೧೧೫೬-೧೧೬೭. ಈತನ ದಂಡನಾಯಕರಾಗಿದ್ದವರೆ ಬಸವಣ್ಣನವರು ಎಂಬುದಾಗಿ ಟಿ.ಎನ್. ಮಹದೇವಯ್ಯ- (ಅನುಭವಮಂಟಪ. ವೀರಶೈವ ತತ್ತ್ವ ಪ್ರಕಾಶ. ಸಂ.: ಶಿ.ಶಿ ಬಸವನಾಳ. ಪು. ೨೬೫) ನವರು ಗುರುತಿಸಿದ್ದಾರೆ.]

58. ಡಾ। ಎಸ್.ಸಿ.ನಂದಿಮಠ. ಪೂರ್ವೋಕ್ತ.ಪು. ೨೨.

59. ಜಿ.ಎಂ. ಉಮಾಪತಿಶಾಸ್ತ್ರಿ. (ಸಂ.) ವಿವೇಕಚಿಂತಾಮಣಿ. ಮುನ್ನುಡಿ. ಪು. ೬೨.

60. ನಿರಂಜನವಂಶ ರತ್ನಾಕರ. ಸಂ : ಫ.ಗು. ಹಳಕಟ್ಟಿ. (೧೯೩೨) ಪು. ೨, ೩.

61. ಜಿ.ಎಂ. ಉಮಾಪತಿ ಶಾಸ್ತ್ರಿ. ಪೂರ್ವೋಕ್ತ. ಪು. ೬೨.
62. ಶಿವಾಗಮಗಳ ಸಂಖ್ಯೆ ಇಪ್ಪತ್ತೆಂಟು. ಇವು ವೀರಶೈವ ಸಿದ್ಧಾಂತದ ಪ್ರಮಾಣಗ್ರಂಥಗಳೇ? ಎಂಬುದು ಪ್ರಶ್ನೆಯಾಗೇ ಉಳಿದಿದೆ. ಏಕೆಂದರೆ ''ವೀರಶೈವರು ಅವುಗಳಲ್ಲಿ ವೀರಶೈವದ ಪ್ರತಿಪಾದನೆ ಇದೆ ಎಂದು ಸಾಧಿಸುವರಾದರೂ, ಈಗ ಉಪಲಬ್ಧವಿರುವ ಶಿವಾಗಮಗಳ ಭಾಗಗಳು ವೀರಶೈವವನ್ನು ಪ್ರತಿಪಾದಿಸುತ್ತವೆಂಬ ವಾದಕ್ಕೆ ಸಮರ್ಥನೆಯನ್ನಿಯುವುದಿಲ್ಲ'' ಎಂದು ಡಾ. ಎಸ್.ಸಿ ನಂದಿಮಠ (ವೀರಶೈವ ಧರ್ಮದ ಕೈಪಿಡಿ. ಪು. ೯) ಅವರು ಹೇಳಿದ್ದರೆ; ಡಾ। ಎಂ. ಚಿದಾನಂದಮೂರ್ತಿಯವರು ''ಶಿವಾಗಮಗಳ ಮೂಲಪಾಠಗಳಲ್ಲಿ ವೀರಶೈವ ಧರ್ಮದ ಪ್ರಸ್ತಾಪವಿಲ್ಲ. ವೀರಶೈವ ಧರ್ಮದ ಪ್ರಸ್ತಾವಿರುವ ಶಿವಾಗಮಗಳ ಉತ್ತರಭಾಗಗಳ ಹಸ್ತಪ್ರತಿಗಳು ಈಚೆಗೆ ಬರೆದು ಸೇರಿಸಿದವಿರಬಹುದು'' (ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮ ತೆರೆ. ಸಂಪ್ರಬಂಧ. ಪು. ೧೧೧) ಎಂದು ಹೇಳಿರುವುದರಿಂದ ಆಗಮಾಧಾರಗಳು ಪ್ರಶ್ನಾತೀತವಾಗಿಲ್ಲ ಎಂಬುದು ಸ್ಪಷ್ಟವಾಗಿದೆ.
63. ಚನ್ನಮಲ್ಲಿಕಾರ್ಜುನ. ಚಂಪಾರಣ್ಯ ಮಠಗಳು. ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು. ಸಂ: ಎಚ್. ದೇವೀರಪ್ಪ. ಚನ್ನಪ್ಪ ಎರೇಸೀಮೆ. ಪು. ೧೭೪.
64. ಸುಪ್ರಭೇದಾಗಮದ ರೀತ್ಯ ಪಂಚಾಚಾರ್ಯರ ಉತ್ಪತ್ತಿ-

| | ಪರಶಿವನಪಂಚಮುಖಗಳು | ಜನ್ಮಭೂಮಿ | ಪಂಚಾಚಾರ್ಯರು | ಸಿಂಹಾಸನಗಳು |
|---|---|---|---|---|
| ೧. | ಸದ್ಯೋಜಾತ | ಕೊಲ್ಲಿಪಾಕಿಯ ಸೋಮನಾಥಲಿಂಗ | ರೇವಣಾರಾಧ್ಯ | ರಂಭಾಪುರಿ (ವೀರಸಿಂಹಾಸನ) |
| ೨. | ವಾಮದೇವ | ವಟಕ್ಷೇತ್ರದ ಸಿದ್ಧಲಿಂಗ | ಮರುಳಾರಾಧ್ಯ | ಉಜ್ಜಯಿನಿ (ಧರ್ಮಸಿಂಹಾಸನ) |
| ೩. | ಅಘೋರ | ದ್ರಾಕ್ಷಾರಾಮಕ್ಷೇತ್ರದ ರಾಮನಾಥಲಿಂಗ | ಏಕೋರಾಮಾರಾಧ್ಯ | ಹಿಮವತ್ಕೇದಾರ (ವೈರಾಗ್ಯಸಿಂಹಾಸನ) |
| ೪. | ತತ್ಪುರುಷ | ಸುಧಾಕುಂಡಕ್ಷೇತ್ರದ ಮಲ್ಲಿಕಾರ್ಜುನಲಿಂಗ | ಪಂಡಿತಾರಾಧ್ಯ | ಶ್ರೀಶೈಲ (ದೇವಸಿಂಹಾಸನ) |
| ೫. | ಈಶಾನ | ಕಾಶಿಕ್ಷೇತ್ರದ ವಿಶ್ವನಾಥಲಿಂಗ | ವಿಶ್ವಾರಾಧ್ಯ | ಕಾಶಿ (ಜ್ಞಾನಸಿಂಹಾಸನ) |

65. ವೀರಶೈವ ಸದಾಚಾರ ಸಂಗ್ರಹ. ಸಂ: ಎಂ.ಜಿ. ನಂಜುಂಡಾರಾಧ್ಯ. ಪು. ೯೪.
66. ಚನ್ನಮಲ್ಲಿಕಾರ್ಜುನ. ಪೂರ್ವೋಕ್ತ. ಅದೇ ಪುಟ.
67. ಸ್ವಯಂಭುವಾಗಮದಲ್ಲಿ ಪಂಚಾಚಾರ್ಯರ ಜೊತೆಗೆ ಶೂನ್ಯ ಸಿಂಹಾಸನವೂ ವರ್ಣಿಸಲ್ಪಟ್ಟಿರುವುದರಿಂದ ಈ ಆಗಮವು ಹನ್ನೆರಡನೆಯ ಶತಮಾನದಿಂದ ಈಚೆಗೆ ಹುಟ್ಟಿದುದಾಗಿರಬೇಕು ಎಂದು ಚನ್ನಮಲ್ಲಿಕಾರ್ಜುನ ಹೇಳಿದ್ದಾರೆ. (ಅದೇ ಪುಟ)
68. ಡಾ। ಎಂ. ಅಣ್ಣಾಜಪ್ಪ. (ಪ್ರ :) ಶ್ರೀ ಅನಾದಿ ವೀರಶೈವ ಸಂಗ್ರಹ. ಮುನ್ನುಡಿ. ಪು.೮.
69. ಉಪನ್ಯಾಸ ಸಂಗ್ರಹ. ಸಂ : ಸಿರಸಿ ಗುರುಶಾಂತಶಾಸ್ತ್ರಿ. ಮೈಸೂರು. ೧೯೨೫. ಪು. ೨೫೫.
70. ಪಂಚಾಚಾರ್ಯರ ಉತ್ಪತ್ತಿಯ ಬಗೆಗೆ ವಿಭಿನ್ನ ಹೇಳಿಕೆಗಳಿವೆ.-

ಅ. ಹುಬ್ಬಳ್ಳಿ ಎರಡೆತ್ತಿನ ಮಠದ ಚನ್ನವೀರಯ್ಯನವರು, ''ಸದ್ಯೋಜಾತ ಮುಖದಲ್ಲಿ ರೇಣುಕಾರಾಧ್ಯರು, ವಾಮದೇವ ಮುಖದಲ್ಲಿ ಮರುಳಾರಾಧ್ಯರು, ಅಘೋರ ಮುಖದಲ್ಲಿ ಪಂಡಿತಾರಾಧ್ಯರು, ತತ್ಪುರುಷ ಮುಖದಲ್ಲಿ ಏಕೋರಾಮಾರಾಧ್ಯರು ಈಶಾನ ಮುಖದಲ್ಲಿ ವಿಶ್ವಾರಾಧ್ಯರು ಹುಟ್ಟಿದುದಾಗಿ'' (ಲಿಂಗಾಯತ ಮತೋತ್ಪತ್ತಿ ನಿರ್ಣಯ (೧೮೮೮) ಪು. ೧೮) ತಿಳಿಸಿರುತ್ತಾರೆ. ಈ ಹೇಳಿಕೆಗೆ ವ್ಯತಿರಿಕ್ತವಾಗಿ-

ಆ. ಬೆಂಗಳೂರು ಗುರುವಣ್ಣದೇವರ ಮಠದ ನಂಜುಂಡಸ್ವಾಮಿಗಳು, ''ಸದ್ಯೋಜಾತ ಮುಖದಲ್ಲಿ ಏಕೋರಾಮನೂ, ವಾಮದೇವ ಮುಖದಲ್ಲಿ ಪಂಡಿತಾರಾಧ್ಯನೂ, ಅಘೋರ ಮುಖದಲ್ಲಿ ಮರುಳಸಿದ್ಧನೂ, ತತ್ಪುರುಷ ಮುಖದಲ್ಲಿ ರೇವಣಸಿದ್ಧನೂ, ಈಶಾನ ಮುಖದಲ್ಲಿ ವಿಶ್ವಕರ್ನನೂ ಜನಿಸಿದುದಾಗಿ'' (ಪಟ್ಟಾಧಿಕಾರ ವಿಧಿ. ಪು. ೧೨) ತಿಳಿಸಿರುತ್ತಾರೆ. ಹಾಗೆಯೇ ಪಂಚಾಚಾರ್ಯರು ಪಂಚಲಿಂಗೋದ್ಭವರು ಎಂಬ ಮಾತೂ ಇದೆ.

ಇ. ದಡ್ಡಿರಘುಪ್ಪ ಶೆಟ್ಟರು ತಮ್ಮ 'ವೀರಶೈವ ಮತಸಾರ ಸಂಗ್ರಹ'ದಲ್ಲಿ ''ದ್ರಾಕ್ಷಾರಾಮ ಕ್ಷೇತ್ರದ ರಾಮನಾಥಲಿಂಗದಲ್ಲಿ ಏಕೋರಾಮನೂ, ಸುಧಾಕುಂಡ ಕ್ಷೇತ್ರದ ಮಲ್ಲಿಕಾರ್ಜುನ ಲಿಂಗದಲ್ಲಿ ಪಂಡಿತಾರಾಧ್ಯನೂ, ಕೊಲ್ಲಿಪಾಕಿ ಕ್ಷೇತ್ರದ ಸೋಮೇಶ್ವರ ಲಿಂಗದಲ್ಲಿ ರೇವಣಸಿದ್ಧನೂ, ವಟಕ್ಷೇತ್ರದ ಸಿದ್ಧೇಶ್ವರ ಲಿಂಗದಲ್ಲಿ ಮರುಳಸಿದ್ಧನೂ, ಕಾಶೀಕ್ಷೇತ್ರದ ವಿಶ್ವನಾಥಲಿಂಗದಲ್ಲಿ ವಿಶ್ವಾರಾಧ್ಯನೂ, ಜನಿಸಿದರೆಂದು'' ಹೇಳಿದ್ದರೆ; ಇದಕ್ಕೆ ತದ್ವಿರುದ್ಧವಾಗಿ-

ಈ. ಸುಧಾಕುಂಡ ಕ್ಷೇತ್ರದ ಮಲ್ಲಿಕಾರ್ಜುನ ಲಿಂಗದಲ್ಲಿ ಏಕೋರಾಮನೂ, ದ್ರಾಕ್ಷಾರಾಮ ಕ್ಷೇತ್ರದ ರಾಮನಾಥ ಲಿಂಗದಲ್ಲಿ ಪಂಡಿತಾರಾಧ್ಯನೂ, ಕೊಲ್ಲಿಪಾಕಿ ಕ್ಷೇತ್ರದ ಸೋಮೇಶ್ವರ ಲಿಂಗದಲ್ಲಿ ರೇವಣಾರಾಧ್ಯನೂ, ವಟಕ್ಷೇತ್ರದ ಸಿದ್ಧೇಶಲಿಂಗದಲ್ಲಿ

ಮರುಳಾರಾಧ್ಯನೂ, ಕಾಶಿಕ್ಷೇತ್ರದ ವಿಶ್ವೇಶ್ವರಲಿಂಗದಲ್ಲಿ ವಿಶ್ವಾರಾಧ್ಯನೂ ಜನಿಸಿದರೆಂದು 'ಪಂಚಾಚಾರ್ಯಪಂಚಮೋತ್ಪತ್ತಿ ನಿರ್ಣಯಂ' ಎಂಬ ಮರಾಠಿ ಗ್ರಂಥದಲ್ಲಿ ಹೇಳಲಾಗಿದೆ. (ಸಿದ್ಧಾಂತಿ ಮಲ್ಲೇಶ ಶಾಸ್ತ್ರಿ. ಪಂಚಮ ಜಂಗಮರ ಸತ್ಯ ಶಾಸ್ತ್ರ ಯಾವುದು ಪು. ೩)

ಉ. ಅದರಗುಂಜಿ ಹಿರೇಮಠದ ಶಿವಲಿಂಗಯ್ಯನವರ 'ವೀರಶೈವಧರ್ಮಸಿಂಧು' (ಪು.೫)ವಿನಲ್ಲಿ ''ಕಲಿಯುಗದಲ್ಲಿ ಪಂಚಮುಖಿ ಗಣೇಶ್ವರರಾದ ಏಕೋರಾಮ ಗಣೇಶ್ವರರು ಹಿಮಾಲಯದಲ್ಲೂ, ಪಂಡಿತಾರಾಧ್ಯರು ಶ್ರೀ ಮಲ್ಲಿಕಾರ್ಜುನಲಿಂಗದಲ್ಲೂ, ಕೊಲ್ಲಿಪಾಕಿಯ ಶ್ರೀ ಸೋಮೇಶ್ವರ ಲಿಂಗದಲ್ಲಿ ರೇವಣಸಿದ್ಧರೂ, ವಟಕ್ಷೇತ್ರದ ಸಿದ್ಧೇಶ್ವರ ಲಿಂಗದಲ್ಲಿ ಮರುಳಸಿದ್ಧರೂ, ಕಾಶಿ ವಿಶ್ವೇಶ್ವರ ಲಿಂಗದಲ್ಲಿ ವಿಶ್ವಾರಾಧ್ಯರೂ ಉದ್ಭವಿಸಿದರೆಂದೂ ಹೇಳಿ'' ದಡ್ಡಿರಘುಪ್ಪಶೆಟ್ಟರ ಹೇಳಿಕೆಗೆ ಅನುಮೋದನೆ ನೀಡಿದ್ದಾರೆ. ಈ ಮೇಲಿನ ಒಂದೊಂದು ಹೇಳಿಕೆಗಳೂ ಒಂದೊಂದು ರೀತಿಯಲ್ಲಿವೆ. ಇವೆಲ್ಲವೂ ಆಗಮೋಕ್ತ ನಿರ್ಣೀತ ವಿಚಾರಗಳೇ ಆಗಿದ್ದರೂ ಕೂಡ, ನಿರ್ಧಿಷ್ಟವಾದ ಪ್ರಕರಣಗಳಲ್ಲ ಗೊಂದಲವನ್ನುಂಟು ಮಾಡಿರುವುದು ಗಮನಾರ್ಹ.

ಊ. ವೀರಶೈವ ಧರ್ಮಸಿಂಧುವಿನಲ್ಲಿರುವಂತೆ–
ಚತುರ್ಯುಗಗಳಲ್ಲಿ ಪರಮೇಶ್ವರನ ಪಂಚ ಮುಖೋದ್ಭವ ಪಂಚಾಚಾರ್ಯರ ಪಟ್ಟಿ.

| | ಪರಮೇಶ್ವರನ ಪಂಚಮುಖಗಳು | ಕೃತಯುಗದಲ್ಲಿ ಉದ್ಭವಿಸಿದವರು | ತ್ರೇತಾಯುಗದಲ್ಲಿ ಉದ್ಭವಿಸಿದವರು | ದ್ವಾಪರಯುಗದಲ್ಲಿ ಉದ್ಭವಿಸಿದವರು | ಕಲಿಯುಗದಲ್ಲಿ ಉದ್ಭವಿಸಿದವರು |
|---|---|---|---|---|---|
| ೧. | ಸದ್ಯೋಜಾತ | ಘಂಟಾಕರ್ಣ | ಏಕಾಕ್ಷರ | ಏಕಮುಖ | ಏಕೋರಾಮ |
| ೨. | ವಾಮದೇವ | ಗಜಕರ್ಣ | ದ್ವಾಯಕ್ಷರ | ದ್ವಿಮುಖ | ಪಂಡಿತಾಚಾರ್ಯ |
| ೩. | ಅಘೋರ | ರೇಣುಕ | ತ್ರಯಕ್ಷರ | ತ್ರಿಮುಖ | ರೇವಣಸಿದ್ಧೇಶ್ವರ |
| ೪. | ತತ್ಪುರುಷ | ದಾರುಕ | ಚತುರಕ್ಷರ | ಚತುರ್ಮುಖ | ಮರುಳಸಿದ್ಧೇಶ್ವರ |
| ೫. | ಈಶಾನ | ವಿಶ್ವಕರ್ಣ | ಪಂಚಾಕ್ಷರ | ಪಂಚಮುಖ | ವಿಶ್ವಾರಾಧ್ಯ |

(ಅದರಗುಂಜಿ ಹಿರೇಮಠದ ಶಿವಲಿಂಗಯ್ಯ. ವೀರಶೈವಧರ್ಮಸಿಂಧು. ಪು. ೬)

71. ''ಪರಮೇಶ್ವರನ ಪಂಚಮುಖಗಳಾದ ಸದ್ಯೋಜಾತ, ವಾಮದೇವ, ಅಘೋರ, ಮೊದಲಾದವು ಬಸವಪೂರ್ವದಲ್ಲಿ ಕಾಳಾಮುಖ ಗುರುಗಳ ಹೆಸರುಗಳಾಗಿದ್ದವು. ಇವೇ ವೀರಶೈವ ಪಂಚಾಚಾರ್ಯರ ಪಂಚಮುಖಗಳೂ ಆಗಿರುವುದರಿಂದ ಕಾಳಾಮುಖರು ಮತ್ತು ಪಂಚಾಚಾರ್ಯರ ಪರಂಪರೆ ಒಂದೇ ಮೂಲದ್ದೆಂದು....'' ಡಾ. ಬಸವರಾಜ ಸೊಪ್ಪಿನಮಠ ಹೇಳುತ್ತಾರೆ. (ಕಾಳಾಮುಖ ಪಂಚಾಚಾರ್ಯರು. ಸಾಧನೆ. ಸಂ–೨೪. ಸಂಚಿಕೆ ೩–೪. ಜುಲೈ–ಡಿಸೆಂಬರ್ ೧೯೯೫. ಪು. ೭೪, ೭೫.)
72. ಅ. ವೀರಶೈವ ಕರದರ್ಪಣ. ಸಂ : ಟಿ.ಎನ್. ಚನ್ನಪ್ಪ. ಬಿ. ಪುಟ್ಟಸ್ವಾಮಯ್ಯ. ಪು. ೧–೫.
ಆ. ಪಂ। ಕಾಶಿನಾಥಶಾಸ್ತ್ರಿ. ಶ್ರೀ ಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವ. ಪು. ೯೦–೯೩.
73. E. Thurston. Castes and Tribes of Southern India. Vol-IV. P. 264, 265.
74. G.R. Josyer. Politics Philosophy and Fhantasy, P. 160.
75. R.G. Bhandarkar. Vaisnavism, Saivism and Miner Religious System. p. 132.
76. ಕಪಟರಾಳ ಕೃಷ್ಣರಾಯ. ಕರ್ನಾಟಕ ಲಾಕುಳಶೈವರ ಇತಿಹಾಸ (೧೯೫೫) ಪು. ೭.
77. ವಿವೇಕಚಿಂತಾಮಣಿ. ಸಂ : ಜಿ.ಎಂ. ಉಮಾಪತಿ ಶಾಸ್ತ್ರಿ. ದ್ವಿತೀಯ ಪರಿಚ್ಛೇದ. ಪು. ೯೯.
78. ಚೆನ್ನಬಸವಪುರಾಣ. ಕನ್ನಡ ಸಾಹಿತ್ಯ ಪರಿಷತ್ತು (ಪ್ರ). (೧೯೭೭) ಸಂಧಿ ೫೯. ಪದ್ಯ. ೧೭.
79. ಡಾ। ಸಾ.ಶಿ. ಮರುಳಯ್ಯ. ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ. ಪು. ೧೨೩.
80. ಉದ್ಧೃತ : ಕಪಟರಾಳ ಕೃಷ್ಣರಾಯ. ಕರ್ನಾಟಕ ಲಾಕುಳಶೈವರ ಇತಿಹಾಸ. ಪು. ೭.
81. 'ಮಠಸ್ಥಲ' ಎಂದರೆ ವೀರಶೈವ ಆಚಾರ್ಯರನ್ನು ಕುರಿತು ಬರೆದಿರುವ ಪ್ರತಿಗಳು. (ಮಠಸ್ಥಲ; ಮಹಾನುಭಾವಿ ಶ್ರೀಚನ್ನಮಲ್ಲಿಕಾರ್ಜುನರು. ಸಂ : ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ. ಪು. ೧೭೦.)
82. ಚತುರಾಚಾರ್ಯ ಚಾರಿತ್ರ. ಸಂ : ಎನ್. ಬಸವಾರಾಧ್ಯ. ಕಾಂಡ ೧. ಸಂಧಿ ೨. ಪದ್ಯ. ೧೦೪, ೧೦೯.
83. ಸಂಕೀರ್ಣ ವಚನ ಸಂಪುಟ – ೪. ವ. ೧೧೧೩. ಪು. ೩೭೫. ೩೭೬.
84. ಸಂಕೀರ್ಣ ವಚನ ಸಂಪುಟ – ೩. ವ. ೧೩೧೩. ಪು. ೪೬೬.
85. ಸಂಕೀರ್ಣ ವಚನ ಸಂಪುಟ – ೧. ವ. ೧೦೩೪. ೧೦೩೫, ಪು. ೩೭೨.
86. 'ತೋಂಟದ ಸಿದ್ಧಲಿಂಗೇಶ್ವರರು (ಕ್ರಿ.ಶ. ೧೫೬೦) ಚತುರಾಚಾರ್ಯರನ್ನು ದಾರುಕ, ರೇಣುಕ, ಗೋಕರ್ಣ, ಶಂಕುಕರ್ಣ ಎಂದು ಅವರ

ಕೈಲಾಸದ ಹೆಸರುಗಳಿಂದ ಗುರುತಿಸಿದ್ದಾರೆ'. (ಡಾ। ಎಂ. ಚಿದಾನಂದಮೂರ್ತಿ. ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮತೆರೆ. ಸಂಪ್ರಬಂಧ. ಪು. ೯೪)

87. ಚನ್ನಮಲ್ಲಿಕಾರ್ಜುನರು, ಪ್ರಥಮ ಆಚಾರ್ಯರಾದ ರೇವಣಸಿದ್ಧರು, ಐದನೆಯ ಆಚಾರ್ಯರಾದ ವಿಶ್ವಾರಾಧ್ಯರಿಗೆ ಪರಿಚಿತರಾಗಿದ್ದರು, ಬಸವೇಶ್ವರನ ತರುವಾಯ ರುದ್ರಮುನಿಗಳಿಂದ ಲಕ್ಷ್ಮೇಶ್ವರದಲ್ಲಿ ವಿಶ್ವಾರಾಧ್ಯರಿಗೆ ಗುರು ಪೀಠಾಧಿಕಾರವಾಯಿತು ಎಂದಿದ್ದಾರೆ. (ಚನ್ನಮಲ್ಲಿಕಾರ್ಜುನ. ಮಠಸ್ಥಲ. ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು. ಸಂ : ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ ಪು. ೫೭೮, ೫೭೯).

88. ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಪು. ೧೦೩.

89. C.P. Brown. 'Madras Journal of Literature and Science'. Vol-xi P. 153.

90. L.K. Ananthakrishna Iyer. 'The Mysore Tribes and Castes', Vol- ii. P. 34.

91. ಜ.ಚ.ನಿ. ಜಗದ್ಗುರು ಆದಿರೇಣುಕರು (೧೯೮೩) ಪು. ೨೪, ೨೫.

92. ಅ. ಡಾ। ಎಂ.ಎಂ. ಕಲಬುರ್ಗಿ. ಶಾಸನಗಳಲ್ಲಿ ಶಿವಶರಣರು. ಪು. ೪೭.
    ಆ. ಡಾ। ಎಸ್. ಸಿ. ನಂದಿಮಠ. ವೀರಶೈವ ಧರ್ಮದ ಕೈಪಿಡಿ. ಅನು : ಪ್ರೇಮಾದೇವಿ ಮಳಿಮಠ. ಪು. ೧೧.
    ಇ. ಡಾ। ಎಂ. ಚಿದಾನಂದಮೂರ್ತಿ. ಪಂಚಾಚಾರ್ಯರ ಬಗೆಗಿನ ವಿವಾದಕ್ಕೆಅಂತಿಮತೆರೆ. ಸಂಪ್ರಬಂಧ. ಪು. ೯೭.

93. ಸಿದ್ಧಾಂತಶಿಖಾಮಣಿ. ಕಾಶಿ ಆವೃತ್ತಿ. ಪರಿಚ್ಛೇದ ೪. ಶ್ಲೋಕ ೩೭.

94. ಡಾ. ಎಂ. ಚಿದಾನಂದಮೂರ್ತಿ. ಸಮ್ಮೇಳನಾಧ್ಯಕ್ಷರ ಆಶಯ ಭಾಷಣ. ನಾಲ್ಕನೆಯ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ. ಚಿಕ್ಕಮಗಳೂರು. ಏಪ್ರಿಲ್ ೧೯೯೭. ಪು. ೧೨.

95. ಡಾ। ಎಂ. ಅಣ್ಣಾಜಪ್ಪ. ಶ್ರೀ ಅನಾದಿ ವೀರಶೈವ ಸಂಗ್ರಹ. ಮುನ್ನುಡಿ. ಪು. ೭.

96. ಡಾ। ಎಂ. ಚಿದಾನಂದಮೂರ್ತಿಯವರು ಹರಿಹರ ಮತ್ತು ರಾಘವಾಂಕ ಕವಿಗಳ ಸೂಚನೆಯನ್ನನುಸರಿಸಿ ರೇವಣಸಿದ್ಧರ ಕಾಲವನ್ನು ಕ್ರಿ.ಶ. ೧೦೮೦ ರಿಂದ ೧೧೭೦ ಎಂದು ಗುರುತಿಸಿದ್ದಾರೆ. (ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮತೆರೆ. ಪು. ೯೧-೯೨).

97. ಡಾ। ಎಂ. ಅಣ್ಣಾಜಪ್ಪ. ಪೂರ್ವೋಕ್ತ. ಅದೇ ಪುಟ.

98. ಅದೇ.

99. ಅದೇ. ಪಠ್ಯಭಾಗ. ಪು. ೨೨

100. ಅದೇ. ಮುನ್ನುಡಿ ಭಾಗ. ಪು. ೮.

101. ಚನ್ನಮಲ್ಲಿಕಾರ್ಜುನ. ಮಠಸ್ಥಲ. ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು. ಸಂ : ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ ಪು. ೫೮೧.

102. ಅದೇ. ಪು. ೫೭೭.

103. ಬಿ. ಶಿವಮೂರ್ತಿಶಾಸ್ತ್ರಿ. ವೀರಶೈವ ಸಾಹಿತ್ಯ ಮತ್ತು ಇತಿಹಾಸ- ೪. ಪು. ೧-೪.

104. ಡಾ। ಎಂ. ಅಣ್ಣಾಜಪ್ಪ. ಪೂರ್ವೋಕ್ತ. ಮುನ್ನುಡಿ. ಪು. ೪.

105. ಅನುಭವಮಂಟಪ ಎಂದರೆ ಧಾರ್ಮಿಕ ಕ್ಷೇತ್ರದಲ್ಲಿ ಕೇವಲಜ್ಞಾನ, ಕೇವಲಭಕ್ತಿ, ಇಲ್ಲವೇ ಕೇವಲಕರ್ಮಗಳ ಮೇಲೆ ಅವಲಂಬಿಸದೆ ಅವುಗಳ ಪ್ರತ್ಯಕ್ಷ ಅನುಭವವನ್ನು ತಮ್ಮ ಜೀವನದಲ್ಲಿ ಸವಿದ ಶಿವಶರಣರದೊಂದು ಆಧ್ಯಾತ್ಮಿಕ ವಿದ್ಯಾಪೀಠವೆಂದು ಉತ್ತಂಗಿ ಚನ್ನಪ್ಪನವರು ಹೇಳಿದ್ದಾರೆ. (ಉದ್ಧೃತ : ಎಸ್. ಆರ್. ಗುಂಜಾಳ. ಉತ್ತಂಗಿಚನ್ನಪ್ಪನವರು. ಪು. ೯೫)

106. ಸಿ.ಜಿ. ಪುರುಷೋತ್ತಮ. ಮಠಗಳು, ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ. ಪ್ರ. ಸಂ : ಡಾ। ಹಾ.ಮಾ.ನಾಯಕ. ಪು. ೧೧೧೭.

107. ಕನ್ನಡ ನಿಘಂಟು. ಸಂ-೮. ಕನ್ನಡ ಸಾಹಿತ್ಯ ಪರಿಷತ್ತು. (೧೯೯೫) ಪು. ೮೧೪೮.

108. ಡಾ। ಎಂ. ಚಿದಾನಂದಮೂರ್ತಿ. ಶೂನ್ಯ ಸಂಪಾದನೆಯನ್ನು ಕುರಿತು. ಪು. ೨೮-೨೯.

109. R.C. Majumdar. The History and Culture of The Indian People. vol. V. P. 367.

110. ವೀರಶೈವ ಸಾಹಿತ್ಯದಲ್ಲಿ 'ಶೂನ್ಯಸಂಪಾದನೆ' ಮತ್ತು 'ಶೀಲಸಂಪಾದನೆ' ಎಂಬ ಕೆಲವು ಗ್ರಂಥಗಳು ದೊರೆಯುತ್ತವೆ. ಇವು ಸಾಮಾನ್ಯವಾಗಿ ಸಂಭಾಷಣೆಯ ರೂಪದಲ್ಲಿ ಸಂಕಲಿಸಿದ ಶಿವಶರಣರ ಮತ್ತು ಶರಣೆಯರ ವಚನಗಳಾಗಿವೆ ಎಂದು ಎಂ. ಆರ್. ಶ್ರೀ. ಹೇಳುತ್ತಾರೆ. (ಸಾಹಿತ್ಯಾಲೋಕ. ಎಂ.ಆರ್. ಶ್ರೀ. ಶೂನ್ಯಸಂಪಾದನೆಗಳು. ಪು. ೧೭೧).

111. ಡಾ। ಎಂ. ಚಿದಾನಂದಮೂರ್ತಿ. ಶೂನ್ಯ ಸಂಪಾದನೆಯನ್ನು ಕುರಿತು. ಪು. ೩೦.

112. ಕನ್ನಡ ಸಾಹಿತ್ಯದಲ್ಲಿ ಪ್ರಮುಖವಾಗಿ ನಾಲ್ಕು ಶೂನ್ಯ ಸಂಪಾದನೆಗಳು ಹುಟ್ಟಿಕೊಂಡಿವೆ.
    ಅ. ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ. (ಸು. ಕ್ರಿ.ಶ. ೧೪೦೦)
    ಆ. ಹಲಗೆಯದೇವರ ಶೂನ್ಯಸಂಪಾದನೆ. (ಸು. ಕ್ರಿ.ಶ. ೧೫೦೦)
    ಇ. ಗುಮ್ಮಳಾಪುರದ ಸಿದ್ಧಲಿಂಗಯತಿಯ ಶೂನ್ಯಸಂಪಾದನೆ. (ಸು. ಕ್ರಿ.ಶ. ೧೫೮೩)

ಈ. ಗೂಳೂರು ಸಿದ್ಧವೀರಣ್ಣೊಡೆಯನ ಶೂನ್ಯಸಂಪಾದನೆ. (ಸು.ಕ್ರಿ.ಶ. ೧೫೫೦) (ನೋಡಿ: ಡಾ| ಎಂ. ಚಿದಾನಂದಮೂರ್ತಿಯವರ ಶೂನ್ಯ ಸಂಪಾದನೆಯನ್ನು ಕುರಿತು. ಪು. ೫೭-೫೮).

113. ತೀ.ನಂ.ಶ್ರೀ. ಕಾವ್ಯಸಮೀಕ್ಷೆ. (೧೯೫೭) ಪು. ೧೧೦.

114. ಎಂ.ಆರ್. ಶ್ರೀ. ಶೂನ್ಯಸಂಪಾದನೆಗಳು. ಸಾಹಿತ್ಯಾಲೋಕ. (೧೯೭೮) ಪು. ೧೭೧. (ಎಂ.ಆರ್. ಶ್ರೀ.ಯವರು ಇಲ್ಲಿ ಐದು ಶೂನ್ಯಸಂಪಾದನೆಗಳಿರಬೇಕೆಂದು ಹೇಳುತ್ತಾರೆ.)

115. ಶಿವಾಗಮದ ರೀತಿಯಲ್ಲಿ ಹೇಳುವುದಾದರೆ, ಪ್ರಾಣಿಗಳಿಗೆ ಪಾಪ-ಪುಣ್ಯವೆಂಬೆರಡು ಕರ್ಮಗಳು ಹೇಳಲ್ಪಟ್ಟಿರುವುವು. ಆ ಎರಡನ್ನೂ ಮೀರಿದವನೇ ನಿರಾಭಾರಿಯು. ದಂಡ, ಕೌಪೀನ, ಕಂಥಾ, ಕಮಂಡಲುಧಾರಿಯಾದ, ಜುಟ್ಟನ್ನಾದರೂ ಶಿಖೆಯನ್ನಾದರೂ ಧರಿಸಿರುವ ಅಥವಾ ಬೋಳಾದ ತಲೆಯುಳ್ಳ ಕಾಷಾಯವಸ್ತ್ರಧಾರಿಯಾದವನೆ ನಿರಾಭಾರಿ ಜಂಗಮನು. (ಸಂಪಿಗೆ ಸಿದ್ಧಲಿಂಗ ಶಾಸ್ತ್ರಿ. ವಿರಕ್ತಾಶ್ರಮಲಕ್ಷಣ. ಉಪನ್ಯಾಸ ಸಂಗ್ರಹ. ಸಂ : ಸಿರಸಿ ಗುರುಶಾಂತಶಾಸ್ತ್ರಿ. ಪು. ೨೫೭-೨೫೮)

116. ಚೆನ್ನಬಸವಣ್ಣನ ವಚನಗಳು. ಸಂ : ಡಾ| ಆರ್.ಸಿ.ಹಿರೇಮಠ (೧೯೬೫). ಪು. ೩೭೫.

117. ಸಮ್ಮೇಳನಾಧ್ಯಕ್ಷರ ಆಶಯ ಭಾಷಣ. ನಾಲ್ಕನೆಯ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ. ಚಿಕ್ಕಮಗಳೂರು. ಏಪ್ರಿಲ್ ೧೯೯೬. ಪು. ೧೩.

118. ''ಮುಕ್ತಿಕಂಠಾಭರಣ''ವು ಒಂದು ವಚನಸಂಕಲನಗ್ರಂಥ. ಇದರಲ್ಲಿ ರೇವಣಸಿದ್ಧರು 'ತ್ರಿಪುರಾಂತಕಸೋಮಲಿಂಗ' ಎಂಬ ಅಂಕಿತದಿಂದ ವಚನಕಾರರಾಗಿ ಕಾಣಿಸಿಕೊಂಡಿದ್ದಾರೆ. ರೇವಣಸಿದ್ಧರ ಪತ್ನಿಯರಾದ ಶಾಂಭವಿ, ವೇದಕಂಚುಕಿ, ಸೌಂದರಿ ದೇವಿ, ಆಗಮಮೋಹಿನಿ ಇವರೇ ಮೊದಲಾದವರೂ ವಚನಗಳನ್ನು ರಚಿಸಿದಂತೆ ಕಲ್ಪಿತವಾಗಿದೆ. (ಡಾ| ಎಂ. ಚಿದಾನಂದ ಮೂರ್ತಿ. ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮತೆರೆ. ಸಂಪ್ರಬಂಧ. ಪು. ೯೭).

119. ಡಾ| ಎಂ. ಅಣ್ಣಾಜಪ್ಪ. ಶ್ರೀ ಅನಾದಿ ವೀರಶೈವ ಸಂಗ್ರಹ. ಮುನ್ನುಡಿ. ಪು. ೬.

120. ಚನ್ನಮಲ್ಲಿಕಾರ್ಜುನ. ಮಠಸ್ಥಲ. ಮಹಾನುಭಾವಿ ಶ್ರೀಚನ್ನಮಲ್ಲಿಕಾರ್ಜುನರು. ಸಂ : ಎಚ್.ದೇವೀರಪ್ಪ, ಚನ್ನಪ್ಪ ಎರೇಸೀಮೆ ಪು. ೫೮೨.

121. ಡಾ| ಎಂ. ಅಣ್ಣಾಜಪ್ಪ. ಪೂರ್ವೋಕ್ತ. ಪಠ್ಯಭಾಗ. ಪು. ೨೨.

122. ಚನ್ನಮಲ್ಲಿಕಾರ್ಜುನ. ಪೂರ್ವೋಕ್ತ. ಪು. ೨೪೪.

123. ನಿರಂಜನವಂಶರತ್ನಾಕರ. ಭಾಗ-೧. ಸಂ : ಫ.ಗು. ಹಳಕಟ್ಟಿ. (೧೯೩೨) ಪು. ೧೩, ೧೪.

124. ಚನ್ನಮಲ್ಲಿಕಾರ್ಜುನ. ಪೂರ್ವೋಕ್ತ. ಪು. ೫೮೦.

125. ಬಸವೇಶ್ವರನು ಕ್ರಿ.ಶ. ೧೧೬೮ರಲ್ಲಿ ಕಲ್ಯಾಣವನ್ನು ಬಿಟ್ಟು ಹೋದಮೇಲೆ, ಮುಂದೆ ಕ್ರಿ.ಶ. ೧೧೮೬ರ ವರೆಗೂ ಕೂಡಲ ಸಂಗಮದಲ್ಲಿಬದುಕಿದ್ದನು. (ಡಾ| ಜಿ.ಎಸ್. ದೀಕ್ಷಿತ್. ಬಸವಣ್ಣನವರ ಕಾಲದ ಮೇಲೆ ಹೊಸಬೆಳಕು. ಸಂಯುಕ್ತ ಕರ್ನಾಟಕ ದಿನಪತ್ರಿಕೆ. ಸಾಪ್ತಾಹಿಕ ಸೌರಭ. ದಿ: ೧೬.೧೦.೧೯೯೪. ಪು. ೩)

126. ಚನ್ನಮಲ್ಲಿಕಾರ್ಜುನ. ಪೂರ್ವೋಕ್ತ. ಪು. ೫೮೧.

127. ಡಾ| ಎಂ.ಎಂ. ಕಲಬುರ್ಗಿಯವರು 'ಸಿರಿವಾಳಶಾಸನ'ದಲ್ಲಿ ಶಾಂತಿಮಯ್ಯನ ಪುತ್ರ ರೇಣುಕಾಚಾರ್ಯನೆಂದೂ ಆತನನ್ನು ಶಿವಸಿದ್ಧಚಕ್ರಿ ರೇಣುಕದೇವ ಎಂದು ಹೊಗಳಿರುವುದಲ್ಲದೆ, ''ಸಿದ್ಧರೇವಣದೇವ, ಸಿದ್ಧರೇವಣಯ್ಯ'' ಎಂದು ಮುಂತಾಗಿ ಕರೆದಿರುವುದನ್ನು ಗುರುತಿಸಿದ್ದಾರೆ. (ಡಾ.ಎಂ.ಎಂ. ಕಲಬುರ್ಗಿ. ಶಾಸನಗಳಲ್ಲಿ ಶಿವಶರಣರು. (೧೯೭೦. ಧಾರವಾಡ) ಪು. ೪೬.

128. ಸಿರಿವಾಳ ಶಾಸನದ ಪ್ರಕಾರ ರೇವಣಸಿದ್ಧರ ಕಾಲವನ್ನು ಕ್ರಿ.ಶ. ೧೧೯೦ ಎಂದಿಟ್ಟುಕೊಳ್ಳಬಹುದಾಗಿದೆ ಎಂದು ಡಾ| ಎಂ. ಚಿದಾನಂದಮೂರ್ತಿಯವರು ಹೇಳಿದ್ದಾರೆ. (ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮತೆರೆ ಸಂಪ್ರಬಂಧ. ಪು. ೯೨).

129. ಸಂಕೀರ್ಣ ವಚನ ಸಂಪುಟ-೧. ವಚನ ೧೦೩೫. ಪು. ೩೨೭.

130. ಸಂಕೀರ್ಣ ವಚನ ಸಂಪುಟ-೪. ವಚನ ೧೧೧೩. ಪು. ೩೭೫. ೩೭೬.

131. ಸಂಕೀರ್ಣ ವಚನ ಸಂಪುಟ-೩. ವಚನ ೧೩೧೩. ಪು. ೪೭೬.

132. ಕೆಲವೆಡೆ ಶ್ರೀಶೈಲದಲ್ಲಿ ಏಕೋರಾಮನೂ, ಕೇದಾರದಲ್ಲಿ ಪಂಡಿತಾರಾಧ್ಯನೂ, ಪೀಠಸ್ಥಾಪಿಸಿದರೆಂದು ಹೇಳಲಾಗಿದೆ. (ಹೆಚ್ಚಿನ ವಿವರಗಳಿಗಾಗಿ ಇದೇ ಅಧ್ಯಾಯದ ೭೦ನೆಯ ಅಡಿಟಿಪ್ಪಣಿ ನೋಡಿ)

133. ಐದು ಪಂಚಪೀಠಗಳಲ್ಲಿ ಬಾಳೆಹಳ್ಳಿ ಮತ್ತು ಉಜ್ಜಯಿನಿ ಇವೆರಡೂ ಪೀಠಗಳು ಮಾತ್ರ ರಾಜ್ಯದ ಒಳಗಿವೆ. ಉಳಿದ ಮೂರು ಪೀಠಗಳು ರಾಜ್ಯದಿಂದ ಹೊರಗಿವೆ. (ಹಿಮಾಲಯ ಪ್ರಾಂತ್ಯದ ಕೇದಾರ, ಉತ್ತರಪ್ರದೇಶದ ಕಾಶಿ, ಆಂಧ್ರದ ಶ್ರೀಶೈಲ)

134. ಡಾ| ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೭೩.

135. ಡಾ| ಎಸ್.ಸಿ. ನಂದಿಮಠ. ವೀರಶೈವಧರ್ಮದ ಕೈಪಿಡಿ. ಅನು : ಪ್ರೇಮಾದೇವಿ ಮಳಿಮಠ. ಪು. ೧೩.

136. ಹುಬ್ಬಳ್ಳಿ ಎರಡೆತ್ತಿನ ಮಠದ ಚನ್ನವೀರಯ್ಯ. ಲಿಂಗಾಯತ ಮತೋತ್ಪತ್ತಿ ನಿರ್ಣಯ. ಪು. ೧೮.

137. ಸುಪ್ರಭೇದಾಗಮದ ರೀತಿ ಪಂಚಾಚಾರ್ಯರ ಉತ್ಪತ್ತಿ ಹಾಗೂ ಗೋತ್ರ ಸೂತ್ರಗಳ ಪಟ್ಟಿ-

| | ೧ | ೨ | ೩ | ೪ | ೫ |
|---|---|---|---|---|---|
| ಪರಶಿವನ ಪಂಚಮುಖಗಳು | ಸದ್ಯೋಜಾತ | ವಾಮದೇವ | ಅಘೋರ | ತತ್ಪುರುಷ | ಈಶಾನ |
| ಪಂಚಾಚಾರ್ಯರು | ರೇವಣಾರಾಧ್ಯ | ಮರುಳಾರಾಧ್ಯ | ಏಕೋರಾಮಾರಾಧ್ಯ | ಪಂಡಿತಾರಾಧ್ಯ | ವಿಶ್ವಾರಾಧ್ಯ |
| ಜನ್ಮಭೂಮಿ | ಸೋಮನಾಥಲಿಂಗ | ಸಿದ್ಧಲಿಂಗ | ರಾಮನಾಥಲಿಂಗ | ಮಲ್ಲಿಕಾರ್ಜುನಲಿಂಗ | ವಿಶ್ವನಾಥಲಿಂಗ |
| ಸಿಂಹಾಸನಗಳು | ರಂಭಾಪುರಿ | ಉಜ್ಜಯಿನಿ | ಹಿಮವತ್ಕೇದಾರ | ಶ್ರೀಶೈಲ | ಕಾಶೀ |
| ಗೋತ್ರಗಳು | ವೀರ | ನಂದಿ | ಭೃಂಗಿ | ವೃಷಭ | ಸ್ಕಂದ |
| ಸೂತ್ರಗಳು | ಪಡ್ವಿಡಿ | ವೃಷ್ಟಿ | ಲಂಬನ | ಮುಕ್ತಗುಚ್ಛ | ಪಂಚವರ್ಣ |
| ಶಾಖಾಗಳು | ಋಕ್ | ಯಜುಃ | ಸಾಮ | ಅಥರ್ವಣ | ಅಜಪವೇದ |
| ಧಾತುಗಳು | ಸ್ವರ್ಣ | ರಜತ | ತಾಮ್ರ | ಲೋಹ | ಸೀಸ |
| ತತ್ವಗಳು | ಪೃಥ್ವೀ | ಅಪ್ | ತೇಜಃ | ವಾಯು | ಆಕಾಶ |
| ಬೀಜಾಕ್ಷರಗಳು | ನಕಾರ | ಮಕಾರ | ಶಿಕಾರ | ವಾಕಾರ | ಯಕಾರ |
| ಮಹಾಸೂತ್ರಗಳಿಗೆ ಸೇರಿದ ಉಪಸೂತ್ರಗಳು ೧ | ಶತಾಂಗ | ಲೋಹಕಂಥಾ | ಗೋಣೀಕಂಥಾ | ತ್ರಿಪುಟೀ | ಪಂಚವರ್ಣ |
| ೨ | ಪ್ರಮುಖ | ಸ್ವರ್ಣಕಂಥಾ | ದಂತೀ | ರಜ್ಜು | ಕಂಬಾಲ |
| ೩ | ಶರ್ಕರ | ಶೃಂಗೀ | ಜಠರ | ಕಂಥಾ | ವೃಷಭ |
| ೪ | ವೃಷಭ | ಮಸ್ತಣೀ | ತ್ರಿಗುಣ | ಭಸ್ಮೀ | ದಶವಕ್ರ |
| ೫ | ಸಹಸ್ರಾಕ್ಷ | ಕುಠಾರ | ಕೇಶಕಂಥಾ | ಶಿಖರೀ | ಜರತ್ಕಂಥಾ |
| ೬ | ಧರ್ಮ | ಭೃಶ್ರೀ | ಲಲಾಟ | ರೌಪ್ಯಕ | ಪಂಚಮುಖ |
| ೭ | ವಿಷಮ | ಕಠಾರ | ವ್ಯಾಘ್ರಕಂಥಾ | ಚಂದ್ರಗುಂಡ | ಗುಹಾಗ್ರ |
| ೮ | ಮೋಚಕ | ಚಾಮರೀ | ಲೋಚನ | ಮೃತ್ಕಂಥಾ | ಗೋಚರ |
| ೯ | ವೃಕಭೇದೀ | ಕವಾಟ | ಭಗಿನಿ | ಕಾಷ್ಟಕ | ಗಗನ |
| ೧೦ | ಕಂಜರಾರಿ | ಕುಕ್ಷಕಂಥಾ | ಜಾಲಕಂಥಾ | ಪವನ | ಮುಸಲೀ |
| ೧೧ | ಶೇಷ | ಜ್ವಲಕಂಥಾ | ನಟನ | ರಾಮಗಿರಿ | ಲಗುಡ |
| ೧೨ | ಶಖಿಹರಿತ್ | ಸಿಂಹೀ | ಬದಡೀ | ಖಡ್ಗೀ | ಶಿಥಿಲೀ |

(ವೀರಶೈವ ಸದಾಚಾರ ಸಂಗ್ರಹ. ಸಂ : ಎಂ.ಜಿ. ನಂಜುಂಡಾರಾಧ್ಯ. ಪು. ೯೪)

138. ವೀರಶೈವ ಸದಾಚಾರ ಸಂಗ್ರಹ. ಸಂ : ಎಂ. ಜಿ.ನಂಜುಂಡಾರಾಧ್ಯ. ಪು. ೧೦, ೧೧.

139. 'ಪರಮೇಶ್ವರನ ಹೃದಯದಿಂದ ಮಠದಯ್ಯನೂ, ಬಲ ಹೆಗಲಿನಿಂದ ಗಣಾಚಾರ್ಯನೂ, ಎಡ ಹೆಗಲಿನಿಂದ ಮಠಪತ್ತಿಯೂ, ಬಲಪಾದದಿಂದ ಗಣಕುಮಾರನೂ, ಎಡಪಾದದಿಂದ ಸ್ಥಾವರಿಕನೂ' ಜನಿಸಿದುದಾಗಿ ಹೇಳಲಾಗುತ್ತದೆ. (ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೭೪.)

140. ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೩೭೫, ೩೭೬.

141. ನೀಲಕಂಠ ಶಿವಾಚಾರ್ಯಸ್ವಾಮಿ. ಹೂಲಿ ಸಿಂಹಾಸನ. ಪು. ೪೦.

142. ಪಂ। ಕಾಶೀನಾಥಶಾಸ್ತ್ರಿ. ಸನ್ಯಾಸಾಶ್ರಮ ತತ್ತ್ವ ಸ್ಥಿರೀಕರಣ. ಪು. ೪೩.

143. ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಪು. ೪೭೭.

144. ಅದೇ. ಪು. ೪೭೮, ೪೭೯.

145. ಡಾ। ಎಸ್.ಸಿ. ನಂದಿಮಠ, ವೀರಶೈವ ಧರ್ಮದ ಕೈಪಿಡಿ. (ಅನು : ಪ್ರೇಮಾದೇವಿ ಮಳಿಮಠ) ಪು. ೧೩.

146. ಅ. 'ಮಠಪತ್ತಿ' ಎಂದರೆ ಕಾಲಾಳು ಎಂದರ್ಥ. ಈತ ಹಿರೇಮಠಸ್ಥನಿಗೆ ಸೇವಕನಾಗಿರುತ್ತಾನೆ. (ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೮೦).

ಆ. ಮಠಪತ್ತಿಯು ಗುರುಸ್ಥಲದವರು ಮಾಡುವ ಸಕಲ ಕರ್ಮಂಗಳಿಗೆ ಬೇಕಾದ ಸಾಧನಂಗಳನ್ನು ಅವರ ಅನುಮತಿ ಪ್ರಕಾರ ತಂದುಕೊಡುವವನು. (ಲಿಂಗಾಯತ ಮತೋತ್ಪತ್ತಿ ನಿರ್ಣಯ. ಪು. ೧೭)

147. 'ಗಣಾಚಾರಿ'ಯು ಹಿರೇಮಠಸ್ಥನ ವಾರ್ತಾವಾಹಕನಿದ್ದಂತೆ. ಹಿರೇಮಠಸ್ಥನಿಗೂ ಊರಿನ ಜನರಿಗೂ ಪರಸ್ಪರ ಸಂಪರ್ಕವೇರ್ಪಡಿಸುತ್ತಾನೆಂದು ಡಾ। ಎಂ.ಚಿದಾನಂದಮೂರ್ತಿ (ಲಿಂಗಾಯತ ಅಧ್ಯಯನಗಳು. ಪು. ೪೭೯.) ಹೇಳುತ್ತಾರೆ. ಡಾ। ವಿ.ಎಸ್. ಕಂಬಿ ಅವರು ಪೂಜಾಕಾರ್ಯಕ್ಕೆ ಮನೆಯ ಯಜಮಾನ ಹಾಗೂ ಉಳಿದವರನ್ನು ಅವರ ಅಂತಸ್ತಿಗೆ ತಕ್ಕಂತೆ ಯಾರು ಯಾವಾಗ ಬರಬೇಕು ಎಂಬುದನ್ನು ನೋಡಿಕೊಳ್ಳುವುದು ಗಣಾಚಾರ್ಯನ ಕೆಲಸ ಎಂದು ಹೇಳಿದ್ದಾರೆ. (ಕಾಯಕಯೋಗಿ. ಪು. ೧೧)

148. ಪೂಜೆಗೆ ಬಂದಂಥ ಯಾವತ್ತೂ ಜನಗಳಿಗೆ ಪಾದೋದಕ ಪ್ರಸಾದಗಳು ಸರಿಯಾಗಿ ವಿನಿಯೋಗವಾದುವೇ ಇಲ್ಲವೇ ಎಂಬುದನ್ನು ನೋಡಿಕೊಳ್ಳುವುದು 'ಗಣಕುಮಾರ' (ಕೌಮಾರ್ಯ)ನ ಕೆಲಸ. (ಡಾ।ವಿ.ಎಸ್. ಕಂಬಿ. ಮಠಗಳು. ಆಧ್ಯಾತ್ಮ ಶಕ್ತಿಕೇಂದ್ರಗಳು. ಕಾಯಕಯೋಗಿ. ನಾಗನೂರು ಮಠ. ಬೆಳಗಾವಿ. ಪು. ೧೧)

149. ಪೂಜಾಗೃಹದ ಆಸನಗಳ ಸಿದ್ಧತೆ ಹಾಗೂ ಅವುಗಳ ಅಚ್ಚುಕಟ್ಟು ಮಾಡುವುದು 'ಸ್ಥಾವರಾರ್ಯ'ನ ಕೆಲಸ ಎಂದು ಡಾ। ವಿ.ಎಸ್. ಕಂಬಿ ಹೇಳಿದ್ದಾರೆ. (ಅದೇ ಪುಟ.)

150. ಮೇಲಿನ ಕಾರ್ಯಗಳ ಜೊತೆಗೆ ಗಣಾಚಾರಿಯು ಹಿರೇಮಠದಲ್ಲಿ ಗ್ರಾಮದ ವೀರಶೈವ ಧರ್ಮೀಯರ ಧಾರ್ಮಿಕ ಕೃತ್ಯಗಳ ಲೆಕ್ಕಪತ್ರ ಇಡುತ್ತಾನೆ. ಗಣಕುಮಾರನು ಗ್ರಾಮಸ್ಥರ ಮನೆಗಳಲ್ಲಿ ನಡೆದ ನಿತ್ಯಾಚಾರಗಳನ್ನು ನಿರೀಕ್ಷಿಸಿ ಹಿರೇಮಠಸ್ಥನಿಗೆ ವರದಿ ಮಾಡುತ್ತಾನೆ. ಸ್ಥಾವರಿಕನು ವೀರಶೈವ ಗೋತ್ರಪುರುಷರ, ಶಿವ-ಪಾರ್ವತಿಯರ ಹಾಗೂ ಅವರ ಪರಿವಾರದವರ ಮೂರ್ತಿ ಪೂಜಕನಾಗಿ ಕೆಲಸ ನಿರ್ವಹಿಸುತ್ತಾನೆ. (ನೀಲಕಂಠ ಶಿವಾಚಾರ್ಯಸ್ವಾಮಿ. ಹೂಲಿ ಸಿಂಹಾಸನ. ಪು. ೩೯)

151. ದಶಕರ್ಮಗಳು ಯಾವುವೆಂದರೆ-ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ದೀಕ್ಷಾ, ವಿವಾಹ, ಅಂತ್ಯೇಷ್ಟಿ (ಪಿ.ಆರ್. ಕರಿಬಸವಶಾಸ್ತ್ರಿ. ಸನಾತನ ವೀರಶೈವ ಬ್ರಾಹ್ಮಣ ಧರ್ಮ. ಪು. ೫೦).

152. ವೀರಶೈವ ತತ್ತ್ವಪ್ರಕಾಶ. ಸಂ : ಶಿ.ಶಿ. ಬಸವನಾಳ. ವೀರಶೈವರ ಕಾಯಕಗಳು. ಪು. ೨೩೬.

153. ವಿರೂಪಾಕ್ಷ ಒಡೆಯರ್. ಬಸವೇಶ್ವರರನ ಕೃತಿಗಳು. ವೀರಶೈವ ಕರದರ್ಪಣ. ಸಂ : ಟಿ.ಎನ್.ಚನ್ನಪ್ಪ, ಬಿ. ಪುಟ್ಟಸ್ವಾಮಯ್ಯ. ಪು. ೩.

154. ಅ. ಡಾ।ಎಸ್.ಆರ್. ಗುಂಜಾಳ ಅವರು ತೆಕ್ಕೆಯಕಾಯಕ, ಮುಳ್ಳಾವಿಗೆ ಕಾಯಕ, ಶಸ್ತ್ರದಕಾಯಕ, ಜಂಗಿನಕಾಯಕ, ಘಂಟೆಯಕಾಯಕ ಹಾಗೂ ಹಿಟ್ಟಿನಕಾಯಕ ಎಂಬುದಾಗಿ ಆರು ಬಗೆಯ ಕಾಯಕದಯ್ಯಗಳನ್ನು ಹೆಸರಿಸುತ್ತಾರೆ. (ಲಿಂಗಾಯತರಲ್ಲಿ ಕಾಯಕದ ಕಲ್ಪನೆ. ಕಾಯಕಪರಿಣಾಮಿ. ಸಂ : ಶಾಂತರಸ, ಚನ್ನಬಸಪ್ಪ. ಪು. ೬೫೫. ೬೫೬.)

ಆ. ಡಾ।ಎಚ್.ಎಂ. ಸದಾಶಿವಯ್ಯನವರು 'ಶ್ರೀ ಪಟ್ಟಾಧಿಕಾರಿಗಳು ಹುತ್ತಿಗಿಮಠ' ಎಂಬ ಕೃತಿಯನ್ನು ಆಧರಿಸಿ ಘಂಟೆ ಕಾಯಕ, ಮುಳ್ಳಾವಿಗೆಕಾಯಕ, ಕಣೆಕಾಯಕ, ಗದ್ದುಗೆಕಾಯಕ, ಮಂಗಳಕಾಯಕ, ತೆಕ್ಕೆಕಾಯಕ ಎಂಬ ಆರು ಬಗೆಯ ಕಾಯಕದಯ್ಯಗಳನ್ನು ಗುರುತಿಸಿದ್ದಾರೆ. [A Comparative Study of Two Virasaiva Monasteries. 1967. P 62]

155. ಈ ಮೇಲ್ಕಂಡ ಕಾಯಕದಯ್ಯಗಳ ಬಗೆಗಿನ ವಿಚಾರಗಳನ್ನು 'ವೀರಶೈವ ಕರದರ್ಪಣ'ದಿಂದಲೇ ಆರಿಸಿಕೊಂಡಿದೆ. (ವಿರೂಪಾಕ್ಷ ಒಡೆಯರ್. ಬಸವೇಶ್ವರನ ಕೃತಿಗಳು. ವೀರಶೈವಕರದರ್ಪಣ. ಸಂ : ಟಿ.ಎನ್. ಚನ್ನಪ್ಪ. ಬಿ. ಪುಟಸ್ವಾಮಯ್ಯ. ಪು. ೪, ೫).

156. ವೀರಶೈವ ಕರದರ್ಪಣ. ಸಂ : ಟಿ.ಎನ್. ಚನ್ನಪ್ಪ, ಬಿ. ಪುಟ್ಟಸ್ವಾಮಯ್ಯ. ಪು. ೪.

157. 'ಚರಜಂಗಮ' ಎಂದರೆ ಯಾರು ಸ್ವಸ್ವರೂಪ ಜ್ಞಾನಸಂಪನ್ನನಾಗಿ ಅಹಂಭಾವವನ್ನೂ, ಮಮಕಾರವನ್ನೂ ನಾಶಮಾಡಿ ತಾನೇತಾನಾಗಿ ಅಂದರೆ ಆ ಪರವಸ್ತುವೇ ತಾನಾಗಿ ಚರಿಸುವನೋ ಆತನೇ ಚರಜಂಗಮ. (ಉಪನ್ಯಾಸ ಸಂಗ್ರಹ. ಸಂ : ಸಿರಸಿ ಗುರುಶಾಂತಶಾಸ್ತ್ರಿ. ಪು. ೨೫೬.)

158. ಡಾ। ಹಿರೇಮಲ್ಲೂರ ಈಶ್ವರನ್. ಲಿಂಗಾಯತ ಧರ್ಮ, ಸಮಾಜ, ಮತ್ತು ಸಂಸ್ಕೃತಿ. ಪು. ೧೯೯. ೧೭೦.

159. ವೀರಶೈವ ಜಾತಿಗಳ ಅನುಶ್ರೇಣಿಯಲ್ಲಿ ಜಂಗಮರದು ಅಗ್ರಸ್ಥಾನ. ಮುಂದಿನ ಜಂಗಮೇತರ ಜಾತಿಗಳಾದ ಪಂಚಮಸಾಲಿ, ಸಾದ, ನೊಣಬ, ಗೌಡ ಮುಂತಾದುವೆಲ್ಲಾ ಭಕ್ತಜಾತಿಗಳು. ಹಿಂದೆ ಜಂಗಮನಲ್ಲದವನಿಗೆ ಯಾವುದೇ ಮಠದ ಅಥವಾ ಪೀಠದ ಅಧ್ಯಕ್ಷನಾಗಲು ಅವಕಾಶವಿರಲಿಲ್ಲ. (ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೬೭ ಮತ್ತು ೪೮೯)

160. ಅ. ಬುದ್ಧಯ್ಯಸ್ವಾಮಿ ಪುರಾಣಿಕರು ಗುರುವರ್ಗದ ಸ್ತರಗಳನ್ನು ವಿವರಿಸುತ್ತಾ -ಪಂಚವೃತ್ಯಾಚಾರ್ಯರ ಮೇಲೆ ಪಟ್ಟಾಧ್ಯಕ್ಷರೂ; ಪಟ್ಟಾಧ್ಯಕ್ಷರ ಮೇಲೆ ಪಂಚಪೀಠಾಧಿಪತಿಗಳೂ; ಈ ಪಂಚ ಪೀಠಾಧಿಪತಿಗಳ ಮೇಲೆ 'ಮೀರಿಸ್ಥಲ'ದವರಾದ ನಿರಂಜನಮೂರ್ತಿಗಳ ಏರ್ಪಾಟಾಗಿರುತ್ತದೆ ಎಂದಿದ್ದಾರೆ. (ವೀರಶೈವ ತತ್ತ್ವಪ್ರಕಾಶ. ಸಂ: ಶಿ.ಶಿ. ಬಸವನಾಳ. ವೀರಶೈವರ ಕಾಯಕಗಳು. ಪು. ೨೩೭)

ಆ. ನೀಲಕಂಠ ಶಿವಾಚಾರ್ಯಸ್ವಾಮಿಗಳು ಗುರುವರ್ಗದ ಮಠಗಳನ್ನು ಏಳು ವಿಭಾಗ ಮಾಡಿದ್ದಾರೆ. ೧. ಹಿರೇಮಠ, ೨. ಕಟ್ಟೇಮನೆ, ೩. ಪುರವರ್ಗದ ಅಥವಾ ಪಂಚಗೃಹದ ಮಠ, ೪. ಸಾವಿರಮಠ, ೫. ಶಾಖಾಸಿಂಹಾಸನದ ಬೃಹನ್ಮಠ, ೬. ಸಿಂಹಾಸನ ಬೃಹನ್ಮಠ, ೭. ಜಗದ್ಗುರು ಪಂಚಸಿಂಹಾಸನ ಮಹಾಮಠಗಳು. (ಹೂಲಿ ಸಿಂಹಾಸನ. ಪು. ೧೧೫).

161. ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೮೨.

162. ಮಠದಯ್ಯಗಳದು ಹೆಣ್ಣುಜೋಳಿಗೆ. ಗಣಾಚಾರಿ, ಮಠಪತ್ತಿ ಮೊದಲಾದ ವೃತ್ಯಾಚಾರ್ಯರದು ಗಂಡುಜೋಳಿಗೆ. ಹೆಣ್ಣುಜೋಳಿಗೆಯವರು ಕಾಲಿಗೆ ಜಂಗುಕಟ್ಟುವ, ಭಿಕ್ಷೆ ಎತ್ತುವ ಅಧಿಕಾರ ಪಡೆದಿದ್ದರು. ಜಂಗಮರೇ ಆಗಿದ್ದ ಗಂಡು ಜೋಳಿಗೆಯವರಿಗೆ ಜಂಗು ಕಟ್ಟುವ, ಭಿಕ್ಷೆ ಎತ್ತುವ ಅಧಿಕಾರವಿರಲಿಲ್ಲ. ಈ ಅಧಿಕಾರ ನಿಜವಾಗಿ ಇದ್ದದ್ದು ಪಟ್ಟದ್ದೇವರುಗಳಿಗೆ. ಅವರುಗಳು ನೇರವಾಗಿ ಈ ಕೆಲಸ ಮಾಡದೆ ಪಟ್ಟದಯ್ಯಗಳ ಮೂಲಕ ಮಾಡಿಸುತ್ತಿದ್ದರು. (ನೋಡಿ : ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೭೬.)

163. ಇಂತಹ ವ್ಯವಸ್ಥೆಯನ್ನು ಮೊಟ್ಟಮೊದಲು ಜಾರಿಗೆ ತಂದವರು ಬಾಳೆಹಳ್ಳಿಯ ರೇವಣಸಿದ್ಧರ ಮಗ ರುದ್ರಮುನಿಸ್ವಾಮಿಗಳು ಹಾಗೂ ಉಜ್ಜಯಿನಿಯ ಮುಕ್ತಿಮುನಿಸ್ವಾಮಿಗಳು. ಆದ್ದರಿಂದ ಈ ವ್ಯವಸ್ಥೆಗೆ ಶ್ರೀರುದ್ರಮುನಿ ಮುಕ್ತಿಮುನಿಗಳ ಧಾರ್ಮಿಕ ಕಟ್ಟಳೆ ಎಂದು ಕರೆಯುತ್ತಾರೆ. (ನೋಡಿ : ನೀಲಕಂಠ ಶಿವಾಚಾರ್ಯಸ್ವಾಮಿ. ಹೂಲಿಸಿಂಹಾಸನ. ಪು. ೩೨.)

164. ನೀಲಕಂಠ ಶಿವಾಚಾರ್ಯಸ್ವಾಮಿ. ಹೂಲಿಸಿಂಹಾಸನ. ಪು. ೪೦.

165. ಜಂಗಮ ಶಬ್ದವು ಈಗ ಲಿಂಗಾಯತ ಸಮಾಜದಲ್ಲಿ ಪೌರೋಹಿತ್ಯ ಮಾಡುವ ಒಂದು ಉಪಜಾತಿವಾಚಕವಾಗಿ ಬಳಕೆಯಾಗುತ್ತಿದೆ. ಜಂಗಮ ಪದವು ಪಾರಿಭಾಷಿಕ ಅರ್ಥದಲ್ಲಿ ಈಗಲೂ ಅದು ವಿರಕ್ತರಿಗೆ ಮಾತ್ರ ಅನ್ವಯವಾಗುತ್ತದೆ. (ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೮೩.)

166. ಜಂಗಮನು ತನಗೆ ಪ್ರಪಂಚವು ಬೇಡವೆಂದು ಸನ್ಯಾಸವನ್ನು ಪಡೆದವನಲ್ಲ. ಜನರನ್ನು ಉದ್ಧಾರ ಮಾಡುವೆನೆಂಬ ಕೆಲಸವನ್ನು ವಹಿಸಿದವನಾಗಿ ಮದುವೆಯಾಗದೆ ಇರುವವನು. (ಚನ್ನಮಲ್ಲಿಕಾರ್ಜುನ. ಮಹಾನುಭಾವಿ ಶ್ರೀಚನ್ನಮಲ್ಲಿಕಾರ್ಜುನರು. ಸಂ : ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ. ಪು. ೨೮೫.)

167. ಲೌಕಿಕ ಸುಖಗಳಾದ ಹೆಣ್ಣು, ಮಾಲೆ, ಗಂಧ, ತಾಂಬೂಲ, ಧನ, ಕನಕ, ವಸ್ತುವಾಹನಾದಿಗಳು ವಿರಕ್ತರಿಗೆ ಸಂಪೂರ್ಣ ನಿಷಿದ್ಧ. ಜಂಗಮ ಒಂದುವೇಳೆ ಅಪೇಕ್ಷಿಸಿದರೆ ಇವುಗಳನ್ನು ಉಪಯೋಗಿಸುವ ಅವಕಾಶವಿತ್ತು. (ಡಾ।ಎಂ. ಚಿದಾನಂದಮೂರ್ತಿ. ಜಂಗಮರು ಒಂದು ಐತಿಹಾಸಿಕ ಸಮೀಕ್ಷೆ. ಬಸವಪಥ. ಸಂ : ಸಿದ್ದಯ್ಯಪುರಾಣಿಕ. ಸಂಪುಟ-೭. ಸಂಚಿಕೆ-೨. ಮೇ ೧೯೮೪. ಪು. ೬೦, ೬೧).

168. ಚೆನ್ನಬಸವಣ್ಣನ ವಚನಗಳು. ಸಂ : ಆರ್.ಸಿ. ಹಿರೇಮಠ. ವ. ೪೫೩.

169. ಬಸವಣ್ಣನವರ ವಚನಗಳು. ಸಂ : ಆರ್.ಸಿ.ಹಿರೇಮಠ. ವ. ೪೨೪.

170. ಚೆನ್ನಬಸವಣ್ಣನ ವಚನಗಳು. ಸಂ : ಆರ್.ಸಿ. ಹಿರೇಮಠ. ವ. ೯೯೦.

171. ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಅದೇ ಪುಟ.

172. ಜಿ.ಎಂ. ಉಮಾಪತಿಶಾಸ್ತ್ರಿ. (ಸಂ) ವಿವೇಕಚಿಂತಾಮಣಿ. ಪ್ರಸ್ತಾವನೆ. ಪು. ೫೯.

173. ಕಪಟರಾಳ ಕೃಷ್ಣರಾಯ. ಕರ್ನಾಟಕ ಲಾಕುಳ ಶೈವರ ಇತಿಹಾಸ. ಪು. ೬೩.

174. ಅಲ್ಲಮನ ವಚನಚಂದ್ರಿಕೆ. ಸಂ : ಡಾ। ಎಲ್. ಬಸವರಾಜು. ವಚನ. ೬೨೭. ಪು. ೧೫೯.

175. ಡಾ। ಎಸ್.ಸಿ. ನಂದಿಮಠ ಅವರು ಜಂಗಮತ್ವದ ಲಕ್ಷಣವನ್ನು ಹೇಳುತ್ತಾ-ಜಂಗಮ ಸರ್ವಸಂಗ ಪರಿತ್ಯಾಗಿ; ಅವನು ನಿರ್ಲೇಪಕ, ನಿರುಪಾದಿಕ, ನಿಬೋಧಕ, ನಿರಾಶ್ರಿತ, ನಿಷ್ಕಾರಣ, ನಿರ್ಲಂಪಟಿ; ಈ ಷಡ್ಗುಣಭರಿತನಾದವನು ನಿರವಯ ಜಂಗಮ ಎಂದು ಹೇಳಿದ್ದಾರೆ. (A Handbook of virasaivism. P. 242).

176. ಚನ್ನಮಲ್ಲಿಕಾರ್ಜುನ. ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು. ಸಂ : ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ. ಪು. ೨೧೭.

177. ಜಂಗಮತ್ವದಲ್ಲಿ ಮೂರುಬಗೆ. ಸ್ವಯಜಂಗಮ, ಚರಜಂಗಮ, ಪರಜಂಗಮ.

178. ಅ. ಗುರುವರ್ಗದ ಪಂಚವೃತ್ಯಾಚಾರ್ಯರ ಮೇಲೆ ಪಟ್ಟದಗುರುಗಳು, ಪಟ್ಟದ ಗುರುಗಳ ಮೇಲೆ ಪಂಚಪೀಠದ ಗುರುಗಳು, ಈ ಪಂಚಪೀಠದ ಗುರುಗಳ ಮೇಲೆ ಮಹಾಗುರು ಜಂಗಮನಿರುತ್ತಾನೆ. (ಬುದ್ಧಯ್ಯಸ್ವಾಮಿ ಪುರಾಣಿಕ. ವೀರಶೈವರ ಕಾಯಕಗಳು. ವೀರಶೈವ ತತ್ತ್ವಪ್ರಕಾಶ. ಸಂ : ಶಿ.ಶಿ. ಬಸವನಾಳ. ಪು. ೨೩೬..)

ಆ. ಪಂಡಿತ ಕಾಶಿನಾಥಶಾಸ್ತ್ರಿಗಳು - ಈ ಪಂಚಾಚಾರ್ಯರೆಂಬುವರು ಶಿವನ ಸಮೀಪದಲ್ಲಿದ್ದ ಪ್ರಮಥರೆಂತಲೂ ಜಂಗಮವು ಸಾಕ್ಷಾತ್ ಶಿವ ಸ್ವರೂಪವೆಂತಲೂ ಸಿದ್ಧಾಂತವಿರುವುದರಿಂದ ಗುರುಗಳೆಂಬ ಆಚಾರ್ಯರಿಗಿಂತಲೂ ಜಂಗಮರಲ್ಲಿಯ ಗುರುತ್ವವೆ ಅಧಿಕವಾದದ್ದು ಎಂದಿದ್ದಾರೆ. (ಉದ್ಧೃತ : ಸನ್ಯಾಸಾಶ್ರಮ ವಿಮರ್ಶತತ್ತ್ವ ಸ್ಥಿರೀಕರಣ. ಬಿ. ಗುರುಸಿದ್ಧಶಾಸ್ತ್ರಿ. ಪು. ೫೧)

179. ಉತ್ತರ ಕರ್ನಾಟಕದಲ್ಲಿ ಜಗದ್ಗುರು ಪೀಠಕ್ಕಿರಲಿ, ಗುರು-ವಿರಕ್ತ ವರ್ಗದ ಯಾವುದೇ ಮಠಗಳಿಗೇ ಆಗಲಿ ಜಂಗಮನಲ್ಲದವನು ಪೀಠಾಧೀಶನಾಗಲು ಅರ್ಹತೆ ಇರಲಿಲ್ಲ. (ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೯೯.)

180. ಶೂನ್ಯಪೀಠ, ಶೂನ್ಯಸಂಪಾದನೆ ಮೊದಲಾದವುಗಳು ಪಾರಿಭಾಷಿಕ ಶಬ್ದಗಳು. ವೀರಶೈವ ಸಿದ್ಧಾಂತದಲ್ಲಿ ಬ್ರಹ್ಮ, ಶಿವ, ಲಿಂಗ, ಶೂನ್ಯ, ನಿರ್ಬಯಲು, ನಿಶ್ಶೂನ್ಯ, ಸ್ಥಲ, ಇತ್ಯಾದಿ ಪದಗಳು ದೇವರಿಗೆ ಪರ್ಯಾಯವಾದವು. ಉಪನಿಷತ್ತಿನಲ್ಲಿ ಯಾವುದನ್ನು ಬ್ರಹ್ಮವೆಂದು ಕರೆಯುತ್ತಾರೋ ಅದನ್ನು ವಚನಕಾರರು ಶೂನ್ಯವೆಂದು ಕರೆಯುತ್ತಾರೆ. ಶೂನ್ಯ ಸಂಪಾದನೆಯೆಂದರೆ ಶಿವನನ್ನು ಸಂಪಾದಿಸುವುದು ಎಂದರ್ಥ. ಶಿವಾಗಮಗಳಲ್ಲಿ ಯಾವುದನ್ನು ಲಿಂಗ ಎಂದು ಕರೆಯುತ್ತಾರೋ ಅದನ್ನು ವಚನಶಾಸ್ತ್ರದಲ್ಲಿ ಶೂನ್ಯ ಎಂದು ಕರೆಯುತ್ತಾರೆ. ಶೂನ್ಯಪೀಠ ಎಂದರೆ ಪರಶಿವತತ್ತ್ವವನ್ನು ಬೋಧಿಸುವ ಪೀಠ ಎಂದರ್ಥ ಎಂಬುದಾಗಿ ಬಿ. ಶಿವಮೂರ್ತಿಶಾಸ್ತ್ರಿ ಹೇಳಿದ್ದಾರೆ. (ವೀರಶೈವ ಸಾಹಿತ್ಯ ಮತ್ತು ಇತಿಹಾಸ. ಭಾಗ-೪. ಪು. ೨೬೬)

181. ಶೂನ್ಯ ಸಿಂಹಾಸನವು ಬಸವಣ್ಣನ ಅರಮನೆಯ ಉಪ್ಪರಿಗೆಯ ಮೇಲಿದ್ದ ಉತ್ತುಂಗ ಆಸನವೆಂದು ಭಾಗವತ ನಂಜುಂಡ (೧೮೦೦) ಹೇಳಿದ್ದಾನೆ. ( ಉದ್ಧೃತ : Dr. H.M. Sadasivaiah. A Comparative Study of Two Virasaiva Monasteries. P. 93)

182. ಚನ್ನಮಲ್ಲಿಕಾರ್ಜುನ. ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು. ಸಂ : ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ. ಪು. ೨೮೫.

183. ಹುಬ್ಬಳ್ಳಿ ಎರಡೆತ್ತಿನ ಮಠದ ಚನ್ನವೀರಸ್ವಾಮಿ. ಲಿಂಗಾಯತ ಮತೋತ್ಪತ್ತಿ ನಿರ್ಣಯ. ಪು. ೧೯. (ಇವರು ವಿರಕ್ತರನ್ನು ಕೇವಲ ವಿರಕ್ತ ಮತ್ತು ಚರಮೂತಿ- ಎಂದು ಎರಡು ಬಗೆ ಮಾಡಿ, ಆ ಚರಮೂರ್ತಿಗಳನ್ನು ಪಳ್ಳಿಚರಮೂರ್ತಿ, ಪುರಾಣದ ಚರಮೂರ್ತಿ, ಶಿವಾನುಭವದ ಚರಮೂರ್ತಿ ಎಂದು ಮೂರು ಬಗೆಯಲ್ಲಿ ಹೆಸರಿಸಿದ್ದಾರೆ. ಅದೇ. ಪು. ೨೩)

184. ನಿರಂಜನವಂಶ ರತ್ನಾಕರ. ಭಾಗ -೧. ಸಂ : ಫ.ಗು. ಹಳಕಟ್ಟಿ. ಪು. ೨.

185. ಮಹಾದೇವನ ಮಹಾಲಿಂಗೇಂದ್ರ ವಿಜಯದಲ್ಲಿ ಶೂನ್ಯ ಪೀಠದ ಪ್ರಥಮ ಗುರು ಅಲ್ಲಮನ ಉತ್ತರಾಧಿಕಾರಿ ಚೆನ್ನಬಸವಣ್ಣನ ಕಾಲ ಕ್ರಿ.ಶ. ೧೧೯೦ಕ್ಕೆ ಮುಗಿದಿದೆ. ಎರಡನೆಯ ಉತ್ತರಾಧಿಕಾರಿಗಳಾದ ತೋಂಟದ ಸಿದ್ಧಲಿಂಗೇಶ್ವರರ ಕಾಲ ಆರಂಭವಾಗುವುದೇ ೧೫ನೆಯ ಶತಮಾನದ ಅಂತ್ಯಕ್ಕೆ. ಈ ಮಧ್ಯೆ ಬರುವ ನಿರಂಜನವಂಶ ರತ್ನಾಕರದಲ್ಲಿ ವಿವರಿಸಿರುವ ೧೬ ಮಂದಿ ಶೂನ್ಯ ಸಿಂಹಾಸನಾಧಿಕಾರಿಗಳ ಹೆಸರೇ ಪ್ರಸ್ತಾಪವಾಗಿಲ್ಲ. (ಡಾ| ಎಲ್. ಬಸವರಾಜು. ಮಹಾದೇವನ ಮಹಾಲಿಂಗೇಂದ್ರ ವಿಜಯ. ಪೀಠಿಕಾ ಭಾಗ. ಪು. ೬೯)

186. ಶಿವಪೂಜಾ ನಿಷ್ಠರಾದವರಿಗೆ ಶಿವಪೂಜಾ ಬುಡಕಟ್ಟಿನ ಮಠದವರೆಂದೂ, ಹಸಿರು ಕಂಥೆಯನ್ನು ಧರಿಸಿದವರಿಗೆ ಪಚ್ಚೆ ಬುಡಕಟ್ಟಿನವರೆಂತಲೂ, ಸ್ನಾನಕ್ಕೆ ಬಿಸಿನೀರನ್ನೇ ಬಯಸಿದವರಿಗೆ ಬಿಸಿ ಅಗ್ಗವಣಿ ಬುಡಕಟ್ಟಿನವರೆಂತಲೂ ಹೀಗೆ ನಾನಾ ಬುಡಕಟ್ಟುಗಳಿಗೆ ಹೆಸರು ಬಂದಿತ್ತು.

187. ನಿರಂಜನವಂಶ ರತ್ನಾಕರ.ಭಾಗ-೧. ಸಂ : ಫ.ಗು. ಹಳಕಟ್ಟಿ. ಪು. ೪೦-೪೩.

188. ತೋಂಟದ ಸಿದ್ಧಲಿಂಗೇಶ್ವರರೂ ಅಲ್ಲಮಪ್ರಭುವಿನಂತೆ ಅನಾದಿ ನಿರಂಜನ ಜಂಗಮದ ಅವತಾರ. ಇವರು ಪ್ರಭುದೇವರ ವಿರಕ್ತ ಪರಂಪರೆಯವರು ಎಂಬ ನಂಬಿಕೆ ರೂಢಿಯಲ್ಲಿದೆ. (ಡಾ.ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೨೫೬.)

189. ಜಿ.ಎಂ. ಉಮಾಪತಿಶಾಸ್ತ್ರಿ. (ಸಂ) ವಿವೇಕ ಚಿಂತಾಮಣಿ. ಪ್ರಸ್ತಾವನೆ. ಪು. ೬೨.

190. ಡಾ| ಎಂ. ಚಿದಾನಂದಮೂರ್ತಿ. ಹೊಸತು ಹೊಸತು. ಪು. ೩೧೯.

191. ಕಟ್ಟಿಗೆ ಹಳ್ಳಿ ಸ್ವಾಮಿಗಳಿಗೆ - ಕಟ್ಟಿಗೆಹಳ್ಳಿದೇವ, ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿ, ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿ ಎಂಬ ಬೇರೆ ಬೇರೆ ಹೆಸರುಗಳೂ ಇದ್ದವು.

192. ಚನ್ನಮಲ್ಲಿಕಾರ್ಜುನ. ಸದ್ಧರ್ಮದೀಪಿಕೆ. ಸಂಪುಟ-೧೩, ಸಂಚಿಕೆ-೪೯-೫೧. ಪು. ೩.

193. ಲಿಂಗಾಯತ ಮತೋತ್ಪತ್ತಿ ನಿರ್ಣಯ (ಪು. ೨೨)ದಲ್ಲಿ ಮೊದಲು ವಿರಕ್ತರೆಲ್ಲಾ ಒಂದೇ ಸಮಯದವರಾಗಿದ್ದರು. ಆಮೇಲೆ ಮುರಿಗಿಸಮಯ, ಚೀಲಾಳಸಮಯ, ಕುಮಾರಸಮಯಗಳೆಂಬ ಮೂರು ಭೇದಗಳು ಹುಟ್ಟಿಕೊಂಡವು ಎಂದಿದೆ. ಮಹಾದೇವನ ಮಹಾಲಿಂಗೇಂದ್ರವಿಜಯದಲ್ಲೂ ಕೂಡ ಈ ಮೂರು ಸಮಯಗಳನ್ನೇ ಪ್ರಸ್ತಾಪಿಸಲಾಗಿದೆ. (ಮಹಾದೇವನ ಮಹಾಲಿಂಗೇಂದ್ರ ವಿಜಯ. ಸಂ : ಡಾ| ಎಲ್. ಬಸವರಾಜು. ಪೀಠಿಕಾಭಾಗ. ಪು. ೬೩) ಇವುಗಳಲ್ಲಿ ಉಳಿದ ಸಮಯಗಳ ಪ್ರಸ್ತಾಪ ಆಗಿಲ್ಲ.

194. ಕೆಂಪಯ್ಯನ ಕೆಂಪಿನಸಮಯ, ಕುಮಾರಯ್ಯನ ಕುಮಾರಸಮಯ, ಸಂಪಾದನೆ ಎಂಬ ವಿಶೇಷಣವುಳ್ಳವನ ಸಂಪಾದನೆ ಸಮಯ, ಚೀಲಾಳಯ್ಯನ ಚೀಲಾಳಸಮಯ, ಮುರಿಗಾ ಗುರುಸಿದ್ಧನ ಮುರಿಗಾಸಮಯ.

195. ಡಾ| ಎಂ. ಚಿದಾನಂದಮೂರ್ತಿ. ಹೊಸತು ಹೊಸತು. ಪು. ೩೧೯, ೩೨೦.

196. ಮುರಿಗಾ ಶಾಂತವೀರಸ್ವಾಮಿಗಳು ಯಾವಾಗಲೂ ತಲೆಗೆ ಮುರಿಗೆ ಮಾಡಿದ ವಸ್ತ್ರವನ್ನು ಸುತ್ತುತ್ತಿದ್ದರು. ಆದ್ದರಿಂದ ಅವರು ಮುರಿಗಾ ಶಾಂತವೀರರೆಂದೇ ಹೆಸರಾಗಿದ್ದರು. 'ಮುಂದೆ ಅವರ ಶಿಷ್ಯ ಪರಂಪರೆಗೆ ಮುರಿಗಾಸಮಯವೆಂದೆ ಹೆಸರಾಯಿತು. (ಡಾ| ಎಸ್. ವಿದ್ಯಾಶಂಕರ. ಇಮ್ಮಡಿ ಮುರಿಗಾ ಗುರುಸಿದ್ಧ ಶಿವಯೋಗಿಗಳ ಕೃತಿಗಳು. ಸಂಪುಟ - ೧. ಪ್ರಸ್ತಾವನೆ. ಪು. xxii) ಮೇಲಿನ ಮಾತುಗಳಿಗೆ ಪೋಷಕವಾಗಿ ಮಹಾದೇವನ ಮಹಾಲಿಂಗೇಂದ್ರ ವಿಜಯದಲ್ಲಿ -

----ಮುರಿಗೆಯ ಮುದ್ಗರಂ ಮಸ್ತ
ಕಾಂಬುಜಕೆ ಮುರಿಗೆಯಾಕಾರಾಕೃತ ಕೌಶೇಯ
ದಂಬರಂ ದೇಹದೊಳ್ ಮುರಿಗೆಯಾಗಿರೆ ಪೊದೆದ ಶಾಲುಮದು ರಂಜಿಸುತಿರೆ| (೧೭-೬)

ಎಂಬುದಾಗಿ ಮುರಿಗೆಯ ಶಾಂತವೀರರನ್ನು ಬಣ್ಣಿಸಲಾಗಿದೆ. (ಉದ್ಧೃತ : ಎಸ್. ಶಿವಣ್ಣ. ಮುರಿಗೆ ಶಾಂತವೀರ. ಜಂಗಮ ಜ್ಯೋತಿ. ಸಂ : ಜಿ.ಎಸ್. ಸಿದ್ಧಲಿಂಗಯ್ಯ. ಪು. ೩೩)

197. ಚಿತ್ರದುರ್ಗದ ಪಾಳೆಯಗಾರನಾಗಿದ್ದ ಕಸ್ತೂರಿ ಬರಮಪ್ಪ ನಾಯಕನು ಸೋದೆಯಲ್ಲಿದ್ದ ಮುರಿಗಾ ಶಾಂತವೀರರಿಗೆ ದುರ್ಗಕ್ಕೆ ಆಹ್ವಾನ ನೀಡಿ ತಾನು ಬೆಟ್ಟದ ಮೇಲೆ ವಿನೂತನವಾಗಿ ನಿರ್ಮಿಸಿದ್ದ ವಿಶಾಲವಾದ ಮಠದಲ್ಲಿ ಅವರು ಬಂದು ನೆಲೆಸುವಂತೆ ಪ್ರಾರ್ಥಿಸಿದನು. ಈ ಬೆಟ್ಟದ ಮೇಲಿನ ಮಠವೇ ಚಿತ್ರದುರ್ಗದ ಮುರಿಗಾಸಮಯದ ಮೂಲ ಮಠ. (ಡಾ| ಎಂ. ಚಿದಾನಂದಮೂರ್ತಿ. ಹೊಸತು ಹೊಸತು. ಪು. ೩೨೦)

198. ಅ. ಕುಮಾರಸಮಯದ ಮೂಲಮಠ ಹುಬ್ಬಳ್ಳಿಯಲ್ಲಿ ಪ್ರಾರಂಭವಾಯಿತೆಂದು ಶಿ.ಶಿ.ಬಸವನಾಳರು ಹೇಳುತ್ತಾರೆ. (ಶಿ.ಶಿ. ಬಸವನಾಳ. ವೀರಶೈವರ ಹುಟ್ಟು ಬೆಳವಣಿಗೆ. ಬಸವನಾಳ ಸ್ಮಾರಕ ಸಂಪುಟ. ಧಾರವಾಡ- ೧೯೫೬. ಪು. ೪೯೮)

ಆ. ಹುಬ್ಬಳ್ಳಿಯ ಮೂರು ಸಾವಿರ ಮಠವು ವಿರಕ್ತಮಠವಾಗಿದ್ದು, ಅದು ತೀರಾ ಇತ್ತೀಚೆಗೆ ಕುಮಾರಸಮಯಕ್ಕೆ ಸೇರಿದ್ದೆಂದು ಹಿರೇಮಲ್ಲೂರ ಈಶ್ವರನ್ (ಇಳಕಲ್ಲ ಮಹಾಂತ ಶಿವಯೋಗಿಗಳು. ಪು. ೫೯) ಹೇಳಿರುತ್ತಾರೆ.

199. ಅ. ಡಂಬಳದ ಮಠದವರು ತೋಂಟದ ಸಿದ್ಧಲಿಂಗ ಸ್ವಾಮಿಗಳಿಂದ ತಮ್ಮ ಪರಂಪರೆ ಬಂದಿರುವುದಾಗಿ ನಿರಂಜನವಂಶ ಅಥವಾ ನಿರಂಜನವಂಶದರ್ಪಣ ಎಂಬ ಕೃತಿಗಳ ಮೂಲಕ ಹೇಳಿಸಿದ್ದಾರೆ. ಈ ವಾದ ಹುರುಳಿಲ್ಲದ್ದು. ಏಕೆಂದರೆ ಚೀಲಾಳಪ್ಪನವರು ಚಿತ್ರದುರ್ಗದಿಂದ ಹೊರಗೆ ಹಾಕಲ್ಪಟ್ಟಾಗಿನಿಂದ ಮುಂದೆ ಈ ಪರಂಪರೆಯು ಬಂದಿತೆಂಬುದಕ್ಕೆ ಚೀಲಾಳ ಸಮಯ ಎಂಬ ಹೆಸರೇ ಸಾಕ್ಷಿಯಾಗಿದೆ. (ಚನ್ನಮಲ್ಲಿಕಾರ್ಜುನ. ಸದ್ಧರ್ಮ ದೀಪಿಕೆ. ಸಂಪುಟ -೧೩. ಸಂ-೪೯-೫೧. ಪು. ೨೩)

ಆ. ಹಿರೇಮಲ್ಲೂರ ಈಶ್ವರನ್ ಅವರು ತೋಂಟದಾರ್ಯರ ಪರಂಪರೆಗೆ ಸೇರಿದ ಗದುಗಿನ ಮಠವು ಆಮೇಲೆ ಚೀಲಾಳ ಸಮಯಕ್ಕೆ ಸೇರಿಕೊಂಡ ಮಠವಾಗಿದೆ ಎಂದಿದ್ದಾರೆ. (ಇಳಕಲ್ಲ ಮಹಾಂತ ಶಿವಯೋಗಿಗಳು. ಪು. ೫೯.)

200. ಅ. ನಿರಂಜನ ವಂಶರತ್ನಾಕರದ ಪ್ರಕಾರ ಸಮಯಭೇದ ಪ್ರಾರಂಭವಾದದ್ದೆ ಕಟ್ಟಿಗೆಹಳ್ಳಿ ಸ್ವಾಮಿಗಳ ಕಾಲದಲ್ಲಿ. ಸಂಪಾದನಾ ಸಮಯವೆ ಮೊಟ್ಟಮೊದಲ ಭೇದ. [ನಿರಂಜನ ವಂಶರತ್ನಾಕರ. ಭಾಗ-೧. ಸಂ: ಫ.ಗು. ಹಳಕಟ್ಟಿ ಪು. ೬೦]

ಆ. ಸಂಪಾದನೆಯ ಸಿದ್ಧವೀರ ಸ್ವಾಮಿಗಳು ಸರ್ವಜ್ಞರ ಕೆಲವು ತ್ರಿಪದಿಗಳನ್ನು ಸಂಪಾದಿಸಿಕೊಟ್ಟಿದ್ದಕ್ಕಾಗಿ ಇವರಿಗೆ ಸಂಪಾದನೆಯ ಸಮಯದವರೆಂಬ ಹೆಸರು ಬಂದಿತೆಂದು ಚನ್ನಮಲ್ಲಿಕಾರ್ಜುನ ಹೇಳುತ್ತಾರೆ. (ಸದ್ಧರ್ಮ ದೀಪಿಕೆ ಸಂಚಿಕೆ. ಪೂರ್ವೋಕ್ತ. ಪು. ೪)

201. ಅ. ಚನ್ನಮಲ್ಲಿಕಾರ್ಜುನ. ನಿರಂಜನವಂಶರತ್ನಾಕರ. ಭಾಗ-೨. ಸದ್ಧರ್ಮ ದೀಪಿಕೆ. ಸಂಚಿಕೆ ೪೯-೫೧. ಸಂಪುಟ - ೧೩. ಪು. ೮೫.

ಆ. ಕೆಂಪಿನಸಮಯದ ಮೂಲಮಠ ಉರವಕೊಂಡದಲ್ಲಿದೆ ಎಂದು ಡಾ। ವಿ.ಎಸ್. ಕಂಬಿ ಹೇಳಿದ್ದಾರೆ. (ಕಾಯಕ ಯೋಗಿ. ಪು. ೨೯.)

202. ಚಿತ್ರದುರ್ಗದ ಮುರಿಗಾ ಗುರುಸಿದ್ಧರ ಅಂತ್ಯಕಾಲಕ್ಕೆ (ಸುಮಾರು ಕ್ರಿ.ಶ. ೧೭೧೦)ಹದಿನಾರು ಸಮಯ ಭೇದಗಳು ಆಗಿದ್ದುವೆಂದು ಚಿತ್ರದುರ್ಗದ ಪಟ್ಟವಲ್ಲರಿಯೊಂದರಿಂದ ತಿಳಿದುಬರುತ್ತದೆ. (ಸದ್ಧರ್ಮದೀಪಿಕೆ. ಸಂಚಿಕೆ. ೪೯-೫೧. ಸಂಪುಟ ೧೩. ಪು. ೧೭)

203. ಅದೇ. ಪು. ೨೯.

204. ಯಾರು ದಂಡ, ಕೌಪೀನ, ಕಂಥಾ, ಕಮಂಡಲುಧಾರಿಯಾದ ಜುಟ್ಟನ್ನಾದರೂ, ಶಿಖೆಯನ್ನಾದರೂ, ಧರಿಸಿರುವನೋ ಅಥವಾ ಬೋಳಾದ ತಲೆಯುಳ್ಳ ಕಾಷಾಯವಸ್ತ್ರಧಾರಿಯೋ ಆತನೇ ನಿರಾಭಾರಿಜಂಗಮ. (ಸಂಪಿಗೆ ಸಿದ್ಧಲಿಂಗಶಾಸ್ತ್ರಿ. ವಿರಕ್ತಾಶ್ರಮದ ಲಕ್ಷಣ. ಉಪನ್ಯಾಸ ಸಂಗ್ರಹ. ಭಾಗ-೧. ಸಂ : ಸಿರಸಿ ಗುರುಶಾಂತಶಾಸ್ತ್ರಿ. ಪು. ೨೫೮.)

205. ಶಿವಸಾಕ್ಷಾತ್ಕಾರ ಸಿದ್ಧಿಯುಳ್ಳ ಯಾವಾತನು ಮಾಯಾ ಮೋಹ ಕಲ್ಪಿತವಾದ ಪ್ರಾಪಂಚಿಕ ವಿಷಯವನ್ನು ನಿರಾಕರಿಸುವನೋ ಮತ್ತು ವಿಶ್ವಮೂರ್ತಿಯಾದ ಶಿವನು ತನಗೆ ಅಭಿನ್ನವಾಗಿರುವನೆಂದು ತಿಳಿದಿರುವನೋ ಆ ಮಹಾತ್ಮನೇ ನಿರಂಜನ ಜಂಗಮ. (ಸಂಪಿಗೆ ಸಿದ್ಧಲಿಂಗಶಾಸ್ತ್ರಿ. ವಿರಕ್ತಾಶ್ರಮದ ಲಕ್ಷಣ. ಉಪನ್ಯಾಸ ಸಂಗ್ರಹ. ಭಾಗ -೧. ಸಂ : ಸಿರಸಿ ಗುರುಶಾಂತಶಾಸ್ತ್ರಿ. ಪು. ೨೫೮.)

206. ಆದರೆ ಬಿ. ಶಿವಮೂರ್ತಿಶಾಸ್ತ್ರಿಗಳು ಈ ಶೂನ್ಯಪೀಠದ ಪರಂಪರೆಯಲ್ಲಿ ಪ್ರಭುಸಂಪ್ರದಾಯ, ಸಿದ್ಧಲಿಂಗೇಶ್ವರ ಸಂಪ್ರದಾಯ, ನಂದಿಕೇಶ್ವರ ಸಂಪ್ರದಾಯ ಎಂಬ ಮೂರು ಗುರುವಂಶಗಳನ್ನು ಹೇಳಿದ್ದಾರೆ. ಈ ಮೂರು ಗುರುವಂಶಗಳೂ ಕಲ್ಯಾಣದ ಶರಣ ತತ್ತ್ವಗಳಿಗೆ ತಲೆಬಾಗಿವೆ. ವಚನಶಾಸ್ತ್ರವೆ ತಮ್ಮ ಪ್ರಮಾಣ ಗ್ರಂಥಗಳೆಂದು ಭಾವಿಸಿವೆ ಎಂದಿದ್ದಾರೆ. [ಬಿ. ಶಿವಮೂರ್ತಿಶಾಸ್ತ್ರಿ. ಶೂನ್ಯಪೀಠ-ಐತಿಹಾಸಿಕ ವಿವೇಚನೆ. ಜಂಗಮಜ್ಯೋತಿ. (ಸ್ಮರಣಸಂಚಿಕೆ. ಚಿತ್ರದುರ್ಗ ೧೯೭೫) ಸಂ : ಪ್ರೊ : ಜಿ.ಎಸ್. ಸಿದ್ಧಲಿಂಗಯ್ಯ ಪು. ೨೭.]

207. ಚನ್ನಮಲ್ಲಿಕಾರ್ಜುನ. ಪೂರ್ವೋಕ್ತ. ಪುಟ ೫ ಮತ್ತು ೧೭.

208. ಮಹಾದೇವನ ಮಹಾಲಿಂಗೇಂದ್ರ ವಿಜಯದ ಪೀಠಿಕಾ ಭಾಗದಲ್ಲಿ ಡಾ। ಎಲ್. ಬಸವರಾಜು (ಸಂ) ಅವರು ಮುರಿಗೇಂದ್ರರ ಕಾಲ ಸು.ಕ್ರಿ.ಶ. ೧೬೪೦-೧೭೧೦; ಇಮ್ಮಡಿ ಗುರುಸಿದ್ಧರ ಕಾಲ ಸು.ಕ್ರಿ.ಶ. ೧೭೧೦-೧೭೨೫ ಎಂಬುದಾಗಿ ಸೂಚಿಸಿದ್ದಾರೆ.

209. ನಿರಂಜನವಂಶರತ್ನಾಕರ.ಭಾಗ-೧. ಸಂ : ಫ.ಗು. ಹಳಕಟ್ಟಿ. ಪು. ೬೦, ೬೧.

210. ಅದೇ. ಹಾಗೂ ನಿರಂಜನವಂಶರತ್ನಾಕರ ಭಾಗ-೨. ಸದ್ಧರ್ಮದೀಪಿಕೆ. ಸಂ-೧೩. ಸಂ-೪೯-೫೧. ಪು. ೮,೯.

211. ಅದೇ. ಪು. ೩೩.

212. ಉತ್ತರ ಕರ್ನಾಟಕದಲ್ಲಿ ಜಂಗಮನಲ್ಲದವನು ಯಾವುದೇ ಬಗೆಯ ಮಠದ ಅಧಿಪತಿಯಾಗುವ ಅವಕಾಶವಿರಲಿಲ್ಲ. ದಕ್ಷಿಣ ಕರ್ನಾಟಕದಲ್ಲಿ ಕೆಲವೆಡೆ ಜಂಗಮನಲ್ಲದವನಿಗೂ ಜಂಗಮತ್ವದ ದೀಕ್ಷೆ ಕೊಟ್ಟು ಗುರು-ವಿರಕ್ತ ಮಠಗಳ ಪೀಠಾಧ್ಯಕ್ಷನಾಗಲು ಅವಕಾಶ ಕಲ್ಪಿಸಲಾಗುತ್ತಿದೆ. (ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೬೯) ವೀರಶೈವ ಸದಾಚಾರಸಂಗ್ರಹವೂ ಈ ಮಾತನ್ನು ಅನುಮೋದಿಸಿದೆ. (ಸಂ : ಎಂ.ಜಿ. ನಂಜುಂಡಾರಾಧ್ಯ. ಪು. ೬೩)

213. ಶಿವಾನಂದ ಗುಬ್ಬಣ್ಣವರ. ಲಿಂಗಾಯತ ಸಂಸ್ಕಾರಗಳು. ಪು. ೬೭.

214. ಭಕ್ತ ಜಾತಿಗಳು : ಲಿಂಗಾಯತ ಜಾತಿಯ ಅನುಶ್ರೇಣಿಯಲ್ಲಿ ಹದಿನೆಂಟು ಜಾತಿಗಳಿವೆ. ಇವುಗಳಲ್ಲಿ ಮೊದಲಸ್ಥಾನ ಜಂಗಮರದು. ಆನಂತರ-ಪಂಚಮಸಾಲಿ, ಬಣಜಿಗ, ಸಾದ, ನೊಣಬ, ಗೌಡ, ಶೆಟ್ಟಿ, ಕುಡುವಕ್ಕಲಿಗ, ಶಿವ ಸಿಂಪಿಗ, ನೇಕಾರ, ಕಮ್ಮಾರ, ಕುಂಬಾರ, ಗಾಣಿಗ, ಮಡಿವಾಳ, ಬಡಗಿ, ರೆಡ್ಡಿ, ಕ್ಷೌರಿಕ, ಲಾಳಗೊಂಡ. ಹೀಗೆ ಜಂಗಮರ ನಂತರದ ಜಂಗಮೇತರ ಜಾತಿಗಳೇ ಭಕ್ತಜಾತಿಗಳು. (ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಪು. ೪೬೭)

215. ವೇದವೇದಾಂತಾದಿ ಶಾಸ್ತ್ರಗಳನ್ನು ಅಭ್ಯಾಸ ಮಾಡಿರುವುದೇ ಶ್ರೋತ್ರಿಯತ್ವ. ಬ್ರಹ್ಮದ ಅನುಭವವೇ ಬ್ರಹ್ಮನಿಷ್ಠೆ. (ಇದು ಸ್ವಯಂ ಅನುಭವ ವೇದ್ಯವಾದದ್ದು) ಶಾಸ್ತ್ರ ಪಾರಂಗತನಾದವನು ಪ್ರಸ್ಥಾನತ್ರಯ ಎಂದರೆ ಬ್ರಹ್ಮಸೂತ್ರ, ಉಪನಿಷತ್ತು, ಗೀತ, ಆಗಮಾದಿಗಳಲ್ಲಿ ಪ್ರತಿಪಾದಿತವಾಗಿರುವ ಬ್ರಹ್ಮಾನುಭವದ ಸ್ವರೂಪವನ್ನು ಶಂಕಾ-ಸಮಾಧಾನಗಳಿಂದ ಶಿಷ್ಯರಿಗೆ ಬೋಧಿಸಲು ಸಮರ್ಥನಾದವನು. (ಎಂ.ಜಿ.

ನಂಜುಂಡಾರಾಧ್ಯ. ಮಠಗಳು-ಮಠಾಧಿಪತಿಗಳು ಮತ್ತು ಅವರ ಶಿಕ್ಷಣ. ಸ್ಮರಣಸಂಪುಟ. ಸಂ : ಡಾ।ಎಚ್.ಪಿ. ಮಲ್ಲೇದೇವರು. ಪು. ೮೭.

216. ಸುತ್ತೂರು ಶಾಂತವೀರ ಶಾಸ್ತ್ರಿ. ಮಠಾಧಿಕಾರ. ಉಪನ್ಯಾಸಸಂಗ್ರಹ. ಸಂ : ಸಿರಸಿ ಗುರುಶಾಂತ ಶಾಸ್ತ್ರಿ. ಪು. ೧೯೧.

217. ಅದೇ.

218. ಕೆಲವು ಜಂಗಮರು ವಿರಕ್ತರಂತೆ ಬ್ರಹ್ಮಚಾರಿಗಳಾಗಿಯೇ ಪರಿಶುದ್ಧ ಜೀವನ ಸಾಗಿಸುತ್ತಿದ್ದರೂ, ಮಠಗಳಿಗೆ ಅಧಿಕಾರಿಗಳಾಗಿದ್ದು ಊರಿನ ವೀರಶೈವ ಸಮಾಜದವರ ಧಾರ್ಮಿಕ ಆಚರಣೆ ಹಾಗೂ ಸಂಸ್ಕಾರಗಳನ್ನು ನಿರ್ವಹಿಸಿಕೊಂಡು ಹೋಗುವ ಹೊಣೆಗಾರಿಕೆಯನ್ನು ಹೊತ್ತವರು ಪಟ್ಟದ್ದೇವರು ಅಥವಾ ವಿಶೇಷ ವೀರಶೈವರು. ಇವರೆ ಸಾಭಾರಿಗಳು ಎಂದು ಡಾ। ಎಸ್.ಸಿ. ನಂದಿಮಠ ಅವರು ಹೇಳಿದ್ದಾರೆ. (ವೀರಶೈವ ಧರ್ಮದ ಕೈಪಿಡಿ. ಅನು : ಪ್ರೇಮಾದೇವಿ ಮಳಿಮಠ. ಪು. ೬೩)

219. ವಿರಕ್ತಾಶ್ರಮಲಕ್ಷಣ, ಉಪನ್ಯಾಸ ಸಂಗ್ರಹ. ಸಂ : ಸಿರಸಿ ಗುರುಶಾಂತಶಾಸ್ತ್ರಿ. ಪು. ೨೫೮, ೨೫೯.

220. ಅತ್ಯಂತ ಪರಿಶುದ್ಧ ಮತ್ತು ಪವಿತ್ರ ಜೀವನ ಸಾಗಿಸುವ ಅವರ ಚಲನವಲನಗಳ ಬಗೆಗೆ ಯಾವುದೇ ನಿರ್ಬಂಧಗಳಿರುವುದಿಲ್ಲ ಮತ್ತು ಅವರು ಯಾರ ಹಾಗೂ ಯಾವ ಬಂಧನಗಳಿಗೂ ಒಳಗಾಗಿರುವುದಿಲ್ಲ. ಹೀಗೆ ಯಾವುದಕ್ಕೂ ಅಂಟಿಕೊಳ್ಳದವರೇ ವಿರಕ್ತರು ಅಥವಾ ನಿರಾಭಾರಿಗಳು. (ಡಾ। ಎಸ್.ಸಿ. ನಂದಿಮಠ. ಪೂರ್ವೋಕ್ತ. ಪು. ೬೩)

221. ಮಠಗಳು ಆಧ್ಯಾತ್ಮಿಕ ಶಕ್ತಿ ಕೇಂದ್ರಗಳು. ಕಾಯಕಯೋಗಿ. ಸಂ : ಡಾ। ವಿ.ಎಸ್. ಕಂಬಿ. ಪು. ೧೬.

222. ಷಟ್‌ಸ್ಥಲಗಳು : ೧. ಭಕ್ತಿಸ್ಥಲ, ೨. ಮಹೇಶಸ್ಥಲ, ೩. ಪ್ರಸಾದಿಸ್ಥಲ, ೪. ಪ್ರಾಣಲಿಂಗಿಸ್ಥಲ, ೫. ಶರಣಸ್ಥಲ, ೬. ಐಕ್ಯಸ್ಥಲ. ವೀರಶೈವ ತತ್ವಶಾಸ್ತ್ರವನ್ನು ವೀರಶೈವಸಿದ್ಧಾಂತ ಅಥವಾ ಷಟ್‌ಸ್ಥಲ ಸಿದ್ಧಾಂತವೆಂದೇ ಕರೆಯುತ್ತಾರೆ. (ಡಾ। ಎಸ್.ಸಿ.ನಂದಿಮಠ. ವೀರಶೈವ ಧರ್ಮದ ಕೈಪಿಡಿ. ಅನು : ಪ್ರೇಮಾದೇವಿ ಮಳಿಮಠ. ಪು. ೯)

223. ಅ. ಗೃಹಸ್ಥ ಜೀವನ ಮತ್ತು ಲೌಕಿಕದೊಡನೆ ಯಾವ ಬಗೆಯ ಸಂಬಂಧವನ್ನೂ ಇರಿಸಿಕೊಂಡಿರದ ಬ್ರಹ್ಮಚಾರಿಗಳೇ 'ವಿರಕ್ತರು' ಅಥವಾ 'ನಿರಾಭಾರಿ'ಗಳು; ವೀರಶೈವ ಗೃಹಸ್ಥರ ಮತಸಂಬಂಧಿ ಸಂಸ್ಕಾರಾದಿಗಳ ನೇತೃತ್ವ ವಹಿಸುವ ನೈಷ್ಠಿಕ ಬ್ರಹ್ಮಚಾರಿಗಳೇ 'ಸಾಭಾರಿ'ಗಳು ಅಥವಾ ವಿಶೇಷ ವೀರಶೈವರು. (ಅದೇ. ಪು. ೬೩.)

ಆ. ಪ್ರಾಣಿಗಳಿಗೆ ಪಾಪ ಪುಣ್ಯಂಗಳೆಂಬೆರಡು ಕರ್ಮಂಗಳು ಹೇಳಲ್ಪಟ್ಟಿರುವುವು. ಅವೆರಡನ್ನೂ ಕಳೆದವನೇ ನಿರಾಭಾರಿ. ದಂಡ, ಕಮಂಡಲು, ಕೌಪೀನ, ಕಂಥಾಧಾರಿಯಾದ, ಜುಟ್ಟನ್ನಾದರೂ, ಶಿಖೆಯನ್ನಾದರೂ ಧರಿಸಿರುವಾತ ಅಥವಾ ಬೋಳಾದ ತಲೆಯುಳ್ಳ ಕಾಷಾಯ ವಸ್ತ್ರಧಾರಿಯಾದವನೇ ನಿರಾಭಾರಿ ಎಂದು ಶಿವಾಗಮದಲ್ಲಿ ಹೇಳಿದೆ. (ಉದ್ಧೃತ : ಸಂಪಿಗೆ ಸಿದ್ಧಲಿಂಗಶಾಸ್ತ್ರಿ. ವಿರಕ್ತಾಶ್ರಮಲಕ್ಷಣ. ಉಪನ್ಯಾಸ ಸಂಗ್ರಹ. ಸಂ : ಸಿರಸಿ ಗುರುಶಾಂತ ಶಾಸ್ತ್ರಿ. ಮೈಸೂರು. ೧೯೨೫. ಪು. ೨೫೭, ೨೫೮.)

224. ಡಾ। ವಿ.ಎಸ್. ಕಂಬಿ. ಮಠಗಳು ಆಧ್ಯಾತ್ಮಿಕ ಶಕ್ತಿ ಕೇಂದ್ರಗಳು. ಕಾಯಕಯೋಗಿ. (ಪ್ರ) ನಾಗನೂರು ಮಠ. ಬೆಳಗಾವಿ, ೧೯೯೧. ಪು. ೧೯.

225. 'ಪಾಶುಪತಾಗಮ'ದಲ್ಲಿ ವಿರಕ್ತನು ಸರ್ವಸಂಗಪರಿತ್ಯಾಗ ಮಾಡಿದವನಾದ್ದರಿಂದ ಅವನಿಗೆ ದಂಡನೆ ಖಂಡನೆಗಳ ಅಧಿಕಾರವಿಲ್ಲ. 'ವಿರಕ್ತನು ಶಿಕ್ಷಣ ರಕ್ಷಣಾಚಾರ ಪ್ರಾಯಶ್ಚಿತ್ತ ಶುಭಾಶುಭ ವಿಧಿ ಮೊದಲಾದವುಗಳನ್ನು ಮಾಡಬಾರದು. ಒಂದು ವೇಳೆ ಬಲಾತ್ಕಾರದಿಂದ ಮಾಡಿದಲ್ಲಿ ಅವನು ಚಾಂಡಾಲನಾಗುತ್ತಾನೆ' ಎಂದು ಹೇಳಿದೆ. 'ಸನ್ಯಾಸೋಪನಿಷತ್ತು' ವಿರಕ್ತನಾದವನು ಅನುಗ್ರಹ, ಆಶೀರ್ವಾದ ಮೊದಲಾದವುಗಳನ್ನು ಬಿಡತಕ್ಕದ್ದೆಂದು ವಿಧಿಸುತ್ತದೆ. [ಉದ್ಧೃತ: ಬಿ. ಗುರುಸಿದ್ಧಶಾಸ್ತ್ರಿ.ಸನ್ಯಾಸಾಶ್ರಮವಿಮರ್ಶ ತತ್ತ್ವಸ್ಥಿರೀಕರಣ. (ಮೈಸೂರು. ೧೯೩೪) ಪು. ೨೪.)]

226. ಅ. ಡಾ. ಎಂ. ಅಣ್ಣಾಜಪ್ಪ. ಶ್ರೀ ಅನಾದಿವೀರಶೈವ ಸಂಗ್ರಹ. ಮುನ್ನುಡಿ. ಪು. ೬.

ಆ. ಚನ್ನಮಲ್ಲಿಕಾರ್ಜುನ. ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು. ಸಂ : ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ. (''ಮಠಸ್ಥಲ'') ಪು. ೫೮೦.

ಇ. ಎಂ.ಜಿ. ನಂಜುಂಡಾರಾಧ್ಯ. 'ಮಠಗಳು-ಮಠಾಧಿಪತಿಗಳು ಮತ್ತು ಅವರ ಶಿಕ್ಷಣ'. ಸ್ಮರಣ ಸಂಪುಟ. ಸಂ : ಡಾ। ಎಚ್.ಪಿ. ಮಲ್ಲೇದೇವರು. ಪು. ೯೨.

ಈ. ಇತ್ತೀಚೆಗೆ ಬ್ರಹ್ಮಚಾರಿಯಾದವನೇ ಪಟ್ಟಾಭಿಷೇಕ ಪಡೆದು ಮಠಾಧಿಪತಿಯಾಗಬೇಕೆಂಬ ರೂಢಿ ಬಂದಿದೆ. (ಎಂ.ಜಿ. ನಂಜುಂಡಾರಾಧ್ಯ. ಅದೇ. ಪು. ೯೨.)

ಉ. ಗುರುಸಿದ್ಧಶಾಸ್ತ್ರಿಗಳು ರೇಣುಕಾದಿ ಪಂಚಾಚಾರ್ಯರು ಗೃಹಸ್ಥರೇ ಅಲ್ಲ. ಗುರುವರ್ಗದವರಿಗೆ ವಿವಾಹವಿಲ್ಲ. ಅವರು ಬ್ರಹ್ಮಚಾರಿಗಳೇ ಆಗಿದ್ದರು ಎಂದು ಸಾಧಿಸಿದ್ದಾರೆ. (ನೋಡಿ : ಸನ್ಯಾಸಾಶ್ರಮ ವಿಮರ್ಶ ತತ್ವಸ್ಥಿರೀಕರಣ. ಪು. ೩೦, ೩೧)

227. ಶಿವಾನಂದ ಗುಬ್ಬಣ್ಣವರ ಅವರು – 'ಗುರುಮಠದ ಉತ್ತರಾಧಿಕಾರಿಯು ಪಟ್ಟಾಧಿಕಾರವನ್ನು ವಹಿಸಿಕೊಳ್ಳುವುದಕ್ಕೆ 'ಸಾಭಾರಿ'ಗಳೆಂದೂ; ವಿರಕ್ತಮಠದ ಉತ್ತರಾಧಿಕಾರಿಯು ಪಟ್ಟಾಧಿಕಾರವನ್ನು ವಹಿಸಿಕೊಳ್ಳುವುದಕ್ಕೆ 'ನಿರಾಭಾರಿ'ಗಳೆಂದೂ ಸೂಚಿಸಿದ್ದಾರೆ. (ಲಿಂಗಾಯತ ಸಂಸ್ಕಾರಗಳು. ಪು. ೬೭.)

228. 'ನ'ಕಾರಾದಿ 'ಯ'ಕಾರದ ವರೆಗಿನ 'ಪಂಚಾಕ್ಷರಿ' ಕಳಸಗಳು ಪಂಚಾಚಾರ್ಯರ ಸಂಕೇತವಾದರೆ 'ಓಂ' ಎಂಬುದು ಓಂಕಾರದ ಆರನೆಯ ಕಳಸ. ನಿರಾಭಾರಿ ಜಂಗಮ ಪ್ರಭುದೇವರ ಸಂಕೇತ. ಪಂಚಕಳಸಗಳ ಮೇಲೊಂದು ಶೂನ್ಯ ಕಳಸ ಸೇರಿ ಷಟ್‌ಕಳಸಗಳಾಗಿವೆ. ಆರನೆಯ ಕಳಸ (ನಮಃಶಿವಾಯ-ಪಂಚಾಕ್ಷರಿ; ಓಂ ನಮಃಶಿವಾಯ-ಷಡಕ್ಷರಿ)ವನ್ನು ಗಂಗಾಕಳಸವೆಂದು ಕರೆಯಲಾಗುತ್ತದೆ. (ಡಾ।ಎಂ. ಅಣ್ಣಾಜಪ್ಪ. ಶ್ರೀ ಅನಾದಿ ವೀರಶೈವಸಂಗ್ರಹ. ಮುನ್ನುಡಿ. ಪು. ೧೦, ೧೧)

229. ಶಿವಾನುಭವ ಗ್ರಂಥಗಳು : ಚೆನ್ನಬಸವಣ್ಣ ಸಿದ್ಧರಾಮನಿಗೆ ಬೋಧಿಸಿದ ಗೋಹೇಶ್ವರನ ವಚನ, ಕರ್ಣಹಸಿಗೆ, ಮಿಶ್ರಾರ್ಪಣ, ಸಿದ್ಧರಾಮನ ಮಂತ್ರಗೋಪ್ಯ, ಅಕ್ಕನ ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ಸಿದ್ಧೇಶ್ವರನ ವಚನ, ಹಿರಿಯಮಂತ್ರಗೋಪ್ಯ, ಶೂನ್ಯಸಂಪಾದನೆ ಇವೇ ಮುಂತಾದುವೆಂದು 'ನಿರಂಜನವಂಶ ರತ್ನಾಕರ' (ಭಾಗ-೧. ಸಂ : ಫ.ಗು. ಹಳಕಟ್ಟಿ. ೧೯೩೨. ಪು. ೪೧)ದಲ್ಲಿ ಹೇಳಿದೆ.

230. ಪಂಚಮುದ್ರೆಗಳಾದ ದಂಡ, ಕಮಂಡಲು, ಕಂಥಾ (ಕೌಪೀನ), ಭಿಕ್ಷಾಪಾತ್ರೆ, ಭಸ್ಮಘಟಿಕಾ ಇವು ಗುರು-ವಿರಕ್ತರಿಬ್ಬರಿಗೂ ಅವಶ್ಯ ವೆಂದು 'ಸನ್ಯಾಸಾಶ್ರಮ ವಿಮರ್ಶ ತತ್ತ್ವ ಸ್ಥಿರೀಕರಣ (ಪು. ೫೭)ದಲ್ಲಿ ಹೇಳಿದೆ. ಇದೇ ಸಂಗತಿ 'ಉಪನ್ಯಾಸ ಸಂಗ್ರಹ' (ಪು. ೨೫೪.) ದಲ್ಲೂ ಪ್ರಸ್ತಾಪವಾಗಿದೆ.

231. ಪಂ। ಕಾಶೀನಾಥಶಾಸ್ತ್ರಿ. ಉದ್ಧೃತ: 'ಸನ್ಯಾಸಾಶ್ರಮ ವಿಮರ್ಶ ತತ್ತ್ವ ಸ್ಥಿರೀಕರಣ'. ಪಂ। ಗುರುಸಿದ್ಧಶಾಸ್ತ್ರಿ. ಪು. ೫೭.

232. ವಿರಕ್ತವರ್ಗದಲ್ಲಿ ಒಬ್ಬ ಹರಿಜನನಾದವನೂ ಲಿಂಗಾಯತನಾಗಿ ಮತಾಂತರ ಹೊಂದಿದ ಮೇಲೆ ಮಠಾಧಿಪತ್ಯ ಪಡೆಯಬಹುದಾಗಿದೆ. (ಡಾ। ಎಂ. ಚಿದಾನಂದಮೂರ್ತಿ. ಸಮ್ಮೇಳನಾಧ್ಯಕ್ಷರ ಆಶಯ ಭಾಷಣ. ನಾಲ್ಕನೆಯ ಅಖಿಲ ಭಾರತ ಶರಣ ಸಾಹಿತ್ಯಸಮ್ಮೇಳನ. ಚಿಕ್ಕಮಗಳೂರು. ಏಪ್ರಿಲ್. ೧೯೯೬. ಪು. ೧೪.)

233. ಈ ಗುರು-ವಿರಕ್ತರ ಮಠಗಳನ್ನು 'ಗುರಸ್ಥಲದ ಮಠಗಳು' ಮತ್ತು 'ಷಟ್‌ಸ್ಥಲದ ಮಠಗಳು' ಎಂದು ಕರೆಯುತ್ತಿದ್ದುದಾಗಿ ಸರ್. ಕೆ.ಪಿ ಪುಟ್ಟಣ್ಣಶೆಟ್ಟಿ (ಎಸ್.ಓ.ನಂ. ೧೪-೧೯೧೩. ಮುನ್ಸೀಫ್ ಕೋರ್ಟ್ ಬೆಂಗಳೂರು. ಪು. ೧); ಹಾಗೂ ಬಿ. ಶಿವಮೂರ್ತಿಶಾಸ್ತ್ರಿ (ಶೂನ್ಯಪೀಠ-ಐತಿಹಾಸಿಕ ವಿವೇಚನೆ. ಜಂಗಮಜ್ಯೋತಿ. ಪ್ರ. ಸಂ : ಜಿ.ಎಸ್. ಸಿದ್ಧಲಿಂಗಯ್ಯ. ಪು. ೨೭) ಗಳಿಬ್ಬರೂ ಹೇಳಿರುತ್ತಾರೆ. 'ಗುರುಸ್ಥಲ'ದ (ಪಟ್ಟದ)ಮಠಗಳು ಹಾಗೂ 'ಷಟ್‌ಸ್ಥಲ'ದ (ವಿರಕ್ತ)ಮಠಗಳ ಜೊತೆಗೆ 'ಶರಣಸ್ಥಲ'ದ ಮಠಗಳೆಂಬ ಮೂರನೇ ವರ್ಗದ ಮಠಗಳಿದ್ದುದಾಗಿಯೂ ತಿಳಿದು ಬರುತ್ತದೆ. ಈ ಶರಣಸ್ಥಲದ ಮಠಗಳಲ್ಲಿ ಸಂಸಾರಿಗಳಾಗಿದ್ದವರು ಇಲ್ಲವೆ ಸಂಸಾರದಿಂದ ನಿವೃತ್ತರಾಗಿದ್ದವರು ಮಠಾಧಿಪತಿಗಳಾಗಿರುತ್ತಿದ್ದರು. (ಗುರುಸ್ಥಲದ ಮಠಸ್ಥ ಬ್ರಹ್ಮಚಾರಿ, ಷಟ್‌ಸ್ಥಲದ ಮಠಸ್ಥ ವಿರಕ್ತ) ಕಲಬುರ್ಗಿಯ ಶರಣ ಬಸವೇಶ್ವರ ಮಠ, ಕಾನಾಮಡು ಶರಣರ ಮಠ, ದೇವನೂರು ಗುರುಸ್ವಾಮಿಗಳ ಮಠ ಇವೇ ಮೊದಲಾದವು ಶರಣಸ್ಥಲದ ಪ್ರಮುಖ ಮಠಗಳಾಗಿದ್ದುವು [ಬಿ. ಶಿವಮೂರ್ತಿಶಾಸ್ತ್ರಿ. ಅದೇ ಪುಟ. ಮತ್ತು ಡಾ। ಎಚ್. ಎಂ. ಸದಾಶಿವಯ್ಯ. 'ವೀರಶೈವ ಮಠಗಳ ಪರಂಪರೆ'. ಸಿದ್ಧಗಂಗಾಶ್ರೀ. ಪ್ರ. ಸಂ : ಚನ್ನಪ್ಪ ಎರೇಸೀಮೆ. ಪು. ೫೫೭] ಎಂಬ ಮಾತುಗಳನ್ನು ಇಲ್ಲಿ ಗಮನಿಸಬೇಕಾಗಿದೆ.

234. ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಪು. ೧೬.

ಅಧ್ಯಾಯ - ನಾಲ್ಕು

# ಬೆಂಗಳೂರಿನ ವೀರಶೈವ ಮಠಗಳು ಐತಿಹಾಸಿಕ ಪರಂಪರೆ

---

## ಅಧ್ಯಾಯ - ನಾಲ್ಕು

# ೪. ಬೆಂಗಳೂರಿನ ವೀರಶೈವ ಮಠಗಳು ಐತಿಹಾಸಿಕ ಪರಂಪರೆ *

ಇತಿಹಾಸ ಪ್ರಸಿದ್ಧವಾದ ಬೆಂಗಳೂರು ನಗರವು ಯಲಹಂಕ ಪ್ರಭುಗಳ ಕಾಲಕ್ಕೆ ಕಲ್ಯಾಣನಗರವೆಂದೇ ಪ್ರಸಿದ್ಧಿಯಾಗಿತ್ತು.[1] ಹನ್ನೆರಡನೆಯ ಶತಮಾನದಲ್ಲಿ ಐತಿಹಾಸಿಕ ಮಹತ್ವವನ್ನು ಪಡೆದಿದ್ದ ಬಸವಾದಿ ಪ್ರಮಥರು ಅವತರಿಸಿದ್ದ ಕಲ್ಯಾಣ ಕೇಂದ್ರದ ಹಿರಿಮೆ; ಮುಂದೆ ಹದಿನಾರು ಹದಿನೇಳನೆಯ ಶತಮಾನದ ವೇಳೆಗೆ ಬೆಂಗಳೂರು ಪಟ್ಟಣಕ್ಕೆ ಕಲ್ಯಾಣನಗರವೆಂಬ ಅಭಿಧಾನ ದೊಂದಿಗೆ ಆವಿರ್ಭವಿಸಿದ್ದುದು ಸಾಮಾನ್ಯವಾದ ವಿಚಾರ ವೇನಲ್ಲ. ಅಂದಿನ ನಾಡ ಪ್ರಭುಗಳಾಗಿದ್ದ ಹಿರಿಯ ಕೆಂಪೇಗೌಡ ಹಾಗೂ ಇಮ್ಮಡಿ ಕೆಂಪೇಗೌಡ ದೊರೆಗಳ ಆಳ್ವಿಕೆಯಲ್ಲಿ ಬೆಂಗಳೂರು ಪಟ್ಟಣದಲ್ಲಿ ಅನೇಕ ಗುಡಿ-ಗೋಪುರಗಳು, ಮಠ-ಮಾನ್ಯಗಳು,ಕೆರೆಕುಂಟೆಗಳು, ಅನ್ನಛತ್ರಗಳು ನಿರ್ಮಾಣವಾಗಿ ಎಲ್ಲೆಡೆಗೂ ಸಮೃದ್ಧಿ ನೆಲೆಗೊಂಡಿತ್ತು. ಸ್ವತಃ ಶಿವನ ಆರಾಧಕರೂ, ಶಿವಮತದ ಪೋಷಕರೂ ಆಗಿದ್ದ ಈ ದೊರೆಗಳು ತಮ್ಮ ನಾಡಿನಾದ್ಯಂತ ಶಿವಭಕ್ತಿಯನ್ನು ಬಿತ್ತಿ ಬೆಳೆದಿದ್ದರು.[2] ಇದೇ ಸಂದರ್ಭದಲ್ಲಿ ಬೆಂಗಳೂರು ಪಟ್ಟಣದ ಕೋಟೆ-ಕೊತ್ತಲುಗಳು ವಿನೂತನ ಮಾದರಿಯಲ್ಲಿ ನಿರ್ಮಾಣವಾಗಿ, ಇಲ್ಲಿನ ಪೇಟೆಗಳ ಬೀದಿ ಬೀದಿಗೂ ಅನೇಕ ಶಿವ ದೇವಾಲಯಗಳು ನಿರ್ಮಾಣವಾಗಿದ್ದವು. ಈ ಹಿನ್ನೆಲೆಯಲ್ಲಿ ಗೌಡದೊರೆಗಳ ಸದ್ಭಕ್ತಿ, ಸದ್ಧರ್ಮ ನಿರತ ಆಳ್ವಿಕೆಯಿಂದಾಗಿ, ಬೆಂಗಳೂರು ಪಟ್ಟಣಕ್ಕೆ ಆಗ ಕಲ್ಯಾಣನಗರವೆಂಬ ವಿಶೇಷ ಅಭಿಧಾನವು ಪ್ರಾಪ್ತವಾಗಿ ದ್ದುದು ಯಥಾರ್ಥವಾಗಿದೆ.

ಯಲಹಂಕ ಪ್ರಭುಗಳ ಕಾಲದಲ್ಲಿ ಈ ಕಲ್ಯಾಣ ನಗರದಲ್ಲಿ ಅನೇಕ ವೀರಶೈವ ಮಠಗಳಿದ್ದು, ಪಟ್ಟಣ ದೊಳಗೆ ಅವರು ಅರವತ್ತುಮೂರು ವೀರಶೈವ ಮಠಗಳಿಗೆ ಪೋಷಕರಾಗಿದ್ದರೆಂಬ ಮಾತು[3] ಇಂದಿಗೂ ಜನಜನಿತವಾಗಿದೆ. ಇಮ್ಮಡಿ ಕೆಂಪೇಗೌಡನು ಸ್ವತಃ ತಾನೇ ಶೂನ್ಯಪರಂಪರೆಯ ೨೨ನೆಯ ಗುರುಗಳಾಗಿದ್ದ ಗಗನದಾರ್ಯರಿಂದ ಶಿವದೀಕ್ಷೆಯನ್ನು ಪಡೆದಿದ್ದುದೂ[4], ಅಂದಿನ ವೀರಶೈವ ಗುರುಗಳಾಗಿದ್ದ ನಂಜೇದೇವಪ್ಪ ಅಯ್ಯನವರು ಹಾಗೂ ಶಿವಲಿಂಗಾರ್ಯರ ಪುತ್ರ ವೀರಣಾರ್ಯ ಇವರೇ ಮೊದಲಾದ ವೀರಶೈವ ಗುರುಶ್ರೇಷ್ಠರಿಗೆ ಮಠ-ಮಾನ್ಯಗಳನ್ನು ಕಟ್ಟಿಸಿಕೊಟ್ಟು, ಭೂದಾನ ಮಾಡಿದ್ದುದೂ[5]; ಇತ್ಯಾದಿ ವಿಚಾರಗಳನ್ನು ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ನೋಡಿದ್ದೇವೆ. ಪ್ರಸ್ತುತ ಕಾರಣಗಳಿಂದಾಗಿ ಗೌಡ ದೊರೆಗಳ ಕಾಲಕ್ಕಾಗಲೇ ಬೆಂಗಳೂರು ಪಟ್ಟಣದಲ್ಲಿ ಅನೇಕ ವೀರಶೈವ ಮಠಗಳಿದ್ದವು ಎಂಬ ವಿಚಾರವಾಗಿ ಮತ್ತಷ್ಟು ಪುಷ್ಟಿ ದೊರೆತಂತಾಗಿದೆ.

ಮುಂದೆ ಟಿಪ್ಪುವಿನ ಮರಣಾ (ಕ್ರಿ.ಶ. ೧೭೯೯) ನಂತರ ಅಧಿಕಾರಕ್ಕೆ ಬಂದ ಮೈಸೂರಿನ ದೊರೆಗಳೂ ಕೂಡ ಬೆಂಗಳೂರಿನ ವೀರಶೈವ ಮಠಗಳಿಗೆ ಉದಾರ ದಾನ-ಧರ್ಮಗಳನ್ನು ನೀಡಿದ್ದ ವಿಚಾರವಾಗಿಯೂ ಹಿಂದೆ ಪ್ರಸ್ತಾಪವಾಗಿದೆ. ಅದರಲ್ಲೂ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲ (ಕ್ರಿ.ಶ. ೧೮೦೦-೧೮೩೧)ದಲ್ಲಿ ಬೆಂಗಳೂರಿನ ಹದಿನೆಂಟು ವೀರಶೈವ ಮಠಗಳಲ್ಲಿ ನಡೆಯುತ್ತಿದ್ದ ಪಡಿತರ ದೀಪಾರಾಧನೆ ಹಾಗೂ ನಿತ್ಯ ದಾಸೋಹ ಸೇವೆಗಳಿಗಾಗಿ, ಉದಾರ ಭೂದಾನ ನೀಡಿದ್ದ ಮುಜರಾಯಿ ಇಲಾಖಾ ದಾಖಲೆಗಳೇ[6] ಇಂದು ನಮ್ಮ ಮುಂದಿವೆ. ಹೀಗೆ ರಾಜಮಹಾರಾಜರುಗಳಿಂದ ಪೋಷಿಸಲ್ಪಟ್ಟ ಬೆಂಗಳೂರಿನ ವೀರಶೈವ ಮಠಗಳ

* ಸೂಚನೆ : ಈ ಅಧ್ಯಾಯದಲ್ಲಿ ಆಯಾಯ ಉಪಶೀರ್ಷಿಕೆಗಳ ಅಂತ್ಯದಲ್ಲೇ ಅವುಗಳ ಅಡಿಟಿಪ್ಪಣಿಗಳನ್ನು ಕೊಡಲಾಗಿರುತ್ತದೆ.

ಆಮೂಲಾಗ್ರ ಐತಿಹಾಸಿಕ ಪರಂಪರೆಯನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ವ್ಯಾಪಕವಾದ ಚರ್ಚೆಗೆ ಅವಕಾಶ ಮಾಡಿಕೊಡಲಾಗಿದೆ.

ನಮ್ಮ ಈ ಅಧ್ಯಯನದ ಕಕ್ಷೆಗೆ ಒಳಪಟ್ಟಂತೆ ಲಭ್ಯವಾದ ಆಕರ ಸಾಮಗ್ರಿಗಳನ್ನು ಆಧರಿಸಿ, ಬೆಂಗಳೂರು ಪಟ್ಟಣದಲ್ಲಿ ೨೦ನೆಯ ಶತಮಾನದ ಆರಂಭದ ವೇಳೆಗೆ ಒಟ್ಟು ೭೪ ವೀರಶೈವ ಮಠಗಳಿದ್ದುದಾಗಿ ಖಚಿತವಾಗುತ್ತದೆ. ಈ ಸಂದರ್ಭದಲ್ಲಿ ಬೆಂಗಳೂರು ಪಟ್ಟಣಕ್ಕೆ ಹೊಂದಿಕೊಂಡಂತೆ ಇಲ್ಲಿಗೆ ಒಂದುನೂರು ವರ್ಷಗಳಷ್ಟು ಹಿಂದೆಯೇ ಇಷ್ಟೊಂದು ಅಪಾರ ಸಂಖ್ಯೆಯ ಮಠಗಳಿದ್ದುದಕ್ಕೆ ಕಾರಣವೇನಿರಬಹುದು? ಎಂಬ ಪ್ರಶ್ನೆ ಏಳುವುದು ಸಹಜ. ಆದರೆ ಈ ಪ್ರಶ್ನೆಗೆ ಸಕಾರಣವನ್ನು ನೀಡುವ ಯಾವ ದಾಖಲೆಗಳೂ ಲಭ್ಯವಾಗಿಲ್ಲ. ಆದರೂ ಇಲ್ಲಿನ ಕೆಲವು ಹಿರಿಯರೂ ವಯೋವೃದ್ಧರೂ ಆದ ಅನುಭವಸ್ಥರ ಮಾತುಗಳನ್ನು ಆಧರಿಸಿ ಹೇಳುವುದಾದರೆ- ''ಯಲಹಂಕದ ಪ್ರಭುಗಳ ಹಾಗೂ ಮೈಸೂರಿನ ದೊರೆಗಳ ಕಾಲಕ್ಕೆ ಬೆಂಗಳೂರು ಪಟ್ಟಣವು ವಿನೂತನ ಮಾದರಿಯಲ್ಲಿ ಅಭಿವೃದ್ಧಿಯನ್ನು ಸಾಧಿಸತೊಡಗಿತ್ತು. ಆದಕಾರಣ ಈ ಪಟ್ಟಣವು ದಕ್ಷಿಣ ಭಾರತದಲ್ಲೇ ಆಗ ಸುಪ್ರಸಿದ್ಧ ವ್ಯಾಪಾರಿ ಕೇಂದ್ರವಾಗಿದ್ದುದರ ಜೊತೆಗೆ, ಪವಿತ್ರ ಕ್ಷೇತ್ರಗಳಲ್ಲಿ ಒಂದಾಗಿ ಬಹುಜನ ಸಂಪರ್ಕವುಳ್ಳ ಪಟ್ಟಣವಾಗಿ ಅಭಿವೃದ್ಧಿಗೊಂಡಿದ್ದಿತು. ಇದೇ ಕಾರಣಕ್ಕಾಗಿ ಅಂದಿನ ಸಮಾಜದಲ್ಲಿ ಪ್ರತಿಷ್ಠಿತ ವರ್ಗದವರಾಗಿದ್ದ ವೀರಶೈವ ವರ್ತಕ ಮಂಡಳಿಯವರು (ವೀರಬಣಂಜುಗಳು)[7] ನಾಡಿನ ನಾನಾ ಮೂಲೆಗಳಿಂದ ಅದರಲ್ಲೂ ಉತ್ತರ ಕರ್ನಾಟಕದ ಬಹು ಭಾಗಗಳಿಂದ ಅಪಾರ ಸಂಖ್ಯೆಯಲ್ಲಿ ಇಲ್ಲಿಗೆ ಬಂದು ನೆಲೆಸತೊಡಗಿ, ಸ್ಥಳೀಯ ವ್ಯಾಪಾರೋದ್ಯಮಗಳಲ್ಲಿ ಪಾಲ್ಗೊಂಡರು. ಇವರೆಲ್ಲಾ ಕಟ್ಟಾ ಧರ್ಮಾನುಯಾಯಿಗಳಾಗಿದ್ದು ನೈಷ್ಠಿಕ ಆಚರಣೆಯುಳ್ಳವರಾಗಿದ್ದರು. ಪ್ರತಿನಿತ್ಯ ಇವರು ಜಂಗಮರೊಬ್ಬರಿಂದ ಪಾದೋದಕ ಪ್ರಸಾದಗಳನ್ನು ಸ್ವೀಕರಿಸಿದಲ್ಲದೆ ಯಾವ ಕೆಲಸಗಳನ್ನೂ ಕೈಗೊಳ್ಳುತ್ತಿರಲಿಲ್ಲ. ಹೀಗೆ ತಮ್ಮ ನಿಷ್ಠಾವಂತ ಧಾರ್ಮಿಕ ಆಚರಣೆಗಳಿಗೆ ಅನುಕೂಲವಾಗುವಂತೆ, ತಮ್ಮ ಮೂಲ ಮಠಸ್ಥರ ಒಬ್ಬೊಬ್ಬ ಜಂಗಮ ಮೂರ್ತಿಗಳನ್ನು ಕರೆತಂದು, ಇಲ್ಲಿ ಅವರಿಗೆ ಅಗತ್ಯವಾದ ಮಠ-ಮಾನ್ಯಗಳ ವ್ಯವಸ್ಥೆಗೆ ಕಾರಣರಾದರು. ಈ ಹಿನ್ನೆಲೆಯಲ್ಲಿ ಬೆಂಗಳೂರು ಪಟ್ಟಣದಲ್ಲಿ ಸಾಕಷ್ಟು ಸಂಖ್ಯೆಯ ವೀರಶೈವ ಮಠಗಳು ಹುಟ್ಟಿಕೊಳ್ಳಲು ಕಾರಣವಾದುದಾಗಿ ತಿಳಿದುಬರುತ್ತದೆ.''[8]

ಒಟ್ಟಾರೆ ಇಲ್ಲಿನ ಮಠಗಳ ವ್ಯವಸ್ಥಿತವಾದ ಅಧ್ಯಯನದ ದೃಷ್ಟಿಯಿಂದ ಬೆಂಗಳೂರಿನ ವೀರಶೈವ ಮಠಗಳನ್ನು ಪ್ರಧಾನವಾಗಿ (೧) ಗುರುವರ್ಗದ ಮಠಗಳು, (೨) ವಿರಕ್ತವರ್ಗದ ಮಠಗಳು ಹಾಗೂ (೩) ಇನ್ನುಳಿದ ಮಠಗಳು ಎಂದು ಮೂರು ವರ್ಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

---

**ಅಡಿಟಿಪ್ಪಣಿಗಳು**

1. ಎಸ್.ಕೆ. ನರಸಿಂಹಯ್ಯ. ಮಾಗಡಿ ಕೆಂಪೇಗೌಡ. ಪು. ೨೩, ೨೪.
2. ಅದೇ.
3. ಜಿ.ಎಂ.ಉಮಾಪತಿಶಾಸ್ತ್ರಿ. (ಸಂ) ವಿವೇಕ ಚಿಂತಾಮಣಿ. ಪ್ರಸ್ತಾವನೆ. ಪು. ೪೮.
4. ಕರ್ಲಮಂಗಲಂ ಶ್ರೀಕಂಠಯ್ಯ. ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ. ಪು. ೪೦.
5. ಪಿ.ವಿ. ಕೃಷ್ಣಮೂರ್ತಿ. ಕೆಂಪೇಗೌಡನ ಜಯಪ್ರಶಸ್ತಿ ಒಂದು ಚಾರಿತ್ರಿಕ ಪರಿಶೀಲನೆ. ಇತಿಹಾಸ ದರ್ಶನ. ಸಂ-೪. ೧೯೮೯. ಪು. ೧೧೮. ಮತ್ತು ಎಂ.ವಿ. ಕೃಷ್ಣರಾವ್. ಬೆಂಗಳೂರು ಕೆಂಪೇಗೌಡ. ಪು. ೧೯೪-೧೯೭.
6. Register of Muzrai Institutions in Bangalore Taluk-1902. p. 180-185.
7. ಹಿಂದೆ ಈ ವರ್ತಕ ಶ್ರೇಣಿಗಳವರೂ ಕೂಡ ತಮ್ಮ ವ್ಯಾಪಾರ ವ್ಯವಹಾರಗಳ ರಕ್ಷಣೆಗಾಗಿ ಚಿಕ್ಕ ಪುಟ್ಟ ಸೇನಾಪಡೆಗಳನ್ನು ಇಟ್ಟುಕೊಂಡಿರುತ್ತಿದ್ದರು. ಎಷ್ಟೋ ವ್ಯಾಪಾರಿಗಳು ತಾವೇ ಸ್ವತಃ ಯುದ್ಧ ಕೌಶಲಗಳನ್ನು ಕಲಿತ ಮಹಾ ಶೂರರೂ ಆಗಿರುತ್ತಿದ್ದರು. ಇವರುಗಳನ್ನು ವೀರ ಬಣಂಜುಗಳೆಂದೇ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. (ಡಾ। ಎಂ. ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೨೫೫, ೨೬೮, ೩೮೦)
8. ಹೇಳಿಕೆ : ಪಂ. ಚನ್ನಪ್ಪ ಎರೇಸೀಮೆ (೭೬). ವಿಜಯನಗರ. ಬೆಂಗಳೂರು.

## ೪.೧. ಗುರುವರ್ಗದ ಮಠಗಳು

ಗುರುವರ್ಗದ ಪಂಚಪೀಠಗಳ ವಿಚಾರವಾಗಿ, ಅವುಗಳ ಉಪ ಪ್ರಭೇದಗಳನ್ನು ಕುರಿತಂತೆ ಕಳೆದ ಅಧ್ಯಾಯದಲ್ಲಿ ವಿಶದವಾದ ಚರ್ಚೆಯನ್ನು ನಡೆಸಲಾಗಿದೆ. ಈಗಾಗಲೇ ತಿಳಿದಿರುವಂತೆ ವೀರಶೈವ ಪಂಚಪೀಠಗಳಾದ (೧) ಬಾಳೆಹೊನ್ನೂರು, (೨) ಉಜ್ಜಯಿನಿ, (೩) ಶ್ರೀಶೈಲ, (೪) ಕೇದಾರ ಹಾಗೂ (೫) ಕಾಶಿ ಪೀಠಗಳನ್ನು ಅನುಕ್ರಮವಾಗಿ ವೀರಸಿಂಹಾಸನ, ಸದ್ಧರ್ಮಸಿಂಹಾಸನ, ಸೂರ್ಯ (ದೇವ) ಸಿಂಹಾಸನ, ವೈರಾಗ್ಯ ಸಿಂಹಾಸನ, ಹಾಗೂ ಜ್ಞಾನಸಿಂಹಾಸನಗಳೆಂದು ಕರೆಯುವುದು ರೂಢಿಯಲ್ಲಿದೆ. ಈ ಪೀಠ ಪರಂಪರೆಗೆ ಸಂಬಂಧಪಟ್ಟ ಅನೇಕ ಪಟ್ಟದ ಮಠಗಳು ನಾಡಿನಾದ್ಯಂತ ವ್ಯಾಪಕವಾಗಿ ಅಸ್ತಿತ್ವದಲ್ಲಿದ್ದು, ಅವು ಧಾರ್ಮಿಕವಾಗಿ ವೀರಶೈವ ಕುಲಬಾಂಧವರ ಆಚಾರ-ವಿಚಾರಗಳಿಗೆ ಸೂಕ್ತ ಮಾರ್ಗದರ್ಶನ ನೀಡುತ್ತವೆ.

ಇಂತಹುದೇ ಧಾರ್ಮಿಕ ಹಿನ್ನೆಲೆಯುಳ್ಳ ೧೭ ವೀರಶೈವ ಗುರುವರ್ಗದ ಪಟ್ಟದ ಮಠಗಳು ಬೆಂಗಳೂರಿನಲ್ಲಿವೆ. ಇವುಗಳಲ್ಲಿ ಐದು ಮಠಗಳು ವೀರಸಿಂಹಾಸನದ ಬಾಳೆಹೊನ್ನೂರು ಪೀಠ ಪರಂಪರೆಗೆ ಸೇರಿದ ಮಠಗಳಾಗಿದ್ದರೆ; ಎಂಟು ಮಠಗಳು ಸದ್ಧರ್ಮಸಿಂಹಾಸನದ ಉಜ್ಜಯಿನಿ ಪೀಠ ಪರಂಪರೆಗೆ ಸಂಬಂಧಪಟ್ಟಿವೆ. ಉಳಿದವುಗಳಲ್ಲಿ ಕೇವಲ ಒಂದು ಮಠವು ಶ್ರೀಶೈಲ ಪೀಠದ ಸೂರ್ಯ ಸಿಂಹಾಸನಕ್ಕೆ ಸಂಬಂಧಪಟ್ಟ ಪರಂಪರೆಯುಳ್ಳದ್ದಾಗಿದ್ದರೆ; ಮಿಕ್ಕುಳಿದ ಮೂರು ಮಠಗಳು ಯಾವ ಪೀಠಪರಂಪರೆಗೆ ಸೇರಿದವೆಂದು ಗುರುತಿಸಲಾಗದ ಪಟ್ಟದ ಮಠಗಳಾಗಿವೆ. ಬೆಂಗಳೂರಿನಲ್ಲಿ ವೈರಾಗ್ಯ ಸಿಂಹಾಸನವಾದ ಕೇದಾರಪೀಠ ಹಾಗೂ ಜ್ಞಾನಸಿಂಹಾಸನವಾದ ಕಾಶಿಪೀಠ ಪರಂಪರೆಗೆ ಸೇರಿದ ಮಠಗಳಿದ್ದುದಕ್ಕೆ ಸೂಕ್ತ ಮಾಹಿತಿಗಳ ಕೊರತೆ ಇದೆ. ಮುಂದೆ ಮೇಲ್ಕಂಡ ವರ್ಗಗಳಲ್ಲಿ ಬೆಂಗಳೂರಿನ ಪಟ್ಟದ ಅಥವಾ ಗುರುವರ್ಗದ ಮಠಗಳ ವಿಚಾರವಾಗಿ ಲಭ್ಯವಾದ ಮಾಹಿತಿಗಳನ್ನು ಅನುಕ್ರಮವಾಗಿ ಸಂಗ್ರಹಿಸಿ ಕೊಡಲಾಗಿದೆ.

### ೧.೧. ಬಾಳೆಹೊನ್ನೂರು ಪೀಠದ ಪರಂಪರೆಗೆ ಸೇರಿದ ಮಠಗಳು

ಇಪ್ಪತ್ತನೆಯ ಶತಮಾನದ ಆರಂಭದ ವೇಳೆಗೆ ಬೆಂಗಳೂರು ಪಟ್ಟಣದಲ್ಲಿ ವೀರಶೈವ ಗುರುವರ್ಗದ ಬಾಳೆಹೊನ್ನೂರು ಪೀಠದ ವೀರಸಿಂಹಾಸನದ ಪರಂಪರೆಗೆ ಸೇರಿದ್ದ ಐದು ಪಟ್ಟದ ಮಠಗಳಿದ್ದವು. ಅವುಗಳಾವುವೆಂದರೆ:-

೧. ಧರ್ಮಶಾಲಾಮಠ, ಬೆಂಗಳೂರು.

೨. ಮಹಾಂತರಮಠ, ಚಿಕ್ಕಪೇಟೆ.

೩. ವಿಭೂತಿಪುರದಮಠ, ಎಚ್.ಎ.ಎಲ್. ಸಮೀಪ.

೪. ಮಾಳಿಗೆಮಠ, ದೊಡ್ಡಪೇಟೆ.

೫. ಅಂಕಲೇಶ್ವರಮಠ, ದಂಡಿನ ಕೇವಲ್ರಿ ರಸ್ತೆ.

ಇವುಗಳಲ್ಲಿ ಧರ್ಮಶಾಲಾಮಠ ಮತ್ತು ಮಾಳಿಗೆ ಮಠ ಇವೆರಡೂ ಇಂದು ನಾಮಾವಶೇಷವಾಗಿ ಬಿಟ್ಟಿವೆಯಾದರೂ, ಧರ್ಮಶಾಲಾಮಠವು ಬೆಂಗಳೂರಿಗೆ ಬಹಳ ಪ್ರಾಚೀನವಾದ ಹಾಗೂ ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ನಿರ್ಮಾಣವಾದ ಮಠವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಉಳಿದ ಮೂರು ಮಠಗಳು ತಮ್ಮ ಅಸ್ತಿತ್ವವನ್ನು ಇಂದಿಗೂ ಉಳಿಸಿಕೊಂಡಿವೆ. ಅದರಲ್ಲೂ ಮಹಾಂತರ ಮಠವು ನಗರದ ಜನತೆಯ ಸಾಂಸ್ಕೃತಿಕ ಬದುಕಿಗೆ ಸದಾ ಸ್ಫೂರ್ತಿಯ ನೆಲೆಯಾಗಿದ್ದು, ಇಂದಿಗೂ ತನ್ನ ಕ್ರಿಯಾಶೀಲ ಬದುಕನ್ನು ಉಳಿಸಿಕೊಂಡಿರುವುದು ಒಂದು ವಿಶೇಷವಾಗಿದೆ. ಈ ಮೇಲ್ಕಂಡ ಮಠಗಳ ಚಾರಿತ್ರಿಕ ಹಿನ್ನೆಲೆಯನ್ನು ಕುರಿತು ಮುಂದೆ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ.

### ೧. ಧರ್ಮಶಾಲಾಮಠ, ಬೆಂಗಳೂರು

ಬೆಂಗಳೂರಿನ ವೀರಶೈವ ಮಠಗಳ ಇತಿಹಾಸದಲ್ಲಿಯೇ ಬಹಳ ಪ್ರಾಚೀನವಾದ ಮಠ ಈ ಧರ್ಮಶಾಲಾ ಮಠ. ಕ್ರಿ.ಶ. ೧೬೩೩ರಲ್ಲಿ ಇಮ್ಮಡಿ ಕೆಂಪೇಗೌಡನ ಅಯ್ಯನವರಿಗೆ (ಗುರುಗಳಿಗೆ) 'ಗುಜ್ಜರಿ ವಿಶ್ವನಾಥ' ಎಂಬುವನು ಧರ್ಮಾರ್ಥವಾಗಿ ಈ ಮಠವನ್ನು ಕಟ್ಟಿಸಿಕೊಟ್ಟುದಾಗಿ, ನಗರದ ಚಿಕ್ಕಪೇಟೆಯ ತೂಗದ ಅಚ್ಚಪ್ಪನ ಮನೆಯ ಮುಗ್ಗುಲಿಗಿದ್ದ ಶಾಸನ[1]ದಿಂದ ವ್ಯಕ್ತವಾಗುತ್ತದೆ. ಈ ಶಾಸನದಲ್ಲಿ ವ್ಯಕ್ತವಾಗಿರುವ ಇಮ್ಮಡಿಕೆಂಪೇಗೌಡನ ಅಯ್ಯನವರ (ಗುರುಗಳ) ಹೆಸರು ನಂಜೇದೇವಪ್ಪ ಅಯ್ಯನವರು ಎಂಬುದಾಗಿ ಗುಮ್ಮಳಾಪುರದ ಶಾಸನದಿಂದ ತಿಳಿದುಬರುತ್ತದೆ.[2] ಜೊತೆಗೆ ಗುಮ್ಮಳಾಪುರದ ಮಠವು

ಇಂದಿಗೂ ಉಳಿದಿದ್ದು ಇದು ಬಾಳೆಹೊನ್ನೂರು ಪೀಠದ ಪರಂಪರೆಯ ಪಟ್ಟದ ಮಠವಾಗಿರುತ್ತದೆ. ಈ ಮಠಕ್ಕೆ ಕ್ರಿ.ಶ. ೧೬೦೮ರಲ್ಲಿ ಮೇಲೂರಿಗೆ ಸೇರಿದ್ದ ಗುಮ್ಮಳಾಪುರವನ್ನು ಇಮ್ಮಡಿ ಕೆಂಪೇಗೌಡನು ನಂಜೇದೇವಪ್ಪ ಅಯ್ಯನವರ ಹೆಸರಿಗೆ ಶಿವಾರ್ಪಿತವಾಗಿ ಅರ್ಪಿಸಿದ್ದುದು ವ್ಯಕ್ತವಾಗಿದೆ.[3]

ಈ ಹಿನ್ನೆಲೆಯಲ್ಲಿ ನಗರದಲ್ಲಿ ದೊರಕಿರುವ ಗುಜ್ಜರಿ ವಿಶ್ವನಾಥನ ಶಾಸನದಲ್ಲಿ ವ್ಯಕ್ತವಾಗಿರುವ ಇಮ್ಮಡಿ ಕೆಂಪೇಗೌಡನ ಅಯ್ಯನವರು, ಗುಮ್ಮಳಾಪುರದ ಶಾಸನದಲ್ಲಿ ವ್ಯಕ್ತವಾಗಿರುವ ನಂಜೇದೇವಪ್ಪ ಅಯ್ಯನವರೇ ಎಂಬುದು ಸ್ಪಷ್ಟವಾದಂತಾಗಿದೆ. ಜೊತೆಗೆ ಈ ಧರ್ಮಶಾಲಾಮಠವೂ ಕೂಡ ಬಾಳೆಹೊನ್ನೂರು ಪೀಠದ ಪರಂಪರೆಗೆ ಸೇರಿದ ಪಟ್ಟದ ಮಠವೇ ಆಗಿತ್ತು ಎನ್ನುವುದರಲ್ಲಿ ಅನುಮಾನವೇ ಇಲ್ಲ. ಏಕೆಂದರೆ ಇವೆರಡೂ ಮಠಗಳನ್ನು ಮೇಲ್ಕಂಡ ನಂಜೇದೇವಪ್ಪ ಅಯ್ಯನವರಿಗೇ ಸಮರ್ಪಿಸಿರುವುದು ಗಮನಾರ್ಹ. ಧರ್ಮಶಾಲಾಮಠವನ್ನು ಕುರಿತು ಇನ್ನೇನೂ ಹೆಚ್ಚಿನ ಮಾಹಿತಿಗಳಿಲ್ಲವಾದರೂ ಗೌಡದೊರೆಗಳ ಕಾಲದಲ್ಲಿ ಹಲವಾರು ವೀರಶೈವ ಮಠಗಳಿದ್ದಿರಬೇಕು; ಜೊತೆಗೆ ಬೆಂಗಳೂರಿನಲ್ಲಿ ಈ ದೊರೆಗಳು ಅರವತ್ತುಮೂರು ವೀರಶೈವ ಮಠಗಳಿಗೆ ಪೋಷಕರಾಗಿದ್ದರು[4] ಎನ್ನುವ ಮಾತಿಗೆ ಮೇಲ್ಕಂಡ ಶಾಸನಾಧಾರಿತ ಮಾಹಿತಿಗಳು ಪೋಷಕವಾಗಿವೆ. ಸದ್ಯಕ್ಕೆ ಸದರಿ ಮಠವು ಇದ್ದಿರಬಹುದಾದ ಸ್ಥಳವನ್ನು ಗುರುತಿಸಲು ಸಾಧ್ಯವಿಲ್ಲವಾದರೂ, ಕ್ರಿ.ಶ. ೧೬೩೩ರ ವೇಳೆಗಾಗಲೇ ಬೆಂಗಳೂರು ಪಟ್ಟಣದಲ್ಲಿ ವೀರಶೈವರ ಪಟ್ಟದ ಮಠ (ಧರ್ಮಶಾಲಾ ಮಠ)ವೊಂದಿತ್ತು ಎಂಬುದು ಖಚಿತವಾದ ವಿಚಾರವಾಗಿದೆ. ಬಹುಶಃ ಚಿಕ್ಕಪೇಟೆಯ ಸರಹದ್ದಿನಲ್ಲೇ ಮೇಲ್ಕಂಡ ಶಾಸನವು ದೊರಕಿರುವ ಕಾರಣ, ಹಿಂದೆ ಗುಜ್ಜರಿ ವಿಶ್ವನಾಥನು ನಿರ್ಮಿಸಿದ ಧರ್ಮಶಾಲಾ ಮಠವು ಈಗಿನ ಚಿಕ್ಕಪೇಟೆಯ ಮಹಾಂತರ ಮಠವೇ ಆಗಿದ್ದಿರಬೇಕೆಂದು ಊಹಿಸಲು ಅವಕಾಶವಿದೆ. ಏಕೆಂದರೆ ಮಹಾಂತರ ಮಠವೂ ಕೂಡ ಬಾಳೆಹೊನ್ನೂರು ಪೀಠದ ಪರಂಪರೆಗೆ ಸೇರಿದ ಪಟ್ಟದಮಠವೇ ಆಗಿದೆ. ಈ ಊಹೆಯ ಖಚಿತತೆಗಾಗಿ ಇನ್ನೂ ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸಬೇಕಾಗಿದೆ. ಒಟ್ಟಾರೆ ಧರ್ಮಶಾಲಾಮಠವು ವೀರಶೈವ ಗುರುವರ್ಗದ ವೀರಸಿಂಹಾಸನಕ್ಕೆ ಸೇರಿದ ಬೆಂಗಳೂರಿನ ಪ್ರಥಮ ಗುರುವರ್ಗದ ಮಠವೆಂದು ಮೇಲ್ಕಂಡ ದಾಖಲೆಗಳಿಂದ ನಿಶ್ಚಯವಾಗಿ ಹೇಳಬಹುದಾಗಿದೆ.

---

**ಅಡಿಟಿಪ್ಪಣಿಗಳು**

1. ಎಪಿಗ್ರಾಫಿಯಾ ಕರ್ನಾಟಿಕ. IX, ಬೆಂಗಳೂರು ೨. ಶಾಸನಭಾಗ :
   ೧. .......ಮತು ಯಲಹಂಕ
   ೨. ನಾಡ ಪ್ರಭುವುಲೈನಯಿಂಮಡಿ ಕೆಂ
   ೩. ಪಯಗೌನಿ ಅಯವಾರಿಕಿ ಆಚಂದ್ರಾ
   ೪. ರ್ಕಂಗಾನು ಪುತ್ರಪೌತ್ರ ಪಾರಂಪರ್ಯಮು ಧ
   ೫. ರ್ಮಂ ಕೊರಕು ಗುಜ್ಜರಿ ವಿಶ್ವನಾಥು
   ೬. ಕಟಿಂಚಿನ ಧರ್ಮಶಾಲಾ ಮಠಂ
   ೭. ಶ್ರೀ ಮುಖ ಸಂವತ್ಸರ ವೈಶಾಖ ಶು
   ೮. ಧ ತ್ರಿತಿಯ್ಯಂದು.
2. ಡಾ। ದೇವರಕೊಂಡಾರೆಡ್ಡಿಯವರ ಸ್ವಂತಸಂಗ್ರಹ.
   ಉದ್ಧೃತ : ಪಿ.ವಿ.ಕೃಷ್ಣಮೂರ್ತಿ. ಕೆಂಪೇಗೌಡ ಜಯಪ್ರಶಸ್ತಿ ಒಂದು ಚಾರಿತ್ರಿಕ ಪರಿಶೀಲನೆ. ಇತಿಹಾಸದರ್ಶನ. ಸಂ-೪. ೧೯೮೯. ಪು. ೧೧೮.
3. ಅದೇ.
4. ನೋಡಿ : ಜಿ.ಎಂ. ಉಮಾಪತಿಶಾಸ್ತ್ರಿ. (ಸಂ.) ವಿವೇಕಚಿಂತಾಮಣಿ. ಪ್ರಸ್ತಾವನೆ. ಪು. ೪೮; ಎಂ.ಜಿ. ನಂಜುಂಡಾರಾಧ್ಯ. ತ್ರಿವಿಧ ದಾಸೋಹಿ ಗೌಡರ ವೀರಭದ್ರಪ್ಪ. ಪು. ೧೭; ಕರ್ಲಮಂಗಲಂ ಶ್ರೀಕಂಠಯ್ಯ. ಕೆಂಪೇಗೌಡನ ಜಯಪ್ರಶಸ್ತಿ. ಮುನ್ನುಡಿ ಪು. ೪೦.

### ೨. ಮಹಾಂತರಮಠ, ಚಿಕ್ಕಪೇಟೆ

ಬೆಂಗಳೂರಿನ ಪ್ರಾಚೀನ ಕೋಟೆಯೊಳಗೆ ಸೊಂಡೆ ಕೊಪ್ಪದ ಬಾಗಿಲಿಗೂ, ಅಲಸೂರು ಬಾಗಿಲಿಗೂ ನಡುವೆ ಒಂದು ರಾಜಮಾರ್ಗವಿತ್ತು. ಈ ರಾಜಮಾರ್ಗ ದಲ್ಲಿದ್ದ ಹತ್ತಾರು ವೀರಶೈವ ಮಠಗಳಲ್ಲಿ 'ಮಹಾಂತರಮಠ'ವೂ ಒಂದು. ಹಿಂದೆ ಇದನ್ನು "ಚಿಕ್ಕಪೇಟೆಯ ಜಂಗಮ ಮಠ"[1] ವೆಂದೂ ಕರೆಯುವುದು ರೂಢಿಯಲ್ಲಿತ್ತು. ಮಹಾ ನಗರದಲ್ಲಿ ಈಗಿನ ಚಿಕ್ಕಪೇಟೆಯೊಳಗೆ ಹಾದು ಹೋಗುವ ಓ.ಟಿ.ಸಿ. (Old taluk cacheri) ರಸ್ತೆ ಹಾಗೂ ಅರ್ಕಾಟ್ ಶ್ರೀನಿವಾಸಾಚಾರ್ ರಸ್ತೆ[2] ಇವೆರಡೂ ಕೂಡುವ ಚೌಕದಲ್ಲಿ ಪಶ್ಚಿಮ ಬದಿಗೆ ಇಂದಿನ ಮಹಾಂತರ ಮಠವಿದೆ.

ಬೆಂಗಳೂರಿನ ಕೆಲವೇ ಪಟ್ಟದ ಮಠಗಳಲ್ಲಿ ಮಹಾಂತರ ಮಠವೂ ಒಂದಾಗಿದ್ದು, ಇದು ಬಹಳ ಪ್ರಾಚೀನವಾದ ಹಾಗೂ ಪ್ರಸಿದ್ಧವಾದ ಮಠವೆಂಬುದಾಗಿ ಭಕ್ತರು ಹೇಳುತ್ತಾರೆ. "ವೀರಶೈವ ಸಿದ್ಧಾಂತ ಸ್ಥಾಪನಾಚಾರ್ಯರ ಪೀಠವಾದ ಬಾಳೆಹೊನ್ನೂರಿನ ಶ್ರೀಮದ್ರಂಭಾಪುರಿ ವೀರಸಿಂಹಾಸನ ಪೀಠ ಪರಂಪರೆಯ ಶಾಖಾಮಠವಿದೆಂದು" ಡಾ। ಜ.ಚ.ನಿ.ಯವರು ಗುರುತಿಸಿದ್ದಾರೆ.[3] ಮಠದ ಮುಖ್ಯ ಆರಾಧನಾ ಕೇಂದ್ರ ವಾಗಿ ಇಂದಿಗೂ ವಿರೂಪಾಕ್ಷ ಸ್ವಾಮಿಗಳ ಗದ್ದುಗೆ ಇದೆ. ಬಹಳಷ್ಟು ಕಾಲ ಮಠಾಧೀಶರಿಲ್ಲದೆ ಇದ್ದಾಗ್ಯೂ ತನ್ನ ಧಾರ್ಮಿಕ ಪರಂಪರೆಯನ್ನು ನಿರಂತರವಾಗಿ ಮುನ್ನಡೆಸಿ ಕೊಂಡು ಬಂದಿರುವುದೇ ಈ ಮಠದ ಒಂದು ವಿಶೇಷ. ಈ ಹೊತ್ತಿಗೂ ಕೂಡ ಈ ಮಠಕ್ಕೆ ಮಠಾಧೀಶರಿಲ್ಲ.

ಸಂಸ್ಕೃತದ 'ಮಹತ್' ಎಂಬ ಪದದಿಂದ ಕನ್ನಡದ 'ಮಹಾ, ಮಹಾಂತ, ಮಹಾಂತು' ಎಂಬ ಪದಗಳು ಹುಟ್ಟಿಕೊಂಡಿವೆ.[4] 'ಮಹಾ' ಎಂದರೆ ದೊಡ್ಡದು; ಶ್ರೇಷ್ಠವಾದುದು; ಹಿರಿದಾದದ್ದು; ಸಮೃದ್ಧವಾದದ್ದು ಮುಂತಾದ ಅರ್ಥಗಳಿವೆ. ಹಾಗೆಯೇ 'ಮಹಾಂತ' ಎಂದರೆ ದೊಡ್ಡವರು; ಹಿರಿಯರು; ಶ್ರೇಷ್ಠವಾದವರು; ಸಂಪನ್ನ ರಾದವರು ಎಂಬ ಅರ್ಥಗಳುಂಟು.[5] 'ಮಹಾಂತು' ಎಂಬ ಪದಕ್ಕೂ ಅತ್ಯಂತ ಶ್ರೇಷ್ಠವಾದದ್ದು[6] ಎಂಬ ಅರ್ಥವೇ ಇದೆ. 'ಮಹಾಂತ' ಎಂಬ ಪದವನ್ನು ವೀರಶೈವ ಪರಿಭಾಷೆಯಲ್ಲಿ ಅರ್ಥೈಸುವುದಾದರೆ, ಪರಂಜ್ಯೋತಿ ಸ್ವರೂಪನೂ; ನಿತ್ಯನಿರಂಜನನೂ; ನಿಶ್ಶೂನ್ಯನಿರಾಮಯನೂ; ಪರಮ ಜ್ಞಾನವುಳ್ಳವನೂ[7] ಎಂದೆಲ್ಲಾ ಅರ್ಥಗಳುಂಟು. ಇಷ್ಟೆಲ್ಲಾ ಅರ್ಥಗಳಿಗೆ ಕಳಸವಿಟ್ಟಂತೆ 'ಪಾದದಲ್ಲಿ ಪಾತಾಳ ಲೋಕ, ನೆತ್ತಿಯಲ್ಲಿ ಸತ್ಯಲೋಕ, ಕುಕ್ಷಿಯಲ್ಲಿ ಹದಿನಾಲ್ಕು ಲೋಕಗಳನ್ನು ಹೊಂದಿರುವ ವಿಶ್ವ ಪರಿಪೂರ್ಣನೆ ಮಹಾಂತ'ನೆಂದು[8] ಚೆನ್ನಬಸವಣ್ಣ ಹೇಳಿದರೆ; '.....ಗುಹೇಶ್ವರ ಲಿಂಗವ ತನ್ನೊಳರಿದೆನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯೇ ಸಾಧನೆ ಕಾಣಿಭೋ'[9] ಎಂಬುದಾಗಿ ಅಲ್ಲಮಪ್ರಭುವು ಸೂಚಿಸಿದ್ದಾನೆ. ಮಹಾಂತು ಎಂಬ ಪದವನ್ನು ಕುರಿತು 'ನಾದಬಿಂದು ಕಳಾತೀತವಾದ ಪರವಸ್ತುವೇ ಮಹಾಂತು ನೋಡಾ ಶ್ರುತಿತತಿಗಸಾಧ್ಯವಾದ ಪರವಸ್ತುವೆ ಮಹಾಂತು ನೋಡಾ'[10] ಎಂಬುದಾಗಿ ಅಖಂಡೇಶ್ವರನ ವಚನದಲ್ಲಿದೆ.

ಹಿಂದೆ ಧಾರ್ಮಿಕವಾದ ಔನ್ನತ್ಯವನ್ನು ಸಾಧಿಸಿದ ಸಿದ್ಧಿಪುರುಷರಿಗೆ ಮಹಾಂತರೆನ್ನುವುದು ರೂಢಿಯಲ್ಲಿತ್ತು. ಲಿಂಗವಂತ ಧರ್ಮೀಯರಲ್ಲಿ ಇವರು ಸಕಲ ಸಂಸ್ಕಾರ ಗಳನ್ನು ನೆರವೇರಿಸುತ್ತಿದ್ದರು. ಹೀಗೆ ವೀರಶೈವರಲ್ಲಿ ಧಾರ್ಮಿಕ ಸಂಸ್ಕಾರಗಳನ್ನು ವಿಧಿವತ್ತಾಗಿ ನೆರವೇರಿಸಲು ಸೂಕ್ತ ಮಾರ್ಗದರ್ಶನ ನೀಡುತ್ತಿದ್ದ ಸಂಸ್ಥೆಗಳೇ ಮಹಾಂತರ ಮಠಗಳಾಗಿದ್ದುವು. ಇಂತಹ ಮಠಗಳಲ್ಲಿ ಚಿಕ್ಕಪೇಟೆಯ ಮಹಾಂತರಮಠವೂ ಕೂಡ ಒಂದು. ಪೂರ್ವದಲ್ಲಿ ಸಾಮಾನ್ಯವಾಗಿ ವೀರಶೈವರೇ ಪ್ರಧಾನವಾಗಿದ್ದ ಊರೂರಿಗೂ ಒಂದೊಂದು ಪಟ್ಟದ ಮಠಗಳಿರುತ್ತಿದ್ದುವು. ಇವುಗಳನ್ನು ಮಹಾಂತರಮಠ ಗಳೆಂದೇ ಕರೆಯುತ್ತಿದ್ದರು. ಇಂತಹ ಅನೇಕ ಪಟ್ಟದಮಠಗಳ ಮೇಲೆ ಸುಮಾರು ೪೦-೫೦ ಊರುಗಳಿಗೆ ಒಂದರಂತೆ ಹಿರಿಯ ಪಟ್ಟದಮಠಗಳಿರುತ್ತಿದ್ದುವು. ಇವುಗಳನ್ನು 'ಮಹಾ ಮಹಾಂತರ ಮಠ'ಗಳೆಂದೂ ಕರೆಯುತ್ತಿದ್ದರು. ಇಂತಹ ಅನೇಕ ಮಹಾ ಮಹಾಂತರ ಮಠಗಳ ಮೇಲೆ 'ಪಂಚಪೀಠ'ಗಳಿದ್ದುವು. ಇವುಗಳನ್ನು 'ಸಿಂಹಾಸನದ ಮಠ'ಗಳೆಂದೂ ಕರೆಯಲಾಗುತ್ತಿತ್ತು.[11]

ಮಹಾಂತರಮಠವು ಬಹಳ ಪುರಾತನವಾದುದು. ಇದು ಕೆಂಪೇಗೌಡರ ಕಾಲದಲ್ಲೇ ಅಸ್ತಿತ್ವಕ್ಕೆ ಬಂದಿತ್ತು. ಇದರ ಮೂಲಗುರುಗಳೇ ವಿರೂಪಾಕ್ಷ ಸ್ವಾಮಿಗಳು ಎಂಬುದಾಗಿ ಭಕ್ತರು ಹೇಳುವುದುಂಟು. ಆದರೆ ಮುಂದೆ ಕೆಲವು ಅಧಿಕೃತವಾದ ಮಾಹಿತಿಗಳ ಪ್ರಕಾರ ಮಹಾಂತರ ಮಠದ ಕಾರಣಕರ್ತರು ಕೆಂಪನಂಜೆಸ್ವಾಮಿಯವರು ಎಂಬ

ಸೂಚನೆಗಳಿವೆ. ಚೆನ್ನಬಸವ ಪುರಾಣದ ಹಸ್ತಪ್ರತಿಯೊಂದರಲ್ಲಿ ''ಶಾಲಿವಾಹನ ಶಕ ೧೭೩೬ನೆ ಭಾವನಾಮ ಸಂವತ್ಸರದ ಮಾಘ ಶುದ್ಧ ೫ ರಂದು ಬೆಂಗಳೂರು ಮಹಾ ಮಹಾಂತರ ಸಿಂಹಾಸನಕ್ಕೆ ಕಾರಣಕರ್ತರಾದ ಕೆಂಪನಂಜೆ ಸ್ವಾಮಿಯವರು ಕೃತಿಬರಹವನ್ನು ಪೂರ್ಣಮಾಡಿದ...[12]'' ವಿಚಾರಗಳಿವೆ. ಕೃತಿ ಬರಹವು ಕ್ರಿ.ಶ. ೧೮೧೪ರಲ್ಲಿ ನಡೆದಿರುವುದರಿಂದ ಅದಕ್ಕೂ ಮೊದಲೇ ಈ ಮಠವು ಸ್ಥಾಪನೆಯಾಗಿರುವುದು ಸ್ಪಷ್ಟವಾಗಿದೆ. ಜೊತೆಗೆ ಪಟ್ಟದ ಮಠಗಳ ಪರಂಪರೆಯಲ್ಲಿ ಎರಡನೆಯ ವರ್ಗದ ಈ ಮಹಾ ಮಹಾಂತರ ಸಿಂಹಾಸನ (ಮಠ)ಕ್ಕೆ ಕೇವಲ ಕಾರಣಕರ್ತರಾಗಿದ್ದವರು ಕೆಂಪನಂಜೆ ದೇವರೇ ಹೊರತು, ಅವರೇ ಈ ಮಠದ ಸ್ಥಾಪನಕರ್ತ ರಾಗಿರಲಾರರು. ಏಕೆಂದರೆ ಕಾರಣಕರ್ತ ಹಾಗೂ ಸ್ಥಾಪನ ಕರ್ತ ಎಂಬ ಇವೆರಡು ಪದಗಳಿಗೆ ವ್ಯತ್ಯಾಸವಿರುವುದನ್ನು ನಾವು ಗಮನಿಸಬಹುದಾಗಿದೆ. ಆದ್ದರಿಂದ ಈ ಮಠವು ಕ್ರಿ.ಶ. ೧೮೦೦ಕ್ಕೂ ಮೊದಲೇ ಪ್ರಾರಂಭವಾಗಿದ್ದಿರಬೇಕು ಎನ್ನುವುದಂತೂ ವಾಸ್ತವ ಸಂಗತಿ.

ಮೇಲ್ಕಂಡ ಮಾಹಿತಿಗಳನ್ನು ಮುಜರಾಯಿ ಇಲಾಖಾ ದಾಖಲೆಗಳೂ ಕೂಡ ಅನುಮೋದಿಸುತ್ತವೆ. ಅವುಗಳ ಪ್ರಕಾರ ''೧೮೫೦ರ ವೇಳೆಗಾಗಲೇ ಬೆಂಗಳೂರಿನ ಚಿಕ್ಕಪೇಟೆಯಲ್ಲಿ ಒಂದು 'ಜಂಗಮಮಠ'ವಿತ್ತು. ಇದನ್ನು 'ಮಹಾಂತರಮಠ'ವೆಂದೂ ಕರೆಯಲಾಗುತ್ತಿತ್ತು. ಕೆಂಪನಂಜೆದೇವರು ಇದರ ಅಧಿಪತಿಗಳಾಗಿದ್ದರು. ಹನುಮಂತಪುರ ಗ್ರಾಮದಲ್ಲಿ ಸ.ನಂ:೬೦ರಲ್ಲಿ ೩ ಎಕರೆ ೩ ಗುಂಟೆ ತೋಟದ ಜಮೀನು ಈ ಮಠದ ಹೆಸರಿಗಿತ್ತು. ಇದರಿಂದ ಬಂದಂತಹ ಉತ್ಪನ್ನಗಳಿಂದ ಅತಿಥಿ ಅಭ್ಯಾಗತರಿಗೆ ಅನ್ನೋದಕಗಳನ್ನೂ, ಗದ್ದುಗೆಯ ದೀಪಾರಾಧನೆಗಳನ್ನೂ ಗುರುಗಳು ನಿರಂತರವಾಗಿ ನಡೆಸುತ್ತಿದ್ದರು. ಮಠಕ್ಕೆ ಯಾವುದೇ ಇನಾಂ ಜಮೀನುಗಳಿಲ್ಲವಾದ್ದರಿಂದ ಇದೊಂದು ಮುಜರಾಯೇತರ ಸ್ವತಂತ್ರ ಮಠವಾಗಿತ್ತು''[13] ಎಂಬುದಾಗಿ ತಿಳಿದು ಬರುತ್ತದೆ. ೧೮೭೬ರಲ್ಲಿ ಇಮ್ಮಡಿ ಕೆಂಪನಂಜೆದೇವರು ಶಿವಾಧೀನರಾದ ಮೇಲೆ ಕೆಲವಾರು ವರ್ಷಗಳವರೆಗೆ ಮಠಾಧಿಪತಿಗಳೇ ಇಲ್ಲದಂತಾಗಿತ್ತು. ನಂತರ ದಿನಾಂಕ: ೨೯.೩.೧೮೮೪ ರಂದು 'ಮೂರು ಪೇಟೆಯ ಶೆಟ್ಟಿಯಜಮಾನರು'[14]ಗಳು ಸೇರಿ ಶಾಂತವೀರಯ್ಯನ ಮಗ ಶಿವರುದ್ರಮರಿದೇವರನ್ನು ಮುಂದಿನ ಪಟ್ಟಾಧಿಕಾರಿಯನ್ನಾಗಿ ನೇಮಿಸಿದ್ದರು. ಮರಿಯು ಇನ್ನೂ ಮೈನರ್ ಆಗಿದ್ದುದರಿಂದ ತಂದೆ ಶಾಂತವೀರಯ್ಯನೇ ಮೈನರ್ ಗಾರ್ಡಿಯನ್ನಾಗಿದ್ದು ಮಠದ ಎಂದಿನ ವಹಿವಾಟುಗಳನ್ನು ನೋಡಿಕೊಳ್ಳುವಂತೆ ಸೂಚಿಸಿದ್ದರು[15]. ಈ ಸಂದರ್ಭದಲ್ಲಿ ಚಿಕ್ಕಪೇಟೆಯ ಮುಖ್ಯ ಬೀದಿಯಲ್ಲಿದ್ದ ಮುನಿಸಿಪಲ್ ಬೋರ್ಡ್ ನಂ : ೩೫೯ರಲ್ಲಿ ಸುತ್ತಲೂ ಪೌಳಿ ಗೋಡೆಯಿದ್ದ ಮಠ ಹಾಗೂ ಅದಕ್ಕೆ ಸೇರಿದ ಬಾವಿ, ಅಂಗಳಾ, ಹಿತ್ತಲೂ; ೩೬೦ನೇ ನಂಬರಿನ ೧೨ ಅಂಕಣದ ಕಲ್ಲಿನ ಮನೆ, ಹಾಗೂ ೬ ಅಂಕಣದ ಅಂಗಡಿ ಮನೆಗಳೂ; ೩೬೧ನೇ ನಂಬರಿನ ೬ ಅಂಕಣದ ಒಂದು, ಮತ್ತು ೧೨ ಅಂಕಣದ ಒಂದು ಅಂಗಡಿ ಮನೆಗಳೂ; ಮಠದ ಪೂರ್ವಕ್ಕೆ ಇದ್ದ ೩ ಮತ್ತು ೪ನೇ ನಂಬರಿನ ಗಡಂಗು (ದಾಸ್ತಾನು ಮಳಿಗೆ) ಹಾಗೂ ಗಾಡಿಖಾನೆಗಳೂ, ಇವುಗಳ ಹಿಂಬದಿಗಿದ್ದ ಖಾಲಿ ಜಮೀನು; ಇವುಗಳ ಜೊತೆಗೆ ಬೆಂಗಳೂರು ತಾಲ್ಲೂಕು ಕಾಳೇನಹಳ್ಳಿ ಗ್ರಾಮದ ಬಳಿ ೫ನೇ ಪಟ್ಟೆಬಾಬ್ತು ಸಂ.ನಂ.೯ರಲ್ಲಿ ಎಂಟು ಆಣೆ ಹಾಗೂ ಸ.ನಂ.೫೫ರಲ್ಲಿ ಒಂದು ರೂ ನಾಲ್ಕು ಆಣೆ ಕಂದಾಯದ ತರಿ ಜಮೀನುಗಳಿದ್ದುವು.[16] ಇದಿಷ್ಟು ೧೮೮೪ರ ವೇಳೆಗೆ ಚಿಕ್ಕಪೇಟೆಯ ಮಹಾಂತರ ಮಠಕ್ಕೆ ಸೇರಿದ್ದ ಸ್ಥಿರಾಸ್ತಿಗಳಾಗಿದ್ದುವು.

ಮೇಲ್ಕಂಡ ಶಿವರುದ್ರಮರಿದೇವರು ೧೮೮೬ರಲ್ಲಿ ಅಕಾಲ ಮರಣಕ್ಕೆ ತುತ್ತಾದಾಗ, ಸದರಿ ವಹಿವಾಟುದಾರನಾಗಿದ್ದ ಶಾಂತವೀರಯ್ಯನ ಮತ್ತೊಬ್ಬ ಮಗನಾದ ವೀರಭದ್ರಮರಿದೇವರನ್ನು ಮುಂದಿನ ಪಟ್ಟಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.[17] ಮುಂದಿನ ಹನ್ನೆರಡು ವರ್ಷಗಳ ಕಾಲ ವೀರಭದ್ರದೇವರೇ ಮಹಾಂತರ ಮಠದ ಮಠಾಧೀಶ್ವರರಾಗಿದ್ದರು. ಕೊನೆಗೆ ೧೮೯೮ರ ಸೆಪ್ಟೆಂಬರ್ ಮಾಹೆಯಲ್ಲಿ ಬೆಂಗಳೂರಿನಲ್ಲಿ ವ್ಯಾಪಕವಾಗಿ ಹರಡಿದ್ದ ಪ್ಲೇಗು ರೋಗಕ್ಕೆ ಈ ತಂದೆ ಮಕ್ಕಳಿಬ್ಬರೂ ಬಲಿಯಾದರು.[18] ಇಲ್ಲಿಂದ ಮತ್ತೆ ಪೇಟೆಶೆಟ್ಟಿ ಯಜಮಾನರುಗಳ ನೇರ ಆಡಳಿತ ಪ್ರಾರಂಭವಾಯಿತು. ಇವರ ಆಡಳಿತ ವೈಖರಿಯನ್ನು ಒಪ್ಪದ ಭಕ್ತರು ೧೯೦೦ರಲ್ಲಿ ಸರ್ಕಾರಕ್ಕೆ ಒಂದು ಅರ್ಜಿ ಸಲ್ಲಿಸಿದ್ದರು. ಅದರ ಪ್ರಕಾರ- 'ಮಹಾಂತರಮಠವು ಅನಾಯಕತ್ವದಿಂದ ಅವಸಾನದ ಅಂಚಿಗೆ ಬಂದು ಮುಟ್ಟಿದ್ದು ಗದ್ದುಗೆಯ ನಿತ್ಯ ಪೂಜೆ ಪುನಸ್ಕಾರಗಳು ನಿಂತುಹೋಗಿವೆ. ಧಾರ್ಮಿಕ

ಆಚರಣೆಗಳಿಗೆ ಕುಂದುಂಟಾಗಿರುವುದಲ್ಲದೆ ಮಠದ ಆಸ್ತಿ-ಪಾಸ್ತಿಗಳಿಗೆ ಧಕ್ಕೆಯುಂಟಾಗಿದೆ,' ಎಂಬುದಾಗಿ ಆಪಾದಿಸಲಾಗಿತ್ತು.[19] ಭಕ್ತರ ಅಪೇಕ್ಷೆಯ ಮೇರೆಗೆ ಮುಜರಾಯಿ ಇಲಾಖೆಯು, ತನಗೆ ನೇರವಾಗಿ ಒಳಪಡದ ಸ್ವತಂತ್ರ ಮಠವಾದಾಗ್ಯೂ, ಸಾಮಾಜಿಕ ಹಿತರಕ್ಷಣಾ ದೃಷ್ಟಿಯಿಂದ ಮಠದ ಮೇಲ್ವಿಚಾರಣಾ ಜವಾಬ್ದಾರಿಯನ್ನು ವಹಿಸಿಕೊಂಡಿತ್ತು.[20] ಮುಂದೆ ಸರಕಾರದ ಈ ಕ್ರಮವನ್ನು ವಿರೋಧಿಸಿದ ಪೇಟೆಶೆಟ್ಟಿ ಯಜಮಾನರುಗಳು ಸ್ವತಂತ್ರ ಮಠದಮೇಲೆ ಸರ್ಕಾರವು ಯಾವುದೇ ಕ್ರಮಗಳನ್ನು ಜರುಗಿಸದಂತೆ ಆಕ್ಷೇಪವೆತ್ತಿದರು. ಆಗ ಸರಕಾರವು ಪೇಟೆಶೆಟ್ಟಿ ಯಜಮಾನರುಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವರದೇ ಆಡಳಿತವನ್ನು ಮುಂದುವರೆಸಿ, ವ್ಯವಹಾರಗಳೆಲ್ಲಾ ತಾಲ್ಲೂಕು ಅಮುಲ್ದಾರರ ಅವಗಾಹನೆಗೆ ಬಂದು ಹೋಗುವಂತೆ ಆದೇಶ ನೀಡಿತ್ತು.[21]

ಹೀಗೆ ಮೂರೂವರೆ ದಶಕಗಳ ಕಾಲ ಅನಿರ್ಬಾಧಿತವಾಗಿ ಪೇಟೆಯ ಮುಖಂಡರುಗಳ ಯಜಮಾನಿಕೆಯಲ್ಲೇ ಉಳಿದಿದ್ದ ಮಹಾಂತರ ಮಠಕ್ಕೆ ಕೊನೆಗೂ ಮಠಾಧಿಪತಿಗಳೊಬ್ಬರನ್ನು ಆಯ್ಕೆ ಮಾಡುವ ಸದಾವಕಾಶ ಒದಗಿ ಬಂದಿತು. ಮಠದ ಆಡಳಿತಮಂಡಳಿ ಹಾಗೂ ಭಕ್ತಜನರ ಅಪೇಕ್ಷೆಯ ಮೇರೆಗೆ ಶ್ರೀಮದ್ರಂಭಾಪುರಿ ಪೀಠದ ಶಿವಾನಂದ ಜಗದ್ಗುರುಗಳ ಆದೇಶದಂತೆ ದಿನಾಂಕ: ೨೩.೩.೧೯೩೪ರಂದು ಗಂಗಾಧರ ಶಿವಾಚಾರ್ಯ ಸ್ವಾಮಿಗಳನ್ನು ಮಹಾಂತರ ಮಠದ ಅಧಿಪತಿಗಳನ್ನಾಗಿ ಆಯ್ಕೆ ಮಾಡಲಾಯಿತು.[22] ಮೇಲ್ಕಂಡ ಆದೇಶದ ಪ್ರಕಾರ ಗಂಗಾಧರ ಶಿವಾಚಾರ್ಯರು ಮುಂದೆ ಚಿಕ್ಕಪೇಟೆಯ ಮಹಾಂತರಮಠದ ಜೊತೆಗೆ, ಬೆಂಗಳೂರಿಗೆ ಹೊಂದಿಕೊಂಡಂತಿದ್ದ ವಿಭೂತಿಪುರದ ವೀರಸಿಂಹಾಸನದ ಮಠಕ್ಕೂ ಮಠಾಧೀಶರಾಗಿ ಮುಂದುವರೆಯಬೇಕಾಯಿತು. ಈ ವೇಳೆಗಾಗಲೇ ಆಡಳಿತ ಮಂಡಲಿಯವರು ಮಠದಲ್ಲಿ ಅಭಿವೃದ್ಧಿಪಡಿಸಿದ್ದ ಸಂಸ್ಕೃತ ಪಾಠಶಾಲೆ ಹಾಗೂ ಉಚಿತ ವಿದ್ಯಾರ್ಥಿ ನಿಲಯಗಳ ಪುರೋಭಿವೃದ್ಧಿಗಾಗಿ ಭಕ್ತರಿಂದ ಅನೇಕ ದಾನಧರ್ಮಗಳು ಪ್ರಾಪ್ತವಾಗಿದ್ದುವು. ತತ್ಫಲವಾಗಿ ಮಹಾಂತರ ಮಠದ ಆಶ್ರಯದಲ್ಲಿ ೧೯೩೨ರಲ್ಲಿ 'ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಫ್ರೀ ಬೋರ್ಡಿಂಗ್ ಹೋಮ್' ಎಂಬ ಉಚಿತ ವಿದ್ಯಾರ್ಥಿ ನಿಲಯ ಪ್ರಾರಂಭವಾಗಿತ್ತು.[23] ಮುಂದೆ ಗಂಗಾಧರ ಶಿವಾಚಾರ್ಯರು ತಮ್ಮ ಹನ್ನೆರಡು ವರ್ಷಗಳ ಮಠಾಧಿಪತ್ಯದಲ್ಲಿ, ಮಹಾಂತರಮಠವನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ಯುವಲ್ಲಿ ಯಶಸ್ವಿಯಾಗಿದ್ದರು. ಈ ಮಧ್ಯೆ ಶಿವಾನಂದ ಜಗದ್ಗುರುಗಳು ತಮ್ಮ ರಂಭಾಪುರಿ (ಬಾಳೆಹೊನ್ನೂರು) ಪೀಠಕ್ಕೆ ಮುಂದಿನ ಉತ್ತರಾಧಿಕಾರಿಗಳನ್ನಾಗಿ ಬೆಂಗಳೂರಿನ ಮಹಾಂತರಮಠದ ಗಂಗಾಧರ ಶಿವಾಚಾರ್ಯರನ್ನೇ ಆಯ್ಕೆ ಮಾಡಿಕೊಂಡು ಸಂಸ್ಥಾನಾಧಿಪತಿಗಳಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ ಅನುಮೋದನೆ ಕೋರಿದ್ದರು.[24] ಮಹಾರಾಜ ಸರ್ಕಾರವು ದಿನಾಂಕ : ೧೬.೭.೧೯೪೬ರಲ್ಲಿ ಜಗದ್ಗುರುಗಳ ಆಯ್ಕೆಯನ್ನು ಪುರಸ್ಕರಿಸಿತು.[25] ನಂತರ ದಿನಾಂಕ: ೨.೮.೧೯೪೭ರಂದು ಗಂಗಾಧರ ಶಿವಾಚಾರ್ಯರು ವಿದ್ಯುಕ್ತವಾಗಿ ರಂಭಾಪುರಿ ವೀರಸಿಂಹಾಸನದ ಪಟ್ಟಾಧಿಕಾರವನ್ನು ಸ್ವೀಕರಿಸಿದರು.

ಇತ್ತ ಜಗದ್ಗುರುಗಳು ಮಹಾಂತರಮಠದ ಹಾಗೂ ವಿಭೂತಿಪುರ ಮಠದ ಆಡಳಿತ ನಿರ್ವಹಣೆಯನ್ನು ಮುಂದಿನ ಮಠಾಧಿಪತಿಗಳ ಆಯ್ಕೆಯಾಗುವವರೆಗೂ, ಮೊದಲಿದ್ದ ಆಡಳಿತಮಂಡಳಿಯವರಿಗೆ ವಹಿಸಿಕೊಟ್ಟಿದ್ದರು[26]. ಮುಂದೆ ಈ ಮಠವು ಮತ್ತೊಬ್ಬ ಮಠಾಧಿಪತಿಗಳನ್ನು ಪಡೆಯಲಿಲ್ಲವಾದರೂ, ಆಡಳಿತಮಂಡಳಿಯವರ ಅಧಿಪತ್ಯದಲ್ಲೇ ಮಠದ ಉಚಿತ ವಿದ್ಯಾರ್ಥಿನಿಲಯ ಮತ್ತಿತರ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ನಿರಾತಂಕವಾಗಿ ಮುಂದುವರೆದುದೇ ಅಲ್ಲದೆ, ಮಠದ ಆಸ್ತಿ-ಪಾಸ್ತಿಗಳೂ ಅಭಿವೃದ್ಧಿಯಾಗಿರುವುದು ಒಂದು ಹೆಮ್ಮೆಯ ಸಂಗತಿ. ಸದ್ಯಕ್ಕೆ ನಗರ ಭೂಮಾಪನ ಇಲಾಖಾ ದಾಖಲಾತಿ ಲೆಕ್ಕಗಳ ಪ್ರಕಾರ, ಮಹಾಂತರ ಮಠವು ಗಂಗಾಧರ ಶಿವಾಚಾರ್ಯರ ಹೆಸರಿನಲ್ಲಿ ೧೧೦೮-೯ ಚದರ ಗಜ ವಿಸ್ತೀರ್ಣದ ಆಸ್ತಿಯುಳ್ಳದ್ದಾಗಿದೆ.[27] ಇದರ ಜೊತೆಗೆ ಮಹಾಂತರ ಮಠದ ಹೆಸರಿನಲ್ಲಿ ಫೈನಲ್ ಸಿಟಿ ಸರ್ವೆ ನಂ : ೩೬೭೭ರಲ್ಲಿ ೨೮ ಚದರ ಗಜ; ನಂ: ೩೮೮೫ರಲ್ಲಿ ೫೨ ಚದರ ಗಜ; ನಂ: ೩೮೮೬ರಲ್ಲಿ ೨೮.೯. ಚದರಗಜ; ನಂ: ೪೭೧೫ರಲ್ಲಿ ೧೨೨.೫ ಚದರಗಜ; ನಂ : ೪೭೧೬ರಲ್ಲಿ ೭೧.೩ ಚದರಗಜ ವಿಸ್ತೀರ್ಣದ ಆಸ್ತಿಗಳಿವೆ.[28]

**ಮಠದ ಗುರುಪರಂಪರೆ :**

೧. ಕೆಂಪನಂಜೇದೇವರು. ಸು. ೧೮೧೦-೧೮೭೬.

೨. ಶಿವರುದ್ರದೇವರು. ೧೮೮೪-೧೮೮೬.

೩. ವೀರಭದ್ರದೇವರು. ೧೮೮೬-೧೮೯೮.

೪. ಗಂಗಾಧರಶಿವಾಚಾರ್ಯರು. ೧೯೩೪-೧೯೪೭.

---

**ಅಡಿಟಿಪ್ಪಣಿಗಳು**

1. Muzrai File No; 76/1911-12. Sl.No : 1-2. p. 1,2.
2. ಬೆಂಗಳೂರು ಮುನಿಸಿಪಲ್ ಕೌನ್ಸಿಲ್‌ನವರು ೧೯೧೯-೨೦ರಲ್ಲಿ ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆಯನ್ನು ನಿರ್ಮಿಸಿದರು. ಆಗ ಮಹಾಂತರಮಠದ ಪೂರ್ವ ಭಾಗದ ೩ ಮತ್ತು ೪ನೇ ನಂಬರಿನ ನಿವೇಶನಗಳು ಇದಕ್ಕೆ ಸೇರ್ಪಡೆಯಾಗಿ ಒಂದು ಸಾವಿರ ರೂಗಳ ಪರಿಹಾರವೂ ಮಠಕ್ಕೆ ಲಭ್ಯವಾಗಿತ್ತು. (ಸೂಚನಾ ಪತ್ರ ಸಂ : T268 Dt. 29.3.1923. ಮಹಾಂತರಮಠ.)
3. ಡಾ। ಜ.ಚ.ನಿ. ರೇಣುಕಗೀತೆ. ನಮ್ಮ ಮಾತು. ಪು. ೧೩.
4. ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು. ೬೯೧.
5. ಅದೇ.
6. ಅದೇ.
7. ವಚನ ಪರಿಭಾಷಾ ಕೋಶ. ಸಂ-೧೫. ಪು. ೧೬೫.
8. ಅದೇ. ಪು. ೧೬೫, ೧೬೬.
9. ಅಲ್ಲಮನ ವಚನಚಂದ್ರಿಕೆ. ಸಂ : ಡಾ। ಎಲ್. ಬಸವರಾಜು. ಪು. ೧೯೬ ವಚನ. ೭೬೧.
10. ಅಖಂಡೇಶ್ವರರ ವಚನ. ೩೦೦. ಪು. ೭೬.
11. ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೭೫-೪೭೭.
12. ಕನ್ನಡ ಹಸ್ತಪ್ರತಿಗಳ ವರ್ಣನಾಸೂಚಿ. ಕನ್ನಡ ಅಧ್ಯಯನ ಸಂಸ್ಥೆ. ಮೈಸೂರು ವಿಶ್ವವಿದ್ಯಾಲಯ. ಪು. ೨೫.
13. Muzrai File No; 76/1911-12. Sl.No : 1-3. P.22.
14. ಬೆಂಗಳೂರಿನ ದೊಡ್ಡಪೇಟೆ, ಅರಳೆಪೇಟೆ ಮತ್ತು ಮಾಮೂಲ್‌ಪೇಟೆಯ ಶೆಟ್ಟಿ ಯಜಮಾನರುಗಳಾದ ಗುರುಬಸಪ್ಪಶೆಟ್ಟಿ, ಯಜಮಾನ್ ರುದ್ರಪ್ಪ, ವೀರಭದ್ರಪ್ಪಶೆಟ್ಟಿ, ಯಜಮಾನ್‌ಬಸಪ್ಪ, ಚನ್ನವೀರಶೆಟ್ಟಿ ಮುಂತಾದವರು.
15. ಒಂದುರೂ, ಛಾಪಾಕಾಗದ. ರಿ. ನಂ : ೭೧೯. ವಾಲ್ಯುಂ-೬೭. ಪು. ೪೧೬-೪೧೯. ದಿ : ೨೮.೭.೧೮೮೪. ಮಹಾಂತರಮಠ.
16. ಅದೇ. ಷೆಡ್ಯೂಲ್ ಭಾಗ.
17. Muzrai File No; 76/1911-12. Sl.No : 1-3. P.22.
18. ಮೈಸೂರು ಸಂಸ್ಥಾನದ ಮುಜರಾಯಿ ಇಲಾಖೆಗೆ ಬೆಂಗಳೂರಿನ ಮೂರು ಪೇಟೆ ಶೆಟ್ಟಿ ಯಜಮಾನರುಗಳು ಬರೆದು ಕೊಂಡ ಅರ್ಜಿ. ದಿ : ೧೪.೮.೧೯೧೧. ಪು. ೧. ಮಹಾಂತರಮಠ.
19. Muzrai File No; 76/1911-12. Sl.No: 1-3. P.24,25.
20. Ibid.
21. Deputy Commissioner's Order No : 7/1911. Bangalore. dt. 22 July 1911. p. 4.
22. ಹದಿನಾರೂವರೆ ರೂ ಛಾಪಾಕಾಗದ. ರಿ. ನಂ : ೨೩೯೮. ವಾ. ೨೫೯. ಪು. ೧೪೮-೧೫೫. ದಿ. ೩.೫.೧೯೩೪. ಮಹಾಂತರ ಮಠ.
23. Registered Record No : 438/1993-94. vol. 227. P. 38-52. dt. 21.1.1994. ಮಹಾಂತರಮಠ.
24. ಮಹಾರಾಜರಿಗೆ ಜಗದ್ಗುರುಗಳ ನಿರೂಪ. ಸಂ : ೫೨೭. ದಿ : ೧೫.೧೨.೧೯೪೫.
25. G.O. No: R. 526 - 38/Muz 142-45-10. dt. 16th July. 1946.
26. ಇಪ್ಪತ್ತು ರೂಗಳ ಛಾಪಾಕಾಗದ. Reg. No : 406 B-1. vol. 881. p. 38-48. dt. 2.8.1947 (ಈ ಸಂದರ್ಭದಲ್ಲಿ ಮೇಲ್ಕಂಡ ಮಠಗಳ ಟ್ರಸ್ಟಿಗಳಾಗಿದ್ದವರು-ಧರ್ಮಪ್ರಕಾಶ್ ಎಸ್. ರುದ್ರಯ್ಯ, ಅತ್ತಿಬೆಲೆ ಸಾಹುಕಾರ್ ಎಸ್. ಶರಭಣ್ಣ, ದೇಶದ ಬಿ. ರುದ್ರಪ್ಪಶೆಟ್ಟಿ, ಡಿ.ಬಿ.ಎಸ್. ಗುರುಸಿದ್ದಪ್ಪ ಶೆಟ್ಟಿ, ಆರ್.ಬಿ.ಲಿಂಗಾರಾಧ್ಯ, ತಾಳಕುಂಟೆ ಅಪ್ಪಾಜಪ್ಪ ಹಾಗೂ ಜಿ. ಮರಿಗಂಗಪ್ಪ ಈ ಏಳು ಮಂದಿ.)
27. ನಗರ ಭೂದಾಖಲೆ ಇಲಾಖೆ. ವಿಭಾಗ ಸಂ: ೨. ಸ್ಥಳೀಯ ಕ್ಷೇತ್ರದ ಸಂಖ್ಯೆ: ೮೧.ಎ. ಚಿಕ್ಕಪೇಟೆ ವಿಭಾಗ. ಕ್ರ.ಸಂ. : ೨೩೮೦. (ವಾಲ್ಯುಂ- ೩)
28. ಅದೇ. ಮೂರು ಮತ್ತು ನಾಲ್ಕನೇವಾಲ್ಯುಂ. ಕ್ರ.ಸಂಖ್ಯೆ. ೩೬೭೭, ೩೮೮೫, ೩೮೮೬, ೪೭೧೫, ಮತ್ತು ೪೭೧೬.

---

## ೩. ವಿಭೂತಿಪುರದ ಮಠ

ಹಿಂದೆ 'ಪುರ' ಎಂದು ಅಂತ್ಯವಾಗಿ ಹೆಸರುಳ್ಳ ಗ್ರಾಮಗಳ ಸಂಖ್ಯೆ ಬೆಂಗಳೂರಿನ ಸುತ್ತಮುತ್ತ ಅಪಾರವಾಗಿದ್ದವು. ಇಪ್ಪತ್ತನೆಯ ಶತಮಾನದ ಆರಂಭದ ವೇಳೆಗೆ ಬೆಂಗಳೂರು ತಾಲ್ಲೂಕು ಒಂದರಲ್ಲೆ ಎಪ್ಪತ್ತ ನಾಲ್ಕು ಪುರಗಳಿದ್ದುವು.[1] ಹದಿನೇಳನೆಯ ಶತಮಾನಕ್ಕೂ ಮುಂಚೆ ವಿಜಯನಗರದ ಮಾಂಡಲಿಕ ಅರಸುಗಳ ಕಾಲದಲ್ಲಿ, ವೀರಶೈವರಿಗೆ ಕೊಡಲ್ಪಡುತ್ತಿದ್ದ 'ಉಂಬಳಿ'[2] ಗ್ರಾಮಗಳನ್ನು ''ಪುರ''ವೆಂದೇ ಗುರುತಿಸ ಲಾಗುತ್ತಿತ್ತು[3]. ಬಹುಶಃ ಈ ಐತಿಹಾಸಿಕ ಹಿನ್ನೆಲೆಯಲ್ಲಿ, ಬೆಂಗಳೂರಿನ ಸುತ್ತಮುತ್ತ, ಯಲಹಂಕದ ಪ್ರಭುಗಳು ಹಾಗೂ ಅವರಿಗಿಂತಲೂ ಹಿಂದಿನಿಂದ ಇಂತಹ ಅನೇಕ ಪುರಗಳು ಹುಟ್ಟಿಕೊಂಡಿರುವ ಸಾಧ್ಯತೆಯುಂಟು. ಅಂತಹ ಪುರಗಳಲ್ಲಿ ಈಗಿನ ನಗರದ ಪೂರ್ವಭಾಗದ ವಿಮಾನ ಕಾರ್ಖಾನೆಗೆ ಸಮೀಪವಿರುವ 'ವಿಭೂತಿಪುರ'ವೂ ಒಂದು.

ಹಳೆಯ ಬೆಂಗಳೂರು ಪಟ್ಟಣದಿಂದ ವಿಭೂತಿಪುರವು ಸಾಕಷ್ಟು ಹೊರಭಾಗದಲ್ಲಿರುವ ಪುಟ್ಟಗ್ರಾಮ. ಇಲ್ಲಿ 'ಪಂಚಪೀಠ'[4]ಗಳಲ್ಲಿ ಒಂದಾದ ರಂಭಾಪುರಿ (ವೀರಸಿಂಹಾಸನದ) ಶಾಖೆಯ ಪಟ್ಟದ ಮಠವೊಂದಿದೆ. ಮಠದ ದಾಖಲೆಗಳಲ್ಲಿ ಇದನ್ನು ''ವಿಭೂತಿಪುರದ ವೀರಸಿಂಹಾಸನ''ವೆಂದೇ ಗುರುತಿಸಲಾಗಿದೆ.[5] ಹಿಂದೆ ಈ ಮಠವನ್ನು ''ಉಪಪಂಚಪೀಠ''ವೆಂದೂ ಕರೆಯುತ್ತಿದ್ದುದಾಗಿ ತಿಳಿದುಬರುತ್ತದೆ.[6] ವಿಭೂತಿಪುರವನ್ನು ಹಿಂದೆ 'ಭಸಿತಪುರ'[7] 'ಪಚ್ಚೆಪುರ'[8] ಎಂದೆಲ್ಲಾ ಕರೆಯಲಾಗುತ್ತಿತ್ತು. ಒಂದು ಕಾಲಕ್ಕೆ ಇಲ್ಲಿ ಅಣಿಮಾದಿ ಅಷ್ಟಸಿದ್ಧಿ[9]ಗಳನ್ನು ಗಳಿಸಿದ್ದ ಮಹಾ ಯತಿವರೇಣ್ಯರೂ, ವಿಭೂತಿಪುರುಷರೂ ಇದ್ದುದಕ್ಕಾಗಿಯೇ ಈ ಭಾಗಕ್ಕೆ ''ವಿಭೂತಿಪುರ''ವೆಂದು ಹೆಸರು ಬಂದುದಾಗಿ ಹೇಳುವುದುಂಟು.[10] ಇನ್ನೊಂದು ದಂತ ಕಥೆಯ ಪ್ರಕಾರ - 'ಒಮ್ಮೆ ಇಲ್ಲಿನ ಮಠಾಧಿಪತಿಗಳೊಬ್ಬರು ಹಿಂದೆ ವಿಭೂತಿ ಕಾಯಕದವರಾಗಿದ್ದರಂತೆ. ಒಂದು ದಿನ ಅವರು ಮಧ್ಯಾಹ್ನದವರೆಗೂ ತಮ್ಮ ಕಾಯಕವನ್ನು ಮಾಡಿ ಅನಂತರ ಸ್ನಾನ ಪೂಜಾದಿಗಳಿಗೆ ನಿರ್ಗಮಿಸಿದ್ದರಂತೆ. ಹೊತ್ತಿಳಿಯುವ ಸಮಯವಾಗಿ ಪೂಜೆಯಿಂದ ಹೊರಬಂದಾಗ ಭಾರಿ ಮಳೆಯೇ ಬಂದು ಬಿಟ್ಟಿದ್ದಿತಂತೆ. ಇತ್ತ ಮಾಡಿಟ್ಟಿದ್ದ ವಿಭೂತಿಯ ಗಟ್ಟಿಗಳೆಲ್ಲಾ ಕರಗಿ ಹೋಗಿರಬೇಕೆಂದು ಗುರುಗಳು ಬಂದು ನೋಡಿದಾಗ, ಅವು ತೊಳೆದ ಪುತ್ಥಳಿಯಂತೆ ಹಾಗೇ ಕಂಗೊಳಿಸುತ್ತಿದ್ದವಂತೆ. ಅಂದಿನಿಂದಲೂ ಈ ಸ್ಥಳಕ್ಕೆ 'ವಿಭೂತಿಪುರ'ವೆಂಬ ಹೆಸರು ಬಂದುದಾಗಿ ಹೇಳುವುದುಂಟು.'[11]

ವಿಭೂತಿಪುರದ ಮಠದ ಆವರಣಕ್ಕೆ ಹೊಂದಿಕೊಂಡಂತೆ ಒಂದು ತಮಿಳು ಶಾಸನವಿದೆ.[12] ಈ ಶಾಸನಭಾಗದ ಮುಖ್ಯಾಂಶಗಳೇನೆಂದರೆ ''ಹೊಯ್ಸಳರ ವೀರ ಬಲ್ಲಾಳನ[13] ಆಳ್ವಿಕೆ (ಕ್ರಿ.ಶ. ೧೧೭೭-೧೨೨೦)ಯಲ್ಲಿ ಮಾಸಂದಿನಾಡಿಗೆ ಒಳಪಟ್ಟ ಚಂಬಿದೇವರು, ವಿಲ್ಲಗಾಮುಂಡರ್, ಚಂದಗಾಮುಂಡರ್, ವೆಪ್ಪೂರಾನ್ ಇವರುಗಳೆಲ್ಲಾ ಸೇರಿ ಪ್ಲವಂಗ ಸಂವತ್ಸರ (ಕ್ರಿ.ಶ. ೧೧೮೭ರಲ್ಲಿ)ದಲ್ಲಿ ವಾಚ್ಚಿದೇವರಪುರವೆಂಬ ಊರನ್ನು ಕಟ್ಟಿ ಆ ಊರಿನ ಸುತ್ತಮುತ್ತಲೂ ಇದ್ದ ತೋಟ,ಗದ್ದೆ, ಹೊಲಗಳನ್ನೆಲ್ಲಾ ವಾಚ್ಚಿದೇವರು ಎಂಬುವರಿಗೆ ಸರ್ವಮಾನ್ಯವಾಗಿ ನೀಡಿದ್ದರು.'' ಅಂದರೆ ಕ್ರಿ.ಶ. ೧೧೮೭ರ ವೇಳೆಗಾಗಲೇ ಈಗಿನ ವಿಭೂತಿಪುರದ ಅಸ್ತಿತ್ವವಿದ್ದು, ಆಗ ಈ ಪುರವನ್ನು ವಾಚ್ಚಿದೇವರಪುರವೆಂದೇ ಕರೆಯಲಾಗುತ್ತಿತ್ತು. ಜೊತೆಗೆ ಈ ಪುರವು ಶೈವಗುರುವೊಬ್ಬನ ಗೌರವಾನ್ವಿತ ಧಾರ್ಮಿಕ ಕೇಂದ್ರವಾಗಿದ್ದುದು ಸ್ಪಷ್ಟವಾಗಿದೆ. ಇದೇ ಕೇಂದ್ರವು ಮುಂದೆ ವೀರಶೈವ ಗುರುಗಳ ಆವಾಸ ಸ್ಥಾನವಾಗಿ ಕಾಲಾನಂತರದಲ್ಲಿ ಮಾರ್ಪಾಟಾಗಿ ವಿಭೂತಿಪುರವೆಂಬ ನೂತನ ಅಭಿಧಾನವನ್ನು ಪಡೆದಿರುವಂತಿದೆ.[14]

ಮಠದ ಈಗಿನ ಗುರುಗಳಾಗಿರುವ ಪಟ್ಟದ ಸುವರ್ಣಲಿಂಗ ಶಿವಾಚಾರ್ಯರ ಹೇಳಿಕೆಯ ಪ್ರಕಾರ ''ವಿಭೂತಿಪುರದ ಮಠವು ಹೊಯ್ಸಳರ ವೀರಬಲ್ಲಾಳ (ಇಮ್ಮಡಿ ಬಲ್ಲಾಳ)ನ ಕಾಲ (ಕ್ರಿ.ಶ. ೧೧೭೭-೧೨೨೦) ದಲ್ಲಿ ಪ್ರಾರಂಭವಾಯಿತು. ತಮಿಳುನಾಡಿನ ಗಡಿಯ ಭಾಗದ ಸೂಳಿಗಿರಿ ಮತ್ತು ಮಾರಂಡಹಳ್ಳಿಯ ನಾಯಕರುಗಳು ತಮ್ಮ ಮಠಕ್ಕೆ ಹಿಂದೆ ಸಾಕಷ್ಟು ದಾನಧರ್ಮಗಳನ್ನು ನೀಡಿದ್ದರು. ತತ್ಫಲವಾಗಿ ಮಠದ ಹೆಸರಿಗೆ ವಿಭೂತಿಪುರ ಜೋಡಿಗ್ರಾಮದ ೫೦೦ ಎಕರೆಗಳಷ್ಟು ಜಮೀನುಗಳು ಇನಾಮಾಗಿ ಬಂದಿತ್ತು''

ಎನ್ನುತ್ತಾರೆ.[15] ಈ ಮಾತುಗಳಿಗೆ ಪೂರಕವಾಗಿ ೧೯೩೨ರ ಮಠದ ದಾಖಲೆಯೊಂದರಲ್ಲಿ ನಮೂದಾಗಿರುವಂತೆ, ಸದರಿ ಮಠಕ್ಕೆ ಹಿಂದೆ ಬಾಗಲೂರು, ಸೂಳಗೆರೆ, ಆನೆಕಲ್ಲು, ಮಾರಂಡಹಳ್ಳಿ ಇವರೇ ಮುಂತಾದ ಪಾಳೆಯಗಾರರು ಉದಾರ ಭೂದಾನ ನೀಡಿದ್ದ ಎಂಟು ಸನ್ನದುಗಳಿದ್ದ ವಿಚಾರ ತಿಳಿದು ಬರುತ್ತದೆ.[16]

ಸಿಕ್ಕಿರುವ ದಾಖಲೆಗಳ ಪ್ರಕಾರ ೧೮೭೪ರ ವೇಳೆಗೆ ಈ ಮಠದಲ್ಲಿ ಪಟ್ಟದ ಗುರುಸಿದ್ಧಬಸವರಾಜದೇವರು ಮಠಾಧಿಪತಿಗಳಾಗಿದ್ದರು. ಇವರನ್ನು "ಚಿತ್ರದುರ್ಗದ ಮುರಿಗಾ ಸಂಸ್ಥಾನದ ಪರವಾಗಿ ಬೆಂಗಳೂರಿನ ತಿಪ್ಪಶೆಟ್ಟಿ ಮಠದಲ್ಲಿ ಮಹಾಂತಯ್ಯ ಎಂಬ ವಟುವಿಗೆ ಚರಂತಿಗೆಯನ್ನು ಮಾಡಿಸುವಂತೆ ಕೇಳಲಾಗಿತ್ತು. ಆತನ ಪೂರ್ವಾಪರ ಇತಿ ವೃತ್ತಾಂತಗಳು ಸರಿಯಿಲ್ಲದ ಕಾರಣ ತಾವು ಆತನಿಗೆ ಚರಂತಿಗೆಯನ್ನು ಮಾಡಿಸಲಾಗದೆಂದು" ಇವರು ಉತ್ತರ ನೀಡಿದ್ದರು.[17] ಈ ಗುರುಸಿದ್ಧಬಸವರಾಜದೇವರನ್ನು ಕೆಲವು ಸ್ವರ ವಚನಗಳಲ್ಲಿ "ವಿಭೂತಿಪುರವಾಸ ಶ್ರೀಗುರುಸಿದ್ಧೇಶ" ಎಂಬುದಾಗಿ ಸ್ತುತಿಸಲಾಗಿದೆ[18] ಎಂದು ತಿಳಿದು ಬರುತ್ತದೆ.

ಮುಂದೆ ೧೯೦೭ರ ವೇಳೆಗೆ ಪಟ್ಟದ ಸಿದ್ಧವೃಷಭರಾಜ ಸ್ವಾಮಿಯವರು ಈ ಮಠದ ಅಧಿಪತಿಗಳಾಗಿದ್ದರು.[19] ಆಗ ಮಠದ ಹೆಸರಿಗೆ ವಿಸ್ತಾರವಾದ ಸಾಕಷ್ಟು ಇನಾಮು ಜಮೀನುಗಳಿದ್ದುವು. ಇವುಗಳಲ್ಲಿ ಐದು ಕೊಳಗದ ತರಿಭೂಮಿಯನ್ನು ಉಳಿದು, ಮಿಕ್ಕೆಲ್ಲಾ ಜಮೀನುಗಳೂ ಬಂಜರು ಭೂಮಿಗಳಾಗಿದ್ದು ವ್ಯವಸಾಯಕ್ಕೆ ನಿಷ್ಪ್ರಯೋಜಕವಾಗಿದ್ದುವು. ಇದೇ ಸಂದರ್ಭಕ್ಕೆ ಮಠದ ಆವರಣದಲ್ಲಿದ್ದ ಎಪ್ಪತ್ತಾರು ದೇವರುಗಳಿಗೆ ನಿತ್ಯಪಡಿತರ ದೀಪಾರಾಧನೆ ಹಾಗೂ ಮತ್ತಿತರ ಧರ್ಮಕಾರ್ಯಗಳನ್ನು ನಡೆಯಿಸುವುದು ಕಷ್ಟವಾಗತೊಡಗಿತ್ತು. ಈ ಹಿನ್ನೆಲೆಯಲ್ಲಿ ಸದರಿ ಸ್ವಾಮಿಗಳು ಸರ್ಕಾರಕ್ಕೆ ಒಂದು ಮನವಿಯನ್ನು ಸಲ್ಲಿಸಿ, ಮಠದ ಹೆಸರಿಗಿರುವ ಅನುಪಯುಕ್ತವಾದ ಇನಾಮು ಜಮೀನುಗಳನ್ನು ಸರ್ಕಾರವೇ ವಹಿಸಿಕೊಂಡು, ಅದರ ಬದಲಿಗೆ ಧನಸಹಾಯ (Cash grant) ನೀಡುವಂತೆ ಕೋರಿಕೆ ಸಲ್ಲಿಸಿದ್ದರು.[20] ಸರ್ಕಾರ ಇದರ ಸೂಕ್ತ ಪರಿಶೀಲನೆಗಾಗಿ ಅವಕಾಶ ನೀಡಿತ್ತಾದರೂ ಮುಂದಿನ ಬೆಳವಣಿಗೆಗಳನ್ನು ಕುರಿತಾದ ಮಾಹಿತಿಗಳು ಲಭ್ಯವಾಗಿಲ್ಲ.

ಅನಂತರ ಸಿದ್ಧವೃಷಭರಾಜಸ್ವಾಮಿಗಳು ೧೯೧೮ರ ನವೆಂಬರ್ ೩ ರಂದು, ತಮ್ಮ ಮೂಲಪೀಠದ (ಬಾಳೆಹೊನ್ನೂರು) ಅಪ್ಪಣೆಯ ಮೇರೆಗೆ ಹಾಗೂ ಬೆಂಗಳೂರಿನ ಪೇಟೆಶೆಟ್ಟಿ ಯಜಮಾನರುಗಳ ಅನುಮತಿಯ ಮೇರೆಗೆ ತಮ್ಮ ಶಿಷ್ಯರಾಗಿದ್ದ ಶಿವರುದ್ರಸ್ವಾಮಿಗಳನ್ನು ಮುಂದಿನ ಮಠಾಧಿಪತಿಯನ್ನಾಗಿ ಆಯ್ಕೆ ಮಾಡಿಕೊಂಡಿದ್ದರು. ಸದರಿ ಶಿವರುದ್ರಸ್ವಾಮಿಗಳಿಗೆ ಮುಂದೆ ೧೯೨೭ ಜೂನ್ ೨೭ ರಂದು ಶ್ರೀಮಠದ ಪಟ್ಟಾಧಿಕಾರವನ್ನು ವಹಿಸಿ ಕೊಡಲಾಗಿತ್ತು.[21] ಮೇಲ್ಕಂಡ ಶಿವರುದ್ರಸ್ವಾಮಿಗಳು ಮುಂದೆ ಸ್ವಯಿಚ್ಛೆಯಿಂದ ೧೯೩೨ರ ಜುಲೈ ೨೪ರಂದು ಮೂಲಪೀಠದವರ ಅನುಮತಿಯನ್ನು ಕೋರಿ ತಮ್ಮ ಮಠಾಧಿಪತ್ಯವನ್ನು ತೊರೆದು ಗೃಹಸ್ಥಾಶ್ರಮಿಗಳಾಗಿ ಬಿಟ್ಟರು.[22] ಈ ಸಂದರ್ಭದಲ್ಲಿ ಪೀಠದವರ ಕಡೆಯಿಂದ ಸದರಿ ಶಿವರುದ್ರ ಸ್ವಾಮಿಗಳಿಗೆ ತಮ್ಮ ಮುಂದಿನ ಗೃಹಸ್ಥ ಬದುಕಿಗಾಗಿ ಎಂಟುನೂರು ರೂಗಳ ಆಶೀರ್ವಾದವೂ ಪ್ರಾಪ್ತವಾಗಿತ್ತು.[23]

೧೯೩೨-೩೩ನೇ ಸಾಲಿನಲ್ಲಿ ಸದರಿ ವಿಭೂತಿಪುರದ ವೀರಸಿಂಹಾಸನದ ಮಠದ ಹೆಸರಿಗಿದ್ದ ಆಸ್ತಿಪಾಸ್ತಿಗಳ ವಿವರ ಈ ಕೆಳಕಂಡಂತಿದೆ. ಬೆಂಗಳೂರು ತಾಲ್ಲೂಕು ಕೃಷ್ಣರಾಜಪುರ ಹೋಬಳಿ, ವಿಭೂತಿಪುರ ಗ್ರಾಮದಲ್ಲಿ ಮಠದ ಹೆಸರಿಗಿದ್ದ ಜಮೀನುಗಳ ವಿವರ....

| ಕ್ರಮಸಂಖ್ಯೆ. | ಸರ್ವೆನಂ. | ಖುಷ್ಕಿ. | ತರಿ. |
|---|---|---|---|
| | | ಎ. ಗುಂ. | ಎ. ಗುಂ. |
| ೧. | ೧೨೧. | ೦. ೩೩. | ೦. ೨೬. |
| ೨. | ೧೨೩. | ೬. ೦೧. | – |
| ೩. | ೧೨೪. | ೫. ೦೭. | – |
| ೪. | ೧೮೨. | ೨. ೩೮. | – |
| ೫. | ೧೮೩. | ೪. ೦೬. | – |
| ೬. | ೧೮೪. | ೫. ೦೩. | – |
| ೭. | ೧೯೭. | – | ೨. ೦೭. |
| ೮. | ೧೯೮. | ೬. ೦೬. | ೦. ೦೮. |
| ೯. | ೧೯೯. | ೫. ೦೪. | – |
| ೧೦. | ೨೦೦. | ೨. ೩೮. | – |
| ೧೧. | ೨೦೧. | ೩. ೩೩. | – |
| ಒಟ್ಟು | . | ೪೨.೦೯. | ೩.೦೧. |

ಇದೇ ತಾಲ್ಲೂಕಿನ ವರ್ತೂರು ಹೋಬಳಿ ಅಮಾನಿ ಬೆಳ್ಳಂದೂರು ಖಾನೆಯಲ್ಲಿ ಇದ್ದ ಜಮೀನುಗಳು-

| ಕ್ರಮಸಂಖ್ಯೆ. | ಸರ್ವೆ ನಂ. | ಖುಷ್ಕಿ. | ತರಿ. |
|---|---|---|---|
| | | ಎ. ಗುಂ. | ಎ. ಗುಂ. |
| ೧. | ೨೦೨. | ೩. ೧೪. | – |
| ೨. | ೪. | ೩. ೧೭. | – |
| ೩. | ೩೪. | ೦. ೨೭. | – |
| ೪. | ೧೯೪. | – | ೦. ೨೨. |
| ೫. | ೧೬೬. | – | ೩. ೨೪. |
| | ಒಟ್ಟು | ೭. ೧೮. | ೪. ೦೬. |

ಹೀಗೆ ಮೇಲ್ಕಂಡ ಎರಡೂ ಗ್ರಾಮದಾಖಲೆಗಳ ಪರವಾಗಿ ಹದಿನಾರು ಐಟಂಗಳಿಂದ ಒಟ್ಟು ನಲವತ್ತೊಂಬತ್ತು ಎಕರೆ ಇಪ್ಪತ್ತೇಳು ಗುಂಟೆ ಖುಷ್ಕಿ ಜಮೀನುಗಳೂ; ಏಳು ಎಕರೆ ಏಳುಗುಂಟೆ ತರಿ ಜಮೀನುಗಳೂ ಇದ್ದುವು. ಆ ಕಾಲಕ್ಕೆ ಈ ಜಮೀನುಗಳಿಗಾಗಿ ಒಟ್ಟು ೧೧೩ ರೂ ೧೧ ಆಣೆ ಕಂದಾಯವನ್ನು ಕಟ್ಟಲಾಗುತ್ತಿತ್ತು. ಇದರ ಜೊತೆಗೆ ಒಂದುನೂರಾ ಅರವತ್ತುಮೂರು ಅಂಕಣಗಳ ಕಲ್ಲಿನಮಠ, ಇನ್ನುಳಿದ ಚಿಲ್ಲರೆ ಅಂಕಣಗಳು ಬೇರೆ ಮೂವತ್ತಾರು ಅಂಕಣದ ಕಟ್ಟಡ, ಮಠದ ಸುತ್ತಾ ಕಲ್ಲಿನ ಕಾಂಪೌಂಡು ಇತ್ತು. ಇವೆಲ್ಲಾ ಸ್ಥಿರಾಸ್ತಿಗಳ ಜೊತೆಗೆ ಸುಮಾರು ೪೫೦/- ರೂಗಳ ಬೆಲೆಬಾಳುವ (ಬೆಳ್ಳಿಯ ಪೂಜಾಸಾಮಾನು ಜಾನುವಾರುಗಳೆಲ್ಲಾ ಸೇರಿ) ಚರಾಸ್ತಿಗಳು ಆಗ ಮಠದಲ್ಲಿದ್ದುದಾಗಿ ತಿಳಿದುಬರುತ್ತದೆ.[24]

ಮುಂದೆ ಮೂಲಪೀಠದ ಶಿವಾನಂದ ಜಗದ್ಗುರುಗಳವರು ೧೯೩೪ರ ಮಾರ್ಚಿ ೨೩ರಂದು ತಮ್ಮ ಶಿಷ್ಯರಾಗಿದ್ದ ಗಂಗಾಧರ ಶಿವಾಚಾರ್ಯರನ್ನು ಬೆಂಗಳೂರಿನ ಚಿಕ್ಕಪೇಟೆಯ ಮಹಾಂತರಮಠಕ್ಕೂ ಹಾಗೂ ವಿಭೂತಿಪುರದ ಮಠಕ್ಕೂ ಉಭಯ ಮಠಗಳ ಅಧಿಪತಿಗಳನ್ನಾಗಿ ನಿಯಮಿಸಿದ್ದರು.[25] ಮುಂದಿನ ಹದಿನಾರು ವರ್ಷಗಳವರೆಗೆ ಗಂಗಾಧರ ಶಿವಾಚಾರ್ಯರು ಈ ಮಠದ ಆಧಿಪತ್ಯವನ್ನು ವಹಿಸಿಕೊಂಡು, ಮಠದ ಪುನರುಜ್ಜೀವನ ಹಾಗೂ ಮಠದ ಆಸ್ತಿ-ಪಾಸ್ತಿಗಳ ಹದ್ದುಬಸ್ತುಗೊಳಿಸಿದರು. ಅಷ್ಟರಲ್ಲಿ ೧೯೪೭ ಆಗಸ್ಟ್ ೨ರಂದು ಗಂಗಾಧರ ಶಿವಾಚಾರ್ಯರು ತಮ್ಮ ಹಿರಿಯ ಜಗದ್ಗುರುಗಳ ಆದೇಶದ ಮೇರೆಗೆ ಬಾಳೆಹೊನ್ನೂರಿನ ವೀರಸಿಂಹಾಸನದ ಜಗದ್ಗುರು ಪೀಠವನ್ನು ಅಲಂಕರಿಸಿದರು.[26] ಹೀಗಾಗಿ ಮುಂದೆ ೧೯೫೦ರ ಮಾರ್ಚಿ ೧೩ರಂದು ಬೆಂಗಳೂರಿನ ಪೇಟೆಶೆಟ್ಟಿ ಯಜಮಾನರುಗಳ ಒಂದು ಆಡಳಿತ ಮಂಡಳಿಯನ್ನು ರಚಿಸಿ ಮಠದ ಪೂರ್ಣವಹಿವಾಟನ್ನು ಅವರಿಗೆ ಒಪ್ಪಿಸಿ ಕೊಟ್ಟರು.[27] ಆಗ ಅತ್ತಿಬೆಲೆಯ ಸಾಹುಕಾರ್ ಶರಭಣ್ಣ, ಅರಳೇಪೇಟೆಯ ದೇಶದರುದ್ರಪ್ಪಶೆಟ್ಟಿ, ಧರ್ಮಪ್ರಕಾಶ್ ಎನ್. ರುದ್ರಯ್ಯ, ಅಡಿಕೆಮಂಡಿ ಆರ್.ಬಿ. ಲಿಂಗಾರಾಧ್ಯ, ಮಾಮೂಲ್‌ಪೇಟೆಯ ಡಿ.ಬಿ.ಎಸ್. ಗುರುಸಿದ್ಧಪ್ಪಶೆಟ್ಟಿ, ತಾಳಕುಂಟೆ ಅಪ್ಪಾಜಪ್ಪ, ಗುಡೇಮಾರನಹಳ್ಳಿಯ ಮರಿಗಂಗಪ್ಪ ಈ ಏಳುಮಂದಿ ಆಡಳಿತ ಮಂಡಳಿಯ ಸದಸ್ಯರಾಗಿದ್ದರು.

ನಂತರ ೧೯೫೪ರ ಮೇ ೨೪ ರಂದು ಮೂಲಪೀಠದ ಜಗದ್ಗುರುಗಳಾಗಿದ್ದ ಗಂಗಾಧರ ಶಿವಾಚಾರ್ಯರ ಆದೇಶದ ಮೇರೆಗೆ ಅವರ ದಿವ್ಯಸಾನ್ನಿಧ್ಯದಲ್ಲಿ ಮಹಾಂತರ ಮಠದ ವಿದ್ಯಾರ್ಥಿಯಾಗಿದ್ದ ವೇ|| ಚನ್ನಬಸವಾರ್ಯ[28] ಎಂಬ ವಟುವಿಗೆ ಮಠದ ಆಧಿಪತ್ಯವನ್ನು ಮೇಲ್ಕಂಡ ಆಡಳಿತ ಮಂಡಳಿಯವರು ವಹಿಸಿಕೊಟ್ಟರು.[29] ಈ ಚನ್ನಬಸವಾರ್ಯರೇ ಈಗಿನ ವಿಭೂತಿಪುರ ವೀರಸಿಂಹಾಸನ ಮಠದ ಹಿರಿಯ ಅಧಿಪತಿಗಳಾಗಿರುವ ಸುವರ್ಣಲಿಂಗ ಶಿವಾಚಾರ್ಯರು. ಇವರು ಅಧಿಕಾರ ವಹಿಸಿಕೊಳ್ಳುವ ಮುನ್ನ ಪೀಠದವರಿಗೆ ಹಾಗೂ ಸದರಿ ಆಡಳಿತ ಮಂಡಳಿಯವರಿಗೆ ಒಂದು ಕರಾರು ಬರೆದುಕೊಟ್ಟಿರುತ್ತಾರೆ. ಆ ಕರಾರಿನ ಪ್ರಕಾರ ''ಶ್ರೀ ಮದ್ರಂಭಾಪುರಿ ಜಗದ್ಗುರುಗಳ ಆಜ್ಞಾನುಸಾರ ಮಠದ ಟ್ರಸ್ಟಿಗಳು ಹಾಗೂ ಭಕ್ತಾದಿಗಳೆಲ್ಲಾ ಸೇರಿ ನಮ್ಮನ್ನು ಸದರಿಮಠದ ಪಟ್ಟಾಧ್ಯಕ್ಷರನ್ನಾಗಿ ನೇಮಿಸಿದ್ದೀರಿ. ಈ ಲಾಗಾಯ್ತು ನಾವು ಸದರಿ ಮಠದ ಹಾಗೂ ಅದರ ವಿಶಿಷ್ಟ ಆಸ್ತಿ ವಹಿವಾಟನ್ನು ನಿಮ್ಮಿಂದ ವಹಿಸಿಕೊಂಡಿರುತ್ತೇನೆ. ಟ್ರಸ್ಟಿಗಳಾಗಿ ನೀವುಗಳು ಇದುವರೆಗೆ ನಡೆಸಿಕೊಂಡು ಬಂದಿರುವಂತೆ ಮುಂದೆಯೂ ನಮ್ಮ ಆಡಳಿತದಲ್ಲಿ ನಾವು ಮಠದ ಸ್ವತ್ತುಗಳನ್ನು ಸರಿಯಾಗಿ ಮ್ಯಾನೇಜುಮೆಂಟು ಮಾಡಿಕೊಂಡು, ಮಠದಲ್ಲಿ ನಡೆಯಬೇಕಾದ ವಿಶಿಷ್ಟ ಸತ್ಕಾರ್ಯಗಳನ್ನೂ ಅವಶ್ಯಕ ಬಿದ್ದಾಗಲೆಲ್ಲಾ ಶ್ರೀ ಬಾಳೆಹೊನ್ನೂರು ಜಗದ್ಗುರುಗಳಿಂದಲೂ ಮತ್ತು ಟ್ರಸ್ಟಿಗಳಾದ ನಿಮ್ಮಿಂದಲೂ ಸಲಹೆ ಪಡೆದು ಈಶ್ವರ ಪ್ರೇರಣೆಯಿಂದ ನಡೆಸಿಕೊಂಡು ಬರುತ್ತೇನೆಂದು ಆತ್ಮ ಸಂತೋಷದಿಂದ ಈ ಕರಾರು

ಮುಖಾಂತರ ನಿಮಗೆ ಭರವಸೆ ಕೊಟ್ಟಿರುತ್ತೇನೆ. ಈ ಮಠಕ್ಕೆ ಸೇರಿದ ಯಾವ ಸ್ವತ್ತುಗಳನ್ನೂ ಕ್ರಯ, ದಾನ, ಭೋಗ್ಯ ಅಥವಾ ಆಧಾರ ಯಾವುದೇ ಮಾಡಲು ನಮಗೆ ಹಕ್ಕಿಲ್ಲವೆಂದು ಒಪ್ಪಿ ಈ ಕರಾರಿಗೆ ರುಜು ಮಾಡಿದ್ದೇನೆ''[30] ಎಂಬುದಾಗಿ ಮೇಲ್ಕಂಡ ಗುರುಗಳು ಮಠದ ಹಿತದೃಷ್ಟಿಯಿಂದ ಕೆಲವು ನಿಬಂಧನೆಗಳಿಗೆ ಒಳಪಟ್ಟಿರುತ್ತಾರೆ.

ಇತ್ತೀಚಿನ ಮಠದ ರೆವಿನ್ಯೂ ದಾಖಲೆಗಳ ಪ್ರಕಾರ ೧೯೫೪ರಲ್ಲಿ ಎಚ್.ಎ.ಎಲ್. ಕಾರ್ಖಾನೆಗೆ ಸ್ವಾಧೀನವಾದ ಭೂಮಿ ೨೦ ಎಕರೆ ೩೧ ಗುಂಟೆ. ಇದಲ್ಲದೆ ಇತರೆ ೧೬ ಎಕರೆ ೩೯ ಗುಂಟೆ ಮಠದ ಆಸ್ತಿಯು ಪರಭಾರೆಯಾದ ದಾಖಲೆಗಳಿವೆ. ಮಠಕ್ಕೆ ಇನ್ನುಳಿದಿರುವ ಆಸ್ತಿ ಕೇವಲ ೧೪ ಎಕರೆ ೧೮ ಗುಂಟೆ[31] ಮಾತ್ರ. ಈ ವಿಚಾರವಾಗಿ ಮಠದ ಟ್ರಸ್ಟಿಗಳು ಮಠದ ಆಸ್ತಿ-ಪಾಸ್ತಿಗಳು ಪರಭಾರೆಯಾದುದನ್ನು ವಿರೋಧಿಸಿ ನಗರದ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಹೂಡಿದ್ದಾರೆ.[32]

ಈ ಸಂಬಂಧಪಟ್ಟ ವಿಚಾರವಾಗಿ ಮಠದ ಗುರುಗಳಾಗಿರುವ ಸುವರ್ಣಲಿಂಗ ಶಿವಾಚಾರ್ಯರು ತಾವು ಈ ಮಠದ ಅಧಿಪತಿಗಳಾಗಿ ನೇಮಕವಾದಾಗ ಇನ್ನೂ ಸುಮಾರು ೬೦ ಎಕರೆಗಳಷ್ಟು ಜಮೀನಿತ್ತು. ಇದರಲ್ಲಿ ಬಹಳಷ್ಟು ಭೂಮಿ ಭೂಸುಧಾರಣಾ ಕಾಯ್ದೆಯನ್ವಯ ಉಳುಮೆ(ಗೇಣಿ) ದಾರರ ಪಾಲಾಗಿ ಹೋಯಿತು. ಇನ್ನುಳಿದ ಸುಮಾರು ೨೦ ಎಕರೆಗಳಷ್ಟು ಭೂಮಿಯು ವಿಮಾನ ಕಾರ್ಖಾನೆಯ ಸ್ವಾಧೀನ ವಾಯಿತು. ಇಷ್ಟೆಲ್ಲಾ ಆದಾಗ್ಯೂ ಹೋರಾಟ ಮಾಡಿ ಸದರಿ ಮಠದ ಹೆಸರಿಗೆ ನಾವು ಇನ್ನೂ ೨೫ ಎಕರೆಗಳಷ್ಟು ಜಮೀನುಗಳನ್ನು ಉಳಿಸಿರುವುದಾಗಿ ತಿಳಿಸುತ್ತಾರೆ.[33]

ಸುವರ್ಣಲಿಂಗ ಶಿವಾಚಾರ್ಯರು ಇತ್ತೀಚೆಗೆ ದಿನಾಂಕ: ೩.೩.೧೯೯೬ರಂದು ತಮ್ಮ ಮಠದ ಉತ್ತರಾಧಿಕಾರಿಯನ್ನಾಗಿ ಬಿಜಾಪುರ ಜಿಲ್ಲಾ ಬಾಗೇವಾಡಿ ತಾಲ್ಲೂಕಿನ, ಹಾಲಿ ಪಟ್ಟದಕಂತೆ ಹಿರೇಮಠದ ಅಧ್ಯಕ್ಷರಾದ ಮಹಾಂತಲಿಂಗ ಶಿವಾಚಾರ್ಯರನ್ನು ಆಯ್ಕೆಮಾಡಿಕೊಂಡು, ಅವರಿಗೆ ಮಠದ ಪಟ್ಟಾಧಿಕಾರ ಹಾಗೂ ಬ್ರಹ್ಮೋಪದೇಶ ಕಾರ್ಯಗಳನ್ನು ನೆರವೇರಿಸಿರುತ್ತಾರೆ.[34]

ವಿಭೂತಿಪುರದ ಮಠದ ಒಳಾಂಗಣದಲ್ಲಿ ಪ್ರಾಚೀನಕಾಲದ ವೀರಭದ್ರಸ್ವಾಮಿ ದೇವಾಲಯವಿದೆ. ಇದರ ಪ್ರಾಂಗಣದ ಬಲಭಾಗದ ಕಂಬದ ಮೇಲೆ ಹುರಿಮೀಸೆಯನ್ನು ಹೊತ್ತ ಅರಸನೊಬ್ಬ ತನ್ನ ಇಬ್ಬರು ಅರಸಿಯರೊಡನೆ ನಿಂತಿರುವ ಉಬ್ಬುಶಿಲ್ಪವಿದೆ. ಈ ಶಿಲ್ಪವು ಸ್ವತಃ ಈ ಮಠ ಹಾಗೂ ದೇವಾಲಯಗಳನ್ನು ನಿರ್ಮಾಣಮಾಡಿಸಿದ್ದ ಇಮ್ಮಡಿ ಕೆಂಪೇಗೌಡನ ಚಿತ್ರವೆಂದೇ ಇಲ್ಲಿನ ಸ್ಥಳೀಯರ ನಂಬಿಕೆಯಾಗಿದೆ. ಬಹುಶಃ ಈ ಚಿತ್ರದಲ್ಲಿ ಇರುವವರು ಇಮ್ಮಡಿ ಕೆಂಪೇಗೌಡ ಹಾಗೂ ಅವನ ಇಬ್ಬರು ಅರಸಿಯರಾದ ಕೆಂಪಮಾಂಬೆ ಹಾಗೂ ಲಿಂಗಮಾಂಬೆಯರು ಇರಬೇಕೆನಿಸುತ್ತದೆ. ಇದರ ಜೊತೆಗೆ ಮಠದ ಮುಂಭಾಗದ ಎಡಬದಿಗೆ ಬಹುಪ್ರಾಚೀನವೆನ್ನಬಹುದಾದ ಹಾಗೂ ತೀರಾ ಶಿಥಿಲಾವಸ್ಥೆಯಲ್ಲಿರುವ ಒಂದು ಬಸವೇಶ್ವರನ ದೇಗುಲವಿದೆ.

ಮಠದ ಆಶ್ರಯದಲ್ಲಿ ಶ್ರೀ ವೀರಭದ್ರಸ್ವಾಮಿ ಶಿಕ್ಷಣಸಂಸ್ಥೆ ಎಂಬ ಶೈಕ್ಷಣಿಕ ಸಂಸ್ಥೆಯು ನಡೆಯುತ್ತಿದೆ. ಇಲ್ಲಿ ಪ್ರಾಥಮಿಕ ಹಂತದಿಂದ ಪ್ರೌಢಶಾಲೆ ಹಾಗೂ ಕಿರಿಯ ಕಾಲೇಜುಗಳವರೆಗೆ ತರಗತಿ ನಡೆಯುತ್ತಿದ್ದು ಅವುಗಳಲ್ಲಿ ಒಟ್ಟು ಒಂದು ಸಾವಿರ ಮಂದಿ ವಿದ್ಯಾರ್ಥಿಗಳು ವ್ಯಾಸಂಗ ನಿರತರಾಗಿದ್ದಾರೆ. ಈ ಶಿಕ್ಷಣ ಸಂಸ್ಥೆಯು ಸರ್ಕಾರಿ ಅನುದಾನಿತ ಸಂಸ್ಥೆಯಾಗಿದೆ. ಹಾಗೆಯೇ ಮಠದ ಆಶ್ರಯದಲ್ಲಿ ನಗರದ 'ಉಮಾದೇವಿ ಸ್ತ್ರೀಸಮಾಜ' ಎಂಬ ಮಹಿಳಾ ಸಂಘಟನೆಯವರು ಸ್ವತಃ ತಾವೇ ನಿರ್ಮಿಸಿ ನಡೆಸುತ್ತಿರುವ ''ಶಾಂಭವಿ ವಿಶ್ರಾಂತಿಧಾಮ'' ಎಂಬ ವೃದ್ಧಾಶ್ರಮವು ೧೯೯೬ ರಿಂದ ಕಾರ್ಯಪ್ರವೃತ್ತವಾಗಿದೆ.

ಹೀಗೆ ವಿಭೂತಿಪುರದ ವೀರಸಿಂಹಾಸನದ ಮಠವು ನಗರದ ಪ್ರಮುಖವಾದ ಬಾಳೆಹೊನ್ನೂರು ಶಾಖೆಯ ಪಟ್ಟದಮಠವಾಗಿದ್ದು, ವೀರಶೈವ ಸಮಾಜದ ಒಂದು ಪ್ರತಿಷ್ಠಿತ ಧಾರ್ಮಿಕ ಸಂಸ್ಥೆಯಾಗಿ, ಸಾಕಷ್ಟು ಪ್ರಾಚೀನ ಪರಂಪರೆಯುಳ್ಳ ಮಠವಾಗಿದೆ.

**ಮಠದ ಗುರು ಪರಂಪರೆ:**

೧. ಗುರುಸಿದ್ಧ ಬಸವರಾಜದೇವರು.ಸು. ೧೮೬೦-೧೯೦೦.
೨. ಸಿದ್ಧವೃಷಭರಾಜ ಸ್ವಾಮಿಗಳು. ೧೯೦೦-೧೯೨೭.
೩. ಶಿವರುದ್ರಸ್ವಾಮಿಗಳು. ೧೯೨೭-೧೯೩೨.
೪. ಗಂಗಾಧರ ಶಿವಾಚಾರ್ಯರು. ೧೯೩೪-೧೯೪೭.
೫. ಸುವರ್ಣಲಿಂಗ ಶಿವಾಚಾರ್ಯರು. ೧೯೫೪-೨೦೦೧.
೬. ಗುರುಮಹಾಂತ ಶಿವಾಚಾರ್ಯರು.೧೯೯೬ ರಿಂದ...

## ಅಡಿಟಿಪ್ಪಣಿಗಳು

1. ಕರ್ನಾಟಕ ಗ್ರಾಮಸೂಚಿ. (ಪ್ರ) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ಪು. ೧೯೦-೧೯೪.
2. ಬ್ರಾಹ್ಮಣರಿಗೆ ಕೊಡಲ್ಪಡುತ್ತಿದ್ದ ಉಂಬಳಿ ಗ್ರಾಮಗಳನ್ನು ಅಗ್ರಹಾರಗಳೆಂದು ಕರೆಯಲಾಗುತ್ತಿತ್ತು.
3. ಚನ್ನಮಲ್ಲಿಕಾರ್ಜುನ. ''ಚಂಪಾರಣ್ಯಮಠಗಳು''. ಮಹಾನುಭಾವಿ ಶ್ರೀಚನ್ನಮಲ್ಲಿಕಾರ್ಜುನರು. ಸಂ : ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ. ಪು. ೧೭೦.
4. ಪಂಚಪೀಠಗಳನ್ನು ಬಾಳೆಹೊನ್ನೂರು ವೀರಸಿಂಹಾಸನದ ಪೀಠ; ಉಜ್ಜಯಿನಿ ಧರ್ಮಸಿಂಹಾಸನದ ಪೀಠ; ಶ್ರೀಶೈಲ ದೇವಸಿಂಹಾಸನದ ಪೀಠ; ಕೇದಾರ ವೈರಾಗ್ಯ ಸಿಂಹಾಸನದ ಪೀಠ; ಕಾಶಿ ಜ್ಞಾನಸಿಂಹಾಸನದ ಪೀಠ ಎಂಬುದಾಗಿ ಕರೆಯುವುದುಂಟು.
5. ಪತ್ರದ ಸಂಖ್ಯೆ ೬೦೨: ಶಾಲಿವಾಹನಶಕ ೧೭೭೬. ಭಾವನಾಮ ಸಂವತ್ಸರ ಮಾರ್ಗಶಿರ. ಬಹುಳ ೧೩. ವಿಭೂತಿಪುರದಮಠ.
6. ರಾಜಾಪುರ (ಆನೇಕಲ್ಲು ತಾಲ್ಲೂಕು) ಸಂಸ್ಥಾನ ಮಠದ ಅಧ್ಯಕ್ಷರಾಗಿರುವ ಪಟ್ಟದ ರೇಣುಕ ಶಿವಾಚಾರ್ಯರ (೬೩) ಹೇಳಿಕೆಯ ಪ್ರಕಾರ- ''ಈ ಸೂಳಗೆರೆ (ಸೂಳೆಕೆರೆ)ಯ ದೊರೆಗಳು ತಮ್ಮ ಆಧಿಪತ್ಯಕ್ಕೆ ಒಳಪಟ್ಟಂತೆ ಐದು ಪುರಗಳಲ್ಲಿನ ಜಂಗಮರಿಗೆ ಐದು ವೀರಸಿಂಹಾಸನದ ಮಠಗಳನ್ನು ಕಟ್ಟಿಸಿಕೊಟ್ಟಿದ್ದುದಲ್ಲದೆ, ಮಠಗಳಿಗೆ ಉದಾರವಾದ ಮಾನ್ಯಗಳನ್ನು ನೀಡಿದ್ದರು. ಅವುಗಳಾವುವೆಂದರೆ : ೧. ವಿಭೂತಿಪುರದ ವೀರಸಿಂಹಾಸನ, ೨. ರಾಜಾಪುರದ ವೀರಸಿಂಹಾಸನ, ೩. ಗುಮ್ಮಳಾಪುರದ ವೀರಸಿಂಹಾಸನ, ೪. ನಾಗಲಾಪುರದ ವೀರ ಸಿಂಹಾಸನ, ೫. ಬಳ್ಳನಪುರದ ವೀರಸಿಂಹಾಸನ''. ಇವೆಲ್ಲವೂ ಬಾಳೆಹೊನ್ನೂರು ಶಾಖೆಯ ಪಟ್ಟದ ಮಠಗಳೇ ಆಗಿರುತ್ತವೆ. (ಈ ಐದು ಮಠಗಳನ್ನು ಬಹಳ ಹಿಂದಿನಿಂದಲೂ 'ಉಪಪಂಚಪೀಠ'ಗಳೆಂದೇ ಕರೆಯುತ್ತಿದ್ದುದಾಗಿ ಹೇಳುತ್ತಾರೆ.)
7. ಕೆಲವು ಸ್ವರವಚನಗಳಲ್ಲಿ ಈ ಹೆಸರು ಕಂಡು ಬರುವುದಾಗಿ ಎಸ್. ಶಿವಣ್ಣ (ಹಸ್ತಪ್ರತಿ ವಿಭಾಗ. ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾನಿಲಯ)ನವರು ಹೇಳುತ್ತಾರೆ.
8. ಹೇಳಿಕೆ : ಸುವರ್ಣಲಿಂಗ ಶಿವಾಚಾರ್ಯ ಸ್ವಾಮಿಗಳು (೬೨) ಮಠಾಧಿಪತಿಗಳು, ವಿಭೂತಿಪುರದಮಠ.
9. ಅಣಿಮ, ಮಹಿಮೆ, ಗರಿಮೆ, ಲಘಿಮೆ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ. ಇವು ಅಷ್ಟಸಿದ್ಧಿಗಳು. (ಕನ್ನಡ ನಿಘಂಟು. ಸಂ-೧. ಕನ್ನಡ ಸಾಹಿತ್ಯ ಪರಿಷತ್ತು. ೧೯೭೦. ಪು. ೪೭೭)
10. ಹೇಳಿಕೆ : ಸುವರ್ಣಲಿಂಗ ಶಿವಾಚಾರ್ಯ ಸ್ವಾಮಿಗಳು. ಪೂರ್ವೋಕ್ತ.
11. ಅವರದೇ ಹೇಳಿಕೆ.
12. ಎಪಿಗ್ರಾಫಿಯ ಕರ್ನಾಟಿಕ ix, ಬೆಂಗಳೂರು. ೧೩೩.
13. ಹೊಯ್ಸಳರ ವೀರಬಲ್ಲಾಳನು ಹೊಯ್ಸಳ ಸಂತತಿಯಲ್ಲೇ ಅತ್ಯಂತ ಪರಾಕ್ರಮಶಾಲಿಯಾಗಿದ್ದು, ತನ್ನ ತಾತನಾದ ವಿಷ್ಣುವರ್ಧನನ ಗುರಿಯಾಗಿದ್ದ ಸಾಮ್ರಾಜ್ಯ ಸ್ಥಾಪನೆಯ ಸಂಕಲ್ಪ ಮಾಡಿದ್ದನು. ಈತನು ಕ್ರಿ.ಶ. ೧೧೭೭ರಲ್ಲಿ ಉಚ್ಚಂಗಿಯನ್ನು ಮುತ್ತಿ ಪಾಂಡ್ಯರ ಕಾಮದೇವನನ್ನು ಜಯಿಸಿದ್ದನು. ಆಗ ತಮಿಳು ಪ್ರಾಂತ್ಯದ ಬಹುಭಾಗವು ಇವನ ಆಳ್ವಿಕೆಗೆ ಒಳಪಟ್ಟಿತ್ತು.
14. ಹಿಂದೆ ಸುಮಾರು ೧೦-೧೨ನೆಯ ಶತಮಾನಗಳ ಕಾಲದಲ್ಲಿ ಶೈವಯತಿಗಳ ಆವಾಸಸ್ಥಾನಗಳಾಗಿದ್ದ ಪುರಗಳು ಶಕ್ತಿಯ ಆರಾಧನಾ ಕೇಂದ್ರಗಳೂ ಆಗಿದ್ದುವು. ಅಲ್ಲಿ ಪ್ರಾಣಿಬಲಿ, ಹಿಂಸೆ, ರಕ್ತಪಾತಗಳ ಬಗೆಗೆ ಯಾವ ನೀತಿ ನಿಬಂಧನೆಗಳೂ ಇರಲಿಲ್ಲ. ಅಂತಹ ಸ್ಥಳಗಳಲ್ಲಿನ ಧಾರ್ಮಿಕ ಕ್ರೌರ್ಯಗಳನ್ನು, ಮೌಢ್ಯಗಳನ್ನೂ ನಿವಾರಿಸಲಿಕ್ಕಾಗಿಯೇ ಮುಂದಿನ ೧೪-೧೫ನೆಯ ಶತಮಾನಗಳ ವೇಳೆಗೆ ವೀರಶೈವರ ಗುರು-ಮಠಗಳು ಹುಟ್ಟಿಕೊಂಡಿದುದಾಗಿ ಹೇಳುವುದುಂಟು. ಈ ಹಿನ್ನೆಲೆಯಲ್ಲಿ ಶೈವ ಆರಾಧನಾ ಕೇಂದ್ರವಾಗಿದ್ದ ವಾಚ್ಚಿದೇವರಪುರವು ಮುಂದೆ ವೀರಶೈವರ ಆರಾಧನಾ ಕೇಂದ್ರವಾಗಿ ಮಾರ್ಪಾಟಾಗಿ ವಿಭೂತಿಪುರವಾಗಿರಬೇಕೆನಿಸುತ್ತದೆ.
15. ಹೇಳಿಕೆ : ಸುವರ್ಣಲಿಂಗ ಶಿವಾಚಾರ್ಯ ಸ್ವಾಮಿಗಳು. ಪೂರ್ವೋಕ್ತ.
16. Registered Document No : 1008/1932-33. Book No. I Vol.-228. dated. 3.10.1932. P. 324-343. Subregistror Office Bangalore. P. 6. (ಮಠಕ್ಕೆ ಸಂಬಂಧಿಸಿದ ಯಾವ ಸನ್ನದುಗಳೂ ಲಭ್ಯವಾಗಿಲ್ಲ. ವಿಭೂತಿಪುರದ ಮಠಕ್ಕೆ ಸಂಬಂಧಿಸಿದಂತೆ ಮಠದ ಹಲವಾರು ಮೂಲ ದಾಖಲೆಗಳನ್ನು ನೆರಳಚ್ಚು ಪ್ರತಿಗಳೊಂದಿಗೆ ಒದಗಿಸಿಕೊಟ್ಟ ಶ್ರೀಯುತ ಸದಾಶಿವಯ್ಯ, ಎಸ್. (ಅಧ್ಯಾಪಕರು. ಸರ್ಕಾರಿ ಪ್ರೌಢಶಾಲೆ, ವಿಭೂತಿಪುರ. ವಯಸ್ಸು ೫೦) ಇವರನ್ನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.
17. ಪತ್ರಸಂಖ್ಯೆ : ೬೦೨. ಭಾವನಾಮ ಸಂವತ್ಸರ (ಕ್ರಿ.ಶ. ೧೮೭೪) ಮಾರ್ಗಶಿರ. ಬಹುಳ ೧೩.
18. ಸಂಗ್ರಹ : ಎಸ್. ಶಿವಣ್ಣ (ಹಸ್ತಪ್ರತಿ ವಿಭಾಗ. ಕನ್ನಡ ಅಧ್ಯಯನ ಕೇಂದ್ರ. ಬೆಂಗಳೂರು ವಿಶ್ವವಿದ್ಯಾನಿಲಯ)
19. Muzrai File No : 340/1907. Sl. No : 1. P.2.

20. ಮುಜರಾಯಿ ಇಲಾಖಾ ಮುಖ್ಯಸ್ಥರಿಗೆ ಪಟ್ಟದ ಸಿದ್ಧವೃಷಭರಾಜಸ್ವಾಮಿಯು ಬರೆದುಕೊಂಡ ಮನವಿ ಅರ್ಜಿ. ದಿನಾಂಕ : ೬.೮.೧೯೦೯. ವಿಭೂತಿಪುರದಮಠ.

21. Registered Document No : 1008/1932-33. Book No. I. Vol. - 228. dated 3.10.1932 P. 324-343. (P-1)

22. Ibid.

23. Ibid. (P. 2)

24. Ibid. (P. 3-5)

25. Registered Record No : 4647/1949-50, Book No-1, Vol-1113. p. 212-219 dated: 5.4.1950. (P-2)

26. Registered Document No : 406. Book No. I. Vol. No - 881. p. 38-48. dated : 2.8.1947 (P-2)

27. Registered Record No : 4647/1949-50. Aforesaid.

28. ಈ ಚನ್ನಬಸವಾರ್ಯರು ಮೂಲತ: ಬಿಜಾಪುರ ಜಿಲ್ಲೆಯ ವಡವಡಗಿ ಗ್ರಾಮದ ಹಿರೇಮಠದ ವೇ॥ ಶಿವಯ್ಯನವರ ಸುಪುತ್ರರು.

29. ಶ್ರೀಮದ್ವಿಭೂತಿಪುರ ಮಠದ ಪಟ್ಟಾಧಿಕಾರ ಮಹೋತ್ಸವಾಹ್ವಾನಪತ್ರಿಕೆ. ದಿ : ೨೪.೫.೧೯೫೪.

30. Registered Document No : 35/1954-55. Vol- IV. P. 16-17. dated: 11.8.1954.

31. ವಿಭೂತಿಪುರ ಮಠದ ಆಸ್ತಿ-ಪಾಸ್ತಿಗಳನ್ನು ಕುರಿತು ಅಂಕಿ ಅಂಶಗಳ ವಿವರವುಳ್ಳ ಭೂದಾಖಲಾತಿ ನಕ್ಷೆಯನ್ನು ಅನುಬಂಧ...ದಲ್ಲಿ ಕೊಡಲಾಗಿದೆ ನೋಡಿ.

32. ಬೆಂಗಳೂರಿನ ಅಡಿಷನಲ್ ಸಿಟಿ ಸಿವಿಲ್ ಜಡ್ಜ್‌ರವರ ನ್ಯಾಯಾಲಯ. ಓ.ಎಸ್.ನಂ. : (ಅಸಲ್ ದಾವೆ) ೮೫೬೮:೯೫ (ಸಾರ್ವಜನಿಕರ ಅವಗಾಹನೆಗೆ. ಕರಪತ್ರ. ಟ್ರಸ್ಟ್ ಪರವಾಗಿ.)

33. ಹೇಳಿಕೆ : ಸುವರ್ಣಲಿಂಗ ಶಿವಾಚಾರ್ಯ ಸ್ವಾಮಿಗಳು. ಪೂರ್ವೋಕ್ತ.

34. ವಿಭೂತಿಪುರ ಮಠದ ಪಟ್ಟಾಧಿಕಾರ ಮಹೋತ್ಸವ ಆಹ್ವಾನಪತ್ರಿಕಾ. ದಿ : ೩.೩.೧೯೯೬

## ೪. ಮಾಳಿಗೆಮಠ, ದೊಡ್ಡಪೇಟೆ

ಪ್ರಾಚೀನ ಬೆಂಗಳೂರಿನ ಕೋಟೆಯೊಳಗೆ, ಅಲಸೂರು ಬಾಗಿಲು ಹಾಗೂ ಸೊಂಡೆಕೊಪ್ಪದ ಬಾಗಿಲುಗಳ ನಡುವಿನ ಮಾರ್ಗದಲ್ಲಿದ್ದ ಮತ್ತೊಂದು ಪ್ರಸಿದ್ಧವಾದ ಮಠವೇ 'ಮಾಳಿಗೆಮಠ'. ಈ ಮಾಳಿಗೆ ಮಠವನ್ನು 'ದೊಡ್ಡಪೇಟೆಯ ಜಂಗಮಮಠ' 'ಬಸವಲಿಂಗಶಾಸ್ತ್ರಿಮಠ' ಎಂಬುದಾಗಿಯೂ ಕರೆಯಲಾಗುತ್ತಿತ್ತು.[1] ೧೯ನೆಯ ಶತಮಾನದ ಆರಂಭದ ವೇಳೆಗಾಗಲೇ ಮಠದ ಕಟ್ಟಡವು ಸಾಕಷ್ಟು ಶಿಥಿಲಾವಸ್ಥೆಯಲ್ಲಿ ಇತ್ತು ಎಂಬುದಾಗಿ ಮುಜರಾಯಿ ಇಲಾಖಾ ದಾಖಲೆಗಳಿಂದ ವ್ಯಕ್ತವಾಗುವುದರಿಂದ,[2] ಬಹುಶಃ ಅದಕ್ಕಿಂತಲೂ ಹಿಂದೆಯೇ ಅಂದರೆ ೧೮ನೆಯ ಶತಮಾನದ ಪೂರ್ವಾರ್ಧದ ವೇಳೆಗೆ ಈ ಮಠವು ಅಸ್ತಿತ್ವದಲ್ಲಿದ್ದಿರಬೇಕು ಎನ್ನಿಸುತ್ತದೆ. ಮೇಲ್ಕಂಡ ಮಠವು ಪಟ್ಟದಮಠವಾಗಿದ್ದು ಬಾಳೆಹೊನ್ನೂರು ಪೀಠದ ಶಾಖಾಮಠವೆಂದು ಗುರುತಿಸಲ್ಪಟ್ಟಿದೆ.[3]

೧೮೧೦ರ ಹೊತ್ತಿಗೆ ಬಸವಲಿಂಗಶಾಸ್ತ್ರಿ ಎಂಬುವರು ಈ ಮಠದ ಅಧಿಪತಿಗಳಾಗಿದ್ದರು. ದಿನಾಂಕ:೨೭.೫.೧೮೧೭ ರಂದು ಮೈಸೂರಿನ ದೊರೆಗಳಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರು ಬಸವಲಿಂಗಶಾಸ್ತ್ರಿಗಳ ಹೆಸರಿಗೆ ನೀಡಿರುವ ಭೂದಾನ ಸನ್ನದು ದಾಖಲೆ ಲಭ್ಯವಾಗಿದೆ.[4] ಅದರ ಸೂಚನೆಯಂತೆ ಬೆಂಗಳೂರು ತಾಲ್ಲೂಕು ವರ್ತೂರು ಹೋಬಳಿ ಪಣತ್ತೂರು ಗ್ರಾಮ ಹಾಗೂ ಬೆಳಂದೂರು ಗ್ರಾಮಗಳಲ್ಲಿ ಎರಡು ಖಂಡುಗ ಬೀಜವರಿ ವಿಸ್ತೀರ್ಣದ ಜಮೀನುಗಳನ್ನು ಇನಾಮಾಗಿ ನೀಡಲಾಗಿತ್ತು. ಮಠದಲ್ಲಿ ನಿತ್ಯ ದೀಪಾರಾಧನೆ ಮತ್ತು ಗಣಾರಾಧನೆಗಳು ಸಾಂಗವಾಗಿ ಜರುಗಲೋಸ್ಕರ ಮಹಾರಾಜರು ಈ ಮೇಲಿನ ಭೂದಾನವನ್ನು ದಯಪಾಲಿಸಿದ್ದರು.[5] ಬಸವಲಿಂಗ ಶಾಸ್ತ್ರಿಗಳ ಕಾಲದಲ್ಲಿ ಸದರಿ ಮಠವು ಹೆಚ್ಚು ಅಭಿವೃದ್ಧಿಯನ್ನು ಕಂಡಿತ್ತಾದ್ದರಿಂದ ಈ ಮಠಕ್ಕೆ 'ಬಸವಲಿಂಗ ಶಾಸ್ತ್ರಿಮಠ'ವೆಂದು ಕರೆಯುವುದೇ ಪ್ರಚಲಿತವಾಗಿತ್ತು.[6]

ಮಹಾರಾಜರು ದಯಪಾಲಿಸಿರುವ ಭೂದಾನ ಸನ್ನದಿ (೧೮೧೭)ನಲ್ಲಿ ಬೆಂಗಳೂರಿನ 'ದೊಡ್ಡಪೇಟೆಯ (ಜಂಗಮಮಠದ ಬಸವಲಿಂಗ ಶಾಸ್ತ್ರಿಗಳಿದ್ದ ಮಠವನ್ನು) ಮಾಳಿಗೆ ಮಠ'ವೆಂದೇ ಗುರುತಿಸಲಾಗಿದೆ.[7] ಮುಂದೆ ೧೮೭೬ರಲ್ಲಿ ಇದನ್ನೇ 'ಚಿಕ್ಕಪೇಟೆಯ ಬಸವ ಲಿಂಗಶಾಸ್ತ್ರೀಮಠ'ವೆಂದು ಸೂಚಿಸಲಾಗಿದೆ.[8] ಅಂದರೆ ೧೯ನೆಯ ಶತಮಾನದ ಆರಂಭದಲ್ಲಿ ದೊಡ್ಡಪೇಟೆ ಎಂದು ಕರೆಯಲ್ಪಡುತ್ತಿದ್ದ ಈ ಮಠದ ಪ್ರದೇಶ, ಅದೇ ಶತಮಾನದ ಉತ್ತರಾರ್ಧದ ವೇಳೆಗೆ ಚಿಕ್ಕಪೇಟೆ ಎಂದೇ ಗುರುತಿಸಲ್ಪಟ್ಟಿರುವುದು ಗಮನಾರ್ಹ. ಇಂದಿಗೂ ಆ ಭಾಗವನ್ನೆಲ್ಲಾ ಚಿಕ್ಕಪೇಟೆಯೆಂದೇ ಕರೆಯುವುದು ರೂಢಿಯಲ್ಲಿದೆ. ೧೯೦೦ರ ವೇಳೆಗೆ ಸದರಿ ಮಠದಲ್ಲಿ ಕೊನೆಯ ಗುರುಗಳಾಗಿದ್ದವರು ಶಾಂತವೀರಯ್ಯನವರೆಂದು ತಿಳಿದುಬರುತ್ತದೆ.[9]

೧೯೦೨ರ ಮುಜರಾಯಿ ಇಲಾಖಾ ದಾಖಲೆಗಳ ಪ್ರಕಾರ ಬಸವಲಿಂಗಶಾಸ್ತ್ರಿಗಳ ಮಠದ ಹೆಸರಿನಲ್ಲಿ ಉಳಿದಿದ್ದ ಆಸ್ತಿ-ಪಾಸ್ತಿಗಳ ವಿವರ ಹೀಗಿದೆ. ಬೆಂಗಳೂರು ತಾಲ್ಲೂಕು ವರ್ತೂರು ಹೋಬಳಿ ಬೆಳಂದೂರು ಖಾನಿನ ಸ. ನಂ: ೧೯೦ರಲ್ಲಿ ೨ ಎಕರೆ ೬ ಗುಂಟೆ ತರಿಭೂಮಿ ಹಾಗೂ ಪಕ್ಕದ ಪಣತ್ತೂರು ಗ್ರಾಮದ ಸ.ನಂ: ೧೦ರಲ್ಲಿ ೧೫ ಎಕರೆ ೧೮ ಗುಂಟೆ ಖುಷ್ಕಿ ಭೂಮಿ; ಸ.ನಂ: ೧೧ರಲ್ಲಿ ೧೯ ಗುಂಟೆ ಖುಷ್ಕಿ ಭೂಮಿ ಮತ್ತು ಸ.ನಂ: ೧೦೨ರಲ್ಲಿ ೧ ಎಕರೆ ೨೯ ಗುಂಟೆ ತರಿಭೂಮಿಗಳಿದ್ದು, ಒಟ್ಟು ೧೯ ಎಕರೆ ೩೫ ಗುಂಟೆ ಜಮೀನುಗಳಿದ್ದುವು.[10] ಮುಂದೆ ೧೯೧೦ರ ವೇಳೆಗೆ ಮಠದ ಆಸ್ತಿ-ಪಾಸ್ತಿಗಳಿಗೆ ಸರಿಯಾದ ವಾರಸುದಾರ ರಿಲ್ಲದೆ, ಸರಕಾರವೇ ವಹಿಸಿ ಕೊಂಡು, ಭೂಮಿಯನ್ನೆಲ್ಲಾ 'ಪಂಚಸಾಲು ಗುತ್ತಿಗೆ'[11]ಗೆ ಗೊತ್ತು ಮಾಡಿತ್ತು.[12] ಇದೇ ಸಂದರ್ಭಕ್ಕೆ ಚಿಕ್ಕಪೇಟೆಯಲ್ಲಿದ್ದ ಮಠವು ಮಠವಾಗಿ ಉಳಿಯದೆ, ಸಂಸಾರಿಗಳ ಮನೆಯಾಗಿ ಪರಿವರ್ತನೆ ಗೊಂಡು, ಅದರಲ್ಲಿ ಕಳ್ಳೆಪ್ಪನವರ ಪಾರ್ವತಮ್ಮ ವಾಸವಾಗಿದ್ದರು.[13]

ಕೊನೆಗೆ ೧೯೨೧ರಲ್ಲಿ ಪಣತ್ತೂರಿನ ಶರಭಯ್ಯ ಎಂಬುವರು ಸಂಸ್ಥಾನಾಧಿಪತಿಗಳಿಗೆ ಒಂದು ಮನವಿಯನ್ನು ಸಲ್ಲಿಸಿದ್ದರು. ಈ ಮನವಿಯ ಪ್ರಕಾರ ಶರಭಯ್ಯನವರು ಬಸವಲಿಂಗಶಾಸ್ತ್ರಿಗಳ ಮುಮ್ಮಗ (ನಾಲ್ಕನೆಯ ತಲೆ) ನಾದ್ದರಿಂದ, ಸದರಿಮಠದ ಆಸ್ತಿ-ಪಾಸ್ತಿಗಳಿಗೆಲ್ಲಾ ತಾವೇ ಹಕ್ಕುದಾರರೆಂದೂ, ಮಠದ ದುರಸ್ತು ಮಾಡಿ

ದೀಪಾರಾಧನೆ ಮುಂತಾದ್ದನ್ನು ತಾವೇ ನಡೆಸುವವರಾದ್ದರಿಂದ, ಸಮಸ್ತ ಆಸ್ತಿಯನ್ನು ತಮಗೇ ವಹಿಸಿಕೊಡಬೇಕೆಂದು ಕೋರಿದ್ದರು.[14] ಇವರ ಮನವಿಯನ್ನು ಪರಿಶೀಲಿಸಿದ ಸರ್ಕಾರ ಇದು ಪುರಸ್ಕರಿಸಲಾಗದ ವಿಚಾರವೆಂದು ಆದೇಶ ನೀಡಿತ್ತು.

ಸದ್ಯಕ್ಕೆ ಈಗಿನ ಚಿಕ್ಕಪೇಟೆಯ ವೆಂಕು ಸಾಹೂಜಿ ಗಲ್ಲಿಯಲ್ಲಿದ್ದ ಈ ಮಠದ ಭಾಗವು ಸಂಪೂರ್ಣ ಖಾಸಗಿ ಸ್ವತ್ತಾಗಿ ಪರಿವರ್ತನೆಯಾಗಿದ್ದು, ಈಗ ಅದು ಡಿ.ಬಿ.ಎಸ್.ಗುರುಸಿದ್ಧಪ್ಪಶೆಟ್ಟರ ವಂಶಸ್ಥರ ಅನುಭವದಲ್ಲಿ ಉಳಿದುಕೊಂಡು ಬಂದಿರುವುದಾಗಿ ತಿಳಿದುಬರುತ್ತದೆ.[15]

**ಮಠದ ಗುರುಪರಂಪರೆ :**

೧. ಬಸವಲಿಂಗ ಶಾಸ್ತ್ರಿಗಳು. ೧೮೧೭..

೨. ಶಾಂತವೀರಯ್ಯನವರು. ೧೯೦೦.

---

**ಅಡಿಟಿಪ್ಪಣಿಗಳು**

1. Muzrai file No : 94/1921. Sl.No:1-7. P.16, 17.
2. ಅದೇ.
3. ಪಣತ್ತೂರಿನ ಶರಭಯ್ಯನು ಸಂಸ್ಥಾನದವರಿಗೆ ಬರೆದುಕೊಂಡಿರುವ ಅರ್ಜಿ. ದಿ: ೨. ೮. ೧೯೨೧.
4. ಭೂದಾನ ಸನ್ನದು. (ಇಂಗ್ಲಿಷ್‌ನಕಲು) ಈಶ್ವರ ಸಂವತ್ಸರ ಜೇಷ್ಠ ಶುದ್ಧ ೧೧.
5. ಅದೇ.
6. Ad. Intereim Certificate. Gen. No. 42277 (Basavalingasastri mutt. dt : 1.7. 1876)
7. ಮಠದ ಭೂದಾನ ಸನ್ನದು : ಈಶ್ವರ ಸಂವತ್ಸರ ಜೇಷ್ಠ ಶುದ್ಧ ೧೧.
8. Ad. Intereim Certificate. Gen. No. 42277. dt: 1.7.1876.
9. Muzrai file No : 94/1921. II. Sl.No: 8-9. P. 8.
10. Register of Muzrai Institutions Endowed with Inam lands in Bangalore Taluk. Dtd. 31 December 1902. P. 182-183.
11. ಪಂಚಸಾಲುಗುತ್ತಿಗೆ ಎಂದರೆ ಸಂಬಂಧಪಟ್ಟ ಭೂಮಿಯನ್ನು ಇಲಾಖಾ ಅಧಿಕಾರಿಗಳು ಗ್ರಾಮದ ಸರಪಂಚರ ಎದುರಿಗೆ ಹರಾಜು ಹಾಕುತ್ತಿದ್ದರು. ಹೆಚ್ಚಿನ ಮೊತ್ತಕ್ಕೆ ಕೂಗಿದವರು ಸದರಿ ಭೂಮಿಯನ್ನು ಐದು ವರ್ಷಗಳ ಕಾಲ ಉಳುಮೆ ಮಾಡಬಹುದಾಗಿತ್ತು.
12. Muzrai file No : 94/1921. Sl.No. 1-7. P 2-3.
13. Ibid. P. 19-20.
14. ಪಣತ್ತೂರಿನ ಶರಭಯ್ಯನು ಸಂಸ್ಥಾನದವರಿಗೆ ಬರೆದುಕೊಂಡಿರುವ ಅರ್ಜಿ. ದಿ : ೨.೮.೧೯೨೧.
15. ಹೇಳಿಕೆ : ಶಿವರುದ್ರಸ್ವಾಮಿಗಳು (೫೦) ಬೇಲಿಮಠಾಧ್ಯಕ್ಷರು. ಬೆಂಗಳೂರು.

## ೫. ದಂಡಿನ ಅಂಕಲೇಶ್ವರಮಠ, ಕೇವಲ್ರಿ ರಸ್ತೆ

ಬೆಂಗಳೂರಿನ ಇಂದಿನ ದಂಡು ಪ್ರದೇಶದ ಕೇವಲ್ರಿ ರಸ್ತೆಯ ಉತ್ತರಾರ್ಧದಲ್ಲಿ ಪೂರ್ವಾಭಿಮುಖವಾಗುಳ್ಳ ಒಂದು ದೇಗುಲವಿದೆ. ಅದೇ ಅಂಕಲೇಶ್ವರ ಸ್ವಾಮಿಯ ದೇವಾಲಯ. ಮೂಲತಃ ಇದರ ಗರ್ಭ ಗುಡಿಯಲ್ಲಿರುವ ಮೂರ್ತಿಶಿಲ್ಪವು, ಒಂದು ಗದ್ದುಗೆಯ ಮೇಲಿರುವ ಶಿವಲಿಂಗ. ಸರ್ಪಭೂಷಣಮಠದ ೧೯೩೧ರ ದಾಖಲೆಯಲ್ಲಿ ಈ ಮಠದ ಪ್ರಸ್ತಾಪವಾಗಿದೆ. ಅಲ್ಲಿ ''ದಂಡಿನ ಕೇವಲ್ರಿ ರಸ್ತೆಯ ಅಂಕಲೇಶ್ವರ ಮಠದ ವಿರೂಪಾಕ್ಷ ಶಾಸ್ತ್ರಿ'' ಎಂಬ ಮಾತುಗಳಿವೆ.[1] ಆದ್ದರಿಂದ ಈ ದೇಗುಲವು ಹಿಂದೆ ಒಂದು ಮಠವಾಗಿದ್ದುದು ಮಾತ್ರವಲ್ಲದೆ, ಅಲ್ಲಿ ವಿರೂಪಾಕ್ಷಶಾಸ್ತ್ರಿ ಎಂಬ ಅಯ್ಯನವರೂ ಇದ್ದುದು ಸ್ಪಷ್ಟವಾಗಿದೆ.

ಈಗ ಅಂಕಲೇಶ್ವರ (ದೇಗುಲ) ಮಠದ ಅರ್ಚಕರೂ ಹಾಗೂ ಸ್ವಾಮಿಗಳೂ ಆಗಿರುವ ಚನ್ನಬಸವಾರಾಧ್ಯರು ಸಂಸಾರಿಗಳೂ ಆಗಿದ್ದಾರೆ. ಅವರೇ ಹೇಳುವ ಪ್ರಕಾರ 'ಬಾಳೆಹೊನ್ನೂರು ವೀರಸಿಂಹಾಸನದ ಶಾಖಾಮಠವಿದು. ಇಲ್ಲಿ ಕಾಲದಿಂದಲೂ ಸ್ವಾಮಿಗಳಾದವರು ಗೃಹಸ್ಥರೇ ಆಗಿರುತ್ತಾರೆ. ಇದು ಪುತ್ರವರ್ಗದ ಪಟ್ಟದಮಠ.[2] ಮಠದ ಮೂಲಗುರುಗಳೇ ಅಂಕಲಿಸಿದ್ದೇಶ್ವರ ಸ್ವಾಮಿಗಳು. ಅವರದೇ ಇಲ್ಲಿರುವ ಗದ್ದುಗೆ. ಹಿಂದೆ ರಾಜಮಹಾರಾಜರುಗಳಿಂದ ಹಲವು ಬಗೆಯ ಇನಾಮುಗಳು ಈ ಮಠಕ್ಕೆ ಲಭ್ಯವಾಗಿದ್ದುವು. ಮಠದ ಆಸ್ತಿಗಳೆಲ್ಲಾ ದಂಡುಪ್ರದೇಶದ ವಿಸ್ತರಣೆಗಾಗಿ ಸ್ವಾಧೀನವಾಗಿಬಿಟ್ಟುವು. ಅಂಕಲಿಸ್ವಾಮಿಗಳ ನಂತರ ಸಂಗಯ್ಯನವರು, ಸಿದ್ಧಲಿಂಗಯ್ಯನವರು, ವಿರೂಪಾಕ್ಷಶಾಸ್ತ್ರಿ, ಸಿದ್ಧವೀರಶಾಸ್ತ್ರಿ ಇವರೇ ಮುಂತಾದ ಮಠಾಧಿಪತಿಗಳು ಆಗಿಹೋಗಿದ್ದಾರೆ'[3] ಎಂಬುದಾಗಿ ತಿಳಿದುಬರುತ್ತದೆ.

---

**ಅಡಿಟಿಪ್ಪಣಿಗಳು**

1. ವಿರೂಪಾಕ್ಷಶಾಸ್ತ್ರಿಗಳು ಸರ್ಪಭೂಷಣಮಠದ ಬಸವಲಿಂಗ ಸ್ವಾಮಿಗಳಿಗೆ ಬರೆದುಕೊಟ್ಟ ಮನೆ ಬಾಡಿಗೆ ಕರಾರು ಪತ್ರ. ದಿನಾಂಕ : ೧೭.೬.೧೯೩೧. ಸರ್ಪಭೂಷಣಮಠ.
2. ಪಟ್ಟದ ಮಠಗಳ ಗುರುವರ್ಗದಲ್ಲಿ ಎರಡು ಪ್ರಭೇದಗಳಿವೆ. ಒಂದು ಪುತ್ರವರ್ಗದ ಮಠ. ಇದರಲ್ಲಿ ಸ್ವಾಮಿಗಳಾದವರು ಸಂಸಾರಿಗಳಾಗಿದ್ದು ತಮ್ಮ ವಂಶಸ್ಥರಲ್ಲೇ ಒಬ್ಬರನ್ನು ಮುಂದಿನ ಮಠಾಧಿಪತಿಗಳನ್ನಾಗಿ ಚುನಾಯಿಸುತ್ತಾರೆ. ಎರಡನೆಯದು ಶಿಷ್ಯವರ್ಗದ ಮಠ. ಇದರಲ್ಲಿ ಗುರುಗಳು ತಮ್ಮ ಶಿಷ್ಯವೃಂದದಲ್ಲಿ ಒಬ್ಬರನ್ನು ತಮ್ಮ ಮುಂದಿನ ಮಠಾಧಿಪತಿಯನ್ನಾಗಿ ಚುನಾಯಿಸುತ್ತಾರೆ.
3. ಹೇಳಿಕೆ : ಚನ್ನಬಸವಾರಾಧ್ಯ. (೪೦) ಅರ್ಚಕ/ಸ್ವಾಮಿ. ಅಂಕಲೇಶ್ವರ ದೇವಸ್ಥಾನ. ಕೇವಲ್ರಿ ರಸ್ತೆ. ದಂಡು ಪ್ರದೇಶ.

## ೧.೨. ಉಜ್ಜಯಿನಿ ಪೀಠದ ಪರಂಪರೆಗೆ ಸೇರಿದ ಮಠಗಳು

ಈ ಶತಮಾನದ ಆರಂಭದ ವೇಳೆಗೆ ಬೆಂಗಳೂರು ಪಟ್ಟಣದಲ್ಲಿ ಉಜ್ಜಯಿನಿ ಪೀಠದ ಸದ್ಧರ್ಮ ಸಿಂಹಾಸನದ ಪರಂಪರೆಗೆ ಸೇರಿದ ಎಂಟು ಪಟ್ಟದ ಮಠಗಳಿದ್ದುವು. ಅವುಗಳಾವುವೆಂದರೆ...

೧. ಮರಿಸ್ವಾಮಿ ಮಠ. ಕಳಾಸಿಪಾಳ್ಯ,
೨. ಮರಿಸ್ವಾಮಿಮಠ. ಅರಳೆಪೇಟೆ,
೩. ನಿರ್ವಾಣಮ್ಮನ ಮಠ. ಮನೆವಾರ್ತೆಪೇಟೆ,
೪. ಕುದುರೆಗದ್ದುಗೆ ಮಠ. ಶಂಕರಪುರ,
೫. ಬುರುಗಲುದೇವರಮಠ. ದೊಡ್ಡಬೈಲುಖಾನೆ,
೬. ಗದ್ದುಗೆಮಠ. ಜಕ್ಕರಾಯನಕೆರೆದಂಡೆ,
೭. ಬೂದಿಸ್ವಾಮಿಮಠ. ಚಾಮರಾಜಪೇಟೆ,
೮. ಕಂಬಳಿಸ್ವಾಮಿಮಠ. ವಿಜಯನಗರ.

ಈ ಮೇಲ್ಕಂಡ ಮಠಗಳಲ್ಲಿ ಅರಳೆಪೇಟೆಯ ಮರಿಸ್ವಾಮಿಗಳಮಠ, ಮನೆವಾರ್ತೆಪೇಟೆಯ ನಿರ್ವಾಣಮ್ಮನಮಠ, ಜಕ್ಕರಾಯನಕೆರೆದಂಡೆಯ ಗದ್ದುಗೆಮಠ, ಇವು ಈಗ ಸಂಪೂರ್ಣ ನಿರ್ನಾಮವಾಗಿಬಿಟ್ಟಿವೆ. ಉಳಿದ ಮಠಗಳೂ ಕೂಡ ಅವಸಾನದ ಅಂಚಿನಲ್ಲಿದ್ದು ಇದುವರೆಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ. ಇವುಗಳಲ್ಲಿ ಬೂದಿಸ್ವಾಮಿಮಠ ಮತ್ತು ಕಂಬಳಿಸ್ವಾಮಿಮಠ ಇವೆರಡು ಮಠಗಳ ಉಸ್ತುವಾರಿದಾರರಾಗಿ ಒಬ್ಬರು ಸ್ವಾಮಿ (ಬಸವಲಿಂಗಸ್ವಾಮಿ)ಗಳಿದ್ದಾರೆ. ಮುಂದೆ ಈ ಮೇಲ್ಕಂಡ ಮಠಗಳನ್ನು ಕುರಿತು ದೊರಕಿರುವ ಮಾಹಿತಿಗಳನ್ನು ಆಧರಿಸಿ ಅವುಗಳ ಸಂಕ್ಷಿಪ್ತ ಚಾರಿತ್ರಿಕ ಪರಿಚಯವನ್ನು ಮಾಡಿಕೊಡಲಾಗಿದೆ.

### ೧. ಮರಿಸ್ವಾಮಿಮಠ, ಕಳಾಸಿಪಾಳ್ಯ

ಬೆಂಗಳೂರಿನ ಪ್ರಾಚೀನ ಕೋಟೆಯ ದಕ್ಷಿಣ ದಿಗ್ಭಾಗದಲ್ಲಿ ಇತಿಹಾಸಪ್ರಸಿದ್ಧವಾದ ಕಲ್ಯಾಣ ಬಸವೇಶ್ವರನ ದೇಗುಲವಿತ್ತು.[1] ಈ ದೇಗುಲದ ಮುಂಭಾಗಕ್ಕೆ ಅಷ್ಟೇ ಪ್ರಾಚೀನವಾದ ಸುಂದರ ಕೊಳವೊಂದಿತ್ತು. ಕೋಟೆಯೊಳಗೇ ಇದು ತುಂಬಾ ಪ್ರಶಾಂತವಾದ ಭಾಗವೆಂದು ಆಯ್ಕೆಮಾಡಿಕೊಂಡು ಹೈದರಾಲಿಯು ಭವ್ಯವಾದ ಅರಮನೆಯ ನಿರ್ಮಾಣಕ್ಕೆ ಬುನಾದಿ ಹಾಕಿದ್ದನು. ಟಿಪ್ಪು ಸುಲ್ತಾನನು ದೇಗುಲದ ಹಿಂಭಾಗದಲ್ಲಿದ್ದ ಈ ಕನಸಿನ ಅರಮನೆಯನ್ನು ೧೭೯೧ರ ವೇಳೆಗೆ ಪೂರ್ಣಗೊಳಿಸಿದನು.[2]

ಆಂಗ್ಲರ ಪ್ರವಾಸಿ ಫ್ರಾನ್ಸಿಸ್ ಬುಖಾನನ್ ಅವರ ಬರಹದ ಪ್ರಕಾರ ೧೯ನೆಯ ಶತಮಾನದ ಆದಿಭಾಗದಲ್ಲಿ 'ಒಂದೆಡೆ ಟಿಪ್ಪುಸುಲ್ತಾನನ ಭವ್ಯ ಅರಮನೆ ಇದ್ದರೆ, ಮತ್ತೊಂದೆಡೆ ಅರಮನೆಯ ಪೂರ್ವಭಾಗದ ಕೋಟೆಯ ಅಂಚಿಗೆ ಅರಮನೆಯ ಊಳಿಗದ ನಿರ್ಗತಿಕರ ಗುಡಿಸಲು-ಗುಡಾರಗಳಿದ್ದವು.'[3] ಇವರು ಸುಲ್ತಾನನ ಸೇನೆ ಹೋದೆಡೆಯಲ್ಲೆಲ್ಲಾ ಸೇನೆಗೆ ಅಗತ್ಯವಾದ ಡೇರೆಗಳನ್ನು ನಿರ್ಮಿಸಿಕೊಡುತ್ತಿದ್ದರು. ಆದ್ದರಿಂದಲೇ ಇವರುಗಳಿದ್ದ ಕೇರಿಯನ್ನು ಕಳೆದ ಶತಮಾನದ ಆದಿ ಭಾಗದಿಂದಲೂ ಕಳಾಸಿಪಾಳ್ಯವೆಂದೇ ಕರೆಯುವುದು ರೂಢಿಯಲ್ಲಿತ್ತು. 'ಕಳಾಸಿ' ಎಂದರೆ 'ಡೇರೆ' ಅಥವಾ 'ಗುಡಾರ'ಗಳನ್ನು ಹಾಕುವವರು, ಅಥವಾ ಅವುಗಳನ್ನು ನಿರ್ವಹಿಸುವವರು ಎಂಬ ಅರ್ಥವೇ ಇದೆ.[4] ಈ ಕಳಾಸಿ ಪಾಳ್ಯದಲ್ಲಿ ಒಂದು ಪ್ರಸಿದ್ಧವಾದ ವೀರಶೈವ ಮಠವಿದೆ. ಅದೇ ಮರಿಸ್ವಾಮಿಮಠ.

ಉತ್ತರಕರ್ನಾಟಕದ ಕಲ್ಬುರ್ಗಿಯ ಕಡೆಯಿಂದ ಬಂದಿದ್ದ ಮರಿಸ್ವಾಮಿಗಳು ೧೮೧೧ರ ಸುಮಾರಿಗೆ ಬೆಂಗಳೂರಿನಲ್ಲಿ ಮರಿಸ್ವಾಮಿಮಠವನ್ನು ಪ್ರಾರಂಭಿಸಿದ್ದಂತೆ ಅವರ ಜೀವನಚರಿತ್ರೆಯಲ್ಲೇ ಸೂಚನೆಗಳಿವೆ.[5] ಮೂಲತಃ ಇವರು ಗುರುಸ್ಥಲದ ಉಜ್ಜಯಿನಿಪರಂಪರೆಯ ಪಟ್ಟದಯ್ಯನವರೊಬ್ಬರ ಮಗನಾಗಿದ್ದು[6] ಬಾಲ್ಯದಿಂದಲೇ ವಿರಕ್ತಿಯನ್ನು ಬೆಳಸಿಕೊಂಡಂಥ'ವರು. ತ.ಸು. ಶಾಮರಾವ್ ಅವರು ಮರಿಸ್ವಾಮಿಗಳ ಸಂಕ್ಷಿಪ್ತ ಜೀವನಚಿತ್ರವನ್ನು ಕೆಳಗಿನಂತೆ ವಿವರಿಸಿದ್ದಾರೆ- ''ಕಲ್ಬುರ್ಗಿಯ ಬಸವೇಶ-ಗಂಗಮ್ಮ ಎಂಬ ಶರಣ ದಂಪತಿಗಳ ಸತ್ಪುತ್ರನಾದ ಈ ಸಂತನು ತನ್ನ ಐದನೆಯ ವಯಸ್ಸಿನಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡು, ಭಕ್ತನೊಬ್ಬನ ಮನೆಯಲ್ಲಿ ಬೆಳೆದು ಬಾಲ್ಯದಿಂದಲೇ ಶಿವಭಕ್ತಿಯ ಶಿಶುವಾದನು. ಲಿಂಗಣ್ಣನೆಂಬ ಧೂರ್ತನು ಈತನನ್ನು ಬೆಂಗಳೂರಿಗೆ ಕರೆತಂದು, ಭಕ್ತರು ಸ್ವಾಮಿಗೆಂದು ನೀಡುತ್ತಿದ್ದ ಕಾಣಿಕೆಗಳನ್ನು ಸಂಗ್ರಹಿಸಿಕೊಂಡು ಮರಿಸ್ವಾಮಿಯನ್ನು ದನಕಾಯುವ ಕೆಲಸಕ್ಕೆ ಹಚ್ಚಿದನು.

ಅಲ್ಲಿ ಮರಿಸ್ವಾಮಿಯು ಹಂಚುತ್ತಿದ್ದ ಬುರುಗು (ಪುರಿ) ಗೋಪಾಲಕರಿಗೆ ಅಕ್ಷಯವಾಗಿ ಅಂದಿನಿಂದ 'ಬುರುಗಲಯ್ಯ'ನೆಂದೇ ಕೀರ್ತಿ ಬಂದಿತು. ಈತನು ಕೆಂಗೇರಿಯ ಬಳಿ ಸೇತುವೆಯೊಂದನ್ನು ಕಟ್ಟಿಸುತ್ತಾ ಮರಳರಾಶಿಯಲ್ಲಿ ಕೂಲಿಕಾರರ ಕೂಲಿಯು ಸಂದಾಯವಾಗುವಂತೆ ಮಾಡಿದ್ದನು. ಆಗ ಆತನ ಕೀರ್ತಿ ಮತ್ತಷ್ಟು ಹಬ್ಬಿತು. ಲಿಂಗಣ್ಣ ಸಂಚು ನಡೆಸಿ ಈತನನ್ನು ಬೆಂಗಳೂರಿನಿಂದ ಓಡಿಸುವ ಪ್ರಯತ್ನ ಮಾಡಿದನು. ಆಮೇಲೆ ಮರಿಸ್ವಾಮಿಯು ಕಂಬಳಿಸ್ವಾಮಿ ಮತ್ತು ಕೂಡಲಿಸ್ವಾಮಿಗಳೊಂದಿಗೆ ದೇಶ ಸಂಚಾರವನ್ನು ಕೈಕೊಂಡು ಶಿವಗಂಗೆಗೆ ಬಂದು ಸೇರಿದನು. ಆಗ ಭಕ್ತರು ಮತ್ತೆ ಅವನನ್ನು ಬೆಂಗಳೂರಿಗೆ ಕರೆತಂದರು. ಮುಂದೊಂದು ದಿನ ದಿವಾನ್ ಪೂರ್ಣಯ್ಯನವರು ಇವನ ಮಹಿಮೆಯನ್ನರಿತು ಊರಲ್ಲೆಲ್ಲಾ ಮೆರವಣಿಗೆ ಮಾಡಿಸಿದರು. ಲಿಂಗಣ್ಣನು ಮತ್ತೆ ಇವನಮೇಲೆ ಸೆಣಸಿದಾಗ ಮರಿಸ್ವಾಮಿ ಅದಕ್ಕೆ ಅವಕಾಶ ನೀಡಲಿಲ್ಲ. ಮುಂದೊಂದು ದಿನ ಬೂದಿಹಾಳಿನ ಗ್ರಾಮಣಿಯ ಮಗಳನ್ನು (ಗಂಗಾಂಬಿಕೆ) ಮದುವೆಯಾಗಿ ಬಳ್ಳಾರಿಯಲ್ಲಿ ನೆಲಸಿದನು. ಅಲ್ಲಿ ಸಕ್ಕರೆ ಕರಡಪ್ಪನೆಂಬ ಭಕ್ತನು ತನ್ನೆಲ್ಲಾ ಐಶ್ವರ್ಯವನ್ನೂ ಗುರುಕಾರುಣ್ಯಾರ್ಥ'ವಾಗಿ ದಾನಮಾಡಿದನು''[7].

ದಿವಾನ್ ಪೂರ್ಣಯ್ಯನವರ ಕಾಲದಲ್ಲಿ (೧೮೦೦-೧೮೧೧) ಮರಿಸ್ವಾಮಿಗಳಿಗೆ ಧಾರ್ಮಿಕ ಸಂಸ್ಥಾನಾಧಿಪತಿಗಳಿಗೆ ದೊರೆಯುತ್ತಿದ್ದ ರಾಜಮರ್ಯಾದೆಗಳೆಲ್ಲಾ ದೊರಕಿದ್ದುವು.[8] ಬೆಂಗಳೂರಿನಲ್ಲಿ ಇವರಿಗಿದ್ದ ಅಪಾರ ಸಂಖ್ಯೆಯ ಭಕ್ತರ ದೆಸೆಯಿಂದ ಉದಾರವಾದ ದಾನಧರ್ಮಗಳು ಸಂದಾಯವಾಗಿದ್ದುವು. ತತ್ಫಲವಾಗಿ ಮರಿಸ್ವಾಮಿಗಳು ಕಳಾಸಿಪಾಳ್ಯದ ಭಾಗದಲ್ಲಿ ಒಂದು ಸುಂದರವಾದ ಹಾಗೂ ಭವ್ಯವಾದ ಮಠವನ್ನು ನಿರ್ಮಾಣ ಮಾಡಿದ್ದರು.[9] ಇದರ ಜೊತೆಗೆ ಇವರ ನಾಲ್ಕಾರು ಶಾಖಾಮಠಗಳೂ ನಿರ್ಮಾಣವಾಗಿದ್ದವು.[10] ಇವರ ಶಿಷ್ಯ ಪರಂಪರೆಯಲ್ಲಿ ಬಂದ ಗುರುಸ್ವಾಮಿಗಳು ಮುಂದೆ ಬೆಂಗಳೂರಿನಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಹೊಂದಿದ್ದರು. ಮರಿಸ್ವಾಮಿಗಳು ಶ್ರೀರಂಗಪಟ್ಟಣ, ಕೆಂಗೇರಿ, ಹುಲಿಕಲ್ಲು, ದೊಡ್ಡಬೆಲೆ, ದೊಡ್ಡಬಳ್ಳಾಪುರ, ದೇವನಹಳ್ಳಿ, ಶಿವಗಂಗೆ ಮುಂತಾದ ಸ್ಥಳಗಳಲ್ಲಿ ಕೆಲವು ಕಾಲ ತಂಗಿದ್ದು ಭಕ್ತರನ್ನು ಉದ್ಧರಿಸಿದರೆಂದು ತಿಳಿದುಬರುತ್ತದೆ. ಕೊನೆಗೆ ಇವರು ಶೋಭಕೃತು ಸಂವತ್ಸರದ ಆಷಾಡ ಶುದ್ಧ ೩ ರಂದು (೧೮೪೩ರಲ್ಲಿ) ಏಕಕಾಲದಲ್ಲಿ ಬೆಂಗಳೂರು,[11] ಬಳ್ಳಾರಿ ಹಾಗೂ ಭೈರವಪುರಗಳಲ್ಲಿ ಸಮಾಧಿಸ್ತರಾದುದಾಗಿ ತಿಳಿದುಬರುತ್ತದೆ.[12]

೧೮೧೧ರ ಸುಮಾರಿಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಬೆಂಗಳೂರಿನ ಮರಿಸ್ವಾಮಿಗಳ ಮಠಕ್ಕೆ ಇನಾಂ ಜಮೀನುಗಳನ್ನು ನೀಡಿದ್ದರಾದ ಕಾರಣ,[13] ಬಹುಶಃ ಇಲ್ಲಿನ ಮಠವೇ ಇವರ ಮೂಲಮಠವಾಗಿದ್ದಿರಬೇಕು.[14] ಮರಿಸ್ವಾಮಿಗಳ ನಂತರದ ಗುರುಪರಂಪರೆಯ ಬಗೆಗೆ ಸೂಕ್ತ ಮಾಹಿತಿಗಳೆ ಇಲ್ಲವಾಗಿದೆ. ಹತ್ತೊಂಬತ್ತನೆಯ ಶತಮಾನದ ಅಂತ್ಯದ ವೇಳೆಗೆ ಮರಿಬಸಪ್ಪ ಸ್ವಾಮಿಗಳೆಂಬುವರು ಈ ಮಠದ ಅಧಿಪತಿಗಳಾಗಿದ್ದ ಸೂಚನೆಗಳಿವೆ.[15] ಇವರು ತಮ್ಮ ಅಂತಿಮದಿನ (೧೯೧೩)ಗಳಲ್ಲಿ ಮಠದ ಆಸ್ತಿ-ಪಾಸ್ತಿಗಳನ್ನೆಲ್ಲಾ ಸೂಕ್ತ ರೀತಿಯಿಂದ ಮುನ್ನಡೆಸುವಂತೆ ಯಜಮಾನ್ ಚಿಕ್ಕವೀರಪ್ಪ(ಗರಡಿ) ಅವರಿಗೆ ವಹಿಸಿಕೊಟ್ಟಿದ್ದರಂತೆ. ನಂತರ ಹತ್ತಾರುವರ್ಷಗಳ ಕಾಲ ಮಠದ ಪಾರುಪತ್ತೆಗಾರರಾಗಿದ್ದ ಇವರು, ಮಠದ ವತಿಯಿಂದ ಉಚಿತ ಸಂಸ್ಕೃತ ಪಾಠಶಾಲೆ ಹಾಗೂ ವಿದ್ಯಾರ್ಥಿನಿಲಯಗಳನ್ನು ವ್ಯವಸ್ಥೆಗೊಳಿಸಿದ್ದರಂತೆ.[16] ಮುಂದೊಂದು ದಿನ ಈ ಮಠದ ಆಸ್ತಿ ಯಾವುದಾದರೊಂದು ಮಠಕ್ಕೆ ಸೇರಲೆಂದು, ತಮ್ಮ ಸಮೀಪವರ್ತಿಗಳಾಗಿದ್ದ ಶ್ರೀಶೈಲ ಪೀಠದ ಪರಂಪರೆಯ ಗೂಳೂರುಮಠದ ಕರಿಬಸವದೇಶಿಕೇಂದ್ರರಿಗೆ ಒಪ್ಪಿಸಿಬಿಟ್ಟರು.[17] ಅತ್ತ ಕೆಲವೇ ವರ್ಷಗಳಲ್ಲಿ ಮಠದ ಸಾಲಸೋಲಗಳನ್ನು ತೀರಿಸಬೇಕಾದ ಸಂದರ್ಭ ಒದಗಿ ೧೯೩೫ರಲ್ಲಿ ಸದರಿ ಸ್ವಾಮಿಯವರು ಯಜಮಾನ್ ಚಿಕ್ಕವೀರಪ್ಪನವರ ಮಗ ಗರಡಿಗುರುಬಸಪ್ಪನವರಿಗೆ ಮಠದ ಸಂಪೂರ್ಣ ಜವಾಬ್ದಾರಿಯನ್ನು ಹಿಂತಿರುಗಿಸಿದ್ದರು. ಅಂದಿನಿಂದಲೂ ಕಳಾಸಿಪಾಳ್ಯದ ಮರಿಸ್ವಾಮಿಮಠವು ಇವರ ವಂಶಸ್ಥರಲ್ಲಿಯೇ ಉಳಿದುಕೊಂಡಿರುತ್ತದೆ. ಸದ್ಯಕ್ಕೆ ನಗರ ಭೂಮಾಪನಾ ದಾಖಲಾತಿ ಲೆಕ್ಕಗಳ ಪ್ರಕಾರ ಮರಿಸ್ವಾಮಿ ಮಠದ ಹೆಸರಿನಲ್ಲಿ ೨೦೨೧.೭ ಚದರಗಜ ವಿಸ್ತೀರ್ಣದ ಮಠವಿರುವ ಜಾಗವು[18] ಹಾಗೇ ಉಳಿದುಕೊಂಡಿದೆ.

## ಅಡಿಟಿಪ್ಪಣಿಗಳು

1. ಈ ದೇಗುಲವನ್ನು ಕ್ರಿ.ಶ. ೧೬೮೭ರಲ್ಲಿ ಚಿಕ್ಕದೇವರಾಜ ಒಡೆಯರ ಒತ್ತಾಸೆಯ ಮೇರೆಗೆ ವಿಷ್ಣುದೇವಾಲಯವನ್ನಾಗಿ ಪರಿವರ್ತಿಸಲಾಯಿತೆಂಬುದು ಐತಿಹಾಸಿಕ ಸತ್ಯ. (ನೋಡಿ : B. Ramakrishna Rao. Bangalore Past and Present. P.6) ಈ ದೇಗುಲದ ದೆಸೆಯಿಂದಾಗಿಯೇ ಬೆಂಗಳೂರಿಗೆ ಕಲ್ಯಾಣನಗರವೆಂಬ ಹೆಸರು ಬಂದಿದ್ದಾಗಿ ಡಾ। ಗುಂಡಪ್ಪದೀಕ್ಷಿತರು (ನಿವೃತ್ತ ಮುಜರಾಯಿ ಇಲಾಖಾ ನೌಕರರು. ನಗರೇಶ್ವರ ದೇವಸ್ಥಾನದ ಅರ್ಚಕರು. ಕಬ್ಬನ್‌ಪೇಟೆ. ಬೆಂಗಳೂರು) ಹೇಳುತ್ತಾರೆ.
2. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೯೧.
3. ಅದೇ. ಪು. ೨೮೯.
4. ಕನ್ನಡನಿಘಂಟು. ಸಂ-೨. ಕನ್ನಡ ಸಾಹಿತ್ಯ ಪರಿಷತ್ತು. ಪು. ೧೪೯೪.
5. ಶ್ರೀಮರಿಸ್ವಾಮಿಗಳ ಜೀವಿತಚರಿತ್ರೆ. ಬಸವರಾಜಶಾಸ್ತ್ರಿ. (ಬಳ್ಳಾರಿ. ೧೯೧೪.) ಪು. ೨೩.
6. ಅದೇ. ಪು. ೧, ೨.
7. ತ.ಸು. ಶಾಮರಾಯ. ಶಿವಶರಣ ಕಥಾರತ್ನಕೋಶ. ಪು. ೩೧೮, ೩೧೯.
8. ಶ್ರೀ ಮರಿಸ್ವಾಮಿಗಳ ಜೀವಿತಚರಿತ್ರೆ. ಬಸವರಾಜಶಾಸ್ತ್ರಿ. (ಬಳ್ಳಾರಿ. ೧೯೧೪) ಪು. ೨೩-೨೫.
9. ಅದೇ ಪು. ೨೫, ೨೬.
10. ಅರಳೆಪೇಟೆಯ ಮರಿಸ್ವಾಮಿಮಠ, ಮನೆವಾರ್ತೆಪೇಟೆಯ ನಿರ್ವಾಣಮ್ಮನಮಠ, ದೊಡ್ಡಬೈಲುಖಾನೆಯ ಬುರುಗಲುದೇವರುಮಠ, ಶಂಕರಪುರದ ಓಣಿಬಸವಣ್ಣನ ಗುಡಿ ಬಳಿ ಇರುವ ಕುದುರೆಗದ್ದುಗೆಮಠ ಇನ್ನೂ ಮುಂತಾದವು ಇವರ ಶಾಖಾಮಠಗಳಾಗಿದ್ದುವು.
11. ಕಳಾಸಿಪಾಳ್ಯದ ಮರಿಸ್ವಾಮಿ ಮಠದಲ್ಲಿ ಇಂದಿಗೂ ಅವರ ಗದ್ದುಗೆ ಉಳಿದುಕೊಂಡಿದೆ.
12. ಶ್ರೀ ಮರಿಸ್ವಾಮಿಗಳ ಜೀವಿತಚರಿತ್ರೆ. ಬಸವರಾಜಶಾಸ್ತ್ರಿ. (ಬಳ್ಳಾರಿ. ೧೯೧೪) ಪು. ೧೫೦.
13. ಎಸ್. ಮಹದೇವಪ್ರಕಾಶ್. ಬೆಂಗಳೂರಿನ ವೀರಶೈವಮಠಗಳ ಆಸ್ತಿ-ಪಾಸ್ತಿ. ವಾರಪತ್ರಿಕೆ. ಸಂ : ಬಿ.ವಿ. ವೈಕುಂಠರಾಜು. ದಿನಾಂಕ : ೧೨.೭. ೧೯೮೭. ಪು. ೧೬.
14. ಡಾ। ಜ.ಚ.ನಿ. (ಮಠಾಧಿಪತಿ. ಗೂಳೂರುಮಠ. ಬಾಗೇಪಲ್ಲಿ ತಾಲ್ಲೂಕು. ಕೋಲಾರ ಜಿಲ್ಲೆ)ಯವರು ಮರಿಸ್ವಾಮಿಗಳ ಮೂಲಮಠ ಬಳ್ಳಾರಿಯಲ್ಲಿದೆ ಎಂದು ಹೇಳುತ್ತಾರೆ. ರಾಜಾಪುರ ಸಂಸ್ಥಾನಮಠದ ಅಧ್ಯಕ್ಷರಾಗಿರುವ (ಆನೆಕಲ್ಲು ತಾಲ್ಲೂಕು, ಬೆಂಗಳೂರು ಜಿಲ್ಲೆ) ರೇಣುಕಶಿವಾಚಾರ್ಯರು ಹೇಳುವ ಪ್ರಕಾರ-ಪೂರ್ವದಲ್ಲಿ ರಾಜಾಪುರದ ಮಠಾಧೀಶರಿಗೂ ಮರಿಸ್ವಾಮಿಗಳಿಗೂ ನಿಕಟವಾದ ಸಂಪರ್ಕವಿತ್ತು. ಮರಿಸ್ವಾಮಿಮಠವು ಬಾಳೆ ಹೊನ್ನೂರು ಪೀಠಕ್ಕೆ ಸೇರಿದ್ದೆಂದು ಹೇಳುತ್ತಾರೆ.
15. ಎಸ್. ಮಹದೇವಪ್ರಕಾಶ್. (ಪೂರ್ವೋಕ್ತ) ಪು. ೧೭.
16. ಹೇಳಿಕೆ : ರೇವಮ್ಮ (೮೪) ಮರಿಸ್ವಾಮಿಮಠದ ನಿವಾಸಿಗಳು. ಬೆಂಗಳೂರು.
17. ಹೇಳಿಕೆ : ಡಾ। ಜ.ಚ.ನಿ. ಗೂಳೂರುಮಠ. ಬಾಗೇಪಲ್ಲಿ ತಾಲ್ಲೂಕು. ಕೋಲಾರ ಜಿಲ್ಲೆ.
18. ನಗರ ಭೂಮಾಪನ ಇಲಾಖೆ. ೩ನೆಯ ವಿಭಾಗ. ಕ್ಷೇತ್ರ. ಸಂ : ೪೨. ಕ್ರ.ಸಂಖ್ಯೆ: ೫೦೩.

## ೨. ಮರಿಸ್ವಾಮಿಮಠ, ಅರಳೇಪೇಟೆ

ಅರಳೇಪೇಟೆಯ ಮುಖ್ಯರಸ್ತೆಯಲ್ಲಿ ಬೇಲಿಮಠದ ತಿರುವುರಸ್ತೆ ಸಿಗುತ್ತದೆ. ಈ ತಿರುವು ರಸ್ತೆಗೆ ಉತ್ತರ ಭಾಗದ ಎರಡು ಮತ್ತು ಮೂರನೆ ಗಲ್ಲಿಗಳನ್ನು ಈಗಲೂ 'ಮರಿಸ್ವಾಮಿ ಮಠದಗಲ್ಲಿ' ಎಂದೇ ಕರೆಯಲಾಗುತ್ತದೆ. ೧೯೩೦ರ ವರೆಗೂ ಇಲ್ಲಿ ಮರಿಸ್ವಾಮಿಗಳ ಶಾಖಾಮಠ ವೊಂದಿತ್ತು. ಇದನ್ನು 'ನಿರ್ವಾಣಪ್ಪನಮಠ'ವೆಂದೂ ಕರೆಯಲಾಗುತ್ತಿತ್ತು.[1] ಸದ್ಯಕ್ಕೆ ಈ ಭಾಗ ಸಂಪೂರ್ಣ ಖಾಸಗಿ ಮನೆಯಾಗಿ ಪರಿವರ್ತನೆಯಾಗಿಬಿಟ್ಟಿದೆ.

ಹಿಂದೆ ಈ ಮಠವು ಕೂಲಿಮಠವಾಗಿತ್ತು. ಮಠದ ಆವರಣದೊಳಗೆ ಮರಳಿನ ಮೇಲೆ ಅಕ್ಷರಾಭ್ಯಾಸವನ್ನು ಮಾಡಿಸಲಾಗುತ್ತಿತ್ತಂತೆ.[2] ಮಠದೊಳಗೆ ಅನುಷ್ಠಾನಕ್ಕಾಗಿಯೇ ಒಂದು ಗವಿ (ನೆಲಮಾಳಿಗೆ) ಇದ್ದುದಾಗಿ ಕಂಡವರು ಹೇಳುತ್ತಾರೆ. ಮರಿಸ್ವಾಮಿಗಳಿಗೆ ಭಕ್ತರೊಬ್ಬರು ಈ ಭಾಗವನ್ನು ದಾನವಾಗಿ ನೀಡಿದ್ದರಂತೆ. ಮುಂದೆ ಅವರ ಶಿಷ್ಯರು ಮಠವನ್ನು ಮುಂದುವರೆಸಿಕೊಂಡು ಬಂದರಾದರೂ ೧೯೩೦ರ ನಂತರ ಮಠಕ್ಕೆ ಸೂಕ್ತ ವಾರಸುದಾರರಿಲ್ಲದೆ ಅನಾಥವಾದುದಾಗಿ ತಿಳಿದು ಬರುತ್ತದೆ.

**ಅಡಿಟಿಪ್ಪಣಿಗಳು**

1. ಹೇಳಿಕೆ : ರಂಗಮ್ಮಜ್ಜಿ, ವಯಸ್ಸು ೮೧. ಮರಿಸ್ವಾಮಿಮಠದ ಗಲ್ಲಿಯ ನಿವಾಸಿ.
2. ಹೇಳಿಕೆ : ಇದೇ ಮಠದಲ್ಲಿ ಅಕ್ಷರಾಭ್ಯಾಸ ಮಾಡಿದ್ದುದಾಗಿ ನರಗುಂದದೇವರಮಠದ ನಂಜಮರಿ (೮೦)ಯವರು ಹೇಳುತ್ತಾರೆ.

## ೩. ನಿರ್ವಾಣಮ್ಮನಮಠ, ಮನೆವಾರ್ತೆಪೇಟೆ

ಇದೂ ಕೂಡ ಮರಿಸ್ವಾಮಿಮಠದ ಶಾಖಾಮಠ. ಮನೆವಾರ್ತೆಪೇಟೆಯ ಶಂಕರದೇವರ ಮಠದ ಬಳಿ ಎಂ.ಆರ್.ಲೇನ್‌ನಲ್ಲಿ ಈ ಮಠವಿದ್ದುದಾಗಿ ತಿಳಿದುಬರುತ್ತದೆ. ಇಲ್ಲಿ ಮರಿಸ್ವಾಮಿಗಳ ಸಮಕಾಲೀನರೂ ಹಾಗೂ ಅವರಿಂದ ಉಪದೇಶ ಪಡೆದಿದ್ದ ನಿರ್ವಾಣಮ್ಮ ಎಂಬ ಮಹಿಳಾ ವಿರಕ್ತೆ ಈ ಮಠದ ಗುರುಗಳಾಗಿದ್ದರಂತೆ. ಆದ್ದರಿಂದ ಇದನ್ನೂ ಕೂಡ ಮರಿಸ್ವಾಮಿಗಳ ಮಠವೆಂದೂ ಕರೆಯುವ ರೂಢಿ ಇತ್ತೆಂದು ಗೊತ್ತಾಗುತ್ತದೆ.[1] ಸದ್ಯಕ್ಕೆ ಈ ಮಠವು ಉಳಿದಿಲ್ಲ.

**ಅಡಿಟಿಪ್ಪಣಿ**

1. ಹೇಳಿಕೆ : ಶಾಂತಕುಮಾರಸ್ವಾಮಿಗಳು (೭೦) ಮಠಾಧಿಪತಿ. ಶಂಕರದೇವರಮಠ. ಮನೆವಾರ್ತೆಪೇಟೆ. ಬೆಂಗಳೂರು.

## ೪. ಕುದುರೆಗದ್ದುಗೆ ಮಠ, ಓಣಿ ಬಸವಣ್ಣನ ಬೀದಿ ( ಶಂಕರಪುರ )

ಈಗಿನ ಬೆಂಗಳೂರಿನಲ್ಲಿ ದೊಡ್ಡ ಬಸವನಗುಡಿಗೆ ಹೊಂದಿಕೊಂಡಂತಿರುವುದೇ ಶಂಕರಪುರ. ಹಿಂದೆ ವೃಷಭಾದ್ರಿಯ ಮೇಲಿದ್ದ ದೊಡ್ಡ ಬಸವೇಶ್ವರನ ದೇವಾಲಯಕ್ಕೆ ಹೋಗಬೇಕಾದರೆ, ಬೆಂಗಳೂರು ಪಟ್ಟಣದ ಕಡೆಯಿಂದ ಓಣಿ (ಹಾದಿ) ಯೊಂದಿತ್ತು. ಈ ಓಣಿಯಲ್ಲೊಂದು ಪುಟ್ಟ ಬಸವೇಶ್ವರನ ಗುಡಿ ಇತ್ತು. ಅದೇ ಇಂದಿನ ಶಂಕರಪುರದ ಕರಣಿಕ ರಸ್ತೆಯಲ್ಲಿರುವ ಓಣಿ ಬಸವಣ್ಣನಗುಡಿ. ಈ ಕರಣಿಕ ರಸ್ತೆಯ ಬಸವಣ್ಣನಗುಡಿಗೆ ಅಭಿಮುಖವಾಗಿ ಒಂದು ಗದ್ದುಗೆ ಇಂದಿಗೂ ಉಳಿದುಕೊಂಡಿದೆ. ಪಶ್ಚಿಮಾಭಿಮುಖವಾಗುಳ್ಳ ಈ ಗದ್ದುಗೆಯ ಮುಂಭಾಗದಲ್ಲಿ 'ಮರಿಸ್ವಾಮಿಗಳ ಕುದುರೆ ಗದ್ದುಗೆ' ಎಂದು ಬರೆಯಲಾಗಿದೆ. ಮರಿಸ್ವಾಮಿಗಳ ಕಾಲದಲ್ಲಿ ಅವರ ಪ್ರಿಯವಾದ ಕುದುರೆಯೊಂದನ್ನು ಇಲ್ಲಿ ಸಮಾಧಿ ಮಾಡಲಾಗಿತ್ತೆಂದು ಪ್ರತೀತಿಯುಂಟು.

ಈ ಕುದುರೆಗದ್ದುಗೆಗೆ ಸಮೀಪವೇ ಶಂಕರಪುರದ ಮುಖ್ಯರಸ್ತೆಗೆ ಹೊಂದಿಕೊಂಡಂತೆ ಕಾಶಿಲಿಂಗನಗುಡಿ ಎಂಬ ಕುಟೀರವಿದೆ. ಇದನ್ನು ನೋಡಿದರೆ ಯಾರೋ ಹಿಂದಿನ ಸ್ವಾಮಿಗಳೊಬ್ಬರನ್ನು ಸಮಾಧಿ ಮಾಡಿರುವ ಗದ್ದುಗೆ ಎನಿಸುತ್ತದೆ. ಹಿಂದೆ ಮರಿಸ್ವಾಮಿಗಳ ಶಿಷ್ಯರೊಬ್ಬರು ಈ ಕುದುರೆಗದ್ದುಗೆ ಮಠದ ಸ್ವಾಮಿಗಳಾಗಿದ್ದುದಾಗಿ ಹೇಳುವುದುಂಟು. ಬೆಂಗಳೂರಿನ ಮರಿಸ್ವಾಮಿ ಮಠದ ಶಾಖಾಮಠಗಳಲ್ಲಿ ಇದೂ ಒಂದು. ಪ್ರಸ್ತುತ ಸದರಿ ಮಠವು ತನ್ನ ಅಸ್ತಿತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡಿದೆ.

---

ಈ ಮಠದ ಬಗೆಗೆ ಸೂಕ್ತ ಮಾಹಿತಿಗಳನ್ನು ನೀಡಿದವರು ಬಿ.ಕೆ. ಶಿವಯ್ಯಶಾಸ್ತ್ರಿಗಳು (೭೬) ರಾಜಾಜಿನಗರ, ಬೆಂಗಳೂರು

---

## ೫. ಬುರುಗಲುದೇವರಮಠ, ದೊಡ್ಡಬೈಲುಖಾನೆ

ಹಿಂದೆ ಈಗಿನ ವಿಶ್ವೇಶ್ವರಪುರ ಹಾಗೂ ಅದರ ಪೂರ್ವ ದಿಕ್ಕಿನ ವಿಶಾಲ ಭಾಗವನ್ನೆಲ್ಲಾ ಸೇರಿಸಿ ದೊಡ್ಡಬೈಲು ಖಾನೆ ಎಂದೇ ಕರೆಯಲಾಗುತ್ತಿತ್ತು. ಇಂದಿನ ಕಳಾಸಿಪಾಳ್ಯಕ್ಕೆ ಸಮೀಪವಿರುವ ಬಸಪ್ಪವೃತ್ತದ ಬಳಿಯಲ್ಲಿ ಬುರುಗಲುದೇವರಮಠದ ರಸ್ತೆ ಇದೆ. ಈ ಮಠದ ಅಳಿದುಳಿದ ಭಾಗ ಇಂದಿಗೂ ಕೊಂಚ ಉಳಿದಿದೆ. ಉತ್ತರಾಭಿಮುಖವಾಗುಳ್ಳ ಮಠದ ಆವರಣದೊಳಗೆ ಒಂದು ಗದ್ದುಗೆ ಇದೆ. ಈ ಗದ್ದುಗೆಯನ್ನು ಹಿಂದೆ 'ಶಂಭುಲಿಂಗ ಶಿವಾಚಾರ್ಯರಗದ್ದುಗೆ' ಎಂದು ಕರೆಯಲ್ಪಡುತ್ತಿತ್ತು.[1] ಈಗ ಆ ಗದ್ದುಗೆಯ ಮೇಲೆ "ಶ್ರೀ ಜಿ.ಕೆ. ರುದ್ರಾರ್ಯರ ವಂಶಸ್ಥರಾದ ಶ್ರೀಗುರುದೇವರ ಗದ್ದುಗೆ' ಎಂಬ ಶಿಲಾಫಲಕವನ್ನು ಇರಿಸಲಾಗಿದೆ.

ಬುರುಗಲುದೇವರ ಮಠವನ್ನು ಮರಿಸ್ವಾಮಿಗಳ ಶಾಖಾ ಮಠಗಳಲ್ಲೊಂದು ಎಂಬುದಾಗಿ ಹೇಳುವುದುಂಟು. ಇಲ್ಲಿದ್ದ ಸ್ವಾಮಿಗಳೊಬ್ಬರು ಆರುಕಾಸಿನ ಪುರಿಕೊಂಡು ಊರೂರಿಗೆಲ್ಲಾ ಹಂಚಿದರೂ, ಕೊಂಡ ಪುರಿ ಹಾಗೆಯೇ ಉಳಿಯುತ್ತಿದ್ದುವಂತೆ. ಆದ್ದರಿಂದಲೇ ಈ ಮಠಕ್ಕೆ 'ಬುರುಗಲುದೇವರಮಠ'ವೆಂಬ ಹೆಸರು ಬಂದಿರುವುದಾಗಿ ಪ್ರತೀತಿ[2] ಇದೆ. 'ಶಿವಶರಣಕಥಾರತ್ನಕೋಶ'ದಲ್ಲಿ ಮರಿಸ್ವಾಮಿಗಳೇ ಈ ರೀತಿ ಪುರಿ ಹಂಚುತ್ತಿದ್ದ ಸ್ವಾಮಿಗಳು ಎಂಬ ವಿಚಾರಗಳಿವೆ.[3] ಈ ಹಿನ್ನೆಲೆಯಲ್ಲಿ ಬುರುಗಲುದೇವರಮಠವು ಮರಿಸ್ವಾಮಿ ಮಠದ ಶಾಖೆ ಎನ್ನುವುದು ಒಪ್ಪತಕ್ಕ ಮಾತೇ ಆಗಿದೆ.

೧೯೩೫ರ ವೇಳೆಗೆ ಈ ಮಠವನ್ನು ಜಿ.ಕೆ. ರುದ್ರಾರಾಧ್ಯರು ಶುದ್ಧಕ್ರಯಕ್ಕೆ ಕೊಂಡುದಾಗಿ ಅವರ ವಂಶಸ್ಥರು ಹೇಳುತ್ತಾರೆ. ಇಂದಿಗೂ ಅವರುಗಳ ಸ್ವಾಧೀನಾನುಭವದಲ್ಲೇ ಇರುವ ಈ ಮಠವು ಈಗ ಸಂಪೂರ್ಣ ಖಾಸಗಿ ಸ್ವತ್ತಾಗಿಯೇ ಪರಿಣಮಿಸಿಬಿಟ್ಟಿದೆ.

---

**ಅಡಿಟಿಪ್ಪಣಿಗಳು**

1. Revenue Commissioner Court Judgement Order No: 28-55/1911-12.dt. 15.12.1911. P. 83 & 84.
2. ಜಿ.ಕೆ.ರುದ್ರಾರಾಧ್ಯರ ಮಕ್ಕಳಾದ ಗುರುನಾಥಪ್ಪ (೭೨) ಹೇಳುತ್ತಾರೆ. ಇವರು ಮತ್ತು ಇವರ ಸಹೋದರರೆಲ್ಲಾ ಸದರಿಮಠದ ಆಸ್ತಿಯಲ್ಲೇ ವಾಸವಾಗಿರುತ್ತಾರೆ.
3. ತ.ಸು. ಶಾಮರಾಯ. ಶಿವಶರಣಕಥಾರತ್ನಕೋಶ. ಪು. ೩೦೮

**೬. ಗದ್ದುಗೆಮಠ, ಜಕ್ಕರಾಯನ ಕೆರೆದಂಡೆ**
**೭. ಬೂದಿಸ್ವಾಮಿಮಠ, ಚಾಮರಾಜಪೇಟೆ**
**೮. ಕಂಬಳಿಸ್ವಾಮಿಮಠ, ವಿಜಯನಗರ**

ಮರಿಸ್ವಾಮಿಗಳ ಶಿಷ್ಯ ಪರಂಪರೆಯಲ್ಲಿ ಬರುವ ಬಹಳ ಪ್ರಮುಖವಾದ ಹೆಸರು ಗುರುಸ್ವಾಮಿಗಳದು. ಇವರ ಮೂಲಮಠ ಈಗಿನ ಜಕ್ಕರಾಯನಕೆರೆಗೆ ಪೂರ್ವ ಭಾಗ ದಲ್ಲಿದ್ದಿತೆಂದು ಹೇಳಲಾಗುತ್ತದೆ. ಜಕ್ಕರಾಯನ ಕೆರೆಯ ದಂಡೆಗೇ ಇದ್ದ ಈ ಮಠವು ಬಹಳ ಪ್ರಾಚೀನವಾದು ದಾಗಿದ್ದು, ಹಿಂದೆ ಅದನ್ನು 'ಗದ್ದುಗೆಮಠ'[1] ವೆಂದೇ ಕರೆಯಲಾಗುತ್ತಿತ್ತು. ಈ ಗದ್ದುಗೆಮಠದ ಗುರುಗಳಾಗಿದ್ದ ಗುರುಸ್ವಾಮಿಗಳು, ಪವಾಡಪುರುಷ ಮರಿಸ್ವಾಮಿಗಳ ಪ್ರಭಾವಕ್ಕೆ ಒಳಗಾಗಿ ಯೋಗ ಸಿದ್ಧಿಯನ್ನು ಪಡೆದವ ರಾಗಿದ್ದರು. ಪ್ರತಿನಿತ್ಯ ಇವರು ಗದ್ದುಗೆಯ ಮುಂಭಾಗದ ಕೆರೆಯಲ್ಲಿ ಮಿಂದು, ತಮ್ಮ ಕಂಬಳಿಯನ್ನು ನೀರಮೇಲೆ ಹಾಸಿ, ತೇಲುವ ಕಂಬಳಿಯ ಮೇಲೆ ಶಿವಪೂಜಾನಿರತರಾಗಿ ಧ್ಯಾನಮಗ್ನರಾಗುತ್ತಿದ್ದ ರಂತೆ. ಆದ್ದರಿಂದ ಇವರನ್ನು ಭಕ್ತರು ''ಕಂಬಳಿಸ್ವಾಮಿ'' ಗಳೆಂದೇ ಕರೆಯುವುದು ರೂಢಿಯಲ್ಲಿತ್ತು.

ಒಮ್ಮೆ ಗವಿಪುರದ ಕುಂಬಾರಹಟ್ಟಿಯ ಭವಿಜನರು ಕಂಬಳಿಸ್ವಾಮಿಗಳ ದರ್ಶನಕ್ಕಾಗಿ ಅವರ ಮಠಕ್ಕೆ ಹೋದರಂತೆ. ಸಂಜೆಯ ವೇಳೆಯಾಗಿ ಗುರುಗಳಾಗಲೇ ಯೋಗಮಗ್ನರಾಗಿ ಕುಳಿತಿರುವುದನ್ನು ಕಂಡು ಭಕ್ತರು ಕಾಯತೊಡಗಿದರು. ಪೂಜೆಯನ್ನು ಮುಗಿಸಿ ಬರುವ ವೇಳೆಗೆ ಕತ್ತಲಾವರಿಸಿತ್ತು. ಬಂದ ಭಕ್ತರಿಗೆ ದರ್ಶನ ನೀಡಿ ಆಶೀರ್ವಾದ ಮಾಡಿ, ಅವರ ಅಂಗೈಗೆ ಇಷ್ಟಿಷ್ಟು ಭಸ್ಮದ ಪುಡಿ ಇಟ್ಟರಂತೆ. ಕತ್ತಲಲ್ಲೂ ಆ ಭಸಿತವು ಭಕ್ತರ ಕೈಯಲ್ಲಿ ಪ್ರಕಾಶಮಾನವಾಗಿ ಹೊಳೆಯ ತೊಡಗಿತಂತೆ.ಅಂದಿನಿಂದ ಇವರಿಗೆ ''ಬೂದಿಸ್ವಾಮಿ'' ಗಳೆಂದೂ ಕರೆಯುವುದು ರೂಢಿಗೆ ಬಂದಿತು.

ಹೀಗೆ ಪವಾಡಪುರುಷರೂ, ಆಗಿದ್ದ ಗುರುಸ್ವಾಮಿಗಳ ತಪಃಶಕ್ತಿಗೆ ಮಾರುಹೋದ ಬೆಂಗಳೂರಿನ ಭಕ್ತರು ಇವರಿಗೆ ಅನೇಕ ರೀತಿಯ ದಾನಧರ್ಮಗಳನ್ನೂ, ಉದಾರ ಕಾಣಿಕೆಗಳನ್ನೂ ಅರ್ಪಿಸಿದ್ದರು. ಇಂತಹ ಕಾಣಿಕೆಯ ರೂಪದ ಮಠವೇ ಈಗಿನ ಚಾಮರಾಜಪೇಟೆಯ ರಾಯನ್ ವೃತ್ತದ ಆಗ್ನೇಯ ಭಾಗಕ್ಕಿರುವ ''ಬೂದಿಸ್ವಾಮಿಮಠ''. ಈ ಶತಮಾನದ ಆರಂಭದ ದಿನಗಳಲ್ಲಿ ಗವಿಪುರದ ವೀರಮ್ಮ ಮತ್ತು ಪಿಳ್ಳಪ್ಪ ಎಂಬ ಕುಂಬಾರ ಭಕ್ತರು ತಮ್ಮ ಸ್ವಂತ ಆಸ್ತಿಯಾಗಿದ್ದ ವ್ಯವಸಾಯಯೋಗ್ಯವಾದ ಭೂಮಿಯನ್ನು ಗುರುಗಳಿಗೆ ಅರ್ಪಿಸಿದ್ದರು. ಮುಂದೆ ಗುರುಸ್ವಾಮಿಗಳು ಈ ಭಾಗದಲ್ಲಿ ಒಂದು ಪುಟ್ಟ ಕುಟೀರವನ್ನು ನಿರ್ಮಿಸಿಕೊಂಡು ಇಲ್ಲೇ ವಾಸಿಸತೊಡಗಿ ದರು. ಆಶೀರ್ವಾದಕ್ಕಾಗಿ ಬಂದ ಭಕ್ತರಿಗೆ ತಪ್ಪದೆ ಇವರು ಭಸ್ಮವನ್ನು ಹಚ್ಚಿಯೇ ಕಳುಹಿಸುತ್ತಿದ್ದರಂತೆ. ಆದ್ದರಿಂದ ಈ ಮಠಕ್ಕೆ ಗುರುಸ್ವಾಮಿಗಳ ಮಠ ಎನ್ನುವುದಕ್ಕಿಂತ 'ಬೂದಿಸ್ವಾಮಿಮಠ'ವೆಂಬ ಹೆಸರೇ ಹೆಚ್ಚು ಪ್ರಚಲಿತವಾಯಿತು.

ಇದೇ ಸಂದರ್ಭದಲ್ಲಿ ಹೊಸಹಳ್ಳಿ ಗ್ರಾಮ (ವಿಜಯ ನಗರ)ದ ರೈತನೊಬ್ಬ ಕಂಬಳಿಸ್ವಾಮಿ (ಗುರುಸ್ವಾಮಿ)ಗಳ ಹೆಸರಿಗೆ ಸುಮಾರು ಎರಡು ಎಕರೆಯಷ್ಟು ಭೂಮಿಯನ್ನು ದಾನವಾಗಿ ಅರ್ಪಿಸಿದ್ದನು. ಗುರುಗಳು ಆ ಕಾಲದಲ್ಲಿ ಇದನ್ನು ಸುಂದರ ತೋಟವನ್ನಾಗಿ ಮಾಡಿಕೊಂಡಿದ್ದರು. ಇಲ್ಲಿ ಅನುಷ್ಠಾನಕ್ಕೆ ಒಂದು ಪುಟ್ಟ ಕುಟೀರದ ಜೊತೆಗೆ, ತಮ್ಮ ಗದ್ದುಗೆಯೂ ಇಲ್ಲೇ ಆಗಬೇಕೆಂದು ಅವರೇ ಅಣಿಮಾಡಿಸಿದ್ದರಂತೆ. ಮುಂದೆ ೧೯೩೦ರ ಸುಮಾರಿಗೆ ಅವರು ತೀರಿಕೊಂಡಾಗ ಇಲ್ಲೇ ಅವರ ಅಂತ್ಯಕ್ರಿಯೆಯನ್ನು ನಡೆಸಲಾಗಿದೆ. ಈಗಿನ ವಿಜಯನಗರದ ಪೈಪ್‌ಲೈನ್ ರಸ್ತೆಗೆ ಪಾದರಾಯನಪುರದ ರಸ್ತೆಯು ಬಂದು ಕೂಡುವ ಸ್ಥಳದಲ್ಲಿ ಇಂದಿಗೂ ಉಳಿದಿರುವ ಈ ಸುಂದರ ತೋಟದ ನಡುವೆ ಕಂಬಳಿಸ್ವಾಮಿ (ಗುರುಸ್ವಾಮಿ)ಗಳ ಗದ್ದುಗೆ ಇದೆ. ಈ ಗದ್ದುಗೆಗೆ ಈಗಲೂ ನಿತ್ಯ ದೀಪಾರಾಧನೆಗಳು ನಡೆಯು ತ್ತವೆ. ಸುಮಾರು ಅರ್ಧ ಎಕರೆಗೂ ಮಿಕ್ಕು ವಿಸ್ತೀರ್ಣವುಳ್ಳ ಈ ಭಾಗವನ್ನು ಹಿಂದಿನಿಂದಲೂ 'ಕಂಬಳಿಸ್ವಾಮಿ ಮಠ'ವೆಂದೇ ಕರೆಯುವುದಾಗಿ ಸ್ಥಳೀಯರು ಹೇಳುತ್ತಾರೆ.

ಹೀಗೆ 'ಬೂದಿಸ್ವಾಮಿ', 'ಕಂಬಳಿಸ್ವಾಮಿ'ಗಳೆಂಬ ವಿಶೇಷ ಖ್ಯಾತಿಯನ್ನು ಪಡೆದಿದ್ದ ಗುರುಸ್ವಾಮಿಗಳು, ಮೊದಲು ಮರಿಸ್ವಾಮಿಗಳ ಶಿಷ್ಯರಾಗಿದ್ದು, ನಂತರ ಆರೂಢ ಸಂಪ್ರದಾಯದ ಸಿದ್ಧಾರೂಢರೊಂದಿಗೆ ಸಮಾನ

ಮನೋಧರ್ಮವುಳ್ಳವರಾಗಿದ್ದರಂತೆ. ಗುರುಸ್ವಾಮಿಗಳು ಶಿವಾಧೀನರಾದ ನಂತರ ಅವರ ಶಿಷ್ಯ ನಟರಾಜ ಶಿವಯೋಗಿಗಳು ೧೯೬೦ರ ವರೆಗೂ ಈ ಮಠಗಳಿಗೆ ಅಧಿಪತಿಗಳಾಗಿದ್ದರು. ಇವರ ಗದ್ದುಗೆಯೂ ಕೂಡ ಕಂಬಳಿಸ್ವಾಮಿ ಮಠದ ಆವರಣದಲ್ಲಿಯೇ ಇದೆ. ಈಗ ಸದರಿ ಮಠಗಳ ಅಧಿಪತಿಗಳಾಗಿ ಶಿವಯೋಗಿ ಬಸವಲಿಂಗ ಸ್ವಾಮಿಗಳೆಂಬುವರು ಇದ್ದಾರೆ.[2]

ಚಾಮರಾಜಪೇಟೆಯಲ್ಲಿರುವ ಬೂದಿಸ್ವಾಮಿಮಠದ ಆವರಣದಲ್ಲಿ ದಾನಿಗಳಾದ ವೀರಮ್ಮ, ಪಿಳ್ಳಪ್ಪ ಇವರ ಸಮಾಧಿಗಳ ಜೊತೆಗೆ ಇನ್ನೂ ಐದಾರು ಬೇರೆ ಬೇರೆ ಸಮಾಧಿಗಳಿವೆ. ಸದ್ಯಕ್ಕೆ ಮಠೀಯ ವಾತಾವರಣದಿಂದ ಸಂಪೂರ್ಣ ವಿಮುಖವಾಗಿರುವ ಈ ಭಾಗದಲ್ಲಿ, ಮಠವೊಂದಿತ್ತು ಎಂದರೆ ಅಚ್ಚರಿಯಾಗದಿರದು. ನಗರ ಭೂ ಮಾಪನ ಇಲಾಖಾ ದಾಖಲಾತಿಗಳ ಪ್ರಕಾರ ಕ್ರ.ಸಂ: ೧೩.೨೩ರಲ್ಲಿ. ೩೨೩೭.೨ ಚದರಗಜ ವಿಸ್ತೀರ್ಣದ ಆಸ್ತಿಯು ಈ ಮಠಕ್ಕೆ ಸೇರಿದುದಾಗಿ ತಿಳಿದುಬರುತ್ತದೆ.

---

**ಅಡಿಟಿಪ್ಪಣಿಗಳು**

1. ಗದ್ದುಗೆಮಠ ಈಗ ಉಳಿದಿಲ್ಲ. ಕೆಲವು ವಂದತಿಗಳ ಪ್ರಕಾರ ಈ ಮಠ ಈಗಿನ ಕೃಷ್ಣ ಫ್ಲೋರ್‌ಮಿಲ್ಲಿನ ಎದುರು ಕೊಳಚೆ ನಿರ್ಮೂಲನಾ ಮಂಡಳಿಯ ಬಹುಮಹಡಿ ಕಟ್ಟಡವಿರುವ ಭಾಗದಲ್ಲಿದ್ದುದಾಗಿ ತಿಳಿದುಬರುತ್ತದೆ.
2. ಗದ್ದುಗೆಮಠ, ಬೂದಿಸ್ವಾಮಿಮಠ ಹಾಗೂ ಕಂಬಳಿಸ್ವಾಮಿಮಠ ಈ ಮೂರೂ ಮಠಗಳಿಗೆ ಸಂಬಂಧಿಸಿದಂತೆ ಅಧಿಕೃತವಾಗಿ ಮಾತನಾಡಬಲ್ಲ ಯಾವುದೇ ದಾಖಲೆಗಳೂ ಲಭ್ಯವಾಗಿಲ್ಲ. ಸದರಿ ಮಠಗಳ ಮಠಾಧಿಪತಿಗಳೆಂದು ಹೇಳಿಕೊಳ್ಳುವ ಶಿವಯೋಗಿ ಬಸವಲಿಂಗ ಸ್ವಾಮಿಗಳು (೫೫) ಮುಖತ: ಹೇಳಲ್ಪಟ್ಟ ಮಾಹಿತಿಗಳನ್ನು ಆಧರಿಸಿ ಈ ಬರವಣಿಗೆ ಮಾಡಲಾಗಿದೆ. (ಸಂದರ್ಶನದ ದಿನಾಂಕ : ೨೫.೧೦.೧೯೯೫ ರಿಂದ ೨೭.೧೦.೯೫. ಸ್ಥಳ : ಕಂಬಳಿಸ್ವಾಮಿಮಠ. ವಿಜಯನಗರ. ಬೆಂಗಳೂರು.)

## ೧.೩. ಶ್ರೀಶೈಲಪೀಠದ ಪರಂಪರೆಗೆ ಸೇರಿದ ಮಠಗಳು

ಬೆಂಗಳೂರಿನಲ್ಲಿ ವೀರಶೈವ ಗುರುವರ್ಗದ ಶ್ರೀಶೈಲ ಪೀಠದ ಸೂರ್ಯ (ದೇವ) ಸಿಂಹಾಸನದ ಪರಂಪರೆಗೆ ಸೇರಿದ ಮಠಗಳ ಸಂಖ್ಯೆ ಕೇವಲ ಒಂದೇ ಒಂದು. ಅದೇ ಈಗಿನ ಮುತ್ತಿನಕಂತೆಮಠ. ಅದೂ ಕೂಡ ಈ ಶತಮಾನದ ಪೂರ್ವಾರ್ಧದಲ್ಲಿ ಸ್ಥಾಪಿತವಾಗಿದ್ದು, ಇಂದಿಗೂ ತನ್ನ ಜೀವಂತಿಕೆಯನ್ನು ಕಾಪಾಡಿಕೊಂಡು ಬಂದಿದೆ. ಇಲ್ಲಿ ಲಭ್ಯವಾದ ಮಾಹಿತಿಗಳನ್ನು ಕಲೆಹಾಕಿ ಅದರ ಸಂಕ್ಷಿಪ್ತ ಇತಿಹಾಸವನ್ನು ಮುಂದೆ ವಿವೇಚಿಸಲಾಗಿದೆ.

ಇದೇ ಪೀಠ ಪರಂಪರೆಗೆ ಸೇರಿದ ಕೋಲಾರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕು ಗೂಳೂರಿನ ನಿಡುಮಾಮಿಡಿ ಮಠದ ಗುರು (ಡಾ|ಜ.ಚ.ನಿ.)ಗಳು 'ನಿಡುಮಾಮಿಡಿ ನಿವಾಸ'ವೆಂಬ ವೀರಶೈವ ತತ್ತ್ವ ಪ್ರಚಾರ ಕೇಂದ್ರವೊಂದು ನಗರದ ಬಸವನಗುಡಿ ಬಡಾವಣೆಯಲ್ಲಿ ಇರುತ್ತದೆ. ಈ ಕೇಂದ್ರವನ್ನು ಪ್ರಸ್ತುತ ಬೆಂಗಳೂರಿನ ವೀರಶೈವ ಮಠಗಳ ಪಟ್ಟಿಯಲ್ಲಿ ಸೇರಿಸಿರುವುದಿಲ್ಲ.

### ೧. ಮುತ್ತಿನಕಂತೆಮಠ, ಕೊಟ್ಟಿಗೆ ಗಲ್ಲಿ

ಪಂಚಪೀಠಗಳ ಪರಂಪರೆಯಲ್ಲಿ ಒಂದೊಂದು ಪೀಠಕ್ಕೂ ಪ್ರತ್ಯೇಕವಾದ ಗೋತ್ರಸೂತ್ರಾದಿ ನಿಯಮಗಳಿವೆ. ಈ ನಿಯಮಗಳ ಪ್ರಕಾರ ಶ್ರೀಶೈಲ ಪೀಠ ಪರಂಪರೆಯವರನ್ನು ''ಮುತ್ತಿನಕಂಚಿನಸೂತ್ರ''ದವರೆಂದು ಗುರುತಿಸಲಾಗಿದೆ.[1] ಇದೇ ಸೂತ್ರವನ್ನು ''ಮುಕ್ತಗುಚ್ಛ'' ವೆಂದೂ ಕರೆಯುವುದುಂಟು.[2] ಇಲ್ಲಿ 'ಸೂತ್ರ' ಎಂಬ ಪದವನ್ನು 'ಕಟ್ಟು', 'ಕಂತೆ' ಅಥವಾ 'ಸಾಧನ' ಎಂಬ ಅರ್ಥಗಳಲ್ಲಿ ಬಳಸಲಾಗಿದೆ. ನಿಘಂಟುಕಾರರು 'ಮುತ್ತಿನ ಕಂತೆ' ಎಂದರೆ ''ಲಿಂಗವಂತರ ಒಂದು ಗೋತ್ರನಾಮ'' ವೆಂದು ಅರ್ಥೈಸಿದ್ದಾರೆ[3]. ಇದು ಮೂಲತಃ ಗೋತ್ರನಾಮ ವಲ್ಲ, ಸೂತ್ರದ ಹೆಸರು ಎಂಬುದನ್ನು ಮೇಲಿನಮಾತುಗಳು ಸಾಬೀತುಪಡಿಸುತ್ತವೆ[4]. ಈ ಹಿನ್ನೆಲೆಯಲ್ಲಿ ಶ್ರೀಶೈಲ ಪೀಠ ಪರಂಪರೆಗೆ ಸೇರಿರುವ ಬೆಂಗಳೂರಿನ ''ಮುತ್ತಿನಕಂತೆ ಮಠ''ಕ್ಕೆ ಅದರ ಸೂತ್ರವನ್ನು ಆಧರಿಸಿ ಈ ಹೆಸರು ಬಂದಿರುವುದಂತೂ ಸ್ಪಷ್ಟವಾಗಿದೆ.

ಬೆಂಗಳೂರಿನ ಕೆಲವೇ ಪಟ್ಟದ ಮಠಗಳಲ್ಲಿ ಮುತ್ತಿನಕಂತೆಮಠವೂ ಒಂದು. ಇದು ಅಕ್ಕಿಪೇಟೆಯ ಮುಖ್ಯರಸ್ತೆಯು ಬಂದು ಓ.ಟಿ.ಸಿ.(Old Taluk Chacheri) ರಸ್ತೆಗೆ ಕೂಡುವ ಚೌಕದಲ್ಲಿ ಬಳೆಪೇಟೆಗೆ ಹೊಂದಿಕೊಂಡಂತೆ ಇದೆ. ಈ ಮಠವನ್ನು ಹಿಂದೆ 'ಕೊಟ್ಟಿಗೆ ಗಲ್ಲಿ ಮಠ' ಹಾಗೂ 'ನವಲುಗುಂದದಮಠ'ವೆಂದೂ ಕರೆಯುತ್ತಿದ್ದುದುಂಟು. ಇದೇ ಶತಮಾನದ ಪೂರ್ವಾರ್ಧದಲ್ಲಿ ಧಾರವಾಡದ ನವಲುಗುಂದದ ಕಡೆಯಿಂದ ಬಂದಿದ್ದ ನಂಜುಂಡಸ್ವಾಮಿ ಎಂಬುವರು ನಗರದ ಅಕ್ಕಿಪೇಟೆಯ ಕೊಟ್ಟಿಗೆ ಗಲ್ಲಿಯಲ್ಲಿ ಒಂದು ಮಠಾರವನ್ನು ಶುದ್ಧಕ್ರಯಕ್ಕೆ ಖರೀದಿಸಿ ಅಲ್ಲಿ ತಮ್ಮದೇ ಆದ ಮಠವೊಂದನ್ನು ಸ್ಥಾಪಿಸಿದ್ದರು. ಅದೇ ಮಠವೇ ಇಂದಿನ ಮುತ್ತಿನಕಂತೆಯಮಠ. ಆ ಹೊತ್ತಿನ ದಿನ ಈ ಮಠದ ಭಾಗದಲ್ಲಿ ವಿಶೇಷವಾಗಿ ಹಸುಗಳ ಸಾಕಾಣಿಕೆಯೇ ಪ್ರಧಾನವಾಗಿದ್ದುದರಿಂದ ಇದನ್ನು ಕೊಟ್ಟಿಗೆ ಗಲ್ಲಿ ಎಂದೂ, ಇಲ್ಲಿನ ಮಠವನ್ನು ಕೊಟ್ಟಿಗೆದೇವರಮಠವೆಂದೂ ಕರೆಯುವುದು ಸಾಮಾನ್ಯವಾಗಿತ್ತು. ಮೇಲಾಗಿ ಈ ಸ್ವಾಮಿಗಳು ನವಲುಗುಂದದಿಂದ ಬಂದವರಾದ್ದರಿಂದ ನವಲುಗುಂದದವರ ಮಠವೆಂದೂ ಕರೆಯುವ ಪ್ರತೀತಿ ಇತ್ತು.[5]

ಈಗ ಮುತ್ತಿನಕಂತೆಯ ಮಠದ ಅಧ್ಯಕ್ಷರಾಗಿರುವ ಸೋಮಶೇಖರ ಶಿವಾಚಾರ್ಯಸ್ವಾಮಿಗಳು ಹೇಳುವ ಪ್ರಕಾರ - ''ಪೂರ್ವದಲ್ಲಿ ಇವರ ಮಠವು ಈಗಿನ ರಾಜಾಜಿನಗರದ ಸಿದ್ಧರಾಮನದಿಣ್ಣೆ (೫ನೇ ಬ್ಲಾಕ್) ಯಲ್ಲಿರುವ 'ಗವಿಮಠ'ವೇ ಆಗಿತ್ತು. ಕಾರಣಾಂತರಗಳಿಂದ ಇದು ಅರಳೆಪೇಟೆಗೆ ಸೇರಿದ್ದ 'ಚೌಕಿಮಠ'ಕ್ಕೆ ವರ್ಗಾವಣೆ ಯಾಗಿತ್ತು. ಮುಂದೆ ರೈಲು ನಿಲ್ದಾಣಕ್ಕಾಗಿ ಈ ಮಠದ ಭಾಗವೆಲ್ಲಾ ಸೇರ್ಪಡೆಯಾದಾಗ ತಮ್ಮ ಹಿರಿಯ ಗುರುಗಳಾದ ಈಶ್ವರ ಶಿವಾಚಾರ್ಯ (ನಂಜುಂಡ ಸ್ವಾಮಿಗಳು)ರು ನೂತನ ಮಠವನ್ನು ನಿರ್ಮಾಣ ಮಾಡಿದರು'' ಎನ್ನುತ್ತಾರೆ. ಹಾಗೆಯೇ ಮುಂದುವರೆದು ''ತಮ್ಮ ಮಠ ಹಿಂದಿನಿಂದಲೂ ಶ್ರೀಶೈಲ ಪೀಠದ ಪರಂಪರೆಗೆ ಸೇರಿದ ಮಠವಾಗಿತ್ತಾದರೂ; ಬಾಳೆಹೊನ್ನೂರುಪೀಠದ ಶಿವಾನಂದ ಜಗದ್ಗುರುಗಳ ಕಾಲದಲ್ಲಿ ಅವರ ಪ್ರಭಾವದಿಂದಾಗಿ ಬಾಳೆಹೊನ್ನೂರಿನ ಶಾಖಾಮಠವಾಗಿ ಪರಿವರ್ತನೆಯಾಯಿತು'' ಎನ್ನುತ್ತಾರೆ.[6]

ಮುತ್ತಿನಕಂತೆ ಮಠದ ವಿಚಾರವಾಗಿ ಹೇಳಲೇಬೇಕಾದ ಮಹತ್ವದ ಸಂಗತಿಯೊಂದಿದೆ. ಇಂದಿನ ಸೋಮಶೇಖರ ಶಿವಾಚಾರ್ಯರಿಗೂ ಮೊದಲೇ ಈ ಮಠದ ಅಧಿಪತಿಗಳಾಗಿದ್ದ ಶಿವಕುಮಾರ ಸ್ವಾಮಿಗಳ ಹೆಸರು, ಆಯುರ್ವೈದ್ಯಕ್ಷೇತ್ರದಲ್ಲಿ ಎದ್ದು ಕಾಣುವಂಥದು. ಇವರು ಕಾಶಿಯಲ್ಲಿ ಉನ್ನತ ವ್ಯಾಸಂಗವನ್ನು ಮುಗಿಸಿ ಸಂಸ್ಕೃತ ಹಾಗೂ ಕನ್ನಡ ಭಾಷೆಗಳೆರಡರಲ್ಲೂ ಅದ್ವಿತೀಯ ಪಾಂಡಿತ್ಯಗಳಿಸಿದ್ದರು. ಇವರ 'ಆರೋಗ್ಯ ದರ್ಪಣ' ಎಂಬ ಆಯುರ್ವೈದ್ಯ ಗ್ರಂಥ' ಇದುವರೆಗೆ ಆರು ಮುದ್ರಣಗಳನ್ನು ಕಂಡಿರುವುದಲ್ಲದೆ, ೧೯೬೨ರಲ್ಲಿ ರಾಜ್ಯ ಸರ್ಕಾರದ ಪುರಸ್ಕಾರಕ್ಕೆ ಪಾತ್ರವಾಗಿತ್ತು.[7]

ಆಯುರ್ವೇದಾಚಾರ್ಯರೆಂದೇ ಪ್ರಖ್ಯಾತರಾಗಿದ್ದ ಪಂಡಿತ ಶಿವಕುಮಾರ ಸ್ವಾಮಿಗಳು ದಿನಾಂಕ : ೧೯.೧೦. ೧೯೭೯ರಲ್ಲಿ ಶಿವಾಧೀನರಾದರು.[8] ಈ ಮುನ್ನವೇ ಅವರು ದಿನಾಂಕ : ೧೧.೨.೧೯೬೩ರಲ್ಲಿ ತಮ್ಮ ಮುಂದಿನ ಉತ್ತರಾಧಿಕಾರಿಯನ್ನು ಆಯ್ಕೆ ಮಾಡಿಕೊಂಡಿದ್ದರು.[9] ಅವರೇ ಇಂದಿನ ಮುತ್ತಿನಕಂತೆಮಠದ ಅಧ್ಯಕ್ಷರಾಗಿರುವ ಸೋಮಶೇಖರ ಶಿವಾಚಾರ್ಯಸ್ವಾಮಿಗಳು.

---

**ಅಡಿಟಿಪ್ಪಣಿಗಳು**

1. ವೀರಶೈವ ಧರ್ಮಸಿಂಧು. ಅದರಗುಂಜಿ ಹಿರೇಮಠದ ಶಿವಲಿಂಗಯ್ಯ. ಪು. ೪೨.
2. ವೀರಶೈವ ಸದಾಚಾರ ಸಂಗ್ರಹದ (ಸಂ : ಎಂ.ಜಿ. ನಂಜುಂಡಾರಾಧ್ಯ. ಪು. ೯೪, ೯೫) ಪ್ರಕಾರ ಬಾಳೆಹಳ್ಳಿಪೀಠ ಪಡಿವಿಡಿ ಸೂತ್ರ, ಉಜ್ಜಯಿನಿಪೀಠ ವೃಷ್ಟಿಸೂತ್ರ, ಶ್ರೀಶೈಲಪೀಠ ಮುಕ್ತಗುಚ್ಛಸೂತ್ರ, ಕೇದಾರಪೀಠ ಲಂಬನಸೂತ್ರ ಹಾಗೂ ಕಾಶಿಪೀಠ ಪಂಚವರ್ಣದ ಸೂತ್ರಕ್ಕೆ ಸೇರಿದವಾಗಿವೆ.
3. ವೀರಶೈವ ಪಾರಿಭಾಷಿಕ ಪದಕೋಶ. ಪು. ೨೪; ಮತ್ತು ಕನ್ನಡ ನಿಘಂಟು ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು. ೭೨೪೫.
4. ಏಕೆಂದರೆ ವೀರ, ನಂದಿ, ಭೃಂಗಿ, ವೃಷಭ ಹಾಗೂ ಸ್ಕಂದ ಗೋತ್ರಗಳೆಂಬ ಐದು ಗೋತ್ರಗಳೇ ಬೇರೆ ಇವೆ. (ವೀರಶೈವ ಸದಾಚಾರ ಸಂಗ್ರಹ. ಪು. ೯೪, ೯೫)
5. ಮೇಲ್ಕಂಡ ಮಾಹಿತಿಗಳನ್ನು ಒದಗಿಸಿಕೊಟ್ಟವರು ಬೇಲಿಮಠದ ಅಧ್ಯಕ್ಷರಾಗಿರುವ ಶಿವರುದ್ರಸ್ವಾಮಿಗಳು (೫೦) ಬೆಂಗಳೂರು.
6. ಸೋಮಶೇಖರ ಶಿವಾಚಾರ್ಯ ಸ್ವಾಮಿಗಳು (೭೨) ನಗರದ ಜಯಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಸುಮಾರು ೨೦ ವರ್ಷಗಳ ಕಾಲ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ತಮ್ಮ ಮಠದ ಬಗೆಗೆ ತುಂಬು ಅಭಿಮಾನದಿಂದ ಏನೆಲ್ಲಾ ಹೇಳಿಕೆಗಳನ್ನು ನೀಡಬಲ್ಲರೇ ಹೊರತು, ಅಧಿಕೃತವಾದ ದಾಖಲೆಗಳ ಬಗೆಗೆ ಕೇಳಿದಾಗ ಅಥವಾ ಗಂಭೀರವಾದ ಪರಿಶೀಲನೆಗಾಗಿ ವಿನಂತಿಸಿಕೊಂಡಾಗ ಏನೇನೂ ಸಹಕಾರ ದೊರೆಯಲಿಲ್ಲ.
7. ಆರೋಗ್ಯದರ್ಪಣ. ಪಂ। ಶಿವಕುಮಾರಸ್ವಾಮಿಗಳು. ನಿವೇದನೆ. ಪು. ೬.
8. ಅದೇ. ಪ್ರಕಾಶಕರ ನುಡಿ. ಪು. ೩.
9. ಹೇಳಿಕೆ : ಸೋಮಶೇಖರ ಶಿವಾಚಾರ್ಯಸ್ವಾಮಿಗಳು (೭೨) ಇದೇ ಮಠದ ಅಧಿಪತಿಗಳು.

## ೧.೪. ಇತರೆ ಪಟ್ಟದ ಮಠಗಳು

ಬೆಂಗಳೂರು ಪಟ್ಟಣದಲ್ಲಿ ಹಿಂದೆ ಗುರುವರ್ಗದ ಇಂಥದೇ ಪೀಠ ಪರಂಪರೆಗೆ ಸೇರಿದ್ದೆಂದು ಗುರುತಿಸಲಾಗದ ಕೆಲವು ವೀರಶೈವ ಪಟ್ಟದ ಮಠಗಳಿದ್ದುವು. ಅವುಗಳಾವುವೆಂದರೆ -

೧. ಗವಿಪುರದಮಠ.

೨. ಗದ್ದುಗೆಮಠ. ಯಶವಂತಪುರ.

೩. ಗದ್ದುಗೆಮಠ. ಜೇಡಹಳ್ಳಿ.

ಇವುಗಳಲ್ಲಿ ಗವಿಪುರದಮಠವು ಕೆಲವು ಸುಳಿವುಗಳ ಪ್ರಕಾರ ಬಹಳ ಪುರಾತನ ಕಾಲದ ಮಠವಾಗಿದ್ದು, ಇದು ಮಾಗಡಿ ಕೆಂಪೇಗೌಡನು ಸ್ವತಃ ಕಟ್ಟಿಸಿದ್ದಾಗಿ ತಿಳಿದು ಬರುತ್ತದೆ. ಮೇಲ್ಕಂಡ ಎರಡೂ ಮಠಗಳು ಇಂದು ಹೆಸರಾಗಿ ಉಳಿದಿವೆಯಷ್ಟೆ. ಮೂರನೆಯ ಮಠವೂ ಕೂಡ ತೀರಾ ಶಿಥಿಲಾವಸ್ಥೆಯಲ್ಲಿದೆ. ಈ ಮೇಲ್ಕಂಡ ಮಠಗಳ ಅಧ್ಯಯನಕ್ಕೆ ವಿಪುಲವಾದ ಮಾಹಿತಿಗಳೇನೂ ದೊರೆಯದ ಕಾರಣ ಮುಂದೆ ಅವುಗಳ ಸಂಕ್ಷಿಪ್ತ ಪರಿಚಯವನ್ನಷ್ಟೆ ಮಾಡಿಕೊಡಲು ಸಾಧ್ಯವಾಗಿದೆ.

### ೧. ಗವಿಪುರದಮಠ, ಗವಿಪುರದ ಗುಟ್ಟಹಳ್ಳಿ

ಬೆಂಗಳೂರು ಪಟ್ಟಣದ ಸುತ್ತಮುತ್ತಲೂ ಇದ್ದ ಅನೇಕ ಪುರಗಳಲ್ಲಿ 'ಗವಿಪುರ' ಬಹಳ ಪ್ರಸಿದ್ಧವಾದ ಸ್ಥಳ. ಈಗ ಆ ಭಾಗವನ್ನು ಕೆಂಪೇಗೌಡನಗರವೆಂದು ಕರೆಯಲಾಗುತ್ತದೆ. ಹಿಂದೆ ಗೌತಮ ಮಹರ್ಷಿಯು ಶಿವಲಿಂಗವನ್ನು ಆರಾಧಿಸಿದ ಸ್ಥಳವಿದೆಂದೂ ಹೇಳುವುದುಂಟು.[1] ಇಲ್ಲಿನ ಗವಿಯ ಗಂಗಾಧರೇಶ್ವರನ ಗುಡಿ ಹಾಗೂ ಪ್ರಳಯಕಾಲದ ವೀರಭದ್ರಸ್ವಾಮಿಯ ಗುಡಿಗಳು ಸ್ಥಳದ ಪಾವಿತ್ರ್ಯತೆಗೆ ಹಿಡಿದ ಕನ್ನಡಿಯಂತಿವೆ. ಗವಿಗಂಗಾಧರೇಶ್ವರನ ಗುಡಿಯು ಬಹಳ ಪುರಾತನಕಾಲದ ದೇಗುಲವಾಗಿದ್ದು, 'ಇದು ಗಂಗರ ಕಾಲದಲ್ಲಿ (೮ ಮತ್ತು ೯ನೆಯ ಶತಮಾನದ ವೇಳೆಗೆ ) ಜೈನ ಮುನಿಗಳ ಪ್ರಮುಖ ಆರಾಧನಾ ಸ್ಥಳವಾಗಿತ್ತೆಂದೂ, ನಂತರ ಚೋಳದೊರೆಗಳ ಕಾಲದಲ್ಲಿ (೧೧ನೆಯ ಶತಮಾನದ ವೇಳೆಗೆ) ಶೈವರ ಪ್ರಮುಖ ಆರಾಧನಾ ಕೇಂದ್ರವಾಗಿ ಮಾರ್ಪಟ್ಟಿರುವಂತೆಯೂ' ಇತಿಹಾಸಕಾರರು ಗುರುತಿಸಿದ್ದಾರೆ.[2] ಮುಂದೆ ಮೊದಲನೆಯ ಕೆಂಪೇಗೌಡನ ಕಾಲ (೧೫೧೩-೧೫೬೯)ದಲ್ಲಿ ಈ ದೇಗುಲ ವಿನೂತನವಾಗಿ ಪುನರುಜ್ಜೀವನ ಗೊಂಡಿದೆ.[3] ತನ್ನ ಕುಲದೇವತೆಯಾಗಿದ್ದ ಕೆಂಪಮ್ಮನ ಹೆಸರಿನಲ್ಲಿ ಇಲ್ಲಿನ ಕೆಂಪಾಂಬುಧಿಕೆರೆಯನ್ನು ಈತನೇ ಕಟ್ಟಿಸಿದ್ದನು.[4]

ಇಷ್ಟೆಲ್ಲಾ ಐತಿಹಾಸಿಕ ಹಿನ್ನೆಲೆಯುಳ್ಳ ಗವಿಪುರದಲ್ಲಿ ಇಮ್ಮಡಿ ಕೆಂಪೇಗೌಡನ ಕಾಲಕ್ಕೆ ಒಂದು ಶಿವಾಚಾರದ ಮಠ ಪ್ರಾರಂಭವಾಗಿದ್ದುದಾಗಿ ಇತ್ತೀಚಿನ ಸಂಶೋಧನೆಗಳಿಂದ ವ್ಯಕ್ತವಾಗಿದೆ. ಎಂ.ಜಿ. ನಾಗರಾಜ್ ಅವರು "ಗವಿಪುರದ ಗೌರಿಶಂಕರ ದೇಗುಲದ ನೆಲೆಯಲ್ಲಿ, ಪಾಶುಪತ ಪಂಥದ ಮಹೇಶ್ವರರ ಸಂಬಂಧದ ಮಠವೊಂದಿದ್ದು, ಅದು ೧೬೫೦ಕ್ಕೂ ಮುನ್ನವೇ ಪ್ರತಿಷ್ಠಿತವಾದ ಮಠವಾಗಿದ್ದುದಾಗಿ." ಗುರುತಿಸಿದ್ದಾರೆ.[5] ಬಹುಶಃ ಎಂ.ವಿ. ಕೃಷ್ಣರಾವ್ ಅವರು ಸೂಚಿಸುವ 'ಮಾಗಡಿ ಕೆಂಪೇಗೌಡನು ಶಿವಲಿಂಗಾರ್ಯರ ಪುತ್ರ ವೀರಣಾರ್ಯರು ಬೆಂಗಳೂರಿಗೆ ಬಂದಾಗ ಅವರನ್ನು ಸ್ವಾಗತಿಸಿ, ಅವರಿಗೆ ಅರ್ಪಿಸಿದ ಮಠವೇ ಇದಾಗಿರಬೇಕೆಂದು' ಅಭಿಪ್ರಾಯಪಟ್ಟಿದ್ದಾರೆ.[6] ಇಲ್ಲಿ 'ಶಿವಲಿಂಗಾರ್ಯರ ಪುತ್ರ ವೀರಣಾರ್ಯ' ಎಂಬ ಮಾತು ಬಂದಿರುವುದನ್ನು ನೋಡಿದರೆ, ಬಹುಶಃ ಈ ಮಠವು ಪುತ್ರವರ್ಗದ ಪಟ್ಟದ ಮಠವಾಗಿದ್ದಿರಬೇಕೆಂದು ಗ್ರಹಿಸಬಹುದಾಗಿದೆ. ಏಕೆಂದರೆ ಗುರುವರ್ಗದಲ್ಲಿ ಪುತ್ರವರ್ಗ ಮತ್ತು ಶಿಷ್ಯವರ್ಗ ಎಂಬ ಎರಡು ಪಂಗಡದ ಪಟ್ಟದ ಮಠಗಳಿದ್ದು, ಪುತ್ರವರ್ಗದಲ್ಲಿ ಸ್ವತಃ ಗುರುವಾದವನೂ ಕೂಡ ವಿವಾಹಿತನಾಗಿದ್ದು ತನ್ನ ಮಕ್ಕಳಲ್ಲಿ ಒಬ್ಬರನ್ನು ಅಥವಾ ತನ್ನ ಅಣ್ಣ ತಮ್ಮಂದಿರ ಮಕ್ಕಳಲ್ಲಿ ಒಬ್ಬರನ್ನು ಮುಂದಿನ ಮಠಾಧಿಪತಿಯನ್ನಾಗಿ ಮಾಡಲು ಅವಕಾಶವಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಒಟ್ಟಾರೆ ಕಾಲಗರ್ಭದೊಳಗೆ ತನ್ನ ಸಂಪೂರ್ಣ ಅಸ್ತಿತ್ವವನ್ನೇ ಮರೆಮಾಚಿರುವ ಈ ಗವಿಪುರದ ಮಠವೂ ಕೂಡ ಯಲಹಂಕದ ಪ್ರಭುಗಳ ಕಾಲಕ್ಕೆ (ಕ್ರಿ.ಶ. ೧೬೫೦ರಲ್ಲಿ) ನಿರ್ಮಾಣವಾಗಿರುವುದು ಮಹತ್ವದ ಸಂಗತಿ. ಬೆಂಗಳೂರಿನ ವೀರಶೈವ ಮಠಗಳ ಐತಿಹಾಸಿಕ ಹಿನ್ನೆಲೆಯ ದೃಷ್ಟಿಯಿಂದ ಧರ್ಮಶಾಲಾ ಮಠವನ್ನು ಬಿಟ್ಟರೆ ಎರಡನೇ ಅತ್ಯಂತ ಪ್ರಾಚೀನ ವೀರಶೈವ ಮಠವಿದೆಂದು ಗುರುತಿಸಬಹುದಾಗಿದೆ.

**ಅಡಿಟಿಪ್ಪಣಿಗಳು**

1. ಎಂ.ಜಿ. ನಾಗರಾಜ್. ಶ್ರೀ ಗೌರಿಶಂಕರದರ್ಶನ. ದೇಗುಲನೆಲೆಯ ಇತಿಹಾಸ. ಪು. ೧೨, ೧೩.
2. ಎಂ. ಫಜ್ಲುಲ್‌ಹಸನ್. ಕೆಂಪೇಗೌಡನ ಕಾಲಕ್ಕೂ ಹಿಂದಿನ ಬೆಂಗಳೂರಿನ ಇತಿಹಾಸ. ಪು. ೧. (ಬಿಡಿಲೇಖನ ಪ್ರತಿ)
3. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೦.
4. ಅದೇ. ಪು. ೨೨.
5. ಎಂ.ಜಿ. ನಾಗರಾಜ್. ಪೂರ್ವೋಕ್ತ. ಪು. ೧೫.
6. ಅದೇ. ಪು. ೧೬.

## ೨. ಗದ್ದುಗೆಮಠ, ಯಶವಂತಪುರ

ಹಿಂದೆ ಈಗಿನ ಯಶವಂತಪುರದ ಮುಖ್ಯಬೀದಿಯಲ್ಲಿರುವ ಛತ್ರದ ಭಾಗದಲ್ಲಿ ಒಂದು ವೀರಶೈವ ಪಟ್ಟದಮಠವಿತ್ತು ಎಂಬುದಾಗಿ ಹೇಳುವುದುಂಟು.[1] ಮಠವಿದ್ದ ಭಾಗವನ್ನು ಇಂದು ಗುರುತಿಸಲಾಗದಷ್ಟು ವ್ಯತ್ಯಾಸಗಳಾಗಿಬಿಟ್ಟಿವೆ. ಈ ಶತಮಾನದ ಆದಿಭಾಗದಲ್ಲಿ ಈ ಮಠವನ್ನು "ವೃಷಭೇಂದ್ರ ಶಿವಾಚಾರ್ಯರ ಗದ್ದುಗೆ ಮಠ"ವೆಂದೇ ಗುರುತಿಸಲಾಗಿದೆ.[2] ಜೊತೆಗೆ ಯಶವಂತಪುರ ಗ್ರಾಮದಲ್ಲಿ ಹಾಗೂ ಅಲ್ಲಿಗೆ ಸಮೀಪದ ಸಿಂಗಾಪುರ ಗ್ರಾಮದಲ್ಲಿ ಈ ಮಠಕ್ಕಾಗಿ ಮೀಸಲಿದ್ದ ಸಾಕಷ್ಟು ಇನಾಮು ಜಮೀನುಗಳಿದ್ದುದಾಗಿಯೂ ತಿಳಿದುಬರುತ್ತದೆ.[3] ಸದರಿಮಠವನ್ನು ಕುರಿತು ಇನ್ನೇನು ಹೆಚ್ಚಿನ ಮಾಹಿತಿಗಳು ಲಭ್ಯವಾಗಿಲ್ಲ.

**ಅಡಿಟಿಪ್ಪಣಿಗಳು**

1. ಕೆ.ಪಿ. ಶಿವಲಿಂಗಯ್ಯ. ಬೆಂಗಳೂರಿನ ವೀರಶೈವಮಠಗಳು. ಸೇವಾಸಂಪದ. ಸಂ : ಗೊ.ರು. ಚನ್ನಬಸಪ್ಪ. ಪು. ೪೦೩.
2. Revenue Commissioner Court Judgement Order No. 28-55/1911-12. Bangalore Dt. 15.12.1911 P. 88
3. Ibid.

## ೩. ಗದ್ದುಗೆಮಠ, ಜೇಡಹಳ್ಳಿ

ಬೆಂಗಳೂರಿನ ರಾಜಾಜಿನಗರಕ್ಕೆ ಹೊಂದಿಕೊಂಡಂತೆ ಶಿವನಗರದ (ಶಿವನಹಳ್ಳಿ) ಬಡಾವಣೆ (ಹಿಂದೆ ಪುಟ್ಟ ಗ್ರಾಮವಾಗಿತ್ತು) ವಿಸ್ತರಿಸಿಕೊಂಡಿದೆ. ಇಲ್ಲಿನ ಜೇಡಹಳ್ಳಿಗೆ ಸೇರಿದ ಎರಡನೇ ಮುಖ್ಯರಸ್ತೆಗೆ ಪಕ್ಕದ ಸ.ನಂ: ೩ರ ಜಾಗದಲ್ಲಿ ಒಂದು ಗದ್ದುಗೆ ಮಠವಿದೆ. ಇದನ್ನು ಬಸವಣ್ಣನ ಗದ್ದುಗೆಮಠವೆಂದೇ ಕರೆಯಲಾಗುತ್ತದೆ. ಇದೊಂದು ಪಟ್ಟದಮಠವಾಗಿದ್ದು, ಸದರಿ ಮಠಕ್ಕೆ ಈ ಭಾಗದಲ್ಲಿ ಹಿಂದೆ ಹತ್ತಾರು ಎಕರೆ ಜಮೀನುಗಳಿದ್ದುದಾಗಿ ಇಲ್ಲಿದ್ದ ಸಾರಂಗದೇವಸ್ವಾಮಿಗಳು ಹೇಳುತ್ತಾರೆ.[1]

ಈಗ ಮಠವೆಂದು ತೋರಲ್ಪಡುವ ಜಾಗದಲ್ಲಿ ಶಿಥಿಲವಾಗಿರುವ ಕೆಲವು ಗದ್ದುಗೆಗಳು, ಎಡೆಯೂರು ಸಿದ್ಧಲಿಂಗೇಶ್ವರರ ವಿಗ್ರಹ ಹಾಗೂ ಬಸವ ಮೂರ್ತಿಗಳು ಪೂಜಾಕೇಂದ್ರಗಳಾಗಿ ಉಳಿದಿವೆ. ಮಠದ ಸ್ವರೂಪವು ತೀರಾ ಶಿಥಿಲವಾಗಿದೆ.

**ಅಡಿಟಿಪ್ಪಣಿ**

1. ಇಲ್ಲಿ ಜಗದ್ಗುರು ಶ್ರೀ ಶಾಂತದೇವಸಾರಂಗ ದೇಶಿಕೇಂದ್ರ ಎಂಬ ಶತಾಯುಷಿ ಸ್ವಾಮಿಗಳಿದ್ದರು. ಅವರು ಫೆಬ್ರವರಿ ೧೯೯೬ರಲ್ಲಿ ಶಿವಾಧೀನರಾದರು.

## ४.೨. ವಿರಕ್ತವರ್ಗದ ಮಠಗಳು

ವೀರಶೈವ ದಾರ್ಶನಿಕ ಜಗತ್ತಿನಲ್ಲಿ ನಾಡಿನಾದ್ಯಂತ ವಿರಕ್ತವರ್ಗದ ಮಠಗಳ ಪಾತ್ರ ಅಸಾಧಾರಣವಾದದ್ದು. ಶೂನ್ಯಪೀಠದ ಪರಂಪರೆಯಲ್ಲಿ ಬರುವ ಈ ವೀರಶೈವ ವಿರಕ್ತವರ್ಗದ ಸಮಯಾಚಾರಗಳ ಭೇದಪ್ರಭೇದಗಳನ್ನು ಕುರಿತು ಹಿಂದಿನ ಅಧ್ಯಾಯದಲ್ಲಿ ವ್ಯಾಪಕವಾದ ಚರ್ಚೆ ನಡೆಸಲಾಗಿದೆ. ಈಗಾಗಲೇ ಪ್ರಸ್ತಾಪವಾಗಿರುವಂತೆ ವಿರಕ್ತವರ್ಗದಲ್ಲಿ ಪ್ರಮುಖವಾಗಿ ಐದು ಸಮಯಭೇದಗಳಿವೆ. ಅವುಗಳೇ

೧. ಮುರಿಗಾಸಮಯ
೨. ಕೆಂಪಿನ ಸಮಯ
೩. ಸಂಪಾದನೆಯಸಮಯ
೪. ಚೀಲಾಳಸಮಯ
೫. ಕುಮಾರಸಮಯಗಳು.

ಈ ಐದು ಸಮಯಭೇದಗಳಲ್ಲದೆ ಇನ್ನೂ ಅನೇಕ ಸಮಯ ಹಾಗೂ ಉಪಸಮಯಭೇದಗಳಿಗೆ ಸೇರಿದ ಅಸಂಖ್ಯಾತ ವಿರಕ್ತಮಠಗಳು ನಾಡಿನಾದ್ಯಂತ ವ್ಯಾಪಕವಾಗಿ ಹರಡಿಕೊಂಡಿವೆ.

ಇಪ್ಪತ್ತನೆಯ ಶತಮಾನದ ಆರಂಭದ ವೇಳೆಗೆ ಮೇಲ್ಕಂಡ ವಿವಿಧ ಸಮಯಭೇದಗಳಿಗೆ ಸೇರಿದ್ದ ಒಟ್ಟು ಮೂವತ್ತೈದು ವಿರಕ್ತಮಠಗಳು ಬೆಂಗಳೂರು ಪಟ್ಟಣದಲ್ಲಿ ಇದ್ದುದಾಗಿ ತಿಳಿದುಬರುತ್ತದೆ. ಇವುಗಳಲ್ಲಿ ಪ್ರಧಾನವಾಗಿ ಮುರಿಗಾಸಮಯದ ಪರಂಪರೆಗೆ ಸೇರಿದ್ದ ಎಂಟು ಮಠಗಳಿದ್ದರೆ; ಕೆಂಪಿನಸಮಯದ ಪರಂಪರೆಗೆ ಏಳು ಮಠಗಳಿದ್ದುವು. ಸಂಪಾದನೆ ಹಾಗೂ ಚೀಲಾಳಸಮಯಗಳ ತಲಾ ಎರಡು ಮಠಗಳು ಇಲ್ಲಿದ್ದರೆ; ಉಳಿದ ಹದಿನಾರು ವಿರಕ್ತಮಠಗಳ ಸಮಯಭೇದಗಳನ್ನು ಗುರುತಿಸಲಾಗಿಲ್ಲ. ಅವುಗಳನ್ನು ಇತರೆ ವಿರಕ್ತ ಮಠಗಳು ಎಂಬುದಾಗಿ ವರ್ಗೀಕರಿಸಲಾಗಿದೆ. ಆದರೆ ಪ್ರಮುಖ ಸಮಯಭೇದಗಳಲ್ಲಿ ಒಂದಾದ ಕುಮಾರ ಸಮಯಕ್ಕೆ ಸೇರಿದ ಮಠಗಳು ಬೆಂಗಳೂರಿನಲ್ಲಿ ಇದ್ದುದಕ್ಕೆ ಯಾವ ಆಧಾರಗಳೂ ಲಭ್ಯವಾಗಿಲ್ಲ. ಹೀಗೆ ಬೆಂಗಳೂರಿನ ವಿರಕ್ತವರ್ಗದ ಮಠಗಳನ್ನು ಮೇಲ್ಕಂಡ ವರ್ಗೀಕೃತ ಅನುಸೂಚಿಗನುಗುಣವಾಗಿ, ವಿಪುಲವಾಗಿ ದೊರಕಿರುವ ಮಾಹಿತಿಗಳನ್ನು ಆಧರಿಸಿ, ವ್ಯವಸ್ಥಿತವಾದ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳ ಅನುಕ್ರಮ ಚಾರಿತ್ರಿಕ ಪರಂಪರೆಯನ್ನು ಕುರಿತು ಮುಂದೆ ವಿವೇಚಿಸಲಾಗಿದೆ.

### ೨.೧. ಮುರಿಗಾಸಮಯದ ಮಠಗಳು

ವಿರಕ್ತವರ್ಗದ ಐದು ಪ್ರಮುಖ ಸಮಯಭೇದಗಳಲ್ಲಿ ಮುರಿಗಾಸಮಯವು ಪ್ರಧಾನವಾದುದು. ೨೦ನೆಯ ಶತಮಾನದ ಆರಂಭದ ವೇಳೆಗೆ ಬೆಂಗಳೂರು ಪಟ್ಟಣದಲ್ಲಿ ಮುರಿಗಾಸಮಯಕ್ಕೆ ಸೇರಿದ ಎಂಟು ವೀರಶೈವಮಠಗಳಿದ್ದುದಾಗಿ ತಿಳಿದುಬರುತ್ತದೆ. ಅವುಗಳಾವುವೆಂದರೆ :

೧. ಜಂಗಮಮಠ - ಮಾಮೂಲುಪೇಟೆ,
೨. ತಿಪ್ಪಶೆಟ್ಟಿಮಠ-ಹನುಮಂತಪುರ,
೩. ಗುರುವಣ್ಣದೇವರಮಠ- ಹನುಮಂತಪುರ ಸಮ್ಮತು,
೪. ಗುರುವಣ್ಣದೇವರಮಠದ ಚೌಕಿಮಠ-ಅರಳೆಪೇಟೆ,
೫. ಕಲ್ಲುಮಠ-ಬಳೆಪೇಟೆ,
೬. ಗೊಟ್ಟೂರಯ್ಯನಮಠ-ಹನುಮಂತಪುರ,
೭. ದೇಶದ ಮಠ-ಅರಳೆಪೇಟೆ
೮. ನಿರಂಜನದೇವರಮಠ-ಹನುಮಂತಪುರ.

ಈ ಮೇಲ್ಕಂಡ ಮಠಗಳು ಚಾರಿತ್ರಿಕವಾಗಿ ಕಳೆದ ಎರಡು ಶತಮಾನಗಳಿಂದ ಬೆಂಗಳೂರಿನಲ್ಲಿ ನಡೆಯಿಸಿದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂವರ್ಧನೆ ಅವಿಸ್ಮರಣೀಯವಾದದ್ದು. ಇವುಗಳಲ್ಲಿ ಮೊದಲ ಮೂರು ಮಠಗಳು ಈ ಹೊತ್ತಿಗೂ ಕೂಡ ತಮ್ಮ ಮೂಲ ಸ್ವರೂಪಕ್ಕೆ ಧಕ್ಕೆಯಾಗದ ರೀತಿ ಮಠಾಧಿಪತಿಗಳನ್ನುಳ್ಳ ಮಠಗಳಾಗಿ ಮುಂದುವರೆದಿವೆ. ಉಳಿದ ದೇಶದಮಠ, ಕಲ್ಲುಮಠ ಹಾಗೂ ಗುರುವಣ್ಣದೇವರಮಠದ ಚೌಕಿಮಠಗಳು ಇನ್ನೂ ಜೀವಂತವಾಗಿ ಉಳಿದಿವೆಯಾದರೂ ಇವುಗಳ ಮೂಲಸ್ವರೂಪಕ್ಕೆ ಭಂಗವಾಗತೊಡಗಿದೆ. ಇನ್ನುಳಿದ ನಿರಂಜನದೇವರಮಠ ಹಾಗೂ ಗೊಟ್ಟೂರಯ್ಯನ ಮಠಗಳು ಸಂಪೂರ್ಣವಾಗಿ ನಿರ್ನಾಮವಾಗಿಬಿಟ್ಟಿವೆ.

ಈಗ ಅನುಕ್ರಮವಾಗಿ ಪ್ರಸ್ತುತ ಮಠಗಳನ್ನು ಕುರಿತು ದೊರಕಿರುವ ಅಪರೂಪದ ಸಂಪನ್ಮೂಲಗಳನ್ನು ಆಧರಿಸಿ ಅವುಗಳ ಐತಿಹಾಸಿಕ ಬೆಳವಣಿಗೆಯನ್ನು ಕುರಿತು ಮುಂದೆ ವ್ಯಾಪಕವಾಗಿ ಚರ್ಚಿಸಲಾಗಿದೆ.

## ೧. ಮಾಮೂಲುಪೇಟೆಯ ಜಂಗಮಮಠ ಅಥವಾ ಗಂಜಾಂಮಠ

ಪ್ರಾಚೀನ ಕಲ್ಯಾಣನಗರದ ಮೂರು ಸುಪ್ರಸಿದ್ಧ ಪೇಟೆಗಳಲ್ಲಿ 'ಮಾಮೂಲುಪೇಟೆ'ಯೂ ಒಂದು. ಈ ಮಾಮೂಲುಪೇಟೆ ಎಂಬ ಹೆಸರಿನ ಹಿಂದೆ ಅನೇಕ ಜಿಜ್ಞಾಸೆಗಳಿವೆ. ಅವುಗಳನ್ನು ಪರಿಶೀಲಿಸುವ ಮುನ್ನ 'ಮಾಮೂಲು' ಎಂಬ ಪದದ ನಿಷ್ಪತ್ತಿಯನ್ನು ನೋಡಿದಾಗ -ಅದು ಅರೇಬಿಕ್ ಮೂಲದ 'ಮಅಮೂಲ್' ನಿಂದ ಮರಾಠಿಯಲ್ಲಿ 'ಮಾಮೂಲ್' ಅಥವಾ 'ಮಾಮೂಲಿ' ಆಗಿ, ಕನ್ನಡದಲ್ಲಿ "ಮಾಮೂಲು" ಆಗಿದೆ. ಇದು ರೂಢಿ; ಅಭ್ಯಾಸ; ಸಂಪ್ರದಾಯ; ರೀತಿ-ನೀತಿ; ಲಂಚ ಮುಂತಾದ ಅರ್ಥಗಳನ್ನು ಒಳಗೊಂಡಿದೆ.[1] ಈಗ ಅರ್ಥಕ್ಕನುಗುಣ ವಾಗಿಯೇ ಮಾಮೂಲುಪೇಟೆ ಎಂಬ ಹೆಸರು ರೂಪು ಗೊಂಡಿರುವುದನ್ನ ಮುಂದಿನ ಜಿಜ್ಞಾಸೆಗಳಲ್ಲಿ ಗುರುತಿಸಬಹುದಾಗಿದೆ.

ಪ್ರಮುಖವಾಗಿ ಮೊದಲನೆಯ ವಿಚಾರ ಸರಣಿಯ ಪ್ರಕಾರ-ಗೌಡದೊರೆಗಳ ಆಳ್ವಿಕೆಯ ಕಾಲದಲ್ಲಿ ಬೆಂಗಳೂರಿನ ಕೋಟೆಯೊಳಗೆ ವಾಸವಾಗಿದ್ದ ಹತ್ತಾರು ಕುಲಕಸುಬಿನ ಜನರು, ತಮ್ಮ ಕಸುಬಿಗನುಗುಣವಾಗಿ ನಡೆಯಬೇಕಾಗಿದ್ದ ರೀತಿ-ರಿವಾಜುಗಳನ್ನೂ ಹಾಗೂ ತೆರಬೇಕಾಗಿದ್ದ ಕರಗಳನ್ನೂ ಪ್ರಥಮವಾಗಿ ಈ ಸ್ಥಳದಿಂದ ಜಾಹೀರುಪಡಿಸಲಾಗುತ್ತಿತ್ತು. ಹೀಗೆ ಕಾಲದಿಂದಲೂ ಸಾಂಪ್ರದಾಯಿಕ ನಡಾವಳಿಗಳನ್ನೂ ಹಾಗೂ ಮಾಮೂಲಿನ ರೀತಿ-ನೀತಿಗಳನ್ನು ನಿರ್ದೇಶಿಸುವ ಸ್ಥಳವಿದಾಗಿದ್ದರಿಂದ ಈ ಪೇಟೆಗೆ ಮಾಮೂಲುಪೇಟೆ ಎಂಬ ಹೆಸರು ಬಂದಿತೆಂಬುದು[2] ಕೆಲವು ಸ್ಥಳೀಯರ ವಾದ. ಬಹುಶಃ ಈ ವಾದವನ್ನು ಸೂಕ್ಷ್ಮವಾಗಿ ಗಮನಿಸಿದರೆ ಗೌಡರ ಕಾಲದ ಆಡಳಿತದ ನಿರ್ದೇಶನಾಲಯವು ಹಿಂದೆ ಈ ಭಾಗದಲ್ಲಿದ್ದಿರಬೇಕು ಎನಿಸುತ್ತದೆ.

ಮತ್ತೊಂದು ವಾದದ ಪ್ರಕಾರ-ಇಮ್ಮಡಿಕೆಂಪೇಗೌಡನ ಕಾಲ (ಕ್ರಿ.ಶ. ೧೬೩೮)ದಲ್ಲಿ ಬಿಜಾಪುರದ ಸುಲ್ತಾನ (ಇಬ್ರಾಹಿಮ್ ಆದಿಲ್ ಷಾ)ನ ಕಡೆಯ ದಳಪತಿ (ರಣದುಲ್ಲಾಖಾನ್ ಮತ್ತು ಷಾಹಜಿ)ಗಳು ಬೆಂಗಳೂರು ಕೋಟೆಯನ್ನು ಆಕ್ರಮಿಸಿ ತಮ್ಮ ವಶಪಡಿಸಿಕೊಂಡರು. ಆಗ ಸುಲ್ತಾನನ ಆದೇಶದಂತೆ ಷಾಹಜಿಯು ಬೆಂಗಳೂರಿನ ಆಡಳಿತಗಾರನಾದನು. ಮುಂದೆ ಈ ಪಟ್ಟಣದ ಪ್ರಮುಖ ವಹಿವಾಟುದಾರರೆಲ್ಲಾ ಮರಾಠಿ ಸರದಾರನ ಆಣತಿಗೆ ತಲೆಬಾಗಿ ಆತ ವಿಧಿಸಿದ್ದ 'ಮಾಮೂಲಿ' ತೆರಿಗೆಗಳನ್ನು ಇದೇ ಪೇಟೆಯಲ್ಲಿದ್ದ ಸರದಾರನ ಠಾಣೆಗೆ ಜಮಾಯಿಸ ಬೇಕಾಗಿತ್ತು. ಆದ್ದರಿಂದಲೇ ಈ ಪೇಟೆಗೆ ಮಾಮೂಲು ಪೇಟೆ ಎಂಬ ಹೆಸರು ಬಂದುದಾಗಿ ಹೇಳುತ್ತಾರೆ.[3] ಬಹುಶಃ ಪದನಿಷ್ಪತ್ತಿಯ ಹಿನ್ನೆಲೆಯಲ್ಲಿ ಯೋಚಿಸಿದಾಗ ಈ ವಾದವು ಸತ್ಯಕ್ಕೆ ಹತ್ತಿರವಾದದ್ದೆನಿಸುತ್ತದೆ.

ಮಾಮೂಲುಪೇಟೆಯ ಮುಖ್ಯರಸ್ತೆಯಲ್ಲಿರುವುದೇ ಪ್ರಾಚೀನ ಕಾಲದ ಬೆಳ್ಳಿ ಬಸವಣ್ಣನ ಗುಡಿ. ಇದರ ಗರ್ಭ ಗುಡಿಯ ಹೊರಭಾಗದ ಗೋಡೆಯ ಮೇಲೆ ಉದ್ದವಾಗಿ ಹರಿಯುವ ಹೆಡೆಬಿಚ್ಚಿದ ಹಾವಿನ ಚಿತ್ರವನ್ನು ತೋರಿಸಿ, ಇದು ಕೆಂಪೇಗೌಡನ ಕಾಲದಲ್ಲೇ ನಿರ್ಮಾಣವಾದದ್ದೆಂದು ಸ್ಥಳೀಯರು ಬಲವಾಗಿ ನಂಬಿದ್ದಾರೆ.[4] ಗರ್ಭಗುಡಿಯ ಮೇಲ್ಭಾಗದ ಗೋಪುರದ ಆಕೃತಿ ಹಾಗೂ ಅದರಲ್ಲಿನ ಸಾಲಂಕೃತ ಕಮಾನುಗೂಡುಗಳು ಮತ್ತು ಮೂರ್ತಿಶಿಲ್ಪಗಳ ಜೊತೆಗೆ ನಾಲ್ಕು ದಿಕ್ಕಿಗೂ ಇರುವ ಬಸವಶಿಲ್ಪಗಳು, ಕೆಂಪೇಗೌಡನ ಗೋಪುರದಲ್ಲಿನ ಚಿತ್ರಗಳಿಗೆ ತೀರಾ ಸಾಮ್ಯವುಳ್ಳವಾಗಿರುವುದನ್ನು ನಾವು ಗುರುತಿಸಬಹುದಾ ಗಿದೆ. ಇನ್ನು ಒಳಭಾಗದ ನವರಂಗದಲ್ಲಿನ ಕಂಭಗಳ ಮೇಲಿರುವ ಶಿವಲಿಂಗ ಮುದ್ರಿಕೆ, ಲಿಂಗಪೂಜಾನಿರತ ಯೋಗಿಯ ಚಿತ್ರ ಹಾಗೂ ಬಸವ ಮುದ್ರಿಕೆಗಳ ಜೊತೆಗೆ, ಗರ್ಭಗುಡಿಯ ಮುಂಭಾಗದ ಬಾಗಿಲುವಾಡದ ಮೇಲಿನ ಸಾಲಂಕೃತ ವಿನ್ಯಾಸಗಳು ದೇಗುಲದ ಪ್ರಾಚೀನತೆಗೆ ಹಿಡಿದ ಕನ್ನಡಿಯಂತಿವೆ. ಇಂತಹ ಐತಿಹಾಸಿಕ ದೇಗುಲದ ಹಿಂಬದಿಯ ಬಲಭಾಗದಲ್ಲಿರುವುದೇ ಮಾಮೂಲು ಪೇಟೆಯ ಗಂಜಾಂಮಠ.

೨೦ನೆಯ ಶತಮಾನದ ಆರಂಭದ ವೇಳೆಗೆ ಮಾಮೂಲುಪೇಟೆಯಲ್ಲಿ ಪ್ರಮುಖವಾಗಿ ಮೂರು ಮಠಗಳಿದ್ದವು. ಅವುಗಳಾವುವೆಂದರೆ-ರುದ್ರಾರಾಧ್ಯರ ಚೌಕಿಮಠ, ಮೂಲೆಮಠ ಮತ್ತು ಜಂಗಮಮಠ.[5] ಈ ಜಂಗಮ ಮಠವೇ ಈಗಿನ ಗಂಜಾಂಮಠವಾಗಿದೆ. ಹಿಂದೆ ಶ್ರೀರಂಗಪಟ್ಟಣದ ಬಳಿಯ ಗಂಜಾಂನವರೊಬ್ಬರು ಈ ಮಠದ ಸ್ವಾಮಿಗಳಾಗಿದ್ದುದರಿಂದ ಗಂಜಾಂಅಯ್ಯನ ಮಠವೆಂದು ಕರೆಯುವುದು ರೂಢಿಗೆ ಬಂತು.[6] ೧೮೮೦ರ ದಾಖಲೆಯೊಂದರಲ್ಲೂ ಗಂಜಾಂ ಅಯ್ಯನ ಮಠವೆಂದೇ ಗುರುತಿಸಲಾಗಿದೆ.[7] ೧೮೪೭ರ ವೇಳೆಗೆ ಈ ಮಠದಲ್ಲಿ

ಚನ್ನವೀರ ಒಡೆಯರು ಎಂಬ ಸ್ವಾಮಿಗಳಿದ್ದರು. ಅವರ ಹೇಳಿಕೆಯ ಪ್ರಕಾರ ೧೮೩೬ರ ಖಾನೇಸುಮಾರಿ (ಜನಗಣತಿ) ಲೆಕ್ಕದಲ್ಲಿ ಮಾಮೂಲುಪೇಟೆಯ ಜಂಗಮಮಠವು ತಿಪ್ಪಶೆಟ್ಟಿಮಠದ ಆಧೀನಮಠವಾಗಿತ್ತು. ಅದಕ್ಕೂ ಹಿಂದೆ ಈ ಮಠದಲ್ಲಿ ಗಂಜಾಂನ ಒಬ್ಬ ಅಯ್ಯ ಮಠಾಧಿಪತಿಗಳಾಗಿದ್ದರೆಂದು[8] ತಿಳಿದುಬರುತ್ತದೆ.

೧೯೦೭ರ ಮುಜರಾಯಿ ಇಲಾಖಾ ದಾಖಲೆಯ ಪ್ರಕಾರ ಮುಮ್ಮಡಿ ಕೃಷ್ಣರಾಜಒಡೆಯರು ೧೮೨೨ರಲ್ಲಿ ಈ ಮಠಕ್ಕೆ ಬೆಂಗಳೂರಿನ ಬಳಿಯ ಹನುಮಂತಪುರ ಗ್ರಾಮದಲ್ಲಿ (ಈಗಿನ ಗಾಂಧಿನಗರದಲ್ಲಿ) ಭೂದಾನ ನೀಡಿದ್ದರು. ಈ ಭೂಮಿಯನ್ನು ೧೮೬೨-೬೩ರ ಸಾಲಿನಲ್ಲಿ ಸೆಂಟ್ರಲ್ ಜೈಲಿನ ವಿಸ್ತರಣೆಗಾಗಿ ಆಗಿನ ಸರ್ಕಾರ ಬಳಸಿಕೊಂಡಿತು. ಇದಕ್ಕೆ ಪರಿಹಾರವಾಗಿ ಕೆಂಗೇರಿ ಬಳಿಯ ಸೂಲಿಕೆರೆ ಗ್ರಾಮದಲ್ಲಿ ಬದಲಿ ಭೂಮಿಯನ್ನು (ಸರ್ವೆನಂ. ೧೪ರಲ್ಲಿ ೭ ಎಕರೆ ೧೪ ಗುಂಟೆ) ಕೊಡಿಸಲಾಗಿತ್ತು. ಆಗ ಸದರಿ ಮಠ ಮತ್ತು ಅದರ ಇನಾಂ ಜಮೀನುಗಳ ಉಸ್ತುವಾರಿಯನ್ನು ತಿಪ್ಪಶೆಟ್ಟಿಮಠದ ಗುರುಸಿದ್ಧಸ್ವಾಮಿಗಳೇ ನಿರ್ವಹಿಸುತ್ತಿದ್ದರು.[9] ೧೮೬೭ರ ನವೆಂಬರ್ ೮ ರಂದು ಗುರುಸಿದ್ಧ ಸ್ವಾಮಿಗಳು ಈ ಮಠವನ್ನು ಬಾಣಾವರದ ಶಾಂತಪ್ಪ[10]ನವರ ಮಗ ಚಂದ್ರಣ್ಣನಿಗೆ ೫೦೦/- ರೂಗಳಿಗೆ ಭೋಗ್ಯ ಮಾಡಿದ್ದರು.[11] ಇವರು ಮುಂದಿನ ೨೦ ವರ್ಷಗಳ ಕಾಲ ತಮ್ಮ ವಶದಲ್ಲೇ ಇಟ್ಟುಕೊಂಡಿದ್ದ ಮಠವನ್ನು ೧೮೭೬ ಜುಲೈ ೮ ರಂದು ಮಾಮೂಲುಪೇಟೆಯ ಚನ್ನವೀರಶೆಟ್ಟರಿಗೆ ೬೫೦/- ರೂಗಳಿಗೆ ಆಧಾರ ಮಾಡಿದರು.[12] ನಂತರ ಚನ್ನವೀರಶೆಟ್ಟರು ಹಾಗೂ ಅವರ ಮಗ ದಿಗಂಬರಶೆಟ್ಟರು ಇಬ್ಬರೂ ಸೇರಿ ಸದರಿ ಮಠವನ್ನು ಹೆಗ್ಗುಂದದ ನಂಜುಂಡಸ್ವಾಮಿಗಳಿಗೆ ದಿ: ೧೨.೭.೧೮೮೬ರಂದು ದಾನವಾಗಿ ಬರೆದುಕೊಟ್ಟರು.[13] ಇದರ ಜೊತೆಗೆ ನಂಜುಂಡ ಸ್ವಾಮಿಗಳ ಮಠವಲ್ಲಿ ಪ್ರಾರಂಭಿಸಿದ ಸಂಸ್ಕೃತ ಪಾಠಶಾಲೆ ಹಾಗೂ ಉಚಿತ ವಿದ್ಯಾರ್ಥಿನಿಲಯಕ್ಕೆ ಅನುಕೂಲವಾಗಲೆಂದು ಮಠದ ಪಕ್ಕದಲ್ಲೆ ಇದ್ದ ಮುಂಗಾನಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿಗಳ ಮನೆಯನ್ನು ಕ್ರಯಕ್ಕೆ ಕೊಂಡು, ಅದನ್ನು ದಾನವಾಗಿ ಅರ್ಪಿಸಿದ್ದರು.[14] ಈ ತಂದೆ ಮಕ್ಕಳಿಬ್ಬರ 'ಶಿವಾರ್ಪಿತ'ದ ದಾನವನ್ನು ನಂಜುಂಡಸ್ವಾಮಿಗಳು ತಮ್ಮ 'ಸದ್ವಿದ್ಯಾನ್ನದಾನ ಪ್ರಾಭವ ಪ್ರಕಾಶಿಕಾ'ದಲ್ಲಿ ಬಹುವಾಗಿ ಕೊಂಡಾಡಿದ್ದಾರೆ.[15] ಇವರ ಉದಾರ ದಾನದ ಫಲವಾಗಿ ನಂಜುಂಡಸ್ವಾಮಿಗಳು ಗಂಜಾಂಮಠದಲ್ಲಿ ೧೮೮೬ರ ಡಿಸೆಂಬರ್ ೧೫ ರಂದು ''ಶ್ರೀಪ್ರಮಥ'ಗಣ ಮನೋರಂಜನಿ ಸಂಸ್ಕೃತ ಪಾಠಶಾಲೆ''ಯನ್ನು ಪ್ರಾರಂಭಿಸಿದರು.[16]

ಈ ವೇಳೆಗಾಗಲೇ ಸಾಕಷ್ಟು ಶಿಥಿಲವಾಗಿದ್ದ ಮಠದ ಕಟ್ಟಡಗಳನ್ನು ಹಂತಹಂತವಾಗಿ ಕೀಳಿಸಿ, ೧೮೯೫ರ ವೇಳೆಗೆ ೮೦ ಅಂಕಣದ ಮಠವನ್ನು ವಿನೂತನವಾಗಿ ನಿರ್ಮಾಣ ಮಾಡಿದರು. ಪಾಠಶಾಲೆಯು ನಿರಾತಂಕವಾಗಿ ನಡೆಯಲು ವ್ಯವಸ್ಥೆಮಾಡಿದ್ದರು. ಇವುಗಳ ಸಾರ್ಥಕ ಪರಿಶ್ರಮದ ಹಿಂದೆ ನಂಜುಂಡಸ್ವಾಮಿಗಳಿಗೆ ಬೆಂಬಲವಾಗಿ ನಿಂತವರು ಅವರ ಶಿಷ್ಯರಾಗಿದ್ದ ಚಿದ್ಘನಶಿವಾಚಾರ್ಯರು. ಅನೇಕ ಭಕ್ತರು ಈ ಗುರುಶಿಷ್ಯರಿಬ್ಬರ ಸತ್ಕಾರ್ಯಕ್ಕಾಗಿ ಉದಾರ ದಾನಧರ್ಮಗಳನ್ನು ನೀಡಿದ್ದರು. ಇದರ ಜೊತೆಗೆ ಚಿದ್ಘನಶಿವಾಚಾರ್ಯರು ತಮ್ಮ ಗುರುಗಳ ಪರವಾಗಿ ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು ಮುಂತಾದ ಪ್ರಾಂತ್ಯಗಳಲ್ಲಿ ಪ್ರವಾಸಮಾಡಿ, ಭಕ್ತರಿಂದ ಉದಾರ ಕಾಣಿಕೆಗಳನ್ನು ಸಂಗ್ರಹಿಸಿದ್ದರು.[17]

ನ್ಯಾಯಾಂಗದ ದಾಖಲೆಯೊಂದರಲ್ಲಿ ಶಿವಗಂಗೆಯ ಸಮೀಪದ ಚಿಕ್ಕಮಸಕಲ್ಲಿನಮಠದ ರಾಚೋಟಿ ಸ್ವಾಮಿಗಳು[18] ನಂಜುಂಡಸ್ವಾಮಿಗಳಿಗೂ ಮೊದಲು ಗಂಜಾಂಮಠಕ್ಕೂ ಸ್ವಾಮಿಗಳಾಗಿದ್ದರು. ಇವರೇ ನಂಜುಂಡಸ್ವಾಮಿಗಳನ್ನು ಗಂಜಾಂಮಠದ ಸ್ವಾಮಿಗಳನ್ನಾಗಿ ಆಯ್ಕೆಮಾಡಿದ್ದು, ಇವರ ಕಾಲಾನಂತರ ಚಿಕ್ಕಮಸಕಲ್ಲು ಮಠವು ನಂಜುಂಡಸ್ವಾಮಿಗಳ ಅಧೀನಕ್ಕೆ ಒಳಪಟ್ಟಿತ್ತು. ಇದರ ಜೊತೆಗೆ ಹರಿಹರ ತಾಲ್ಲೂಕಿನ ಮಲೆಬೆನ್ನೂರು ಮಠವೂ ನಂಜುಂಡಸ್ವಾಮಿಗಳ ಅಧೀನದಲ್ಲಿತ್ತು ಎಂಬ ವಿಚಾರಗಳೂ ತಿಳಿದುಬರುತ್ತವೆ[19]. ಈ ಮೇಲ್ಕಂಡ ವಿಚಾರಗಳಿಗೆ ಸಂಬಂಧಿಸಿದಂತೆ ಖಚಿತವಾದ ಕಾಲಮಾನಗಳ ಕೊರತೆಯಿದೆ. ಇಷ್ಟೆಲ್ಲಾ ವಿಚಾರಗಳ ಹಿನ್ನೆಲೆಯಲ್ಲಿ ತರ್ಕಿಸುವುದಾದರೆ ೧೮೪೮ರವರೆಗೂ ಗಂಜಾಂಮಠದ ಅಧಿಪತಿಗಳಾಗಿದ್ದ ಚನ್ನವೀರ ಒಡೆಯರು[20] ತೀರಿಕೊಂಡ ಮೇಲೆ ೧೮೬೭ರ ವರೆಗೂ ಈ ಮಠವು ತಿಪ್ಪಶೆಟ್ಟಿಮಠದ ಗುರುಸಿದ್ಧಸ್ವಾಮಿಗಳ ಅಧೀನದಲ್ಲೇ ಇತ್ತು. ನಂತರದ ದಿನಗಳಲ್ಲಿ ಬಾಣಾವರದ ಶಾಂತಪ್ಪನವರ ಮಗ ಚಂದ್ರಣ್ಣನವರು ತಮ್ಮ ಸುಪರ್ದಿನಲ್ಲಿದ್ದ ಈ ಮಠಕ್ಕೆ ಚಿಕ್ಕಮಸಕಲ್ಲುಮಠದ

ರಾಚೋಟಿಸ್ವಾಮಿಗಳು ಧರ್ಮಾಧಿಕಾರಿಗಳಾಗಿರುವಂತೆ ಬಿನ್ನವಿಸಿಕೊಂಡಿರಬೇಕು. ೧೮೮೪ರ ವೇಳೆಗೆ ತೀರಿಕೊಂಡ ಈ ಗುರುಗಳು[21] ಇಲ್ಲಿಗೆ ಸುಮಾರು ಎಂಟ್ಹತ್ತು ವರ್ಷಗಳ ಮುಂಚಿತವಾಗಿ ಅಂದರೆ ೧೮೭೫ರ ವೇಳೆಗೆ ತಮ್ಮ ಮುಂದಿನ ಮಠಾಧಿಪತಿಯನ್ನಾಗಿ ನಂಜುಂಡಸ್ವಾಮಿಗಳನ್ನು ಆಯ್ಕೆ ಮಾಡಿಕೊಂಡಿರುವಂತಿದೆ.

ನಂಜುಂಡಸ್ವಾಮಿಗಳು ಸಂಸ್ಕೃತ ಸಾಹಿತ್ಯ ಸಂಪನ್ನರೂ, ಶಿವಾನುಭವಶಾಸ್ತ್ರ ವಿಶಾರದರೂ ಆಗಿದ್ದು ವೇದಾಗಮಗಳ ವ್ಯಾಸಂಗದಲ್ಲಿ ಪಾಂಡಿತ್ಯವುಳ್ಳವರಾಗಿದ್ದರು. ಇವರ ಪೂರ್ವಾಪರ ಇತಿವೃತ್ತಾಂತಗಳನ್ನು ಸೂಚಿಸುವ ಕೆಲವು ಪತ್ರಗಳಿವೆ. ಅವುಗಳಲ್ಲಿ-"ಶ್ರೀಮುದ್ರಾಪುರಾಧೀಶ ದ್ರಾಕ್ಷಾರಾಮಕ್ಷೇತ್ರ ರಾಮನಾಥ ಲಿಂಗೋದ್ಭವ ಶ್ರೀಮತ್ ಚಿನ್ಮೂಲಾದ್ರಿ ಬೃಹನ್ಮಠಾಂತರಾಳ ಪರಿಶೋಭಿತ ಸತ್ಪ್ರಭು ಮಂಡಿತೋರ್ಧ್ವ ಹೃದಯಾತ್ಮಕ ದ್ವಾರಾವತಿ ಸಿಂಹಾಸನಾಧೀಶ್ವರ ಪರಂಪರಾಗತ ಶ್ರೀಮಚ್ಛಿವಾನುಭವ ಶಾಸ್ತ್ರಪಾರಾವಾರ ಸುಧಾಕರರಾದ ಬೆಂಗಳೂರು ಮಾಮೂಲುಪೇಟೆ ಪ್ರಮಥಗಣ ಮನೋರಂಜಿನಿ ಸಂಸ್ಕೃತ ಪಾಠಶಾಲಾಂತರ್ಗತ ಗಂಜಾಂಮಠದ ಶ್ರೀ ನಂಜುಂಡಸ್ವಾಮಿಗಳವರ ಚರಣ ಕಮಲಗಳಿಗೆ[22]..." ಎಂಬಿತ್ಯಾದಿ ವಿಶೇಷಣಗಳುಳ್ಳ ಸಂಬೋಧನೆಗಳಿರುತ್ತವೆ. ಮತ್ತೆ ಕೆಲವು ಪತ್ರಗಳಲ್ಲಿ "...ಮುರಿಗಾ ಸಂಸ್ಥಾನದ ಖಾಸಾ ಚರಮೂರ್ತಿಗಳಾದ ಬೆಂಗಳೂರು ಮಾಮೂಲು ಪೇಟೆಯ ಜಂಗಮ (ಗಂಜಾಂ) ಮಠದ ಶ್ರೀ ನಂಜುಂಡ ಸ್ವಾಮಿಗಳು[23]," ಎಂಬ ಉಲ್ಲೇಖಗಳೂ ಇವೆ. ಈ ಮೇಲ್ಕಂಡ ಅಂಶಗಳ ಜೊತೆಗೆ ಕಾಲದಿಂದಲೂ ಗಂಜಾಂ ಮಠವು ತಿಪ್ಪಶೆಟ್ಟಿಮಠಕ್ಕೆ ನಿಕಟ ಸಂಪರ್ಕವುಳ್ಳದ್ದಾಗಿ ಇರುವುದನ್ನು ಗಮನಿಸಿದರೆ ಇದು 'ಮುರಿಗಾಸಮಯ'ಕ್ಕೆ ಸೇರಿದ ಮಠವೆಂದು ನಿಶ್ಚಯವಾಗಿ ಹೇಳಬಹುದು. ಇಲ್ಲಿ ಇನ್ನೊಂದು ಮುಖ್ಯ ವಿಷಯವನ್ನು ಗಮನಿಸಬೇಕಾಗಿದೆ. ಅದೇನೆಂದರೆ ಚಿತ್ರದುರ್ಗ ಬೃಹನ್ಮಠದ ಮೂಲವನ್ನು ಹೇಳುವಾಗ ಪಂಚಾಚಾರ್ಯರ ಉದ್ಭವ ಕ್ಷೇತ್ರಗಳಲ್ಲೊಂದಾದ 'ದ್ರಾಕ್ಷಾರಾಮಕ್ಷೇತ್ರ ರಾಮನಾಥ ಲಿಂಗೋದ್ಭವ[24] ಶ್ರೀಮಚ್ಚಿನ್ಮೂಲಾದ್ರಿ...,' ಎಂದಿರುವುದು ಅಚ್ಚರಿಯ ಸಂಗತಿಯಾಗಿದೆ.

ಮೈಸೂರು ಸಂಸ್ಥಾನದಲ್ಲಿ ೧೮೯೧ರಲ್ಲಿ ನಡೆದ ವೀರಶೈವ ಜನಗಣತಿಯಲ್ಲಾಗಿದ್ದ ಲೋಪದೋಷಗಳಿಗೆ ಸಂಬಂಧಿಸಿದಂತೆ ಮಹಾರಾಜರನ್ನು ಸಂಧಿಸಲು ನಾಲ್ಕುಸಾವಿರ ಮಂದಿ ಪ್ರತಿನಿಧಿಗಳ ನಿಯೋಗವೊಂದು ಹೊರಟಿತ್ತು. ಬೃಹನ್ಮಠ ಸಂಸ್ಥಾನದ ಪರವಾಗಿ ಈ ನಿಯೋಗದ ನೇತೃತ್ವವನ್ನು ವಹಿಸಿದ್ದ ಬೆಂಗಳೂರಿನ ಈ ಗಂಜಾಂಮಠದ ನಂಜುಂಡಸ್ವಾಮಿಗಳು ಹರಿಹರದಲ್ಲಿ ಮೊಕ್ಕಾಂ ಮಾಡಿದ್ದ ಹತ್ತನೆಯ ಚಾಮರಾಜೇಂದ್ರ ಒಡೆಯರನ್ನು ಭೇಟಿ ಮಾಡಿದ್ದರು. ನಂಜುಂಡಸ್ವಾಮಿಗಳ ಗಂಭೀರ ವಿಚಾರಸರಣಿಯನ್ನು ಆಲಿಸಿದ ಮಹಾರಾಜರು ವಿಷಯವೇನೆಂದು ಅರಿತು, ಸ್ಥಳದಲ್ಲೇ ನೂತನ ಠರಾವೊಂದನ್ನು ಮಾಡಿ ವೀರಶೈವರಿಗಾಗಿದ್ದ ಅನ್ಯಾಯವನ್ನು ಸರಿಪಡಿಸಿದರು.[25] ನಂಜುಂಡಸ್ವಾಮಿಗಳ ಈ ಐತಿಹಾಸಿಕ ವಿಜಯ ಇಡೀ ವೀರಶೈವ ಸಮಾಜ ಬಾಂಧವರಿಗೆ ವರದಾನವಾಯಿತು. ಆಗ ಮುರಿಗಾಸಂಸ್ಥಾನದ ಜಗದ್ಗುರುಗಳಾಗಿದ್ದ ಬ್ಯಾಡಗಿ ಮುಪ್ಪಿನಪ್ಪನವರಿಗೂ ನಂಜುಂಡಸ್ವಾಮಿಗಳಿಗೂ ತೀರಾ ನಿಕಟವಾದ ಬಾಂಧವ್ಯವಿತ್ತು. ಅವರು ತಮ್ಮ ಸಂಸ್ಥಾನದ ಮುಂದಿನ ಮರಿಯನ್ನು ವಿಶೇಷ ಅಧ್ಯಯನಕ್ಕಾಗಿ ಬೆಂಗಳೂರಿನ ಗಂಜಾಂಮಠಕ್ಕೆ ಕಳುಹಿಸಿಕೊಟ್ಟಿದ್ದುದಕ್ಕೆ ದಾಖಲೆಗಳಿವೆ.[26]

ಇಷ್ಟೆಲ್ಲಾ ಸಮಾಜೋಧಾರ್ಮಿಕ ಸಾಧನೆಗಳನ್ನು ಗೈದಿದ್ದ ನಂಜುಂಡಸ್ವಾಮಿಗಳು ಕೊನೆಗೆ ಪ್ಲೇಗು ರೋಗಕ್ಕೆ ತುತ್ತಾದರು. ಅವರು ದಿನಾಂಕ : ೨೯.೧.೧೮೯೮ರಂದು ಲಿಂಗೈಕ್ಯರಾಗುವ ಮುನ್ನ ಒಂದು ಮರಣ ಶಾಸನವನ್ನು ರಚಿಸಿದ್ದರು. ಅದರಲ್ಲಿ ಈ ವೇಳೆಗಾಗಲೇ ತಮ್ಮ ಉತ್ತರಾಧಿಕಾರಿಯಾಗಿದ್ದ ಚಿದ್ಘನಶಿವಾಚಾರ್ಯರ ಹೆಸರನ್ನೇ ಪ್ರಸ್ತಾಪಿಸದಿದ್ದುದು ಅಚ್ಚರಿಯಾಗಿತ್ತು. ಅದಕ್ಕೆ ಬದಲು ಮಠ, ಪಾಠಶಾಲೆಗಳ ಸಂಪೂರ್ಣ ಜವಾಬ್ದಾರಿಯನ್ನು ಬಾಣಾವರದ ಗುರುಬಸಪ್ಪನವರಿಗೆ ವಹಿಸಲಾಗಿತ್ತು.[27] ಗುರುಗಳು ಲಿಂಗೈಕ್ಯರಾದಾಗ ಬೆಂಗಳೂರಿನಲ್ಲಿ ಪ್ಲೇಗಿನ ಗಲಾಟೆಯು ತೀವ್ರವಾಗಿತ್ತು. ಆಗ ಚಿದ್ಘನಶಿವಾಚಾರ್ಯರು ಪರಸ್ಥಳದ ಪ್ರವಾಸದಲ್ಲಿದ್ದುದರಿಂದ ಮಠದ ಮುಂದಿನ ಸ್ಥಿತಿಯು ಹೊಸ ತಿರುವುಗಳನ್ನು ಪಡೆದುಕೊಂಡಿತ್ತು. ಮುಂದೆ ದಾರಿಕಾಣದೆ ಚಿದ್ಘನಶಿವಾಚಾರ್ಯರು ಮೇಲ್ಕಂಡ ಗುರುಬಸಪ್ಪನವರು ವಿಧಿಸಿದ್ದ ಕೆಲವು ಶರತ್ತುಗಳಿಗೆ ಅನುಗುಣವಾಗಿ ಮಠಾಧಿಕಾರವನ್ನು ಹಾಗೂ ಪಾಠಶಾಲೆಯನ್ನೂ ನಡೆಸಿಕೊಂಡು ಹೋಗುವುದಾಗಿ ಕರಾರೊಂದನ್ನು

ಬರೆದುಕೊಟ್ಟರು.[28] ಪ್ರಾರಂಭದ ದಿನಗಳಲ್ಲಿ ಇವರಿಬ್ಬರ ನಡುವೆ ಹೊಂದಾಣಿಕೆಯಿತ್ತಾದರೂ ಕಾಲಾನಂತರ ವೈಮನಸ್ಯವು ಉಲ್ಬಣವಾಗತೊಡಗಿತ್ತು. ಇದರ ನಿಮಿತ್ತ ೧೯೦೨ರಲ್ಲಿ ನ್ಯಾಯಾಲಯಕ್ಕೆ ಕಾಲಿರಿಸಿದ ಈ ಗಂಜಾಂ ಮಠದ ವಿವಾದವು ೧೯೦೮ರ ವರೆಗೂ ಮುಂದುವರೆಯಿತು. ದಿನಾಂಕ : ೨೮.೮.೧೯೦೮ರ ಸರ್ಕಾರಿ ಹುಕುಂ ಪ್ರಕಾರ ಸದರಿ ಗುರುಬಸಪ್ಪನ[29] ಹೆಸರಿಗೆ ಹುಟ್ಟಿದ್ದ ಗಂಜಾಂಮಠದ ವಿಲ್ಲು ಅಕ್ರಮವಾದುದೆಂದು ತೀರ್ಮಾನವಾಯಿತು.[30] ಕೂಡಲೇ ಅವರ ಮಠದ ಯಜಮಾನಿಕೆಯನ್ನು ರದ್ದುಗೊಳಿಸಿದ್ದೂ ಅಲ್ಲದೆ ಮಠವನ್ನು ಸರ್ಕಾರ ತನ್ನವಶಕ್ಕೆ ತೆಗೆದುಕೊಂಡಿತು. ಮುಂದಿನ ವ್ಯವಸ್ಥೆಗಳನ್ನು ರೂಪಿಸಲು ಭಕ್ತರ ಕಮಿಟಿಯೊಂದನ್ನು ರಚಿಸುವಂತೆ ಆದೇಶ ನೀಡಲಾಗಿತ್ತು. ಹಾಗೆಯೇ ಮಠದ ಆಯ-ವ್ಯಯಗಳ ಪಟ್ಟಿಯನ್ನು ಸಿದ್ಧಗೊಳಿಸಿ, ಈಗಾಗಲೇ ಇರುವ ಸ್ವಾಮಿಗಳನ್ನು ಮುಂದುವರೆಸುವುದರ ಬಗೆಗೆ ಜನಾಭಿಪ್ರಾಯದ ಸಂಗ್ರಹಣೆಗೆ ನಿರ್ದೇಶನವನ್ನೂ ನೀಡಲಾಗಿತ್ತು.[31]

ಇಂತಹ ಕ್ಲಿಷ್ಟ ಪರಿಸ್ಥಿತಿಯಲ್ಲಿ ಅನೇಕ ಮಠಾಧೀಶರೂ[32] ಹಾಗೂ ಪಟ್ಟಣದ ಪ್ರಮುಖ ಭಕ್ತರೆಲ್ಲರೂ[33] ಚಿದ್ಘನಶಿವಾಚಾರ್ಯರ ನೆರವಿಗೆ ಬಂದರು. ತತ್ಪರಿಣಾಮವಾಗಿ ಇದುವರೆಗೂ ಹೇಗೋ ಪಾಠಶಾಲೆಯನ್ನು ಕೈ ಬಿಡದೆ ಮುನ್ನಡೆಸಿಕೊಂಡು ಬಂದಿದ್ದ ಚಿದ್ಘನ ಶಿವಾಚಾರ್ಯರೇ ಮಠಾಧಿಪತಿಗಳಾಗಿ ಮುಂದುವರೆಯಲು ಅವಕಾಶ ದೊರೆಯಿತು.[34] ಹೀಗೆ ಬದುಕಿನುದ್ದಕ್ಕೂ ತಮ್ಮ ಹಿರಿಯ ಗುರುಗಳ ಸಾರ್ಥಕ ಪರಿಶ್ರಮದಿಂದ ನಿರ್ಮಾಣವಾಗಿದ್ದ ಪಾಠಶಾಲೆ ಹಾಗೂ ಮಠಗಳನ್ನು ಹೇಗೋ ನಿಭಾಯಿಸಿಕೊಂಡು ಹೆಣಗುತ್ತಿದ್ದ ಚಿದ್ಘನಶಿವಾಚಾರ್ಯರ ಬಗೆಗೆ ಭಕ್ತರ ಅಭಿಮಾನ ಇಮ್ಮಡಿಸಿತು. ಮಠದ ಧಾರ್ಮಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಯನ್ನು ಕೋರಿ ಬರುವ ಕಾಣಿಕೆಗಳ ಪ್ರಮಾಣವು ವೃದ್ಧಿಸತೊಡಗಿತು.

ಗುರುಗಳಾಗಿದ್ದ ನಂಜುಂಡಸ್ವಾಮಿಗಳಂತೆಯೇ ಇವರೂ ಕೂಡ ಮುರಿಗಾ ಸಂಸ್ಥಾನದ ಜಗದ್ಗುರುಗಳೊಂದಿಗೆ ಆತ್ಮೀಯತೆಯನ್ನು ಬೆಳೆಸಿಕೊಂಡಿದ್ದರು. ಒಮ್ಮೆ ಸಂಸ್ಥಾನದ ಜಗದ್ಗುರುಗಳಾಗಿದ್ದ ಬ್ಯಾಡಗಿ ಮುಪ್ಪಿನಪ್ಪನವರು ಸೊಲ್ಲಾಪುರದಲ್ಲಿ ಮೊಕ್ಕಾಂ ಮಾಡಿದ್ದಾಗ ತಮ್ಮ 'ದಾಗಿನ'(ಒಡವೆ)ಗಳು ಕಳುವಾದ ವಿಚಾರವನ್ನು ತಿಳಿಸಿ, ಕಳವುಮಾಲುಗಳೊಂದಿಗೆ ಆ ಕಳ್ಳನನ್ನು ಹಿಡಿಯಲು ವಾರದ ಮಲ್ಲಪ್ಪನವರು ಸಹಕರಿಸಿದ ರೀತಿಯನ್ನು ಚಿದ್ಘನಶಿವಾಚಾರ್ಯರಿಗೆ ವಿವರಿಸಿರುವ ಪತ್ರದಾಖಲೆಯಿದೆ.[35] ಅನೇಕ ಊರಿನ ಮಠಾಧೀಶರು ಶಿವಾನುಭವ ಶಾಸ್ತ್ರಾಧ್ಯಯನಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಗಳನ್ನು ಕೋರಿ ಇವರಿಗೆ ಬರೆದಿರುವ ಅನೇಕ ಪತ್ರಗಳು ಮಠದಲ್ಲಿವೆ. ಗಂಜಾಂಮಠದ ಸದ್ಧರ್ಮಾಭಿವೃದ್ಧಿಯನ್ನು ಕೋರಿ ಇವರಿಗೆ ಬರೆದಿರುವ ಅನೇಕ ಪತ್ರಗಳು ಮಠದಲ್ಲಿವೆ. ಇವುಗಳಲ್ಲಿ ಗುಬ್ಬಿಯ ಪಾರ್ವತಮ್ಮ ಎಂಬ ಮಹಿಳೆ ತಮ್ಮ ಚರ-ಸ್ಥಿರ ಸ್ವತ್ತುಗಳನ್ನೆಲ್ಲಾ ಚಿದ್ಘನಸ್ವಾಮಿಗಳ ಹೆಸರಿಗೆ ದಾನವಾಗಿ ಅರ್ಪಿಸಿರುತ್ತಾರೆ.[36] ಈ ಶತಮಾನದ ಆರಂಭದ ದಿನಗಳಲ್ಲಿ ಪ್ರಬಲವಾಗಿದ್ದ ಜಂಗಮೇತರ ಮಠಾಧಿಪತಿಗಳ ಸಂಘಟನೆಯ ಮುಂಚೂಣಿಯಲ್ಲಿದ್ದ ಚಿದ್ಘನಶಿವಾಚಾರ್ಯರು ಈ ವಿಷಯವಾಗಿ ಹಾನಗಲ್ಲ ಕುಮಾರಸ್ವಾಮಿಗಳೊಂದಿಗೆ ಮುಖಾಮುಖಿ ವಾದಿಸಿದ್ದೂ ಉಂಟು.[37] ಸಾಮಾನ್ಯವಾಗಿ ಭಕ್ತರು ಹಾಗೂ ಹಿತೈಷಿಗಳು ತಮ್ಮ ಪತ್ರಗಳಲ್ಲಿ ಇವರನ್ನು ಸಂಬೋಧಿಸುವಾಗ - "ಶ್ರೀಮತ್ಪರಮ ಪಾವನ...ಶೂನ್ಯಸಿಂಹಾಸನ... ಪ್ರಭುದೇವ ಪರಂಪರಾಗತ ಮುರುಗೆಸಮಯದ ಚರಾಧ್ಯಕ್ಷರಾಗಿದ್ದ ನಂಜುಂಡದೇಶಿಕೇಂದ್ರರ ಕರಸಂಜಾತರಾದ ಬೆಂಗಳೂರು ಗಂಜಾಂಮಠದ ಸಂಸ್ಕೃತ ಪಾಠಶಾಲಾಂತರ್ಗತ ಶ್ರೀ ಚಿದ್ಘನಶಿವಾಚಾರ್ಯ ಮಹಾಸ್ವಾಮಿಗಳಿಗೆ...,"[38] ಎಂದು ಸಂಬೋಧಿಸುವುದೇ ಹೆಚ್ಚಿನ ರೂಢಿಯಲ್ಲಿತ್ತು. ಹೀಗೆ ೨೦ ವರ್ಷಗಳ ಕಾಲ ಗಂಜಾಂಮಠದ ಪಾಠಶಾಲೆಗಾಗಿ ಅವಿಶ್ರಾಂತರಾಗಿ ದುಡಿದಿದ್ದ ಚಿದ್ಘನಶಿವಾಚಾರ್ಯರು ಮುಂದೆ ದಿನಾಂಕ: ೩.೧೨.೧೯೧೧ರಂದು ಶಿವಾಧೀನರಾದರು.[39]

ಈ ಗುರುಶಿಷ್ಯರಿಬ್ಬರ ಗದ್ದುಗೆಗಳೂ ನಗರದ ಸಿದ್ಧಯ್ಯ ರಸ್ತೆಯಲ್ಲಿರುವ ಕೊಳದ ಮಠದ ಆವರಣದೊಳಗಿವೆ. ಈ ಗದ್ದುಗೆಗಳ ಮೇಲೆ 'ಅಕ್ಕೆಯಮ್ಮನಧರ್ಮ' ಎಂಬ ಶಿಲಾಫಲಕವಿದೆ. ಸದರಿ ಗದ್ದುಗೆಗಳ ನಿತ್ಯ ಪೂಜೆ ಹಾಗೂ ದೀಪಾರಾಧನೆಗಳ ಸಲುವಾಗಿ ಮೇಲ್ಕಂಡ ಅಕ್ಕಯ್ಯಮ್ಮನವರು ನಗರಕ್ಕೆ ಸಮೀಪದ ಲಗ್ಗೆರೆ ಗ್ರಾಮದ ಬಳಿ ೨ ಎಕರೆ ೧೯ ಗುಂಟೆ ಖುಷ್ಕಿ ಭೂಮಿಯನ್ನು ದತ್ತಿಯಾಗಿ ನೀಡಿದ್ದರು.[40]

ಚಿದ್ಘನಶಿವಾಚಾರ್ಯರು ಲಿಂಗೈಕ್ಯರಾಗುವ ಮುನ್ನ ಬೆಂಗಳೂರಿನ ಮೂರೂ ಪೇಟೆಗಳ ಶೆಟ್ಟಿ ಯಜಮಾನರುಗಳ ಸಮಕ್ಷಮದಲ್ಲಿ ಒಂದು ಮರಣ ಶಾಸನವನ್ನು ಬರೆಸಿದ್ದರು. ಅದರ ಪ್ರಕಾರ ''ತಮಗೆ ತೀವ್ರತರ ಖಾಯಿಲೆಯಾಗಿರುವುದರಿಂದ, ಇಲ್ಲಿಗೆ ನಾಲ್ಕೈದು ವರ್ಷಗಳಿಂದ ತಮ್ಮ ಸೇವಾನುವರ್ತಿಯಾಗಿದ್ದು ತಮ್ಮ ಪೋಷಣೆಯಲ್ಲಿಯೇ ಇರುವ ಶಿವಮೊಗ್ಗ ಜಿಲ್ಲಾ ಚನ್ನಗಿರಿ ತಾಲ್ಲೂಕು ಗುಡ್ಡೇನಹಳ್ಳಿ ಮಠದ ಜಾವೂರು ಚಂದ್ರಯ್ಯ ನವರ ಮಗ ಬಸವಮರಿದೇವರಿಗೆ ತಮ್ಮ ಉತ್ತರಾಧಿಕಾರ ತ್ವವು ಸಲ್ಲುವುದು. ಹದಿನಾಲ್ಕರ ಪ್ರಾಯದ ಈ ಮರಿಗೆ ಮೈನರ್ ಗಾರ್ಡಿಯನ್ ಆಗಿ ಹಾಗೂ ಮಠದ ಮೇಲ್ವಿಚಾರಕರಾಗಿ ಸರ್ಪಭೂಷಣ ಮಠದ ಚನ್ನಬಸವ ಸ್ವಾಮಿಗಳು ಸಂಪೂರ್ಣ ಜವಾಬ್ದಾರಿಯನ್ನು ನಿರ್ವಹಿಸುವುದು...,''[41] ಎಂಬುದಾಗಿ ಸೂಚಿಸಲಾಗಿತ್ತು. ಅದರಂತೆ ಸಕಲ ಜವಾಬ್ದಾರಿಗಳನ್ನು ಗೌರವದಿಂದ ನಿರ್ವಹಿಸಿದ ಚನ್ನಬಸವಸ್ವಾಮಿಗಳು ಮುಜರಾಯಿ ಇಲಾಖೆಯ ಆದೇಶದಂತೆ ಸದರಿ ಬಸವಮರಿದೇವರಿಗೆ ದಿನಾಂಕ : ೭.೩.೧೯೧೮ರಿಂದ ಮಠಾಧಿಕಾರವನ್ನು ವಹಿಸಿಕೊಟ್ಟರು.[42] ಮುಂದೆ ಭಕ್ತರ ಅಪೇಕ್ಷೆಯ ಮೇರೆಗೆ ೧೯೨೪ರ ವರೆಗೂ ಈ ಮಠದ ಮೇಲ್ವಿಚಾರಕರಾಗಿ ಮುಂದುವರೆದಿದ್ದ ಚನ್ನಬಸವಸ್ವಾಮಿಗಳು ಬಸವಮರಿ ದೇವರಿಗೆ ೧೯೨೪ರ ಸೆಪ್ಟೆಂಬರ್ ೧೫ರಂದು ವಿಧಿವತ್ತಾಗಿ ಗಂಜಾಂಮಠದ ಪಟ್ಟಾಧಿಕಾರವನ್ನು ವಹಿಸಿಕೊಟ್ಟು 'ಬಸವರಾಜಸ್ವಾಮಿಗಳು' ಎಂಬ ನೂತನ ನಾಮಕರಣ ವನ್ನು ಮಾಡಿದ್ದರು.[43]

ಚನ್ನಬಸವಸ್ವಾಮಿಗಳ ಮಾರ್ಗದರ್ಶನದಲ್ಲಿ ವೇದ ವೇದಾಂತಸಂಪನ್ನರಾಗಿದ್ದ ಬಸವರಾಜಸ್ವಾಮಿಗಳು, ತಮ್ಮ ಮಠದಲ್ಲಿ ನಂಜುಂಡಸ್ವಾಮಿಗಳ ಕಾಲದಿಂದಲೂ ನಡೆದು ಬಂದಿದ್ದ ಸಂಸ್ಕೃತ ಪಾಠಶಾಲೆಯನ್ನು ಪುನಶ್ಚೇತನ ಗೊಳಿಸಿದರು. ಈ ಶಾಲೆಯನ್ನು ೧೯೫೮ರ ವರೆವಿಗೂ ಮುನ್ನಡೆಸಿಕೊಂಡು ಬರುವಲ್ಲಿ ಸಮರ್ಥರಾಗಿದ್ದ ಇವರು, ತಮ್ಮ ಮುಂದಿನ ಉತ್ತರಾಧಿಕಾರತ್ವಕ್ಕಾಗಿ ೧೯೫೯ರ ಸೆಪ್ಟೆಂಬರ್ ೧೩ ರಂದು ಮರಣ ಶಾಸನವೊಂದನ್ನು ಬರೆಸಿದ್ದರು. ಆ ಪ್ರಕಾರವಾಗಿ ತಮ್ಮ ಪೂರ್ವಾಶ್ರಮದ ತಮ್ಮನಾಗಿದ್ದ ಕೂಡ್ಲಿಗೆ ಮಠದ ನಂಜುಂಡಾರಾಧ್ಯರ ಮಗ ಚಿದ್ಘನ ಶಿವಾಚಾರ್ಯರೇ ತಮ್ಮ ನಂತರದ ಮಠಾಧಿಪತಿ ಗಳೆಂದು ಸೂಚಿಸಿದ್ದರು.[44] ಅವರೇ ಈಗಿನ ಮಾಮೂಲು ಪೇಟೆಯ ಗಂಜಾಂಮಠದ ಮಠಾಧಿಪತಿಗಳಾಗಿರುವ ಇಮ್ಮಡಿ ಚಿದ್ಘನಶಿವಾಚಾರ್ಯರು.

ಪ್ರಸ್ತುತ ಸಂದರ್ಭದಲ್ಲಿ ಕಳೆದ ಶತಮಾನದಿಂದಲೂ ಸದರಿ ಮಠದ ಆಶ್ರಯದಲ್ಲಿ ನಡೆದು ಬಂದಿದ್ದ ಸಂಸ್ಕೃತ ಪಾಠಶಾಲೆಯಾಗಲೀ ಅಥವಾ ಉಚಿತ ವಿದ್ಯಾರ್ಥಿನಿಲಯ ಗಳಾಗಲೀ ಉಳಿದಿಲ್ಲ. ಆದರೆ ಈಗಿನ ಗುರುಗಳಾಗಿರುವ ಚಿದ್ಘನಶಿವಾಚಾರ್ಯರು ನಗರದ ಚಾಮರಾಜಪೇಟೆಯಲ್ಲಿ ಜನತಾ ಶಿಕ್ಷಣ ಸಂಸ್ಥೆ ಎಂಬ ಸರ್ಕಾರಿ ಅನುದಾನಿತ ಸಂಸ್ಥೆಯನ್ನು ನಡೆಸುತ್ತಿದ್ದಾರೆ. ಈ ಸಂಸ್ಥೆಯಲ್ಲಿ ಪ್ರಾಥಮಿಕ ಹಂತದಿಂದ ಪದವಿಪೂರ್ವ ಕಾಲೇಜಿನವರೆಗೆ ತರಗತಿಗಳು ನಡೆಯುತ್ತಿದ್ದು ಸುಮಾರು ೬೫೦ ಮಂದಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ.

ಒಟ್ಟಾರೆ ಮಾಮೂಲುಪೇಟೆಯ ಗಂಜಾಂಮಠವು ಬೆಂಗಳೂರು ಪಟ್ಟಣದಲ್ಲಿ ಪ್ರಮುಖವಾದ ಮುರಿಗಾಸಮಯದ ಪ್ರಮುಖ ವಿರಕ್ತ ಮಠವಾಗಿದ್ದು, ಐತಿಹಾಸಿಕವಾಗಿ ಇಲ್ಲಿ ಅನೇಕ ಮಹತ್ವದ ಸಾಮಾಜಿಕಸೇವೆಗಳನ್ನು ಕೈಗೊಂಡಿದ್ದುದು ಹೆಮ್ಮೆಯ ವಿಚಾರಗಳಾಗಿವೆ.

**ಗಂಜಾಂಮಠದ ಗುರು ಪರಂಪರೆ :**

೧. ಚನ್ನವೀರ ಒಡೆಯರು. ಸು. ೧೮೩೬-೧೮೮೮.

೨. ಇಮ್ಮಡಿ ಗುರುಸಿದ್ಧಸ್ವಾಮಿಗಳು. (ತಿಪ್ಪಶೆಟ್ಟಿಮಠ) ೧೮೪೯-೧೮೬೭.

೩. ರಾಚೋಟಿಸ್ವಾಮಿಗಳು. (ಚಿಕ್ಕಮುಸಕಲ್ಲುಮಠ ) ೧೮೬೮-೧೮೮೪.

೪. ನಂಜುಂಡಸ್ವಾಮಿಗಳು. (ಹೆಗ್ಗುಂದ) ೧೮೭೫-೧೯೪೮

೫. ಚಿದ್ಘನಶಿವಾಚಾರ್ಯರು. (ಹೊಳೆಹೊನ್ನೂರು) ೧೯೪೨-೧೯೧೧.

೬. ಬಸವರಾಜಸ್ವಾಮಿಗಳು. (ಗುಡ್ಡೇನಹಳ್ಳಿ) ೧೯೦೭-೧೯೮೬.

೭. ಇಮ್ಮಡಿ ಚಿದ್ಘನಶಿವಾಚಾರ್ಯರು. (ಕೂಡ್ಲಿಗೆ) ೧೯೫೯....

## ಅಡಿಟಿಪ್ಪಣಿಗಳು

1. ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು. ೭೦೭೮.
2. ಹೇಳಿಕೆ : ಶ್ರೀಮತಿ ಪುಟ್ಟತಾಯಮ್ಮ (೭೬) ಮಾಮೂಲುಪೇಟೆ. ಬೆಂಗಳೂರು.
3. ಹೇಳಿಕೆ : ಗಮಕ ವಿದ್ವಾನ್ ಚನ್ನಬಸಪ್ಪ (೮೬) ನಿವೃತ್ತ ಮುಖ್ಯೋಪಾಧ್ಯಾಯರು. ಮಹಾಲಕ್ಷ್ಮೀ ಬಡಾವಣೆ. ಬೆಂಗಳೂರು.
4. ಜನಪದ ಕತೆಗಳಲ್ಲಿ ಬರುವ ಕೆಂಪರಾಯನ ವೃತ್ತಾಂತವನ್ನು ಉಲ್ಲೇಖಿಸಿ, ಜೀತದಾಳಾಗಿದ್ದಾಗ ಆತನಿಗೆ ಹೆಡೆಬಿಚ್ಚಿದ್ದ ನಾಗರ ಹಾವು ಕಾಣಿಸಿಕೊಂಡಿದ್ದರ ಸಂಕೇತವಾಗಿ, ಅರಸನಾದ ಮೇಲೆ ಆತ ನಿರ್ಮಿಸಿದ ಗುಡಿ ಗೋಪುರಗಳ ಮೇಲೂ ಇಂತಹ ನಾಗರ ಹಾವುಗಳ ಚಿತ್ರವನ್ನು ಬಿಡಿಸಲಾಗಿರುತ್ತದೆ ಎಂಬುದಾಗಿ ಶ್ರೀಮತಿ ಗೌರಮ್ಮ (೭೦)ನವರು ಹೇಳುತ್ತಾರೆ. (ಮಾಮೂಲುಪೇಟೆ. ಬೆಂಗಳೂರು.)
5. ಮೈಸೂರು ಮಹಾರಾಜರ ಸರಕಾರಿ ಹುಕುಂ. ಮುಜರಾಯಿ ನಂ : ೯೦೬. ದಿ:೨೮.೮.೧೯೦೮.
6. ಗೊಂಡೇದಹಳ್ಳಿ ವಿಭೂತಿ ನಾಗಯ್ಯನವರು ಹಾನಗಲ್ಲ ಕುಮಾರಸ್ವಾಮಿಗಳಿಗೆ ಬರೆದಿರುವ ಪತ್ರ. ದಿ:೨೨.೬.೧೯೦೬
7. ಬೆಂಗಳೂರು ತಾಲ್ಲೂಕು ಕಛೇರಿ. ರಿ.ನಂ : ೯೦೬. ೧ನೇ ಬುಕ್ಕು, ೩೭ನೇ ಸಂಪುಟ. ಪು. ೪೯೦-೪೯೧. ದಿ:೨೦.೬.೧೮೮೦.
8. Muzrai File No : 102/1907. Sl.No.1-4. P-24
9. Deputy Commissioners Report. No: 1309 dt. 2nd sept. 1908. P-1.
10. ಬಾಣಾವರದ ಶಾಂತಪ್ಪನವರು ಶ್ರೀ ಸರ್ಪಭೂಷಣ ಶಿವಯೋಗಿಗಳ ಕಿರಿಯ ಸಹೋದರ.
11. ಭೋಗ್ಯಪತ್ರ : ರಿ. ನಂ: ೧೦೫. ೧ನೇ ಬುಕ್ಕು, ೫ನೇ ವಾಲ್ಯುಂ. ಪು. ೬೮-೬೯. ದಿ: ೨.೩.೧೮೬೮.
12. ಆಧಾರಪತ್ರ : ರಿ.ನಂ: ೫೬೩ ೧ನೇ ಬುಕ್ಕು.. ೮೬ನೇ ವಾಲ್ಯುಂ. ಪು. ೧೯೦-೧೯೩. ದಿ: ೧೪.೭.೧೯೮೬.
13. ದಾನಪತ್ರ : ರಿ.ನಂ: ೫೬೮. ೧ನೇ ಬುಕ್ಕು. ೮೬ನೇ ವಾಲ್ಯುಂ. ಪು. ೩೨೨-೩೨೫. ದಿ: ೧೫.೭.೧೮೮೬.
14. ದಾನಪತ್ರ : ರಿ.ನಂ: ೪೩೭.. ೧ನೇ ಬುಕ್ಕು. ೮೬ನೇ ವಾಲ್ಯುಂ. ಪು. ೫೩-೫೭. ದಿ: ೨೩.೬.೧೮೮೬.
15. ನಂಜುಂಡಸ್ವಾಮಿಗಳು. ಸದ್ವಿದ್ಯಾನ್ನದಾನ ಪ್ರಾಭವ ಪ್ರಕಾಶಿಕಾ. (ಬೆಂಗಳೂರು ೧೮೯೩.) ಪು. ೩.
16. ಅದೇ. ಪು. ೩೦.
17. ೧೮೯೩ ರಿಂದ ೧೮೯೮ರ ವರೆಗೂ ಪ್ರವಾಸಕಾಲದಲ್ಲಿ ಈ ಗುರುಶಿಷ್ಯರಿಬ್ಬರ ನಡುವೆ ನಡೆದಿರುವ ಅನೇಕ ಪತ್ರವ್ಯವಹಾರಗಳೂ, ಸಿಟಿ ಮುನಿಸಿಪಲ್ ಕೌನ್ಸಿಲ್‌ನ ದಾಖಲೆಗಳು ಹಾಗೂ ಮಠದ ಕೆಲವು ಖರ್ಚು-ವೆಚ್ಚದ ಲೆಕ್ಕ ಪತ್ರಗಳಿದ್ದು ಅವುಗಳಿಂದ ಈ ಮೇಲ್ಕಂಡ ವಿಚಾರಗಳು ತಿಳಿದು ಬರುತ್ತವೆ.
18. ಸರ್ಪ ಭೂಷಣಮಠದ ಫಾಲಲೋಚನ ಸ್ವಾಮಿಗಳಿಗೂ ಚಿಕ್ಕಮಸಕಲ್ಲು ಮಠದ ರಾಚೋಟಿಸ್ವಾಮಿಗಳಿಗೂ ವಿಶೇಷವಾದ ಧಾರ್ಮಿಕ ಬಾಂಧವ್ಯವಿತ್ತು. ಫಾಲಲೋಚನರು ತಮ್ಮ ಶಿಷ್ಯವರ್ಗದವರಿಗೆ ಇವರಿಂದ ಸಾಮೂಹಿಕ ಲಿಂಗದೀಕ್ಷೆಯನ್ನು ಕೊಡಿಸಿದ್ದರು.
19. ನೆಲಮಂಗಲ ಮುನ್ಸೀಫ್ ಕೋರ್ಟ್. ಸಿವಿಲ್ ಸೂಟ್ ನಂ: ೯೭. ದಿ: ೧೪.೮.೧೮೯೩. ಪು. ೬,೭.
20. ಪಿ.ಎಂ. ಗಿರಿರಾಜು. ಚರಮೂರ್ತಿ ಶ್ರೀಗುರುಸಿದ್ಧಸ್ವಾಮಿಗಳ ಕೆಲವು ಐತಿಹಾಸಿಕ ಘಟನೆಗಳು. ಸರ್ಪಭೂಷಣಶ್ರೀ. ಸಂ : ಜಿ.ವಿ. ಶಿವಸ್ವಾಮಿ, ಎಚ್.ಎಸ್. ಸಿದ್ಧಗಂಗಪ್ಪ. ಪು.೬೪.
21. ನೆಲಮಂಗಲ ಮುನ್ಸೀಫ್ ಕೋರ್ಟ್ : ಪೂರ್ವೋಕ್ತ. ಪು. ೯.
22. ಮೈಸೂರು ಸಂಸ್ಥಾನದ ಪ್ರಮುಖ ವೀರಶೈವ ಮುಖಂಡರುಗಳು ಬರೆದುಕೊಂಡ ಬಿನ್ನಹ ಪತ್ರದಲ್ಲಿ ಇರುವಂತೆ. ದಿನಾಂಕ. ೩೧.೮.೧೮೯೦.
23. ಮಠಾಭಿಮಾನಿ ಭಕ್ತರ ಬಿನ್ನಹ ಪತ್ರ. ದಿ: ೧೬.೧.೧೮೯೧.
24. ಪ್ರಭುದೇವರ ಪರಂಪರೆಯ ಶೂನ್ಯಸಿಂಹಾಸನದ ವಾರಸುದಾರ ಕ್ಷೇತ್ರವೆಂದೇ ಹೆಸರಾಗಿರುವ ಚಿತ್ರದುರ್ಗದ ಬೃಹನ್ಮಠ ಸಂಸ್ಥಾನದ ಮೂಲವು ಪಂಚಪೀಠಾಧೀಶರಲ್ಲಿ ಒಬ್ಬರ ಉದ್ಭವ ಕ್ಷೇತ್ರವಾದ, ದ್ರಾಕ್ಷಾರಾಮ ಕ್ಷೇತ್ರ ರಾಮನಾಥ ಲಿಂಗೋದ್ಭವವಾದುದು ಹೇಗೆ? ಎಂಬುದೇ ಇಲ್ಲಿನ ಮುಖ್ಯ ಪ್ರಶ್ನೆ. ಈ ಬಗೆಗೆ ಹೆಚ್ಚಿನ ಶೋಧಗಳು ನಡೆಯಬೇಕಾಗಿದೆ. ಏಕೆಂದರೆ ಸುಪ್ರಭೇದಾಗಮದ ರೀತ್ಯಾ ಪಂಚಾಚಾರ್ಯರ ಮತ್ತು ಪಂಚಪೀಠಗಳ ಉತ್ಪತ್ತಿಯನ್ನು ಕುರಿತು - 'ಕೊಲ್ಲಿಪಾಕಿಯ ಸೋಮನಾಥ ಲಿಂಗೋದ್ಭವರಾದ ರೇವಣಸಿದ್ಧರಿಂದ ರಂಭಾಪುರಿಪೀಠವೂ; ವಟಕ್ಷೇತ್ರದ ಸಿದ್ಧಲಿಂಗೋದ್ಭವರಾದ ಮರುಳಸಿದ್ಧರಿಂದ ಉಜ್ಜಯಿನಿ ಪೀಠವೂ; ದ್ರಾಕ್ಷಾರಾಮಕ್ಷೇತ್ರದ ರಾಮನಾಥ ಲಿಂಗೋದ್ಭವರಾದ ಏಕೋರಾಮಾರಾಧ್ಯರಿಂದ ಹಿಮವತ್ಕೇದಾರ ಪೀಠವೂ; ಸುಧಾಕುಂಡ ಕ್ಷೇತ್ರದ ಮಲ್ಲಿಕಾರ್ಜುನ ಲಿಂಗೋದ್ಭವರಾದ ಪಂಡಿತಾರಾಧ್ಯರಿಂದ ಶ್ರೀಶೈಲ ಪೀಠವೂ ಹಾಗೂ ಕಾಶಿಕ್ಷೇತ್ರದ ವಿಶ್ವನಾಥ ಲಿಂಗೋದ್ಭವರಾದ ವಿಶ್ವಾರಾಧ್ಯರಿಂದ ಕಾಶೀಪೀಠವೂ ಪ್ರಾರಂಭವಾಗಿರುವ ವಿಚಾರವು ಪ್ರಚಲಿತವಾದ ಸಂಗತಿಗಳಾಗಿವೆ. (ನೋಡಿ : ಹೆಚ್ಚಿನ ವಿವರಗಳಿಗಾಗಿ ಮೂರನೇ ಅಧ್ಯಾಯ.)
25. 'ಪ್ರಸಿದ್ಧ ಪತ್ರಿಕಾ' ಎಂಬ ಶಿರೋನಾಮೆಯುಳ್ಳ ಮುದ್ರಿತ ಕರಪತ್ರ. ದಿ. ೧೬.೧.೧೮೯೧.
26. ಮುರಿಗಾ ಸಂಸ್ಥಾನದಿಂದ ನಂಜುಂಡಸ್ವಾಮಿಗಳಿಗೆ ಬಂದಿರುವ ಪತ್ರ. ದಿ. ೨೩.೬.೧೮೯೪.
27. Muzrai File No: 102/1907. Sl. No : 1-4. P-26.

28. ಚಿದ್ಘನ ಶಿವಾಚಾರ್ಯರು ಗುರುಬಸಪ್ಪನವರಿಗೆ ಬರೆದುಕೊಟ್ಟ ಕರಾರು ಪತ್ರ. ರಿ.ನಂ : ೬೯. ೧ನೇ ಬುಕ್ಕು. ಪು. ೨೨೪ - ೨೨೭. ದಿ: ೧೪.೭.೧೯೦೦.
29. ಬೆಂಗಳೂರು ಸಬ್ ಜಡ್ಜ್ ಕೋರ್ಟ್ ಆದೇಶ ನಂ : ೨೨೦/೧೯೦೬-೦೭ರ ಪ್ರಕಾರ ಗುರುಬಸಪ್ಪನವರನ್ನು ದಿವಾಳಿ ಎಂದು ಘೋಷಿಸಲಾಗಿತ್ತು
30. Muzrai file No. 102/1907. Sl. No: 1-4. P-30.
31. Ibid. P. 31.
32. ಬೆಂಗಳೂರು ಬೇಲಿಮಠದ ಶಿವರುದ್ರಸ್ವಾಮಿಗಳ ನೇತೃತ್ವದಲ್ಲಿ ದಿ. ೧೦.೯.೧೯೦೮ರಂದು ಗಂಜಾಂಮಠದ ಚಿದ್ಘನಸ್ವಾಮಿಗಳ ಪರವಾಗಿ ಸರಕಾರಕ್ಕೆ ಒಂದು ಮನವಿ ಸಲ್ಲಿಸಲಾಯಿತು. ಹದಿಮೂರು ಜನ ಮಠಾಧಿಪತಿಗಳು ಈ ಮನವಿಗೆ ರುಜು ಮಾಡಿದ್ದರು. ಅವರುಗಳೆಂದರೆ...
    ೧. ಬೇಲಿಮಠದ ಚರಮೂರ್ತಿ ಶಿವರುದ್ರ ಸ್ವಾಮಿಗಳು. ಬೆಂಗಳೂರು.
    ೨. ನರಗುಂದದೇವರ ಮಠದ ಬಸಪ್ಪದೇವರು. ಬೆಂಗಳೂರು.
    ೩. ದೊಡ್ಡಮಠದ ಚನ್ನವೀರಸ್ವಾಮಿಗಳು. ಬೆಂಗಳೂರು.
    ೪. ಕೊಳದಮಠದ ಹುಚ್ಚಪ್ಪಸ್ವಾಮಿಗಳು. ಬೆಂಗಳೂರು.
    ೫. ಗುರುವಣ್ಣದೇವರ ಮಠದ ನಂಜುಂಡಸ್ವಾಮಿಗಳು. ಬೆಂಗಳೂರು.
    ೬. ಮರುಳಸಿದ್ಧ ಯತೀಂದ್ರರ ಗದ್ದುಗೆಮಠದ ಮರುಳಮರಿದೇವರು. ಸೋಲೂರು.
    ೭. ಹೊಸಮಠದ ಚರಮೂರ್ತಿ ಬಸವಲಿಂಗದೇವರು. ಮೈಸೂರು.
    ೮. ರಾಬಸಂದ್ರಮಠದ ರುದ್ರದೇವರು. ಚಿಕ್ಕಬಳ್ಳಾಪುರ.
    ೯. ಗುಬ್ಬಿಮಠದ ಅಡವಿಸ್ವಾಮಿಗಳು. ಗುಬ್ಬಿ.
    ೧೦. ಕಂಚುಗಲ್ಲು ಬಂಡೆಮಠದ ತೋಟದ ಸ್ವಾಮಿಗಳು. ಮಾಗಡಿ ತಾಲ್ಲೂಕು.
    ೧೧. ಮರಳೆಗವಿಮಠದ ಸೋಮಪ್ಪದೇವರು. ಕನಕಪುರ ತಾಲ್ಲೂಕು.
    ೧೨. ಬಸವಣ್ಣದೇವರ ಮಠದ ಗುರುಸಿದ್ಧದೇವರು. ನೆಲಮಂಗಲ.
    ೧೩. ಸಪ್ಪಣ್ಣಸ್ವಾಮಿ ಮಠದ ಚನ್ನಬಸವದೇವರು. ಬೆಂಗಳೂರು.
33. ಬೆಂಗಳೂರಿನ ಮೂರು ಪೇಟೆಗಳಾದ ಅರಳೆಪೇಟೆ, ದೊಡ್ಡಪೇಟೆ ಹಾಗೂ ಮಾಮೂಲುಪೇಟೆಗಳಲ್ಲಿನ ಪೇಟೆಶೆಟ್ಟಿ ಯಜಮಾನರುಗಳ ನೇತೃತ್ವದಲ್ಲಿ ೮೫ಜನ ಭಕ್ತರು ರುಜು ಮಾಡಿರುವ ಚಿದ್ಘನಶಿವಾಚಾರ್ಯರ ಪರವಾದ ಮನವಿ ಪತ್ರವೊಂದನ್ನು ಸರಕಾರಕ್ಕೆ ದಿ: ೨೮.೯.೧೯೦೮ರಲ್ಲಿ ಸಲ್ಲಿಸಲಾಗಿದೆ.
34. Muzrai file No: 232/1909. Sl. No: 1-4. P-6.
35. ಗಂಜಾಂಮಠದ ಪಾಠಶಾಲಾ ಚಿದ್ಘನಸ್ವಾಮಿಗಳಿಗೆ ಬಂದಿರುವ ಪತ್ರ. ದಿ : ೧೪.೧೧.೧೯೦೨.
36. ಗುಬ್ಬಿ ಸಬ್‌ರಿಜಿಸ್ಟ್ರಾರ್ ಕಛೇರಿ ದಾಖಲೆ : ರಿ. ನಂ : ೪೨. ೧ನೇ ಬುಕ್ಕು. ಪು. ೩೩೮-೩೪೩. ದಿ : ೩೦.೧.೧೯೦೧.
37. ಗೊಂಡೇದಹಳ್ಳಿ ವಿಭೂತಿ ನಾಗಯ್ಯನವರ ಪತ್ರ. ದಿ: ೨೨.೬.೧೯೦೬. ಗಂಜಾಂಮಠ.
38. ಬೆಂಗಳೂರು ಕಂಬಿಮಲ್ಲಣ್ಣನ ಮಗ ಕಂಬಿಸಿದ್ಧರಾಮಣ್ಣನ ಬಿನ್ನಹ ಪತ್ರ. ವಿಳಂಬಿ ಸಂವತ್ಸರ ಮಾಘ ಶುದ್ಧ ೧.೧೮೯೮.
39. ಕೊಳದಮಠದಲ್ಲಿರುವ ಗದ್ದುಗೆಯಲ್ಲಿ ಅವರ ಹೆಸರುಗಳ ಮುಂದೆ ಶಿವಾಧೀನರಾದ ದಿನಾಂಕಗಳನ್ನು ಸೂಚಿಸಲಾಗಿದೆ.
40. ಬೆಂಗಳೂರು ಸಬ್‌ರಿಜಿಸ್ಟ್ರಾರ್ ಕಛೇರಿ ದಾಖಲೆ : ರಿ. ನಂ: ೩೪೩೩. ೧ನೇ ಬುಕ್ಕು.೧೪೬ನೇ ವಾಲ್ಯುಂ. ಪು. ೨೮೬-೨೯೧. ದಿ: ೨೮.೬.೧೯೨೯.
41. ಚಿದ್ಘನ ಶಿವಾಚಾರ್ಯರ ಮರಣಶಾಸನದ ನಕಲು. ದಿ: ೨.೧೨.೧೯೧೧.
42. ಸರಕಾರಿ ಆದೇಶ ಸಂ : ೨೨೧೫/೬. ಮುಜರಾಯಿ. ೪೬೦-೧೧-೮. ದಿ:೭.೩.೧೯೧೮.
43. ಪಟ್ಟಾಧಿಕಾರದ ಮಹೋತ್ಸವ ಆಹ್ವಾನಪತ್ರಿಕೆ. ದಿ: ೧೫.೯.೧೯೨೪.
44. ಗಂಜಾಂಮಠದ ಬಸವರಾಜಸ್ವಾಮಿಗಳ ಮರಣಶಾಸನ ಪತ್ರ : ರಿ. ನಂ: ೨೭/೬೦-೬೧. ३ನೇ ಬುಕ್ಕು. ೪೩ನೇ ವಾಲ್ಯುಂ. ಪು. ೧೯-೨೦. ದಿ: ೧೩.೭.೧೯೬೦.

## ೨. ತಿಪ್ಪಶೆಟ್ಟಿ ಮಠ, ಹನುಮಂತಪುರ

ಬೆಂಗಳೂರಿನ ವೀರಶೈವಮಠಗಳ ಐತಿಹಾಸಿಕ ಪರಂಪರೆಯಲ್ಲಿ ತನ್ನದೇ ಆದ ವೈಶಿಷ್ಟ್ಯಪೂರ್ಣ ಇತಿಹಾಸವುಳ್ಳದ್ದು ಗಾಂಧಿನಗರದ ತಿಪ್ಪಶೆಟ್ಟಿಮಠ. ನಗರದ ಹೃದಯ ಭಾಗದಂತಿರುವ ಇಂದಿನ ಗಾಂಧಿನಗರ ಹಾಗೂ ಅದರ ಸುತ್ತ ಮುತ್ತಲ ಭಾಗವನ್ನು ಹಿಂದೆ ಹನುಮಂತಪುರವೆಂದು ಕರೆಯಲಾಗುತ್ತಿತ್ತು.[1] ಈ ಹೆಸರಿನ ಹಿಂದೆ ಜನಸಾಮಾನ್ಯರು ಆಡಿಕೊಳ್ಳುವ ಒಂದು ಪುಟ್ಟ ಕಥೆಯೇ ಇದೆ. ಆ ಕಥೆಯ ಪ್ರಕಾರ ಹಿಂದೆ 'ಇಮ್ಮಡಿ ಕೆಂಪರಾಯನು ಬೆಂಗಳೂರು ಪಟ್ಟಣದ ಜನತೆಗೆ ನೀರಿನ ಸೌಲಭ್ಯಕ್ಕಾಗಿ ಧರ್ಮಾಂಬುಧಿ ಕೆರೆಯನ್ನು ನಿರ್ಮಾಣ ಮಾಡಿಸಿದ್ದನು. ಆಗ ರಾಯನ ಬಲಗೈಬಂಟನಾಗಿದ್ದ ಹನುಮಂತನಾಯಕ ಎಂಬುವನು ಮುಂದೆ ನಿಂತು ಕೆರೆಯ ಕಟ್ಟಡವನ್ನು ಪೂರ್ಣಗೊಳಿಸಿ ರಾಯನ ಕೃಪೆಗೆ ಪಾತ್ರನಾದನು. ಸಂತುಷ್ಟನಾದ ರಾಯನು ಕೆರೆಯ ಆಸು-ಪಾಸಿನ ಭಾಗವನ್ನು ಹನುಮಂತನಾಯಕನಿಗೆ ಉಂಬಳಿಯಾಗಿ ಕೊಟ್ಟನು. ಆ ಭಾಗವೇ ಈ ಹನುಮಂತಪುರ. ಹನುಮಂತನಾಯಕ ಇದರ ಸ್ಮರಣಾರ್ಥವಾಗಿ ತನ್ನ ಹಾಗೂ ತನ್ನ ಮಡದಿ ಅಣ್ಣಮ್ಮಳ ಹೆಸರಿನಲ್ಲಿ ಧರ್ಮಾಂಬುಧಿ ಕೆರೆಯ ದಂಡೆಗೆ ಅಭಿಮುಖವಾಗಿ ಎರಡು ಪುಟ್ಟ ಗುಡಿಗಳನ್ನು ಕಟ್ಟಿಸಿದ್ದನು. ಅವೇ ಈಗಿನ ಗಾಂಧಿನಗರದ ಸುಭೇದಾರ್ ಛತ್ರಂ ರಸ್ತೆಯಲ್ಲಿರುವ ಆಂಜನೇಯ ಮತ್ತು ನಗರದೇವತೆ ಅಣ್ಣಮ್ಮನ ದೇಗುಲಗಳು. ಇವು ಈ ಶತಮಾನದ ಆರಂಭದ ವೇಳೆಗೆ ಪೂರ್ವಾಭಿಮುಖವಾಗಿ ಪುನರುಜ್ಜೀವನಗೊಂಡವೆಂದು ಹೇಳಲಾಗುತ್ತದೆ.'[2]

ಇಂತಹ ಐತಿಹಾಸಿಕ ಹಿನ್ನೆಲೆಯುಳ್ಳ ಹನುಮಂತಪುರ ಗ್ರಾಮದಲ್ಲಿ ೧೯ನೆಯ ಶತಮಾನದ ಆರಂಭದ ವೇಳೆಗೆ[3] ಬೆಂಗಳೂರು ಪಟ್ಟಣದ ಪ್ರಸಿದ್ಧ ವರ್ತಕರಾಗಿದ್ದ ತಿಪ್ಪಶೆಟ್ಟರು, ಗುರುಸಿದ್ಧದೇವರು ಎಂಬುವರಿಗೆ ಮಠವೊಂದನ್ನು ಕಟ್ಟಿಸಿಕೊಟ್ಟರು. ಅದೇ ಈಗಿನ ಗಾಂಧಿನಗರದಲ್ಲಿರುವ ತಿಪ್ಪಶೆಟ್ಟಿಮಠವೆಂದು ಮಲ್ಲಾಬಾದಿ ವೀರಭದ್ರಪ್ಪನವರು ಗುರುತಿಸಿದ್ದಾರೆ.[4] ೧೮೨೨ರಲ್ಲಿ ಮೈಸೂರಿನ ದೊರೆಗಳಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರು ತಿಪ್ಪಶೆಟ್ಟಿಮಠದ ಹೆಸರಿನಲ್ಲಿ ಇದೇ ಹನುಮಂತಪುರ ಗ್ರಾಮದಲ್ಲಿ ಸರ್ವಮಾನ್ಯವಾಗಿ ಭೂದಾನ ನೀಡಿರುವ ದಾಖಲೆಗಳಿವೆ. ಈ ದಾಖಲೆಗಳ ಪ್ರಕಾರ ಹನುಮಂತಪುರ ಗ್ರಾಮದಲ್ಲಿ ಹದಿನೆಂಟು ಕೊಳಗ ಮೂರುಮುಕ್ಕಾಲು ಪಡಿಯಷ್ಟು ಬೀಜವರಿ ವಿಸ್ತೀರ್ಣದ ಜಮೀನನ್ನು ಇನಾಮಾಗಿ ನೀಡಲಾಗಿತ್ತು.[5] ಈ ಮಠದ ಹಿರಿಯ ಗುರುಗಳಾಗಿದ್ದ ಗುರುಸಿದ್ಧ ಶಿವಯೋಗಿಗಳು ೧೮೨೮ರಲ್ಲಿ ಲಿಂಗೈಕ್ಯರಾಗಿದ್ದು[6] ಅವರ ಗದ್ದುಗೆ ಮಠದ ಆವರಣದ ಒಳಗಿರುವುದನ್ನು ಈಗಲೂ ನೋಡಬಹುದಾಗಿದೆ. ಈ ಹಿನ್ನೆಲೆಯಲ್ಲಿ ೧೮೦೦ರ ವೇಳೆಗಾಗಲೇ ತಿಪ್ಪಶೆಟ್ಟಿಮಠವು ಸ್ಥಾಪಿತವಾಗಿತ್ತು ಎಂದು ಸುಲಭವಾಗಿ ಊಹಿಸಲು ಅವಕಾಶವಿದೆ.

೧೮೬೬ರ ಖಾನೆಸುಮಾರಿ (ಜನಗಣತಿ) ಲೆಕ್ಕದಲ್ಲಿ ಮಾಮೂಲುಪೇಟೆಯ ಗಂಜಾಂ (ಜಂಗಮ) ಮಠ ಹಾಗೂ ಹನುಮಂತಪುರದ ತಿಪ್ಪಶೆಟ್ಟಿಮಠ ಇವೆರಡೂ ಮುರಿಗಾ ಪರಂಪರೆಗೆ ಸೇರಿದ್ದು ಒಂದೇ ಆಡಳಿತಕ್ಕೆ ಒಳಪಟ್ಟ ಮಠಗಳಾಗಿದ್ದವು.[7] ೧೮೬೭ರ ವರೆಗೂ ಈ ವ್ಯವಹಾರವು ಹಾಗೆಯೆ ಮುಂದುವರೆದಿತ್ತು. ಜೊತೆಗೆ ಕೆಲವು ಮುಜರಾಯಿ ಇಲಾಖಾ ದಾಖಲೆಗಳಲ್ಲಿ 'ಜಂಗಮ ತಿಪ್ಪಶೆಟ್ಟಿಮಠ' ಎಂಬ ಹೆಸರಿದೆ.[8] ಬಹುಶಃ 'ಮಾಮೂಲುಪೇಟೆಯ ಜಂಗಮಮಠ' ಹಾಗೂ 'ಜಂಗಮ ತಿಪ್ಪಶೆಟ್ಟಿಮಠ' ಇವೆರಡೂ ಮೂಲದಲ್ಲಿ ಒಂದೇ ಆಗಿದ್ದಿರುವ ಸಾಧ್ಯತೆ ಇದೆ. ಈ ಮಾತಿಗೆ ಪೂರಕವಾಗಿ ಒಂದು ಮುಖ್ಯ ಚರ್ಚೆಯನ್ನು ಇಲ್ಲಿ ಮಾಡಬಹುದಾಗಿದೆ.

೧೭೦೩ರಲ್ಲಿ ಮುರಿಗಾ ಶಾಂತವೀರರು ಲಿಂಗೈಕ್ಯರಾದ ಮೇಲೆ ಉದ್ಭವವಾದ ವಿರಕ್ತ ವರ್ಗದ ಐದು ಪ್ರಮುಖ ಸಮಯ (ಮುರಿಗಾಸಮಯ, ಕೆಂಪಿನಸಮಯ, ಚೀಲಾಳಸಮಯ, ಸಂಪಾದನೆಸಮಯ ಹಾಗೂ ಕುಮಾರಸಮಯ) ಭೇದಗಳವರು, ತಮ್ಮ ಸಮಯಾಚಾರದ ಪ್ರಸಿದ್ಧಿಗಾಗಿ ನಾಡಿನಾದ್ಯಂತ ಅನೇಕ ಮಠಗಳ ನಿರ್ಮಾಣಕ್ಕೆ ಕಾರಣವಾದಂತಿದೆ. ಹಿರಿಯ ಕೆಂಪೇಗೌಡನ ಕಾಲ (ಕ್ರಿ.ಶ. ೧೫೧೩-೧೫೬೯)ದಿಂದಲೂ ಕಲ್ಯಾಣನಗರವೆಂದೇ ಪ್ರಸಿದ್ಧಿಯಾಗಿದ್ದ ಬೆಂಗಳೂರು ನಗರದಲ್ಲಿ ಮೇಲ್ಕಂಡ ಸಮಯಗಳವರು ಮುಂದೆ ತಮ್ಮ ತಮ್ಮ ಶಾಖೆಯ ಮಠಗಳನ್ನುಪ್ರಾರಂಭಮಾಡಿರಬಹುದು.

ತತ್ಪರಿಣಾಮವಾಗಿ ಮಾಮೂಲು ಪೇಟೆಯ ಜಂಗಮ ಮಠವು ಕ್ರಿ.ಶ. ಸುಮಾರು ೧೭೫೦ರ ವೇಳೆಗೆ ಪ್ರಾರಂಭ ವಾಗಿರ ಬಹುದು. ಮುಂದೆ ಈ ಮಠದ ಭಕ್ತರಾಗಿದ್ದ ತಿಪ್ಪಶೆಟ್ಟರು ಹನುಮಂತಪುರದಲ್ಲಿದ್ದ ತಮ್ಮ ಸ್ವಂತ ಜಮೀನಿನಲ್ಲಿ ೧೮೦೦ರ ಸುಮಾರಿಗೆ ಒಂದು ವಿನೂತನ ಮಠವನ್ನು ಕಟ್ಟಿಸಿಕೊಟ್ಟಿರಬೇಕು.[9] ಹೀಗೆ ಬೆಂಗಳೂರಿನಲ್ಲಿ ಪ್ರಾರಂಭ ವಾದ ಮುರಿಗಾ ಸಮಯದ ಮೂಲಮಠ ಮಾಮೂಲು ಪೇಟೆಯ ಜಂಗಮಮಠವೇ ಆಗಿದ್ದು, ಅದರ ವಿನೂತನ ಶಾಖೆಯೆ ಜಂಗಮ ತಿಪ್ಪಶೆಟ್ಟಿಮಠವಾಗಿರಬೇಕು.

ತಿಪ್ಪಶೆಟ್ಟಿಮಠದ ಇಮ್ಮಡಿಗುರುಸಿದ್ಧಸ್ವಾಮಿಗಳ ಕಾಲಕ್ಕೆ (೧೮೨೮-೧೮೭೪) ಸಂಬಂಧಿಸಿದ ಅನೇಕ ವ್ಯವಹಾರ ಪತ್ರಗಳನ್ನು ಪಿ.ಎಂ. ಗಿರಿರಾಜು ಅವರು ಒಂದೆಡೆ ಸಂಗ್ರಹಿಸಿಕೊಟ್ಟಿದ್ದಾರೆ.[10] ಅವುಗಳ ಪ್ರಕಾರ ಸೋಲೂರು ಬುಡಕಟ್ಟು, ಬಂಡೆಬುಡಕಟ್ಟು, ಶಿವಪೂಜಾ ಬುಡಕಟ್ಟು, ಕಲ್ಯಾಣದ ಬುಡಕಟ್ಟು, ಷಡ್ರಂಗಿಬುಡಕಟ್ಟು, ಬಿಸಿಯಗ್ಗವಣಿ ಬುಡಕಟ್ಟು ಇವೇ ಮೊದಲಾದ ಬುಡಕಟ್ಟುಗಳೆಲ್ಲಾ ಮುರಿಗಾ ಸಮಯದ ಒಳ ಪ್ರಭೇದಗಳಾಗಿ ಕಂಡು ಬರುತ್ತವೆ.[11] ಮೇಲಾಗಿ ಇಮ್ಮಡಿ ಗುರುಸಿದ್ಧ ಸ್ವಾಮಿಗಳನ್ನು ಸೋಲೂರಿನ ಬುಡಕಟ್ಟಿನ ಸಮಯದ ಚರಮೂರ್ತಿ ಗುರುಸಿದ್ಧಸ್ವಾಮಿಗಳೆಂದೇ ಗುರುತಿಸಲಾಗಿದೆ.[12] ಮುರಿಗಾ ಸಂಸ್ಥಾನಕ್ಕೂ ಇವರಿಗೂ ಅನೇಕ ವ್ಯವಹಾರ ಪತ್ರಗಳು ನಡೆದಿವೆ. ೧೮೬೪ರ ವರೆಗೂ ಬೆಂಗಳೂರು ಪಟ್ಟಣದಲ್ಲಿ ವೀರಶೈವರ ಆಚಾರ ವಿಚಾರಗಳ ಕರ್ತರಾಗಿ ಸಂಸ್ಥಾನದ ಪ್ರತಿನಿಧಿಗಳಾಗಿದ್ದವರು ದೇಶದಮಠದ ಮುರಿಗೆಪ್ಪ ಸ್ವಾಮಿಗಳು. ಸಂಸ್ಥಾನವು ಅದೇ ವರ್ಷ ಅವರ ಪ್ರಾತಿನಿಧ್ಯ ವನ್ನು ರದ್ದುಗೊಳಿಸಿ ಆ ಸ್ಥಾನಕ್ಕೆ ಇಮ್ಮಡಿ ಗುರುಸಿದ್ಧ ಸ್ವಾಮಿಗಳನ್ನು ಸೂಚಿಸಿರುತ್ತದೆ.[13] ಈ ಪತ್ರಗಳಿಂದ ತಿಳಿದು ಬರುವ ಇನ್ನೊಂದು ಮುಖ್ಯವಾದ ಸಂಗತಿ ಏನೆಂದರೆ-ಬೆಂಗಳೂರಿನ ಹನುಮಂತಪುರದ ತಿಪ್ಪಶೆಟ್ಟಿಮಠ, ಹಾಗೂ ಮಾಮೂಲುಪೇಟೆಯ ಜಂಗಮ ಮಠಗಳ ಜೊತೆಗೆ ಗೋದೂರಯ್ಯನ ಮಠ (ಗಾಂಧಿನಗರ), ನಿರಂಜನಯ್ಯನಮಠ (ಅಣ್ಣಮ್ಮ ದೇಗುಲದ ಹಿಂಭಾಗ), ದೇಶದಮಠ (ಅರಳೆಪೇಟೆ), ಗುರುವಣ್ಣ ದೇವರ ಮಠ (ಮಾಗಡಿರಸ್ತೆ) ಇವೆಲ್ಲಾ ಮುರಿಗಾ ಪರಂಪರೆಗೆ ಸೇರಿದ ಮಠಗಳಾಗಿದ್ದುದು ವ್ಯಕ್ತವಾಗುತ್ತದೆ.[14]

೧೮೬೨-೬೩ರ ಸಾಲಿನಲ್ಲಿ ಹನುಮಂತಪುರ ಗ್ರಾಮದಲ್ಲಿ ತಿಪ್ಪಶೆಟ್ಟಿಮಠದ ಹೆಸರಿಗಿದ್ದ ಇನಾಂತಿ ಜಮೀನನ್ನು ಸೆಂಟ್ರಲ್ ಜೈಲ್ ವಿಸ್ತರಣೆಗಾಗಿ ಸರ್ಕಾರವೇ ಸ್ವಾಧೀನಪಡಿಸಿಕೊಂಡಿತ್ತು.[15] ಇದಕ್ಕೆ ಪರಿಹಾರವಾಗಿ ಬೆಂಗಳೂರು ತಾಲ್ಲೂಕು ಕೆಂಗೇರಿಹೋಬಳಿ ಸೂಲಿಕೆರೆ ಗ್ರಾಮದಲ್ಲಿ ಸ.ನಂ:೨೯ರಲ್ಲಿ ೭ ಎಕರೆ ೯ ಗುಂಟೆ ಜಮೀನನ್ನು ಇನಾವಾಗಿ ಕೊಟ್ಟುದಲ್ಲದೆ, ಉಳಿಕೆ ಹಣವನ್ನು ಧಾರ್ಮಿಕ ದತ್ತಿ ಇಲಾಖೆಯಲ್ಲಿಟ್ಟು ಅದರ ಬಡ್ಡಿ ಬಾಬ್ತು ಮಾಹೆಯಾನ ಏಳು ರೂ ಎಂಟು ಆಣೆಗಳನ್ನು ಮಠದ ದಾಸೋಹದ ಖರ್ಚಿಗೆ ನೀಡುವ ವ್ಯವಸ್ಥೆ ಮಾಡಲಾಗಿತ್ತು.[16] ಈ ವಿಚಾರವನ್ನು ಇಮ್ಮಡಿಗುರುಸಿದ್ಧಸ್ವಾಮಿಗಳು ರುಧಿರೋದ್ಗಾರಿ ಸಂವತ್ಸರದ ಪುಷ್ಯ ಬಹುಳ೧೦ರಂದು (೧೮೬೩ರಲ್ಲಿ) ಬೃಹನ್ಮಠ ಸಂಸ್ಥಾನಕ್ಕೆ ಬರೆದ ಪತ್ರದಲ್ಲಿ ತಿಳಿಸಿರು ತ್ತಾರೆ.[17] ಸಂಸ್ಥಾನಕ್ಕೂ ಇವರಿಗೂ ನಡೆದಿರುವ ಕೊನೆಯ ವ್ಯವಹಾರ ಪತ್ರ ೧೮೭೨ರದು.[18] ಮುಂದೆ ೧೮೭೪ರ ದಾಖಲೆಯೊಂದರಲ್ಲಿ ತಿಪ್ಪಶೆಟ್ಟಿಮಠದ ಚರಂತಿಗೆಯನ್ನು ಮಹಂತಯ್ಯ ಎಂಬುವವರಿಗೆ ಕೊಡಿಸುವಂತೆ ಸಂಸ್ಥಾನದ ನಿರ್ದೇಶನವಿದೆ.[19] ಬಹುಶಃ ಈ ಮಧ್ಯೆ ಇಮ್ಮಡಿ ಗುರುಸಿದ್ಧ ಸ್ವಾಮಿಗಳು[20] ಜೀವಂತವಾಗಿದ್ದಾಗಲೇ ಮುಂದಿನ ಗುರುಗಳಾಗಿ ಮಹಾಂತದೇಶಿಕರು ಅಧಿಕಾರಕ್ಕೆ ಬಂದಿರುವಂತಿದೆ.

ಮೇಲ್ಕಂಡ ದಾಖಲೆ ಪತ್ರದ ಮುಖ್ಯಾಂಶಗಳನ್ನು ಇಲ್ಲಿ ಕೊಡುವುದು ಸೂಕ್ತ. ''ಶ್ರೀಮಜ್ಜಗದ್ಗುರು ಮುರಿಗೆ ರಾಜೇಂದ್ರಸ್ವಾಮಿ ಆಜ್ಞಾ ಪ್ರಕಾರ... ಮಹಾಸನ್ನಿಧಿಯ ಖಾಸಾ ಚರಮೂರ್ತಿಗಳಾದ ಸೋಲೂರು ಬುಡಕಟ್ಟಿನ ಶಿವಮೊಗ್ಗ ತಾಲ್ಲೂಕು ಗಾಜನೂರು ಮಾಗಣೆ ಕಡವೆಕಲ್ಲು ವಿರಕ್ತ ಮಠದ ಬಸವಲಿಂಗ ಶಿವಯೋಗೀಶ್ವರ ದೇಶಿಕೇಂದ್ರರ ಸನ್ನಿಧಾನಂಗಳಿಗೆ... ಶ್ರೀಮದ್ವಿಭೂತಿಪುರದ ವೀರ ಸಿಂಹಾಸನಕ್ಕೆ ಕಾರಣಕರ್ತರಾದ ಪಟ್ಟದ ಗುರುಸಿದ್ಧರಾಜದೇವರು ಮತ್ತು ಶ್ರೀಮದ್ಬಳ್ಳುನಪುರದ ವೀರಸಿಂಹಾಸನಕ್ಕೆ ಕಾರಣಕರ್ತರಾದ ಪಟ್ಟದ ಸಿದ್ಧಬಸವರಾಜ ದೇವರು...ಬರೆದುಕೊಂಡ ಬಿನ್ನಹ... ತಮ್ಮ ಬಾಧ್ಯತೆಗೆ ಸೇರಿದ ಬೆಂಗಳೂರು ತಿಪ್ಪಶೆಟ್ಟಿ ಮಠದಲ್ಲಿ ರುದ್ರಮ್ಮ ಎಂಬುವಳ ಮಗ ಮಹಂತಯ್ಯ ಎಂಬುವವನಿಗೆ ಚರಂತಿಗೆಯನ್ನು ಕೊಡಿಸುವ

ವಿಚಾರದಲ್ಲಿ...''[21] ಎಂಬ ಇತ್ಯಾದಿ ವಿಚಾರಗಳು ಬರುತ್ತವೆ. ಈ ಪತ್ರದಲ್ಲೂ ಕೂಡ 'ತಿಪ್ಪಶೆಟ್ಟಿಮಠವು ಮುರಿಗಾ ಸಮಯದ ಸೋಲೂರು ಬುಡಕಟ್ಟಿಗೆ ಸೇರಿದ' ವಿಚಾರ ಸ್ಪಷ್ಟವಾಗಿದೆ. ಜೊತೆಗೆ ಬೆಂಗಳೂರಿಗೆ ಸಮೀಪದ ವಿಭೂತಿಪುರದ ಮಠ ಹಾಗೂ ಆನೇಕಲ್ಲು ತಾಲ್ಲೂಕು ಬಳ್ಳನಪುರದ ಮಠ ಇವೆರಡೂ ವೀರಸಿಂಹಾಸನದ ಮಠಗಳಾಗಿದ್ದು ಅವುಗಳ ಕಾರಣ ಕರ್ತರಾದವರ ಹೆಸರುಗಳೂ ಇಲ್ಲಿ ಸ್ಪಷ್ಟವಾಗಿವೆ. ಜೊತೆಗೆ ತಿಪ್ಪಶೆಟ್ಟಿ ಮಠದ ಚರಂತಿಗೆಯನ್ನು ಮಹಂತಯ್ಯನೆಂಬುವರಿಗೆ ಕೊಡಿಸುವ ವಿಚಾರಗಳಿವೆ. ಈ ಮಹಂತಯ್ಯನವರೇ ಮುಂದಿನ ತಿಪ್ಪಶೆಟ್ಟಿಮಠದ ಮಠಾಧಿಪತಿಯೂ ಹಾಗೂ ಉದ್ದಾಮ ಕವಿಯೂ ಆಗಿದ್ದ ಮಹಾಂತ ದೇಶಿಕರು.

ಕವಿಚರಿತ್ರಕಾರರು ಇವರನ್ನು 'ಈತನು ವೀರಶೈವಕವಿ, ಬೆಂಗಳೂರು ತಿಪ್ಪಶೆಟ್ಟಿಮಠದ ಗುರುಸಿದ್ಧ ಸ್ವಾಮಿಯ ಕರಸಂಜಾತನು. ರಾಜೇಶ್ವರಶತಕ, ಸಿರಿಯಾಳ ಚರಿತ್ರೆ, ರೇಣುಕ ಸ್ತೋತ್ರ, ಅಂಬಾಸ್ತೋತ್ರ, ಸತ್ಯ ಹರಿಶ್ಚಂದ್ರ ಮಹಾರಾಯನ ಚರಿತ್ರೆ ಇವೇ ಮೊದಲಾದ ಕೃತಿಗಳನ್ನು ರಚಿಸಿದ್ದಾನೆ' ಎಂಬುದಾಗಿ ಸೂಚಿಸಿದ್ದಾರೆ.[22] ಬಿ. ನಂಜುಂಡಪ್ಪನವರು ಮಹಾಂತದೇಶಿಕರು ಒಟ್ಟು ೨೭ ಸ್ವತಂತ್ರ ಕೃತಿಗಳನ್ನೂ ಹಾಗೂ ೯ ಸಂಪಾದಿತ ಕೃತಿಗಳನ್ನು ರಚಿಸಿ, ಕನ್ನಡ ಚಂಪೂ ಸಾಹಿತ್ಯ ಪ್ರಕಾರಕ್ಕೆ ಅಮೋಘವಾದ ಕೊಡುಗೆ ನೀಡಿರುವುದಾಗಿ ಉಲ್ಲೇಖಿಸಿದ್ದಾರೆ.[23] ೧೮೮೦ರ ವೇಳೆಗೆ ಪ್ರಾರಂಭವಾದ ಇವರ ಸಾಹಿತ್ಯಕೃಷಿ ೧೯೨೦ರ ವರೆಗೂ ಮುಂದುವರೆದಿತ್ತು. ಇವರ ಕಾಲದಲ್ಲಿ ಮಠದ ಧಾರ್ಮಿಕ ಹಾಗೂ ಶೈಕ್ಷಣಿಕ ಪ್ರಗತಿಯು ಉನ್ನತಮಟ್ಟ ವನ್ನು ಮುಟ್ಟಿದ್ದಿತು. ಮಹಾಂತದೇಶಿಕರು ೧೯೨೦ರಲ್ಲಿ ಲಿಂಗೈಕ್ಯರಾದರು. ಅದೇ ವರ್ಷ ಮಠದ ಭಕ್ತರು ಹಾಗೂ ಮುರಿಗಾ ಸಂಸ್ಥಾನದವರ ಅಪೇಕ್ಷೆಯ ಮೇರೆಗೆ ಚರಮೂರ್ತಿ ಪುಟ್ಟನಂಜುಂಡಸ್ವಾಮಿ ಎನ್ನುವವರನ್ನು ತಿಪ್ಪಶೆಟ್ಟಿ ಮಠದ ಉತ್ತರಾಧಿಕಾರಿಗಳನ್ನಾಗಿ ಸರ್ಕಾರವು ಅನುಮೋದಿಸಿತು.[24] ಸದರಿ ಚರಮೂರ್ತಿಗಳು ಮುಂದಿನ ಹನ್ನೆರಡು ವರ್ಷಗಳ ಕಾಲ ಮಠದ ಕಾರ್ಯಕಲಾಪಗಳನ್ನು ಹೇಗೊ ಸುಸೂತ್ರವಾಗಿ ನಡೆಸಿಕೊಂಡು ಹೋದರಾದರೂ, ದಿನಾಂಕ ೯.೯.೧೯೩೧ರಲ್ಲಿ ಅನಿರೀಕ್ಷಿತವಾಗಿ ಶಿವಾಧೀನ ರಾದರು.[25] ಇವರ ನಿಧನಾನಂತರ ತಿಪ್ಪಶೆಟ್ಟಿ ಮಠದಲ್ಲಿ ಅರಾಜಕತೆಯ ಪರಂಪರೆಗೆ ಮೊದಲಾಯಿತೆನ್ನಬಹುದು.

ಪುಟ್ಟನಂಜುಂಡಸ್ವಾಮಿಗಳು ಶಿವಾಧೀನರಾಗುವ ಮುನ್ನ ದಿನಾಂಕ : ೨೨.೩.೧೯೨೮ರಂದು ಒಂದು ಮರಣ ಶಾಸನವನ್ನು ಬರೆಸಿದ್ದರು. ಅದರ ಪ್ರಕಾರ ತಮ್ಮ ಪೂರ್ವಾಶ್ರಮದ ಅಣ್ಣಂದಿರಾದ ಬೆಂಗಳೂರು ತಾಲ್ಲೂಕು ಕೆಂಗೇರಿ ಹೋಬಳಿ ಕೊಮ್ಮಘಟ್ಟ ಗ್ರಾಮದ ದಾಖಲೆ, ರಾಯರ ಪಾಳ್ಯದ ಮಲ್ಲಿಕಾರ್ಜುನಯ್ಯನವರ ಮಗ ದೊಡ್ಡನಂಜುಂಡಪ್ಪ, ಇವರ ಮಗ ನೀಲಕಂಠ ಶಿವಾಚಾರ್ಯನೆಂಬ ಹತ್ತು ವರ್ಷದ ಬಾಲಕನನ್ನು ಮುಂದಿನ ಉತ್ತರಾಧಿಕಾರಿಯನ್ನಾಗಿ ಸೂಚಿಸಲಾಗಿತ್ತು. ಮಠದ ಸತ್‌ಸಂಪ್ರದಾಯಕ್ಕೆ ಅನುಗುಣವಾಗಿ ಆಶ್ರಮವನ್ನು ನೀಡಿರುವ ಈ ವಟುವಿಗೆ 'ಗುರುಸಿದ್ಧರಾಜ ದೇಶಿಕೇಂದ್ರ' ರೆಂಬ ನೂತನ ನಾಮಕರಣ ಮಾಡಲಾಗಿತ್ತು. ಈತನಿಗೆ ಮೈನರ್ ಗಾರ್ಡಿಯನ್ನಾಗಿ ಹಾಗೂ ಮಠದ ಉಸ್ತುವಾರಿ ದಾರನಾಗಿ ಈತನ ತಂದೆಯನ್ನೇ ನಿಯಮಿಸಲಾಗಿತ್ತು.[26] ತತ್ಪರಿಣಾಮವಾಗಿ ಇದುವರೆಗೂ ಸಾರ್ವತ್ರಿಕವಾದ ಧಾರ್ಮಿಕ ನೆಲೆಗಟ್ಟನ್ನು ಹೊಂದಿದ್ದ ತಿಪ್ಪಶೆಟ್ಟಿಮಠವು ಈಗ ಕೇವಲ ಸಾಂಸಾರಿಕ ಚೌಕಟ್ಟಿನ ಒಳಗೆ ಸೀಮಿತ ವಾಗತೊಡಗಿತ್ತು. ಸ್ವೈರಣೆಗೆಟ್ಟ ಭಕ್ತರು ಅವಿದ್ಯಾವಂತನೂ ಅನಾರೋಗ್ಯ ಪ್ರಕೃತಿಯುಳ್ಳವನೂ ಆದ ಈ ವಟುವು ಸದರಿ ಮಠಕ್ಕೆ ಸೂಕ್ತವಾದ ಆಯ್ಕೆಯಲ್ಲವೆಂದು ತಕರಾರು ಅರ್ಜಿ ಸಲ್ಲಿಸಿದರು.[27] ಮುಂದಿನ ನಾಲ್ಕೈದು ವರ್ಷಗಳ ಕಾಲ ಮುಂದುವರೆದ ಈ ವಿವಾದಕ್ಕೆ ೧೯೩೮ರಲ್ಲಿ ತೆರೆ ಬಿತ್ತು. ದಿನಾಂಕ : ೧೨.೧೦.೧೯೩೮ರ ಸರ್ಕಾರಿ ಹುಕುಂ ಪ್ರಕಾರ ಈ ಗುರುಸಿದ್ಧರಾಜ ದೇಶಿಕೇಂದ್ರರೇ ಮಠದ ಗುರುವಾಗಿ ಮುಂದುವರಿಯುವುದು ಸಕ್ರಮವೆಂದು ಸಾರಲಾಯಿತು.[28]

ಈ ಮಧ್ಯೆ ಹನುಮಂತಪುರದಲ್ಲಿ ಇನ್ನೂ ಅಳಿದುಳಿದಿದ್ದ ತಿಪ್ಪಶೆಟ್ಟಿ ಮಠದ ಜಮೀನುಗಳನ್ನು ಗಾಂಧಿನಗರದ ಬಡಾವಣೆಯ ವಿಸ್ತರಣೆಗಾಗಿ ಸರ್ಕಾರವೇ ವಶಪಡಿಸಿಕೊಂಡಿತು. ಮಠದ ವಿವಾದದ ಹಿನ್ನೆಲೆಯಲ್ಲಿ ಜಮೀನುಗಳಿಂದ ದೊರಕಿದ ೩೫,೦೦೦ ರೂಗಳ ಪರಿಹಾರ ಧನವನ್ನು ಮಠದ ಹೆಸರಿನಲ್ಲೇ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಇಡಲಾಯಿತು.[29] ಇದರಿಂದ ಬಂದ ಬಡ್ಡಿಯ ಹಣವನ್ನು ಮಠದ ದಾಸೋಹ ಹಾಗೂ ದೀಪಾರಾಧನೆಗಳಿಗೆ ಉಪಯೋಗಿಸಿಕೊಳ್ಳುವಂತೆ ಸೂಚಿಸಲಾಗಿತ್ತು. ಈ ವೇಳೆಗೆ ಮಠವು ತನ್ನ ಮೂಲ

ಸ್ವರೂಪದಿಂದ ಸಂಪೂರ್ಣವಾಗಿ ಬದಲಾಗಿತ್ತು. ಮಠದ ಆವರಣದಲ್ಲಿ ಭಕ್ತರ ಆರಾಧನೆಗಿಂತ ಬಾಡಿಗೆದಾರರ ವಹಿವಾಟೇ ಬಲವಾಗತೊಡಗಿತ್ತು. ಭಕ್ತರ ಗಂಭೀರ ಸ್ವರೂಪದ ಆಪಾದನೆಗಳಿಗೆ ಓಗೊಟ್ಟ ಸರ್ಕಾರ ದಿನಾಂಕ : ೧೨.೩.೧೯೪೪೮ರಲ್ಲಿ ಮಠದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಆಮೂಲಾಗ್ರ ತನಿಖೆಗೆ ಆದೇಶಿಸಿತು.[30] ಈ ತನಿಖಾ ಸಮಿತಿಯಲ್ಲಿ ಬೆಂಗಳೂರಿನ ಉಪವಿಭಾಗಾಧಿಕಾರಿಗಳು, ನ್ಯಾಯವಾದಿ ಪಿ.ಶಿವಶಂಕರ್ ಹಾಗೂ ನಿವೃತ್ತ ಹಿರಿಯ ಆಯುಕ್ತರಾಗಿದ್ದ ಸಿ. ಮಲ್ಲಿಕಾರ್ಜುನಯ್ಯ ಇವರುಗಳನ್ನು ಸದಸ್ಯರನ್ನಾಗಿ ನೇಮಿಸಲಾಗಿತ್ತು. ಸಮಿತಿಯು ಸರ್ಕಾರಕ್ಕೆ ಸಲ್ಲಿಸಿದ ವರದಿಯನ್ನು ಆಧರಿಸಿ ದಿನಾಂಕ : ೧೫.೮.೧೯೪೪೮ರಂದು ಭಕ್ತರಿಗೂ ಹಾಗೂ ಮಠಾಧಿಪತಿಗಳಿಗೂ ಒಪ್ಪಿಗೆಯಾಗುವ ಟ್ರಸ್ಟ್ ಕಮಿಟಿಯೊಂದನ್ನು ರಚಿಸಲಾಯಿತು. ಶ್ರೀಶೈಲದ ಎಂ. ನಾಗಪ್ಪನವರು, ಗೊಲ್ಲಳ್ಳಿ ರುದ್ರಪ್ಪನವರು, ಮಾಡೆಲ್‌ಪ್ರೆಸ್‌ನ ಟಿ.ಎನ್. ಚನ್ನಪ್ಪನವರು, ಸೂಲಿಕೆರೆಯ ಪಟೇಲ್ ರೇವಣ್ಣನವರು ಹಾಗೂ ನ್ಯಾಯವಾದಿ ಜಿ.ಸಿ. ವೀರಪ್ಪನವರು ಇದರ ಸದಸ್ಯರಾಗಿದ್ದರು.[31] ಮಠದ ಸಂಪೂರ್ಣ ಜವಾಬ್ದಾರಿಗಳನ್ನು ಈ ಕಮಿಟಿಗೆ ವಹಿಸಿತ್ತಾದರೂ, ಮುಂದಿನ ಕೆಲವೇ ವರ್ಷಗಳಲ್ಲಿ ಈ ಟ್ರಸ್ಟಿಗಳೂ ಕೂಡ ಭಕ್ತರ ಅವಿಶ್ವಾಸಕ್ಕೆ ಗುರಿಯಾದರು.

ಮುಂದೆ ದಿನಾಂಕ : ४.೫.೧೯೬೦ರಂದು ತಿಪ್ಪಶೆಟ್ಟಿಮಠದ ಗುರುಸಿದ್ಧರಾಜ ದೇಶಿಕೇಂದ್ರರು ಚಿತ್ರದುರ್ಗ ಬೃಹನ್ಮಠದ ಜಯವಿಭವ ಜಗದ್ಗುರುಗಳಿಗೆ ತಮ್ಮ ಮಠದ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಟ್ಟರು. ತಾವು ಸನ್ಯಾಸಾಶ್ರಮವನ್ನೇ ತೊರೆದು ತಮ್ಮ ಮುಂದಿನ ಜೀವನೋಪಾಯಕ್ಕಾಗಿ ೨೦,೦೦೦ ರೂಗಳ ಪರಿಹಾರ ಧನವನ್ನು ಪಡೆದು ಮಠಕ್ಕೆ ವಿದಾಯ ಹೇಳಿದರು.[32] ಅಂದಿನಿಂದಲೂ ಸದರಿ ಮಠವು ಚಿತ್ರದುರ್ಗ ಬೃಹನ್ಮಠದವರ ನೇರ ಆಡಳಿತಕ್ಕೆ ಒಳಪಟ್ಟಿರುತ್ತದೆ. ಮೇಲ್ಕಂಡ ಒಪ್ಪಂದವಾದಾಗ ಈ ಮಠಕ್ಕೆ ಸೇರಿದ್ದ ಸೂಲಿಕೆರೆ ಗ್ರಾಮದಲ್ಲಿ, ಹನ್ನೆರಡುವರೆ ಎಕರೆ ಜಮೀನಿತ್ತು. ಸದ್ಯಕ್ಕೆ ನಗರ ಭೂಮಾಪನಾ ಇಲಾಖಾ ದಾಖಲೆಗಳ ಪ್ರಕಾರ ನಗರದಲ್ಲಿ ಈ ಮಠದ ಆಸ್ತಿಯ ವಿಸ್ತೀರ್ಣ ೫೯೬೯.೮ ಚದರಗಜಗಳಷ್ಟಿರುತ್ತದೆ.[33]

ಇತ್ತೀಚೆಗೆ ಮುರಿಗಾ ಸಂಸ್ಥಾನದವರು ಬೆಂಗಳೂರಿನ ತಿಪ್ಪಶೆಟ್ಟಿ ಮಠದ ಆವರಣವನ್ನು ನಗರದ ಒಂದು ಪ್ರಮುಖ ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡುವಲ್ಲಿ ಸಾಕಷ್ಟು ಅಭಿವೃದ್ಧಿ ಕಾರ್ಯಗಳನ್ನು ಪೂರೈಸಿದ್ದಾರೆ. ಮಠದ ಆವರಣದಲ್ಲಿ ಭವ್ಯವಾದ ಕಟ್ಟಡಗಳು ಎದ್ದಿದ್ದು, ಶ್ರೀ ಜಯದೇವ ಮುರುಘರಾಜೇಂದ್ರ ಸಮುದಾಯಭವನ, ಅಂತಾರಾಷ್ಟ್ರೀಯ ಬಸವತತ್ವ ಪ್ರಚಾರ ಕೇಂದ್ರ ಇವೇ ಮೊದಲಾದ ಸಾಂಸ್ಕೃತಿಕ ಭವನಗಳು ಕಾರ್ಯ ಪ್ರವೃತ್ತವಾಗಿವೆ.

ಒಟ್ಟಾರೆ ನಗರದ ತಿಪ್ಪಶೆಟ್ಟಿ ಮಠವು ಬೆಂಗಳೂರಿನ ಮತ್ತೊಂದು ಪ್ರಮುಖವಾದ ಮುರಿಗಾ ಸಮಯದ ಮಠವಾಗಿದ್ದು, ತಿಪ್ಪಶೆಟ್ಟರ ಅಂದಿನ ಸಾರ್ಥಕ ಸೇವೆಗೆ ತಕ್ಕಂತೆ ಇಂದಿಗೂ ಸಾಮಾಜಿಕವಾಗಿ ಸ್ಪಂದಿಸುತ್ತಿರುವುದು ಸ್ವಾಗತಾರ್ಹ ಸಂಗತಿಯಾಗಿದೆ.

**ತಿಪ್ಪಶೆಟ್ಟಿ ಮಠದ ಗುರುಪರಂಪರೆ :**

೧. ಹಿರಿಯ ಗುರುಸಿದ್ಧಸ್ವಾಮಿಗಳು. ಸು. ೧೮೦೦ - ೧೮೨೮.

೨. ಇಮ್ಮಡಿ ಗುರುಸಿದ್ಧಸ್ವಾಮಿಗಳು. ೧೮೨೮-೧೮೬४.

೩. ಮಹಾಂತ ದೇಶಿಕೇಂದ್ರರು. ೧೮೬४-೧೯೨೦.

४. ಪುಟ್ಟನಂಜುಂಡಸ್ವಾಮಿಗಳು. ೧೯೨೦-೧೯೩೧.

೫. ಗುರುಸಿದ್ಧರಾಜ ದೇಶಿಕೇಂದ್ರರು. ೧೯೩೧-೧೯೬೦.

---

**ಅಡಿಟಿಪ್ಪಣಿಗಳು**

1. ತಿಪ್ಪಶೆಟ್ಟಿ ಮಠದ ಹಳೆಯ ದಾಖಲೆಗಳು ಹಾಗೂ ಮುಜರಾಯಿ ಇಲಾಖಾ ದಾಖಲೆಗಳಲ್ಲಿ ಹನುಮಂತಪುರದ ತಿಪ್ಪಶೆಟ್ಟಿ ಮಠವೆಂದೇ ದಾಖಲಾಗಿದೆ.
2. ಹೇಳಿಕೆ : ಸಿದ್ಧಲಿಂಗಸ್ವಾಮಿ (೯४) ಹೊಳವನಹಳ್ಳಿ ಮಠ. ಕೊರಟಗೆರೆ ತಾಲ್ಲೂಕು ತುಮಕೂರು ಜಿಲ್ಲೆ (ಇವರು ೧೯೧೮ರಿಂದ ೧೯४೫ರ ವರೆಗೂ ಬೆಂಗಳೂರಿನಲ್ಲೆ ವಾಸವಾಗಿದ್ದವರು)

3. ಕೆ.ಪಿ. ಶಿವಲಿಂಗಯ್ಯನವರು ಕ್ರಿ.ಶ. ೧೭೪೫ರ ವೇಳೆಗೆ ಈ ಮಠವನ್ನು ತಿಪ್ಪಶೆಟ್ಟರು ಕಟ್ಟಿಸಿಕೊಟ್ಟುದಾಗಿ ಹೇಳಿದ್ದಾರೆ. (ಲಿಂಗನುಡಿ. ಮಾರ್ಚ್ ೧೯೯೨. ಪು. ೧೨)
4. ಮಲ್ಲಾಬಾದಿವೀರಭದ್ರಪ್ಪ. ಬೆಂಗಳೂರಿನ ಶ್ರೀ ಸರ್ಪಭೂಷಣಶಿವಯೋಗಿಗಳ ಜೀವನ ಚರಿತ್ರೆ. (೧೯೫೨) ಪು. ೬, ೭.
5. Register for Muzrai Institutions -1902. Title deed No : 37/756. P.180-181.
6. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರಿನ ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನ ಚರಿತ್ರೆ. ಪು. ೨೬, ೨೭.
7. Muzrai File. (Ganjam Mutt) No : 102/1907. Sl. No : 1-4. P. 24.
8. List of the Mutts in Bangalore District. 1902. P. 184-185; and 1926. P. 32.
9. ತಿಪ್ಪಶೆಟ್ಟರು ಧರ್ಮಾಭಿಮಾನಿಗಳೂ ಉದಾರ ದಾನಿಗಳೂ ಆಗಿದ್ದರು. ಇವರು ತಿಪ್ಪಶೆಟ್ಟಿ ಮಠದ ಜೊತೆಗೆ, ಬೆಂಗಳೂರು ನಗರದಲ್ಲಿ ಬಸವೇಶ್ವರನ ದೇವಾಲಯ ಹಾಗೂ ಅದರ ಬಳಿ ಕೊಳವೊಂದನ್ನು ನಿರ್ಮಿಸಿಕೊಟ್ಟಂತೆ ತಿಳಿದುಬರುತ್ತದೆ. (ಯಾವಸ್ಥಳವೆಂದು ಗೊತ್ತಾಗಿಲ್ಲ); ೧೯೨೫ರ ಮುಜರಾಯಿ ದಾಖಲೆಯಲ್ಲಿ 'ತಿಪ್ಪಶೆಟ್ಟಿ ಕೊಳದ ಬಸವೇಶ್ವರನ ದೇಗುಲ, ಬೆಂಗಳೂರು ಸಿಟಿ' ಎಂದು ದಾಖಲಾಗಿದೆ. (Muzrai File No : 271/1925-26. Sl. No: 1-6. P-8.)
10. ಪಿ.ಎಂ.ಗಿರಿರಾಜು ಅವರು ಇಲ್ಲಿ ಇಮ್ಮಡಿ ಗುರುಸಿದ್ಧಸ್ವಾಮಿಗಳನ್ನೇ ಸರ್ಪಭೂಷಣ ಶಿವಯೋಗಿಗಳ ಗುರುಗಳೆಂದು ಉಲ್ಲೇಖಿಸಿದ್ದಾರೆ. ೧೮೨೮ರ ವೇಳೆಗೆ ತೀರಿಕೊಂಡ ತಿಪ್ಪಶೆಟ್ಟಿ ಮಠದ ಹಿರಿಯ ಗುರುಸಿದ್ಧಶಿವಯೋಗಿಗಳೇ ಸರ್ಪಭೂಷಣರ ಗುರುಗಳೆಂದು ಮಲ್ಲಾಬಾದಿ ವೀರಭದ್ರಪ್ಪನವರು ಗುರುತಿರುವುದು ಖಚಿತವೆನಿಸುತ್ತದೆ. ಏಕೆಂದರೆ ಸರ್ಪಭೂಷಣರು ಐಕ್ಯವಾದ ಕಾಲ ೧೮೪೯. ಇಮ್ಮಡಿ ಗುರುಸಿದ್ಧ ಸ್ವಾಮಿಗಳು ಐಕ್ಯವಾದ ಕಾಲ ೧೮೭೪. (ಇವು ಆಧಾರಬದ್ಧ ಮಾಹಿತಿ) ಈ ಹಿನ್ನೆಲೆಯಲ್ಲಿ ಸರ್ಪಭೂಷಣರ ಸಮಕಾಲೀನರೂ ಅವರಿಗಿಂತಲೂ ಕಿರಿಯರೂ ಆಗಿದ್ದ ಇಮ್ಮಡಿ ಗುರುಸಿದ್ಧಸ್ವಾಮಿಗಳು ಸರ್ಪಭೂಷಣರ ಗುರುಗಳಾಗಿರಲಿಕ್ಕೆ ಸಾಧ್ಯವಿಲ್ಲ.
11. ಪಿ.ಎಂ. ಗಿರಿರಾಜು. ಚರಮೂರ್ತಿ ಶ್ರೀಗುರುಸಿದ್ಧಸ್ವಾಮಿಗಳ ಕೆಲವು ಐತಿಹಾಸಿಕ ಘಟನೆಗಳು. ಸರ್ಪಭೂಷಣ ಶ್ರೀ. ಸಂ : ಜಿ.ವಿ. ಶಿವಸ್ವಾಮಿ, ಎಚ್.ಎಸ್. ಸಿದ್ಧಗಂಗಪ್ಪ. ಪು. ೬೪-೬೬.
12. ಅದೇ. ಪು. ೬೫. (ಶುಕ್ಲನಾಮ ಸಂವತ್ಸರ ಆಷಾಡ ಶುದ್ಧ ೪ರ ಪತ್ರ)
13. ಅದೇ. ಪು. ೬೬. (ಶಾಲಿವಾಹನ ಶಕ. ೧೭೮೬. ರಕ್ತಾಕ್ಷಿ ಸಂವತ್ಸರ ಚೈತ್ರ ಬಹುಳ ೧೩ರ ಪತ್ರ)
14. ಅದೇ ಪು. ೬೪. (ಶಾಲಿವಾಹನ ಶಕ. ೧೭೭೦. ಕೀಲಕ ಸಂವತ್ಸರ ಶ್ರಾವಣ ಶುದ್ಧ ೧೨)
15. Deputy Commissioners Report. No : 1309. dt. 2nd Sept. 1908. P.1
16. Muzrai File. No : 26/1929. Sl.No : 1,4-11. P-32.
17. ಪಿ.ಎಂ. ಗಿರಿರಾಜು. ಚರಮೂರ್ತಿ ಶ್ರೀ ಗುರುಸಿದ್ಧಸ್ವಾಮಿಗಳ ಕೆಲವು ಐತಿಹಾಸಿಕ ಘಟನೆಗಳು. ಸರ್ಪಭೂಷಣ ಶ್ರೀ. ಸಂ : ಜಿ.ವಿ. ಶಿವಸ್ವಾಮಿ, ಎಚ್.ಎಸ್. ಸಿದ್ಧಗಂಗಪ್ಪ. ಪು. ೬೬.
18. ಅದೇ. ಪು. ೬೫. (ಆಂಗೀರಸ ಸಂವತ್ಸರ ಕಾರ್ತೀಕ ಶುದ್ಧ ೧೦)
19. ಪ್ರತ್ಯೇಕ ಪತ್ರ : ಭಾವನಾಮ ಸಂವತ್ಸರ ಬಹುಳ ೧೩. (ಸಂಸ್ಥಾನಕ್ಕೆ ವಿಭೂತಿಪುರ ಮತ್ತು ಬಳ್ಳನಪುರ ಮಠದ ಸ್ವಾಮಿಗಳು ಬರೆದಿರುವ ಬಿನ್ನಹ ಪತ್ರ)
20. ಇಮ್ಮಡಿ ಗುರುಸಿದ್ಧಸ್ವಾಮಿಗಳು ೧೮೭೮ರವರೆಗೂ ಬದುಕಿದ್ದುದಕ್ಕೆ ಆಧಾರಗಳಿವೆ. ಸರ್ಪಭೂಷಣ ಮಠದ ಗುರುಸ್ವಾಮಿಗಳು ದಿ : ೯.೧೦.೧೮೭೮ರಲ್ಲಿ ಬರೆದಿರುವ ಮರಣ ಶಾಸನದಲ್ಲಿ ತಿಪ್ಪಶೆಟ್ಟಿ ಮಠದ ಚರಮೂರ್ತಿಗಳು ಗುರುಸಿದ್ಧಪ್ಪನವರ ಸಾಕ್ಷಿ ರುಜು ಎಂದಿದೆ.
21. ಪ್ರತ್ಯೇಕ ಪತ್ರ ದಾಖಲೆ (ಭಾವನಾಮ ಸಂವತ್ಸರ ಬಹುಳ ೧೩) ಪೂರ್ವೋಕ್ತ. (೧೮೨೯).
22. ಆರ್. ನರಸಿಂಹಾಚಾರ್. ಕರ್ನಾಟಕ ಕವಿಚರಿತ್ರೆ. ಸಂ-೩ (೧೯೨೯). ಪು. ೨೨೨.
23. ಬಿ. ನಂಜುಂಡಪ್ಪ. (ಸಂ) ಮಹಾಂತ ದೇಶಿಕರ ಶಿವಶರಣವಿಲಾಸ. (೧೯೮೯). ಪೀಠಿಕೆ. ಪು. ix -xii.
24. ಸರ್ಕಾರಕ್ಕೆ ಮಠದ ಭಕ್ತರಾದ ವೀರಶೈವ ಮತಬಾಂಧವರು ಬರೆದುಕೊಂಡ ಅರ್ಜಿ. ದಿ : ೧೨.೮.೧೯೩೨. (ಇದರಲ್ಲಿ ೧೨೮ ಜನರ ರುಜುಗಳಿವೆ)
25. Muzrai File No : 67/1934. Sl. No: 1-5, P. 16.
26. ಪುಟ್ಟನಂಜುಂಡಸ್ವಾಮಿಗಳ ಮರಣಶಾಸನ. ರಿ. ನಂ : ೧೭. ದಿ : ೭.೯.೧೯೩೧.
27. ಮಠದ ಭಕ್ತರು ಸರ್ಕಾರಕ್ಕೆ ಬರೆದ ಅರ್ಜಿ. ದಿನಾಂಕ: ೧೨.೮.೧೯೩೨.
28. ಸರ್ಕಾರಿ ಹುಕುಂ ನಂ : ೫೫೦-೨. Muzrai File No : 67/1934. Sl.No :1-5. P-59. dtd. 6th, 12th, October. 1934.
29. Muzrai File No : 297/1939-40. Sl. No 1-3. P-2.
30. ಸರ್ಕಾರಿ ಹುಕುಂ ನಂ: ೫೦೬/೪೭-೪೮. ದಿ : ೧೨.೩.೧೯೪೮.
31. ನ್ಯಾಯವಾದಿ ಜಿ.ಸಿ. ವೀರಪ್ಪನವರಿಗೆ ಸೇರಿದ ಕೆಲವು ಬಿಡಿ ಕಾಗದ ಪತ್ರಗಳಿಂದ ಈ ಮಾಹಿತಿ ಸಂಗ್ರಹಿಸಲಾಗಿದೆ.
32. ಗುರುಸಿದ್ಧರಾಜ ದೇಶಿಕೇಂದ್ರರು ಬರೆದುಕೊಟ್ಟ ನಿವೃತ್ತಿಪತ್ರ : ರಿ.ನಂ: ೯೧೦/೬೦-೬೧. ೧ನೇ ಬುಕ್. ೧೭೭೦ನೇ ಸಂಪುಟ. ಪು. ೮೬-೯೧. ದಿ:೨೭.೬.೧೯೬೦.
33. ಭೂಮಾಪನಾ ಇಲಾಖೆ. ಗಾಂಧಿನಗರ ವಿಭಾಗ ಸಂ : 60.Sl.No: 456. Final City Survey No : 456

## ೩. ಗುರುವಣ್ಣದೇವರ ಮಠ, ಹನುಮಂತಪುರ ಸಮ್ಮತು

ಬೆಂಗಳೂರು ರೈಲು ನಿಲ್ದಾಣದ ದಕ್ಷಿಣದ ತುತ್ತತುದಿಗೆ ಬೇಲಿಮಠದ ರಸ್ತೆ ಇದೆ. ಈ ರಸ್ತೆಯಲ್ಲಿರುವ ಬಿನ್ನಿಮಿಲ್ಲಿನ ವೃತ್ತಕ್ಕೆ ಪಶ್ಚಿಮ ಭಾಗದಲ್ಲಿ ಬೆಂಗಳೂರು ಮೈಸೂರು ನಡುವಣ ರೈಲು ಮಾರ್ಗವಿದೆ. ಈ ರೈಲು ಮಾರ್ಗಕ್ಕೆ ಹೊಂದಿಕೊಂಡಂತಿರುವುದೇ ಗುರುವಣ್ಣದೇವರ ಮಠ. ಈಗ ಆ ಪ್ರದೇಶವನ್ನು ಬಿನ್ನಿಸ್ಟನ್ ಗಾರ್ಡನ್ ಎಂದೇ ಗುರುತಿಸಲಾಗುತ್ತದೆ. ಬಿನ್ನಿ ವೃತ್ತದಿಂದ ಮಾಗಡಿ ಮುಖ್ಯರಸ್ತೆಗೆ ಇಳಿಯುತ್ತಿದ್ದಂತೆ ರೈಲ್ವೆ ಸೇತುವೆಯಿಂದ ಎಡಭಾಗದಲ್ಲಿ ಮಠದ ಪ್ರವೇಶದ್ವಾರವಿದೆ. ಮಠದ ಆವರಣವನ್ನು ಒಳ ಹೊಕ್ಕಂತೆ ಇಂತಹ ಜನನಿಬಿಡ ನಗರದ ನಡುವೆಯೂ, ಪ್ರಶಾಂತ ವಾತಾವರಣವುಳ್ಳ ಸ್ಥಳ ವೊಂದುಂಟೆ? ಎನ್ನುವಷ್ಟು ಆಶ್ಚರ್ಯ ಉಂಟಾಗುತ್ತದೆ. ಅಲ್ಲಿನ ಸಹಜ ಸುಂದರ ಪ್ರಾಕೃತಿಕ ಪರಿಸರವು ತಪೋನಿಷ್ಠರ ಅನುಷ್ಠಾನಾದಿ ಆಧ್ಯಾತ್ಮಿಕ ಚಿಂತನೆಗಳಿಗೆ ಹೇಳಿಮಾಡಿಸಿ ದಂತಹ ಸ್ಥಳವಾಗಿದೆ.

ಈ ಶತಮಾನದ ಆರಂಭದ ದಿನಗಳಲ್ಲಿ ಗುರುವಣ್ಣದೇವರ ಮಠವನ್ನು 'ಗುರುವಣ್ಣನವರ ಮಠ' ವೆಂದೇ ಕರೆಯಲಾಗುತ್ತಿತ್ತು. ಮಠವಿದ್ದ ಈ ಪ್ರದೇಶವನ್ನು ಬೆಂಗಳೂರು ತಾಲ್ಲೂಕು, ಅಲಸೂರು ಹೋಬಳಿ, ಹನುಮಂತಪುರ ಗ್ರಾಮವೆಂದೇ ದಾಖಲೆಗಳು ದೃಢಪಡಿಸುತ್ತವೆ.[1] ಮಠದ ಐತಿಹಾಸಿಕ ಪರಂಪರೆಯನ್ನು ಕುರಿತು ಪರಿಶೀಲಿಸುವಾಗ ನಮಗೆ ದೊರಕುವ ಅಧಿಕೃತ ದಾಖಲೆ ಮೈಸೂರು ದೊರೆಗಳ ಸಂಸ್ಥಾನದಿಂದ ಬಂದಿರುವ ೧೮೧೨ರ ಆದೇಶಪತ್ರ. ಅದರ ಪೂರ್ಣಪಾಠ ಹೀಗಿದೆ. ''ರಾಜಶ್ರೀ ಕಸಬೇ ರಾಮೈಯನವರಿಗೂ ಶೇಷಗಿರಿರಾವ ಕಚೇರಿ ಬೆಂಗಳೂರು ನಮಸ್ಕಾರ। ಆದಾಗಿ। ಬೆಂಗಳೂರು ಕಸಬೇಯಲ್ಲಿ ಗುರುವಣ್ಣನ ಮಠಕ್ಕೆ ಸು. ೫ ಆೈ(ಐ)ದು ವರಹಾದ ಹೊಲ ಸಾಬಕ ಆರಭ್ಯ ನಡದು ಬರುತ್ತಾ ಯಿದ್ದದ್ದಕ್ಕೆ ಮಧ್ವರಾಯರ ದಿವ್ಸದಲ್ಲಿ ಪೈಮಾಯಿಷಿ ಮಾಡಿ ಜಾಸ್ತಿ ಗು ೨/೧ ಹಾಕಿಯಿದ್ದಾರಂತ್ತೆ ಜಾಸ್ತಿ ಹಾಕಿರುವ ಹಣ ಕೊಡಲಾರೆವುಯಂದೂ ಹೆಳಿ ಕೊಂಡದ್ದರಿಂದಾ ಪೈಮಾಯಿಷಿ ಮಾಡಿಶಿದ್ದರಲ್ಲಿ ದುಬಾರೆ ಹೆಚ್ಚಿಗೆ ಆದ ಕಾರಣ ಜಾಸ್ತಿ ಬಗೆ ೨/೧ ಹಣವೂ ಸೊಡಿಮಾಡ್ಸಿ ಯಿಧೀತ್ತು ಯಿ ಆಂಗಿರಸ ಸಂವತ್ಸರದ ಆರಭ್ಯ....ಯಿರುವ ಕಂದಾಯ ತೆಗೆದುಕೊಳ ಕೆಲಸವಿಲ್ಲಾ ಯಿ ಪುತ್ರದ ನಕಲು ಶ್ಯಾನುಭಾಗರ ಲೆಖ್ಖಕೆ ಬರಶಿ ಅಸಲು ಪುತ್ರವನ್ನು ಮಠದ ಅಯ್ಯಗೆ ಕೊಡುವುದು. ಆಂಗಿರಸ ಸಂ। ಚೈತ್ರ ಶುದ್ಧ ೧೦ರಲ್ಲೂ ನಮಸ್ಕಾರ!''[2]

ಮೇಲ್ಕಂಡ ದಾಖಲೆಯ ಮುಖ್ಯಾಂಶಗಳನ್ನು ಸಂಗ್ರಹಿಸಿ ಹೇಳುವುದಾದರೆ ''ಬೆಂಗಳೂರು ಕಸಬೆ (ಮುಖ್ಯಸ್ಥಳ)ಯಲ್ಲಿರುವ ಶೇಷಗಿರಿರಾವ್ ಕಛೇರಿಯ ರಾಮಯ್ಯನವರಿಗೆ, ಆಂಗಿರಸ ಸಂವತ್ಸರದ ಚೈತ್ರ ಶುದ್ಧ ೧೦ ರಂದು (ಕ್ರಿ.ಶ. ೧೮೧೨ರಲ್ಲಿ) ಸಂಸ್ಥಾನದಿಂದ ಬಂದಿರುವ ಸೂಚನೆಯ[3] ಪ್ರಕಾರ-ಬೆಂಗಳೂರಿನ ಗುರುವಣ್ಣನವರ ಮಠಕ್ಕೆ ಐದು ವರಹದ ಭೂಮಿಯು ಸಾಬಕು (ಪೂರ್ವದಿಂದ) ನಡೆದುಬಂದಿದೆ. ಇದಕ್ಕೆ ಮಧ್ವರಾಯರ ಕಾಲದಲ್ಲಿ[4] ಪೈಮಾಯಿಷಿ (ತೀರ್ಮಾನ ಅಥವಾ ಗೊತ್ತುಪಡಿಸಿದ) ಆದ ಪ್ರಕಾರ ೨/೧ ಹಣ ಹೆಚ್ಚಿನ ಕಂದಾಯ ವಿಧಿಸಲಾಗಿತ್ತು. ಮಠದವರು ಈ ಹೆಚ್ಚಿನ ಕಂದಾಯವನ್ನು ಕಟ್ಟಲಾಗದೆಂದು ಕೇಳಿಕೊಂಡಾಗ ಸದರಿ ತೆರಿಗೆಯನ್ನು ಕೈಬಿಡುವಂತೆ ಸಂಬಂಧಪಟ್ಟ ಶ್ಯಾನುಭೋಗರಿಗೆ ಆದೇಶ ನೀಡಲಾಗಿದೆ.''

ಈ ಮಠದ ಬಗೆಗೆ ವಿಶೇಷವಾಗಿ ಬೆಳಕು ಚೆಲ್ಲುವ, ಇದೇ ಸಂವತ್ಸರಕ್ಕೆ (ಕ್ರಿ.ಶ. ೧೮೧೨)ಸೇರಿದ ಮತ್ತೊಂದು ದಾನ ಶಾಸನ ಪತ್ರವಿದೆ. ಅದರ ಪೂರ್ಣಪಾಠವನ್ನು ಇಲ್ಲಿ ಉದ್ಧರಿಸುವುದು ಸೂಕ್ತವಾದೀತು. ಅದರಲ್ಲೂ ಕೂಡ ಮೇಲ್ಭಾಗದಲ್ಲಿ ಅರಬ್ಬಿ ಸಂಕೇತಗಳುಳ್ಳ ಮುದ್ರೆ ಇದೆ. ಪಾಠಭಾಗವು ಮೂಲದಲ್ಲಿರುವಂತೆ- ''ಹಜರತ್ತು ನಬೀಶಾ ಸಾಹೇಬರವರು ಆಂಗಿರಸ ಸಂ। ನಿಜ ವೈಶಾಖ ಬ ೧೪ರಲ್ಲೂ ದೊಡಪ್ಯಾಟೆ ಶಿದ್ದಪ್ಪ ಶೆಟ್ರು ಮುಹಂತಪ್ಪಶೆಟ್ರು ಚೆಂನಸೊಮಂಣ ಶೆಟ್ರು ಮುಂತ್ತಾದವರಿಗೆ ಸಹಾ ಬರಶಿ ಕೊಟ್ಟ ವಿವರಾ-ಆದಾಗಿ ದೊಡಪ್ಯಾಟೆ ನಮಿಗೆ ಪೂರ್ವದಾರಭ್ಯಾದಿಂದಾ ನಂಮ ಯಿಲಾಕ್ಕೆ ಪ್ಯಾಟೆಗಳಲ್ಲಿ ಕುಳವರ್ತನೆ ಪಾಲು ವಿಸಾ ಸಹಾ ನಡೆಸಿಕೊಂಡು ಬರುತ್ತಾ ಯಿದ್ದದ್ದು ಸರಿಯಷ್ಟೆ. ಯಿ ಬಗ್ಯೆ ನಾವೂ ನಿಮಗೆ ಪೂರ್ವಾರಭ್ಯಾ ನಡಶಿಕೊಂಡು ಬರುತ್ತಾಯಿದ್ದಂತಾ ದೊಡಪ್ಯಾಟೆ ಮಾದಣನವರ ಚೆಂನಸೊಮಂಣನವರ ಗುರುವಂಣನವರ ಮಟಕೆ

ಕಂಠಿರಾಯಿ ಸು. ೫-ವರಹಾ ಅಕ್ಷರದಲ್ಲು ಐದು ವರಹವಂನ್ನು ಸುಧ ಮೊದಲ್ಲು ಪ್ರಕಾರ ವರುಷಂಪ್ರತ್ತಿ ವರುಷಾದಲ್ಲೂ ನಾವು ನಿಮಗೆ ನಡಶಿಕೊಂಡು ಬರಲುಳವರು ಯಂದು ನಂಮ್ಮ ರ್‍ರಾಜಿಯಿಂದಾ ಬರಶಿಕೊಟ ಸಂನದ್ದು ಸಯಿ.''[5] – ಇದರ ಮುಖ್ಯಾಂಶ ಗಳನ್ನು ಸಂಗ್ರಹಿಸಿ ಹೀಗೆ ಹೇಳಬಹುದು. 'ಹಜರತ್ ನಬೀಶಾ ಸಾಹೇಬರು ಆಂಗೀರಸ ಸಂವತ್ಸರದ ವೈಶಾಖ ಬಹುಳ ೧೪ ರಂದು (ಕ್ರಿ.ಶ. ೧೮೧೨ರಲ್ಲಿ) ಬೆಂಗಳೂರಿನ ದೊಡ್ಡಪೇಟೆಯ ಶೆಟ್ಟಿ ಯಜಮಾನರುಗಳಾಗಿದ್ದ ಸಿದ್ದಪ್ಪ ಶೆಟ್ರು, ಮಹಂತಪ್ಪ ಶೆಟ್ರು, ಚೆನ್ನಸೋಮಣ್ಣಶೆಟ್ರು ಮುಂತಾದವರಿಗೆ ಬರೆಸಿಕೊಟ್ಟ ಸನ್ನದಿನ ಪ್ರಕಾರ-ಪೂರ್ವದಿಂದಲೂ ತಮ್ಮ ಇಲಾಖೆಗೆ ಒಳಪಟ್ಟಿದ್ದ ದೊಡ್ಡಪೇಟೆಯಲ್ಲಿ ಕುಳವರ್ತನೆ (ರೂಢಿ) ಯ ಪಾಲನ್ನು ಯಥಾ ಪ್ರಕಾರ ನಡೆಸಿಕೊಂಡು ಬರುತ್ತಿದ್ದ ಹಾಗೆ ಈಗಲೂ ದೊಡ್ಡಪೇಟೆಯ ಮಾದಣ್ಣನವರ ಚೆನ್ನಸೋಮಣ್ಣನವರು ಗುರುವಣ್ಣನವರ ಮಠಕ್ಕೆ ಕಂಠೀರಾಯಿ ಐದುವರಹದ ಹಣವನ್ನು ಪ್ರತಿವರ್ಷವೂ ಕೊಡುವುದಾಗಿ ಬರೆದುಕೊಟ್ಟ ಸನ್ನದು ಸಹಿ.'

ಇವೆರಡೂ ಮೂಲ ದಾಖಲೆಗಳನ್ನು ಆಧರಿಸಿ ಹೇಳುವುದಾದರೆ ಈ ಮಠದ ಮೂಲ ಹೆಸರು "ಗುರುವಣ್ಣನವರ ಮಠ"ವೆಂಬುದು ಖಚಿತವಾಗಿದೆ. ಇನ್ನು ಗುರುವಣ್ಣ ಎನ್ನುವವರು ಮಠದ ಮೂಲ ಗುರುಗಳೋ ಅಥವಾ ದಾನಿಗಳೋ ಎಂಬುದು ಜಿಜ್ಞಾಸೆ. ಮುಂದೆ ೧೮೨೪ರ ದಾಖಲೆಯೊಂದರಲ್ಲಿ ಗುರುವಣ್ಣನವರ ಮಠದ ಮುಂದಿನ ವಟುವಿನ ಆಯ್ಕೆ ಸಂಬಂಧವಾಗಿ 'ದೊಡ್ಡಪೇಟೆಯ ಮಾದಣ್ಣನವರ ಚನ್ನಸೋಮಣ್ಣನವರ ಸಾಕ್ಷಿ' ಎಂದಿದೆ.[6] ಆದ್ದರಿಂದ ಮೇಲ್ಕಂಡ ದೊಡ್ಡಪೇಟೆಯ ಮಾದಣ್ಣನವರ ಚೆನ್ನಸೋಮಣ್ಣನವರು ಮಠದ ದಾನಿಗಳು ಅಥವಾ ಕರ್ತೃಗಳಾಗಿದ್ದು, ಗುರುವಣ್ಣ ಎನ್ನುವವರೇ ಈ ಮಠದ ಮೊದಲ ಗುರುಗಳಾಗಿದ್ದಿರಬೇಕು. ಎರಡನೆಯ ದಾಖಲೆಯಲ್ಲಿ ಉಕ್ತವಾಗಿರುವಂತೆ 'ದೊಡ್ಡಪೇಟೆಯ... ಗುರುವಣ್ಣನವರ ಮಠಕ್ಕೆ' ಎಂಬ ನೇರ ನಿರ್ದೇಶನ ವಿರುವುದರಿಂದ ೧೯ನೆಯ ಶತಮಾನದ ಆದಿ ಭಾಗದಲ್ಲಿ ಈ ಮಠವು ಬೆಂಗಳೂರಿನ ದೊಡ್ಡಪೇಟೆಯಲ್ಲಿಯೇ ಇದ್ದುದು ಸ್ಪಷ್ಟವಾದ ವಿಚಾರವಾಗಿದೆ. ಈ ಉಭಯ ಪತ್ರಗಳಲ್ಲೂ ಇರುವ ಮತ್ತೊಂದು ಮುಖ್ಯವಾದ ಸಂಗತಿಯೆಂದರೆ, ಪೂರ್ವದಾರಭ್ಯ ಈ ಮಠಕ್ಕೆ ನಡೆದು ಬಂದಿದ್ದ ಭೂಮಿ ಹಾಗೂ ಧನಸಹಾಯದ ವಿವರಗಳಿರುವುದರಿಂದ ಬಹುಶಃ ಕ್ರಿ.ಶ. ೧೮೦೦ಕ್ಕೂ ಮೊದಲೇ ಈ ಮಠವಿತ್ತು ಎಂದು ಹೇಳಲು ಅವಕಾಶವಿದೆ.[7] ಮೊದಲನೆಯ ಪತ್ರದಲ್ಲಿ ಉಕ್ತವಾಗಿರುವ ಕಂದಾಯದಿಂದ ವಿನಾಯತಿ ಪಡೆದ ಭೂಮಿಯು ಬೆಂಗಳೂರಿನ ಯಾವ ಭಾಗದಲ್ಲಿತ್ತು ಎಂಬುದು ಸ್ಪಷ್ಟವಾಗಿಲ್ಲ. ಹಾಗೆಯೇ ಹಜರತ್ ನಬೀಶಾ ಯಾರು? ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಬಹುಶಃ ಟಿಪ್ಪುಸುಲ್ತಾನನ ಕಾಲದಲ್ಲಿ ಆತನ ಕೈಕೆಳಗಿನ ಅಧಿಕಾರಿಯಾಗಿದ್ದವನು ಅಥವಾ ಆತನ ತೀರಾ ಸಮೀಪದ ಬಂಧುವಿರಬೇಕು. ಒಟ್ಟಾರೆ ಮಹಮದೀಯರ ಆಳ್ವಿಕೆಯಲ್ಲೂ ವೀರಶೈವರ ಮಠ ಮಂದಿರಗಳಿಗೆ ಸೂಕ್ತ ಪ್ರೋತ್ಸಾಹ ದೊರೆಯುತ್ತಿತ್ತು ಎನ್ನುವುದಕ್ಕೆ ಇದೊಂದು ಉತ್ತಮ ದೃಷ್ಟಾಂತವಾಗಿದೆ.

ಗುರುವಣ್ಣನವರ ಮಠಕ್ಕೆ ಸಂಬಂಧಿಸಿದಂತೆ ನಮಗೆ ದೊರಕುವ ಮೂರನೆಯ ಮುಖ್ಯ ದಾಖಲೆ ಈ ಮಠದ ಎರಡನೆಯ ಗುರುಗಳಾಗಿದ್ದ ಮುದ್ದುವೀರಸ್ವಾಮಿಗಳ ಕಾಲದ್ದು. ಪತ್ರದ ಕಾಲ ತಾರಣ ಸಂವತ್ಸರದ (ಕ್ರಿ.ಶ. ೧೮೨೪ರ) ಭಾದ್ರಪದ ಬಹುಳ ೧೦. ಇದರ ಪ್ರಕಾರ ಮಾಗಡಿಯ ಚನ್ನವೀರಪ್ಪ ಎನ್ನುವವರು ತಮ್ಮ ಮಗ ವೀರಣ್ಣ ಎಂಬುವನನ್ನು ಗುರುವಣ್ಣನವರ ಮಠದ ಮುದ್ದುವೀರಸ್ವಾಮಿಗಳ ಚರಣ ಸನ್ನಿಧಿಗೆ ಮುಂದಿನ ವಟುವನ್ನಾಗಿ ಒಪ್ಪಿಸಿಕೊಟ್ಟ ನಿಬಂಧನೆಗಳಿವೆ.[8] ಈ ವಟುವೇ ಮಠದ ಮೂರನೆಯ ಗುರುಗಳಾಗಿದ್ದ ರುದ್ರಸ್ವಾಮಿಗಳು ಎಂಬುದಾಗಿ ಮುಂದಿನ ಮುಜರಾಯಿ ದಾಖಲೆಗಳು ದೃಢಪಡಿಸುತ್ತವೆ.[9] ಜೊತೆಗೆ ಈ ಪತ್ರದ ಅಗ್ರಪಂಕ್ತಿಯಲ್ಲಿ 'ಶ್ರೀ ಮುರುಗೇಂದ್ರ ಪ್ರಸನ್ನ' ಎಂಬ ಉಕ್ತಿಯು ಇರುವುದರಿಂದ, ಗುರುವಣ್ಣನವರ ಮಠವು 'ಮುರಿಗಾ ಸಮಯಭೇದ'ಕ್ಕೆ ಸೇರಿದ ಮಠವೆಂದು ಸುಲಭವಾಗಿ ಗ್ರಹಿಸಬಹುದಾಗಿದೆ.

ಮೇಲ್ಕಂಡ ಮಾಹಿತಿಗಳನ್ನು ಸಂಗ್ರಹಿಸಿ ಹೇಳುವುದಾದರೆ, ೧೮೦೦ರ ವೇಳೆಗಾಗಲೇ ಗುರುವಣ್ಣನವರ ಮಠವು ಬೆಂಗಳೂರಿನ ದೊಡ್ಡಪೇಟೆಯಲ್ಲಿತ್ತು. ಈ ಮಠದ ಮೂಲ ಕಾರಣಕರ್ತೃಗಳು ದೊಡ್ಡಪೇಟೆಯ ಮಾದಣ್ಣನವರ ಚನ್ನಸೋಮಣ್ಣನವರು. ಮುರಿಗಾ ಪರಂಪರೆಯ ಈ ಮಠದ ಮೂಲಗುರುಗಳೇ

ಗುರುವಣ್ಣದೇವರು. ಇವರು ೧೯ನೆಯ ಶತಮಾನದ ಆದಿಭಾಗದಲ್ಲಿ ಮುದ್ದುವೀರ (ದೇವರು) ಸ್ವಾಮಿಗಳಿಗೆ ತಮ್ಮ ಅಧಿಕಾರವನ್ನು ವಹಿಸಿಕೊಟ್ಟಿರಬೇಕು. ಮುಂದೆ ಮುದ್ದುವೀರಸ್ವಾಮಿಗಳು ೧೮೨೪ರಲ್ಲಿ ಮಾಗಡಿಯ ವೀರಣ್ಣ ಎಂಬ ವಟುವನ್ನು ಆಯ್ಕೆ ಮಾಡಿಕೊಂಡು, ಅವರಿಗೆ ಸೂಕ್ತ ಧಾರ್ಮಿಕ ಹಾಗೂ ಶೈಕ್ಷಣಿಕ ತರಬೇತಿಯನ್ನು ನೀಡಿ 'ರುದ್ರದೇವರು' ಎಂಬ ನೂತನ ಹೆಸರಿತ್ತು ೧೮೩೫ರ ವೇಳೆಗೆ ಅವರಿಗೆ ಮಠಾಧಿಪತ್ಯವನ್ನು ವಹಿಸಿಕೊಟ್ಟಿರುವಂತಿದೆ. ಇವಿಷ್ಟು ಸದರಿಮಠದ ಒಂದು ಮತ್ತು ಎರಡನೆಯ ಗುರುಗಳ ಕಾಲದ ವಿಚಾರಗಳಾಗಿವೆ.

ಗುರುವಣ್ಣನವರ ಮಠದ ಮೂರನೆಯ ಗುರುಗಳಾಗಿದ್ದ ರುದ್ರ(ದೇವರು) ಸ್ವಾಮಿಗಳ ಕಾಲದ ಕೆಲವು ದಾಖಲೆಗಳು ವಿಶೇಷವಾದ ಮಾಹಿತಿಯನ್ನು ಒದಗಿಸುತ್ತವೆ. ಗುರುವಣ್ಣನವರ ಮಠಕ್ಕೆ ಸೇರಿದ ಒಂದು ಶಾಖಾಮಠವು ನೆಲಮಂಗಲ ತಾಲ್ಲೂಕು ಸೊಂಡೆಕೊಪ್ಪ ಗ್ರಾಮದಲ್ಲಿತ್ತು.[10] ಈ ಮಠದ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಶಿವಾಚಾರದ ರಾಮಶೆಟ್ಟಿಯ ಮಗ ಪುಟ್ಟಯ್ಯನಿಂದ ದಿನಾಂಕ : ೨.೧೧.೧೮೪೩ರಂದು ಮಠದ ಜಿಂದಗಿ (ಆಸ್ತಿಪಾಸ್ತಿ) ಬಾಬ್ತು ೧೮೬ರೂಗಳ ಪರಿಹಾರವನ್ನು ರುದ್ರದೇವರಿಗೆ ಕೊಡಿಸಲಾಗಿದೆ.[11] ಇಲ್ಲೂ ಕೂಡ 'ಬೆಂಗಳೂರಿನ ಗುರುವಣ್ಣನವರ ಮಠದ ರುದ್ರದೇವರು' ಎಂಬ ಸ್ಪಷ್ಟ ನಿರ್ದೇಶನವಿದೆಯೇ ಹೊರತು, ಹನುಮಂತಪುರ (ಈಗಿನ ಮಠವಿರುವ ಭಾಗ)ದ ಪ್ರಸ್ತಾಪವೇ ಬರುವುದಿಲ್ಲ. ಇವರ ಕಾಲದ ಇನ್ನೊಂದು ಮುಖ್ಯವಾದ ಘಟನೆ ಎಂದರೆ ಶಾಲಿವಾಹನ ಶಕ ೧೭೭೦ (ಕ್ರಿ.ಶ. ೧೮೪೮)ರ ಕೀಲಕ ಸಂವತ್ಸರದ ಶ್ರಾವಣ ಶುದ್ಧ ೧೨ರಂದು ಬೆಂಗಳೂರಿನ ಮುರಿಗಾ ಪರಂಪರೆಯ ಮಠಾಧೀಶರೆಲ್ಲಾ ಸೇರಿ ಬೃಹನ್ಮಠ ಸಂಸ್ಥಾನಕ್ಕೆ ಒಂದು ದೂರು ಸಲ್ಲಿಸಿರುತ್ತಾರೆ.[12] ದೂರಿನ ಕಾರಣ ತಿಪ್ಪಶೆಟ್ಟಿಮಠದ ಗುರುಸಿದ್ಧ (ಇಮ್ಮಡಿ) ಗುರುಗಳು ತಮ್ಮ ಸೇವಕ ನಂಜುಂಡ ಮರಿಯನ್ನು ತುಂಬಾ ಒರಟಾಗಿ ನಡೆಸಿಕೊಂಡರೆಂದು ಆಪಾದಿಸಲಾಗಿತ್ತು. ಗುರುವಣ್ಣನವರ ಮಠದ ರುದ್ರದೇವರು ಈ ನಿಯೋಗದ ನೇತೃತ್ವ ವಹಿಸಿದ್ದರು.[13] ದಿನಾಂಕ : ೨೨.೧.೧೮೪೯ರಂದು ಬೆಂಗಳೂರು ತಾಲ್ಲೂಕು ಕೆಂಗೇರಿ ಹೋಬಳಿ ಗೋಣಿಪುರದ ಸದಾಶಿವಯ್ಯನವರ ಮಗ ನಂಜಪ್ಪ ಎಂಬುವರು ಗುರುವಣ್ಣನವರ ಮಠದ ರುದ್ರದೇವರ ಹೆಸರಿಗೆ ಒಂದು ಭೂದಾನ ಸಮರ್ಪಣಾ ಪತ್ರವನ್ನು ಅರ್ಪಿಸಿದ್ದರು.[14] ಅದರ ಪ್ರಕಾರ ಪ್ರತಿವರ್ಷದ ಮಾಘ ಮಾಸದ ಶುದ್ಧ ೫ ರಂದು ಅವರ ತಂದೆಯ ಹೆಸರಿನಲ್ಲಿ ಮಠದಲ್ಲಿ ಗಣಾರಾಧನೆ ನಡೆಸುವಂತೆ ಬಿನ್ನವಿಸಿಕೊಳ್ಳಲಾಗಿತ್ತು. ಇವಿಷ್ಟು ರುದ್ರದೇವರ ಕಾಲದ ವಿಚಾರಗಳಾಗಿವೆ.

ಗುರುವಣ್ಣನವರ ಮಠದ ಕರ್ತರಿಗೆ ಮೈಸೂರು ದೊರೆಗಳು ನೀಡಿದ್ದ ದೇವಾದಾಯದ ಇನಾಮ್ ಜಮೀನಿಗೆ ಕಂದಾಯದ (ಆರು ರೂಗಳು) ರಿಯಾಯ್ತಿ ಪತ್ರವನ್ನು ೧೮೭೭ರ ಜನವರಿ ೧ರಲ್ಲಿ ವಿತರಿಸಲಾಗಿದೆ. ಈ ದಾಖಲೆಯ ಪ್ರಕಾರ ನಂದಿದುರ್ಗ ವಿಭಾಗದ ಬೆಂಗಳೂರು ಜಿಲ್ಲೆ ಹಾಗೂ ಅದೇ ತಾಲ್ಲೂಕಿನ ಅಲಸೂರು ಹೋಬಳಿಗೆ ಸೇರಿದ ಹನುಮಂತಪುರ ಗ್ರಾಮದಲ್ಲಿ, ಸರ್ವೆ ನಂ: ೩ ಮತ್ತು ೭ರ ಬಾಬ್ತು ೧೧ ಕೊಳಗ ೧೩ ಪಡಿಯಷ್ಟು ಬೀಜವರಿಯ ಜಮೀನು (೮ ಎಕರೆ ೩೮ ಗುಂಟೆ) ಮೇಲ್ಕಂಡ ರಿಯಾಯ್ತಿಗೆ ಒಳಪಟ್ಟಿತ್ತು.[15] ಈ ವೇಳೆಗೆ ರುದ್ರದೇವರ ಶಿಷ್ಯರಾಗಿದ್ದ ಗುರುಮಹಾಂತದೇವರು ಮಠಾಧಿಪತ್ಯ ವಹಿಸಿಕೊಂಡಂತಿದೆ. ಇವರ ಕಾಲದ ಹೆಚ್ಚಿನ ಮಾಹಿತಿಗಳು ಲಭ್ಯವಾಗಿಲ್ಲವಾದರೂ ಅರಳೆಪೇಟೆಯ ರುದ್ರಗುಡಿಯ ಪಕ್ಕದ ಚೌಕಿಮಠವು ಗುರುವಣ್ಣನವರ ಮಠದ ಶಾಖೆಯಾಗಿದ್ದುದಾಗಿ ತಿಳಿದುಬರುತ್ತದೆ.[16] ೧೮೭೭ರ ವೇಳೆಗೆ ಈ ಮಠದ ಸ.ನಂ: ೩ರ ಪೈಕಿ ೨೭ ಗುಂಟೆ ಭೂಮಿ ರೈಲ್ವೆ ಇಲಾಖೆಗೆ ಸೇರಲ್ಪಟ್ಟಿತ್ತು.[17] ಆಗ ಇದರ ಪರಿಹಾರಾರ್ಥವಾಗಿ ಬಂದಿದ್ದ ೪೨ ರೂಗಳನ್ನು ತಿರಸ್ಕರಿಸಿದ್ದ ಗುರುಮಹಾಂತ ಸ್ವಾಮಿಗಳು ಮಠಕ್ಕೆ ಬದಲಿ ಭೂಮಿ ಕೊಡಿಸುವಂತೆ ವಿನಂತಿಸಿಕೊಂಡಿದ್ದರು. ಇದಕ್ಕೆ ಅನುಮೋದನೆ ನೀಡಿದ್ದ ಇಲಾಖೆಯವರು ಇವರಿಗೆ, ತಾವೇ ಸೂಕ್ತ ಜಮೀನನ್ನು ಆಯ್ಕೆ ಮಾಡಿ ತೋರಿಸುವಂತೆ ಸೂಚನೆಯನ್ನು ನೀಡಿದ್ದರು.[18]

ಗುರುವಣ್ಣನವರ ಮಠದ ನಾಲ್ಕನೆಯ ಗುರುಗಳಾಗಿದ್ದ ಗುರುಮಹಾಂತಸ್ವಾಮಿಗಳ ಕಾಲದ ಬಹಳ ಮುಖ್ಯವಾದ ಸಂಗತಿಯೆಂದರೆ, ಮಠವು ೧೮೭೭ರ ಸುಮಾರಿಗೆ ದೊಡ್ಡಪೇಟೆಯಿಂದ ಹನುಮಂತಪುರಕ್ಕೆ (ಮಠದ ಇನಾಂತಿ ಜಮೀನಿಗೆ) ವರ್ಗಾವಣೆಯಾಗಿತ್ತು. ಮಠದ ಐತಿಹಾಸಿಕ ದಾಖಲೆಗಳಲ್ಲಿ ಮೊಟ್ಟಮೊದಲಿಗೆ ಇವರನ್ನು "ಬೆಂಗಳೂರಿನ ಸೊಂಡೆಕೊಪ್ಪದ ಬಾಗಿಲಾಚೆ ಇರುವ

(ಹನುಮಂತಪುರ ಗ್ರಾಮದಾಖಲೆಯಲ್ಲಿರುವ) ಗುರುವಣ್ಣನವರ ಮಠದ ಗುರುಮಹಾಂತ ಒಡೆಯರು'' ಎಂದೇ ಸಂಬೋಧಿಸಲಾಗಿದೆ.[19] ಮುಂದೆ ಇವರ ಕರಕಮಲ ಸಂಜಾತರಾಗಿದ್ದ ನಂಜುಂಡಸ್ವಾಮಿಗಳು ೧೮೮೮ರ ವೇಳೆಗೆ ಐದನೆಯ ಮಠಾಧಿಪತಿಗಳಾಗಿ ಅಧಿಕಾರಕ್ಕೆ ಬಂದಿದ್ದರು.[20]

ಇಪ್ಪತ್ತನೆಯ ಶತಮಾನದ ಆರಂಭದ ದಿನಗಳಲ್ಲಿ ಪ್ರಖ್ಯಾತ ವೀರಶೈವತತ್ವ ಸಾಹಿತ್ಯ ವಿಶಾರದರೂ, ಪ್ರಸಿದ್ಧ ಮಠಾಧಿಪತಿಗಳೂ ಆಗಿದ್ದ ನಂಜುಂಡಸ್ವಾಮಿಗಳು 'ವೀರಶೈವ ಕೌಸ್ತುಭ', 'ಶಿವಸ್ತುತಿ ಮಣಿಮಾಲಾ', 'ಶಿವಾನುಭವಶಾಸ್ತ್ರ' 'ಶಿವಪೂಜಾವಿಧಿ' ಇವೇ ಮೊದಲಾದ ಕೃತಿಗಳನ್ನು ವಿಶೇಷವಾಗಿ ಪರಿಷ್ಕರಿಸಿಕೊಟ್ಟಿದ್ದಾರೆ.[21] ಇವರು ಅಧಿಕಾರಕ್ಕೆ ಬಂದ ಮೇಲೆ ಇದುವರೆಗೆ 'ಗುರುವಣ್ಣನವರ ಮಠ'ವೆಂದು ಕರೆಯಲ್ಪಡುತ್ತಿದ್ದ ತಮ್ಮ ಮಠಕ್ಕೆ 'ಗುರುವಣ್ಣದೇವರಮಠ'ವೆಂದೇ ಕರೆಯುವುದನ್ನು ವಿಶೇಷವಾಗಿ ರೂಢಿಗೆ ತಂದರು.[22] ಬೆಂಗಳೂರಿನ ವೀರಶೈವಮಠಗಳ ಇತಿಹಾಸದಲ್ಲಿಯೇ ಇವರ ಕಾಲದಲ್ಲಿ ಗುರುವಣ್ಣದೇವರ ಮಠಕ್ಕೆ ಒಂದು ವಿಶೇಷವಾದ ಸ್ಥಾನಮಾನ ಲಭ್ಯವಾಗಿತ್ತು.

ಮಠದ ಅಭಿವೃದ್ಧಿಯ ದೃಷ್ಟಿಯಿಂದ ನಂಜುಂಡಸ್ವಾಮಿಗಳು ೧೯೧೩ರಲ್ಲಿ ಬಿನ್ನಿಮಿಲ್ಲಿನ ಆಡಳಿತ ವರ್ಗದವರೊಂದಿಗೆ ಒಂದು ಕರಾರು ಮಾಡಿಕೊಂಡಿದ್ದರು. ಅದರ ಪ್ರಕಾರ ತಮ್ಮ ಮಠಕ್ಕೆ ಸೇರಿದ್ದ ರಿ.ಸರ್ವೆ ನಂ: ೧೧೮, ೪ ಎಕರೆ ೨೭ ಗುಂಟೆ ಭೂಮಿಯನ್ನು ಅವರಿಗೆ ಬಿಟ್ಟುಕೊಟ್ಟು ಮಾಹೆಯಾನ ಹತ್ತು ರೂಪಾಯಿಗಳ ಬಾಡಿಗೆಯಂತೆ ೯೯ ವರ್ಷಗಳ ಕರಾರು ಗೊತ್ತುಪಡಿಸಲಾಗಿತ್ತು.[23] ಪ್ರಮಾದವಶಾತ್ ಈ ಕರಾರಿನ ತಕರಾರು ಮುಂದಿನ ನಾಲ್ಕು ದಶಕಗಳ ಕಾಲ ದೊಡ್ಡ ವಿವಾದವಾಗಿ ಪರಿಣಮಿಸಿಬಿಟ್ಟಿತ್ತು.[24] ಈ ಒಪ್ಪಂದವು ಮುಜರಾಯಿ ಇಲಾಖಾ ನಿಯಮಗಳಿಗೆ ವಿರುದ್ಧವಾಗಿತ್ತು. ಯಾವುದೇ ದೇವಾದಾಯದ ಇನಾಂತಿ ಜಮೀನುಗಳನ್ನು ಐದು ವರ್ಷಗಳಿಗೂ ಮೀರಿದ ಕರಾರುಗಳಿಗೆ ಒಳಪಡಿಸಬೇಕಾಗಿದ್ದಲ್ಲಿ ಆಗ ಸರ್ಕಾರದ ಅನುಮತಿಯನ್ನು ಪಡೆಯುವುದು ಕಡ್ಡಾಯವಾಗಿತ್ತು. ಈ ಸಂಬಂಧವಾಗಿ ಜಾರಿಯಾದ ಇಲಾಖಾ ಆದೇಶಗಳಿಗೆ ಸರಿಯಾದ ಸಮಜಾಯಿಷಿ ನೀಡಲಿಲ್ಲವೆಂಬ ಕಾರಣ ಮುಂದೊಡ್ಡಿ, ಸರ್ಕಾರವು ಸದರಿ ಜಮೀನನ್ನು ಇನಾಂಪಟ್ಟಿಯಿಂದಲೇ ರದ್ದುಗೊಳಿಸುವ ತೀರ್ಮಾನ ಕೈಗೊಂಡಿತ್ತು.[25]

ಈ ಮಧ್ಯೆ ತೀವ್ರ ಅನಾರೋಗ್ಯದಿಂದ ಬಳಲುತ್ತಿದ್ದ ನಂಜುಂಡಸ್ವಾಮಿಗಳು ಅಂತಿಮ ದಿನಗಳಲ್ಲಿ ಮಾಗಡಿ ತಾಲ್ಲೂಕಿನ ಕಂಚುಗಲ್ಲು ಬಂಡೆಮಠದಲ್ಲಿದ್ದರು. ತಮ್ಮ ಮರಣಾವಸ್ಥೆಯಲ್ಲಿ ದಿನಾಂಕ:೧೮.೪.೧೯೨೦ ರಂದು ಸ್ಥಳೀಯ ಮುಖಂಡರ ಸಮಕ್ಷಮದಲ್ಲಿ ಒಂದು ಇಚ್ಛಾಪತ್ರವನ್ನು ಬರೆಸಿ ಅತ್ತ ಮೂರೇ ದಿನಗಳಲ್ಲಿ ಶಿವೈಕ್ಯರಾದರು.[26] ಇಚ್ಛಾಪತ್ರದ ಪ್ರಕಾರ ಈಗಾಗಲೇ ತಾವು ನಾಲ್ಕೈದು ವರ್ಷಗಳಿಂದ ಸಾಕಿಕೊಂಡು ವಿದ್ಯಾಭ್ಯಾಸ ಮಾಡಿಸುತ್ತಿದ್ದ ಮಹಾಂತದೇವರು ಎಂಬ ವಟುವನ್ನೇ ತಮ್ಮ ಮುಂದಿನ ಉತ್ತರಾಧಿಕಾರಿಯನ್ನಾಗಿ ಸೂಚಿಸಿದ್ದರು. ಕೇವಲ ೧೫ ವರ್ಷಗಳ ಈ ವಟುವಿನ ಪಾಲನೆ ಪೋಷಣೆ ಹಾಗೂ ತಮ್ಮ ಮಠದ ಸಂಪೂರ್ಣ ಜವಾಬ್ದಾರಿಯನ್ನು ಕೆಲವು ಕಾಲ ಬಂಡೆಮಠದ ಚರಮೂರ್ತಿ ತೋಂಟದ ಸ್ವಾಮಿಗಳವರೇ ನಿರ್ವಹಿಸುವಂತೆ ವಿನಂತಿಸಲಾಗಿತ್ತು.[27] ಆದರೆ ಈ ಸೂಚನೆಗಳನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲದ ಬೆಂಗಳೂರಿನ ಪೇಟೆಶೆಟ್ಟಿ ಯಜಮಾನರುಗಳು ಮೇಲ್ಕಂಡ ಮೈನರ್ ಮರಿ ಹಾಗೂ ಗಾರ್ಡಿಯನ್ನರ ವಿರುದ್ಧ ನ್ಯಾಯಾಲಯದಲ್ಲಿ ದಾವೆ ಹೂಡಿದ್ದರು. ಮುಂದೆ ದಿನಾಂಕ : ೧.೪.೧೯೨೫ರಂದು ನ್ಯಾಯಾಲಯವು ಮೇಲ್ಕಂಡ ಇಚ್ಛಾಪತ್ರಕ್ಕನುಗುಣವಾಗಿ ಮಹಾಂತ ಸ್ವಾಮಿಗಳೇ ಗುರುವಣ್ಣದೇವರ ಮಠದ ನಿಜವಾದ ಮಠಾಧಿಪತಿಗಳೆಂದು ಸಾರಿತು.[28]

ಗುರುವಣ್ಣದೇವರ ಮಠದ ಆರನೆಯ ಮಠಾಧಿಪತಿಗಳಾಗಿ ಅಧಿಕೃತವಾಗಿ ನ್ಯಾಯಾಲಯದ ತೀರ್ಪು ಹೊರಬಿದ್ದತಕ್ಷಣವೇ, ಮಹಾಂತಸ್ವಾಮಿಗಳು ಕೈಗೊಂಡ ಮೊಟ್ಟಮೊದಲ ಕಾರ್ಯ, ಕೈಬಿಟ್ಟು ಹೋಗಿದ್ದ ಮಠದ ಆಸ್ತಿ-ಪಾಸ್ತಿಗಳ ರಕ್ಷಣೆಗೆ ತೊಡಗಿದ್ದು. ಇವರ ಹೋರಾಟಕ್ಕೆ ಸ್ಪಂದಿಸಿದ ಸರ್ಕಾರ ದಿನಾಂಕ:೨೪.೭.೧೯೨೮ ರಲ್ಲಿ ಒಂದು ಆದೇಶವನ್ನು ಹೊರಡಿಸಿತು.ಅದರ ಪ್ರಕಾರ - "As the Inam Land referred to cannot be used for agricultural purposes according to the intention of the endowment, Government direct that it may be resumed and an equal extent of similar land given to the Mutt on the conditions

of the old grant. The new land to be given in exchange may, if possible be in the same taluk, if not in the same Hobali"[29] ಎಂಬುದಾಗಿ ತಿಳಿಸಲಾಗಿತ್ತು. ಈ ವಿವಾದ ಇಷ್ಟಕ್ಕೆ ಬಗೆಹರಿಯದೆ ವಾದದ ಮೇಲೆ ಪ್ರತಿವಾದ ಬೆಳೆಯತೊಡಗಿತು. ಅಂತಿಮವಾಗಿ ಸರ್ವೆ ನಂ : ೧೧ರ ಬಾಬ್ತು ದಿನಾಂಕ : ೭.೭.೧೯೫೦ರಂದು ಗುರುವಣ್ಣದೇವರ ಮಠಾಧಿಪತಿಗಳಿಗೆ ೨೦,೫೦೦/-ರೂಗಳ ಪರಿಹಾರಧನ ಕೊಡುವಂತೆ ತೀರ್ಮಾನವಾಯಿತು.[30] ಹೀಗೆ ಅಧಿಕಾರ ದುದ್ದಕ್ಕೂ ಈ ಭೂವಿವಾದಗಳಲ್ಲಿಯೇ ಕಾಲ ಸವೆಸ ಬೇಕಾದದ್ದು ಮಹಾಂತಸ್ವಾಮಿಗಳ ದುರ್ದೈವವಾಗಿತ್ತು. ಮಠದ ಆಸ್ತಿಗಳ ರಕ್ಷಣೆಯೇ ಒಂದು ದೊಡ್ಡ ಹೋರಾಟವಾಗಿ ಭಾರ ಹೃದಯಿಗಳಾಗಿದ್ದ ಇವರು ದಿನಾಂಕ : ೧೬.೨.೧೯೬೭ರಲ್ಲಿ ಈಗಿನ ಗುರುವಣ್ಣದೇವರ ಮಠದ ಏಳನೆಯ ಗುರುಗಳಾಗಿರುವ ಮಲ್ಲಿಕಾರ್ಜುನ ಸ್ವಾಮಿಗಳಿಗೆ ಮುಂದಿನ ಮಠಾಧಿಪತ್ಯವನ್ನು ವಹಿಸಿ ಕೊಟ್ಟರು.[31] ಧಾರ್ಮಿಕ ದತ್ತಿ ಇಲಾಖೆಯು ಮಹಾಂತ ಸ್ವಾಮಿಗಳ ಕೋರಿಕೆಯಂತೆ ದಿ : ೨೪.೧.೧೯೬೮ ರಿಂದ ಮಲ್ಲಿಕಾರ್ಜುನಸ್ವಾಮಿಗಳೇ ಮುಂದಿನ ಮಠಾಧಿಪತಿಗಳೆಂದು ಅನುಮೋದಿಸಿತು.[32] ಸದ್ಯಕ್ಕೆ ಅರಳೆಪೇಟೆಯ ವೀರಭದ್ರಸ್ವಾಮಿ ದೇಗುಲದ ಪಕ್ಕದ ಚೌಕಿಮಠವೂ ಇವರ ವಶದಲ್ಲಿಯೇ ಇದೆ. ಜೊತೆಗೆ ಮಠದ ಬಳಿ ಸರ್ವೆ ನಂ: ೮/೧ರಲ್ಲಿ ૩ ಎಕರೆ ೨೦ ಗುಂಟೆ ಹಾಗೂ ಸರ್ವೆ ನಂ : ೮/೨ರಲ್ಲಿ ೧೦ ಗುಂಟೆ ಆಸ್ತಿಗಳಿದ್ದು[33] ಬೆಂಗಳೂರಿನಲ್ಲೆ ಇದ್ದುದರಲ್ಲಿ ಸಮೃದ್ಧವಾದ ಮಠವಾಗಿದೆ.

**ಮಠದ ಗುರುಪರಂಪರೆ :**

೧. ಗುರುವಣ್ಣದೇವರು. ಸು. ೧೮೦೦.

೨. ಮುದ್ದುವೀರಸ್ವಾಮಿಗಳು. ಸು. ೧೮೦೦-೧೮೩೫.

೩. ರುದ್ರದೇವರು. ಸು. ೧೮೩೫-೧೮೭೦.

೪. ಗುರುಮಹಾಂತದೇವರು. ೧೮೭೦-೧೮೮೮.

೫. ನಂಜುಂಡಸ್ವಾಮಿಗಳು. ೧೮೮೮-೧೯೨೦.

೬. ಮಹಾಂತಸ್ವಾಮಿಗಳು. ೧೯೨೦ -೧೯೬೭.

೭. ಮಲ್ಲಿಕಾರ್ಜುನ ಸ್ವಾಮಿಗಳು. ೧೯೬೭ ರಿಂದ...

---

**ಅಡಿಟಿಪ್ಪಣಿಗಳು**

1. Register of Muzrai Institutions Endowed with Inam Lands in the Bangalore Taluk, Bangalore District. dt : 31.12.1902. P. 180-181.
2. ಸಂಸ್ಥಾನದ ಮುದ್ರೆಯಿರುವ ಕೋರಿ ಕಾಗದದ ಪ್ರತಿ. ಆಂಗಿರಸ ಸಂವತ್ಸರ ಚೈತ್ರ ಶುದ್ಧ ೧೦ (ಕ್ರಿ.ಶ.೧೮೧೨.)
3. ಈ ಪತ್ರದಲ್ಲಿರುವ ಮುದ್ರೆಯು ಮೈಸೂರು ಸಂಸ್ಥಾನದ್ದೆಂದು ಸ್ಪಷ್ಟವಾಗುತ್ತದೆ. ಈಗಾಗಲೇ ಸಿಕ್ಕಿರುವ ಇಂತಹುದೇ ಮುದ್ರೆಗಳುಳ್ಳ ಬೇಲಿಮಠ, ದೊಡ್ಡಮಠಗಳಿಗೆ ಸೇರಿದ ದಾಖಲೆಗಳು ಇದನ್ನು ಖಚಿತಪಡಿಸುತ್ತವೆ.
4. ಈ ಮಧ್ವರಾಯರು ೧೮೦೪ರ ವೇಳೆಗೆ ಬೆಂಗಳೂರಿನ ಸುಭೇದಾರರಾಗಿದ್ದುದಾಗಿ ನಿಜಗುಣ ಜಂಗಮುಮಠದ ದಾಖಲೆಗಳಲ್ಲಿ ವ್ಯಕ್ತವಾಗುತ್ತದೆ. (ಸಂಸ್ಥಾನದಿಂದ ಬಂದಿರುವ ಪತ್ರ. ರಕ್ತಾಕ್ಷಿ ಸಂವತ್ಸರ ಆಶ್ವೀಜ ಶುದ್ಧ ೫ (ಕ್ರಿ.ಶ. ೧೮೦೪)
5. ಹಜರತ್ತು ನಬೀಶಾ ಅವರು ದೊಡ್ಡಪೇಟೆಯ ಶೆಟ್ಟರಿಗೆ ಬರೆದುಕೊಟ್ಟ ದಾನಪತ್ರ : ಆಂಗಿರಸ ಸಂವತ್ಸರ ನಿಜ ವೈಶಾಖ ಬಹುಳ ೧೪. (ಕ್ರಿ.ಶ. ೧೮೧೨)
6. ಮಾಗಡಿ ಚನ್ನವೀರಪ್ಪನವರು ಗುರುವಣ್ಣನವರ ಮಠದ ಮುದ್ದುವೀರಪ್ಪನವರಿಗೆ ಬರೆದುಕೊಟ್ಟ ಒಪ್ಪಿತ ಪತ್ರ : ತಾರಣ ಸಂವತ್ಸರ ಭಾದ್ರಪದ ಬಹುಳ ೧೦ (ಕ್ರಿ.ಶ. ೧೮೨೪)
7. ಬೆಂಗಳೂರಿನ ಗುರುವಣ್ಣನವರ ಮಠಕ್ಕೆ ಕ್ರಿ.ಶ. ೧೮೦೮ರ ವೇಳೆಗಾಗಲೇ ಮೈಸೂರು ಸಂಸ್ಥಾನದಿಂದ ಭೂದಾನ ಸೌಲಭ್ಯವು ಸಿಕ್ಕಿದ್ದುದಾಗಿ ಮುಜರಾಯಿ ಇಲಾಖಾ ದಾಖಲೆಗಳಲ್ಲಿ ವ್ಯಕ್ತವಾಗುತ್ತದೆ. (Muzrai File No : 22/1947. Sl. No : 1-5. P-23)
8. ಮಾಗಡಿ ಚನ್ನವೀರಪ್ಪನ ಒಪ್ಪಿತ ಪತ್ರ : ತಾರಣ ಸಂವತ್ಸರ ಭಾದ್ರಪದ ಬಹುಳ ೧೦.
9. Muzrai File No : 98/1935. Sl. No : 1-8. P. 32.
10. ಸೂಂಡೆಕೊಪ್ಪದ ಲಿಂಗಪ್ಪನು ರುದ್ರದೇವರಿಗೆ ಬರೆದಿರುವ ಪತ್ರ : ಇದೇ ಪಾಲ್ಗುಣ ಶುದ್ಧ ೧ (?)
11. ನೆಲಮಂಗಲ ತಾಲ್ಲೂಕು ಅಮೀಲ್‌ಕೋರ್ಟ್. ಮಿಸ್‌ಕೇಸ್ ನಂ : ४೬/೧೮೪೩.
12. ಪಿ.ಎಂ. ಗಿರಿರಾಜು. ಚರಮೂರ್ತಿ ಶ್ರೀ ಗುರುಸಿದ್ಧಸ್ವಾಮಿಗಳ ಕೆಲವು ಐತಿಹಾಸಿಕ ಘಟನೆಗಳು. ಸರ್ಪಭೂಷಣ ಶ್ರೀ. ಸಂ : ಜಿ.ವಿ. ಶಿವಸ್ವಾಮಿ, ಎಚ್.ಎಸ್. ಸಿದ್ಧಗಂಗಪ್ಪ. ಪು. ೬೪.

13. ಗುರುವಣ್ಣನವರ ಮಠದ ರುದ್ರದೇವರ ಜೊತೆಗೆ ಮಾಮೂಲುಪೇಟೆಯ ಜಂಗಮಮಠದ ಚನ್ನವೀರದೇವರು, ಗೋದೂರಯ್ಯನ ಮಠದ ಚನ್ನವೀರದೇವರು, ನಿರಂಜನ ದೇವರಮಠದ ಗುರುಮಲ್ಲದೇವರು ಇವರೆಲ್ಲಾ ಆ ನಿಯೋಗದಲ್ಲಿದ್ದರು.
14. Muzrai File No : 98/1935. Sl.No : 1-8. P.29.
15. Inam Certificate. General No : 41199. Quit Rent R. No: 755. dt. 1.1.1876.
16. ಗುರುಮಹಾಂತಸ್ವಾಮಿಗಳಿಗೆ ಕಲ್ಲುಕುಟಿಗರ ವೆಂಕಟರಮಣಪ್ಪ ಬರೆಸಿಕೊಟ್ಟ ಚೌಕಿಯ ಬಾಡಿಗೆ ಕರಾರು ಪತ್ರ. ದಿ : ೧೮.೧೦.೧೮೭೫.
17. ಬೆಂಗಳೂರು ತಾಲ್ಲೂಕು ಕಛೇರಿ ಹುಕುಂ ನಂ : ೧೩೨. ದಿ : ೧೬.೧೧.೧೮೮೦.
18. ಬೆಂಗಳೂರು ತಾಲ್ಲೂಕು ಕಛೇರಿ ಹುಕುಂ ನಂ : ೩೩೫೨/೩೦. ದಿ : ೨೮.೬.೧೮೮೩.
19. ಮೇಲ್ಕಂಡ ಎರಡೂ ದಾಖಲೆಗಳಲ್ಲೂ ಇದೇರೀತಿಯ ಸಂಬೋಧನೆಗಳಿವೆ.
20. ದಿನಾಂಕ : ೧೪.೨.೧೮೮೯ರಲ್ಲಿ ಅರಳೆಪೇಟೆಯಲ್ಲಿನ ಚೌಕಿಯ ಬಾಡಿಗೆ ಕರಾರು ನಂಜುಂಡಸ್ವಾಮಿಗಳ ಹೆಸರಿಗೆ ಹುಟ್ಟಿದೆ.
21. ಚನ್ನಮಲ್ಲಿಕಾರ್ಜುನ. (ಸಂ.) ಸದ್ಧರ್ಮದೀಪಿಕೆ. ಸಂಚಿಕೆ-೧೦೧, ೧೦೨. ಪು. ೩೬.
22. ಇವರು ಸ್ವತಃ ಪ್ರಕಟಿಸಿದ್ದ ಕೃತಿಗಳ ಮುಖಪುಟದಲ್ಲಿ ಹಾಗೂ ಇವರ ಕಾಲದ ಕೆಲವು ವ್ಯವಹಾರ ಪತ್ರಗಳಲ್ಲಿ 'ಗುರುವಣ್ಣದೇವರ ಮಠ'ವೆಂದೇ ಉದ್ದೇಶಪೂರ್ವಕವಾಗಿ ಬಳಸಿದ್ದಾರೆ.
23. Muzrai File No : 273/1927. Sl.No : 1-6, P-6,7.
24. ಈ ಸಂಬಂಧವಾಗಿ ವಿವಿಧ ನ್ಯಾಯಾಲಯಗಳಲ್ಲಿ ನಡೆದ ವಿವಾದಗಳನ್ನು ಒಳಗೊಂಡು ಮಠದ ಪರವಾಗಿ ಒಟ್ಟು ಹದಿನಾರು ಮುಜರಾಯಿ ಫೈಲುಗಳಿವೆ. (ನೋಡಿ : Muzrai File No : 22/1947. Cover Page)
25. Muzrai File No : 273/1927. Sl. No : 1-6. P-8,9.
26. ಕಂಚುಗಲ್ಲು ಬಂಡೆಮಠದ ಗ್ರಾಮಸ್ಥರ ಹೇಳಿಕೆ ಪತ್ರ. ದಿನಾಂಕ:೩.೬.೧೯೨೧.
27. Misscelanious case No : 22/1921-22. date : 10.8.1921. P.1,2.
28. Muzrai File No : 283/1924. Sl.No : 1-3. P-8.
29. G.O. No : 183-6. Muzrai File No : 273/1927-6. dated 24th July 1928.
30. G.O. No : R. 3755-7-Muzrai File No : 22/1947-5. dated 24.6.1950.
31. ಉತ್ತರಾಧಿಕಾರ ಮಹೋತ್ಸವಾಹ್ವಾನ ಪತ್ರಿಕೆ. ದಿನಾಂಕ : ೧೦.೧.೧೯೬೭.
32. G.O. No : RD. 72. MET 67: Bangalore. dt : 24th January 1968.
33. Land Revenue Records of Guruvannadevara Mutt. Hanumanthapura Sammath. Binnyston Garden Bangalore North.

## ೪. ಗುರುವಣ್ಣದೇವರ ಮಠದ ಚೌಕಿಮಠ, ಅರಳೆಪೇಟೆ

ಸಂಸ್ಕೃತದ 'ಚತುಷ್ಕ' ಎಂಬ ಪದವನ್ನು ಮರಾಠಿಯಲ್ಲಿ 'ಚೌಕೀ' ಎನ್ನುತ್ತಾರೆ. ಇದೇ ಪದವನ್ನು ಕನ್ನಡದಲ್ಲಿ 'ಚೌಕಿ', 'ಚವಕಿ', 'ಚವುಕಿ' ಎಂದೂ ವಿಭಿನ್ನ ರೀತಿಯಲ್ಲಿ ಕರೆಯುವುದುಂಟು. 'ಚೌಕಿ' ಎಂದರೆ ನಾಲ್ಕುಕಂಬದ ಮಾಳಿಗೆ ಅಥವಾ ಮಂಟಪ; ತೊಟ್ಟಿಯಾಕಾರದ ಮನೆಯ ಒಳ ಅಂಗಳ; ಚಚ್ಚೌಕವಾದ ಮಂಟಪ ಇತ್ಯಾದಿ ಅರ್ಥಗಳುಂಟು.[1] ಹಿಂದೆ ಧರ್ಮಾಭಿಮಾನಿಗಳಾಗಿದ್ದ ಶ್ರೀಮಂತರು ಹಾಗೂ ಧನಿಕ ವರ್ತಕರು ತಮ್ಮ ಹಿರಿಯರು ಅಥವಾ ಕುಲಗುರುಗಳ ಹೆಸರಿನಲ್ಲಿ ಧರ್ಮಾರ್ಥವಾಗಿ ಇಂತಹ ಚೌಕಿಗಳನ್ನು ಕಟ್ಟಿಸಿಕೊಡುತ್ತಿದ್ದುದು ರೂಢಿಯಲ್ಲಿತ್ತು. ಬೆಂಗಳೂರಿನಲ್ಲಿ ಮಾಮೂಲುಪೇಟೆಯ 'ರುದ್ರಾರಾಧ್ಯರ ಚೌಕಿ'[2] ಹಾಗೂ ಅರಳೆಪೇಟೆಯ 'ನಂಬೆಣ್ಣನ ಚೌಕಿ'[3] ಮಠಗಳು ಇದಕ್ಕೆ ಉತ್ತಮ ದೃಷ್ಟಾಂತಗಳಾಗಿವೆ. ಇಂತಹ ಚೌಕಿಯ ಆವರಣದಲ್ಲಿ ಸಾಮಾನ್ಯವಾಗಿ ಬಾವಿ (ಕೆಲವೆಡೆ ಚೌಕಾಕೃತಿಯ ಕಲ್ಯಾಣಿಗಳೂ ಇರುತ್ತಿದ್ದವು), ಸ್ನಾನಗೃಹ, ಪೂಜಾಗೃಹ, ಅಲಂಕರಣಗೃಹ ಹಾಗೂ ವಿಶ್ರಾಂತಿಗೃಹಗಳ ಜೊತೆಗೆ ಒಂದು ಕೈತೋಟ ಕೂಡ ಇರುತ್ತಿದ್ದವು. ಸ್ಥಳ ಪರಸ್ಥಳದಿಂದ ಬರುತ್ತಿದ್ದ ದೇಶಿಕರು, ಯತಿಗಳೂ, ಜಂಗಮರೂ ಹಾಗೂ ಭಕ್ತರೂ ಕೂಡ ಇಲ್ಲಿ ತಾತ್ಕಾಲಿಕವಾಗಿ ತಂಗಿದ್ದು ಹೋಗುತ್ತಿದ್ದರು. ಇಲ್ಲಿ ಸ್ನಾನ ಪೂಜಾದಿಗಳಿಗೆ ಸೂಕ್ತ ಸೌಲಭ್ಯ ಕಲ್ಪಿಸಿರುವುದು ಕಡ್ಡಾಯವಾಗಿತ್ತು. ಕೆಲವು ವೇಳೆ ಊಟೋಪಚಾರಗಳಿಗೂ ಅನುಕೂಲಗಳಿರುತ್ತಿದ್ದವು. ಇಂತಹ ಚೌಕಿಗಳ ಮೇಲ್ವಿಚಾರಣೆಗಾಗಿ ಒಬ್ಬ ಅಯ್ಯನನ್ನೋ ಅಥವಾ ಭಕ್ತನನ್ನೋ ನೇಮಿಸಿರಲಾಗುತ್ತಿತ್ತು. ಚೌಕಿಯ ಅಗತ್ಯಗಳಿಗನುಗುಣವಾಗಿ ಸೂಕ್ತ ದಾನಧರ್ಮಗಳನ್ನು ಹಿಂದೆ ಕೊಡುವ ಪರಿಪಾಠಗಳಿದ್ದವು.

ಕಳೆದ ಶತಮಾನದಲ್ಲಿ ಬೆಂಗಳೂರು ಪಟ್ಟಣದಲ್ಲಿ ಇಂತಹ ಅನೇಕ ಚೌಕಿಮಠಗಳಿದ್ದುದು ಕಂಡುಬರುತ್ತದೆ. ಅಂತಹುದೇ ಒಂದು ಗುರುವಣ್ಣದೇವರ ಮಠದ ಚೌಕಿಮಠ. ಈಗಲೂ ಉಳಿದಿರುವ ಈ ಚೌಕಿಮಠವು ಅರಳೆಪೇಟೆಯ ಹಳೆಯ ತಾಲ್ಲೂಕು ಕಛೇರಿ ರಸ್ತೆಯಲ್ಲಿರುವ ವೀರಭದ್ರಸ್ವಾಮಿ ದೇವಾಲಯದ ಬಲಪಕ್ಕದಲ್ಲಿದೆ. ೧೮೯೪ರ ದಾಖಲೆಯೊಂದರ ಪ್ರಕಾರ "ಮುನಿಸಿಪಲ್ ಡೋರ್ ನಂ : ೩೮೦. ಗುರುವಣ್ಣ ದೇವರಮಠದ ಚೌಕಿ ಮಠಕ್ಕೆ ಚಕ್ಕುಬಂದಿ ಪೂರ್ವಕ್ಕೆ ಹೊಸಮಠ, ಪಶ್ಚಿಮಕ್ಕೆ ರುದ್ರದೇವರ ಗುಡಿ, ಉತ್ತರಕ್ಕೆ ಸರ್ಕಾರಿ ರಸ್ತೆ, ದಕ್ಷಿಣಕ್ಕೆ ಸುಬ್ಬರಾಯಪ್ಪನವರ ಖಾಲಿ ಜಮೀನು, ಈ ಮಧ್ಯೆ ಕಲ್ಲುಕಟ್ಟಿದ ಮಾಳಿಗೆ ಅಂಕಣ ೧೩, ಅಂಗಳಾ, ಹಿತ್ತಲು, ಬಾವಿ ಸಹಾ ಉಳ್ಳ ಚೌಕಿಮಠ[4] ಎಂದೇ ಗುರುತಿಸಲಾಗಿದೆ. ೧೮೭೫ರ ವೇಳೆಗೆ ಗುರುವಣ್ಣದೇವರ ಮಠದ ನಾಲ್ಕನೆಯ ಮಠಾಧಿಪತಿ ಗಳಾಗಿದ್ದ ಗುರುಮಹಾಂತ (ಒಡೆಯರು) ದೇವರು ಮೇಲ್ಕಂಡ ಚೌಕಿಮಠದ ವಾರಸುದಾರರಾಗಿದ್ದುದಕ್ಕೆ ಆಧಾರಗಳಿವೆ.[5] ಹೀಗಾಗಿ ಸದರಿ ಚೌಕಿಮಠವೂ ಮುರಿಗಾಸಮಯಭೇದಕ್ಕೆ ಸೇರಿದ್ದು, ಈಗಲೂ ಕೂಡ ಗುರುವಣ್ಣದೇವರ ಮಠದ ಶಾಖಾಮಠವಾಗಿಯೇ ಉಳಿದಿದೆ. ಇದಕ್ಕೆ ಪ್ರತ್ಯೇಕವಾದ ಮಠಾಧಿಪತಿಗಳಿದ್ದ ವಿಚಾರ ತಿಳಿದುಬರುವುದಿಲ್ಲ. ಜೊತೆಗೆ ಇದು ಯಾವಾಗ ಯಾರಿಂದ ಪ್ರಾರಂಭವಾಯಿತೆನ್ನುವುದೂ ಪ್ರಶ್ನೆಯಾಗಿಯೇ ಉಳಿದಿದೆ.

---

### ಅಡಿಟಿಪ್ಪಣಿಗಳು

1. ಕನ್ನಡ ನಿಘಂಟು. ಸಂ-೩. ಕನ್ನಡ ಸಾಹಿತ್ಯ ಪರಿಷತ್ತು. ಪು. ೨೮೯.
2. ಮೈಸೂರು ಮಹಾರಾಜರ ಸರ್ಕಾರಿ ಹುಕುಂ. ಮುಜರಾಯಿ ನಂ : ೯೦೭. ದಿ : ೨೮.೮. ೧೯೦೮.
3. ಬೇಲಿಮಠದ ಸಿದ್ಧಲಿಂಗಸ್ವಾಮಿಗಳ ಕಾಲದ ಕರಾರುಪತ್ರ. ದಿ : ೧೯.೪.೧೮೮೭.
4. ಗುರುವಣ್ಣದೇವರ ಮಠದ ನಂಜುಂಡಸ್ವಾಮಿಗಳಿಗೆ ಅರಳೆಪೇಟೆಯ ಪಶಿಗೆ ಮಾದಪ್ಪನ ಮಗ ದೊಡ್ಡರುದ್ರಪ್ಪನು ಬರೆದುಕೊಟ್ಟ ಬಾಡಿಗೆ ಕರಾರು ಪತ್ರ. ರಿ.ನಂ : ೨೦೫೦. ಸಂ : ೧೯೭. ಪು. ೩೩೦-೩೩೧. ದಿ : ೧೫.೨.೧೮೯೪.
5. ಅರಳೆಪೇಟೆಯ ಕಲ್ಲುಕುಟಿಗರ ರಂಗಪ್ಪನ ಮಗ ವೆಂಕಟರಮಣಪ್ಪನು ಬರೆದುಕೊಟ್ಟ ಕರಾರುಪತ್ರ. ದಿ: ೧೮.೧೦.೧೮೭೫.

## ೫. ಕಲ್ಲುಮಠ, ಬಳೆಪೇಟೆ

ಪ್ರಾಚೀನ ಬೆಂಗಳೂರಿನ ಇತಿಹಾಸ ಪ್ರಸಿದ್ಧವಾಗಿದ್ದ ಧರ್ಮಾಂಬುಧಿಕೆರೆ (ದೊಡ್ಡಕೆರೆ)ಯ ಸುತ್ತಮುತ್ತ ಅನೇಕ ವೀರಶೈವ ಮಠಗಳಿದ್ದವು. ಹಿಂದೆ ಕೆರೆಗೆ ಆಗ್ನೇಯ ದಿಕ್ಕಿನ ಏರಿಯ ಮೆಟ್ಟಿಲುಗಳನ್ನು ಇಳಿದು ಮುನ್ನಡೆದರೆ ಮುಂದೆ ಕಾಣುತ್ತಿದ್ದುದೇ ಕಲ್ಲುಮಠ. ಹೆಸರಿಗೆ ತಕ್ಕಂತೆ ಸಂಪೂರ್ಣವಾಗಿ ಕಲ್ಲಿನಿಂದಲೇ ನಿರ್ಮಾಣವಾಗಿರುವ ಈ ಮಠದಲ್ಲಿ ಹಳೆಯ ಕಾಲದ ಕಲ್ಲಿನ ಗೋಡೆ, ಗೋಡೆಯ ಮೇಲಿನ ಹರಿಯುವ ಹಾವಿನ ಚಿತ್ರ, ಲಿಂಗಮುದ್ರಿಕೆ ಮುಂತಾದ ಭಿತ್ತಿ ವಿನ್ಯಾಸಗಳನ್ನು ಗಮನಿಸಿದರೆ, ಪ್ರಾಯಶಃ ಧರ್ಮಾಂಬುಧಿಕೆರೆಯಷ್ಟೇ ಪ್ರಾಚೀನವೆನಿಸುವ ಈ ಮಠವೂ ಕೂಡ, ನಗರ ನಿರ್ಮಾತೃ ಹಿರಿಯ ಕೆಂಪೇಗೌಡನ ಕಾಲದಲ್ಲೇ ನಿರ್ಮಾಣವಾಗಿರಬೇಕೆನಿಸುತ್ತದೆ.[1]

ಈಗಿನ ಬಳೆಪೇಟೆಯಲ್ಲಿರುವ ಪೂರ್ಣಯ್ಯನವರ ಛತ್ರದ ಕಟ್ಟಡವು ಇಂದು ಸರ್ಕಾರಿ ಪ್ರಾಥಮಿಕ ಶಾಲೆಯಾಗಿ ಪರಿವರ್ತನೆಯಾಗಿದ್ದರೂ ಕೂಡ, ತನ್ನ ಮೂಲ ಉದ್ದೇಶವಾದ ಸಮಾಜ ಸೇವೆಯಿಂದ ವಿಮುಖವಾಗಿಲ್ಲ. ದಿವಾನ್ ಪೂರ್ಣಯ್ಯನವರು ತಮ್ಮ ಆಡಳಿತಾವಧಿ (ಕ್ರಿ.ಶ. ೧೮೦೬)ಯಲ್ಲಿ ಸರ್ವ ಜನೋಪಕಾರಾರ್ಥವಾಗಿ ಈ ಛತ್ರವನ್ನು ನಿರ್ಮಾಣ ಮಾಡಿಸಿದ್ದರು.[2] ಆ ಸಂದರ್ಭದಲ್ಲಿ ಈ ಕಲ್ಲುಮಠದ ಗುರುಗಳಾಗಿದ್ದವರೇ ಗೊಟ್ಟೂರಯ್ಯನವರು.[3] ಸ್ಥಳೀಯ ಜನರ ನಂಬುಗೆಯ ಪ್ರಕಾರ ಕಲ್ಲುಮಠದ ಆಗಿನ ಗುರುಗಳೇ ಪೂರ್ಣಯ್ಯನವರಿಗೆ ತಮ್ಮ ಮಠದ ಮುಂಭಾಗದಲ್ಲಿ ಛತ್ರ ನಿರ್ಮಿಸಿಕೊಳ್ಳಲು ನೆರವಾಗಿದ್ದರು.[4] ತತ್ಸಂಬಂಧವಾಗಿ ದಿವಾನ್ ಪೂರ್ಣಯ್ಯನವರು ಮುಮ್ಮಡಿ ಕೃಷ್ಣರಾಜ ಒಡೆಯರಲ್ಲಿ ಪ್ರಭಾವ ಬೀರಿ ಕಲ್ಲುಮಠದ ಗೊಟ್ಟೂರಯ್ಯನವರಿಗೆ ಕ್ರಿ.ಶ. ೧೮೦೮ರಲ್ಲಿ ಹನುಮಂತಪುರ ಗ್ರಾಮದಲ್ಲಿ ಇನಾಂ ಜಮೀನನ್ನು ದೊರಕಿಸಿಕೊಡುವಲ್ಲಿ ನೆರವಾಗಿದ್ದುದಕ್ಕೆ ಮುಜರಾಯಿ ಇಲಾಖಾ ದಾಖಲೆಗಳೇ ಸಾಕ್ಷಿಯಾಗಿವೆ.[5]

ಕಲ್ಲುಮಠದ ಹಿಂಭಾಗದ ಹಾಗೂ ಬಲಪಕ್ಕದ ಗಲ್ಲಿಗಳನ್ನು ಈಗಲೂ 'ಜಂಗಮ ಮೇಸ್ತ್ರಿ ಗಲ್ಲಿ' ಎಂದೇ ಕರೆಯಲಾಗುತ್ತದೆ. ಗಲ್ಲಿಯ ಹೆಸರಿಗೂ ಮಠದ ಹೆಸರಿಗೂ ಏನೋ ಸಂಬಂಧವಿರಬೇಕೆಂದು ಕುತೂಹಲದಿಂದ ವಿಚಾರಿಸಲು ತೊಡಗಿದಾಗ, ಈ ಶತಮಾನದ ಆರಂಭದ ದಿನಗಳವರೆಗೂ ಸದರಿ ಕಲ್ಲುಮಠವು ಒಂದು 'ಕೂಲಿ ಮಠ'ವೂ ಆಗಿದ್ದ ವಿಚಾರ ಬೆಳಕಿಗೆ ಬಂದಿತು. ೧೯೨೦ರ ವರೆಗೂ ಈ ಕೂಲಿ ಮಠದಲ್ಲಿದ್ದ ಜಂಗಮರು ಉಚಿತ ವಿದ್ಯಾದಾನ ಮಾಡುತ್ತಿದ್ದುದಾಗಿ ತಿಳಿದು ಬರುತ್ತದೆ.[6] ಆದ ಕಾರಣ ಕಲ್ಲು (ಕೂಲಿ) ಮಠದ ಪಕ್ಕದ ಗಲ್ಲಿಗಳಿಗೆ ಜಂಗಮ ಮೇಸ್ತ್ರಿಗಲ್ಲಿ[7] ಎಂಬ ಹೆಸರು ಬಂದಿರುವುದು ಅನ್ವರ್ಥವಾಗಿಯೇ ಇದೆ.

ಅವಸಾನದ ಅಂಚಿನಲ್ಲಿರುವ ಇಂದಿನ ಬಳೆಪೇಟೆಯ ಕಲ್ಲುಮಠವು ಗಾಂಧಿನಗರದ ಗೊಟ್ಟೂರಯ್ಯ (ಗೋದೂರಯ್ಯ) ನವರ ಮಠದ ಮೂಲ ಮಠವೂ ಆಗಿತ್ತು. ಕ್ರಿ.ಶ. ೧೮೦೦ ಸುಮಾರಿನಿಂದ ೧೯೨೫ರ ವರೆಗೂ ಉಭಯಮಠಗಳು ಒಂದೇ ಆಡಳಿತಕ್ಕೆ ಒಳಪಟ್ಟಿದ್ದವು.[8] ೧೮೯೦ರಿಂದ ೧೯೩೫ರ ವರೆಗೂ ಇವೆರಡೂ ಮಠಗಳ ವಹಿವಾಟುದಾರರಾಗಿದ್ದ ಸಿದ್ಧಯ್ಯನವರು, ತಮ್ಮ ಏಕೈಕ ಪುತ್ರಿಯಾಗಿದ್ದ ನೀಲಮ್ಮ (ಶಿಕ್ಷಕಿ) ನವರಿಗೆ ಕಲ್ಲುಮಠದ ಜವಾಬ್ದಾರಿಯನ್ನೂ; ತಮ್ಮ ಸಾಕುಮಗನಾಗಿದ್ದ ವೀರಭದ್ರಯ್ಯನವರಿಗೆ ಗೊಟ್ಟೂರಯ್ಯನವರ ಮಠದ ಜವಾಬ್ದಾರಿಯನ್ನೂ ವಿಲ್ ಮೂಲಕ ವಹಿಸಿಕೊಟ್ಟಿದ್ದರು.[9] ಈಗ ಸದರಿ ಕಲ್ಲುಮಠದಲ್ಲಿ ಮೇಲ್ಕಂಡ ನೀಲಮ್ಮನವರ ಮಗ ನ್ಯಾಯವಾದಿ ಚಂದ್ರಶೇಖರ್ ಅವರು ವಾಸವಾಗಿದ್ದಾರೆ.

೧೯೧೦ರ ಕೆಲವು ನ್ಯಾಯಾಲಯದ ದಾಖಲೆಗಳ ಪ್ರಕಾರ ಕಲ್ಲುಮಠದ ವಿಸ್ತೀರ್ಣ ಪೂರ್ವ-ಪಶ್ಚಿಮ ಇಪ್ಪತ್ತೆಂಟೂವರೆ ಗಜಗಳು, ಉತ್ತರ-ದಕ್ಷಿಣ ಇಪ್ಪತ್ತೇಳೂವರೆ ಗಜಗಳಷ್ಟಿತ್ತು. ಜೊತೆಗೆ ಈ ಮಠದ ಹೆಸರಿಗೆ ಮಾಗಡಿ ತಾಲ್ಲೂಕು, ತಾವರೆಕೆರೆ ಹೋಬಳಿ, ಪುನುಗುಮಾರನಹಳ್ಳಿ ಬಳಿ ಸರ್ವೆ ನಂ : ೧೬ರಲ್ಲಿ ೯ ಎಕರೆ ೧೬ ಗುಂಟೆ; ಹಾಗೂ ಸರ್ವೆ ನಂ : ೩೧ರಲ್ಲಿ ೭ ಎಕರೆ ೩೦ ಗುಂಟೆ ಜಮೀನುಗಳಿದ್ದುದಾಗಿಯೂ ತಿಳಿದು ಬರುತ್ತದೆ.[10] ಸದ್ಯಕ್ಕೆ ಬೆಂಗಳೂರಿನಲ್ಲೇ ಬಹು ಪ್ರಾಚೀನವಾದುದನ್ನಬಹುದಾಗಿದ್ದ ಕಲ್ಲುಮಠವು ಇಂದು

ಸಂಪೂರ್ಣ ಖಾಸಗಿ ಸ್ವತ್ತಾಗಿ ಪರಿವರ್ತನೆಯಾಗಿಬಿಟ್ಟಿದೆ. ಆದರೂ ತನ್ನ ಮೂಲ ಮಠದ ಸ್ವರೂಪದಲ್ಲಿ ಕೊಂಚ ಭಾಗವನ್ನು ಇಂದಿಗೂ ಹಾಗೆಯೇ ಉಳಿಸಿಕೊಂಡು ಬಂದಿರುವುದನ್ನು ನೋಡಬಹುದಾಗಿದೆ.

---

## ಅಡಿಟಿಪ್ಪಣಿಗಳು

1. ಈಗಲೂ ಅಳಿದುಳಿದಿರುವ ಕಲ್ಲು(ಮನೆ) ಮಠದೊಳಗೆ ಪ್ರವೇಶಿಸಬಯಸಿದಾಗ, ಅಲ್ಲಿನವರು ಅವಕಾಶ ನೀಡಲಿಲ್ಲ. ಇನ್ನು ಮಠವನ್ನು ಕುರಿತ ವಿಚಾರಗಳನ್ನು ಮುಕ್ತವಾಗಿ ಚರ್ಚಿಸುವಷ್ಟು ವ್ಯವದಾನ ಅವರಲ್ಲಿರಲಿಲ್ಲ. ಇದು ಇಂದು ಸಂಪೂರ್ಣ ಖಾಸಗಿ ಸ್ವತ್ತಾಗಿದೆ.
2. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೭೭.
3. Muzrai File No. : 21/1906. Sl. No : 1-4. P-7.
4. ಹೇಳಿಕೆ : ವೈ.ಸಿ. ಬಸಪ್ಪ (೮೨) ಗಾಂಧಿನಗರ, ಬೆಂಗಳೂರು.
5. Muzrai File No : 21/1906. Sl.No : 1-4. P-7.
6. ಹೇಳಿಕೆ : ನಂಜೆಮರಿಯಪ್ಪ (೮೦) ನರಗುಂದದೇವರ ಮಠ, ಬೆಂಗಳೂರು. (ಬಾಲ್ಯದಲ್ಲಿ ಇವರೂಕೂಡ ಸದರಿ ಕೂಲಿಮಠದ ವಿದ್ಯಾರ್ಥಿಯಾಗಿದ್ದರಂತೆ)
7. ಮಾಸ್ಟರ್ (Master) > ಮೇಸ್ಟು > ಮೇಸ್ತ್ರಿ.
8. ಗೊಟ್ಟೂರಯ್ಯನವರ ಮಠದ ೧೯೦೬ ರಿಂದ ೧೯೫೭ರ ವರೆಗಿನ ಮುಜರಾಯಿ ದಾಖಲೆಗಳಲ್ಲಿ ಇದು ವ್ಯಕ್ತವಾಗುತ್ತದೆ.
9. ಹೇಳಿಕೆ : ಮಲ್ಲಿಕಾರ್ಜುನಸ್ವಾಮಿಗಳು (೫೨) ಗುರುವಣ್ಣದೇವರಮಠದ ಅಧ್ಯಕ್ಷರು. ಬೆಂಗಳೂರು.
10. Judgement Order No : 28-55/1911-12. dt : 15.12.1911. Revenue Commissioner Court. Bangalore.

## ೬. ಗೊಟ್ಟೂರಯ್ಯನವರಮಠ, ಹನುಮಂತಪುರ ( ಗೋದೂರಯ್ಯನಮಠ - ಗಾಂಧಿನಗರ )

ಹಿಂದೆ ಬೆಂಗಳೂರು ಪಟ್ಟಣದ ಸುತ್ತಾ ಇತಿಹಾಸ ಪ್ರಸಿದ್ಧವಾಗಿದ್ದ ಕೆಂಪೇಗೌಡನ ಕೋಟೆಯ ಉತ್ತರ ದಿಗ್ಭಾಗಕ್ಕೆ ಎರಡು ಹೆಬ್ಬಾಗಿಲುಗಳಿದ್ದವು. ಅವುಗಳೇ ಯಲಹಂಕದ ಬಾಗಿಲು ಮತ್ತು ಯಶವಂತಪುರದ ಬಾಗಿಲುಗಳು. ಯಶವಂತಪುರದ ಬಾಗಿಲನ್ನು ಬಳೆಯಬಾಗಿಲು ಅಥವಾ ನೆಲಮಂಗಲದ ಬಾಗಿಲು ಎಂದೂ ಕರೆಯುವುದು ರೂಢಿಯಲ್ಲಿತ್ತು.[1] ಈ ಬಾಗಿಲಿಗೆ ಅಭಿಮುಖವಾಗಿ ಹಾಗೂ ಧರ್ಮಾಂಬುಧಿ ಕೆರೆಗೆ ಪೂರ್ವದ ದಂಡೆಗೆ, ಬೆಂಗಳೂರು ಪಟ್ಟಣದಿಂದ ಪ್ರತ್ಯೇಕವಾದ ಒಂದು ಪುಟ್ಟಗ್ರಾಮವಿತ್ತು. ಈ ಪುಟ್ಟಗ್ರಾಮವೇ ಹನುಮಂತಪುರ ಗ್ರಾಮ. ಅದೇ ಭಾಗವೇ ಈಗಿನ ಬೆಂಗಳೂರು ಮಹಾನಗರದ ಹೃದಯ ಭಾಗದಂತಿರುವ ಗಾಂಧಿನಗರ.

ಬಳೆಯ ಬಾಗಿಲಿನಿಂದ ಯಶವಂತಪುರ ಮಾರ್ಗವಾಗಿ ಕೊಂಚ ಮುನ್ನಡೆದರೆ ಮಾರ್ಗದ ಎಡಬದಿಗೆ ಮೊದಲು ಸಿಗುತ್ತಿದ್ದುದೇ ಸಪ್ಪಣ್ಣಸ್ವಾಮಿ ಮಠ. ಅಲ್ಲಿಂದ ಕೊಂಚ ದೂರದಲ್ಲೆ ಎಡಬದಿಗೆ ನಿರಂಜನದೇವರ ಮಠವೂ, ಬಲಬದಿಗೆ ಗೊಟ್ಟೂರಯ್ಯ (ಈಗಿನ ಗೋದೂರಯ್ಯ) ನವರ ಮಠಗಳೂ ಇದ್ದವು. ಕ್ರಿ.ಶ. ೧೮೦೮ರ ಹುಜೂರ್ ಜಾರಿ ಲೆಕ್ಕದ ಪ್ರಕಾರ ಈಗಿನ ಗೋದೂರಯ್ಯನ ಮಠವನ್ನು ''ಗೊಟ್ಟೂರಯ್ಯನವರಮಠ''ವೆಂದು ಸ್ಪಷ್ಟವಾಗಿ ಗುರುತಿಸಲಾಗಿದೆ.[2]

ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಈಗಿನ ಬಳೆಪೇಟೆಯ ಪೂರ್ಣಯ್ಯನವರ ಛತ್ರದ ಹಿಂಭಾಗದಲ್ಲಿದ್ದ ಕಲ್ಲುಮಠವೇ ಗೊಟ್ಟೂರಯ್ಯನವರ ಮೂಲ ಮಠವಾಗಿತ್ತು.[3] ದಿವಾನ್ ಪೂರ್ಣಯ್ಯನವರು ೧೮೦೬ರಲ್ಲಿ ಧರ್ಮಾಂಬುಧಿ ಕೆರೆಯ ಹಿಂಬದಿಗೆ ತಮ್ಮ ಸ್ಮರಣಾರ್ಥವಾಗಿ ಸರ್ವ ಜನೋಪಯೋಗಕ್ಕೆ ಯುಕ್ತವಾದ ಒಂದು ಧರ್ಮಛತ್ರವನ್ನು ನಿರ್ಮಿಸಿದ್ದರು.[4] ಪೂರ್ಣಯ್ಯನವರ ಈ ಧರ್ಮಛತ್ರದ ನಿರ್ಮಾಣಕ್ಕೆ ತಮ್ಮ ಮಠದ ಮುಂಭಾಗದಲ್ಲಿ ಅನುಕೂಲ ಮಾಡಿಕೊಟ್ಟಿದ್ದವರೆ ಆಗಿನ ಕಲ್ಲುಮಠದ ಗುರುಗಳಾಗಿದ್ದ ಗೊಟ್ಟೂರಯ್ಯನವರು.[5]ಇದರ ಸಹಾಯಾರ್ಥ ಪೂರ್ಣಯ್ಯನವರು ಮುಮ್ಮಡಿ ಕೃಷ್ಣರಾಜ ಒಡೆಯರಲ್ಲಿ ಪ್ರಭಾವ ಬೀರಿ, ಗೊಟ್ಟೂರಯ್ಯನವರಿಗೆ ಪಕ್ಕದ ಹನುಮಂತಪುರ ಗ್ರಾಮದಲ್ಲಿ ಧರ್ಮಾಂಬುಧಿಕೆರೆಯ ಪೂರ್ವದ ದಂಡೆಗೆ, ೮ ಕೊಳಗ ೨ ಪಡಿ ಬೀಜವರಿ ವಿಸ್ತೀರ್ಣದ (೭ ಎಕರೆ ೧೧ ಗುಂಟೆ) ಜಮೀನನ್ನು ಇನಾಮಾಗಿ ಕೊಡಿಸಿಕೊಟ್ಟಿದ್ದರು.[6] ಅಂದರೆ ೧೮೦೦ರ ವೇಳೆಗಾಗಲೇ ಗೊಟ್ಟೂರಯ್ಯನವರ ಮೂಲಮಠ (ಕಲ್ಲುಮಠ) ವಿತ್ತು ಎಂದು ಸುಲಭವಾಗಿ ಊಹಿಸಬಹುದಾಗಿದೆ.

ಮುಂದೆ ೧೮೩೧ರ ಹುಜೂರ್ ಜಾರಿ ಲೆಕ್ಕದ ಪ್ರಕಾರ ಗೊಟ್ಟೂರಯ್ಯನವರ ನಂತರ ಅಧಿಕಾರಕ್ಕೆ ಬಂದವರು ಚನ್ನವೀರ ಒಡೆಯ (ದೇವ)ರು.[7] ಬಹುಶಃ ಈ ವೇಳೆಗಾಗಲೇ ಗೊಟ್ಟೂರಯ್ಯನವರು ತೀರಿಕೊಂಡಿದ್ದಿರ ಬೇಕು. ಗೊಟ್ಟೂರಯ್ಯನವರ ಗದ್ದುಗೆಯುನ್ನು ಹನುಮಂತಪುರದ ಇನಾಂ ಜಮೀನಿನಲ್ಲೇ ಮಾಡಲಾಗಿತ್ತು. ಚನ್ನವೀರ ಒಡೆಯ (ದೇವ)ರು ೧೮೪೪ರ ವರೆಗೂ ಸದರಿ ಗೊಟ್ಟೂರಯ್ಯನವರ ಮಠದ ಅಧಿಪತಿಗಳಾಗಿ ಮುಂದುವರೆದಿದ್ದರು.[8] ಇವರ ಕಾಲದಲ್ಲಿ ಹನುಮಂತಪುರ ಗ್ರಾಮದ ಇನಾಂ ಜಮೀನಿನಲ್ಲಿ ಗೊಟ್ಟೂರಯ್ಯನವರ ಗದ್ದುಗೆಯ ಜೊತೆಗೆ ನಂಜುಂಡೇಶ್ವರನ ಪುಟ್ಟಗುಡಿ ಹಾಗೂ ಹದಿನೈದು ಅಂಕಣಗಳ ಕಲ್ಲುಮಠವನ್ನು ನಿರ್ಮಾಣ ಮಾಡಲಾಗಿತ್ತು.[9] ಇವರ ಕಾಲದ ವ್ಯವಹಾರ ಪತ್ರಗಳನ್ನು ಆಧರಿಸಿ ಹೇಳುವುದಾದರೆ, ''ಗೊಟ್ಟೂರಯ್ಯನವರ ಮಠವು ಮುರಿಗಾ ಸಮಯಭೇದಕ್ಕೆ ಸೇರಿದ್ದ ಮಠವಾಗಿತ್ತು'' ಎಂಬುದಾಗಿ ತಿಳಿದುಬರುತ್ತದೆ.[10] ಗೊಟ್ಟೂರಯ್ಯನವರ ಮಠದ ಮೂಲಮಠ ಕಲ್ಲುಮಠವೇ ಆಗಿದ್ದರೂ, ಗೊಟ್ಟೂರಯ್ಯನವರಿಗೆ ಮಹಾರಾಜರಿಂದ ಇನಾಮಾಗಿ ಬಂದಿದ್ದ ಹನುಮಂತಪುರದ ಜಮೀನಿನಲ್ಲಿ ೧೮೫೦ರ ವೇಳೆಗೆ ನೂತನ ಗದ್ದುಗೆ, ಮಠದ ಕಟ್ಟಡಗಳೆಲ್ಲಾ ನಿರ್ಮಾಣವಾಗಿದ್ದುದರಿಂದ, ಇದನ್ನೇ ಜನರು ಗೊಟ್ಟೂರಯ್ಯನವರ ಮಠವೆಂದು ಕರೆಯುವುದು ರೂಢಿಗೆ ಬಂದಿತ್ತು.

ಚನ್ನವೀರದೇವರ ನಂತರ ಮಠಾಧಿಕಾರಕ್ಕೆ ಬಂದವರೆ ಸಿದ್ಧರಾಮ (ಒಡೆಯರು) ದೇವರು.[11] ಇವರ ಕಾಲದ ಬಗೆಗೆ ಖಚಿತವಾದ ಮಾಹಿತಿ ಲಭ್ಯವಾಗಿಲ್ಲವಾದರೂ ಇವರು ೧೮೪೯ರಿಂದ ಅಧಿಕಾರದಲ್ಲಿದ್ದುದಕ್ಕೆ ಸೂಚನೆಗಳಿವೆ. ಆಗ ಮಠದ ಭಕ್ತರಾಗಿದ್ದ ಉದ್ದಣ್ಣ ಎಂಬುವರು

ತಮ್ಮ ಸ್ವಂತ ಖರ್ಚಿನಲ್ಲಿ ವರ್ಷಂಪ್ರತಿ ಮಠದಲ್ಲಿ ನಡೆಯುವ ಹಿರಿಯ ಗುರುಗಳ ಗಣಾರಾಧನೆಯನ್ನು ನಡೆಸಿಕೊಡಲು ಪ್ರಾರಂಭಿಸಿದ್ದರು.[12] ಈ ಕಾರ್ಯವು ೧೮೬೯ರಿಂದ ೧೮೭೩ರ ವರೆಗೂ ನಿರಂತರವಾಗಿ ನಡೆದು ಬಂದಿತ್ತು. ಮುಂದೆ ೧೮೭೩ರಲ್ಲಿ ಸಿದ್ಧಲಿಂಗದೇವರು ಗೊಟ್ಟೂರಯ್ಯನವರ ಮಠದ ಅಧಿಪತಿಗಳಾಗಿದ್ದರು.[13] ಇವರ ಕಾಲದಲ್ಲಿ ಮಠದ ಜಮೀನುಗಳನ್ನು ಸಾಲುಗುತ್ತಿಗೆ ಕರಾರು ಮಾಡಿಕೊಂಡಿದ್ದ ಕೆಲವು ದಾಖಲೆಗಳಿವೆ. ಗೊಟ್ಟೂರಯ್ಯನವರ ಮಠದ ಕೊನೆಯ ಅಧಿಪತಿಗಳಾಗಿದ್ದವರೇ ಅನ್ನದಾನಿಸ್ವಾಮಿಗಳು. ಇವರು ೧೮೮೭ರ ವರೆಗೂ ಅಧಿಕಾರದಲ್ಲಿದ್ದುದಾಗಿ ಸಪ್ಪಣ್ಣಸ್ವಾಮಿ ಮಠದ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.[14]

ಹನುಮಂತಪುರ ಗ್ರಾಮದ ಗೊಟ್ಟೂರಯ್ಯನವರ ಮಠಕ್ಕೆ ಮೈಸೂರು ದೊರೆಗಳ ಸರ್ಕಾರದಿಂದ ದಿನಾಂಕ : ೧.೧.೧೮೭೭ರಂದು ಅಧಿಕೃತವಾದ ಇನಾಂ ಸರ್ಟಿಫಿಕೇಟ್ ನೀಡಲಾಗಿದೆ. ಈ ದಾಖಲೆಯಲ್ಲಿ ಬೆಂಗಳೂರು ತಾಲ್ಲೂಕಿನ ಹನುಮಂತಪುರ ಗ್ರಾಮದ ಸ.ನಂ : ೨೩ರಲ್ಲಿ ೮ ಕೊಳಗ ೨ ಪಡಿ ಬೀಜವರಿ ವಿಸ್ತೀರ್ಣದ ಜಮೀನು ನೀಡಲಾಗಿತ್ತು.[15] ಪ್ರಾಯಶಃ ಗೊಟ್ಟೂರಯ್ಯನವರ ಮಠವನ್ನು ಮೊಟ್ಟಮೊದಲಿಗೆ ಗೋದೂರಯ್ಯನವರ ಮಠವೆಂದು ಸಂಬೋಧಿಸಲು ಪ್ರಾರಂಭವಾದದ್ದೇ ಈ ದಾಖಲೆಯಿಂದ ಎನ್ನಬಹುದು. ಇಲ್ಲಿಂದ ಮುಂದಿನ ಎಲ್ಲಾ ಮುಜರಾಯಿ ಇಲಾಖಾ ದಾಖಲೆಗಳಲ್ಲೂ ಗೋದೂರಯ್ಯನವರ ಮಠವೆಂದೇ ಗುರುತಿಸಿರುವುದು ಸಾಮಾನ್ಯವಾಗಿದೆ. ಆದರೆ ೧೮೧೦ರ ಪೂರ್ಣಯ್ಯನವರ ಹುಜೂರ್ ಜಾರಿ ಲೆಕ್ಕದಲ್ಲಿ ಗೊಟ್ಟೂರಯ್ಯನವರ ಮಠವೆಂದೇ ದಾಖಲೆ ಇರುವುದನ್ನು ಈಗಾಗಲೇ ಪರಿಶೀಲಿಸಿಯಾಗಿದೆ.[16]

ಈಗಿನ ಬಳೆಪೇಟೆಯ ತುಳಸಿ ತೋಟದ ಬಳಿ ಪೂರ್ಣಯ್ಯ ಛತ್ರದ ಹಿಂಭಾಗದಲ್ಲಿರುವ ಕಲ್ಲುಮಠ ಹಾಗೂ ಗಾಂಧಿನಗರದ ಸುಭೇದಾರ್ ಛತ್ರಂ ರಸ್ತೆಯಲ್ಲಿ ರಾಮಕೃಷ್ಣ ಲಾಡ್ಜಿನ ಎಡಬದಿಗಿರುವ ಗೊಟ್ಟೂರಯ್ಯ (ಗೋದೂರಯ್ಯ)ನವರ ಮಠ ಇವೆರಡೂ ಮೂಲದಲ್ಲಿ ಒಂದೇ ಆಡಳಿತಕ್ಕೆ ಒಳಪಟ್ಟವಾಗಿದ್ದವು. ಕೆಲವು ವೃತ್ತ ಪತ್ರಿಕೆಗಳು ವರದಿ ಮಾಡಿರುವಂತೆ ಹನುಮಂತಪುರ ಗ್ರಾಮದ ಗೊಟ್ಟೂರಯ್ಯ (ಗೋದೂರಯ್ಯ)ನವರ ಮಠದ ಆಸ್ತಿಯು ಕ್ರಿ.ಶ. ೧೬೯೨ರಲ್ಲಿ ಕೆಳದಿ ಅರಸರಿಂದ ದಾನವಾಗಿ ಬಂದದ್ದೆಂದು ಹೇಳಲಾಗುತ್ತದೆ.[17] ಆದರೆ ಸದ್ಯಕ್ಕೆ ದೊರಕಿರುವ ಮೈಸೂರು ದೊರೆಗಳ ಆಡಳಿತದ ಮುಜರಾಯಿ ಇಲಾಖಾ ದಾಖಲೆಗಳಲ್ಲಾಗಲೀ ಅಥವಾ ಮಠಕ್ಕೆ ಸಂಬಂಧಿಸಿದ ೧೯೫೦ರ ವರೆಗಿನ ಕೋರ್ಟು ಕಛೇರಿಗಳ ವ್ಯವಹಾರ ಪತ್ರಗಳಲ್ಲಾಗಲೀ ಎಲ್ಲೂ ಕೂಡ ಕೆಳದಿ ಅರಸರು ನೀಡಿರಬಹುದಾದ ದತ್ತಿ ದಾನಗಳ ವಿಚಾರಗಳೇ ಬರುವುದಿಲ್ಲ. ಮೇಲಾಗಿ ಸದರಿ ಹನುಮಂತಪುರ ಗ್ರಾಮ (ಈಗಿನ ಗಾಂಧಿನಗರ)ದ ಮಠದ ಆಸ್ತಿಯನ್ನು ೧೮೦೮ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಗೊಟ್ಟೂರಯ್ಯನವರಿಗೆ ದಾನವಾಗಿ ನೀಡಿರುವುದಕ್ಕೆ ಅಧಿಕೃತವಾದ ಮುಜರಾಯಿ ದಾಖಲೆಗಳು ಇಂದು ನಮ್ಮ ಮುಂದಿವೆ.[18]

ಸರಿಸುಮಾರು ೧೮೦೦ ರಿಂದ ೧೮೮೭ರ ವರೆಗೆ ಗೊಟ್ಟೂರಯ್ಯನವರ ಮಠದಲ್ಲಿ ಆಗಿ ಹೋದ ಐವರು ಮಠಾಧೀಶರ ಸಂಕ್ಷಿಪ್ತ ಮಾಹಿತಿ ಲಭ್ಯವಿದೆಯೇ ಹೊರತು ಅವರುಗಳ ಕಾಲದ ಹೆಚ್ಚಿನ ವಿವರಗಳೇನೂ ದೊರಕುವುದಿಲ್ಲ. ಈ ಅವಧಿಯಲ್ಲಿ ಬಳೆಪೇಟೆಯ ಕಲ್ಲು ಮಠ ಹಾಗೂ ಹನುಮಂತಪುರದ ಗೊಟ್ಟೂರಯ್ಯನವರ ಮಠಗಳೆರಡೂ ಒಂದೇ ಆಡಳಿತದಲ್ಲಿದ್ದವು. ಕೊನೆಯ ಗುರುಗಳಾಗಿದ್ದ ಅನ್ನದಾನಯ್ಯನವರು ೧೮೮೭ರಲ್ಲಿ ಶಿವಾಧೀನರಾದ[19] ಮೇಲೆ ಸದರಿ ಮಠಗಳು ಗುರುವಣ್ಣ ದೇವರ ಮಠದ ಗುರುಮಹಾಂತ ಒಡೆಯರ ಸ್ವಾಧೀನ ದಲ್ಲಿದ್ದವು. ಇವರು ತಮ್ಮ ಸೋದರ ಸಂಬಂಧಿಯಾಗಿದ್ದ ಬಳೆಪೇಟೆಯ ಸಿದ್ಧಲಿಂಗಪ್ಪನ ಮಗ ಸಿದ್ಧಯ್ಯ ಎಂಬುವವನನ್ನು ೧೮೮೮ರಲ್ಲಿ ಮೇಲ್ಕಂಡ ಕಲ್ಲುಮಠ ಹಾಗೂ ಗೊಟ್ಟೂರಯ್ಯನವರ ಮಠಗಳ ಉಸ್ತುವಾರಿದಾರ ನನ್ನಾಗಿ ನೇಮಿಸಿದ್ದರು.[20] ೧೮೯೦ರ ವೇಳೆಗೆ ಈ ಸಿದ್ಧಯ್ಯನೇ ಕಲ್ಲುಮಠ ಹಾಗೂ ಗೊಟ್ಟೂರಯ್ಯನವರ ಮಠಗಳ ಅಧಿಕೃತ ವಹಿವಾಟುದಾರನೆಂದೂ ಮುಜರಾಯಿ ಇಲಾಖೆ ಕೂಡ ಮಾನ್ಯಮಾಡಿತ್ತು. ಆಗ ಸಾಕಷ್ಟು ವ್ಯತ್ಯಸ್ಥವಾಗಿದ್ದ ಮಠಗಳ ಆಸ್ತಿ-ಪಾಸ್ತಿಗಳ ರಕ್ಷಣೆಗಾಗಿ ಸಿದ್ಧಯ್ಯ ಅವಿರತ ಪ್ರಯತ್ನ ನಡೆಸಿದ್ದರು. ಗೊಟ್ಟೂರಯ್ಯನವರ ಮಠಕ್ಕೆ ಹನುಮಂತಪುರ ಗ್ರಾಮದಲ್ಲಿ ಮಹಾರಾಜರು ನೀಡಿದ್ದ ೫ ಎಕರೆ ೨೦ ಗುಂಟೆ ಜಮೀನಿನ ಜೊತೆಗೆ ಅಕ್ಕಪಕ್ಕದ ಕರಾಬು ಜಮೀನು ಸೇರಿ ಒಟ್ಟು ೭

ಎಕರೆ ೧೧ ಗುಂಟೆ ಜಮೀನಿತ್ತು.[21] ಈ ಮಧ್ಯೆ ಮಠದ ಭಕ್ತರೆಲ್ಲಾ ಸೇರಿ ಸಿದ್ಧಯ್ಯನೇ ಮಠದ ಅಧಿಕೃತ ವಹಿವಾಟುದಾರನೆಂದು ಸರ್ಕಾರ ಒಪ್ಪಿಕೊಂಡಿರುವುದು ಸರಿಯಲ್ಲವೆಂದೂ, ಮಠದ ಐತಿಹಾಸಿಕ ಪರಂಪರೆಗೆ ಅನುಗುಣವಾಗಿ ವಿದ್ಯಾವಂತ ವಟುವೊಬ್ಬರನ್ನು ಸ್ವಾಮಿಗಳನ್ನಾಗಿ ಆಯ್ಕೆ ಮಾಡಲು ಸರ್ಕಾರ ಅನುವು ಮಾಡಿಕೊಡಬೇಕೆಂದೂ ಸುದೀರ್ಘವಾದ ಅಹವಾಲು ಸಲ್ಲಿಸಿದ್ದರು.[22] ಮುಂದೆ ೧೯೨೬ರ ವೇಳೆಗೆ ಮಠದ ಇನಾಂ ಜಮೀನುಗಳನ್ನು ಗುತ್ತಿಗೆಗೆ ಮಾಡಿಕೊಂಡಿದ್ದ ರೈತರೂ ಹಾಗೂ ಅರ್ಚಕರೂ ಸೇರಿ ಮಠದ ಜಮೀನಿನಲ್ಲಿ ನೂರಾರು ತಾತ್ಕಾಲಿಕ ಗುಡಿಸಲುಗಳನ್ನು ನಿರ್ಮಾಣಮಾಡಿ ಮಾಹೆಯಾನ ಗುಡಿಸಲೊಂದಕ್ಕೆ ೪ ರಿಂದ ೬ ಅಣೆಗಳ ಬಾಡಿಗೆ ವಸೀಲಿ ಮಾಡುತ್ತಿದ್ದರು.[23] ಈ ವೇಳೆಗೆ ಮಠದಲ್ಲಿ ಕಾಲದಿಂದಲೂ ನಡೆದು ಬಂದಿದ್ದ ಸಾಂಪ್ರದಾಯಿಕ ನಡವಳಿಕೆಗಳಿಗೆ ಪುರಸ್ಕಾರವೇ ಇಲ್ಲದಂತಾಗಿ ಮಠದ ಮೂಲ ಧಾರ್ಮಿಕ ಪರಂಪರೆಗೆ ಬಲವಾದ ಹೊಡೆತ ಬಿದ್ದಿತ್ತು.

ಮಠದ ಹೆಸರಿಗಿದ್ದ ಒಟ್ಟು ಆಸ್ತಿ ೭ ಎಕರೆ ೧೧ ಗುಂಟೆ ಜಮೀನಿನಲ್ಲಿ, ೫ ಎಕರೆ ೩೦.೫ ಗುಂಟೆ ವಿಸ್ತೀರ್ಣದ ಭೂಮಿಯನ್ನು ಗಾಂಧಿನಗರದ ನೂತನ ಬಡಾವಣೆಯ ನಿರ್ಮಾಣಕ್ಕೆ ಸ್ವಾಧೀನ ಪಡಿಸಿಕೊಳ್ಳುವಂತೆ, ದಿನಾಂಕ: ೩೧.೩.೧೯೨೮ ರಂದು ಸರ್ಕಾರವು ಪುರಸಭೆಗೆ ಅನುಮತಿ ನೀಡಿತ್ತು.[24] ಮಠದ ಕಟ್ಟಡ ಗದ್ದುಗೆ ಇತ್ಯಾದಿಗಳಿದ್ದ ಪ್ರದೇಶ ೮ ಗುಂಟೆ ಉಳಿದು, ಬೇರೆ ೨ ಗುಂಟೆಯ ಭಾಗವನ್ನು ಸರ್ಕಾರವೇ ರಾಮಚಂದ್ರಯ್ಯ ಎಂಬುವರಿಗೆ ಪರಭಾರೆ ಮಾಡಿತ್ತು. ಹೀಗೆ ಆರು ಎಕರೆ ಅರ್ಧಗುಂಟೆ ಹೋಗಿ, ಬಾಕಿ ಒಂದು ಎಕರೆ ಹತ್ತೂವರೆ ಗುಂಟೆ ಜಮೀನು ಉಳಿದಿತ್ತು. ಈ ಪೈಕಿ ೧೧ ಗುಂಟೆ ಜಮೀನನ್ನು ಸರ್ಕಾರದ ಪರವಾಗಿ ಕಲ್ಯಾಣಪ್ಪ ಎಂಬುವನಿಗೆ ಗುತ್ತಿಗೆ ನೀಡಲಾಗಿತ್ತು. ಉಳಿದ ೩೯.೫ ಗುಂಟೆ ಭೂಮಿಯಲ್ಲಿ ೨ ಗುಂಟೆಯಷ್ಟು ಜಾಗ ಸಿ.ವಿ. ನರಸಿಂಹಯ್ಯಂಗಾರ್ ಅವರ ಅನುಭವದಲ್ಲೂ, ಇನ್ನುಳಿದಿದ್ದ ೩೭.೫ ಗುಂಟೆಯಷ್ಟು ಜಮೀನು ಸೈಯದ್ ಮುಸ್ತಫ ಮತ್ತು ಸೈಯದ್ ಹುಸೇನ್ ಅವರ ಸ್ವಾಧೀನದಲ್ಲೂ ಇತ್ತು.[25] ಹೀಗೆ ೧೯೪೫ರ ವೇಳೆಗೆ ಗೊಟ್ಟೂರಯ್ಯನವರ ಮಠದ ಆಸ್ತಿಯು ಸರಿಯಾದ ವಾರಸುದಾರರಿಲ್ಲದೆ ಹರಿದು ಹಂಚಿಹೋಗಿತ್ತು. ಈ ಮಧ್ಯೆಮಠದ ವಹಿವಾಟು ದಾರನಾಗಿದ್ದ ಸಿದ್ಧಯ್ಯನು ೧೯೪೨ರಲ್ಲಿ ತೀರಿಕೊಂಡಿದ್ದನು. ಸಿದ್ಧಯ್ಯನು ಬರೆದಿದ್ದ ವಿಲ್ ಪ್ರಕಾರ ಈತನ ಸಾಕುಮಗನಾದ ವೀರಭದ್ರಯ್ಯನೇ ಮಠದ ಮುಂದಿನ ವಹಿವಾಟುದಾರನಾಗಬೇಕಾಗಿತ್ತು. ಆದರೆ ೧೯೩೮ರಿಂದ ೧೯೪೨ರ ವರೆಗೆ ನಡೆದ ಇವರ ಕೌಟುಂಬಿಕ ಜಗಳಗಳಿಂದಾಗಿ ಮಠದ ಆಸ್ತಿ-ಪಾಸ್ತಿಗಳ ಸಂಪೂರ್ಣ ಅಧಿಕಾರವನ್ನು ಸರ್ಕಾರವೇ ವಹಿಸಿಕೊಂಡು ವೀರಭದ್ರಯ್ಯನನ್ನು ಕೇವಲ ಅರ್ಚಕನನ್ನಾಗಿ ಮಾತ್ರ ಮುಂದುವರೆಸಿತ್ತು.[26]

ಸರ್ಕಾರವು ಮುಂದೆ ಗೊಟ್ಟೂರಯ್ಯನವರ ಮಠದ ಆಸ್ತಿ-ಪಾಸ್ತಿಗಳ ವಿಲೇವಾರಿಯಿಂದ ಸಂಗ್ರಹವಾಗಿದ್ದ ಹಣವನ್ನು ಮಠದ ಹೆಸರಿನಲ್ಲೇ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಕಾಯ್ದಿರಿಸಿತ್ತು. ದಿನಾಂಕ : ೨೪.೧೧.೧೯೭೬ ರಲ್ಲಿ ಒಂದು ಆದೇಶವನ್ನು ಹೊರಡಿಸಿದ್ದ ಧಾರ್ಮಿಕ ದತ್ತಿ ಇಲಾಖೆಯು, ಮೇಲ್ಕಂಡ ನಿಧಿಯಿಂದ ಬರುವ ವಾರ್ಷಿಕ ಬಡ್ಡಿಯ ಹಣವನ್ನು ಈ ಕೆಳಕಂಡ ಧರ್ಮಕಾರ್ಯಗಳಿಗೆ ಖಾಯಂ ಆಗಿ ವಿನಿಯೋಗವಾಗುವಂತೆ ಸೂಚನೆ ನೀಡಿತ್ತು.[27] ಆ ಪ್ರಕಾರ ಪ್ರತಿವರ್ಷ...

| | ರೂಗಳಲ್ಲಿ |
|---|---|
| ಗೊಟ್ಟೂರಯ್ಯನವರ ಮಠದ ನಿತ್ಯ ಖರ್ಚಿಗಾಗಿ (ವಾರ್ಷಿಕ) | ೧೮೦೦.೦೦ |
| ಅರ್ಚಕನ ಸಂಬಳ | ೨೭೦೦.೦೦ |
| ವಿದ್ಯುತ್, ನೀರು ಮತ್ತಿತರ ಸಾದಿಲ್ವಾರು | ೩೦೦.೦೦ |
| ಮಠದ ದುರಸ್ತಿ, ಕಂದಾಯ ವಗೈರೆ | ೨೭೦೦.೦೦ |
| ವೀರಶೈವ ಆಗಮ ಅಧ್ಯಯನದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಕ್ಕಾಗಿ | ೨೪೦೦.೦೦ |
| ಅಕ್ಕಮಹಾದೇವಿ ಸಮಾಜದ ವಿದ್ಯಾರ್ಥಿನಿಯರಿಗಾಗಿ | ೩೦೦೦.೦೦ |
| ಬಸವ ಸಮಿತಿಯಲ್ಲಿ ಗೊಟ್ಟೂರಯ್ಯನವರ ಸ್ಮರಣಾರ್ಥ ಕಾರ್ಯಗಳಿಗಾಗಿ | ೪೦೦೦.೦೦ |
| ಒಟ್ಟು | ೧೬,೯೦೦.೦೦ |

ಸದ್ಯಕ್ಕೆ ನಗರ ಭೂಮಾಪನಾ ಇಲಾಖಾ ಲೆಕ್ಕಗಳ ಪ್ರಕಾರ ಗೊಟ್ಟೂರಯ್ಯ (ಗೋದೂರಯ್ಯ)ನವರ ಮಠಕ್ಕೆ ಉಳಿದಿರುವ ಆಸ್ತಿ ಫೈನಲ್ ಸಿಟಿ ಸರ್ವೆ ನಂ : ೨೪೦ರಲ್ಲಿ ೧೪೬.೯ ಚದರ ಗಜ ಮತ್ತು ಫೈನಲ್ ಸಿಟಿ ಸರ್ವೆ ನಂ :

೨೪೨ರಲ್ಲಿ ೭೧೧ ಚದರ ಗಜಗಳ ವಿಸ್ತೀರ್ಣದ ಭಾಗಗಳು ಮಾತ್ರ.[28]

**ಗೊಟ್ಟೂರಯ್ಯನವರ ಮಠದ ಗುರು ಪರಂಪರೆ :**

೧. ಗೊಟ್ಟೂರಯ್ಯನವರು. ಸು.ಕ್ರಿ.ಶ. ೧೮೦೦-೧೮೩೦.

೨. ಚನ್ನವೀರದೇವರು. ಸು. ೧೮೩೧-೧೮೪೮.

೩. ಸಿದ್ಧರಾಮದೇವರು. ಸು. ೧೮೪೯-೧೮೬೨.

೪. ಸಿದ್ಧಲಿಂಗದೇವರು. ಸು. ೧೮೬೩-೧೮೭೨.

೫. ಅನ್ನದಾನಯ್ಯನವರು. ಸು. ೧೮೭೨-೧೮೮೬.

---

## ಅಡಿಟಿಪ್ಪಣಿಗಳು

1. ಸಪ್ಪಣ್ಣಸ್ವಾಮಿ ಮಠದ ಫಾಲಲೋಚನ ಸ್ವಾಮಿಗಳಿಗೆ ಕ್ರಿ.ಶ. ೧೮೪೨ರಲ್ಲಿ ಭಕ್ತರು ಒಪ್ಪಿಸಿರುವ ಸಮಾಖ್ಯ ಪತ್ರ. ಶೋಭಕೃತು ಸಂವತ್ಸರ ಕಾರ್ತಿಕ ಶುದ್ಧ ೧. ಪು. ೧.
2. Muzrai File No : 21/1906. Sl. No : 1-4. P. 7.
3. Muzrai File No : 1532/1956. dt. 20.6.1956. P. 1.
4. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೭೭.
5. ಹೇಳಿಕೆ : ವೈ.ಸಿ. ಬಸಪ್ಪ (೮೨). ಗಾಂಧಿನಗರ. ಬೆಂಗಳೂರು.
6. A Register prepared by Poornaiah. upto 1810. (Muzrai File No : 21/1906. Sl.No : 1-4. P. 7.)
7. Ibid.
8. ಪಿ.ಎಂ. ಗಿರಿರಾಜು. ಚರಮೂರ್ತಿ ಶ್ರೀ ಗುರುಸಿದ್ಧಸ್ವಾಮಿಗಳ ಕೆಲವು ಐತಿಹಾಸಿಕ ಘಟನೆಗಳು. ಸರ್ಪಭೂಷಣಶ್ರೀ. ಸಂ : ಜಿ.ವಿ. ಶಿವಸ್ವಾಮಿ ಮತ್ತು ಎಚ್.ಎಸ್. ಸಿದ್ಧಗಂಗಪ್ಪ. ಪು. ೬೪.
9. Muzrai File No : 184/1944. Sl.No : 1-2. P. 15.
10. ಪಿ.ಎಂ.ಗಿರಿರಾಜು. ಪೂರ್ವೋಕ್ತ. ಪು. ೬೪.
11. Muzrai File No: 21/1906. Sl.No : 1-4. P. 7.
12. Muzrai File No : 184/1944 Sl.No: 1-2. P. 5,6.
13. Ibid.
14. ಸಪ್ಪಣ್ಣಸ್ವಾಮಿ ಮಠದ ಗುರುಸ್ವಾಮಿಗಳ ಕಾಲದ ದಾಖಲೆ. ೧೫ ರೂ ಛಾಪಾಕಾಗದ. ದಿ: ೧೪.೯.೧೮೮೭.
15. Quit Rent Inam Certificate : Ge. No : 41201. Reg. No: 757 dt. 1.1.1876.
16. Muzrai File No : 21/1906. Sl.No: 1.4. P. 7.
17. ಪೌರಮತ (ವಾರಪತ್ರಿಕೆ). ಸಂ : ಬಿ.ಸಿ. ಮಂಗಳದಯ್ಯ. ದಿ : ೩.೯.೧೯೯೫. ಪು. ೧. ಮತ್ತು ಪ್ರಜಾವಾಣಿ (ದಿನಪತ್ರಿಕೆ). ದಿ : ೧೩.೧೦.೧೯೯೫. ಪು. ೨.
18. Muzrai File No : 21/1906.Sl.No : 1-4. P.7.
19. ಸಪ್ಪಣ್ಣಸ್ವಾಮಿ ಮಠದ ಗುರುಸ್ವಾಮಿಗಳ ಕಾಲದ ದಾಖಲೆ. ೧೫ ರೂ. ಛಾಪಾಕಾಗದ. ದಿ : ೧೪.೯.೧೮೮೭.
20. ಈ ಮೇಲಿನ ಹೇಳಿಕೆಗೆ (ಮಲ್ಲಿಕಾರ್ಜುನ ಸ್ವಾಮಿಗಳು (೫೨) ಗುರುವಣ್ಣ ದೇವರಮಠ) ಅನುಗುಣವಾಗಿ ಗೊಟ್ಟೂರಯ್ಯನವರ ಮಠದ ಭೂದಾನ ಸನ್ನದು (ತೀರಾ ಶಿಥಿಲವಾಗಿಬಿಟ್ಟಿದೆ) ಕ್ವಿಟ್ ರೆಂಟ್ ಕಾಪಿ ಹಾಗೂ ಮತ್ತಿತರ ಅಮೂಲ್ಯ ದಾಖಲೆ ಪತ್ರಗಳೆಲ್ಲಾ ಈಗಲೂ ಕೂಡ ಗುರುವಣ್ಣದೇವರ ಮಠದಲ್ಲಿರುವುದನ್ನು ನಾವು ನೋಡಬಹುದಾಗಿದೆ.
21. Muzrai File No : 21/1906. Sl. No: 1-4. P.11,12.
22. Muzrai File No : 604/1916-17. Sl.No : 1-2. P.28-30.
23. Muzrai File No : 13/1924. Sl.No: 7-8, P.17.
24. Muzrai File No : 184/1944. Sl.No : 1-2. P.8.
25. Muzrai File No : 1532/1956. P. 21-23.
26. ಪೌರಮತ (ವಾರಪತ್ರಿಕೆ). ಸಂ : ಬಿ.ಸಿ. ಮಂಗಳದಯ್ಯ. ದಿ : ೩.೯.೧೯೯೫. ಪು. ೨.
27. Proceedings of the Commissioner for Religious and Charitable Endowments in Karnataka. Bangalore. No : A2-Cr. 223/79-80. dt : 24.10.1979. P.3,4.
28. ಭೂಮಾಪನಾ ಇಲಾಖಾ ದಾಖಲೆ: ೨ನೆಯ ವಿಭಾಗ. ಸ್ಥಳೀಯ ಕ್ಷೇತ್ರದ ಸಂಖ್ಯೆ : ೮೦. ಗಾಂಧಿನಗರ. ಕ್ರ.ಸಂ. ೨೪೦ ಮತ್ತು ೨೪೨.

## ೭. ದೇಶದಮಠ, ಅರಳೆಪೇಟೆ

ಬೆಂಗಳೂರಿನ ಮೂರು ಸುಪ್ರಸಿದ್ಧ ಪ್ರಾಚೀನ ಪೇಟೆಗಳಲ್ಲಿ ಅರಳೆಪೇಟೆಯೂ ಒಂದು. ಈ ಪೇಟೆಯನ್ನು ಹಿಂದೆ ಅಮೃತಸಾಗರದ ಅರಳೆಪೇಟೆ ಎಂದೇ ಕರೆಯಲಾಗುತ್ತಿತ್ತು.[1] ಅರಳೆಪೇಟೆಯೊಳಗೆ ಒಟ್ಟು ಹದಿನಾಲ್ಕು ಉಪಪೇಟೆಗಳಿದ್ದವು.[2] ಆಗ ರಾಜಮಹಾರಾಜರ ರಾಜ ಬೀದಿಯೂ, ಉತ್ಸವಾದಿ ಮೆರವಣಿಗೆಗಳ ಸಾರೋಟದ ಮುಖ್ಯ ಬೀದಿಯೂ ಅರಳೆಪೇಟೆಯಲ್ಲಿತ್ತು.[3] ಹೆಸರೇ ಸೂಚಿಸುವಂತೆ ಪ್ರಾಚೀನ ಕಾಲದಿಂದಲೂ ಈ ಪೇಟೆಯು ಅರಳೆ ವ್ಯಾಪಾರಕ್ಕೆ ಪ್ರಸಿದ್ಧ ಕೇಂದ್ರವಾಗಿತ್ತು. ಅರಳೆ ಪೇಟೆಯ ಬಸವೇಶ್ವರನ ಗುಡಿಯನ್ನು ಈಗಲೂ ಅರಳೆಗುಡಿ ಎಂದು ಕರೆಯುವುದೇ ರೂಢಿಯಲ್ಲಿದೆ. ಇಲ್ಲಿನ ರುದ್ರಗುಡಿ ಹಾಗೂ ಅಮೃತ ಮಲ್ಲೇಶ್ವರನ ಗುಡಿಗಳು ಅರಳೆಪೇಟೆಯ ಪ್ರಾಚೀನತೆಗೆ ಹಿಡಿದ ಕನ್ನಡಿಯಂತಿವೆ.[4] ಈ ದೇಗುಲಗಳೆಲ್ಲಾ ಮೊದಲನೆಯ ಹಾಗೂ ಎರಡನೆಯ ಕೆಂಪೇಗೌಡರ ಕಾಲದಲ್ಲಿ ನಿರ್ಮಾಣವಾದುವೆಂಬುದಾಗಿ ಹಳೆಯ ತಲೆಮಾರಿನವರ ರೂಢಿಗತ ನಂಬಿಕೆಯಾಗಿದೆ.

ಇಮ್ಮಡಿಕೆಂಪೇಗೌಡನ ಕಾಲದಲ್ಲಿ ಬೆಂಗಳೂರಿನ ಕೋಟೆಗೆ ಪೂರ್ವದ ಅಲಸೂರು ಬಾಗಿಲಿಗೂ, ಪಶ್ಚಿಮದ ಸೊಂಡೆಕೊಪ್ಪದ ಬಾಗಿಲಿಗೂ ನಡುವೆ ಒಂದು ರಾಜಮಾರ್ಗವಿತ್ತು. ಈ ಮಾರ್ಗವು ದೊಡ್ಡಪೇಟೆ ಹಾಗೂ ಅರಳೆಪೇಟೆಗಳಿಗೆ ನೇರ ಸಂಪರ್ಕವುಳ್ಳದ್ದಾಗಿತ್ತು. ಈಗ ಅದೇ ಮಾರ್ಗವನ್ನು ಹಳೆಯ ತಾಲ್ಲೂಕು ಕಛೇರಿ ರಸ್ತೆ ಎಂದು ಕರೆಯಲಾಗುತ್ತದೆ. ಹಿಂದೆ ಸೊಂಡೆಕೊಪ್ಪದ ಬಾಗಿಲಿನಿಂದ ಬೆಂಗಳೂರಿನ ಕೋಟೆಯೊಳಗೆ ಪ್ರವೇಶಿಸಿದರೆ ಮಾರ್ಗದ ಎಡ-ಬಲಗಳಲ್ಲಿ ಅನೇಕ ವೀರಶೈವ ಮಠಗಳು ಸಿಗುತ್ತಿದ್ದವು. ಅವುಗಳಲ್ಲೊಂದು ಪ್ರಸಿದ್ಧವಾದ ಮಠ ಅರಳೆಪೇಟೆಯ ದೇಶದ ಮಠ. ಮಠದೊಳಗಿನ ಕರ್ತೃ ಗದ್ದುಗೆಯ ರಚನಾ ವಿನ್ಯಾಸ ಹಾಗೂ ಅದರ ಹೊರಭಾಗದ ಸೂರಿನ ಚಂದ್ರಿಕೆಯೊಳಗಿರುವ ಶಿಲ್ಪ ಮಾದರಿಗಳನ್ನು ಗಮನಿಸಿದರೆ, ನಗರದ ಪ್ರಾಚೀನ ದೇಗುಲಗಳಷ್ಟೇ ಈ ಮಠವೂ ಪ್ರಾಚೀನವಾದದ್ದೆನಿಸುತ್ತದೆ. ಮುಜರಾಯಿ ಇಲಾಖಾ ದಾಖಲೆಗಳಲ್ಲಿ ಈ ಮಠವನ್ನು 'ದಾಸೋಹದಮಠ'ವೆಂದೂ ಕರೆಯಲಾಗಿದೆ. ಹಿಂದೆ ಪ್ರತಿ ಶುಕ್ರವಾರ ಮಠದಲ್ಲಿ ಅವರೆಕಾಳಿನ ಹುಳಿ ಹಾಗೂ ರಾಗಿ ಹಿಟ್ಟಿನ ವಿಶೇಷ ದಾಸೋಹ ಸೇವೆ ನಡೆಯುತ್ತಿತ್ತಂತೆ.[5]

ಅರಳೆಪೇಟೆಯ ಈಗಿನ ಹಳೆಯ ತಾಲ್ಲೂಕು ಕಛೇರಿ ರಸ್ತೆಯಲ್ಲಿರುವ ಕೆವಕಲ್ ಮಸ್ತಾನ್ ಸಾಹೇಬರ ದರ್ಗದ ಎದುರಿಗಿರುವುದೇ ದೇಶದಮಠ. ಸರಿಸುಮಾರು ಅರ್ಧ ಎಕರೆಯಷ್ಟು ವಿಸ್ತೀರ್ಣದ ಭಾಗವುಳ್ಳ ಮಠದ ಆವರಣದ ಮುಂಭಾಗಕ್ಕೆ ಉತ್ತರಾಭಿಮುಖವಾಗಿ ಕರ್ತೃಗದ್ದುಗೆ ಇದೆ. ಇದರ ರಚನಾ ವಿನ್ಯಾಸವನ್ನು ಗಮನಿಸಿದರೆ ಕ್ರಿ.ಶ. ೧೭೫೦ರ ಸುಮಾರಿಗೆ ಈ ಮಠವು ಪ್ರಾರಂಭವಾಗಿದ್ದಿರ ಬೇಕೆನಿಸುತ್ತದೆ. ೧೮೨೨ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಬೆಂಗಳೂರು ತಾಲ್ಲೂಕು ಯಶವಂತಪುರ ಹೋಬಳಿ ಕೇತಮಾರನಹಳ್ಳಿ ಗ್ರಾಮದ ಬಳಿ ಈ ಮಠಕ್ಕಾಗಿ ಎರಡು ಕೊಳಗದ ಬೀಜವರಿಯ ಇನಾಂ ಜಮೀನನ್ನು ದಯಪಾಲಿಸಿದ್ದರು.[6] ೧೮೪೦ರ ವರೆಗೂ ಈ ಮಠದಲ್ಲಿ ಆಗಿ ಹೋದ ಮಠಾಧಿಪತಿಗಳ ಬಗೆಗೆ ಮಾಹಿತಿ ಲಭ್ಯವಾಗಿಲ್ಲ. ಮುಂದೆ ೧೮೪೫ರಿಂದ ೧೮೭೮ರ ವರೆಗೂ ಮುರಿಗೆದೇವರು ಎಂಬ ಮಠಾಧೀಶರು ದೇಶದ ಮಠದ ಅಧಿಪತಿಗಳಾಗಿದ್ದುದಕ್ಕೆ ಆಧಾರಗಳಿವೆ.[7] ಇವರು ೧೮೭೪ರ ವರೆಗೂ ಸ್ಥಳೀಯ ಭಕ್ತರ ಆಚಾರ-ವಿಚಾರಗಳ ಕರ್ತರಾಗಿ ಚಿತ್ರದುರ್ಗ ಸಂಸ್ಥಾನದ ಪ್ರತಿನಿಧಿಗಳಾಗಿದ್ದರು.[8] ಆದ್ದರಿಂದ ಅರಳೆಪೇಟೆಯ ದೇಶದಮಠವು ಮುರಿಗಾ ಸಮಯಕ್ಕೆ ಸೇರಿದ ವಿರಕ್ತ ಪರಂಪರೆಯ ಮಠವಾಗಿತ್ತೆಂದು ಸುಲಭವಾಗಿ ಊಹಿಸಬಹುದಾಗಿದೆ. ಮುರಿಗೆದೇವರು ದೇಶದ ಮಠದ ಅಧಿಪತಿಗಳಾಗಿದ್ದಾಗ ಇವರು ಬೆಂಗಳೂರುಪಟ್ಟಣದ ಪರವಾಗಿ ಮುರಿಗಾ ಸಂಸ್ಥಾನದ ಪ್ರತಿನಿಧಿ ಪಟ್ಟವನ್ನೂ ಅಲಂಕರಿಸಿದ್ದುದಕ್ಕಾಗಿ ಇವರನ್ನು ವಿಶೇಷವಾಗಿ ದೇಶಿಕೇಂದ್ರರೆಂದೇ ಕರೆಯಲಾಗುತ್ತಿತ್ತು.[9]

ಮುಂದೆ ೧೮೭೦ರ ನಂತರ ನಂಜುಂಡಸ್ವಾಮಿಗಳು ದೇಶದ ಮಠದ ಅಧಿಪತಿಗಳಾಗಿದ್ದರು. ಇವರು ಕಾಶಿಗೆ ಹೋಗಿ ಸಂಸ್ಕೃತದಲ್ಲಿ ಹೆಚ್ಚಿನ ಅಧ್ಯಯನ ನಡೆಸಿ ಬಂದಿದ್ದರು.[10] ಇವರಿಗೆ ವಿಶ್ವಾರಾಧ್ಯ ಪರಂಪರೆಯ ಸಿಂಹಾ-ಸನಾಧಿಪತಿಗಳಾಗಿದ್ದ ವೀರಭದ್ರಸ್ವಾಮಿಗಳೂ ಹಾಗೂ ತುಮಕೂರಿನ ಮಠಮಹಾಂತು ಘಂಟೆದೇವರ ಮಠದ ಸಿದ್ಧಯ್ಯಸ್ವಾಮಿಗಳೂ ಇನ್ನೂ ಮುಂತಾದ ಪಟ್ಟಾಧ್ಯಕ್ಷರುಗಳೊಂದಿಗೆ ವಿಶೇಷವಾದ ಸಂಪರ್ಕವಿತ್ತು.[11] ೧೮೮೫ರ ವರೆಗೂ ಇವರ ಕಾಲದ ವ್ಯವಹಾರಪತ್ರಗಳು ಲಭ್ಯವಾಗಿವೆ.

ಇವರ ಜೀವಿತಾವಧಿಯಲ್ಲೇ 'ಅರಳೇಪೇಟೆ ದೇಶದಮಠದ ಚನ್ನಶೆಟ್ಟಿ'ಯವರ ಹೆಸರಿನಲ್ಲಿ "ಶಿಖಾರತ್ನ ಪ್ರಕಾಶವು" (೧೮೮೩ರಲ್ಲಿ), ಮತ್ತು "ನಿಃಕಲರ ವಚನಗಳು"[12] (೧೮೮೫ರಲ್ಲಿ) ಎಂಬ ವಚನ ಸಂಗ್ರಹ ಗ್ರಂಥಗಳು ಪ್ರಕಟವಾಗಿವೆ. ಬಹುಶಃ ಈ ವೇಳೆಗೆ ಚನ್ನಶೆಟ್ಟಿಯವರು ದೇಶದಮಠದ ಏಜಂಟರಾಗಿದ್ದಿರಬೇಕು. ನಂಜುಂಡ ಸ್ವಾಮಿಗಳ ತರುವಾಯ ಮಠಾಧಿಪತಿಗಳಾರೂ ಇಲ್ಲವಾಗಿ, ದೇಶದಮಠದ ಮುಂದಿನ ಯಜಮಾನಿಕೆಯು ಚನ್ನಶೆಟ್ಟಿಯವರ ವಂಶಸ್ಥರಲ್ಲೇ ಉಳಿಯುತ್ತದೆ.[13]

೧೯೨೧ರಲ್ಲಿ ಮಠದ ಹೆಸರಿಗಿದ್ದ ಕೇತಮಾರನಹಳ್ಳಿಯ ಸರ್ವೆ ನಂ : ೧೨೩ರಲ್ಲಿದ್ದ[14] ಒಂದು ಭಾಗದ ೨ ಎಕರೆ ೨೪ ಗುಂಟೆ ಇನಾಂ ಜಮೀನಿನಲ್ಲಿ ಕೊಂಚಭಾಗವನ್ನು ಮುನಿಸಿಪಲ್ ಬೋರ್ಡಿನವರು ನೂತನ ರಸ್ತೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡಿದ್ದರು. ಇದರ ಬಾಬ್ತು ಬಂದಿದ್ದ ಪರಿಹಾರಧನವನ್ನು ದೇಶದಮಠದ ಉಸ್ತುವಾರಿ ಮಾಡುತ್ತಿದ್ದ ದಾಯಾದಿಗಳ ಜಗಳದಲ್ಲಿ ಅಮಾನತ್ತು ಪಡಿಸಲಾಗಿತ್ತು.[15]

ಬೆಂಗಳೂರು ಡೆಪ್ಯೂಟಿ ಕಮೀಷನರವರ ವರದಿಯ ಪ್ರಕಾರ ೧೯೧೯ರ ವೇಳೆಗೆ ದೇಶದಮಠ ಹಾಗೂ ಅದರ ಇನಾಂತಿ ಜಮೀನನ್ನು ಮೇಲ್ಕಂಡ ಚನ್ನಶೆಟ್ಟರ ಸೋದರ ಸಂಬಂಧಿ ಗಂಗಶೆಟ್ಟರ ಮಗ ಚನ್ನಬಸಪ್ಪ ಎಂಬುವರು ನೋಡಿಕೊಳ್ಳುತ್ತಿದ್ದರು. ಮಠಕ್ಕೆ ಸೇರಿದ ಇತರೆ ವಾಸದ ಮನೆ ಹಾಗೂ ಅಂಗಡಿಗಳೂ ಸೇರಿದಂತೆ ಎಂಟು ಬೇರೆ ಬೇರೆ ಸ್ವತ್ತುಗಳನ್ನು ಗಂಗಶೆಟ್ಟರ ಮಗನಾದ ಅಪ್ಪಯ್ಯ ಶೆಟ್ಟರ ಮಕ್ಕಳು (ಗಂಗಪ್ಪ, ಹೊನ್ನಗಂಗಪ್ಪ, ಪುಟ್ಟಪ್ಪ) ನೋಡಿಕೊಳ್ಳುತ್ತಿದ್ದರು. ೧೯೩೪ರಲ್ಲಿ ಮಠ ಮತ್ತು ಮಠದ ಇನಾಂತಿಯನ್ನು ನಿರ್ವಹಿಸುತ್ತಿದ್ದ ಚನ್ನಬಸಪ್ಪನವರ ಮಗನಾದ ಗಂಗಶೆಟ್ಟಿಯು (ಅವಿವಾಹಿತ) ಮೃತಪಟ್ಟನು. ಆಗ ಚನ್ನಬಸಪ್ಪನವರ ತಂಗಿಯ ಮಗ ಬಸಪ್ಪನವರ ಶಂಕರಪ್ಪ ಸದರಿ ಮಠದ ಆಸ್ತಿಗಳಿಗೆ ವಾರಸುದಾರನಾದನು. ಇನ್ನುಳಿದ ಇತರೆ ಆಸ್ತಿಗಳಿಗೆ ಅಪ್ಪಯ್ಯಶೆಟ್ಟರ ಹಿರಿಯ ಮಗನ ಮಗ ಚನ್ನಶೆಟ್ಟಿ ಹಾಗೂ ಈತನ ಚಿಕ್ಕಪ್ಪ ಹೊನ್ನಗಂಗಪ್ಪ ಇವರುಗಳು ವಾರಸುದಾರರಾದರು.[16] ಇನಾಂತಿ ಜಮೀನಿನ ಪರಿಹಾರಾರ್ಥವಾಗಿ ಹುಟ್ಟಿಕೊಂಡ ಇವರ ದಾಯಾದಿ ಕಲಹ ೧೯೩೭ರ ವೇಳೆಗೆ ಸಾಕಷ್ಟು ವಿವಾದಗಳಿಗೆ ಅವಕಾಶಮಾಡಿಕೊಟ್ಟಿತ್ತು. ಕೊನೆಗೆ ದಿ: ೯.೮.೧೯೩೮ರಲ್ಲಿ ರಾಜಿಸೂತ್ರದೊಂದಿಗೆ ಉಭಯರೂ ಒಂದು ತೀರ್ಮಾನಕ್ಕೆ ಬಂದರು. ಆ ಪ್ರಕಾರ ಬಸಪ್ಪನವರ ಶಂಕರಪ್ಪನವರಿಂದ ೨೦೦೦/ರೂ ಪರಿಹಾರಧನವನ್ನು ಪಡೆದ ಚನ್ನಶೆಟ್ಟಿ ಮತ್ತು ಹೊನ್ನಗಂಗಪ್ಪ ಇವರು ತಮ್ಮ ಸ್ವಾಧೀನಾನುಭವದಲ್ಲಿದ್ದ ವಿಶಿಷ್ಟ ಆಸ್ತಿಗಳನ್ನೂ ಅವರಿಗೆ ಒಪ್ಪಿಸಿದರು.[17] ಹೀಗಾಗಿ ೧೯೩೮ರ ಅಂತ್ಯದ ವೇಳೆಗೆ ದೇಶದಮಠ, ಮಠದ ಇನಾಂತಿ ಜಮೀನು ಹಾಗೂ ಮಠದ ಇತರೆ ಆಸ್ತಿಗಳಾಗಿದ್ದ[18] ಅರಳೆಪೇಟೆ, ಮಾಮೂಲುಪೇಟೆ ಮತ್ತು ದೊಡ್ಡಪೇಟೆಗಳಲ್ಲಿದ್ದ ವಾಸದ ಮನೆ ಹಾಗೂ ಅಂಗಡಿ ಮನೆಗಳೆಲ್ಲವೂ ಶಂಕರಪ್ಪನವರ ಸ್ವಾಧೀನಕ್ಕೆ ಬಂದವು.

ಹೀಗೆ ಮಹಾರಾಜರಿಂದ ಮಾನ್ಯವನ್ನು ಪಡೆದು, ಚಿತ್ರದುರ್ಗ ಸಂಸ್ಥಾನದ ಪ್ರಾತಿನಿಧ್ಯವನ್ನು ವಹಿಸಿದ್ದ ಅರಳೇಪೇಟೆಯ ದೇಶದಮಠವು ೧೯೩೫ರ ವೇಳೆಗೆ ಸಂಪೂರ್ಣವಾಗಿ ಖಾಸಗಿ ಸ್ವತ್ತಾಗಿ ದಾಯಾದಿ ಕಲಹಗಳ ಕೇಂದ್ರ ಬಿಂದುವಾಗಿತ್ತು. ಸದ್ಯಕ್ಕೆ ಮಠದ ಆವರಣದ ಭಾಗ ಮತ್ತು ಅದರೊಳಗಿನ ಮನೆ ಮಠಗಳನ್ನು ಬಿಟ್ಟರೆ ಮಿಕ್ಕುಳಿದ ಆಸ್ತಿಗಳೆಲ್ಲಾ ಕೈಬಿಟ್ಟು ಹೋಗಿವೆ. ಮಠದ ಸುತ್ತಮುತ್ತಲ ವಠಾರಗಳಿಂದಾಗಿ ಇರುವುದೊಂದು ಸುಂದರವಾದ ಗದ್ದುಗೆ ಕೂಡ ಮುಚ್ಚಿಹೋಗುವ ಸಾಧ್ಯತೆಗಳಿವೆ. ಮಠದ ಉತ್ತರ ಭಾಗಕ್ಕಿದ್ದ ಪ್ರವೇಶ ದ್ವಾರದ ಮೇಲಿನ ಬಸವಮೂರ್ತಿಯನ್ನು ನಾಶಮಾಡಲಾಗಿದೆ. ಒಳಭಾಗದಲ್ಲಿದ್ದ ಸುಂದರ ಕಲ್ಯಾಣಿಯನ್ನು ಮುಚ್ಚಿಹಾಕಲಾಗಿದೆ. ಒಟ್ಟಾರೆ ಮಠದ ಗತವೈಭವದ ಲಕ್ಷಣಗಳೆಲ್ಲಾ ಈಗ ನಾಶವಾಗಿವೆ. ಸದ್ಯಕ್ಕೆ ಅಳಿದುಳಿದಿರುವ ದೇಶದ ಮಠದ ಆಸ್ತಿಯು ಗಂಗಪ್ಪ[19] ಎಂಬುವರ ಉಸ್ತುವಾರಿಯಲ್ಲಿರುತ್ತೆ. ನಗರ ಭೂದಾಖಲಾತಿ ಇಲಾಖೆಯ ಲೆಕ್ಕದಲ್ಲಿ 'ದೇಶದಮಠ, ಚನ್ನಶೆಟ್ಟಿ ಧರ್ಮದರ್ಶಿ' ಎಂದು ನಮೂದಿಸಲ್ಪಟ್ಟು. ೨೦೮೬.೬ ಚದರಗಜ-ವಿಸ್ತೀರ್ಣದ ಆಸ್ತಿ ಎಂದು ನಮೂದಿಸಲಾಗಿದೆ.[20].

**ದೇಶದಮಠದ ಗುರು ಪರಂಪರೆ :**

೧. ಮುರಿಗೆ ದೇವರು. ೧೮೪೫–೧೮೬೮.

೨. ನಂಜುಂಡಸ್ವಾಮಿಗಳು. ೧೮೭೦–೧೮೮೫.

## ಅಡಿಟಿಪ್ಪಣಿಗಳು

1. ಅರಳೆಪೇಟೆಯ ಮಹತ್ವ. (ಪ್ರ)ಅರಳೆಪೇಟೆ ದೇವಸ್ಥಾನಗಳ ಟ್ರಸ್ಟ್. ಪು. ೩, ೬.
2. ಮೈಸೂರು ಸಂಸ್ಥಾನದ ಚೀಫ್ ಕಮೀಷನರವರಿಗೆ ಅರಳೆಪೇಟೆಯ ಶಿವಾಚಾರದ ಮತಸ್ಥರು ಬರೆದುಕೊಂಡ ಮನವಿ ಅರ್ಜಿ. ದಿ:೨೪.೧೧.೧೮೭೯.
3. ಜೀರಗೆ ಕಟ್ಟೆಬಸವಪ್ಪ. ಅರಳೆಪೇಟೆಯ ಮಹತ್ವ. ಪೂರ್ವೋಕ್ತ. ಪು. ೧೩.
4. ಮೇಲ್ಕಂಡ ಮೂರು ದೇಗುಲಗಳಿಗೂ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲ (೧೮೨೨)ದಲ್ಲಿ ಇನಾಂ ಜಮೀನುಗಳನ್ನು ನೀಡಲಾಗಿತ್ತು ಎಂಬುದಾಗಿ ರುದ್ರಗುಡಿಯ ಇನಾಂ ಜಮೀನಿನ ಸಾಗುವಳಿ ಕರಾರು ಪತ್ರ ಒಂದ (೧೮೭೯)ರಲ್ಲಿ ಸೂಚಿಸಲಾಗಿದೆ.
5. Muzrai File No : 291/1941. Sl.No: 1-9. P. 45, 46.
6. Register of Muzrai Institutions Endowed with Inam Lands in the Bangalore Taluk. dt : 31.12.1902. P-180, 181.
7. ಪಿ.ಎಂ. ಗಿರಿರಾಜು. ಚರಮೂರ್ತಿ ಶ್ರೀ ಗುರುಸಿದ್ಧಸ್ವಾಮಿಗಳ ಕೆಲವು ಐತಿಹಾಸಿಕ ಘಟನೆಗಳು. ಸರ್ಪಭೂಷಣಶ್ರೀ. ಸಂ : ಜಿ.ವಿ. ಶಿವಸ್ವಾಮಿ ಮತ್ತು ಎಚ್.ಎಸ್. ಸಿದ್ಧಗಂಗಪ್ಪ. ಪು. ೬೫, ೬೬.
8. ಅದೇ. ಪು. ೬೬.
9. ದೇಶದ ಮಠದ ನಂಜುಂಡಸ್ವಾಮಿಗಳಿಗೆ ಬರುತ್ತಿದ್ದ ಕಾಗದ ಪತ್ರಗಳಲ್ಲಿ ಈ ಉಲ್ಲೇಖವಿದೆ. ಅಲ್ಲಿರುವಂತೆ "ಶ್ರೀಮತ್ಪರಮ...ಪ್ರಭುದೇವರ ಪರಂಪರಾಗತ ದೇಶಿಕೇಂದ್ರ ಕರಸಂಜಾತರಾದ.....ನಂಜುಂಡದೇವಾ...." ಎಂದಿದೆ. (ಕ್ರಿ.ಶ.೧೮೮೨ರಲ್ಲಿ ನಂಜುಂಡದೇವರಿಗೆ ಬಂದಿರುವ ಒಂದು ಪತ್ರ)
10. ಸಂಕೇಶ್ವರದ ಭೂಸಪ್ಪಣ್ಣ ವಂಟಮುತ್ತಿಯವರು ನಂಜುಂಡದೇವರಿಗೆ ಬರೆದಿರುವ ಪತ್ರ. ಚಿತ್ರಭಾನು ಸಂವತ್ಸರ (ಕ್ರಿ.ಶ. ೧೮೮೨) ಮಾರ್ಗಶಿರ ಶುದ್ಧ ೨.
11. ದಿ : ೧೫.೯.೧೮೮೫ರಲ್ಲಿ ಬನಾರಸ್‌ನಿಂದ ಬಂದಿರುವ ಪತ್ರ ಮತ್ತು ೧೮೮೭ರಲ್ಲಿ ತುಮಕೂರಿಂದ ಬಂದಿರುವ ಪತ್ರಗಳು.
12. ಇವೆರಡೂ ಕೃತಿಗಳು ಉಪಲಬ್ದವಾಗಿವೆ.
13. Muzrai File No : 291/1941. Sl.No: 1-9. P.26.
14. ಇದೇ ಸರ್ವೆನಂಬರಿನಲ್ಲಿ ಇನ್ನೊಂದು ಭಾಗದ ಇನಾಂ ಜಮೀನು ೪ ಎಕರೆ, ೨೪ ಗುಂಟೆ ದೊಡ್ಡ ಮಠಕ್ಕೆಸೇರಿತ್ತು.
15. ಬೆಂಗಳೂರು ತಾಲ್ಲೂಕು ಕಛೇರಿಗೆ ಪುಟ್ಟಪ್ಪನು ಬರೆದುಕೊಂಡಿರುವ ಮನವಿ ಪತ್ರ. ದಿ : ೨೪.೧೦.೧೯೨೧.
16. Muzrai File No : 291/1941. Sl.No: 1-9. P. 37, 38.
17. ಏಳೂವರೆ ರೂ. ಛಾಪಾಕಾಗದ. ರಿ.ನಂ. : ೩೫೬. ವಾಲ್ಯುಂ-೪೩೦. ಪು. ೧೨-೨೧. ದಿ : ೧೫.೮. ೧೯೩೮.
18. ಮಠದ ಇತರ ಆಸ್ತಿಗಳಾವುವೆಂದರೆ- ಅರಳೆಪೇಟೆಯ ತೋಟದದೇವರ ಗಲ್ಲಿಯಲ್ಲಿದ್ದ ಮುನಿಸಿಪಲ್ ಡೋರ್ ನಂ : ೧೦, ೨೧, ೨/೨೧ನೆಯ ವಾಸದ ಮನೆಗಳು; ಮಾಮೂಲುಪೇಟೆಯ ಬೆಳ್ಳಿ ಬಸವಣ್ಣನಗುಡಿ ರಸ್ತೆಯಲ್ಲಿ ಮುನಿಸಿಪಲ್ ಡೋರ್ ನಂ : ೧೨೨, ೧೨೩ನೆಯ ಎರಡು ಮನೆಗಳು ಹಾಗೂ ೧೦೫ನೇ ನಂಬರಿನ ಒಂದು ಗಡಂಗು (ಗೋದಾಮು) ಮತ್ತು ೧೦ನೇ ನಂಬರಿನ ಒಂದು ಅಂಗಡಿ; ದೊಡ್ಡಪೇಟೆಯ ಅಕ್ಕಿ, ಬೇಳೆ ಅಂಗಡಿ ಸಾಲಿನಲ್ಲಿ ಮುನಿಸಿಪಲ್ ಡೋರ್ ನಂ : ೩೭೯ರ ಅಂಗಡಿ ಒಂದು ಹಾಗೂ ಅದಕ್ಕೆ ಸೇರಿದ ಮನೆ; ಹಾಗೂ ನಾರಾಯಣಶೆಟ್ಟಿ ಗಲ್ಲಿಯ ಡೋರ್ ನಂ : ೬ರ ಮಾಳಿಗೆ ಮನೆ ಮತ್ತು ಇವುಗಳಿಗೆ ಸೇರಿದ ವಿಶಿಷ್ಟ ಆಸ್ತಿಗಳೆಲ್ಲಾ ದೇಶದ ಮಠಕ್ಕೆ ಸೇರಿದ್ದವು. (ಏಳೂವರೆ ರೂ ಛಾಪಾಕಾಗದದಲ್ಲಿ ಇರುವಂತೆ)
19. ಗಂಗಪ್ಪನವರು (೬೨) ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಭೂಗರ್ಭ ಶಾಸ್ತ್ರ ವಿಭಾಗದ ಪ್ರಾಚಾರ್ಯರಾಗಿದ್ದು, ನಿವೃತ್ತರಾಗಿದ್ದಾರೆ. ಮಠದ ಆಸ್ತಿಗೆ ಹಕ್ಕುದಾರರಾಗಿರುವ ಇವರು ಸದರಿ ವಿಚಾರವಾಗಿ ಏನನ್ನೂ ಹೇಳಲು ಇಚ್ಛೆ ಪಡುವುದಿಲ್ಲ. ಮಠದ ಗದ್ದುಗೆಗೆ ಈಗ ಸಾರ್ವಜನಿಕರ ಪ್ರವೇಶವನ್ನು ನಿಲ್ಲಿಸಲಾಗಿದೆ.
20. ನಗರ ಭೂಮಾಪನಾ ಇಲಾಖೆ. ೨ನೇ ವಿಭಾಗ. ಸ್ಥಳೀಯ ಕ್ಷೇತ್ರದ ಸಂಖ್ಯೆ : ೮೧ಎ. ಚಿಕ್ಕಪೇಟೆ ವಿಭಾಗ. ಕ್ರ.ಸಂ : ೧೬೮೨.

## ೮. ನಿರಂಜನದೇವರ ಮಠ, ಹನುಮಂತಪುರ

ಬೆಂಗಳೂರಿನಲ್ಲಿ ಅಜ್ಞಾತವಾಗಿ ಹೋದ ಅನೇಕ ವೀರಶೈವ ಮಠಗಳ ಸಾಲಿನಲ್ಲಿ ನಿರಂಜನದೇವರ ಮಠವೂ ಒಂದು. ಇದು ಈಗಿನ ನಗರದೇವತೆ ಅಣ್ಣಮ್ಮನ ಗುಡಿಗೆ ಹಿಂಭಾಗದ ಪ್ರದೇಶದಲ್ಲಿದ್ದುದಾಗಿ ಈಗಲೂ ಕೆಲವು ಹಳೆಯ ತಲೆಮಾರಿನ ಜನಗಳು ಹೇಳುತ್ತಾರೆ.[1] ಶಾಲಿವಾಹನ ಶಕ ೧೭೭೦ರ ಕೀಲಕ ಸಂವತ್ಸರದ ದಾಖಲೆಯೊಂದರ ಪ್ರಕಾರ ಕ್ರಿ.ಶ. ೧೮೪೮ರ ವೇಳೆಗೆ ಈ ಮಠದಲ್ಲಿ ಗುರುಮಲ್ಲದೇವರು ಎಂಬ ಗುರುಗಳಿದ್ದುದಾಗಿ ತಿಳಿದು ಬರುತ್ತದೆ.[2] ಸದರಿ ದಾಖಲೆಯ ಸೂಚನೆಯಂತೆ ನಿರಂಜನದೇವರ ಮಠವು ಮುರಿಗಾ ಸಮಯಕ್ಕೆ ಸೇರಿದ ವಿರಕ್ತಮಠವಾಗಿತ್ತು.

೧೯೦೦ರ ವೇಳೆಗೆ ಈ ಮಠದಲ್ಲಿ ನಿರಂಜನಸ್ವಾಮಿ ಎಂಬ ಗುರುಗಳಿದ್ದರು.[3] ೧೯೧೧ರ ಕೆಲವು ಕೋರ್ಟು ದಾಖಲೆಗಳ ಪ್ರಕಾರ ಈ ಮಠಕ್ಕೆ ಬರಗೆಮುದ್ದನಹಳ್ಳಿ ಗ್ರಾಮದಲ್ಲಿ (ಜಕ್ಕರಾಯನಕೆರೆ ಸಮೀಪ) ಸರ್ವೆ ನಂ : ೨೭ರಲ್ಲಿ ೨ ಎಕರೆ ೧೫ ಗುಂಟೆ ಹಾಗೂ ಸರ್ವೆ ನಂ : ೧ರಲ್ಲಿ ತೋಟ ೨ ಎಕರೆ ೨೧ ಗುಂಟೆಯ ಇನಾಂ ಜಮೀನುಗಳಿದ್ದುದಾಗಿಯೂ ತಿಳಿದುಬರುತ್ತದೆ[4]. ಸದ್ಯಕ್ಕೆ ಈ ಮಠ ಬೆಂಗಳೂರಿನಲ್ಲಿ ಹೇಳ ಹೆಸರಿಲ್ಲದಂತಾಗಿದೆ. ಬಹುಶಃ ಮೇಲಿನ ಅಂಶಗಳನ್ನೆಲ್ಲಾ ಗಮನಿಸಿದಲ್ಲಿ, ನಿರಂಜನದೇವರ ಮಠವು ಕಳೆದ ಶತಮಾನದಲ್ಲಿ ಬೆಂಗಳೂರಿನಲ್ಲಿ ಮುರಿಗಾಸಮಯದ ಪ್ರಮುಖ ವಿರಕ್ತ ಮಠಗಳಲ್ಲೊಂದಾಗಿದ್ದು, ೧೯೨೦ರ ವೇಳೆಗೆ ಸಂಪೂರ್ಣವಾಗಿ ಅವಸಾನಗೊಂಡಿದ್ದಿತೆಂದು ಊಹಿಸಲಾಗಿದೆ.

---

**ಅಡಿಟಿಪ್ಪಣಿಗಳು**

1. ಹೇಳಿಕೆ : ವೈ.ಸಿ. ಬಸಪ್ಪ (೮೨) ಗಾಂಧಿನಗರ. ಬೆಂಗಳೂರು.
2. ಪಿ.ಎಂ. ಗಿರಿರಾಜು. ಚರಮೂರ್ತಿ ಶ್ರೀ ಗುರುಸಿದ್ಧಸ್ವಾಮಿಗಳ ಕೆಲವು ಐತಿಹಾಸಿಕ ಘಟನೆಗಳು. ಸರ್ಪಭೂಷಣಶ್ರೀ. ಸಂ : ಜಿ.ವಿ. ಶಿವಸ್ವಾಮಿ ಮತ್ತು ಎಚ್.ಎಸ್. ಸಿದ್ಧಗಂಗಪ್ಪ. ಪು. ೬೪.
3. ಸಿ.ವ. ಚನ್ನಬಸವೇಶ್ವರ. ಚೇಳ್ಳಗುರಿಕಿ ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ. (ಬಳ್ಳಾರಿ-೧೯೬೩). ಪು. ೬೨, ೬೩.
4. Judgement Order No : 28-55/1911-12. dt. 15.12.1911. Revenue Commissioner Court. Bangalore. P.87.

## ೨.೨. ಕೆಂಪಿನ ಸಮಯದ ಮಠಗಳು

ಕೆಂಪಿನ ಸಮಯವು ವಿರಕ್ತವರ್ಗದ ಐದು ಪ್ರಮುಖ ಸಮಯಭೇದಗಳಲ್ಲಿ ಒಂದು. ಬೆಂಗಳೂರಿನಲ್ಲಿ ವಿರಕ್ತವರ್ಗದ ಪರವಾಗಿ ಮುರಿಗಾಸಮಯದ ಮಠಗಳನ್ನು ಬಿಟ್ಟರೆ ಕೆಂಪಿನ ಸಮಯದ ಮಠಗಳೂ ಕೂಡ ಅವುಗಳಷ್ಟೇ ಕೀರ್ತಿ ಪ್ರತಿಷ್ಠೆಯುಳ್ಳ ಮಠಗಳಾಗಿದ್ದವು. ಈ ಶತಮಾನದ ಆರಂಭದ ವೇಳೆಗೆ ಬೆಂಗಳೂರು ಪಟ್ಟಣಕ್ಕೆ ಹೊಂದಿಕೊಂಡಂತೆ ಒಟ್ಟು ಏಳು ಕೆಂಪಿನ ಸಮಯಕ್ಕೆ ಸೇರಿದ ಮಠಗಳಿದ್ದುದಾಗಿ ತಿಳಿದು ಬರುತ್ತದೆ. ಅವುಗಳಾವುವೆಂದರೆ-

೧. ಬೇಲಿಮಠ - ಅಗ್ರಹಾರದ ಬಾಗಿಲು.

೨. ದೊಡ್ಡಮಠ - ಅಕ್ಕಿಪೇಟೆ.

೩. ಜಂಗಮಮಠ- ಶಿವನಹಳ್ಳಿ.

೪. ಕಂಬಿನಂಜಯ್ಯನಮಠ-ಬಳ್ಳಾಪುರದ ಪೇಟೆ.

೫. ಮುದ್ದಪ್ಪಸ್ವಾಮಿಮಠ-ನರಗುಂದದೇವರಮಠದ ಗಲ್ಲಿ.

೬. ನಂಬೆಣ್ಣನಮಠ-ತೋಟದದೇವರ ಗಲ್ಲಿ.

೭. ನಂಜಯ್ಯನ ಚೌಕಿಮಠ-ಅರಳೆಪೇಟೆ.

ಈ ಮೇಲ್ಕಂಡ ಮಠಗಳಲ್ಲಿ ಬೇಲಿಮಠ, ದೊಡ್ಡಮಠ ಹಾಗೂ ಶಿವನಹಳ್ಳಿ ಜಂಗಮಮಠಗಳು ತಮ್ಮ ಮೂಲ ಸ್ವರೂಪ ಹಾಗೂ ಧಾರ್ಮಿಕ ಚಟುವಟಿಕೆಗಳನ್ನು ಇಂದಿಗೂ ಮುನ್ನಡೆಸಿಕೊಂಡು ಬಂದಿವೆ. ಉಳಿದ ನಾಲ್ಕು ಮಠಗಳು ನಶಿಸಿಹೋಗಿದ್ದು ಅವುಗಳ ಚಾರಿತ್ರಿಕ ಹಿನ್ನೆಲೆಯು ಕಾಲಗರ್ಭದಲ್ಲಿ ಹುದುಗಿ ಹೋಗಿದೆ. ಮೇಲಿನ ಮೂರು ಮಠಗಳ ಪರವಾಗಿ ವಿಪುಲವಾದ ಮಾಹಿತಿಗಳು, ಆಕರ ಸಾಮಗ್ರಿಗಳು ಲಭ್ಯವಾಗಿದ್ದು, ಅವುಗಳ ಚಾರಿತ್ರಿಕ ನೋಟವನ್ನು ಕುರಿತು ಮುಂದೆ ವಿಶೇಷವಾಗಿ ಪರಿಚಯಿಸಲಾಗಿದೆ.

### ೧. ಬೇಲಿಮಠ, ಅಗ್ರಹಾರದ ಬಾಗಿಲು

ಬೆಂಗಳೂರಿನ ಈಗಿನ ರೈಲ್ವೆ ನಿಲ್ದಾಣಕ್ಕೆ ದಕ್ಷಿಣದ ತುತ್ತತುದಿಗೆ ಇರುವ ಅಡ್ಡರಸ್ತೆಯೇ ಬೇಲಿಮಠದ ರಸ್ತೆ. ಅರಳೆಪೇಟೆಗೆ ಹೊಂದಿಕೊಂಡಿರುವ ಈ ರಸ್ತೆಯಲ್ಲಿ ಬಿನ್ನಿಮಿಲ್ಲಿನ ಬಲಭಾಗಕ್ಕಿರುವುದೇ ಈಗಿನ ಬೇಲಿಮಠ. ಹಿಂದೆ ಬೆಂಗಳೂರು ಪಟ್ಟಣದ ಸುತ್ತಲೂ ಇದ್ದ ರಕ್ಷಣಾ ಕೋಟೆಗೆ ಪಶ್ಚಿಮ ದಿಗ್ಭಾಗದಲ್ಲಿ ಮೂರು ಬಾಗಿಲುಗಳಿದ್ದವು.[1] ಇವುಗಳಲ್ಲಿ ಮಧ್ಯದ ಅಗ್ರಹಾರದ ಬಾಗಿಲಿಗೆ ಸಮೀಪ ಈ ಮಠವಿತ್ತು. ಕೋಟೆಗೆ ರಕ್ಷಣಾರ್ಥವಾಗಿ ಹೊರಭಾಗದಲ್ಲಿ ಹಬ್ಬಿಸಿದ್ದ ಅಭೇದ್ಯ ಸೀಗೆ ಬೇಲಿಗೆ[2] ಹೊಂದಿಕೊಂಡಂತೆ ಈ ಮಠವಿದ್ದುದರಿಂದ ಹಿಂದೆ ಇದು 'ಸೀಗೆಬೇಲಿಮಠ'ವೆಂದೇ ಪ್ರಸಿದ್ಧಿಯಾಗಿತ್ತು.

ಬೇಲಿಮಠದ ಪ್ರಾಚೀನತೆಯನ್ನು ಕುರಿತು ಚರ್ಚಿಸುವಾಗ ನಮಗೆ ದೊರಕುವ ಮೊಟ್ಟಮೊದಲ ದಾಖಲೆ ಕ್ರಿ.ಶ. ೧೭೬೧ರ ವಿಷು ಸಂವತ್ಸರದ ಶಿಲಾ ಶಾಸನ.[3] ಇದರ ಜೊತೆಗೆ ಮತ್ತೊಂದು ಅಮೂಲ್ಯ ದಾಖಲೆ ಕ್ರಿ.ಶ. ೧೭೫೦ರ ಪ್ರಮೋಧೂತ ಸಂವತ್ಸರದಲ್ಲಿ ರಚಿತವಾಗಿರುವ ಹೋದಿಗೆರೆ ಮುರುಗೇಂದ್ರಪ್ಪನವರ ಪತ್ರದಲ್ಲೂ[4] ಬೇಲಿಮಠದ ಪ್ರಸ್ತಾಪವಾಗಿದೆ. ಇವೆರಡು ಬಲವಾದ ಆಧಾರಗಳಿಂದ ಬೇಲಿಮಠವು ಕ್ರಿ.ಶ.೧೭೫೦ಕ್ಕಿಂತ ಮೊದಲೇ ಪ್ರಾರಂಭವಾಗಿತ್ತು ಎಂದು ಖಚಿತವಾಗಿ ಹೇಳಬಹುದಾಗಿದೆ. ಮುಂದೆ ಕ್ರಿ.ಶ. ೧೮೩೭ರ ಒಂದು ಪತ್ರದಲ್ಲಿ "ಷಟ್‌ಸ್ಥಲ ಚಕ್ರವರ್ತಿಗಳಾದ ಬೆಂಗಳೂರಿನ ಜಾಂನೂರ ಚನ್ನಮಲ್ಲಪ್ಪನ ಭಕ್ತಿಯ ಸೀಗೆ ಬೇಲಿಮಠದ ಚರಮೂರ್ತಿಗಳಾದ ಕೆಂಪನಂಜೆ ಸ್ವಾಮಿ...[5]" ಎಂಬ ಮಾತುಗಳಿವೆ. ಬಹುಶಃ ಈ ಉಲ್ಲೇಖನವನ್ನು ಗಮನಿಸಿದರೆ ಬೆಂಗಳೂರಿನ ಜಾಂನೂರ ಚನ್ನಮಲ್ಲಪ್ಪ ಎಂಬುವರು ಕ್ರಿ.ಶ. ೧೭೫೦ಕ್ಕಿಂತ ಹಿಂದೆ (ಸುಮಾರು ೧೭೪೫ರ ವೇಳೆಗೆ) ಈ ಮಠವನ್ನು ಕಟ್ಟಿಸಿಕೊಟ್ಟಿರಬೇಕೆಂದು ಊಹಿಸಲು ಅವಕಾಶವಿದೆ.

ಬೇಲಿಮಠದಲ್ಲಿರುವ ಶಿಲಾಶಾಸನದಿಂದ ಅನೇಕ ಅಂಶಗಳು ಬೆಳಕಿಗೆ ಬರುತ್ತವೆ. ಅದರ ಪಾಠಭಾಗ ಹೀಗಿದೆ-

> **"ಶ್ರೀಮತು ಶಿವಾನುಭಾವಿಗಳಾದ ಹೊಸಕೋಟೆಯ**
> **ಮಹಂತೇಶ್ವರ ಪ್ರಭುಲು ವಿಸು ಸಂವತ್ಸರ।**
> **ದ ಮಾರ್ಗಶಿರ ಮಾಸ ಶುದ್ಧ ಪಂಚಮಿಯ**
> **ಸೋಮವಾರದಲ್ಲಿ ಶಿವಯೋಗದೊಳು ನೆಲೆಸಿ।**
> **ದ ಶೂನ್ಯ ಸಿಂಹಾಸನದ ಮೇಲಣ ಅನುಭವ ಮಂಟಪ**
> **ಪಾಲ್ಗುಣದಲ್ಲಿ ನಿರ್ಮಿತವಾಯ್ತು।**

ಶ್ರೀಮತು ಷಡುಸ್ತ್ಥಲ ಚಕ್ರವರ್ತಿಯೆನ್ನೊಡೆಯ
ಹೊಸಕೋಟೆಯ ಮಹಂತ ಮೂರ್ತಿಯ ಪಾದಾ।
ಂಬುಜ ಭೃಂಗ ಮರಿಸಿದ್ಧಲಿಂಗ ದೇಸಿಕ ರಚಿತ ಮುಕ್ತಿ
ಮಂಟಪ ಕುಸುಮ ತವಚರಣ ಸಮರ್ಪಣಂ।''[6]

ಅಂದರೆ- ಶ್ರೀಮತ್ ಶಿವಾನುಭಾವಿಗಳಾಗಿದ್ದ ಹೊಸಕೋಟೆಯ ಮಹಂತೇಶ್ವರ ಪ್ರಭುಗಳು ಕ್ರಿ.ಶ. ೧೭೬೧ರ ವಿಷು ಸಂವತ್ಸರದ ಮಾರ್ಗಶಿರ ಮಾಸದ ಶುದ್ಧ ಪಂಚಮಿ ಸೋಮವಾರದಂದು ಲಿಂಗೈಕ್ಯರಾಗಿರುತ್ತಾರೆ. ಅವರ ಗದ್ದುಗೆ (ಶೂನ್ಯಸಿಂಹಾಸನ)ಯ ಮೇಲೆ ಅನುಭವ (ಬಸವ) ಮಂಟಪ[7]ವನ್ನು ಮುಂದಿನ ಪಾಲ್ಗುಣದಲ್ಲಿ ನಿರ್ಮಿಸಲಾಯಿತು. ಶ್ರೀಮತ್‌ಷಟ್‌ಸ್ಥಲ ಚಕ್ರವರ್ತಿಗಳಾದ ಹೊಸಕೋಟೆಯ ಮಹಂತಸ್ವಾಮಿಗಳ ಪಾದಸೇವಕರಾದ ಮರಿಸಿದ್ಧಲಿಂಗದೇಶಿಕರು ಈ ಮುಕ್ತಿಮಂಟಪವನ್ನು ಕಟ್ಟಿಸಿ ಗುರುಗಳ ಪಾದಕ್ಕೆ ಸಮರ್ಪಿಸಿದ್ದಾರೆ. ಇಲ್ಲಿ ಹೊಸಕೋಟೆಯ ಮಹಂತಸ್ವಾಮಿಗಳ ಶಿಷ್ಯ ಮರಿಸಿದ್ಧಲಿಂಗ ದೇಶಿಕರ ಕಾಲ (ಕ್ರಿ.ಶ. ೧೭೬೧), ಹಾಗೂ ಈ ಗುರು-ಶಿಷ್ಯರಿಬ್ಬರೂ ಬೇಲಿಮಠಕ್ಕೆ ಸಂಬಂಧಪಟ್ಟವರು ಎಂಬ ವಿಚಾರಗಳು ಸ್ಪಷ್ಟವಾಗಿವೆ.

ಮರಿಸಿದ್ಧಲಿಂಗದೇಶಿಕರು ಸ್ವಯಂ ಕವಿಗಳಾಗಿದ್ದು 'ಮಾಲಾಟೀಕೆ', 'ಏಕೋತ್ತರ ಶತಸ್ಥಲ ವ್ಯಾಖ್ಯಾನ', 'ಮಹಂತಿನ ತಾರಾವಳಿ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಆ ಕೃತಿಗಳಲ್ಲೂ

''ವರ ಹೊಸಕೋಟೆಯ ಮಹಂತೇ
ಶ್ವರನು ಭವದೊಳಗೆ ಪೇಳ್ದ ಶಬ್ದ ಸಮೂಹನ
ಪರಿವಿಡಿಗಳಿಂದ ಸೇರಿಸಿ
ಬರೆದೆ ಮರಿಸಿದ್ಧಲಿಂಗದೇಶಿಕ ದೇವಂ।''[8]

''ಶಿವಾನುಭಾವಿಗಳಾದ ಹೊಸಕೋಟೆಯ
ಮಹಾಂತಸ್ವಾಮಿಯವರ ವಂಶೋದ್ಭವ
ರಾದ ಮರಿಸಿದ್ಧಲಿಂಗಯ್ಯನವರು
ಬರಸಿದ ಸ್ಥಳದ ವ್ಯಾಖ್ಯಾನದ ಯಥಾಪ್ರತಿಯು''[9]

''ಧರೆಯೊಳು ಗುರುಮಹಂತಿನ
ಬಿರುದಾವಳಿ ಮಹಿಮೆಯೆನಿಪ ತಾರಾವಳಿಯಂ
ಶರಣರು ಬರೆದೋದೆ ಮೋಕ್ಷವು
ದೊರೆವುದು ಮರಿಸಿದ್ಧಲಿಂಗದೇಶಿಕ ರಚಿತಂ।''[10]

ಎಂಬುದಾಗಿ ಶಾಸನದಲ್ಲಿರುವಂತೆ ಮರಿಸಿದ್ಧಲಿಂಗರು[11] ತಮ್ಮ ಗುರುಗಳಾದ ಹೊಸಕೋಟೆ ಮಹಾಂತಸ್ವಾಮಿಗಳನ್ನು ಗೌರವದಿಂದ ಸ್ಮರಣೆ ಮಾಡಿದ್ದಾರೆ. ಆದ್ದರಿಂದ ಮೇಲ್ಕಂಡ ಶಾಸನದಲ್ಲೂ, ಕೃತಿಗಳಲ್ಲೂ ಕಂಡುಬರುವ ಗುರು-ಶಿಷ್ಯರು ಅಭಿನ್ನರೆಂಬುದು ಖಚಿತವಾದಂತಾಗಿದೆ.

ಶಾಸನದಲ್ಲಿ ಉಲ್ಲೇಖವಾಗಿರುವ 'ಶೂನ್ಯಸಿಂಹಾಸನ'ದ (ಶಿವಯೋಗ ಸಮಾಧಿ) ವಿಚಾರ, ಬೇಲಿಮಠದಲ್ಲೇ ಲಭ್ಯವಾಗಿರುವ ಕೆಲವು ಹಳೆಯ ಮೋಡಿ ಬರಹದ ಪತ್ರಗಳಲ್ಲೂ[12] ಕಂಡುಬರುತ್ತದೆ. ಅಂತಹ ಪತ್ರವೊಂದರಲ್ಲಿ ''ಷಟ್‌ಸ್ಥಲ ಚಕ್ರವರ್ತಿ ಚನ್ನಬಸವೇಶ್ವರದೇವರ ಸಾಂಪ್ರದಾಯಕರಾದ 'ಶೂನ್ಯಸಿಂಹಾಸನ'ಕ್ಕೆ ಕಾರಣಕರ್ತರಾದಂಥಾ 'ಕೆಂಪಿನಸಮಯ'ದ ಶಿವಾನುಭಾವಿ ಚರಮೂರ್ತಿಗಳಾದ ಬಸವಲಿಂಗಸ್ವಾಮಿಗಳವರ...[13]'' ಎಂದೂ; ಮತ್ತೊಂದು ಪತ್ರದಲ್ಲಿ ''... ಚನ್ನಬಸವೇಶ್ವರ ಸ್ವಾಮಿಯವರ ಸಾಂಪ್ರದಾಯಕರಾದ 'ಶೂನ್ಯ ಸಿಂಹಾಸನ'ಕ್ಕೆ ಕಾರಣಕರ್ತರಾದ ಹೊಸಕೋಟೆ ಮಹಾಂತಸ್ವಾಮಿಯವರ ಪ್ರತಿಹಸ್ತರಾದ ಸಂಗನಬಸವ ಸ್ವಾಮಿಯವರ ಪ್ರತಿಹಸ್ತರಾದ ಬಸವಲಿಂಗಸ್ವಾಮಿಗಳು...[14]'' ಎಂದೇ ಪ್ರಸ್ತಾಪಿಸಲಾಗಿದೆ. ಇಲ್ಲಿ ಬಹಳ ವಿಶೇಷವಾಗಿ ಗಮನಿಸಬೇಕಾದದ್ದು 'ಕೆಂಪಿನಸಮಯ'ದ ಶಿವಾನುಭಾವಿ ಚರಮೂರ್ತಿಗಳಾದ ಬಸವಲಿಂಗಸ್ವಾಮಿಗಳು ಶೂನ್ಯ ಸಿಂಹಾಸನಕ್ಕೆ ಕಾರಣಕರ್ತರಾಗಿದ್ದಾರೆ. ಜೊತೆಗೆ ಇವರು ಹೊಸಕೋಟೆಯ ಮಹಾಂತಸ್ವಾಮಿಗಳ ಪ್ರತಿಹಸ್ತರಾದ, ಸಂಗನಬಸವ ಸ್ವಾಮಿಗಳ ಪ್ರತಿಹಸ್ತರಾಗಿದ್ದಾರೆ. ಸದ್ಯಕ್ಕೆ ದೊರಕಿರುವ ದಾಖಲೆ ಪತ್ರಗಳಲ್ಲಿ ಎಲ್ಲಿಯೂ ಶಾಸನದಲ್ಲಿ ಉಲ್ಲೇಖವಾಗಿರುವ ಮರಿಸಿದ್ಧಲಿಂಗರ ಹೆಸರೇ ಪ್ರಸ್ತಾಪವಾಗಿಲ್ಲದಿರುವುದು ಆಶ್ಚರ್ಯಕರ ಸಂಗತಿ.

ಇನ್ನೊಂದು ಪತ್ರದಲ್ಲಿ ''...ಷಡುಸ್ಥಲ ಚಕ್ರವರ್ತಿಗಳಾದ ಚನ್ನಬಸವೇಶ್ವರ ಸ್ವಾಮಿಯವರ ಸಾಂಪ್ರದಾಯಕರಾದ ಹೊಸಕೋಟೆ ಮಹಾಂತಸ್ವಾಮಿಯವರ ಪ್ರತಿಹಸ್ತರಾದಂತಾ ಸಂಗನಬಸವಸ್ವಾಮಿಯವರು ...ಶ್ರೀ ಬಸವೇಶ್ವರ ಸ್ವಾಮಿಯವರ ಸಾಂಪ್ರದಾಯಕರಾದಂತಾ ಬೆಂಗಳೂರು ಅಮೃತಸಾಗರ ಅರಳೆಪ್ಯಾಟೆ ಬಸವಲಿಂಗಶೆಟ್ರು ಕಲ್ಲುಕುಟಿಕೆ ಮಲ್ಲಿಶೆಟ್ಟಿ ಗೌಡಪ್ಪನವರ ರಾಚಪ್ಪ ಗೌಡರ ಬೂದೆಪ್ಪ ನರುಗುಂದದ ಚನ್ನುವೀರಪ್ಪಾಯಿವರೆ ಮುಂತ್ತಾದ ಸ್ಥಳದ ಹತ್ತೂ ಶಿವಭಕ್ತರಿಗೆ...

ಅದಾಗಿ ಆಷಾಡ ಶುದ್ಧ ೭ ಮಂಗಳವಾರದಲ್ಲೂ ನೆಲಮಂಗಲದ ಮಟ್ಟದಲ್ಲಿ ಲಿಂಗಾನಂದ ಪರಿಣಾಮದಲ್ಲಿ ಧ್ವೆವೆ...ನಾಲು ಮುಂದೆ ಸಾಂಬಲೋಕಕ್ಕೆ ಹೋಗತಕ್ಕ ಪ್ರಕೃತಿಯನ್ನು ತಿಳಿದು ಯಿಲ್ಲಿಯಿರುವಂಥ್ಹಾ ದೆವಾಭಕ್ತರೂ ನಮ್ಮ ಚರಂತ್ರಿಕೆಯನ್ನು ಶ್ರೀಮದ್ಬಸವಲಿಂಗ ಸ್ವಾಮಿಯವರಿಗೆ ನಿಷ್ಕರುರ್ಷಿಯಂನ್ನು ಗೊತ್ತುಮಾಡಿ ಮುಂದೆ ವುತ್ತರ ಕ್ರಿಯಕ್ಕೆ ಶ್ರೇಷ್ಟವಾದಂಥ್ಹಾ ವಿಭೂತಿ ವೀಳ್ಯವನ್ನು ನಿಂನ್ನೆ ಜೇಷ್ಠ ಬಹುಳ ೧೪ ಸೋಮವಾರ ಆಗುಮಾಡಿ ಗಣಾರಾಧನೆ ಮೊದಲಾದ ಸಲಿಸಿದ ಪ್ರಯುಕ್ತ ನಂಮ್ಮ ಶಿವಯೋಗಾನಂದಕ್ಕೆ ನಿಉ ಸಕಲವಿಷಯದಲ್ಲು ಆಪ್ತ ಬಾದ್ಯರಾದ ಕಾರಣ ಇ ವಿದ್ಯಮಾನ ನಿಂಮ್ಮ ಮನಸ್ಸಿಗೆ ತಿಳಿದು ಮುಂದೆ ಶ್ರೀ ಮದ್ಬಸವಲಿಂಗ ಸ್ವಾಮಿಗಳನ್ನು ನಂಮ್ಮ ಕಂಡು ಯಾವ ಪ್ರಕಾರ ನಡಕೊಳ್ಳುತ್ತಿದ್ದಿರೊ ಅದಕಿಂಥಾ ಸಹಸ್ರಮಡಿ ಅಧಿಕವಾಗಿ ಕಂಡು ಧ್ಯಾನ ಪೂಜಾಯುಕ್ತರಾಗಲೆಂದು ಯಿಾ ಆಶಿರ್ವಾದ ಪತ್ರಿಕೆಯಂನ್ನು ಬರಶಿ ಕಳುಯಿಸಿ ಯಿಧಿತು...[15]'' ಇತ್ಯಾದಿ ವಿವರಗಳೊಂದಿಗೆ ಪತ್ರವು ಮುಕ್ತಾಯವಾಗಿದೆ.

ಈ ಪತ್ರ ಮೇಲ್ಕಂಡ ಎರಡೂ ಪತ್ರಗಳಿಗೂ ಹಿಂದಿನ ಪತ್ರವಾಗಿದ್ದು ಇದರಲ್ಲಿ ಶೂನ್ಯಸಿಂಹಾಸನದ ವಿಚಾರ ಪ್ರಸ್ತಾಪವಾಗಿಲ್ಲ. ಮೇಲ್ಕಂಡ ಎರಡನೆಯ ಪತ್ರದಲ್ಲಿ ಉಲ್ಲೇಖವಾದಂತೆ ಹೊಸಕೋಟೆಯ ಮಹಾಂತಸ್ವಾಮಿಗಳವರ ಶಿಷ್ಯ ಸಂಗನ ಬಸವಸ್ವಾಮಿಗಳು, ಬಸವಲಿಂಗ ಸ್ವಾಮಿಗಳಿಗೆ ಮುಖ್ಯ ಚರಂತಿಗೆಯನ್ನು ವಹಿಸಿದ ವಿಚಾರ ಇಲ್ಲಿ ಸ್ಪಷ್ಟವಾಗಿದೆ. ಹಾಗಾಗಿ ಈ ದಾಖಲೆ ಬೇಲಿಮಠದ ಶಾಸನ (ಕ್ರಿ.ಶ. ೧೭೬೧)ವು ರಚಿತವಾದ ಮೂರು ನಾಲ್ಕು ವರ್ಷಗಳ ಅನಂತರ (ಸು.ಕ್ರಿ.ಶ. ೧೭೬೫)ದಲ್ಲಿ ಬರೆದದ್ದಿರಬೇಕು. ಮೇಲ್ಕಂಡ ಪತ್ರಗಳು ಕಾಲಮಾನದ ದೃಷ್ಟಿಯಿಂದ ಕೊರತೆಯುಳ್ಳವಾದರೂ ಮಾಹಿತಿಯ ದೃಷ್ಟಿಯಿಂದ ಅಮೂಲ್ಯವಾದುದಾಗಿವೆ. ಹೀಗೆ ಬೇಲಿಮಠದ ಮೂಲ ಗುರುಪರಂಪರೆಯನ್ನೂ ಹಾಗೂ ಶೂನ್ಯ ಸಿಂಹಾಸನದ ವಿಚಾರವನ್ನೂ ಹೇಳುವ ಬಹಳಷ್ಟು ಪತ್ರಗಳು ಲಭ್ಯವಾಗಿವೆಯಾದರೂ ಶಾಸನೋಕ್ತವಾದ ಮರಿಸಿದ್ಧಲಿಂಗದೇಶಿಕರ ಹೆಸರುಳ್ಳ ಪತ್ರಗಳು ಲಭ್ಯವಾಗಿಲ್ಲ. ಈ ಹಿನ್ನೆಲೆಯಲ್ಲಿ ಶಾಸನೋಕ್ತ ಮರಿಸಿದ್ಧಲಿಂಗರೂ ಹಾಗೂ ಪತ್ರಗಳಲ್ಲಿ ಉಕ್ತವಾದ ಬಸವಲಿಂಗ ಸ್ವಾಮಿಗಳೂ ಇಬ್ಬರೂ ಒಬ್ಬರೇ ಎನ್ನಲು, ನಮಗಿರುವ ಏಕೈಕ ಆಧಾರ ಶೂನ್ಯಸಿಂಹಾಸನದ ವಿಚಾರ ಮಾತ್ರ. ಏಕೆಂದರೆ 'ಶೂನ್ಯಸಿಂಹಾಸನಕ್ಕೆ ಕಾರಣಕರ್ತ ರಾದ' ಎಂಬ ಮಾತು ಮೇಲಿನ ಊಹೆಗೆ ಪೂರಕವಾಗಿದೆ. ಬಹುಶಃ ಹೊಸಕೋಟೆಯ ಮಹಾಂತಸ್ವಾಮಿಗಳಿಂದ ಬಂದ ಕೆಂಪಿನಸಮಯದ ಮೂಲ ಚರಂತಿಗೆಯನ್ನು, ಸಂಗನ ಬಸವಸ್ವಾಮಿಗಳಿಂದ ಮರಿಸಿದ್ಧಲಿಂಗದೇಶಿಕರು[16] (ಸು.ಕ್ರಿ.ಶ. ೧೭೬೫ರಲ್ಲಿ) ವಹಿಸಿಕೊಂಡಾಗ, ಬಸವಲಿಂಗ ಸ್ವಾಮಿಗಳು ಎಂಬ ನೂತನ ನಾಮಾಂಕಿತವನ್ನು ಪಡೆದಿರಬೇಕು.

ಹೀಗೆ ಶಾಸನ ಹಾಗೂ ಪತ್ರಾಧಾರಿತ[17] ಮಾಹಿತಿಗಳನ್ನು ಸಂಗ್ರಹಿಸಿ ಹೇಳುವುದಾದರೆ-ಬೇಲಿಮಠವು ವಿರಕ್ತವರ್ಗದ ಐದು ಪ್ರಮುಖ ಸಮಯಭೇದ[18] ಗಳಲ್ಲೊಂದಾದ "ಕೆಂಪಿನಸಮಯದ ಮಠ." ಇದರ ಮೂಲ ಗುರುಗಳು ಹೊಸಕೋಟೆಯ ಮಹಾಂತಸ್ವಾಮಿಗಳು. ಇವರು ಕ್ರಿ.ಶ. ೧೭೬೧ರಲ್ಲಿ ಲಿಂಗೈಕ್ಯರಾಗಿದ್ದು, ಇವರ ಮೂಲಗದ್ದುಗೆ ಬೇಲಿಮಠದಲ್ಲೇ ಇರುವುದಾಗಿ, ಗದ್ದುಗೆಯ ಮೇಲಿನ ಶಾಸನವೆ ಸಾಬೀತುಪಡಿಸುತ್ತದೆ. ಶಿವಾನುಭಾವಿ ಚರಮೂರ್ತಿಗಳಾಗಿದ್ದ ಹೊಸಕೋಟೆ ಮಹಾಂತ ಸ್ವಾಮಿಗಳು ನಾಡಿನುದ್ದಕ್ಕೂ ಸಂಚರಿಸಿ ಅನೇಕ ಮಠಗಳ ಸ್ಥಾಪನೆಗೆ ಕಾರಣಕರ್ತರಾಗಿದ್ದಾರೆ. ನೆಲಮಂಗಲದ ಸಂಗನಬಸವಸ್ವಾಮಿ, ಪುಂಗನೂರಿನ ಪ್ರಭುಸ್ವಾಮಿ, ಹುಲಿಕುಂಟೆಯ ಶಾಂತಲಿಂಗ ಸ್ವಾಮಿ, ಬೆಂಗಳೂರಿನ ಮರಿಸಿದ್ಧಲಿಂಗ (ಬಸವಲಿಂಗ) ಸ್ವಾಮಿ ಇವರೇ ಮೊದಲಾದ ಅಸಂಖ್ಯಾತ ಅನುಯಾಯಿಗಳು ಇವರ ಶಿಷ್ಯರಾಗಿದ್ದರು. ಬೆಂಗಳೂರಿನ ದೊಡ್ಡಮಠ, ಪುಂಗನೂರಿನ ದೊಡ್ಡಮಠ, ಹೊಸಕೋಟೆಯ ದೊಡ್ಡ ಮಠ, ನೆಲಮಂಗಲದ ಹೊಸಮಠ ಇವೇ ಮೊದಲಾದ ಅನೇಕ ಮಠಗಳು ಇವರ ಕಾಲ (ಕ್ರಿ.ಶ. ೧೭೨೦ ರಿಂದ ೧೭೬೧)ದಲ್ಲಿ ಸ್ಥಾಪನೆಯಾಗಿವೆ.[19] ತಾವು ಸ್ಥಾಪಿಸಿದ್ದ ಪ್ರತಿಯೊಂದು ಮಠಗಳಿಗೂ ತಮ್ಮ ಶಿಷ್ಯಬಣದವರನ್ನೇ ಮಠಾಧಿಪತಿಗಳನ್ನಾಗಿ ಮಾಡಿ, ಇವರೆಲ್ಲರಿಗೂ ತಾವೇ ಮುಖ್ಯ ಚರಂತಿಗೆ[20] ಯವರಾಗಿದ್ದರು. ಪ್ರಾರಂಭದಲ್ಲಿ ಬೆಂಗಳೂರಿನ ಅಮೃತ ಸಾಗರದ ಅರಳೆಪೇಟೆಯ ದೊಡ್ಡಮಠವು ಇವರ ಮುಖ್ಯ ಕಾರ್ಯಕ್ಷೇತ್ರವಾಗಿತ್ತು.[21] ಹೊಸಕೋಟೆಯ ಮಹಾಂತ ಸ್ವಾಮಿಗಳು ಬೆಂಗಳೂರಿನ ದೊಡ್ಡಮಠವನ್ನು ಕ್ರಿ.ಶ. ೧೭೨೫ರ ಸುಮಾರಿಗೆ

ಸ್ಥಾಪಿಸಿದ್ದಿರಬೇಕು. ಮುಂದೆ ಇವರ ಪರಮಭಕ್ತರಾಗಿದ್ದ ಬೆಂಗಳೂರಿನ ಜಾಂನೂರ ಚನ್ನಮಲ್ಲಪ್ಪ ಎಂಬ ಧನಿಕ ವರ್ತಕರು ಕ್ರಿ.ಶ. ೧೭೪೫ರ ವೇಳೆಗೆ, ಪಟ್ಟಣದಿಂದ ಹೊರಭಾಗದ ಅಗ್ರಹಾರದ ಕೆರೆಯ ದಂಡೆಗೆ ಮಠ ವೊಂದನ್ನು ಕಟ್ಟಿಸಿಕೊಟ್ಟಿದ್ದರು. ಸೀಗೆ ಬೇಲಿಯ ಸಮೀಪ ವಿದ್ದ ಈ ಮಠಕ್ಕೆ ಮಹಾಂತಸ್ವಾಮಿಗಳು ತಮ್ಮ ಆತ್ಮೀಯ ಶಿಷ್ಯರಲ್ಲಿ ಒಬ್ಬರಾಗಿದ್ದ ಮರಿಸಿದ್ದಲಿಂಗ ದೇಶಿಕರನ್ನು ಉಸ್ತುವಾರಿ ಮಠಾಧಿಕಾರಿಯನ್ನಾಗಿ ನಿಯಮಿಸಿದ್ದರು.

ಕೆಂಪಿನಸಮಯದ ಚರಂತಿಗೆಯ ಹಿರಿಯ ಗುರುಗಳಾಗಿದ್ದ ಹೊಸಕೋಟೆಯ ಮಹಾಂತಸ್ವಾಮಿಗಳು, ತಮ್ಮ ಅನುಯಾಯಿಗಳಲ್ಲಿ ಹಿರಿಯರಾಗಿದ್ದ ಸಂಗನ ಬಸವಸ್ವಾಮಿಗಳಿಗೆ ಕ್ರಿ.ಶ. ೧೭೫೦ರ ವೇಳೆಗೆ ಮುಖ್ಯ ಚರಂತಿಗೆಯನ್ನು ವಹಿಸಿಕೊಟ್ಟಿರಬೇಕು. ಇವರು ನೆಲಮಂಗಲದ ಹೊಸಮಠಕ್ಕೆ ಉಸ್ತುವಾರಿ ಅಧಿಪತಿ ಗಳಾಗಿದ್ದರೂ, ಗುರುಗಳೊಂದಿಗೆ ಸಂಚಾರದಲ್ಲಿ ರುತ್ತಿದ್ದುದೇ ಹೆಚ್ಚು. ಮುಖ್ಯ ಚರಂತಿಗೆಯವರಾಗುವ ವೇಳೆಗಾಗಲೇ ಸಂಗನಬಸವಸ್ವಾಮಿಗಳು ಸಾಕಷ್ಟು ವಯೋವೃದ್ಧರಾಗಿದ್ದರು.[22] ಇವರು ಬೇಲಿಮಠದ ಉಸ್ತುವಾರಿ ಮರಿಗಳಾಗಿದ್ದು, ಮೂಲ ಗುರುಗಳ ಗದ್ದುಗೆಯ (ಶೂನ್ಯ ಸಿಂಹಾಸನದ) ಮೇಲೆ ಅನುಭವ ಮಂಟಪವನ್ನು ನಿರ್ಮಾಣ ಮಾಡಿಸಿದ್ದ ಮರಿಸಿದ್ದಲಿಂಗ ದೇಶಿಕರನ್ನೇ ತಮ್ಮ ಮುಂದಿನ ಚರಂತಿಗೆಯವರನ್ನಾಗಿ ನೇಮಿಸಿಕೊಂಡರು. ಹೀಗೆ ಮುಖ್ಯ ಚರಂತಿಗೆಯವರಾಗಿ ನೇಮಕವಾದ ಮರಿಸಿದ್ದಲಿಂಗರಿಗೆ ಬಸವಲಿಂಗಸ್ವಾಮಿಗಳು ಎಂಬ ನೂತನ ನಾಮಾಭಿಧಾನವಾಗಿರಬೇಕು. ಕ್ರಿ.ಶ. ೧೭೬೬ರ ಸುಮಾರಿಗೆ ಅಧಿಕಾರಕ್ಕೆ ಬಂದ ಇವರು, ಕ್ರಿ.ಶ.೧೮೧೬ರ ವರೆಗೂ ಮುಂದುವರೆದು ಐವತ್ತು ವರ್ಷಗಳಷ್ಟು ಸುದೀರ್ಘವಾಗಿ ಮುಖ್ಯ ಚರಂತಿಗೆಯ ವರಾಗಿದ್ದರು. ಇವರ ಅಂತಿಮ ಕಾಲದವರೆಗೂ ದೊಡ್ಡಮಠವೇ ಮುಖ್ಯಚರಂತಿಗೆಯವರ ಕೇಂದ್ರ ಮಠವಾಗಿತ್ತು.[23]

ಈ ಸಂದರ್ಭದಲ್ಲಿ ಬಹಳ ಪ್ರಮುಖವಾದ ಮತ್ತೊಂದು ಚಿಂತನೆಯನ್ನು ನಡೆಸಲು ಅವಕಾಶವಿದೆ. 'ನಿರಂಜನ ವಂಶರತ್ನಾಕರ'ವನ್ನಾಧರಿಸಿ ಚನ್ನಮಲ್ಲಿಕಾರ್ಜುನರು, 'ಕೆಂಪಿನಸಮಯ'ದ ಮೂಲ ಕರ್ತರಾದ ಕೆಂಪಿನಪ್ಪನವರು ಮತ್ತು ಅವರ ಶಿಷ್ಯ ಸಂಗನಬಸವಪ್ಪನವರು ಸ್ಥಾಪಿಸಿದ ಮೊದಲ ಮಠವೇ ಹುಮನಾಬಾದಿ ಕಲ್ಯಾಣ ಸೀಮೆ ಪೈಕಿ ಹುಳೆಕುಂಟೆ ಬಸವತೀರ್ಥಮಠವು[24] ಎಂಬ ವಿಚಾರ ಮಂಡಿಸಿದ್ದಾರೆ. ಬೇಲಿಮಠದ ಮುಂದಿನ ದಾಖಲೆಗಳಲ್ಲಿ ಹಲವಾರು ಸಾರಿ ಈ ಬಸವತೀರ್ಥಮಠದ ಪ್ರಸ್ತಾಪವಾಗಿದೆ.[25] ಬಹುಶಃ ಹೊಸಕೋಟೆಯ ಮಹಾಂತಸ್ವಾಮಿಗಳೇ ಈ ಕೆಂಪಿನಪ್ಪ ನವರಿರಬೇಕೆಂದೂ ಇವರ ಶಿಷ್ಯರೇ ಸಂಗನಬಸವ ಸ್ವಾಮಿಗಳೆಂದೂ ಭಾವಿಸುವುದಾದರೆ; ಮೊದಲು ಕಲ್ಯಾಣ ಸೀಮೆಯಲ್ಲಿ ತಮ್ಮ ಸಮಯದ ಮೊದಲ ಮಠವನ್ನು ಸ್ಥಾಪಿಸಿ ನಂತರ ದಕ್ಷಿಣದ ಕಡೆಗೆ ಸಂಚರಿಸಿ ಮುಂದೆ ಬೆಂಗಳೂರನ್ನು ತಮ್ಮ ಮುಖ್ಯ ನೆಲೆಯನ್ನಾಗಿ ಇರಿಸಿಕೊಂಡಿರಬೇಕೆಂದು ಊಹಿಸಲು ಅವಕಾಶವಿದೆ. ಏಕೆಂದರೆ ೧೮ನೆಯ ಶತಮಾನದ ಆದಿಭಾಗದಲ್ಲಿ ಮುರಿಗಾ ಶಾಂತವೀರರ (ಐಕ್ಯವಾದ ಕಾಲ ಕ್ರಿ.ಶ. ೧೭೦೩) ಐವರು ಶಿಷ್ಯರು ಹುಟ್ಟಿಹಾಕಿಕೊಂಡ (ಮುರಿಗಾ, ಕೆಂಪಿನ, ಚೀಲಾಳ, ಸಂಪಾದನಾ, ಕುಮಾರ) ಐದು ಪ್ರಮುಖ ಸಮಯಭೇದಗಳ ವಿಚಾರ[26] ಈಗಾಗಲೇ ಪ್ರಚಲಿತ ವಾಗಿರುವ ಸಂಗತಿ. ಈ ಘಟನಾವಳಿಗಳ ಹಿನ್ನೆಲೆಯಲ್ಲಿ ಪರಸ್ಪರ ಕಾಲ ಹಾಗೂ ಹೆಸರುಗಳ ಸಾಮ್ಯತೆಯನ್ನು ತಾಳೆ ಹಾಕಬಹುದಾದರೂ[27] ಮೇಲಿನ ಊಹೆಗೆ ಪೂರಕವಾದ ಖಚಿತ ಆಧಾರಗಳಿಗೆ ಇನ್ನೂ ಶೋಧವನ್ನು ಮುಂದುವರೆಸುವ ಅಗತ್ಯವಿದೆ.

ಕ್ರಿ.ಶ. ೧೭೬೬ರ ಸುಮಾರಿಗೆ ಮುಖ್ಯ ಚರಂತಿಗೆ ಯವರಾಗಿ ನೇಮಕವಾದ ಬಸವಲಿಂಗಸ್ವಾಮಿಗಳ (ಮರಿಸಿದ್ದಲಿಂಗರ) ಬೇಲಿಮಠದ ಸ್ಥಾನಕ್ಕೆ ಮುಂದೆ ಮಲ್ಲೂರ ಬಾಣವಾಡಿ ಮಠದ ಚನ್ನವೀರದೇವರು[28] ನೇಮಿಸಲ್ಪಟ್ಟಿರಬೇಕು. ಇವರು ೧೮೦೦ರ ಆದಿ ಭಾಗದಲ್ಲಿ ತಮ್ಮ ಗುರುಗಳಿಗೂ ಮೊದಲೆ ಶಿವಾಧೀನರಾಗಿದ್ದಾರೆ. ನಂತರ ಚನ್ನವೀರಸ್ವಾಮಿಗಳ ಸ್ಥಾನಕ್ಕೆ ಬಂದವರು ಚಿಕ್ಕಮಗಳೂರು ಪ್ರಾಂತ್ಯದ ಕೊಪ್ಪ ತಾಲ್ಲೂಕಿನ ಮುಳುವಳ್ಳಿ ಹಳೆಯ ಮಠಕ್ಕೆ ಕಾರಣಕರ್ತರಾದ ಶಾಂತಲಿಂಗಸ್ವಾಮಿಗಳ ಶಿಷ್ಯರಾಗಿದ್ದ ಕೆಂಪುನಂಜೆ ಸ್ವಾಮಿಗಳು.[29] ಕ್ರಿ.ಶ. ೧೮೧೮ರ ವೇಳೆಗೆ ಕೆಂಪಿನ ಸಮಯದ ಮುಖ್ಯ ಚರಂತಿಗೆಯನ್ನು ವಹಿಸಿಕೊಂಡಿದ್ದ ಇವರು ಬೇಲಿಮಠದ ಇತಿಹಾಸದಲ್ಲಿಯೇ ವಿಶೇಷ ಸ್ಥಾನಮಾನಗಳನ್ನು ಪಡೆದವರಾಗಿದ್ದರು. ಭಾಗಶಃ

ರಕ್ಷಿಸಲ್ಪಟ್ಟಿರುವ ಪತ್ರವೊಂದರಲ್ಲಿ ಇವರನ್ನು "...ಶ್ರೀ ಚನ್ನಬಸವೇಶ್ವರ ಸ್ವಾಮಿಯವರ ಸಾಂಪ್ರದಾಯಕರಾದ ಮುಳುವಳ್ಳಿ ಮಠದ 'ಶಿವಾನುಭವ ಚರಮೂರ್ತಿಗಳಾದ'[30] ಬಸವಲಿಂಗಸ್ವಾಮಿಗಳ ಪ್ರತಿಹಸ್ತರಾದ ಚನ್ನವೀರ ಸ್ವಾಮಿಗಳ ಪ್ರತಿಹಸ್ತರಾದ ಕೆಂಪುನಂಜೆಸ್ವಾಮಿ[31]ಗಳಿಗೆ..." ಎಂದೇ ಸಂಬೋಧಿಸಲಾಗಿದೆ[32]. ಇವರ ಕಾಲಕ್ಕೆ ಬೇಲಿಮಠವೇ ಮುಖ್ಯ ಚರಂತಿಗೆಯವರ ಕೇಂದ್ರವಾಗಿತ್ತು.

ಕೆಂಪುನಂಜೆಸ್ವಾಮಿಗಳು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರೊಂದಿಗೆ ವಿಶೇಷವಾದ ಸಖ್ಯವನ್ನಿರಿಸಿ ಕೊಂಡಿದ್ದರು. ಇವರ ಶಾಖಾನುವರ್ತಿಗಳು, ಇವರು ಅರಮನೆಗೆ ಹೋಗಿಬಂದ ವಿದ್ಯಮಾನಗಳನ್ನು ವಿಚಾರಿಸಿ ಕೊಳ್ಳುವ ಪತ್ರಗಳಿವೆ.[33] ಪುಂಗನೂರಿನ ಅರಸು ಮನೆತನದವರೊಂದಿಗೂ ಇವರು ವಿಶೇಷವಾದ ಬಾಂಧವ್ಯವನ್ನು ಇಟ್ಟುಕೊಂಡಿದ್ದರು.[34] ಕ್ರಿ.ಶ. ೧೮೨೨ರ ಫೆಬ್ರವರಿ ೧೦ ರಂದು ಮುಮ್ಮಡಿ ಕೃಷ್ಣರಾಜ ಒಡೆಯರು ಕೆಂಪುನಂಜೆ ಸ್ವಾಮಿಗಳ ಬೇಲಿಮಠಕ್ಕೆ, ಬೆಂಗಳೂರಿನ ದೊಡ್ಡಬಸವೇಶ್ವರನ ಗುಡಿಗೆ ಹೋಗುವ ಮಾರ್ಗದಲ್ಲಿ ಹನ್ನೆರಡು ಕಂಠೀರಾಯಿ ವರಹದ ೩೧, ೯೭೭ ಚದರಗಜ ವಿಸ್ತೀರ್ಣದ ಭೂದಾನ ನೀಡಿದ್ದರು.[35]

ಕೆಂಪುನಂಜೆಸ್ವಾಮಿಗಳು ಸಿದ್ದಲಿಂಗಮರಿ ಎಂಬುವರನ್ನು ತಮ್ಮ ಮುಂದಿನ ಉತ್ತರಾಧಿಕಾರಿಗಳನ್ನಾಗಿ ಆರಿಸಿ ಕೊಂಡಾಗ ಪಟ್ಟಣದ ಪೇಟೆ ಶೆಟ್ಟಿಯಜಮಾನರುಗಳು ತಮ್ಮ ಅನುಮತಿಯಿಲ್ಲದೆ ವಟುವಿನ ಆಯ್ಕೆಯಾಗಬಾರ ದೆಂದು ತಕರಾರು ತೆಗೆಯುತ್ತಾರೆ. ಬೆಂಗಳೂರು ದೊಡ್ಡಪೇಟೆಯ ಯಜಮಾನ್ ಕಪ್ಪಣ್ಣನವರ ಮಹಂತಪ್ಪ ನವರು 'ಬೆಂಗಳೂರಿನ ಒಳಿಕವಾದ ೬೨ ಮಠಗಳಿಗೆ ತಾವೇ ಯಜಮಾನರೆಂದು' ವಾದಿಸುತ್ತಾರೆ.[36] ಈ ವಿವಾದ ಮಹಾರಾಜರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರವರೆವಿಗೂ ಹೋಗುತ್ತದೆ. ವಿವಾದವನ್ನು ಸ್ವತಃ ಪರಿಶೀಲಿಸಿದ ಮಹಾರಾಜರು, ದಿನಾಂಕ : ೧೭.೧೦.೧೮೨೫ರಲ್ಲಿ ನಿರೂಪವೊಂದನ್ನು ಹೊರಡಿಸಿ "...ಇವು ಶಿಷ್ಯರು ಮಕ್ಕಳು ಇರುವ ವಿರಕ್ತಿ ಮಠಗಳಾಗಿರುತ್ತವೆ. ಇಲ್ಲಿನ ಅಯ್ಯಗಳು ಸ್ವತಂತ್ರರು. ಇಂಥವರಿಗೆ ಇಲ್ಲದ ತೊಂದರೆ ಕೊಡುವುದು ಸರಿಯಲ್ಲ. ಪೂರ್ವದಿಂದಲೂ ವಿರಕ್ತ ವಟುಗಳಿಗೆ ಅವರು ಚರಂತಿಗೆ ಆಶ್ರಮ ಕೊಡಬೇಕಾಗಿದ್ದರೆ ಅಲ್ಲಿನ ಅಯ್ಯಗಳೆ ಸ್ವತಂತ್ರವಾಗಿ ಕೊಟ್ಟುಕೊಳ್ಳುವ ಪದ್ಧತಿ ಇರುವುದರಿಂದ ಈಗಲೂ ಅವರು ಚರಂತಿಗೆ ಆಶ್ರಮವನ್ನು ಮಾಡಿಕೊಳ್ಳಲು ಶೆಟ್ಟಿಯಜಮಾನ ಮುಂತಾದ ಬಣಜಿಗರು ಅಡ್ಡಿ ಮಾಡದಂತೆ ಪೂರಾ ಬಂದೋಬಸ್ತು ಮಾಡುವುದು...[37]" ಎಂಬುದಾಗಿ ತಾಕೀತು ಪಡಿಸಿದ್ದಾರೆ.

ಕೆಂಪುನಂಜೆಸ್ವಾಮಿಗಳನ್ನು 'ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು'[38] ಎಂದೂ ಸಂಬೋಧಿಸಿರುವ ಕೆಲವು ದಾಖಲೆಗಳಿವೆ. ಇವರು ಸಾಕಷ್ಟು ಪ್ರಭಾವಶಾಲಿ ಗಳಾಗಿದ್ದು ನಾಡಿನಾದ್ಯಂತ ಕೆಂಪಿನಸಮಯದ ಬಹುತೇಕ ಮಠಗಳಿಗೆ ಇವರೇ ಮುಖ್ಯಸ್ಥರಾಗಿದ್ದಂತೆ ತಿಳಿದು ಬರುತ್ತದೆ. ಮುಖ್ಯ ಚರಮೂರ್ತಿಗಳ ಈ ಮಠಕ್ಕೆ ೬೪ ಶಾಖಾಮಠಗಳಿದ್ದುವೆಂದು[39] ಹೇಳುತ್ತಾರಾದರೂ ನಮಗೆ ಅಂತಹ ಪಟ್ಟಿ ಯಾವುದೂ ಲಭ್ಯವಾಗಿಲ್ಲ. ಆದರೆ ಕೆಲವು ದಾಖಲೆಗಳ ಪ್ರಕಾರ ಕೆಂಪುನಂಜೆಸ್ವಾಮಿಗಳ ಆಜ್ಞಾನುಸಾರ ನಡೆಯುತ್ತಿದ್ದ ಹಲವು ಮಠಗಳ ಹೆಸರುಗಳನ್ನು ಇಲ್ಲಿಪಟ್ಟಿ ಮಾಡಬಹುದು.[40] ಅವುಗಳೆಂದರೆ...

೧. ಪುಂಗನೂರಿನ ದೊಡ್ಡಮಠ

೨. ಪುಂಗನೂರಿನ ಗವಿಮಠ

೩. ಪುಂಗನೂರಿನ ಚಿತ್ತಾರಿಮಠ

೪. ಆಪಳಲಿಮಠ

೫. ಹೊಸಕೋಟೆಯ ದೊಡ್ಡಮಠ

೬. ಹೊಸಕೋಟೆಯ ಅನ್ನಸಾಗರದ ಮಠ

೭. ಹೊಸಕೋಟೆಯ ಕೋಡಿಮಠ

೮. ಕಲ್ಯಾಣದ ಹುಲೆಕುಂಟೆಮಠ

೯. ನಗರದ ಏಕಾಂತಮಠ

೧೦. ಹೊಳೆಹೊನ್ನೂರುಮಠ

೧೧. ಸಾಲಿಗ್ರಾಮದ ಕರ್ಪೂರವಳಿಮಠ

೧೨. ಈರನಗೆರೆಮಠ

೧೩. ಕಾಳೇನಹಳ್ಳಿಮಠ

೧೪. ಲಕ್ಕುವಳ್ಳಿಮಠ

೧೫. ಕೊಪ್ಪದ ಮುಳುವಳ್ಳಿಮಠ

೧೬. ಮಾಚೆನಾಯ್ಕನಹಳ್ಳಿ ಮಠ

೧೭. ನೆಲಮಂಗಲದ ಹೊಸಮಠ

೧೮. ಮಲ್ಲರಬಾಣವಾಡಿಮಠ

೧೯. ಚಿಕ್ಕಬಳ್ಳಾಪುರದ ಜಡೇ ದೇವರಮಠ ಮತ್ತು

೨೦. ಗುಡೇಮಾರನಹಳ್ಳಿಯ ಜಗಣ್ಣಯ್ಯನಮಠ.

ಬೆಂಗಳೂರಿನ ಸುತ್ತಮುತ್ತಲಿನ ಕೆಲವು ಮಠಗಳು ಇವರ ನೇರ ಆಡಳಿತಕ್ಕೆ ಒಳಪಟ್ಟಿದ್ದವು. ಮೇಲ್ಕಂಡ ಮಠಗಳು ಬೇಲಿಮಠದೊಂದಿಗೆ ಧಾರ್ಮಿಕವಾಗಿ ಭಾವನಾತ್ಮಕ ಸಂಬಂಧವನ್ನು ಹೊಂದಿದ್ದು, ಮುಖ್ಯ ಸಂದರ್ಭಗಳಲ್ಲಿ ಕೆಂಪುನಂಜೆಸ್ವಾಮಿಗಳ ಅನುಮತಿ ಪಡೆಯುತ್ತಿದ್ದವು. ಹೀಗೆ ಮಠದ ಇತಿಹಾಸದಲ್ಲಿಯೇ ಧಾರ್ಮಿಕವಾಗಿ ಹಾಗೂ ಸಾಮಾಜಿಕವಾಗಿ ಉತ್ತಮ ವರ್ಚಸ್ವಿಗಳಾಗಿದ್ದ ಕೆಂಪುನಂಜೆಸ್ವಾಮಿಗಳು ತಮ್ಮ ಹಿರಿಯರು ಹಾಕಿಕೊಟ್ಟಿದ್ದ ಪರಂಪರೆಗೆ ಉತ್ತಮ ಘನತೆ ಗಾಂಭೀರ್ಯಗಳನ್ನು ತಂದುಕೊಟ್ಟಿದ್ದರು. ಕ್ರಿ.ಶ.೧೮೪೩ರ ವರೆಗೂ ಇವರ ವ್ಯವಹಾರ ಪತ್ರಗಳು ಲಭಿಸುವುದರಿಂದ[41] ಅದೇ ಸುಮಾರಿಗೆ ಲಿಂಗೈಕ್ಯರಾಗಿದ್ದಿರಬೇಕು. ಇವರ ಗದ್ದುಗೆಯೂ ಬೇಲಿಮಠದ ಆವರಣದಲ್ಲಿಯೇ ಇದೆ.[42]

ಕ್ರಿ.ಶ. ೧೮೨೫ರ ವೇಳೆಗಾಗಲೇ ಕೆಂಪುನಂಜೆಸ್ವಾಮಿಗಳಿಂದ ಶಿವಾನುಭವದ ಚರಂತಿಗೆಯ ಉತ್ತರಾಧಿಕಾರತ್ವವನ್ನು ಪಡೆದಿದ್ದ ಸಿದ್ಧಲಿಂಗಸ್ವಾಮಿಗಳು ಮುಂದೆ ಕ್ರಿ.ಶ. ೧೮೪೪ರ ಹೊತ್ತಿಗೆ ಅಧಿಕಾರಕ್ಕೆ ಬಂದರು.[43] ಬೇಲಿಮಠದ ಮಠಾಧಿಕಾರತ್ವದ ಇತಿಹಾಸದಲ್ಲಿಯೇ ಇವರದು ಸುದೀರ್ಘವಾದ ಬದುಕು. ಇದುವರೆಗೆ ಮಠಕ್ಕೆ ಕೆಂಪುನಂಜೆ ಸ್ವಾಮಿಗಳು ತಂದುಕೊಟ್ಟಿದ್ದ ಘನತೆ ಗಾಂಭೀರ್ಯಗಳನ್ನು ಮುಂದುವರೆಸಿಕೊಂಡು ಹೋಗುವುದೇ ಒಂದು ದೊಡ್ಡ ಸಾಹಸವಾಗಿತ್ತು. ಕ್ರಿ.ಶ.೧೮೩೧ರ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಮಹಾರಾಜರ ಆಳ್ವಿಕೆಯು ಮೊಟಕುಗೊಂಡು ನೇರವಾಗಿ ಆಂಗ್ಲರ ಆಳ್ವಿಕೆ ಪ್ರಾರಂಭವಾಗಿತ್ತು.[44] ಈ ಮೊದಲು ಮಠ-ಮಾನ್ಯಗಳಿಗಾಗಿ ಮೈಸೂರಿನ ದೊರೆಗಳು ಕೊಡುತ್ತಿದ್ದ ಉದಾರ ಪ್ರೋತ್ಸಾಹಕ್ಕೆ ಧಕ್ಕೆಯೊದಗಿತು. ಕ್ರಿ.ಶ. ೧೮೬೭ರ ವೇಳೆಗೆ ಆಂಗ್ಲರ ಆಡಳಿತವು ಧಾರ್ಮಿಕ ಸಂಸ್ಥೆಗಳ ಮೇಲ್ವಿಚಾರಣೆಗಾಗಿಯೇ ಪ್ರತ್ಯೇಕವಾದ ಮುಜರಾಯಿ ಇಲಾಖೆಯೊಂದನ್ನು ಪ್ರಾರಂಭಿಸಿತು.[45] ಈ ಇಲಾಖೆಯು ಹಿಂದಿನಿಂದ ನಡೆದು ಬಂದಿದ್ದ ದಾನ-ದತ್ತಿಗಳ ಪರಿಷ್ಕರಣ ಕಾರ್ಯಗಳನ್ನು ನಡೆಸಿತು. ಆಗ ಮಠಾಧಿಪತಿಗಳು ತಮ್ಮ ಮಠಗಳ ಆಸ್ತಿ-ಪಾಸ್ತಿಗಳನ್ನು ಸಕ್ರಮಗೊಳಿಸಿಕೊಳ್ಳುವುದೇ ಒಂದು ದೊಡ್ಡ ಹೋರಾಟವಾಗಿತ್ತು. ಆಂಗ್ಲರ ನೂತನ ಕಾನೂನು ಕಟ್ಟಳೆಗಳೊಂದಿಗೆ ತಮ್ಮ ಧಾರ್ಮಿಕ ಸಂಸ್ಥೆಗಳನ್ನು ಸುಲಲಿತವಾಗಿ ಮುನ್ನಡೆಸುವಲ್ಲಿ ಮಠಾಧಿಪತಿಗಳು ಕಷ್ಟಗಳಿಗೆ ಗುರಿಯಾಗಬೇಕಾಯಿತು.

೧೮೬೭ರಲ್ಲಿ ಬೆಂಗಳೂರು ಮತ್ತು ಮೈಸೂರು ಪಟ್ಟಣಗಳಲ್ಲಿ ಮುನಿಸಿಪಾಲಿಟಿ ಆಡಳಿತ ಜಾರಿಗೆ ಬಂದಿತು.[46] ಆಗ ಹೊಸ ಹೊಸ ತೆರಿಗೆಗಳನ್ನು ವಿಧಿಸಲಾಯಿತು. ನೂತನ ರಸ್ತೆ ಹಾಗೂ ಬಡಾವಣೆಗಳ ನಿರ್ಮಾಣಕ್ಕಾಗಿ ಮಠಗಳ ಆಸ್ತಿಗಳನ್ನು ಬಿಟ್ಟುಕೊಡುವುದು ಅನಿವಾರ್ಯವಾಯಿತು.[47] ಈ ಸಂದರ್ಭದಲ್ಲಿ ಬೇಲಿ ಮಠದ ಆಸ್ತಿಗಳಿಗೂ ಸಂಚಕಾರವಾಯಿತೆಂದು ಬೇರೆ ಹೇಳ ಬೇಕಾಗಿಲ್ಲ. ಈ ಮಧ್ಯೆ ೧೮೬೭-೬೮ರಲ್ಲಿ ಪಟ್ಟಣದ ಒಳಭಾಗದಲ್ಲಿದ್ದ ಎಲ್ಲಾ ಸ್ಮಶಾನಗಳನ್ನೂ ಮುಚ್ಚಿಸಲಾಯ್ತು.[48] ಇದುವರೆಗೆ ಮಠಗಳ ಸುತ್ತಮುತ್ತಲಿನ ಆವರಣಗಳೇ ಬೆಂಗಳೂರಿನ ವೀರಶೈವರ ಸ್ಮಶಾನಗಳಾಗಿದ್ದವು.[49] ಅವುಗಳನ್ನು ಮುಚ್ಚಿಸಿದ ಮೇಲೆ ಹಾಗೂ ಇನ್ನಿತರ ಕಾರಣಗಳಿಗಾಗಿ ಸಮಾಜಕ್ಕೂ ಮಠಗಳಿಗೂ ಇದ್ದ ಭಾವನಾತ್ಮಕ ಸಂಬಂಧಗಳಿಗೆ ಸಂಪೂರ್ಣ ಕಡಿವಾಣ ಬಿದ್ದಂತಾಯಿತು. ಹೀಗೆ ಕಾಲದಿಂದಲೂ ನಡೆದು ಬಂದಿದ್ದ ಮಠ-ಮಂದಿರಗಳಲ್ಲಿನ ಧಾರ್ಮಿಕ ಆಚರಣೆಗಳು ತಂತಾನೆ ನಿಂತುಹೋಗುವಂತಹ ಪರಿಸ್ಥಿತಿ ಒದಗಿಬಂತು. ಇಂತಹ ಕಠಿಣ ಪರಿಸ್ಥಿತಿಯಲ್ಲಿ ಮುಖ್ಯ ಚರಂತಿಗೆಯವರಾಗಿದ್ದ ಬೇಲಿಮಠದ ಸಿದ್ಧಲಿಂಗ ದೇವರು ತಮ್ಮ ಮುಖ್ಯಮಠದ ಸಂರಕ್ಷಣೆಯ ಜೊತೆಗೆ ; ತಮ್ಮ ಚರಂತಿಗೆಗೆ ಒಳಪಟ್ಟ ಶಾಖಾಮಠಗಳ ಮೇಲಿನ ಹಿಡಿತವನ್ನು ಸಾಧಿಸುವುದು ಕಷ್ಟವಾಗತೊಡಗಿತು.

ಕ್ರಿ.ಶ.೧೮೫೮ರ ವೇಳೆಗೆ ಸಿದ್ಧಲಿಂಗಸ್ವಾಮಿಗಳು ರುದ್ರಸ್ವಾಮಿಗಳನ್ನು ತಮ್ಮ ಚರಂತಿಗೆಯ ಉತ್ತರಾಧಿಕಾರಿಗಳನ್ನಾಗಿ ನೇಮಿಸಿಕೊಂಡಿದ್ದರು. ಸಾಮಾನ್ಯವಾಗಿ ರುದ್ರಸ್ವಾಮಿಗಳು ಪಟ್ಟಣದಿಂದ ಹೊರಗಿದ್ದ ಶಾಖಾಮಠಗಳ ಮೇಲೆ ನಿಗಾವಹಿಸುತ್ತಿದ್ದುದೇ[50] ಹೆಚ್ಚು.

ಜೊತೆಗೆ ಬೇಲಿಮಠದಲ್ಲೆ ನಡೆಯುತ್ತಿದ್ದ ಯುವ ವಟುಗಳಿಗೆ ಶಿಕ್ಷಣ, ಇವರ ಜವಾಬ್ದಾರಿಯಾಗಿತ್ತು. ಈ ಗುರು-ಶಿಷ್ಯರಿಬ್ಬರೂ ಕೂಡಿ ಕ್ರಿ.ಶ. ೧೮೮೦ರಲ್ಲಿ ಹಳೆಯ ಬೇಲಿಮಠವನ್ನು ಜೀರ್ಣೋದ್ಧಾರ ಮಾಡಿಸಿ ಮತ್ತಷ್ಟು ನೂತನ ಕಟ್ಟಡಗಳನ್ನು ಕಟ್ಟಿಸಿದರು. ಮುಂದೆ ಕ್ರಿ.ಶ. ೧೮೯೮ರಲ್ಲಿ ದೊಡ್ಡಬಸವೇಶ್ವರನ ಗುಡಿಗೆ ಹೋಗುವ ಮಾರ್ಗದಲ್ಲಿದ್ದ ಬೇಲಿಮಠದ ಇನಾಂ ಜಮೀನು ಶಂಕರಪುರ ಬಡಾವಣೆಯ ವಿಸ್ತರಣೆಗೋಸ್ಕರವಾಗಿ ಆಕ್ರಮಿತವಾಗಿಬಿಟ್ಟಿತು.[51] ಇಷ್ಟೆಲ್ಲಾ ಏರಿಳಿತಗಳ ನಡುವೆ ಸಿದ್ಧಲಿಂಗಸ್ವಾಮಿಗಳು ಹಾಗೂ ಅವರ ಉತ್ತರಾಧಿಕಾರಿ ರುದ್ರಸ್ವಾಮಿಗಳು ಇಬ್ಬರೂ ಒಟ್ಟಿಗೆ ನಲವತ್ತು ವರ್ಷಗಳಷ್ಟು ಸುದೀರ್ಘವಾಗಿ ಸದ್ದುಗದ್ದಲವಿಲ್ಲದೆ ಮಠದ ಆಡಳಿತದಲ್ಲಿ ಸಹಭಾಗಿಗಳಾಗಿದ್ದುದು ಒಂದು ವಿಶೇಷ.

೧೮೯೮ರ ಅಂತ್ಯದ ವೇಳೆಗೆ ಬೆಂಗಳೂರು ಪಟ್ಟಣದಲ್ಲಿ ಪ್ಲೇಗು ರೋಗದ ಹಾವಳಿ ಮಾರಕವಾಗಿತ್ತು. ಹಿರಿಯರೂ ವಯೋವೃದ್ಧರೂ ಆಗಿದ್ದ ಸಿದ್ಧಲಿಂಗಸ್ವಾಮಿಗಳು ದಿನಾಂಕ : ೨೦.೨.೧೮೯೯ರಲ್ಲಿ ಪ್ಲೇಗು ರೋಗಕ್ಕೆ ತುತ್ತಾದಾಗ[52], ಕಿರಿಯ ಗುರುಗಳಾಗಿದ್ದ ರುದ್ರದೇವರು ಅವರ ಅಂತ್ಯ ಸಂಸ್ಕಾರವನ್ನು ನೆಲಮಂಗಲದ ಸಮೀಪ ಹುಸ್ಕೂರು ಗ್ರಾಮದಲ್ಲಿ ನೆರವೇರಿಸಿದರು. ಅವರ ಅಂತ್ಯಕ್ರಿಯೆಗಳು ಇನ್ನೂ ಮುಗಿಯುತ್ತಿದ್ದಂತೆಯೇ ರುದ್ರಸ್ವಾಮಿಗಳೂ ಕೂಡ ಅಲ್ಲೇ ಅದೇ ರೋಗಕ್ಕೆ ಬಲಿಯಾದದ್ದು ಬೇಲಿಮಠದ ದುರ್ದೈವವಾಗಿತ್ತು. ಗುರುಗಳು ತೀರಿಕೊಂಡ ಎಂಟೇ ದಿನಗಳಲ್ಲಿ ದಿನಾಂಕ : ೨೭.೨.೧೮೯೯ರಂದು ರುದ್ರಸ್ವಾಮಿಗಳೂ ದೈವವಶರಾದರು.[53] ಈಗಲೂ ಗುರು ಶಿಷ್ಯರಿಬ್ಬರ ಗದ್ದುಗೆಗಳು ಹುಸ್ಕೂರು ಗ್ರಾಮದಲ್ಲಿವೆ.

೧೮೮೫ರ ಹೊತ್ತಿಗೆ ಬೇಲಿಮಠದಲ್ಲೆ ಇದ್ದು ಶಿಷ್ಯವೃತ್ತಿಯನ್ನು ನಡೆಸಿಕೊಂಡಿದ್ದ ಶಿವರುದ್ರಮರಿದೇವರು ಉಭಯ ಗುರುಗಳಿಗೂ ಅಪಾರ ಮೆಚ್ಚಿಗೆಯುಳ್ಳವರಾಗಿದ್ದರು.[54] ಬೇಲಿಮಠದ ಗುರುಗಳಿಬ್ಬರೂ ಹಠಾತ್ತಾಗಿ ಲಿಂಗೈಕ್ಯರಾದಾಗ ಸಮಾಜದ ಗುರು-ಹಿರಿಯರೆಲ್ಲಾ ಸೇರಿ ಮಠಕ್ಕೆ ಸಾಕಷ್ಟು ಪರಿಚಿತರಾಗಿದ್ದ ಶಿವರುದ್ರಸ್ವಾಮಿ (ಮರಿದೇವರು)ಗಳನ್ನೇ ಮುಂದಿನ ಚರಂತಿಗೆಯವರನ್ನಾಗಿ ಆಯ್ಕೆ ಮಾಡಿದರು. ಹೀಗೆ ಇದ್ದಕ್ಕಿದ್ದಂತೆ ಚರಂತಿಗೆಯ ಮೂಲ ಮಠದ ಆಧಿಪತ್ಯ ವ್ಯತ್ಯಸ್ತವಾದ ಸಂದರ್ಭದಲ್ಲಿ ಅನೇಕ ಶಾಖಾ ಮಠಗಳು ಸ್ವತಂತ್ರ ಮಠಗಳಾಗಿ ಪರಿವರ್ತನೆಗೊಂಡಂತಿವೆ.[55] ಆರಂಭದ ದಿನಗಳಲ್ಲಿ ಎದುರಾದ ಅನೇಕ ಎಡರು ತೊಡರುಗಳನ್ನು ಸರಿಪಡಿಸಿಕೊಳ್ಳಲು ಶಿವರುದ್ರಸ್ವಾಮಿಗಳಿಗೆ ಒಂದು ದಶಕವೇ ಬೇಕಾಯಿತು. ಬಸವಲಿಂಗಸ್ವಾಮಿ ಎಂಬುವರು (ಬೇಲಿಮಠದ ಶಾಖೆಯಾಗಿದ್ದ ಮುದ್ದಪ್ಪಸ್ವಾಮಿ ಮಠದ ಅಧಿಪತಿಗಳು) ತಾವೇ ಬೇಲಿಮಠದ ನಿಜವಾದ ಉತ್ತರಾಧಿಕಾರಿಗಳೆಂದು ನ್ಯಾಯಾಲಯದಲ್ಲಿ ದಾವೆ ಹೂಡಿದ್ದರು.[56] ಈ ದಾವೆಯ ಪ್ರಕಾರ ೧೯೦೮ರ ವೇಳೆಗೆ ಬೇಲಿಮಠಕ್ಕೆ ಒಳಪಟ್ಟಿದ್ದ ಶಾಖಾಮಠಗಳ ಪಟ್ಟಿ ಈ ರೀತಿ ಇದೆ.

೧. ಅಕ್ಕಿಪೇಟೆಯ ದೊಡ್ಡಮಠ

೨. ತೋಟದದೇವರ ಗಲ್ಲಿಯ ನಂಬೆಣ್ಣನ ಚೌಕಿಮಠ

೩. ವೀರಭದ್ರಸ್ವಾಮಿ ದೇವಾಲಯದ ಹಿಂದಿನ ಚೌಕಿಮಠ,

೪. ಮುದ್ದಪ್ಪಸ್ವಾಮಿಮಠ

೫. ಕಂಬಿನಂಜಯ್ಯನಮಠ

೬. ಶಿವನಹಳ್ಳಿಯಮಠ

೭. ನೆಲಮಂಗಲದ ಹೊಸಮಠ

೮. ಮಲ್ಲರಬಾಣವಾಡಿಮಠ

೯. ಮೈಲನಹಳ್ಳಿಮಠ

೧೦. ಮಾಚೆನಾಯ್ಕನಹಳ್ಳಿಮಠ

೧೧. ಗುಡೇಮಾರನಹಳ್ಳಿ ಮಠ

೧೨. ಚಿಕ್ಕಬಳ್ಳಾಪುರದ ಜಡೇದೇವರಮಠ

ಹಾಗೂ ಬೇಲಿಮಠದಲ್ಲಿರುವ ರಿಕಾರ್ಡಿನಲ್ಲಿ ಕಂಡುಬರುವ ಇತರೇ ಮಠಗಳು ಎಂದಿದೆ.[57]

ಶಿವರುದ್ರಸ್ವಾಮಿಗಳು ಮಠದ ಮೂಲ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಸಾಕಷ್ಟು ಶ್ರಮಿಸಬೇಕಾಯಿತು. ೧೮೯೮ರ ವೇಳೆಗಾಗಲೇ ಪ್ರಾರಂಭವಾಗಿದ್ದ ಕಂಬಳಿ (ಬಿನ್ನಿ) ಮಿಲ್ಲಿಗೆ ತಮ್ಮ ಹಿರಿಯರು ಮಾಡಿಕೊಟ್ಟಿದ್ದ ಕರಾರನ್ನು ಪುನರ್‌ನವೀಕರಿಸಿ ಹೆಚ್ಚಿನ ಆದಾಯ ಬರುವಂತೆ

ಮಾಡಿದ್ದರು.[58] ಮಠದ ಇನಾಂತಿ ಜಮೀನಿಗಾಗಿ ಬಂದ ಪರಿಹಾರದ ಹಣವನ್ನು ಬಳಸಿಕೊಂಡು ಮತ್ತೆ ಹುಸ್ಕೂರು ಗ್ರಾಮದಲ್ಲಿ ಹನ್ನೆರಡೂವರೆ ಎಕರೆ ಖುಷ್ಕಿ ಭೂಮಿಯನ್ನು ಖರೀದಿಸಿದ್ದರು. ಇದರ ಜೊತೆಗೆ ಅರಳೆಪೇಟೆಯ ಶಂಕರಣ್ಣನವರ ಶಿವಪ್ಪನವರ ಸಹಭಾಗಿತ್ವದಲ್ಲಿ ಶ್ರೀರಂಗಪಟ್ಟಣದ ಬಳಿಯ ಕಿರಂಗೂರಿನಲ್ಲಿ ಹನ್ನೆರಡೂವರೆ ಎಕರೆ ತರಿಭೂಮಿಯನ್ನೂ ಖರೀದಿಸಿದ್ದರು. ಇವುಗಳಿಂದ ಬರುವ ಉತ್ಪನ್ನವನ್ನು ಮಠಕ್ಕೆ ಬರುವ ಭಕ್ತಾದಿಗಳಿಗೆ ಪ್ರಸಾದ ವಿನಿಯೋಗ ಹಾಗೂ ಉಚಿತ ವಿದ್ಯಾರ್ಥಿ ನಿಲಯಗಳಿಗೆ ವ್ಯವಸ್ಥಿತವಾಗಿ ಉಪಯೋಗವಾಗುವಂತೆ ಮಾಡಿದ್ದರು.[59]

ಶಿವರುದ್ರಸ್ವಾಮಿಗಳು ೧೯೨೨ರಲ್ಲಿ ಸಿದ್ಧಲಿಂಗಮರಿ ಎಂಬ ವಟುವನ್ನು ಆರಿಸಿಕೊಂಡು ಅವರಿಗೆ ಸೂಕ್ತ ಶಿಕ್ಷಣ ಕೊಡತೊಡಗಿದರು. ಈ ಮರಿಯು ೧೯೨೩ರ ನವೆಂಬರ್ ನಲ್ಲಿ ಶಿವಾಧೀನರಾದರು. ಮುಂದೆ ದಿನಾಂಕ : ೧.೫.೧೯೨೪ರಂದು ಟ್ರಸ್ಟ್ ಡೀಡೊಂದನ್ನು ಬರೆಸಿ, ದಿವಾನ್ ಬಹಾದ್ದೂರ್ ಸರ್.ಕೆ.ಪಿ. ಪುಟ್ಟಣ್ಣ ಶೆಟ್ಟರ ಅಧ್ಯಕ್ಷತೆಯಲ್ಲಿ ಮಠದ ಆಡಳಿತಕ್ಕಾಗಿ ಕಮಿಟಿಯೊಂದನ್ನು ರಚಿಸಿದರು. ಆ ಕಮಿಟಿಯಲ್ಲಿ ತಾವೂ ಸೇರಿದಂತೆ ದೇಶದ ಯಜಮಾನ್ ಬಸಪ್ಪ, ಶಂಕರಣ್ಣನವರ ಶಿವಪ್ಪ ಹಾಗೂ ತೂಬುಗೆರೆ ನಂಜಪ್ಪನವರುಗಳು ಸದಸ್ಯರಾಗಿದ್ದರು.

ಈ ಕರಾರಿನ ಮುಖ್ಯಾಂಶಗಳೇನೆಂದರೆ ''ಮೇಲ್ಕಂಡ ಶ್ರೀಮಠವು ಅನಾದಿ ಸಂಸಿದ್ಧ ವೀರಶೈವ ಮತಕ್ಕೆ ಸಂಬಂಧಪಟ್ಟ ನಿರಾಭಾರಿ ಶ್ರೀಪ್ರಭು ಶೂನ್ಯಸಿಂಹಾಸನ ಗುರುಪರಂಪರೆಯ ಕೆಂಪಿನ ಸಮಯದ ಮುನುವಳ್ಳಿ ಶಿವಾನುಭವಕ್ಕೆ ಸೇರಿದ ಮುಖ್ಯಮಠ. ಮಠದ ಪದ್ಧತಿಯ ಪ್ರಕಾರ (ತಾವಿಲ್ಲದಪಕ್ಷದಲ್ಲಿ) ತಮ್ಮ ಸಮಯಕ್ಕೆ ಸೇರಿದ ನೈಜಾಂ ಇಲಾಖಾ ಕಲಬುರ್ಗಿಯ ಸಮೀಪವಿರುವ ಶ್ರೀ ಬಸವತೀರ್ಥಮಠದ[60] ಸ್ವಾಮಿಗಳಿಂದ ಮುಂದಿನ ವಟುವಿಗೆ ಅಧಿಕಾರ ಕೊಡಿಸುವುದು. ಮುಂದೆ ತಮ್ಮ ಮಠದ ವತಿಯಿಂದ ನಿರಂತರ ದಾಸೋಹ ಹಾಗೂ ಸಂಸ್ಕೃತ ಪಾಠಶಾಲೆಗಳನ್ನು ಟ್ರಸ್ಟ್ ನಡೆಸಿಕೊಂಡು ಹೋಗುವುದು. ಇನ್ನೊಂದು ಪ್ರಮುಖವಾದ ವಿಚಾರವೇನೆಂದರೆ ತಮ್ಮ ಶಾಖಾಮಠಗಳಲ್ಲಿರುವ ಮಠಾಧಿಪತಿಗಳು ಆಯಾ ಮಠಗಳ ಅಭಿವೃದ್ಧಿ, ಆಚಾರ ವಿಚಾರಗಳನ್ನು ನೋಡಿಕೊಂಡು ಇರತಕ್ಕದ್ದೇ ಹೊರತು ಅವರು ಇತರರಿಗೆ ಆಶ್ರಮವನ್ನು ಕೊಡಲಿಕ್ಕಾಗಲಿ ಅಥವಾ ಮಠದ ಸ್ವತ್ತುಗಳನ್ನು ಕಲಾಲ್ ಮಾಡಲಾಗಲೀ ಅಧಿಕಾರವಿರುವುದಿಲ್ಲ. ಈ ಕರಾರಿನ ಪ್ರಕಾರ ನೆಲಮಂಗಲದ ಹೊಸಮಠ, ಮಲ್ಲರಬಾಣವಾಡಿಮಠ, ಗುಡೇಮಾರನಹಳ್ಳಿ ಜಗಣ್ಣಯ್ಯನಮಠ, ಮಾಚೆನಾಯ್ಕನಹಳ್ಳಿ ಮಠ, ಮತ್ತು ವೈಲನಹಳ್ಳಿ ಮಠಗಳು ಮಾತ್ರ ಬೇಲಿಮಠದ ಶಾಖಾಮಠಗಳಾಗಿದ್ದವು.[61]'' ಮುಂದೆ ದಿನಾಂಕ : ೪.೩.೧೯೨೯ರಲ್ಲಿ ಈ ಟ್ರಸ್ಟ್ ಡೀಡನ್ನು ಸಂಬಂಧಪಟ್ಟವರೆಲ್ಲಾ ಸೇರಿ ವಜಾ ಮಾಡಿಸಿರುತ್ತಾರೆ.[62] ಅದೇ ವರ್ಷ ಬಿನ್ನಿ ಕಂಪನಿಗೆ ತಮ್ಮ ಮಠದಿಂದ ಕೊಟ್ಟಿದ್ದ ೨ ಎಕರೆ ೧೫ ಗುಂಟೆ ಜಮೀನಿಗೆ ಮತ್ತೊಂದು ಕರಾರು ಮಾಡಿಕೊಂಡು ೯೯ ವರ್ಷಗಳ ಕಾಲ ಮಾಹೆಯಾನ ೧೫೦/- ರೂಗಳ ಬಾಡಿಗೆ ಗೊತ್ತುವಳಿ ಮಾಡಿಕೊಂಡರು.[63]

ಶಿವರುದ್ರಸ್ವಾಮಿಗಳು ದಿನಾಂಕ : ೯.೫.೧೯೨೪ ರಂದು ತುಮಕೂರಿನ ಬಳಿಯ ಗೂಳೂರಿನ ನಡುವಣಮಠದ ವೇ॥ ಚೆನ್ನವೀರದೇವರ ಮಕ್ಕಳಾಗಿದ್ದ ಚನ್ನಬಸವದೇವರು ಎಂಬುವರಿಗೆ ತಮ್ಮ ಉತ್ತರಾಧಿಕಾರತ್ವದ ದೀಕ್ಷೆಯನ್ನು ನೀಡಿ ಇಮ್ಮಡಿ ಸಿದ್ಧಲಿಂಗದೇವರೆಂದು ನೂತನ ನಾಮಕರಣ ಮಾಡಿದರು.[64] ಈ ಗುರು-ಶಿಷ್ಯರಿಬ್ಬರೂ ಕೂಡಿ ಮುಂದೆ ದಿನಾಂಕ : ೨೮.೪.೧೯೪೦ರಲ್ಲಿ ಮಠದ ಪರಂಪರೆಗೆ ಅನುಗುಣವಾಗಿ ಮತ್ತೊಂದು ಟ್ರಸ್ಟ್ ಡೀಡ್ ಬರೆಸಿದ್ದರು. ಅದರ ಪ್ರಕಾರ - '೪೦,೧೨೫/-ರೂಗಳ ಇಡುಗಂಟನ್ನು ಬಿನ್ನಿ ಕಂಪೆನಿಯಲ್ಲಿ ಮೂಲಧನವನ್ನಾಗಿರಿಸಿ, ಅದರಿಂದ ಮಾಹೆಯಾನ ೨೫೦/- ರೂಗಳ ಬಡ್ಡಿ ಬರುವಂತೆ ಮಾಡಿದ್ದರು. ಈ ಹಣದಲ್ಲಿ ೨೦೦ ರೂಗಳನ್ನು ತಾವೇ ಸ್ಥಾಪಿಸಿದ್ದ ''ಶ್ರೀ ಶಿವರುದ್ರಸ್ವಾಮಿಗಳ ವೇದಪಾಠಶಾಲಾ ಮತ್ತು ಫ್ರೀ ಬೋರ್ಡಿಂಗ್ ಹೋಮ್''ನ ನಿರ್ವಹಣೆಗೂ; ಉಳಿದ ೫೦/- ರೂಗಳನ್ನು ಮಠದ ನಿತ್ಯ ನಿರ್ವಹಣೆಗೂ ಬಳಸುವಂತೆ ವಿಧಿಸಲಾಗಿತ್ತು.[65] ಇಷ್ಟೆಲ್ಲಾ ವ್ಯವಹಾರ ಚತುರರಾಗಿ ಮಠವನ್ನು ಸಾಮಾಜಿಕವಾಗಿ ತೊಡಗಿಸುವಲ್ಲಿ ಯಶಸ್ವಿಗಳಾಗಿದ್ದ ಶಿವರುದ್ರಸ್ವಾಮಿಗಳು ೧೯೪೧ರ ಆಗಸ್ಟ್ ೬ ರಂದು ಲಿಂಗೈಕ್ಯರಾದರು.[66] ಇವರ ಕಾಲದಲ್ಲಿ ಮಠದಲ್ಲಿ ನಡೆಯುತ್ತಿದ್ದ ಧಾರ್ಮಿಕ ಚಟುವಟಿಕೆಗಳು ಅಂದಿನ 'ಮೈಸೂರ್ ಸ್ಟಾರ್' ಪತ್ರಿಕೆಯಲ್ಲಿ ಪ್ರಶಂಸೆ

ಗೊಂಡಿವೆ.[67] ಸಿದ್ಧಗಂಗೆ, ಸುತ್ತೂರು, ಹುಣಸಮಾರನಹಳ್ಳಿ ಮುಂತಾದ ಮಠಾಧೀಶರೊಂದಿಗೆ ಇವರು ಸೌಹಾರ್ದಯುತವಾದ ಬಾಂಧವ್ಯವುಳ್ಳವರಾಗಿದ್ದರು.[68] ಸ್ವಾತಂತ್ರ್ಯ ಪೂರ್ವದಲ್ಲಿ ಇವರ ಪರಿಶ್ರಮದ ಫಲವಾಗಿ ಬೆಂಗಳೂರಿನ ಬೇಲಿಮಠವು ಶೈಕ್ಷಣಿಕವಾಗಿ ಅತ್ಯುನ್ನತ ಸ್ಥಾನದಲ್ಲಿದ್ದಿತು. ಕೆಂಪಿನ ಸಮಯದ ಮುಖ್ಯ ಮಠವಾಗಿದ್ದ ಬೇಲಿಮಠದ ಐತಿಹಾಸಿಕ ಪರಂಪರೆಯು ಬಹುಶಃ ಶಿವರುದ್ರಸ್ವಾಮಿಗಳೊಂದಿಗೇ ಅಂತ್ಯವಾಯಿತೆಂದರೆ ತಪ್ಪಾಗಲಾರದು.

ಇಮ್ಮಡಿ ಸಿದ್ಧಲಿಂಗಸ್ವಾಮಿಗಳು ೧೯೪೧ರ ತರುವಾಯ ಚರಪಟ್ಟಾಧ್ಯಕ್ಷರಾಗಿ ತಮ್ಮ ಗುರುಗಳು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ಮಠವನ್ನು ಮುನ್ನಡೆಸತೊಡಗಿದರು. ಮಠದಲ್ಲಿ ಸಂಸ್ಕೃತ ಪಾಠಶಾಲೆ ಹಾಗೂ ವಿದ್ಯಾರ್ಥಿ ನಿಲಯಗಳು ಯಥಾಪ್ರಕಾರ ಮುಂದುವರೆದಿದ್ದವು. ೧೯೫೦ರ ವೇಳೆಗೆ ಬಿನ್ನಿಮಿಲ್ಲಿನ ಆಡಳಿತವರ್ಗವು ಮಠದ ಭೂಮಿಯನ್ನು ಗುತ್ತಿಗೆ ವಾಯಿದೆ ಮುಗಿಯುವ ಮುನ್ನವೆ ಸರ್ಕಾರದ ನೆರವಿನಿಂದ ತನ್ನದಾಗಿಸಿಕೊಂಡಿತು. ೨ ಎಕರೆ ೧೫ ಗುಂಟೆಯ ಈ ಭೂಮಿಗೆ ೯೯ ವರ್ಷಗಳ ಕರಾರನ್ನು ಮುರಿದು ಮೂರುಲಕ್ಷ ರೂಗಳ ಪರಿಹಾರವನ್ನು ನೀಡಿತು. ಆಗ ಸಿದ್ಧಲಿಂಗಸ್ವಾಮಿಗಳು ಮಠದ ಮೂಲ ಉದ್ದೇಶಗಳಿಗೆ ಚ್ಯುತಿ ಬಾರದ ಹಾಗೆ ಶಂಕರಪುರದಲ್ಲಿ ಎಂಬತ್ತು ಸಾವಿರ ರೂಗಳಿಗೆ ಒಂದು ವಿಶಾಲವಾದ ನಿವೇಶನದ ನಡುವಿದ್ದ ಕಟ್ಟಡವೊಂದನ್ನು ಖರೀದಿಸಿದರು. ಅದನ್ನೇ ಮಠದ ನೂತನ ವಿದ್ಯಾರ್ಥಿನಿಲಯವನ್ನಾಗಿ ಮಾಡಿ, ಅದರ ನಿತ್ಯ ಸೌಲಭ್ಯಕ್ಕಾಗಿ ಒಂದು ಲಕ್ಷದ ಎರಡು ಸಾವಿರ ರೂಗಳನ್ನು ಧಾರ್ಮಿಕ ದತ್ತಿ ಇಲಾಖೆಯಲ್ಲಿ ಮುಡುಪಾಗಿಟ್ಟು, ಬರುವ ಬಡ್ಡಿಯ ಹಣದಿಂದ ನಡೆಯುವ ವ್ಯವಸ್ಥೆ ಮಾಡಿದ್ದರು. ೧೯೫೧ರಲ್ಲಿ ಮೈಸೂರು ಮಹಾರಾಜರಾಗಿದ್ದ ಜಯಚಾಮರಾಜೇಂದ್ರ ಒಡೆಯರ್ ಅವರೇ ಈ ನೂತನ ವಿದ್ಯಾರ್ಥಿನಿಲಯವನ್ನು ಉದ್ಘಾಟಿಸಿದರು. ಪ್ರಾರಂಭದ ದಿನಗಳಲ್ಲಿ ೧೩೦ ಮಂದಿ ವಿದ್ಯಾರ್ಥಿಗಳಿಗೆ ಸೂಕ್ತ ಸೌಲಭ್ಯ ಕಲ್ಪಿಸಲಾಗಿತ್ತು. ೧೯೫೭-೫೮ರ ಸಾಲಿನಲ್ಲಿ ಈ ವಿದ್ಯಾರ್ಥಿ ನಿಲಯಕ್ಕಾಗಿ ಆಗಿನ ಕಂದಾಯ ಸಚಿವರಾಗಿದ್ದ ಎಚ್. ಸಿದ್ಧಯ್ಯನವರು ಮೂವತ್ತು ಎಕರೆ ಸರ್ಕಾರಿ ಜಮೀನನ್ನು ಯಶವಂತಪುರದ ಬಳಿ ಮಂಜೂರು ಮಾಡಿದ್ದರು. ಟ್ರಸ್ಟಿಗಳ ಔದಾಸ್ಯದಿಂದ ಸಂಬಂಧಪಟ್ಟ ಭೂಮಿಯೂ ಕೈತಪ್ಪಿಹೋಯಿತು.[69]

ಸಿದ್ಧಲಿಂಗಸ್ವಾಮಿಗಳ ಕಾಲದ ಮತ್ತೊಂದು ಪ್ರಮುಖ ಸಾಧನೆ ಎಂದರೆ, ಸಂಸ್ಕೃತದಲ್ಲಿದ್ದ 'ಶಿವಲಿಂಗಾರ್ಚನೆ ಪ್ರಯೋಗ', 'ವೀರಶೈವಾನಂದಚಂದ್ರಿಕೆ', 'ಲಿಂಗಧಾರಣಾ ಚಂದ್ರಿಕೆ' ಎಂಬ ಮೂರು ಉದ್ಗ್ರಂಥಗಳನ್ನು ಕನ್ನಡಕ್ಕೆ ಅನುವಾದಮಾಡಿ ಪ್ರಕಟಿಸಿದ್ದು. ಹೀಗೆ ಸುಮಾರು ಎರಡೂವರೆ ದಶಕಗಳ ಕಾಲ ಬೇಲಿಮಠದ ಸಾರಥ್ಯವನ್ನು ಮುನ್ನಡೆಸಿದ ಸಿದ್ಧಲಿಂಗಸ್ವಾಮಿಗಳು ೧೯೬೫ರಲ್ಲಿ ಲಿಂಗೈಕ್ಯರಾದರು. ಬಾಲ್ಯದಿಂದಲೂ ಇದೇ ಗುರುಗಳ ಸನ್ನಿಧಿಯಲ್ಲೇ ತರಬೇತಾಗಿದ್ದು, ಅವರ ಸಹೋದರ ಶಿವಣ್ಣನವರ ಮಕ್ಕಳಾಗಿದ್ದ, ಈಗಿನ ಇಮ್ಮಡಿ ಶಿವರುದ್ರ ಸ್ವಾಮಿಗಳು, ಬೇಲಿಮಠದ ಮುಂದಿನ ಶಿವಾನುಭವ ಚರಮೂರ್ತಿಗಳಾಗಿದ್ದಾರೆ.

**ಬೇಲಿಮಠದ ಗುರು ಪರಂಪರೆ :**

೧. ಹೊಸಕೋಟೆ ಮಹಾಂತಸ್ವಾಮಿಗಳು. ಕ್ರಿ.ಶ. ಸು. ೧೭೨೫-೧೭೬೧.

೨. ಸಂಗನಬಸವಸ್ವಾಮಿಗಳು. ಕ್ರಿ.ಶ. ಸು. ೧೭೫೦-೧೭೬೬.

೩. ಬಸವಲಿಂಗ (ಮರಿಸಿದ್ಧಲಿಂಗ) ಸ್ವಾಮಿಗಳು. ಕ್ರಿ.ಶ. ಸು. ೧೭೬೬-೧೮೨೫.

೪. ಚನ್ನವೀರಸ್ವಾಮಿಗಳು. ಕ್ರಿ.ಶ. ಸು. ೧೮೦೦.

೫. ಕೆಂಪುನಂಜೆಸ್ವಾಮಿಗಳು. ಕ್ರಿ.ಶ. ೧೮೧೮-೧೮೪೩.

೬. ಸಿದ್ಧಲಿಂಗಸ್ವಾಮಿಗಳು. ಕ್ರಿ.ಶ. ೧೮೨೫-೧೮೯೯.

೭. ರುದ್ರಸ್ವಾಮಿಗಳು. ಕ್ರಿ.ಶ. ೧೮೫೮-೧೮೯೯.

೮. ಶಿವರುದ್ರಸ್ವಾಮಿಗಳು. ಕ್ರಿ.ಶ. ೧೮೯೯-೧೯೪೧.

೯. ಇಮ್ಮಡಿ ಸಿದ್ಧಲಿಂಗಸ್ವಾಮಿಗಳು. ಕ್ರಿ.ಶ. ೧೯೨೪-೧೯೬೫.

೧೦. ಇಮ್ಮಡಿ ಶಿವರುದ್ರಸ್ವಾಮಿಗಳು. ಕ್ರಿ.ಶ. ೧೯೬೫...

## ಅಡಿಟಿಪ್ಪಣಿಗಳು

1. ಕೋಟೆಯ ಪಶ್ಚಿಮ ಭಾಗಕ್ಕೆ ಮೂರು ಬಾಗಿಲುಗಳಿದ್ದುದನ್ನು ಬೇಲಿಮಠದ ಕೆಲವು ದಾಖಲೆಗಳು ಸ್ಪಷ್ಟಪಡಿಸುತ್ತವೆ. ಒಂದನೆಯ 'ಸೊಂಡೆಕೊಪ್ಪದ ಬಾಗಿಲು' ಈಗಿನ ಓ.ಟಿ.ಸಿ.ರಸ್ತೆಯ ವೀರಭದ್ರಸ್ವಾಮಿ ಗುಡಿಯ ಮುಂಭಾಗದ ಬೀದಿಯಲ್ಲಿತ್ತು. ಎರಡನೆಯ 'ಅಗ್ರಹಾರದ ಬಾಗಿಲು' ಬೇಲಿಮಠದ ಮುಂಭಾಗದ ಬೀದಿಯಲ್ಲಿದ್ದು ನೇರವಾಗಿ ಅಗ್ರಹಾರಕ್ಕೆ ಹೋಗುವ ಮಾರ್ಗವಾಗಿತ್ತು. ಮೂರನೆಯ 'ಕೆಂಗೇರಿ ಬಾಗಿಲ'ನ್ನು 'ತಟ್ಟಿನ ಬಾಗಿಲು' ಎಂದೂ ಕರೆಯುತ್ತಿದ್ದರು. ಅದು ಹಿಂದೆ ಈಗಿನ ಚರ್ಚ್ ಸರ್ಕಲ್ ಬಳಿಯ ಉತ್ತರ ಬದಿಗಿದ್ದ ಬಸವೇಶ್ವರನ ಗುಡಿಗೆ (ಈಗಿಲ್ಲ!) ಮುಂಭಾಗದಲ್ಲಿತ್ತು.
2. ಫ್ರಾನ್ಸಿಸ್ ಬುಖಾ ನನ್‌ನ ಆಂಗ್ಲ ಪ್ರವಾಸಿಕಥನದಲ್ಲೂ ಈ ಅಭೇದ್ಯ ಬೇಲಿಯ ಪ್ರಸ್ತಾಪವಾಗಿದೆ. (ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೮೯).
3. ಈ ಶಾಸನವನ್ನು ಮೊದಲು ಬೆಳಕಿಗೆ ತಂದವರು ಡಿ.ವಿ. ಪರಮಶಿವಮೂರ್ತಿ. ಬೇಲಿಮಠದ ಶಾಸನ. ಶಾಸನ ಸಂಶೋಧನೆ. ಪು.೧-೪.
4. ಹೋದಿಗೆರೆ ಮುರುಗೇಂದ್ರಪ್ಪನು ಮುಳುವಳ್ಳಿ ಹಳೇಮಠಕ್ಕೆ ಕಾರಣಕರ್ತರಾದ ಹುಲಿಕುಂಟೆ ಮಠದ ಶಿವಾನುಭಾವಿ ಚರಮೂರ್ತಿ ಶಾಂತಲಿಂಗಸ್ವಾಮಿಗಳಿಗೆ ಬರೆದ ಪತ್ರ (ಕ್ರಿ.ಶ. ೧೭೫೦). ಹರಿದು ಚೂರು ಚೂರಾಗಿರುವ ಈ ಪತ್ರದ ಒಂದು ಕೊನೆಗೆ ಪ್ರಮೋಧೂತ ಸಂವತ್ಸರ (ಕ್ರಿ.ಶ. ೧೭೫೦)ದ ಜೇಷ್ಠ ಶುದ್ಧ ೨ ಎಂಬುದಾಗಿ ನಮೂದಾಗಿದೆ.
5. ನಗರ ಏಕಾಂತಮಠದ ತೋಟದದೇವರು ಕೆಂಪುನಂಜೆಸ್ವಾಮಿಗಳಿಗೆ ಬರೆದಿರುವ ಪತ್ರ. ಹೇವಿಳಂಬಿ ಸಂವತ್ಸರ (ಕ್ರಿ.ಶ. ೧೮೩೭) ಪಾಲ್ಗುಣ ಬಹುಳ ೩.
6. ಡಿ.ವಿ. ಪರಮಶಿವಮೂರ್ತಿ. ಬೇಲಿಮಠದ ಶಾಸನ. ಶಾಸನ ಸಂಶೋಧನೆ. ಪು. ೩-೪ರಲ್ಲಿ ಇರುವಂತೆ.
7. ಹೊಸಕೋಟೆಯ ಮಹಾಂತಸ್ವಾಮಿಗಳ ಗದ್ದುಗೆಯ ಮೇಲಿನ ಮಂಟಪ ಬೇಲಿಮಠದಲ್ಲಿ ಈಗಲೂ ಇದೆ. ಈ ಮಂಟಪದ ದಕ್ಷಿಣದ ಕೆಳಗೋಡೆಯ ಕಲ್ಲಿನ ಮೇಲೆ ಈ ಶಾಸನವಿದೆ.
8. ಜಿ.ಎಂ. ಉಮಾಪತಿಶಾಸ್ತ್ರಿ. (ಸಂ) ಮರಿಸಿದ್ಧಲಿಂಗನ 'ಮಾಲಾಟೀಕೆ'. ಅಂತ್ಯೋಲ್ಲೇಖ. ೧೦೭-೧೩.
9. ಡಾ। ಬಿ.ಆರ್. ಹಿರೇಮಠ. ಹಸ್ತಪ್ರತಿ ಲಿಪಿಕಾರರು. (ಏಕೋತ್ತರ ಶತಸ್ಥಲದ ಉಲ್ಲೇಖ) ಸಾಧನೆ. ೧೨-೨ (೧೯೮೩) ಪು. ೪೮.
10. ಡಾ। ವೀರಣ್ಣರಾಜೂರ. ಮಹಂತಿನ ತಾರಾವಳಿ. ಪರಂಜ್ಯೋತಿ. ೧೬-೪. ಪು. ೨೦೪.
11. ಕವಿಚರಿತ್ರಕಾರರು ಉಲ್ಲೇಖಮಾಡಿರುವ ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿ (ಕ್ರಿ.ಶ. ೧೭೦೦) ಯೆ (ಆರ್. ನರಸಿಂಹಾಚಾರ್. ಕರ್ನಾಟಕ ಕವಿಚರಿತ ಸಂ-೨. ಪು. ೪೯೮) ಮರಿಸಿದ್ಧಲಿಂಗದೇಶಿಕನಿರಬೇಕೆಂದು ಅಭಿಪ್ರಾಯಪಡುವ ಎಸ್. ಶಿವಣ್ಣನವರು, 'ಅಷ್ಟಾವರಣಪ್ರಶಸ್ತಿ' ಹಾಗೂ 'ಭಾವಚಿಂತಾರತ್ನಟೀಕೆ' ಎಂಬ ಕೃತಿಗಳನ್ನು ಅವನ ಹೆಸರಿನಲ್ಲಿ ಉಲ್ಲೇಖಿಸಿರುತ್ತಾರೆ. (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ. ಸಂ - ೪. ಪು. ೪೭೭)
12. ಬೇಲಿಮಠದಲ್ಲಿ ಸುಮಾರು ಆರುನೂರಕ್ಕೂ ಮಿಕ್ಕು ಮೋಡಿ ಹಾಗೂ ಮಿಶ್ರ ಲಿಪಿಯ ಹಳೆಯ ಕಾಗದ ಪತ್ರಗಳಿವೆ. ಅವುಗಳಲ್ಲಿ ಬಹುತೇಕ ಪತ್ರಗಳನ್ನು ಪರಿಷ್ಕರಿಸಿ ಸರಳಗನ್ನಡದಲ್ಲಿ ಬರವಣಿಗೆ ಮಾಡಿರುತ್ತೇನೆ.
13. ಹೊಸಕೋಟೆಯ ಕೋಡಿಮಠದ ಬಸವಲಿಂಗಮರಿ ಹಾಗೂ ಅನ್ನಸಾಗರಮಠದ ಗುರುನಂಜೇಮರಿಗಳು ಬೇಲಿಮಠದ ಬಸವಲಿಂಗಸ್ವಾಮಿಗಳಿಗೆ ಬರೆದಿರುವಪತ್ರ. (ಇದರಲ್ಲಿ ಕಾಲನಿರ್ದೇಶನವಿಲ್ಲ.)
14. ಬೆಂಗಳೂರು ದೊಡ್ಡಪೇಟೆ ಕಪ್ಪಣ್ಣನವರ ಮಹಂತಪ್ಪನು ಬಸವಲಿಂಗಸ್ವಾಮಿಗಳಿಗೆ ಬರೆದಿರುವ ಪತ್ರ. (ಇದರಲ್ಲೂ ಕೂಡ ಕಾಲ ನಿರ್ದೇಶನವಿಲ್ಲ)
15. ಸಂಗನಬಸವಸ್ವಾಮಿಗಳು ಅಮೃತಸಾಗರದ ಅರಳೆಪೇಟೆಯ ದೇಶದ ಶೆಟ್ಟಿಯಜಮಾನರುಗಳಿಗೆ ಬರೆದಿರುವ ಪತ್ರ. (ಕಾಲನಿರ್ದೇಶನವಿಲ್ಲ.)
16. ಹಿಂದೆ ಮುಖ್ಯ ಚರಂತಿಗೆಯವರ ಅಧೀನ ಮಠಗಳಿಗೆಲ್ಲಾ ಒಬ್ಬೊಬ್ಬ ಉಸ್ತುವಾರಿ ಮಠಾಧಿಪತಿಗಳನ್ನು ನೇಮಿಸಲಾಗುತ್ತಿತ್ತು. ಮುಖ್ಯಚರಂತಿಗೆಯವರ ಶಿಷ್ಯವರ್ಗದವರೆ ಆಗಿರುತ್ತಿದ್ದ ಇವರುಗಳನ್ನು ದೇಶಿಕ, ಮರಿ, ಮರಿದೇವರುಗಳೆಂದು ಸಂಬೋಧಿಸುವುದು ರೂಢಿಯಲ್ಲಿತ್ತು. ಅಂತಹ ಮರಿದೇವರುಗಳಲ್ಲಿ ಮರಿಸಿದ್ಧಲಿಂಗರೂ ಒಬ್ಬರಾಗಿದ್ದರು.
17. ಕ್ರಿ.ಶ. ೧೭೭೧ರ ಶಾಸನದ ಜೊತೆಗೆ, ಮಠದಲ್ಲೇ ದೊರೆತ ಕ್ರಿ.ಶ. ೧೭೫೦ ರಿಂದ ೧೮೦೦ರ ವರೆಗಿನ ಮೋಡಿ ಪತ್ರಗಳನ್ನು ಪರಿಷ್ಕರಿಸಿದ ಸಾರಾಂಶವನ್ನು ಆಧರಿಸಲಾಗಿದೆ.
18. ಮುರಿಗಾಸಮಯ, ಕಂಪಿನಸಮಯ, ಚೀಲಾಳಸಮಯ, ಕುಮಾರಸಮಯ ಮತ್ತು ಸಂಪಾದನಾಸಮಯ-ಇವು ಐದು ಪ್ರಮುಖ ಸಮಯಭೇದಗಳು.

19. 'ಹಿಂದೆ ನಾಡಿನಾದ್ಯಂತ ಅಲ್ಲಲ್ಲಿ ಒಂದೊಂದು ಪ್ರಮುಖ ಚರಮೂರ್ತಿಗಳ ಮಠಗಳಿರುತ್ತಿದ್ದವು. ಇಂತಹ ಒಂದೊಂದುಪ್ರಮುಖ ಮಠಗಳಿಗೂ ಅರವತ್ತುನಾಲ್ಕು ಉಪಶಾಖಾಮಠಗಳಿದ್ದು ಇವೆಲ್ಲಾ ಮೂಲಮಠದ ಸಮಯ ಭೇದಗಳಿಗೇ ಒಳಪಟ್ಟವಾಗಿರುತ್ತಿದ್ದವು. ತಾತ್ವಿಕವಾಗಿ ಮೂಲಮಠದ ಚರಂತಿಗೆಯವರೇ ಇವುಗಳಿಗೆಲ್ಲಾ ಮೇಲಧಿಕಾರಿಗಳಾಗಿರುತ್ತಿದ್ದರು. ಬೆಂಗಳೂರಿನ ಬೇಲಿಮಠ, ಕಂಚುಗಲ್ಲು ಬಂಡೆಮಠ, ಮರಳೆಗವಿಮಠಗಳು ಈ ಭಾಗದ ಪ್ರಮುಖ ಚರಮೂರ್ತಿಗಳ ಮಠಗಳಾಗಿದ್ದವು' ಎಂಬುದಾಗಿ ಶಿವರುದ್ರಸ್ವಾಮಿಗಳು ಪ್ರತಿಪಾದಿಸುತ್ತಾರೆ. (ಚರಮೂರ್ತಿಶಿವರುದ್ರಸ್ವಾಮಿ(೮೩) ಮಠಾಧ್ಯಕ್ಷರು. ಕಂಚುಗಲ್ಲು ಬಂಡೆಮಠ. ಮಾಗಡಿ ತಾಲ್ಲೂಕು ಬೆಂಗಳೂರು ಜಿಲ್ಲೆ.)
20. ಚರಂತಿಗೆಯವರು ಸಾಮಾನ್ಯವಾಗಿ ಸಂಚಾರಿಗಳಾಗಿರುತ್ತಿದ್ದುದೇ ಹೆಚ್ಚು. ಆಜನ್ಮ ಬ್ರಹ್ಮಚಾರಿಗಳಾಗಿದ್ದ ಇವರು ತಮ್ಮ ಧಾರ್ಮಿಕ ಸಮಯಾಚಾರದ ಅಧಿಪತಿಗಳಾಗಿರುತ್ತಿದ್ದರು. ಇವರ ಮಠಾಧಿಪತ್ಯಗಳ ಮುಖ್ಯ ವ್ಯವಸ್ಥೆಯ ಯಜಮಾನಿಕೆಗೆ ಚರಂತಿಗೆ ಎಂಬುದಾಗಿ ಕರೆಯಲಾಗುತ್ತಿತ್ತು.
21. ಮುಂದೆ ಕ್ರಿ.ಶ. ೧೮೧೫ರ ವರೆಗೂ ದೊಡ್ಡಮಠವೇ ಈ ಚರಂತಿಗೆಯವರ ಮುಖ್ಯ ವ್ಯವಹಾರ ಕೇಂದ್ರವಾಗಿತ್ತು.
22. ಸಂಗನಬಸವಸ್ವಾಮಿ ಹಾಗೂ ಮರಿಸಿದ್ಧಲಿಂಗದೇಶಿಕ (ಬಸವಲಿಂಗಸ್ವಾಮಿ) ಇಬ್ಬರೂ ಹೊಸಕೋಟೆಯ ಮಹಾಂತಸ್ವಾಮಿಗಳಿಗೆ ಹಿರಿಯ ಮತ್ತು ಕಿರಿಯ ಸಮಕಾಲೀನ ಅನುಯಾಯಿಗಳಾಗಿದ್ದರು. ವಯಸ್ಸಿನಲ್ಲಿ ಹಿರಿಯರಾಗಿದ್ದು, ಗುರುಗಳಿಗೆ ಸರಿಸಮಾನ ವಯಸ್ಕರಾಗಿದ್ದ ಸಂಗನಬಸವಸ್ವಾಮಿಗಳು ಕ್ರಿ.ಶ. ೧೭೬೬ರ ಸುಮಾರಿಗೆ ಶಿವಾಧೀನರಾಗಿರಬೇಕು. ನೆಲಮಂಗಲದ ಹೊಸಮಠದಲ್ಲಿ ಈಗಲೂ ಇವರ ಗದ್ದುಗೆ ಉಳಿದಿರುವುದನ್ನು ನೋಡಬಹುದಾಗಿದೆ.
23. ಮೊದಲು ಬೇಲಿಮಠದಲ್ಲಿದ್ದ ಬಸವಲಿಂಗಸ್ವಾಮಿಗಳು ಮುಖ್ಯಚರಂತಿಗೆಯ ಅಧಿಕಾರವಾದ ಮೇಲೆ ಪರಂಪರೆಯ ಮುಖ್ಯ ಕೇಂದ್ರವಾಗಿದ್ದ ದೊಡ್ಡಮಠಕ್ಕೆ ವರ್ಗಾವಣೆಯಾದರು. ಮುಂದೆ ಕ್ರಿ.ಶ. ೧೮೨೫ರ ವರೆಗೂ ಇವರು ದೊಡ್ಡಮಠದಲ್ಲಿಯೇ ಉಳಿದುಕೊಂಡಿದ್ದುದಾಗಿ ಅವರ ವ್ಯವಹಾರಪತ್ರಗಳು ಸೂಚಿಸುತ್ತವೆ. ಕ್ರಿ.ಶ. ೧೮೨೨ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ದೊಡ್ಡಮಠಕ್ಕೆ ಕೊಟ್ಟ ಭೂದಾನ ಸನ್ನದು ಇವರ ಹೆಸರಿನಲ್ಲೇ ಇದೆ. ಇವರ ಗದ್ದುಗೆಯು ಬೇಲಿಮಠದಲ್ಲಿಯೇ ಇದೆ.
24. ಚನ್ನಮಲ್ಲಿಕಾರ್ಜುನ. (ಸಂ) ಸದ್ಧರ್ಮದೀಪಿಕೆ ಸಂಚಿಕೆ. ನಿರಂಜನವಂಶರತ್ನಾಕರ. ಭಾಗ-೨. ಪು. ೮೫.
25. ಶಿವರುದ್ರಸ್ವಾಮಿಗಳು ಮಾಡಿರುವ ಟ್ರಸ್ಟ್ ಡೀಡ್ ಪತ್ರ. ದಿ : ೮.೫.೧೯೨೪. ರಿ.ನಂ : ೩೭೮೮. ವಾಲ್ಯುಂ-೫೭೬. ಪು. ೪೧೮-೧೩೯. ಬೆಂಗಳೂರು.
26. ಡಾ। ಎಂ. ಚಿದಾನಂದಮೂರ್ತಿ. 'ಮುರಿಗಾಶಾಂತವೀರರ ಜೊತೆ ಶಿವಾಜಿಯ ಭೇಟಿ'. ಹೊಸತು ಹೊಸತು. ಪು. ೩೧೯, ೩೨೦.
27. ಬಹುಶಃ ಕ್ರಿ.ಶ. ೧೭೦೫ರ ಸುಮಾರಿಗೆ ಚಿತ್ರದುರ್ಗದಿಂದ ಸಿಡಿದು ಹೊರಬಂದು, ಮುಂದೆ ಕೆಂಪಿನಸಮಯಕ್ಕೆ ಕಾರಣಕರ್ತರಾದ ಕೆಂಪಿನಪ್ಪ (ಹೊಸಕೋಟೆಯ ಮಹಂತಪ್ಪ)ನವರು ಮತ್ತು ಅವರ ಶಿಷ್ಯರಾದ ಸಂಗನಬಸವಪ್ಪನವರು ಕಲ್ಯಾಣಸೀಮೆಯ ಹುಲೆಕುಂಟೆ (ಕಲಬುರ್ಗಿ ಸಮೀಪದ ಹುಲಕುಂಡ)ಯ ಬಸವತೀರ್ಥ ಮಠವನ್ನು ಮೊದಲು ಸ್ಥಾಪಿಸಿರಬೇಕು. ಅನಂತರ ದಕ್ಷಿಣದ ಕಡೆಗೆ ಪ್ರಯಾಣ ಬೆಳಸಿ ತಮ್ಮ ಜನ್ಮಭೂಮಿಯಾದ ಹೊಸಕೋಟೆ, ಬೆಂಗಳೂರು, ಪುಂಗನೂರು ಮುಂತಾದೆಡೆ ತಮ್ಮ ಸಮಯದ ಮಠಗಳನ್ನು ಸ್ಥಾಪಿಸಿದ್ದಿರಬೇಕು. ಆ ವೇಳೆಗೆ 'ಕಲ್ಯಾಣನಗರ'ವೆಂದೇ ಪ್ರಸಿದ್ಧಿಯಾಗಿದ್ದ ಬೆಂಗಳೂರನ್ನು ತಮ್ಮ ಕೆಂಪಿನಸಮಯದ ಮುಖ್ಯ ಕೇಂದ್ರವನ್ನಾಗಿರಿಸಿಕೊಂಡಿರುವ ಸಾಧ್ಯತೆಗಳುಂಟು.
28. ಹಳೆಯ (ಕಾಲ?) ಪತ್ರವೊಂದರಲ್ಲಿ 'ಬೆಂಗಳೂರು ಅರಳೆಪೇಟೆಗೆ ಸೇರಿದ ಹೊಸಪೇಟೆ ಊರ ಬಾಕಲಲ್ಲಿ (ಅಗ್ರಹಾರದ ಬಾಗಿಲಲ್ಲಿ) ಇರುವ ಬೇಲಿಮಠದ ಬಸವಲಿಂಗಸ್ವಾಮಿಗಳ ಪ್ರತಿಹಸ್ತರಾದ ಚನ್ನವೀರದ್ಯಾವರು' ಎಂದು ಸಂಬೋಧಿಸಲಾಗಿದೆ. ಬರೆದವರು ಯಾರು ಎಂಬ ಸೂಚನೆಯಿಲ್ಲ. ಇವರ ಗದ್ದುಗೆ ಮಲ್ಲರಬಾಣವಾಡಿಯಲ್ಲಿದೆ. ಬಹುಶಃ ಬಸವಲಿಂಗಸ್ವಾಮಿಗಳು ತಮ್ಮ ಇಳಿವಯಸ್ಸಿನಲ್ಲಿ ಮಲ್ಲರಬಾಣವಾಡಿ ಮಠದ ಅಧಿಪತಿಗಳಾಗಿದ್ದ ಚನ್ನವೀರ ಸ್ವಾಮಿಗಳನ್ನು ಮುಂದಿನ ಚರಂತಿಗೆಯವರನ್ನಾಗಿ ನೇಮಿಸಿಕೊಂಡಿರಬೇಕು. ಮುಂದೆ ೧೮೧೮ರ ವೇಳೆಗೆ ಬೇಲಿಮಠದ ಕೆಂಪು ನಂಜೆಸ್ವಾಮಿಗಳ ಹೆಸರು 'ಶಿವಾನುಭವ ಚರಂತಿಗೆ'ಯವರೆಂದು ಪ್ರಸ್ತಾಪವಾಗಿರುವುದರಿಂದ ಈ ವೇಳೆಗಾಗಲೇ (ಬಸವಲಿಂಗಸ್ವಾಮಿಗಳಿದ್ದಾಗಲೆ) ಚನ್ನವೀರಸ್ವಾಮಿಗಳು ಶಿವಾಧೀನರಾಗಿರಬೇಕು.
29. ಸುಲೇಗಾವಿ ಗುರುಬಸಪ್ಪನವರ ಪತ್ರ. ಕಾಲನಿರ್ದೇಶನವಿಲ್ಲ. ಬೇಲಿಮಠ.
30. 'ಶಿವಾನುಭವ ಚರಂತಿಗೆ' ಎಂಬ ವಿಶೇಷಣವನ್ನು ಮುಖ್ಯ ಚರಂತಿಗೆಯನ್ನು ಪಡೆದವರಿಗೆ ಮಾತ್ರ ಬಳಸಲಾಗುತ್ತಿತ್ತು. ಇದೇ ಚರಂತಿಗೆಯವರಿಗೆ ಸೇರಿದ ಬೇರಾವ ಶಾಖಾಮಠದ ಅಧಿಪತಿಗಳಿಗೂ ಈ ವಿಶೇಷಣವನ್ನು ಬಳಸುವ ಅಧಿಕಾರವಿರಲಿಲ್ಲ. ಶಾಖಾಮಠಸ್ಥರನ್ನು ಸಾಮಾನ್ಯವಾಗಿ ಅವರ ಹೆಸರಿನಮುಂದೆ ದೇಶಿಕ, ಮರಿ, ಮರಿದೇವರು ಎಂದು ಸಂಬೋಧಿಸುವುದೇ ವಿಶೇಷವಾಗಿತ್ತು.
31. ಕೆಂಪನಂಜೆಸ್ವಾಮಿಗಳು ಮೊದಲು ಚಿಕ್ಕಮಗಳೂರು ಪ್ರಾಂತ್ಯದ ಕೊಪ್ಪ ತಾಲ್ಲೂಕಿನ ಮುಳುವಳ್ಳಿ ಹಳೇ ಮಠದ ಸ್ವಾಮಿಗಳಾಗಿದ್ದರು.
32. ಪುಂಗನೂರಿನ ಗವಿಮಠದ ಚನ್ನಬಸವಸ್ವಾಮಿಗಳ ಪತ್ರ. ಬಹುಧಾನ್ಯ ಸಂವತ್ಸರ. ಕ್ರಿ.ಶ. ೧೮೧೮.

33. ಮಾಚೆನಾಯ್ಕನಹಳ್ಳಿ ಮಠದ ಮಡಿವಾಳಪ್ಪನವರ ಪತ್ರ. ತಾರಣ ಸಂವತ್ಸರ. ಕ್ರಿ.ಶ. ೧೮೨೪.

34. ಪುಂಗನೂರಿನ ಇಮ್ಮಡಿ ಶಂಕರರಾಯರ ಪತ್ರ. ಪಾರ್ಥಿವ ಸಂವತ್ಸರ ಕ್ರಿ.ಶ. ೧೮೨೫ ಮತ್ತು ಪುಂಗನೂರಿನ ದೊಡ್ಡ ಚಿಕ್ಕರಾಯರ ಪತ್ರ. ವಿಳಂಬಿ ಸಂವತ್ಸರ ಕ್ರಿ.ಶ. ೧೮೩೮.

35. ಬೇಲಿಮಠದ ಭೂದಾನ ಸನ್ನದು. ಚಿತ್ರಭಾನು ಸಂವತ್ಸರ. ಕ್ರಿ.ಶ. ೧೮೨೨.

36. ಗಂದೂಡಿ ಸಿದ್ಧನಂಜಪ್ಪನ ಪತ್ರ. ಬೇಲಿಮಠ. (ಕಾಲನಿರ್ದೇಶನವಿಲ್ಲ)

37. ಷಹಾ ನಿರೂಪ. ಪಾರ್ಥಿವ ಸಂವತ್ಸರದ ಆಶ್ವೀಜ ಮಾಸ ಮಾಹೆ ಅಗಟೋಬರ್ ಸನ್ ೧೮೨೫ನೇ ಯಿಸವಿ ಶುದ್ಧ ಸೋಮವಾರ ೬ ದಿ : ೧೭.

38. ಮುಳುವಳ್ಳಿ ಪೇಟೆ ಪವಾಡದಪ್ಪನಮಗ ನಾಗಪ್ಪನ ಪತ್ರ. ವಿಕಾರಿ ಸಂವತ್ಸರ (ಕ್ರಿ.ಶ. ೧೮೩೯) ಕಾರ್ತಿಕ, ಬಹುಳ ೭.

39. ಬೇಲಿಮಠ ಹಾಗೂ ದೊಡ್ಡಮಠಗಳ ಮೂಲ ಗುರುಗಳಾಗಿದ್ದ ಹೊಸಕೋಟೆಯ ಮಹಾಂತಸ್ವಾಮಿಗಳು ತಮ್ಮ ಕೆಂಪಿನ ಸಮಯದ ೬೪ ಮಠಗಳನ್ನು ನಾಡಿನಾದ್ಯಂತ ಸ್ಥಾಪಿಸಲು ಕಾರಣಕರ್ತರಾಗಿರಬೇಕು. ಬಹುಶಃ ಬೇಲಿಮಠಕ್ಕೆ ೬೪ ಶಾಖಾಮಠಗಳಿದ್ದ ಚರಮೂರ್ತಿಗಳ ಮಠವೆಂದು ಜನರಾಡಿಕೊಳ್ಳುವ ಮಾತು ಇದೇ ಆಗಿರಬಹುದು.

40. ಕೆಂಪುನಂಜೆಸ್ವಾಮಿಗಳ ಕಾಲದ ಇಂತಹ ಅನೇಕ ವ್ಯವಹಾರಪತ್ರಗಳು ಬೇಲಿಮಠದಲ್ಲಿರುವುದನ್ನು ನೋಡಬಹುದಾಗಿದೆ.

41. ಹೊಸಕೋಟೆಯ ಪೇಟೆಶೆಟ್ಟಿ ಯಜಮಾನರುಗಳ ಬಿನ್ನಹಪತ್ರ. ಶೋಭಕೃತು ಸಂವತ್ಸರ ೧೮೪೩.

42. ಬೇಲಿಮಠದಲ್ಲಿ ಒಟ್ಟು ನಾಲ್ಕು ಗದ್ದುಗೆಗಳಿವೆ. ಮೊದಲನೆಯದು ಬಸವಮಂಟಪವಿರುವ ಹೊಸಪೇಟೆ ಮಹಾಂತ ಸ್ವಾಮಿಗಳ ಗದ್ದುಗೆ (ಕ್ರಿ.ಶ. ೧೭೬೧). ಎರಡನೆಯದು ಹುಲಿಕುಂಟೆ ಶಾಂತಲಿಂಗಸ್ವಾಮಿ (ಕೆಂಪುನಂಜೇಸ್ವಾಮಿಗಳ ಗುರು)ಗಳ ಗದ್ದುಗೆ (ಕ್ರಿ.ಶ. ಸು. ೧೭೯೦). ಮೂರನೆಯದು ಬಸವಲಿಂಗ ಸ್ವಾಮಿಗಳ ಗದ್ದುಗೆ (ಕ್ರಿ.ಶ. ೧೮೨೫). ನಾಲ್ಕನೆಯದು ಕೆಂಪುನಂಜೆಸ್ವಾಮಿಗಳ ಗದ್ದುಗೆ (ಕ್ರಿ.ಶ. ೧೮೪೩).

43. ಶಿವಾನುಭಾವಿ ಚರಮೂರ್ತಿಗಳಾದ ಬೇಲಿಮಠದ ಸಿದ್ಧಲಿಂಗದೇವರು-ಎಂಬುದಾಗಿ ಮೊದಲು ಸಂಬೋಧಿಸಿದ ಪತ್ರ, ಹುಣಸಮಾರನಹಳ್ಳಿ ಮಠದ ನಂಜೇದೇವರು ಬರೆದದ್ದು. ಕ್ರೋಧನ ಸಂವತ್ಸರ ಕ್ರಿ.ಶ. ೧೮೪೪.

44. ಈ ಸಂದರ್ಭದಲ್ಲಿ ಬೆಂಗಳೂರು ಪಟ್ಟಣವು ಕ್ರಿ.ಶ. ೧೮೩೧ ರಿಂದ ೧೮೮೧ರ ವರೆಗೆ ಆಂಗ್ಲರ ಕಮಿಷನರುಗಳ ನೇರ ಆಡಳಿತಕ್ಕೆ ಒಳಪಟ್ಟಿತ್ತು. (ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೨೪)

45. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೬೪.

46. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೬೩.

47. ಕ್ರಿ.ಶ. ೧೮೬೩ರಲ್ಲಿ ಬೇಲಿಮಠದ ಮುಂಭಾಗದ ಭೂಮಿಯನ್ನು ಅಗ್ರಹಾರದ ರಸ್ತೆಗೆ ಬಿಟ್ಟುಕೊಡಬೇಕಾಯಿತು. (ಸೂಚನಪತ್ರ ಸಂ : ೨೩೭. ದಿ : ೨೨.೯.೧೮೬೩)

48. ಸೂಚನಪತ್ರ ಸಂ : ೧೭೮. ದಿ : ೩೧.೮.೧೮೬೭.

49. ಹಿಂದೆ ಬೆಂಗಳೂರು ಪಟ್ಟಣದ ಒಳಭಾಗಕ್ಕೆ ಸೇರಿದ್ದ ಶಂಕರದೇವರ ಮಠ, ಸರ್ಪಭೂಷಣಮಠ, ನರಗುಂದ ದೇವರಮಠ, ದಿಗಂಬರ ಶೆಟ್ರು ಮಠ, ಬೇಲಿಮಠ ಇವೇ ಮೊದಲಾದ ಮಠಗಳ ಆವರಣದಲ್ಲಿ ವೀರಶೈವರ ಸ್ಮಶಾನಗಳಿದ್ದವು. (ಚೀಫ್ ಕಮಿಷನರ್ ಅವರಿಗೆ ಅರಳೆಪೇಟೆ ದೇಶದ ಕಳಸಪ್ಪಶೆಟ್ಟಿಯು ಬರೆದುಕೊಂಡ ಅರ್ಜಿ. ದಿ:೧೬.೮.೧೮೮೦)

50. ಏಕೆಂದರೆ ರುದ್ರಸ್ವಾಮಿಗಳು ಗ್ರಾಮಾಂತರ ಭಾಗದಲ್ಲಿದ್ದ ಬೇಲಿಮಠದ ಶಾಖಾಮಠಗಳಿಂದ ತಮ್ಮ ಗುರುಗಳಾದ ಸಿದ್ಧಲಿಂಗ ಸ್ವಾಮಿಗಳಿಗೆ ಬಿನ್ನವಿಸಿಕೊಂಡಿರುವ ಅನೇಕ ಪತ್ರಗಳಿವೆ.

51. ಮುನಿಸಿಪಲ್ ಕಮೀಷನ್ ಕಛೇರಿ ಆದೇಶಪತ್ರ ಸಂ : ೮೬. ದಿ: ೧೬.೧೧.೧೮೯೮.

52. Muzrai File No : 265/1908. sl. No : 2.P. 3&4.

53. Ibid.

54. ಶಿವರುದ್ರಮುರಿದೇವರನ್ನು ಮರಳೆಗವಿಮಠದ ಮೂಲೆ ಚರಮೂರ್ತಿಗಳಾಗಿದ್ದ ಶಿವರುದ್ರಸ್ವಾಮಿಗಳು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಳ್ಳಲು ನಿಶ್ಚಯಿಸಿ, ಅವರ ಸಂಸ್ಕೃತಾಧ್ಯಯನಕ್ಕೆ ಬೇಲಿಮಠದಲ್ಲಿ ಇರಿಸಿದ್ದರು. ಅವರ ಜನ್ಮಸ್ಥಳ ರಾಮನಗರ ಬಳಿಯ ಬಿಡದಿ ಗ್ರಾಮ.

55. ಎಪ್ಪತ್ತೈದು ವರ್ಷಗಳಷ್ಟು ದೀರ್ಘಕಾಲ ಮಠಾಧಿಪತಿಗಳಾಗಿದ್ದ ಸಿದ್ಧಲಿಂಗದೇವರು ಮತ್ತು ಅವರಷ್ಟೇ ಸಮರ್ಥರಾಗಿ ನಲವತ್ತು ವರ್ಷಗಳಷ್ಟು ಕಾಲ ಉತ್ತರಾಧಿಕಾರತ್ವ ನಡೆಸಿದ್ದ ರುದ್ರದೇವರು ಇಬ್ಬರೂ ಒಮ್ಮೆಲೆ ತೀರಿಕೊಂಡಾಗ, ಶಾಖಾಮಠಾಧೀಶರು ಮೂಲ ಮಠದೊಂದಿಗಿನ ತಮ್ಮ ಸಂಬಂಧಗಳನ್ನು ಕಡಿದುಕೊಳ್ಳುವಲ್ಲಿ ಯಶಸ್ವಿಗಳಾಗಿದ್ದರು.

56. Amildar Court, Bangalore, Case No : 843. dt. 25.8.1908

57. Ibid. SCHEDULE - A. P. 4,5.

58. Reg. No : 1595. vol-15. dt. 15.12.1904 Bangalore Sub-Registrar Office.
59. ಶಿವರುದ್ರಸ್ವಾಮಿಗಳು ದಿ : ೧.೫.೧೯೨೪ ರಂದು ಮಾಡಿರುವ ಟ್ರಸ್ಟ್ ಡೀಡ್ ಕರಾರು. ಪು. ೬-೯ (ರಿ.ನಂ. ೩೭೮೮. ವಾಲ್ಯುಂ- ೫೭೬. ಪು. ೪೧೮-೪೩೯. ದಿ : ೮.೫.೧೯೨೪. ಬೆಂಗಳೂರು ಸಬ್ ರಿಜಿಸ್ಟ್ರಾರ್ ಕಛೇರಿ.)
60. 'ನಿರಂಜನ ವಂಶರತ್ನಾಕರ'ವನ್ನು ಆಧರಿಸಿ ಚನ್ನಮಲ್ಲಿಕಾರ್ಜುನ ಹೇಳಿರುವಂತೆ ಕೆಂಪಿನಸಮಯದ ಮೂಲ ಮಠವು ಕಲ್ಯಾಣ ಸೀಮೆಯ 'ಬಸವತೀರ್ಥಮಠ' ವೆಂಬುದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಹೊಸಕೋಟೆಯ ಮಹಾಂತಸ್ವಾಮಿಗಳು ಮೊದಲು ಅಲ್ಲಿ ಕೆಂಪಿನಸಮಯದ ಮಠವನ್ನು ಸ್ಥಾಪಿಸಿ, ದಕ್ಷಿಣದ ಕಡೆಗೆ ಆಮೇಲೆ ಪ್ರಯಾಣ ಬೆಳೆಸಿರಬೇಕೆಂಬುದು ಒಂದು ಊಹೆಯಷ್ಟೆ.
61. Registered Record No : 3788. Vol-576. P. 418-439. dt: 8.5.1924.
62. Reg. No : 1982. vol-98. P.488-491. dt: 11.3.1929.
63. Muzrai Office memo No : 352/29-30. dt: 29.11.1929.
64. ಇದೇ ಸಂದರ್ಭದಲ್ಲಿ ತಮ್ಮ ಶಾಖಾ ಮಠಗಳಾಗಿದ್ದ ನೆಲಮಂಗಲದ ಹೊಸಮಠಕ್ಕೆ ಚೆನ್ನಬಸವದೇವರನ್ನೂ; ಕೂಲಿಪುರದ ಚೌಕಿಮಠಕ್ಕೆ ಸಿದ್ಧಲಿಂಗದೇವರನ್ನೂ ನೇಮಿಸಿ ವಿರಕ್ತಾಶ್ರಮ ದೀಕ್ಷೆ ಅನುಗ್ರಹಿಸಿದ್ದರು. (ಶ್ರೀ ಬೇಲಿಮಠದ ಚರಪಟ್ಟಾಧಿಕಾರ ಮಹೋತ್ಸವಾಹ್ವಾನ ಪತ್ರಿಕೆ. ದಿ : ೯.೫.೧೯೨೪)
65. Muzrai File No : 140/1945. Sl.No: 1-4. P. 2, 3.
66. ಶಿವರುದ್ರಸ್ವಾಮಿಗಳು ಲಿಂಗೈಕ್ಯರಾದ ಸುದ್ದಿಯ ಕರಪತ್ರ. ದಿ : ೭.೮.೧೯೪೧.
67. ವೈ. ವಿರೂಪಾಕ್ಷಯ್ಯ. (ಸಂ.) ' ಮೈಸೂರ್ ಸ್ಟಾರ್'. ದಿ : ೨೬.೨.೧೯೧೨. ಪು. ೬.
68. ಮೇಲ್ಕಂಡ ಮಠಾಧೀಶರೊಂದಿಗೆ ವ್ಯವಹರಿಸಿರುವ ಅನೇಕ ಪತ್ರಗಳು ಮಠದಲ್ಲಿವೆ.
69. ಇದಿಷ್ಟೂ ಮಾಹಿತಿಗಳನ್ನು 'ವಾರಪತ್ರಿಕೆ'ಯಿಂದ ಸಂಗ್ರಹಿಸಿಕೊಂಡಿರುತ್ತೇನೆ. (ಎಸ್. ಮಹದೇವ ಪ್ರಕಾಶ್. 'ವೀರಶೈವಮಠಗಳ ಆಸ್ತಿ-ಪಾಸ್ತಿ' ೧೬. ವಾರಪತ್ರಿಕೆ. ಸಂ : ಬಿ.ವಿ. ವೈಕುಂಠರಾಜು. ದಿ : ೨೪.೫.೧೯೮೭. ಪು. ೧೫)

## ೨. ದೊಡ್ಡಮಠ, ಅಕ್ಕಿಪೇಟೆ

ಬೆಂಗಳೂರಿನ ಅಕ್ಕಿಪೇಟೆಯ ಮುಖ್ಯ ರಸ್ತೆಯಲ್ಲಿರುವ ದೊಡ್ಡಮಠವು ಹಿಂದೆ ಅರಳೆಪೇಟೆಯ ದೊಡ್ಡ ಮಠವೆಂದೇ ಪ್ರಸಿದ್ಧಿಯಾಗಿತ್ತು.[1] ೧೬ನೆಯ ಶತಮಾನದಲ್ಲಿ ಕೆಳದಿಯ ಅರಸನಾಗಿದ್ದ ದೊಡ್ಡ ಸಂಕಣ್ಣ ನಾಯಕನು ಈ ಮಠವನ್ನು ಕಟ್ಟಿಸಿಕೊಟ್ಟಿದ್ದರಿಂದ ಇದಕ್ಕೆ 'ದೊಡ್ಡ ಸಂಕಣ್ಣನ ಮಠ'ವೆಂದೇ ಹೆಸರಿತ್ತು. ಕಾಲಾನಂತರ 'ಸಂಕಣ್ಣನ' ಎಂಬುದು ಬಿಟ್ಟು ಹೋಗಿ ಈಗ ''ದೊಡ್ಡಮಠ''ವಾಗಿ ಉಳಿದಿದೆ ಎಂಬುದಾಗಿ ಹೇಳುವುದುಂಟು.[2] ೧೯೧೮ರ ರೆವಿನ್ಯೂ ದಾಖಲೆಯೊಂದರಲ್ಲಿ ಕೆಳದಿ ಅರಸರಿಂದ ಪ್ರೋತ್ಸಾಹ ಪಡೆದಿರುವ ಬೆಂಗಳೂರಿನ ಮಠ-ಮಾನ್ಯಗಳ ಪಟ್ಟಿಯಲ್ಲಿ ದೊಡ್ಡಮಠದ ಹೆಸರೂ ಕಂಡುಬರುತ್ತದೆ.[3] ಆದರೂ ಈ ಬಗ್ಗೆ ಇನ್ನೂ ಖಚಿತವಾದ ಹಾಗೂ ನೇರವಾದ ಮಾಹಿತಿಗಾಗಿ ಶೋಧವನ್ನು ಮುಂದುವರೆಸುವುದು ಅಗತ್ಯವಾಗಿದೆ.

ಬೆಂಗಳೂರಿನ ಬೇಲಿಮಠವು 'ಕೆಂಪಿನ ಸಮಯ'ದ ಮುಖ್ಯ ಚರಂತಿಗೆಯವರ ಪ್ರಮುಖ ಮಠವಾಗಿದ್ದು, ಅದರ ಮೂಲಶಾಖೆಯೇ ಅರಳೆಪೇಟೆಯ ದೊಡ್ಡಮಠವೆಂದು ಅಲ್ಲಿನ ದಾಖಲೆಗಳಲ್ಲಿ ಸ್ಪಷ್ಟವಾಗಿದೆ.[4] ದೊಡ್ಡ ಮಠದ ಮೂರನೆಯ ಗುರುಗಳಾಗಿದ್ದ ಬಸವಲಿಂಗಸ್ವಾಮಿಗಳು ತಮ್ಮ ಗುರು ಪರಂಪರೆಯನ್ನು ಹೇಳಿಕೊಳ್ಳುವಾಗ ''...ಶ್ರೀ ಚನ್ನಬಸವೇಶ್ವರ ಸ್ವಾಮಿಯವರ ಸಾಂಪ್ರದಾಯಕರಾದ ಕೆಂಪಿನ ಸಮಯದ ಹೊಸಕೋಟೆಯ ಮಹಾಂತ ಸ್ವಾಮಿಗಳವರ ಪ್ರತಿಹಸ್ತರಾದ ಸಂಗನಬಸವಸ್ವಾಮಿಗಳ ಪ್ರತಿಹಸ್ತರಾದ ಬಸವಲಿಂಗಸ್ವಾಮಿಗಳು...[5]'' ಎಂಬ ಮಾತುಗಳು ಬರುತ್ತವೆ. ಸಮಯದ ವಿಚಾರಕ್ಕೆ ಬಂದಾಗ 'ಕೆಂಪಿನಸಮಯ' ಹುಟ್ಟಿಕೊಂಡಿರುವುದೇ ೧೮ನೆಯ ಶತಮಾನದ ಆದಿಭಾಗದಲ್ಲಿ.[6] ಮೇಲಾಗಿ ದೊಡ್ಡಮಠದ ಮೂಲಕರ್ತೃ (ಗುರು)ಗಳಾಗಿದ್ದ ಹೊಸಕೋಟೆಯ ಮಹಾಂತಸ್ವಾಮಿಗಳು ಲಿಂಗೈಕ್ಯರಾದ ಕಾಲ ಕ್ರಿ.ಶ. ೧೭೬೧ ಎಂಬುದಾಗಿ ಬೇಲಿಮಠದ ಶಾಸನವೆ ಖಚಿತಪಡಿಸಿದೆ.[7] ಈ ಹಿನ್ನೆಲೆಯಲ್ಲಿ ಬೆಂಗಳೂರಿನ ದೊಡ್ಡಮಠವು ೧೮ನೆಯ ಶತಮಾನದ ಪೂರ್ವಾರ್ಧದಲ್ಲಿ (ಅಂದರೆ ಕ್ರಿ.ಶ. ೧೭೨೫-೩೦ರ ಸುಮಾರಿನಲ್ಲಿ) ಸ್ಥಾಪಿತವಾಗಿದ್ದಿರಬೇಕೆಂದು ಊಹಿಸಲು ಅವಕಾಶವಿದೆ.

ಬೇಲಿಮಠದಲ್ಲಿರುವ ಶಾಸನ (ಕ್ರಿ.ಶ. ೧೭೬೧)ದ ಪ್ರಕಾರ - ''ಹೊಸಕೋಟೆಯ ಮಹಾಂತಸ್ವಾಮಿಗಳು ವಿಷು ಸಂವತ್ಸರದ ಮಾರ್ಗಶಿರ ಶುದ್ಧ ಪಂಚಮಿಯ ಸೋಮವಾರ ಲಿಂಗೈಕ್ಯರಾಗಿದ್ದಾರೆ. ಅವರ ಶೂನ್ಯ ಸಿಂಹಾಸನದ (ಸಮಾಧಿಯ) ಮೇಲಿನ ಅನುಭವಮಂಟಪ (ಗದ್ದುಗೆ)ವನ್ನು ಮುಂದಿನ ಪಾಲ್ಗುಣದಲ್ಲಿ ನಿರ್ಮಿಸಲಾಗಿದೆ. ಈ ಗದ್ದುಗೆಯ (ಶೂನ್ಯಸಿಂಹಾಸನದ) ಕಾರಣ ಕರ್ತೃ ಅವರ ಶಿಷ್ಯರಾಗಿದ್ದ ಮರಿಸಿದ್ಧಲಿಂಗದೇಶಿಕ'' ಎಂಬುದು ಸ್ಪಷ್ಟವಾಗಿದೆ.[8] ಈ ಶಾಸನೋಕ್ತ ವಿಚಾರಗಳೆಲ್ಲಾ ಬೇಲಿಮಠದಲ್ಲಿ ಲಭ್ಯವಾಗಿರುವ ಶಾಸನಾನಂತರದ ದಾಖಲೆಗಳಲ್ಲೂ ಪ್ರಸ್ತಾಪವಾಗಿವೆ. ಆದರೆ ಅವುಗಳಲ್ಲಿನ ಒಂದೇ ಒಂದು ವ್ಯತ್ಯಾಸ ಶೂನ್ಯಸಿಂಹಾಸನಧ ಕಾರಣ ಕರ್ತೃಗಳಾದ ಮರಿಸಿದ್ಧಲಿಂಗರನ್ನು ಬಸವಲಿಂಗಸ್ವಾಮಿ[9] ಎಂದು ಬದಲಾವಣೆ ಮಾಡಿಕೊಂಡಿರುವುದು. ಇನ್ನು ಮಿಕ್ಕೆಲ್ಲಾ ವಿಚಾರಗಳಲ್ಲೂ ಸಾಮ್ಯತೆ ಇದೆ.

ಮೇಲ್ಕಂಡ ವಿಚಾರಕ್ಕೆ ಪೂರಕವಾಗಿ ಕೆಲವು ಪತ್ರಗಳನ್ನು ಪರಿಶೀಲಿಸುವುದಾದರೆ; ಬೆಂಗಳೂರಿನ ದೊಡ್ಡ ಪೇಟೆಯ ಕಪ್ಪಣ್ಣನವರ ಮಹಂತಪ್ಪನು ಬಿನ್ನವಿಸಿಕೊಂಡಿರುವ ಪತ್ರವೊಂದರಲ್ಲಿ ''...ಷಟ್‌ಸ್ಥಲ ಚಕ್ರವರ್ತಿ ಚನ್ನಬಸವೇಶ್ವರ ಸ್ವಾಮಿಯವರ ಸಾಂಪ್ರದಾಯಕರಾದ ಶೂನ್ಯಸಿಂಹಾಸನಕ್ಕೆ ಕಾರಣಕರ್ತರಾದ ಹೊಸಕೋಟೆಯ ಮಹಾಂತಸ್ವಾಮಿಯವರ ಪ್ರತಿಹಸ್ತರಾದ ಸಂಗನಬಸವ ಸ್ವಾಮಿಯವರ ಪ್ರತಿಹಸ್ತರಾದ ಬಸವಲಿಂಗಸ್ವಾಮಿಯವರ ಪಾದಪದ್ಮಂಗಳಿಗೆ...[10]'' ಎಂದಿದೆ. ಇವರದೇ ಮತ್ತೊಂದು ಪತ್ರದಲ್ಲಿ ''...ಬೆಂಗಳೂರು ದೊಡ್ಡಮಠದ ಶಿವಾನುಭವ ಚರಮೂರ್ತಿಗಳಾದಂಥ ಬಸವಲಿಂಗ ಸ್ವಾಮಿಯವರ ದಿವ್ಯ ಶ್ರೀಪಾದಪದ್ಮಂಗಳಿಗೆ..[11]'' ಎಂದೇ ಸಂಬೋಧಿಸಲಾಗಿದೆ. ಇನ್ನೊಂದು ಪತ್ರದಲ್ಲಿ ''...ಷಟ್‌ಸ್ಥಲ ಚಕ್ರವರ್ತಿ ಚನ್ನಬಸವೇಶ್ವರದೇವರ ಸಾಂಪ್ರದಾಯಕರಾದ ಶೂನ್ಯಸಿಂಹಾಸನಕ್ಕೆ ಕಾರಣಕರ್ತರಾದ ಕೆಂಪಿನಸಮಯದ ಶಿವಾನುಭಾವಿ ಚರಮೂರ್ತಿಗಳು ಬಸವಲಿಂಗ ಸ್ವಾಮಿಯವರ ಚರಣಾರವಿಂದಗಳಿಗೆ...''[12] ಎಂದಿದೆ. ಶಾಸನದಲ್ಲಿ ಉಕ್ತವಾದಂತೆ ಇಲ್ಲೂ ಕೂಡ 'ಶೂನ್ಯ ಸಿಂಹಾಸನ',

'ಶಿವಾನುಭವ ಚರಮೂರ್ತಿ', 'ಷಟ್‌ಸ್ಥಲ ಚಕ್ರವರ್ತಿ' ಮುಂತಾದ ಪದಸಾಮ್ಯತೆಗಳ ಜೊತೆಗೆ ಮೂಲಗುರುಗಳಾದ ಹೊಸಕೋಟೆಯ ಮಹಾಂತ ಸ್ವಾಮಿಗಳ ಹೆಸರು ಪ್ರಸ್ತಾಪವಾಗಿದೆ. ಮೇಲಾಗಿ ಶಾಸನದಲ್ಲಿ ಇಲ್ಲದ ''ಕೆಂಪಿನಸಮಯ''ದ ವಿಚಾರ ಪತ್ರಗಳಲ್ಲಿ ಉಲ್ಲೇಖವಾಗಿರುವುದು ಒಂದು ವಿಶೇಷ.

ಈ ಹಿನ್ನೆಲೆಯಲ್ಲಿ ಈಗಾಗಲೇ ಬೇಲಿಮಠದ ವಿಚಾರದಲ್ಲಿ ಪ್ರಸ್ತಾಪಿಸಿರುವಂತೆ, ಬೆಂಗಳೂರಿನ ಕೆಂಪಿನ ಸಮಯದ ಮೂಲಮಠವು ಅರಳೆಪೇಟೆಯ ದೊಡ್ಡಮಠವೇ ಆಗಿದ್ದು, ಅದರ ಮೂಲ ಗುರುಗಳು ಹೊಸಕೋಟೆಯ ಮಹಾಂತಸ್ವಾಮಿಗಳು ಎಂಬುದು ಸರ್ವವಿಧಿತ. ಇವರ ನಂತರ ಸಂಗನ ಬಸವಸ್ವಾಮಿಗಳು ಮುಖ್ಯ ಚರಂತಿಗೆಯವರಾಗಿದ್ದು ಅವರು ಬಸವಲಿಂಗಸ್ವಾಮಿಗಳಿಗೆ ಅಧಿಕಾರ ವಹಿಸಿಕೊಟ್ಟುದಕ್ಕೆ ದಾಖಲೆ ಇದೆ.[13] ಬಹುಶಃ ಶಾಸನದಲ್ಲಿ ಉಕ್ತವಾಗಿರುವ ಮರಿಸಿದ್ಧಲಿಂಗದೇಶಿಕರು ಸಂಗನಬಸವಸ್ವಾಮಿಗಳಿಂದ ಮುಖ್ಯಚರಂತಿಗೆಯ ಅಧಿಕಾರ ಸ್ವೀಕರಿಸಿದಾಗ ಬಸವಲಿಂಗಸ್ವಾಮಿಗಳು ಎಂಬ ನೂತನ ನಾಮಕರಣವನ್ನು ಪಡೆದಂತಿದೆ. ಏಕೆಂದರೆ 'ಶೂನ್ಯ ಸಿಂಹಾಸನಕ್ಕೆ ಕಾರಣಕರ್ತರಾದ' ಎಂಬ ವಿಚಾರ ಈ ಮಾತನ್ನು ದೃಢಪಡಿಸುತ್ತದೆ.

ಕ್ರಿ.ಶ. ೧೭೬೧ರಲ್ಲಿ ಶಿವಯೋಗವನ್ನು ಹೊಂದಿದ ಹೊಸಕೋಟೆಯ ಮಹಾಂತಸ್ವಾಮಿಗಳು ಸಾಕಷ್ಟು ವಯೋವೃದ್ಧ (ಸುಮಾರು ೮೦ ವರ್ಷಗಳಷ್ಟು) ರಾಗಿದ್ದಿರಬೇಕು. ಆ ವೇಳೆಗಾಗಲೆ ಮುಖ್ಯಚರಂತಿಗೆಯವರಾಗಿದ್ದ ಸಂಗನಬಸವಸ್ವಾಮಿಗಳು ಆಗಿನ್ನೂ ದೇಶಿಕರೆಂದೇ ಕರೆಯಲ್ಪಡುತ್ತಿದ್ದ ಮರಿಸಿದ್ಧಲಿಂಗರನ್ನು, ಮುಂದೆ ಕ್ರಿ.ಶ. ೧೭೬೫ರ ಸುಮಾರಿಗೆ ತಮ್ಮ ಮುಂದಿನ ಚರಂತಿಗೆಯುವರನ್ನಾಗಿ ಆರಿಸಿಕೊಂಡಂತಿದೆ. ಈ ಹಿನ್ನೆಲೆಯಲ್ಲಿ ಹೊಸಕೋಟೆಯ ಮಹಾಂತಸ್ವಾಮಿಗಳು ಕ್ರಿ.ಶ. ೧೭೨೫ರ ಸುಮಾರಿಗೆ ಬೆಂಗಳೂರಿನ ದೊಡ್ಡಮಠವನ್ನು ಸ್ಥಾಪಿಸಿದ್ದಿರಬೇಕು. ಅವರ ಕಾಲದಲ್ಲೆ ನಿರ್ಮಾಣವಾಗಿದ್ದಿರಬಹುದಾದ ಈ ಮಠದ ಮಣ್ಣಿನ ಕಟ್ಟಡವು ೬೩ ಅಂಕಣಗಳಿಂದ ಕೂಡಿದ್ದು, ಕ್ರಿ.ಶ. ೧೮೪೪ರ ವೇಳೆಗೆ ಶಿಥಿಲಾವಸ್ಥೆಗೆ ಮುಟ್ಟಿದುದಾಗಿ ಮಠದ ಮುಂದಿನ ದಾಖಲೆಗಳಿಂದ ತಿಳಿದುಬರುತ್ತದೆ.[14] ಕೆಲವು ಹಿರಿಯ ತಲೆಮಾರಿನವರು ಹೇಳುವಂತೆ 'ಚರಮೂರ್ತಿಗಳ ಮುಖ್ಯ ಕೇಂದ್ರವಾಗಿದ್ದ ದೊಡ್ಡಮಠವು, ೬೩ ಶಾಖಾ ಮಠಗಳನ್ನು ಹೊಂದಿದುದಕ್ಕೆ ಸಾಕ್ಷಿ ಎಂಬಂತೆ, ೬೩ ಅಂಕಣಗಳಿಂದ ಕಟ್ಟಲ್ಪಟ್ಟಿತ್ತು'[15] ಎಂಬ ಮಾತು ಔಚಿತ್ಯಪೂರ್ಣವಾಗಿದೆ.

ಸಂಗನಬಸವ ಸ್ವಾಮಿಗಳಿಗೆ ಹೊಸಕೋಟೆಯ ಮಹಾಂತಸ್ವಾಮಿಗಳಿಂದ ಅಧಿಕಾರವಾದ ಕಾಲ ನಿಶ್ಚಿತವಾಗಿಲ್ಲವಾದರೂ; ಬಹುಶಃ ಕ್ರಿ.ಶ. ೧೭೫೦ರ ಸುಮಾರಿಗೆ ಈ ಕಾರ್ಯ ನಡೆದಿರಬೇಕು. ಇವರಿಂದ ಚರಂತಿಗೆಯನ್ನು ಸ್ವೀಕರಿಸಿದ ಬಸವಲಿಂಗಸ್ವಾಮಿಗಳು ಮುಂದೆ ಕ್ರಿ.ಶ. ೧೮೦೫ರ ವರೆಗೂ ಜೀವಿಸಿದ್ದುದಕ್ಕೆ ಆಧಾರಗಳಿವೆ.[16] ಹೀಗೆ ಮೂಲಗುರುಗಳಾದ ಹೊಸಕೋಟೆಯ ಮಹಾಂತಸ್ವಾಮಿಗಳ ಕಾಲದಿಂದ (ಸು. ಕ್ರಿ.ಶ. ೧೭೨೫) ಮೂರನೆಯ ಗುರುಗಳಾಗಿದ್ದ ಬಸವಲಿಂಗಸ್ವಾಮಿಗಳ ಕಾಲದ (ಕ್ರಿ.ಶ. ೧೮೧೮) ವರೆಗೂ ದೊಡ್ಡಮಠವೇ ಕೆಂಪಿನಸಮಯದವರ ಮುಖ್ಯ ಕೇಂದ್ರವಾಗಿತ್ತು.[17]

ಬಸವಲಿಂಗಸ್ವಾಮಿಗಳು ತಮ್ಮ ಶಾಖೆಯಾದ ಮಲ್ಲರಬಾಣವಾಡಿ ಮಠದ ಚನ್ನವೀರಸ್ವಾಮಿಗಳನ್ನು ಕ್ರಿ.ಶ. ೧೭೮೮ರ ವೇಳೆಗೆ ಮುಂದಿನ ಉತ್ತರಾಧಿಕಾರಿಗಳನ್ನಾಗಿ ಆರಿಸಿಕೊಂಡಿದ್ದಾರೆ. ಆದರೆ ಇವರು ಗುರುಗಳಿಗೂ ಮೊದಲೇ ಲಿಂಗೈಕ್ಯರಾದಂತೆ ಕಂಡು ಬರುತ್ತದೆ. ಮುಂದೆ ಕ್ರಿ.ಶ. ೧೮೧೮ರ ಬೇಲಿಮಠದ ದಾಖಲೆಯೊಂದರಲ್ಲಿ, ''...ಶ್ರೀ ಚನ್ನಬಸವೇಶ್ವರ ಸ್ವಾಮಿಯವರ ಸಂಪ್ರದಾಯದ ಮುಳುವಳ್ಳಿ ಹಳೆಮಠದ ಶಿವಾನುಭವಚರಮೂರ್ತಿಗಳಾದ ಚನ್ನವೀರಸ್ವಾಮಿಗಳ ಪ್ರತಿಹಸ್ತರಾದ ಕೆಂಪುನಂಜೆಸ್ವಾಮಿಗಳು...[18]'' ಎಂಬ ಉಲ್ಲೇಖ ದೊರೆಯುತ್ತದೆ. ಅಂದರೆ ಈ ವೇಳೆಗಾಗಲೆ ಬೇಲಿಮಠದ ಕೆಂಪುನಂಜೆ ಸ್ವಾಮಿಗಳು ಮುಖ್ಯ ಚರಂತಿಗೆಯನ್ನು ವಹಿಸಿಕೊಂಡಂತಾಗಿದೆ. ಇವರ ಕಾಲದ ಎಲ್ಲಾ ವ್ಯವಹಾರಪತ್ರಗಳೂ ಬೇಲಿಮಠವನ್ನೇ ನಿರ್ದೇಶಿಸುತ್ತವಾದ ಕಾರಣ, ಅರಳೆಪೇಟೆಯ ದೊಡ್ಡಮಠದಲ್ಲಿದ್ದ ಕೆಂಪಿನಸಮಯದವರ ಕೇಂದ್ರಸ್ಥಾನ ಈಗ ಬೇಲಿಮಠಕ್ಕೆ ವರ್ಗಾವಣೆಯಾಗಿತ್ತು. ಇದುವರೆಗೆ ಈ ಚರಂತಿಗೆಯಲ್ಲಿ ನಡೆದುಬಂದ ಐವರು ಗುರುಗಳಲ್ಲಿ ಮೂಲಗುರುಗಳೂ ಸೇರಿದಂತೆ ಬಸವಲಿಂಗಸ್ವಾಮಿಗಳ ಹಾಗೂ ಕೆಂಪುನಂಜೆಸ್ವಾಮಿಗಳ ಗದ್ದುಗೆಗಳು ಬೇಲಿಮಠ

ದಲ್ಲಿಯೇ ಇರುತ್ತವೆ. ಉಳಿದ ಸಂಗನಬಸವ ಸ್ವಾಮಿಗಳ ಗದ್ದುಗೆ ನೆಲಮಂಗಲದ ಹೊಸಮಠದಲ್ಲೂ ಹಾಗೂ ಚನ್ನವೀರಸ್ವಾಮಿಗಳ ಗದ್ದುಗೆ ಮಲ್ಲರಬಾಣವಾಡಿ ಮಠದಲ್ಲೂ ಇವೆ. ಮೂಲ ಮಠವಾದ ಅರಳೆಪೇಟೆಯ ದೊಡ್ಡಮಠದಲ್ಲಿ ಯಾವ ಗದ್ದುಗೆಯೂ ಇಲ್ಲದಿರುವುದೇ ಒಂದು ವಿಶೇಷ.[19]

ಸಂಗನಬಸವಸ್ವಾಮಿಗಳ ಉತ್ತರಾಧಿಕಾರಿಗಳಾಗಿ ಕ್ರಿ.ಶ. ೧೭೬೬ರ ವೇಳೆಗೆ ದೊಡ್ಡಮಠವನ್ನು ಪ್ರವೇಶಿಸಿದ ಬಸವಲಿಂಗಸ್ವಾಮಿಗಳು, ಮುಂದೆ ಕ್ರಿ.ಶ. ೧೮೩೫ರ ವರೆಗೂ ೬೦ ವರ್ಷಗಳಷ್ಟು ಸುದೀರ್ಘವಾಗಿ ಮಠಾಧಿಪತ್ಯ ವನ್ನು ನಡೆಸಿದ್ದಾರೆ. ೧೯ನೆಯ ಶತಮಾನದ ಆದಿ ಭಾಗದಲ್ಲಿ ಕೆಂಪುನಂಜೆಸ್ವಾಮಿಗಳಿಗೆ ತಮ್ಮ ಮುಖ್ಯ ಚರಂತಿಗೆಯನ್ನು ವಹಿಸಿಕೊಟ್ಟಾದ ಮೇಲೆ ದೊಡ್ಡಮಠದ ಉಸ್ತುವಾರಿಗಾಗಿ ತೋಟದಪ್ಪ ಸ್ವಾಮಿಗಳನ್ನು ನೇಮಿಸಿಕೊಂಡಂತಿದೆ. ಏಕೆಂದರೆ ಕ್ರಿ.ಶ. ೧೮೨೨ರ ಮಾರ್ಚಿ ೧೧ ರಂದು ಮುಮ್ಮಡಿ ಕೃಷ್ಣರಾಜ ಒಡೆಯರು ನೀಡಿರುವ ಭೂದಾನ ಶಾಸನವು ಇವರ ಹೆಸರಿನಲ್ಲೇ ಇದೆ. ಈ ಸನ್ನದಿನ ಪ್ರಕಾರ ಬೆಂಗಳೂರಿನ ಕಸಬಾ ಕೇತಮಾರನಹಳ್ಳಿ ಬಳಿ ಐದು ಕಂಠೀರಾಯಿ ವರಹದ ಭೂಮಿಯನ್ನು ಸರ್ವಮಾನ್ಯವಾಗಿ ದೊಡ್ಡಮಠದ ತೋಟದಪ್ಪನವರ ಹೆಸರಿನಲ್ಲಿ ನೀಡಲಾಗಿದೆ.[20]

ತೋಟದ ಸ್ವಾಮಿಗಳ ಬಗೆಗೆ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲವಾದರೂ ಅವರು ಕ್ರಿ.ಶ. ೧೮೪೯ರ ಜನವರಿ ೯ರಂದು ಚನ್ನವೀರದೇವರು ಎಂಬುವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಆರಿಸಿಕೊಂಡಿದ್ದಾರೆ.[21] ಈ ಚನ್ನವೀರಸ್ವಾಮಿಗಳು ಸಾಕಷ್ಟು ಜನಾನುರಾಗಿಗಳಾಗಿದ್ದು ನಾಡಿನಾದ್ಯಂತ ವ್ಯಾಪಕವಾದ ಸಂಪರ್ಕವುಳ್ಳವರಾಗಿದ್ದು ದಕ್ಕೆ ಅವರ ವ್ಯವಹಾರ ಪತ್ರಗಳೇ ಸಾಕ್ಷಿಯಾಗಿವೆ.[22] ಇವರು ತಮ್ಮ ಮಠದ ಆಡಳಿತ ನಿರ್ವಹಣೆಗಾಗಿ ನೆಲಮಂಗಲದ ಚನ್ನವೀರಪ್ಪ ಎಂಬುವರನ್ನು ಪಾರುಪತ್ತೆ ಗಾರರನ್ನಾಗಿ ನೇಮಿಸಿಕೊಂಡಿದ್ದರು. ದೊಡ್ಡಮಠದಲ್ಲಿ ನಡೆಯುತ್ತಿದ್ದ ಸಂಸ್ಕೃತ ಪಾಠಶಾಲೆಯ ಜವಾಬ್ದಾರಿಯನ್ನು ಚನ್ನವೀರಪ್ಪನವರು ನಿರ್ವಹಿಸುತ್ತಿದ್ದುದಕ್ಕೆ ಆಧಾರಗಳಿವೆ.[23] ಮುಂದೆ ಚನ್ನವೀರಸ್ವಾಮಿಗಳು ದಿನಾಂಕ : ೧೯.೧೨.೧೮೭೭ ರಂದು ನಿಡುವಂದದ ನಂಜೇಮರಿಯ ಮಗ ಬಸವಲಿಂಗಮರಿ ಎಂಬುವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಆರಿಸಿಕೊಂಡಿದ್ದಾರೆ. ಇವರೇ ಇಮ್ಮಡಿ ಬಸವಲಿಂಗ ಸ್ವಾಮಿಗಳು.[24] ಇವರಿಗೆ ಅಧಿಕಾರವನ್ನು ವಹಿಸಿಕೊಟ್ಟಿರುವ ದಾಖಲೆಯ ಪ್ರಕಾರ ಶಿವನಹಳ್ಳಿಯ ಮಠ, ಕೇತಮಾರನಹಳ್ಳಿಯ ಜಮೀನು ಹಾಗೂ ೬೩ ಅಂಕಣಗಳುಳ್ಳ ದೊಡ್ಡಮಠ ಇವಿಷ್ಟು ಅವರಿಗೆ ಸೇರಿದ ಆಸ್ತಿಗಳಾಗಿದ್ದವು.[25]

ಸದರಿ ಇಮ್ಮಡಿ ಬಸವಲಿಂಗಸ್ವಾಮಿಗಳು ೧೯೦೪ರ ಜನವರಿ ಮಾಹೆಯಲ್ಲಿ ಅಕಾಲ ಮರಣಕ್ಕೆ ತುತ್ತಾದಾಗ ವಯೋವೃದ್ಧ ಚನ್ನವೀರಸ್ವಾಮಿಗಳು ದಿನಾಂಕ : ೨೫.೨.೧೯೦೪ರಲ್ಲಿ ಮತ್ತೊಂದು ವ್ಯವಸ್ಥಾಪತ್ರವನ್ನು ಹುಟ್ಟಿಸಿದರು. ಈ ದಾಖಲೆಯ ಪ್ರಕಾರ ಮೇಲ್ಕಂಡ ಬಸವಲಿಂಗಸ್ವಾಮಿಗಳ ತಮ್ಮಂದಿರಾದ ಬಸಪ್ಪ ಉರುಫ್ ಬಸೆಟ್ಟಪ್ಪ ಎಂಬುವರು ಮಠದ ಮುಂದಿನ ಸರ್ವಾಧಿಕಾರಿ ಗಳಾಗಿ ಆಯ್ಕೆಯಾದರು.[26] ಪತ್ರದಲ್ಲಿರುವಂತೆ "... ನೀನು ಹಿಂದಿನಂತೆ ಈ ಮುಂದೆಯೂ ಕೂಡ ಶ್ರದ್ಧಾಭಕ್ತಿ ಯಿಂದ ಮಠದ ವಿಶಿಷ್ಟ ಕೆಲಸಗಳನ್ನು ನೋಡುತ್ತಿ ಎಂಬ ನಂಬಿಕೆ ಸಂಪೂರ್ಣವಾಗಿ ನಮ್ಮಿಗೆ ಇರುತ್ತೇಯಾದ್ದ ರಿಂದ... ನಿನ್ನ ಸ್ವಾಧೀನಾನುಭವದಲ್ಲಿರುವ ಡಿಟ್ಟೋ ನಮ್ಮ ಮಠದ ವಿಶಿಷ್ಟ ಸ್ಥಿರ ಚರ ಸ್ವತ್ತುಗಳನ್ನು 'ನಿನ್ನ ಪುತ್ರ ಪೌತ್ರ ಪಾರಂಪರ್ಯವಾಗಿ' ಸಂಪೂರ್ಣ ಹಕ್ಕುದಾರಿಯೊಡನೆ ಅನುಭವಿಸಿಕೊಂಡು ಬರುವ ಸರ್ವಸ್ವಾತಂತ್ರ್ಯ ಮತ್ತು ಸಂಪೂರ್ಣ ಹಕ್ಕುದಾರಿ ಮತ್ತು ಅಧಿಕಾರವನ್ನು ನಿನಗೆ ವಹಿಸಿಕೊಟ್ಟಿರುತ್ತೆ...[27]" ಎಂದಿದೆ. ಇವರ ಹಕ್ಕುದಾರಿಗೆ ಒಳಪಡುವ ಆಸ್ತಿಗಳ ವಿವರಗಳನ್ನು ಹೇಳುತ್ತಾ- 'ಶಿವನಹಳ್ಳಿಮಠ ಹಾಗೂ ಅದಕ್ಕೆ ಸೇರಿದ ಸರ್ವೆ ನಂ : ೧೨ರಲ್ಲಿ ೩ ಎಕರೆ ೪ ಗುಂಟೆ ಜಮೀನು ಮತ್ತು ಊರಿನ ಮಾರ್ಗದಲ್ಲಿದ್ದ ಸರ್ವೆ ನಂ : ೩ರ ತೋಪು ಕಲ್ಯಾಣಿ ಸೇರಿವೆ. ದೊಡ್ಡಮಠಕ್ಕೆ ಸೇರಿದ ಕೇತಮಾರನಹಳ್ಳಿ ಗ್ರಾಮದ ಸರ್ವೆ ನಂ : ೧೨೦ರ ಐದು ಎಕರೆ ಭೂಮಿಯ ಜೊತೆಗೆ ಅಕ್ಕಿಪೇಟೆಯ ಮುಖ್ಯ ರಸ್ತೆಗಿರುವ ಮುನಿಸಿಪಲ್ ಡೋರ್ ನಂ ೀ ೨೮ರಲ್ಲಿರುವ ಮಠ, ಇದಕ್ಕೆ ಸೇರಿದ ಅಂಗಡಿ ಮನೆಗಳು, ಖಾಲಿ ಭೂಮಿ, ಬಾವಿ ಇತ್ಯಾದಿಗಳೂ ಸೇರಿರುತ್ತವೆ.[28]

ಹೀಗೆ ಕ್ರಿ.ಶ. ೧೭೨೫ರ ಸುಮಾರಿನಿಂದ ೧೮೩೫ರ ವರೆಗೆ ಒಂದು ಶತಮಾನದಷ್ಟು ಕಾಲ ಬೆಂಗಳೂರಿನ

'ಕೆಂಪಿನಸಮಯ'ದ ಮೂಲಮಠವಾಗಿ, ವೀರಶೈವಧರ್ಮ ಪತಾಕೆಯನ್ನು ಎತ್ತಿ ಹಿಡಿದಿದ್ದ ದೊಡ್ಡಮಠವು ೨೦ನೆಯ ಶತಮಾನದ ಆರಂಭದ ವೇಳೆಗೆ ಸಂಪೂರ್ಣವಾಗಿ ಖಾಸಗಿ ಸ್ವತ್ತಾಗಿ ಪರಿವರ್ತನೆಯಾಗಿಬಿಟ್ಟಿತ್ತು. ಇಷ್ಟಕ್ಕೂ ಕಾರಣಕರ್ತರಾಗಿದ್ದ ಚನ್ನವೀರಸ್ವಾಮಿಗಳು ೧೯೧೮ರಲ್ಲಿ ಲಿಂಗೈಕ್ಯರಾದಾಗ [29] ಇವರ ಗದ್ದುಗೆಯನ್ನು ಶಿವನಹಳ್ಳಿ ಮಠದಲ್ಲಿ ಮಾಡಲಾಗಿದೆ. ೧೯೧೨ರ ವರೆಗೆ ಉತ್ತರಾಭಿಮುಖವಾಗಿದ್ದ ದೊಡ್ಡಮಠದ ಹಳೆಯ ಭಾಗಗಳನ್ನೆಲ್ಲಾ ಕೆಡವಿಸಿ ಬಸೆಟ್ಟಪ್ಪನವರು ನೂತನ ಕಟ್ಟಡಗಳನ್ನು ನಿರ್ಮಾಣ ಮಾಡಿಸಿದರು. ಇವರ ಕಾಲಕ್ಕೆ ಮಠದ ಪ್ರವೇಶದ್ವಾರ ಪೂರ್ವಾಭಿಮುಖವಾಗಿ ಪರಿವರ್ತನೆಯಾಯಿತು.[30] ಇದುವರೆಗೆ ಸಾರ್ವಜನಿಕ ಹಿತಾಸಕ್ತಿಗೆ ಪೋಷಕವಾಗಿದ್ದ ದೊಡ್ಡ ಮಠವು ಏಕಾಏಕಿ ಖಾಸಗೀಕರಣವಾದುದನ್ನು ವಿರೋಧಿಸಿ ಬೆಂಗಳೂರಿನ ಪೇಟೆ ಶೆಟ್ಟಿ ಯಜಮಾನರುಗಳು ನ್ಯಾಯಾಲಯದಲ್ಲಿ ದಾವೆ ಹೂಡಿದ್ದರು. ಹತ್ತಾರು ವರ್ಷಗಳ ಕಾಲ ನಡೆದ ಈ ವ್ಯಾಜ್ಯಗಳು ಕೊನೆಗೆ ಬಸೆಟ್ಟಪ್ಪನವರ ಪರವಾಗಿಯೇ ಆದುವು.[31] ಸರ್ವಾಧಿಕಾರಿ ಬಸೆಟ್ಟಪ್ಪನವರು ಮುಂದೆ ದಿನಾಂಕ : ೨೭.೫.೧೯೩೮ರಲ್ಲಿ ತಮ್ಮ ಎರಡನೆಯ ಮಗನಾದ ನಂಜಪ್ಪ ಎಂಬುವರಿಗೆ ದೊಡ್ಡಮಠದ ಮಠಾಧಿಪತ್ಯವನ್ನು ವಹಿಸಿಕೊಟ್ಟರು.[32] ಅವರೇ ಈಗಿನ ೭೬ ವರ್ಷಗಳ ವಯೋವೃದ್ಧ ಶ್ರೀ ಚನ್ನವೀರಸ್ವಾಮಿಗಳು. ಅವರ ಹೇಳಿಕೆಯಂತೆ ''ಅಂಬಲಗೆರೆ, ಕನ್ನಳ್ಳಿ, ಚಾಮರಾಜಪೇಟೆ, ಜೂಗನಹಳ್ಳಿ, ಶಿವನಹಳ್ಳಿ, ಕೇತಮಾರನಹಳ್ಳಿ, ಲಕ್ಕಸಂದ್ರ ಇನ್ನೂ ಮುಂತಾದ ಕಡೆ ತಮ್ಮ ಮಠಕ್ಕೆ ಸೇರಿದ ಅನೇಕ ಆಸ್ತಿ-ಪಾಸ್ತಿಗಳಿದ್ದವು. ತಾವು ಅಧಿಕಾರಕ್ಕೆ ಬರುವ ವೇಳೆಗೆ ಅವೆಲ್ಲಾ ಕೈಬಿಟ್ಟುಹೋಗಿದ್ದವು. ಶಿವನಹಳ್ಳಿಯ ಮಠ ಮತ್ತು ಅದರ ಆಸ್ತಿಯನ್ನು ಮೊನ್ನೆ ಮೊನ್ನೆಯವರೆಗೂ ನಾವೇ ಉಳಿಸಿಕೊಂಡಿದ್ದೆವು. ಇತ್ತೀಚಿನ ದಿನಗಳಲ್ಲಿ ಅದರ ರಕ್ಷಣೆ ನಮಗೆ ಕಷ್ಟವಾಯಿತು. ನಮ್ಮ ಸಮಾಜದ ಸದುದ್ದೇಶಕ್ಕಾಗಿ ನಾವೇ ನಮ್ಮ ಸ್ವಂಯ ಇಚ್ಛೆಯಿಂದ ಆ ಮಠವನ್ನು ಸಿದ್ಧಗಂಗಾ ಮಠದ ಶ್ರೀ ಶಿವಕುಮಾರಸ್ವಾಮಿಗಳಿಗೆ ಒಪ್ಪಿಸಿಕೊಟ್ಟಿರುತ್ತೇವೆ. ಕಾಲದಿಂದಲೂ ನಮ್ಮ ಮಠ ವ್ಯಾಪಾರ ವ್ಯವಹಾರಸ್ತರಿಗೆ ಹಾಗೂ ವಿದ್ಯಾರ್ಥಿ ಮತ್ತು ಭಿಕ್ಷಾರ್ಥಿಗಳಿಗೆ ಆಶ್ರಿತ ಸ್ಥಾನವಾಗಿತ್ತು'' ಎನ್ನುತ್ತಾರೆ.

**ದೊಡ್ಡಮಠದ ಗುರು ಪರಂಪರೆ:**

೧. ಹೊಸಕೋಟೆಯ ಮಹಾಂತಸ್ವಾಮಿಗಳು. ಕ್ರಿ.ಶ. ಸು. ೧೭೨೫-೧೭೬೧.

೨. ಸಂಗ್ಗನಬಸವಸ್ವಾಮಿಗಳು. ಕ್ರಿ.ಶ. ಸು. ೧೭೫೦-೧೭೬೫.

೩. ಬಸವಲಿಂಗಸ್ವಾಮಿಗಳು. ಕ್ರಿ.ಶ. ಸು. ೧೭೬೬-೧೮೨೫.

೪. ತೋಟದ ಸ್ವಾಮಿಗಳು. ಕ್ರಿ.ಶ. ಸು.೧೮೮೧-೧೮೪೯.

೫. ಚನ್ನವೀರಸ್ವಾಮಿಗಳು. ಕ್ರಿ.ಶ. ೧೮೪೯-೧೯೧೮.

೬. ಬಸವಲಿಂಗಮರಿ (ಇಮ್ಮಡಿ ಬಸವಲಿಂಗ ಸ್ವಾಮಿಗಳು). ಕ್ರಿ.ಶ. ೧೮೭೭-೧೯೦೪.

೭. ಇಮ್ಮಡಿ ಚನ್ನವೀರಸ್ವಾಮಿಗಳು. ಕ್ರಿ.ಶ. ೧೯೩೮-೧೯೯೯.

೮. ಬಸವಲಿಂಗ ಸ್ವಾಮಿಗಳು. ೧೯೯೯ ರಿಂದ...

---

**ಅಡಿಟಿಪ್ಪಣಿಗಳು**

1. ದೊಡ್ಡಮಠದಲ್ಲಿ ಕ್ರಿ.ಶ. ೧೮೫೦ರ ಸುಮಾರಿನ ಅನೇಕ ಕಾಗದ ಪತ್ರಗಳಿದ್ದು ಅವುಗಳಲ್ಲಿ ಅರಳೆಪೇಟೆಯ ದೊಡ್ಡಮಠವೆಂದೇ ಸಂಬೋಧಿಸಲಾಗಿದೆ.
2. ಹೇಳಿಕೆ : ಕೆ.ಪಿ. ಶಿವಲಿಂಗಯ್ಯ (೬೮) ನಿವೃತ್ತ ಪ್ರಾಚಾರ್ಯರು. ವಿಜಯನಗರ, ಬೆಂಗಳೂರು.
3. Bangalore District Revenue Commissioner Court Judgement Order No : 28-55/1911-12. Dated : 15.12.1911.
4. ಜೇಲಿಮಠದ ಕೆಂಪುನಂಜಸ್ವಾಮಿಗಳ ಕಾಲದ (ಕ್ರಿ.ಶ. ೧೮೧೮-೧೮೪೩), ಹಾಗೂ ಶಿವರುದ್ರಸ್ವಾಮಿಗಳ ಕಾಲದ (೧೯೦೦-೧೯೪೧) ದಾಖಲೆಗಳಲ್ಲಿ ಈ ವಿಚಾರಗಳಿವೆ.

5. ಬೆಂಗಳೂರಿನ ಮೂರು ಪೇಟೆ ಶೆಟ್ಟಿ ಯಜಮಾನರುಗಳೊಂದಿಗೆ ವ್ಯವಹರಿಸಿರುವ ಪತ್ರ. (೧೮೧೫).
6. ಚನ್ನಮಲ್ಲಿಕಾರ್ಜುನ. ಸದ್ಧರ್ಮದೀಪಿಕೆ ಸಂಚಿಕೆ. ನಿರಂಜನ ವಂಶ ರತ್ನಾಕರ. ಭಾಗ - ೨. ಪು. ೧೬.
7. ಡಿ.ವಿ. ಪರಮಶಿವಮೂರ್ತಿ. 'ಬೇಲಿಮಠದ ಶಾಸನ'. ಶಾಸನ ಸಂಶೋಧನೆ. ಪು. ೩, ೪.
8. ಅದೇ. ಪು. ೪.
9. ಕೆಂಪಿನ ಸಮಯದ ಮುಖ್ಯ ಚರಂತಿಗೆಯನ್ನು ಸ್ವೀಕರಿಸಿದಾಗ ಮರಿಸಿದ್ಧಲಿಂಗ ದೇಶಿಕರಿಗೆ ಬಸವಲಿಂಗಸ್ವಾಮಿ ಎಂಬ ನೂತನ ನಾಮಕರಣವಾದಂತಿದೆ.
10. ಈ ಪತ್ರವನ್ನು ಕಪ್ಪಣ್ಣನವರ ಮಹಂತಪ್ಪನವರು ದೊಡ್ಡಮಠದ ಬಸವಲಿಂಗಸ್ವಾಮಿಗಳಿಗೆ ಬರೆದಿರುತ್ತಾರೆ. ಇದರಲ್ಲಿ ಕಾಲ ನಿರ್ದೇಶನವಿಲ್ಲ.
11. ಎರಡನೆಯ ಪತ್ರದ ಕಾಲ ಪಾರ್ಥಿವ ಸಂವತ್ಸರ (ಕ್ರಿ.ಶ. ೧೮೨೫). ಬಸವಲಿಂಗಸ್ವಾಮಿಗಳ ಕಾಲದ ಕೊನೆಯ ಪತ್ರವಿದು.
12. ಹೊಸಕೋಟೆಯ ಪೇಟೆ ಶೆಟ್ಟಿ ಯಜಮಾನರುಗಳು ಬಸವಲಿಂಗಸ್ವಾಮಿಗಳಿಗೆ ಬರೆದಿರುವ ಪತ್ರ. (ಕಾಲ ನಿರ್ದೇಶನವಿಲ್ಲ)
13. ಸಂಗನಬಸವಸ್ವಾಮಿಗಳು ನೆಲಮಂಗಲದಿಂದ ಬೆಂಗಳೂರಿನ ಅರಳೆಪೇಟೆಯ ಶೆಟ್ಟಿ ಯಜಮಾನರು ಹಾಗೂ ಭಕ್ತರುಗಳಿಗೆ ಬರೆದಿರುವ ಪತ್ರ. (ಕಾಲನಿರ್ದೇಶನವಿಲ್ಲ)
14. ಕೀಲಕ ಸಂವತ್ಸರ (ಕ್ರಿ.ಶ. ೧೮೪೯)ದ ಪಾಲ್ಗುಣ ಶುದ್ಧ ೯ರ ದಾಖಲೆ. ದೊಡ್ಡಮಠದ ತೋಟದಯ್ಯನವರಿಗೆ ಹೊಸಕೋಟೆಯ ಸಿದ್ದಪ್ಪಶೆಟ್ಟಿಯು ಬರೆದಿರುವ ಪತ್ರ.
15. ಹೇಳಿಕೆ : ಗಮಕವಿದ್ವಾನ್ ಚನ್ನಬಸಪ್ಪನವರು (೮೬) ನಿವೃತ್ತ ಮುಖ್ಯೋಪಾಧ್ಯಾಯರು. ಮಹಾಲಕ್ಷ್ಮಿ ಬಡಾವಣೆ. ಬೆಂಗಳೂರು.
16. ಕಪ್ಪಣ್ಣನವರ ಮಹಂತಪ್ಪನವರು ದೊಡ್ಡಮಠದ ಬಸವಲಿಂಗಸ್ವಾಮಿಗಳಿಗೆ ಬರೆದಿರುವ ಬಿನ್ನಹ ಪತ್ರ. (ಕ್ರಿ.ಶ. ೧೮೨೫. ಪಾರ್ಥಿವ ಸಂವತ್ಸರ ಕಾರ್ತಿಕ ಬಹುಳ ೧೧)
17. ಇಲ್ಲಿ ಬಸವಲಿಂಗಸ್ವಾಮಿಗಳ ಕಾಲದವೆಂದು ಗುರುತಿಸಲಾದ ಪತ್ರಗಳೆಲ್ಲಾ ದೊಡ್ಡಮಠವನ್ನೇ ನಿರ್ದೇಶಿಸುವುದು ಗಮನಾರ್ಹ.
18. ಪುಂಗನೂರಿನ ಗವಿಮಠದ ಚನ್ನಬಸವಸ್ವಾಮಿಗಳ ಪತ್ರ. ಬಹುಧಾನ್ಯ ಸಂವತ್ಸರ. (ಕ್ರಿ.ಶ. ೧೮೧೮)
19. ದೊಡ್ಡಮಠದ ಪೂಜಾಗೃಹದಲ್ಲಿ ಈಗಲೂ ಒಂದು ಗದ್ದುಗೆ ಎಂದು ನಿರ್ದೇಶಿಲ್ಪಡುವ ಸ್ಥಳವಿದೆ. ಅದನ್ನು ಎಡೆಯೂರು ಸಿದ್ಧಲಿಂಗೇಶ್ವರರ ತೋರುಗದ್ದುಗೆಯೆಂದು ಕರೆಯುತ್ತಾರೆ.
20. ದೊಡ್ಡಮಠದ ಭೂದಾನ ಸನ್ನದು. ದಿ : ೧೧.೩.೧೮೨೨. (ವಿಷು ಸಂವತ್ಸರ)
21. ತೋಟದಸ್ವಾಮಿಗಳ ಇಚ್ಛಾಪತ್ರ. ಕೀಲಕ ಸಂವತ್ಸರ. (ದಿ : ೨೯.೧.೧೮೪೯)
22. ಚನ್ನವೀರಸ್ವಾಮಿಗಳು ಮುರಗಿಮಠ, ವಾಲಾಜಿ, ಬಳ್ಳಾರಿ, ಚನ್ನಪಟ್ಟಣ, ಶೀತಕಲ್ಲು, ಬಿಡದಿ, ನೆಲಮಂಗಲ ಮುಂತಾದ ಮಠಸ್ಥರು ಹಾಗೂ ಮತ ಬಾಂಧವರೊಂದಿಗೆ ವ್ಯವಹರಿಸಿರುವ ಅನೇಕ ಕುಶಲೋಪರಿ ಪತ್ರಗಳು ದೊಡ್ಡಮಠದಲ್ಲಿವೆ.
23. ಗುಬ್ಬಿಯಿಂದ ಪಾರುಪತ್ತೆಗಾರ ಚನ್ನವೀರಪ್ಪನು ದೊಡ್ಡಮಠದ ಚನ್ನವೀರಸ್ವಾಮಿಗಳಿಗೆ ಬರೆದಿರುವ ಪತ್ರ (ಕಾಲ ನಿರ್ದೇಶನವಿಲ್ಲ.)
24. Registered Record No : 1033. Vol. No : 20. P. 346-347. dtd. 10.3.1878. P-1.
25. Ibid. P. 3.
26. ಚನ್ನವೀರಸ್ವಾಮಿಗಳು ಬಸೆಟ್ಟಪ್ಪನಿಗೆ ಮಾಡಿರುವ ವ್ಯವಸ್ಥಾಪತ್ರ. (ರಿ.ನಂ : ೮೪೬. ವಾಲ್ಯುಂ-೩೦೧. ಪು. ೨೧೮-೨೨೫. ದಿ : ೨೫.೨.೧೯೦೪)
27. ಅದೇ. ಪು. ೬.
28. ಅದೇ. ಪು. ೪.
29. ಹಿರಿಯ ಚನ್ನವೀರಸ್ವಾಮಿಗಳು ೧೯೧೮ರಲ್ಲಿ ಶಿವಾಧೀನರಾದಾಗ ಅವರ ಉತ್ತರಾಧಿಕಾರಿ ಎಂಬುದಾಗಿ ಮೋಟಗಾನಹಳ್ಳಿಯ ನಂಜುಂಡಪ್ಪನವರ ಮಗ ಚನ್ನಬಸಪ್ಪ ಎಂಬ ೯ ವರ್ಷದ ಬಾಲಕನನ್ನು ಆರಿಸಲಾಗಿತ್ತು. ಈ ಆಯ್ಕೆ ಮುಂದೆ ಊರ್ಜಿತವಾಗಲಿಲ್ಲ. ಆ ಬಾಲಕ ನಾನೇ ಎಂದು ಗಮಕವಿದ್ವಾನ್ ಚನ್ನಬಸಪ್ಪ (೮೬), ನವರು ಈಗಲೂ ನೆನೆದುಕೊಳ್ಳುತ್ತಾರೆ. ಇವರು ಬಸೆಟ್ಟಪ್ಪನವರ ಅಕ್ಕನ ಮಕ್ಕಳು.
30. Muzrai File No : 52/1922-23. P. 27-29.
31. Muzrai File No : 174/1930-31. Sl.No: 1-9. P. 39-40 and Muzrai File No : 74/1931-32. sl.No : 1&2. P. 10.
32. ಬಸೆಟ್ಟಪ್ಪನವರ ಇಚ್ಛಾಪತ್ರ. ರಿ. ನಂ : ೨೭೧೬. ವಾಲ್ಯುಂ ನಂ : ೪೨೧. ಪು. ೩. ೬. ದಿ : ೨೮.೫.೧೯೩೮.

## ೩. ಜಂಗಮಮಠ, ಶಿವನಹಳ್ಳಿ

ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಬೆಂಗಳೂರು ಪಟ್ಟಣದಿಂದ ಹೊರಗೆ ಪ್ರತ್ಯೇಕವಾಗಿದ್ದ ಒಂದು ಪುಟ್ಟಗ್ರಾಮ ಶಿವನಹಳ್ಳಿ. ಇಂದು ನಗರದ ಅವಿಭಾಜ್ಯ ಅಂಗವೆಂಬಂತೆ ಬೆರೆತುಹೋಗಿರುವ ಈ ಪುಟ್ಟ ಗ್ರಾಮದ ಆಸುಪಾಸಿನ ಭಾಗವನ್ನು 'ಶಿವನಗರ'ವೆಂದು ಕರೆಯಲಾಗುತ್ತದೆ. ನಗರದ ಪಶ್ಚಿಮ ಕಾರ್ಡ್‌ರಸ್ತೆಯಲ್ಲಿ ಯಶವಂತಪುರದ ಕಡೆಗೆ ಹೋಗುವಾಗ ಎಡಭಾಗದಲ್ಲಿ ಸಿಗುವ ಈ ಶಿವನಗರ (ಶಿವನಹಳ್ಳಿ)ದಲ್ಲಿ ಒಂದು ಜಂಗಮ ಮಠವಿದೆ. ಇದು ಬಹಳ ಪುರಾತನವಾದ ಮಠವೆಂದೂ ಆ ಭಾಗದಲ್ಲಿ ಮೊದಲಿಗೆ ಪ್ರಾಚೀನ ಗವಿಯೊಂದು ಇದ್ದುದಾಗಿ ಸ್ಥಳೀಯ ಜನರು ಹೇಳುತ್ತಾರೆ. ಆದರೆ ಸದ್ಯಕ್ಕೆ ಅಂತಹ ಪುರಾತನವಾದದ್ದೆಂದು ಗುರುತಿಸ ಬಹುದಾದ ಯಾವ ಕುರುಹುಗಳೂ ಆ ಸ್ಥಳದಲ್ಲಿ ಇರುವುದಿಲ್ಲ.

ಶಿವನಹಳ್ಳಿಯ ಮಠವನ್ನು ಕುರಿತು ನಮಗೆ ದೊರಕಿರುವ ಮೊದಲ ದಾಖಲೆ ಬೆಂಗಳೂರಿನ ದೊಡ್ಡಮಠ ದಲ್ಲಿ ದೊರಕಿರುವ ಕ್ರಿ.ಶ. ೧೭೮೭ರ ದಾನಶಾಸನ ಪತ್ರ.[1] ಇದರ ಪ್ರಕಾರ "...ಶಾಲಿವಾಹನ ಶಕವರ್ಷಂಗಳು ೧೭೦೯ಕ್ಕೆ ಸಂದ ಶೋಭಕೃತು ಸಂವತ್ಸರದ ಚೈತ್ರ ಶುದ್ಧ ೫ರಲ್ಲಿ ಶ್ರೀಮತ್ ಬೆಂಗಳೂರು ದಂಡಿನಪ್ಯಾಟೆ[2] ಅರಳೆಪೇಟೆಯಲ್ಲೂ ಇರುವಂಥಾ..... ಕುಲಬಾಂಧವರು ಬರೆಸಿಕೊಟ್ಟ ಧರ್ಮದಾನಶಾಸನ ಕ್ರಮವೆಂತೆಂದರೆ... ಶಿವನಹಳ್ಳಿ ಮಠಕ್ಕೆ ಧರ್ಮದಾಸೋಹ ದೀಪಾರಾಧನೆಗಾಗಿ ಕುಳವಂದಕ್ಕೆ ವರ್ಷಕ್ಕೆ ಕಂಠೀರಾಯಿ ಒಂದು ಹಣ, ಮದುವೆಗೆ ಗಂಡಿನವರು ಹೆಣ್ಣಿನವರು ತಲಾ ಒಂದೊಂದು ಹಣ ಈ ಮೇರೆಗೆ ಪುತ್ರಪೌತ್ರ ಪಾರಂಪರ್ಯವಾಗಿ ನಡೆಸಿಕೊಂಡು ಬರುವುದಾಗಿ...." ತಿಳಿಸಲಾಗಿದೆ. ಪತ್ರದ ಮೇಲ್ಭಾಗದಲ್ಲಿ ನಾಗಭೂಷಣದ ಸಂಗನಬಸವಪ್ಪ ದೇವರ ಪಾದಕ್ಕೆ ಎಂದಿದೆ.

ಮೇಲ್ಕಂಡ ದಾನಶಾಸನವನ್ನು ಆಧರಿಸಿ ಹೇಳುವುದಾದರೆ ೧೮ನೆಯ ಶತಮಾನದ ಮಧ್ಯಭಾಗದ ವೇಳೆಗಾಗಲೇ ಪ್ರಸ್ತುತ ಮಠವು ಅಸ್ತಿತ್ವದಲ್ಲಿದ್ದಿರಬೇಕು. ನಾಗಭೂಷಣದ ಸಂಗನಬಸವಪ್ಪದೇವರು ಕ್ರಿ.ಶ. ೧೭೮೭ರ ವೇಳೆಗೆ ಈ ಮಠದ ಸ್ವಾಮಿಗಳಾಗಿದ್ದದ್ದು ಸ್ಪಷ್ಟವಾಗಿದೆ. ಆಗ ಮಠದಲ್ಲಿ ಧರ್ಮದಾಸೋಹ ಹಾಗೂ ದೀಪಾರಾಧನೆಗಳು ನಿರಂತರವಾಗಿ ನಡೆಯಲು ವ್ಯವಸ್ಥೆಯಾಗಿದ್ದುದು ಗಮನಾರ್ಹ ಸಂಗತಿ.

ಈ ಮಠವನ್ನು ಕುರಿತು ದೊರಕುವ ಮತ್ತೊಂದು ಅಧಿಕೃತ ದಾಖಲೆ ಕ್ರಿ.ಶ. ೧೮೨೨ರಲ್ಲಿ ಮೈಸೂರಿನ ದೊರೆಗಳಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರು ನೀಡಿರುವ ಭೂದಾನ ಸನ್ನದು.[3] ಇದರಲ್ಲಿ "ಚಿತ್ರಭಾನು ಸಂವತ್ಸರದ ಕಾರ್ತೀಕ ಶುದ್ಧ ೧೨ (ದಿನಾಂಕ : ೨೬.೧೧.೧೮೨೨)ರಂದು ಬೆಂಗಳೂರು ಒಳಿಕವಾದ ಯಲಹಂಕ ತಾಲ್ಲೂಕು ಶಿವನಹಳ್ಳಿ ಮಠದ ಮಲ್ಲೇದೇವರಿಗೆ ಕಂಠೀರಾಯಿ ೨೦ ಹಣದ ಭೂಮಿ ಯನ್ನು ಸರ್ವಮಾನ್ಯವಾಗಿ..." ಕೊಟ್ಟಿರುವ ವಿಚಾರಗಳಿವೆ. ಆ ಕಾಲಕ್ಕೆ ನಿತ್ಯ ಧರ್ಮದಾಸೋಹ ಹಾಗೂ ದೀಪಾರಾಧನೆಗಳನ್ನು ನಡೆಸುತ್ತಿದ್ದ ಪ್ರತಿಯೊಂದು ಮಠ-ಮಾನ್ಯಗಳಿಗೂ ಮೈಸೂರಿನ ದೊರೆಗಳು ಉದಾರ ಪ್ರೋತ್ಸಾಹ ನೀಡಿದ್ದರೆಂಬುದಕ್ಕೆ ಇಂತಹ ಭೂದಾನ ಸನ್ನದುಗಳು ಸಾಕ್ಷಿಯಾಗಿವೆ. ಜೊತೆಗೆ ಆಗ ಶಿವನಹಳ್ಳಿ ಮಠದಲ್ಲಿ ಮಲ್ಲೇದೇವರು ಸ್ವಾಮಿಗಳಾಗಿದ್ದುದು ಖಚಿತವಾಗಿದೆ.

ಬೇಲಿಮಠದಲ್ಲಿ ಸಿಕ್ಕಿರುವ ದಾಖಲೆಯೊಂದರಲ್ಲಿ ಕ್ರಿ.ಶ. ೧೮೩೮ರ ವೇಳೆಗೆ ಬೇಲಿಮಠದ ಕೆಂಪುನಂಜೆ ಸ್ವಾಮಿಗಳು ಶಿವನಹಳ್ಳಿ ಮಠದ ಮರಿದೇವರಾಗಿದ್ದ ಶಿವರುದ್ರಮರಿ ಎಂಬುವರನ್ನು ತಮ್ಮ ಮಠದಲ್ಲಿ ಇಟ್ಟುಕೊಂಡು ಪೋಷಣೆಮಾಡಿದ್ದ ಹಾಗೆ ತಿಳಿದುಬರುತ್ತದೆ.[4] ಹೀಗೆ ದೊಡ್ಡಮಠ ಹಾಗೂ ಬೇಲಿಮಠಗಳ ಸಂಪರ್ಕವುಳ್ಳ ಶಿವನಹಳ್ಳಿ ಜಂಗಮಮಠವು ನಿಶ್ಚಯವಾಗಿಯೂ 'ಕೆಂಪಿನಸಮಯ'ದ ಮಠವೇ ಎನ್ನುವುದರಲ್ಲಿ ಸಂದೇಹ ವಿಲ್ಲ. ಮುಂದೆ ೧೯೦೮ರಲ್ಲಿ ಬೆಂಗಳೂರು ತಾಲ್ಲೂಕು ಅಮಲ್ದಾರ್ ಕೋರ್ಟಿನಲ್ಲಿ ದಾಖಲಾಗಿರುವಂತೆ ಶಿವನಹಳ್ಳಿ ಮಠವು ಬೇಲಿಮಠದ ಶಾಖಾಮಠವಾಗಿದ್ದು[5] ಆಗ ಈ ಮಠಕ್ಕೆ ಮಠಾಧಿಪತಿಗಳಾರೂ ಇರಲಿಲ್ಲವೆಂದು ತಿಳಿದುಬರುತ್ತದೆ.

ಈ ಮಧ್ಯೆ ದೊಡ್ಡಮಠದ ಚನ್ನವೀರಸ್ವಾಮಿಗಳು ದಿನಾಂಕ : ೨೫.೨.೧೯೦೪ರಲ್ಲಿ ಎನ್. ಬಸೆಟ್ಟಪ್ಪನಿಗೆ ಬರೆದುಕೊಟ್ಟಿರುವ ವ್ಯವಸ್ಥಾಪತ್ರದಲ್ಲಿ ಶಿವನಹಳ್ಳಿ ಮಠವು ದೊಡ್ಡಮಠಕ್ಕೆ ಸೇರಿದ್ದಾಗಿದೆ.[6] ಮುಂದೆ ೧೯೧೮ರಲ್ಲಿ ಈ ಸ್ವಾಮಿಗಳು ಲಿಂಗೈಕ್ಯರಾದಾಗ ಶಿವನಹಳ್ಳಿ ಮಠದಲ್ಲಿಯೇ ಗದ್ದುಗೆ ಮಾಡಲಾಗಿದೆ.[7] ನಂತರ ಸದರಿ ಬಸೆಟ್ಟಪ್ಪನವರ ಮುಖೇನ ದೊಡ್ಡಮಠದ ಈಗಿನ ಮಠಾಧಿಪತಿಗಳಾಗಿರುವ ಇಮ್ಮಡಿ ಚನ್ನವೀರಸ್ವಾಮಿಗಳಿಗೆ ಮೇಲ್ಕಂಡ ಮಠದ ಆಧಿಪತ್ಯವು ದಿನಾಂಕ : ೨೭.೫.೧೯೩೮ರಿಂದ ಪ್ರಾಪ್ತವಾಗಿದೆ.[8] ಇಮ್ಮಡಿ ಚನ್ನವೀರಸ್ವಾಮಿಗಳು ೧೯೮೫ರ ವೇಳೆಗೆ ಶಿವನಹಳ್ಳಿ ಮಠವನ್ನು ಸಿದ್ಧಗಂಗಾ ಮಠಾಧೀಶರಿಗೆ ಒಪ್ಪಿಸಿದರು[9]. ಇವರ ಕೈಸೇರಿದ ಮೇಲೆ ಮಠದ ಆವರಣದಲ್ಲಿ ಸುಂದರವಾದ ಕಲ್ಯಾಣಮಂಟಪ, ಶಾಲಾ ಸಂಕೀರ್ಣಗಳು ತಲೆಯೆತ್ತಿದವು. ಈಗ ಶಿವನಹಳ್ಳಿಯ ಜಂಗಮಮಠವು ಬಹು ಜನೋಪಯೋಗಿ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿ ಪರಿವರ್ತನೆಯಾಗಿದೆ.

**ಶಿವನಹಳ್ಳಿಮಠದ ಗುರು ಪರಂಪರೆ :**

೧. ನಾಗಭೂಷಣ ಸಂಗನಬಸವಪ್ಪದೇವರು. ಕ್ರಿ.ಶ. ೧೭೮೨.

೨. ಮಲ್ಲೇದೇವರು. ಕ್ರಿ.ಶ. ೧೮೨೨.

೩. ಶಿವರುದ್ರಮರಿದೇವರು. ಕ್ರಿ.ಶ. ೧೮೩೪.

೪. ಚನ್ನವೀರಸ್ವಾಮಿಗಳು. ೧೯೩೮-೧೯೮೫. (೧೯೮೫ ರಿಂದ ಸಿದ್ಧಗಂಗಾ ಮಠಾಧೀಶರ ನೇರ ಆಡಳಿತಕ್ಕೆ ಒಳಪಟ್ಟಿದೆ.)

---

**ಅಡಿಟಿಪ್ಪಣಿಗಳು**

1. ಇದು ಮೂಲದಾಖಲೆಯಲ್ಲ. ದೊಡ್ಡಮಠದ ಕೋರ್ಟ್ ವ್ಯವಹಾರಗಳಲ್ಲಿ ತಾಲ್ಲೂಕು ಅಮಲ್ದಾರರಿಗೆ ಸಲ್ಲಿಸಿರುವ ನಕಲು ಪ್ರತಿ. ಇದನ್ನು ಮುಜರಾಯಿ ದಾಖಲೆ ಸಂಖ್ಯೆ: ೫೨/೧೯೨೨-೨೩. ಪು. ೭೭ರಲ್ಲಿ ಇರುವಂತೆ ಆರಿಸಿಕೊಳ್ಳಲಾಗಿದೆ.
2. ಅರಳೆಪೇಟೆ, ಸಿಟಿಮಾರುಕಟ್ಟೆ ಹಾಗೂ ಚಾಮರಾಜಪೇಟೆ ಇವುಗಳ ಮಧ್ಯದ ಭಾಗವನ್ನು ಹಿಂದೆ ದಂಡಿನಪೇಟೆ ಎಂದು ಕರೆಯಲಾಗುತ್ತಿತ್ತು.
3. ಸನ್ನದು ತಾಜಾಪ್ರತಿ ಇದೆ. ದಿ : ೨೬.೧೧.೧೮೨೨ ರಲ್ಲಿ ಸಾದರವಾಗಿದೆ.
4. ಹೊಸಪೇಟೆಯ ನಂಜುಂಡಶಾಸ್ತ್ರಿಗಳು ಕೆಂಪುನಂಜೆಸ್ವಾಮಿಗಳಿಗೆ ಬರೆದಿರುವ ಪತ್ರ. ಜಯ ಸಂವತ್ಸರ (ಕ್ರಿ.ಶ. ೧೮೩೪)
5. ಬೆಂಗಳೂರು ತಾಲ್ಲೂಕು ಕಛೇರಿಯಿಂದ ಬೇಲಿಮಠದ ಶಿವರುದ್ರಸ್ವಾಮಿಗಳ ಖಾಯಿಷ್ ಮೇರೆಗೆ ತಯಾರು ಮಾಡಲ್ಪಟ್ಟ ಕಾಪಿ. ದಿ : ೬.೧೧.೧೯೦೮. ಪು. ೫.
6. ರಿ.ನಂ : ೮೪೬. ಸಂಪುಟ-೩೦೧. ಪು. ೨೧೮-೨೨೫. ದಿನಾಂಕ : ೨೫.೨.೧೯೦೪. ಪು. ೪.
7. ಗದ್ದುಗೆಯ ಮೇಲೆ ಶಿಲಾಫಲಕವಿದೆ. ಅದರಲ್ಲಿ 'ಅಕ್ಕಿಪೇಟೆ ದೊಡ್ಡಮಠದ ಶ್ರೀ ಚನ್ನವೀರಸ್ವಾಮಿಗಳು ಲಿಂಗೈಕ್ಯರಾದದ್ದು ೧೯೧೮ರಲ್ಲಿ ಶಾಲಿವಾಹನ ಶಕ ೧೮೪೦ ಕಾಳಾಯುಕ್ತಿ ಸಂವತ್ಸರ ಶುದ್ಧ ೧೧' ಎಂದು ಬರೆದಿದೆ.
8. ಬಸೆಟ್ಟಪ್ಪನವರ ಇಚ್ಛಾಪತ್ರ. ರಿ.ನಂ : ೨೭೧೭. ವಾಲ್ಯುಂ-೪೨೧. ಪು. ೩-೬. ದಿ : ೨೮.೫.೧೯೩೮.
9. ಹೇಳಿಕೆ : ಶ್ರೀಚನ್ನವೀರಸ್ವಾಮಿಗಳು (೭೬) ದೊಡ್ಡಮಠ. ದಿ : ೨೫.೬.೧೯೯೩.

## ೪. ಕಂಬಿನಂಜಯ್ಯನಮಠ, ಬಳ್ಳಾಪುರದಪೇಟೆ

ಕಳೆದ ಶತಮಾನದ ಉತ್ತರಾರ್ಧದಲ್ಲಿ ಶರಣರೊಬ್ಬರು ಪಂಚಲೋಹದ ಮಾರುದ್ದದ ಕಂಬಿಯೊಂದನ್ನು ಹೆಗಲಿಗೇರಿಸಿಕೊಂಡು, ಭಕ್ತರು ಕೊಟ್ಟ ಮುಡಿಪು ಕಾಣಿಕೆಗಳನ್ನು ಅದರ ಎರಡೂ ತುದಿಯ ಜೋಳಿಗೆಗಳಿಗೆ ತುಂಬಿಸಿಕೊಂಡು[1] ಪ್ರತಿವರ್ಷವೂ ಶ್ರೀಶೈಲದ ಜಾತ್ರೆಗೆ ಹೋಗಿಬರುತ್ತಿದ್ದರಂತೆ. ಅವರೇ ಕಂಬಿನಂಜಯ್ಯ ಎನ್ನುವ ಶರಣರು. ಅವರಿದ್ದ ಮಠವೇ ಕಂಬಿನಂಜಯ್ಯನಮಠ. ಸಂಸಾರಿಗಳೇ ಆಗಿದ್ದು ಸ್ವಾಮಿಗಳು ನಡೆಸುತ್ತಿದ್ದ ಅಯ್ಯಾಚಾರಗಳನ್ನೆಲ್ಲಾ ಇವರೂ ನಡೆಸುತ್ತಿದ್ದರಂತೆ.[2]

ಕಂಬಿ ನಂಜಯ್ಯನವರ ಮಠವಿದ್ದ ಭಾಗವನ್ನು ಹಿಂದೆ 'ಗುಡುಮಯ್ಯನಪೇಟೆ' ಎಂತಲೂ ಅನಂತರ 'ಬಳ್ಳಾಪುರದಪೇಟೆ' ಎಂತಲೂ ಕರೆಯಲಾಗುತ್ತಿತ್ತು. ಈಗಿನ ಅವಿನ್ಯೂ ರಸ್ತೆಗೆ ಉತ್ತರ ಭಾಗದ ರಂಗಸ್ವಾಮಿ ಗುಡಿಗೆ ಸಮೀಪ ಕಿಲಾರಿ ರಸ್ತೆಯಲ್ಲಿ ಈ ಮಠವಿತ್ತು. ೧೯೦೮ರ ವರೆಗೂ ನಗರದ ಬೇಲಿಮಠದ ಸ್ವಾಧೀನದಲ್ಲಿದ್ದ ಈ ಮಠವು ಮುಂದೆ ದೊಡ್ಡಮಠದ ಎನ್. ಬಸಟ್ಟಪ್ಪನವರ ಅಧೀನಕ್ಕೆ ಒಳಪಟ್ಟಿತು. ಹೀಗಾಗಿ ಕೆಂಪಿನಸಮಯದ ಪ್ರಧಾನಮಠಗಳಾಗಿದ್ದ ಬೇಲಿಮಠ ಮತ್ತು ದೊಡ್ಡಮಠಗಳ ಅಧೀನದಲ್ಲಿದ್ದ ಈ ಮಠವೂ ಕೂಡ ಕೆಂಪಿನಸಮಯಕ್ಕೆ ಸೇರಿದ ಮಠವೇ ಆಗಿದ್ದಿರಬೇಕೆಂದು ಗ್ರಹಿಸಬಹುದಾಗಿದೆ. ಮುಂದೆ ಬಸಟ್ಟಪ್ಪನವರ ವಂಶಸ್ಥರಿಗೆ[3] ಸದರಿಮಠವು ಹಂಚಿಕೆಯಾಗಿ ಕೊನೆಗೊಂಡಿತು. ಈಗ ಆ ಮಠದ ಭಾಗವೆಲ್ಲಾ ಗೃಹಸ್ಥರ ಮನೆಗಳಾಗಿ ಪರಿವರ್ತನೆಯಾಗಿಬಿಟ್ಟಿವೆ.

---

**ಅಡಿಟಿಪ್ಪಣಿಗಳು**

1. ಈ ಕಂಬಿಯ ಎರಡೂ ಬದಿಗೆ ಬಿದಿರಿನಬುಟ್ಟಿಗಳನ್ನು ತೂಗುಹಾಕಿಕೊಳ್ಳುವಂತಿದ್ದು, ಅದನ್ನು ಕಾವಡಿ ಎಂದೂ ಕರೆಯುತ್ತಿದ್ದರು. ಇಂತಹುದೊಂದು ಕಂಬಿ ಮೊನ್ನೆ ಮೊನ್ನೆಯವರೆಗೂ ದೊಡ್ಡಮಠದಲ್ಲಿದ್ದುದನ್ನು ಕಂಡವರಿದ್ದಾರೆ.
2. ಹೇಳಿಕೆ : ಪಂಡಿತ ಕೆ.ಪಿ. ಶಿವಲಿಂಗಯ್ಯ (೬೮) ನಿವೃತ್ತ ಪ್ರಾಚಾರ್ಯರು. ವಿಜಯನಗರ, ಬೆಂಗಳೂರು.
3. ಶ್ರೀಮತಿ ಗೌರಮ್ಮ (೮೬ ವರ್ಷ. ಎನ್. ಬಸಟ್ಟಪ್ಪನವರ ಮಗಳು. ಜಯನಗರ, ಬೆಂಗಳೂರು. ) ಎಂಬುವರು, ಮೇಲ್ಕಂಡ ಮಠವು ತಮ್ಮ, ತಂದೆಯವರಾಗಿದ್ದ ಬಸಟ್ಟಪ್ಪ ಎಂಬುವರಿಗೆ ಕಂಬಿನಂಜಯ್ಯನ ಮಠದ ಕೊನೆಯ ವಾರಸುದಾರಳಾಗಿದ್ದ ಕಂಬಿನಂಜಮ್ಮ ಎಂಬುವಳಿಂದ ದತ್ತಾಧಿಕಾರಯುಕ್ತವಾಗಿ ದೊರಕಿದ್ದಿತೆಂದು ಹೇಳುತ್ತಾರೆ.

## ೫. ಮುದ್ದಪ್ಪಸ್ವಾಮಿಮಠ, ನರಗುಂದದೇವರ ಮಠದ ಗಲ್ಲಿ

ಈ ಮಠವು ಹಿಂದೆ ಅರಳೆಪೇಟೆಯ ಮುಖ್ಯರಸ್ತೆಯಲ್ಲಿರುವ ಅರಳೆ (ಬಸವಣ್ಣನ) ಗುಡಿಯ ಬಲಭಾಗದ ನರಗುಂದದೇವರ ಮಠದ ಗಲ್ಲಿಯಲ್ಲಿತ್ತು. ಈ ಗಲ್ಲಿಯನ್ನು ಹಿಂದೆ ತೆಂಗಿನಮರದ ಗಲ್ಲಿ ಎಂದೇ ಕರೆಯಲಾಗುತ್ತಿತ್ತು. ನರಗುಂದದೇವರ ಮಠದ ದಾಖಲೆಯೊಂದರಲ್ಲಿ ನಮೂದಾಗಿರುವಂತೆ ಅದರ ಪಶ್ಚಿಮ ಬದಿಗಿದ್ದುದೇ ಮುದ್ದಪ್ಪ ಸ್ವಾಮಿಮಠ[1]. ೧೯೦೮ರ ವೇಳೆಗೆ ಈ ಮಠದಲ್ಲಿ ಬಸವಲಿಂಗದೇವರು ಎಂಬ ಸ್ವಾಮಿಗಳಿದ್ದರು. ಇವರು ಬೇಲಿಮಠದ ನಿಜವಾದ ಉತ್ತರಾಧಿಕಾರಿ ತಾವೆ ಎಂದು ಆಗಿನ ಅಮಲ್ದಾರ್ ಕೋರ್ಟ್‌ನಲ್ಲಿ ದಾವೆ ಹೂಡಿದ್ದರು.[2] ಈ ಸಂಬಂಧವಾಗಿ ಬೆಂಗಳೂರು ತಾಲ್ಲೂಕು ಅಮಲ್ದಾರ್ ಕೋರ್ಟಿನಿಂದ ಬಂದಿದ್ದ ಆದೇಶ ಪತ್ರದಲ್ಲಿ... "...ಅರಳೆಪೇಟೆಯ ಮುದ್ದಪ್ಪದೇವರ ಮಠದಲ್ಲಿರುವ ಬಸವಲಿಂಗಸ್ವಾಮಿಗಳಿಗೆ..." ಎಂದೇ ಸಂಬೋಧಿಸಲಾಗಿದೆ. ಬೇಲಿಮಠದ ಶಾಖೆಯಾಗಿದ್ದು ಕೆಂಪಿನಸಮಯಕ್ಕೆ ಸೇರಿದ ಈ ಮಠವನ್ನು ನೋಡಿಕೊಳ್ಳಲು ಆಗಿನ ಶಿವರುದ್ರಸ್ವಾಮಿಗಳು ದಿನಾಂಕ : ೧೬.೩.೧೯೨೩ರಲ್ಲಿ ನಂಜುಂಡಯ್ಯ ಎಂಬುವನಿಂದ ಬರೆಸಿಕೊಂಡಿದ್ದ ಕರಾರು ಪತ್ರ ಈಗಲೂ ಬೇಲಿಮಠದಲ್ಲಿದೆ.[3] ಸದ್ಯಕ್ಕೆ ಈ ಮಠವು ಅವಸಾನವಾಗಿದ್ದು ಸದರಿ ಜಾಗದಲ್ಲಿ ಸಂಸಾರಿ ಮನೆಗಳಾಗಿವೆ.

---

**ಅಡಿಟಿಪ್ಪಣಿಗಳು**

1. ನರಗುಂದದೇವರಮಠದ ಕರಿಬಸವಸ್ವಾಮಿಗಳ ಇಚ್ಛಾಪತ್ರ. ದಿ : ೧.೮.೧೯೨೩. ರಿ. ನಂ : ೨೨೩. ಸಂಪುಟ-೫೪. ಪು. ೨೭೬-೨೭೮.
2. Muzrai File No : 265/1908. Sl.No : 2. Miss case No : 843. dt: 28.8.1908.
3. ಬೇಲಿಮಠದ ಶಿವರುದ್ರಸ್ವಾಮಿಗಳಿಗೆ ಅರಳೆಪೇಟೆ ನಂಜುಂಡಯ್ಯನು ಬರೆದುಕೊಟ್ಟ ಕರಾರು ಪತ್ರ. ದಿ: ೧೬.೩.೧೯೨೩.

## ೬. ನಂಬೆಣ್ಣನಮಠ, ತೋಟದ ದೇವರಗಲ್ಲಿ

ನಗರದ ಕೆಂಪಿನಸಮಯದ ಪ್ರಧಾನ ಮಠವಾಗಿದ್ದ ಬೇಲಿಮಠದ ಹಲವಾರು ಶಾಖೆಗಳಲ್ಲಿ ನಂಬೆಣ್ಣನ ಮಠವೂ ಒಂದು. ಈ ಮಠವು ಅರಳೆಪೇಟೆಯ ತೋಟದ ದೇವರಗಲ್ಲಿಯಲ್ಲಿ ಹವಳದ ವೀರಭದ್ರಯ್ಯನವರ ಮನೆಯ ಪಕ್ಕದಲ್ಲಿತ್ತು. ಕ್ರಿ.ಶ. ೧೮೫೯ರಲ್ಲಿ ಈ ಮಠದಲ್ಲಿದ್ದ ಸಿದ್ಧಲಿಂಗದೇವರು ತೀರಿಕೊಂಡಾಗ ಬೇಲಿಮಠದ ಸಿದ್ಧಲಿಂಗಸ್ವಾಮಿಗಳು ಆ ಮಠದ ಜವಾಬ್ದಾರಿಯನ್ನು ರುದ್ರಯ್ಯ ಎಂಬುವವನಿಗೆ ವಹಿಸಿಕೊಟ್ಟ ದಾಖಲೆ ಇದೆ.[1] ೧೮೮೭ರಲ್ಲಿ ಬೇಲಿಮಠದ ರುದ್ರಸ್ವಾಮಿಗಳು ಈ ಮಠದ ಜವಾಬ್ದಾರಿಯನ್ನು ನೋಡಿಕೊಳ್ಳಲಿಕ್ಕಾಗಿ ಗೌಡನ ಪೇಟೆಯ ಬಸಯ್ಯ ಎಂಬುವನಿಗೆ ವಹಿಸಿದ್ದರು.[2] ಮುಂದೆ ೧೯೦೮ರ ವೇಳೆಗೆ ಈ ಮಠದಲ್ಲಿ ಗುರುಲಿಂಗ ಶಾಸ್ತ್ರಿಗಳು ವಾಸವಾಗಿದ್ದರು.[3] ಮಠದ ಒಳಭಾಗದಲ್ಲಿ ಒಂದು ಪುಟ್ಟ ಕಲ್ಯಾಣಿಯೂ ಇತ್ತು. ಆದ್ದರಿಂದ ಇದನ್ನು ನಂಬೆಣ್ಣದೇವರ ಚೌಕಿ ಎಂದೂ ಕರೆಯುತ್ತಿದ್ದರು.[4] ಇಂದು ನಾಮಾವಶೇಷವಾಗಿರುವ ಈ ಮಠದ ಹೆಸರೇ ಬೆಂಗಳೂರಿನ ಜನತೆಗೆ ತೀರಾ ಅಪರಿಚಿತವಾಗಿದೆ.

---

**ಅಡಿಟಿಪ್ಪಣಿಗಳು**

1. ಸಿದ್ಧಾರ್ಥಿ ಸಂವತ್ಸರದಲ್ಲಿ (ಕ್ರಿ.ಶ. ೧೮೫೯ರಲ್ಲಿ) ರುದ್ರಯ್ಯನಿಗೆ ಬರೆದುಕೊಟ್ಟ ರಸೀತಿ ಪತ್ರ. ಬೇಲಿಮಠ.
2. ಗೌಡನ ಪೇಟೆಯ ಬಸಯ್ಯನು ಬರೆದುಕೊಟ್ಟಿರುವ ಕರಾರು. ದಿ : ೧೪.೧೦.೧೮೮೭. ಬೇಲಿಮಠ.
3. Muzrai File No : 265/1908. Sl. No: 2. Miss case No : 843. dt: 28.8 1908.
4. ಬಸಯ್ಯನ ಕರಾರಿನಲ್ಲಿ ಇರುವಂತೆ. ಪೂರ್ವೋಕ್ತ.

---

## ೭. ನಂಜಯ್ಯನ ಚೌಕಿ ಮಠ, ಅರಳೆಪೇಟೆ

೧೯೦೮ರ ವೇಳೆಗೆ ಇದೂ ಕೂಡ ಬೇಲಿಮಠದ ಶಾಖಾಮಠವೇ ಆಗಿತ್ತು. ಅರಳೆಪೇಟೆಯ ತೋಟದ ದೇವರಗಲ್ಲಿಯಲ್ಲಿ ವೀರಭದ್ರಸ್ವಾಮಿ ಗುಡಿಯ ಹಿಂಭಾಗಕ್ಕೆ ಅಡಿಕೆ ಚನ್ನಪ್ಪನವರ ಮನೆಯ ಪಕ್ಕದಲ್ಲಿದ್ದುದೇ ಈ ನಂಜಯ್ಯನ ಚೌಕಿಮಠ. ಹಿಂದೆ ಈ ಮಠವನ್ನು ಅಡವಿಮಠವೆಂದೂ ಕರೆಯಲ್ಪಡುತ್ತಿದ್ದುದಾಗಿ ತಿಳಿದು ಬರುತ್ತದೆ. ೧೯೦೮ರಲ್ಲಿ ಈ ಮಠದಲ್ಲಿ ಗಿಡ್ಡನಂಜಯ್ಯ ಎಂಬುವರು ವಾಸವಾಗಿದ್ದರು.[1] ಬೆಂಗಳೂರಿನಲ್ಲಿ ಈಗ ನಾಮಾವಶೇಷವಾಗಿರುವ ಮಠಗಳ ಪಟ್ಟಿಯಲ್ಲಿ ಇದೂ ಒಂದು.

---

**ಅಡಿಟಿಪ್ಪಣಿ**

1. Muzrai File No : 265/1908. Sl. No : 2. Miss Case No : 843. dt: 28.8.1908.

## ೨.೩. ಸಂಪಾದನೆ ಸಮಯದ ಮಠಗಳು

ವೀರಶೈವ ವಿರಕ್ತ ಪರಂಪರೆಯ ಐದು ಪ್ರಮುಖ ಭೇದಗಳಲ್ಲಿ ಒಂದು ಸಂಪಾದನೆಸಮಯ. ಬೆಂಗಳೂರಿನಲ್ಲಿ ಸಾಕಷ್ಟು ಪ್ರಾಚೀನವೆನ್ನಬಹುದಾದ ಎರಡು ಸಂಪಾದನೆ ಸಮಯದ ಮಠಗಳಿವೆ. ಅವುಗಳೆಂದರೆ ೧. ಕರಿಸಿದ್ಧೇಶ್ವರಮಠ ಹಾಗೂ ೨. ಕೊಳದಮಠ. ಇವೆರಡೂ ಮಠಗಳು ಈ ಹೊತ್ತಿನವರೆಗೂ ಉಳಿದು ಬಂದಿವೆಯಾದರೂ, ಕರಿಸಿದ್ಧೇಶ್ವರ ಮಠವು ಸಂಪೂರ್ಣವಾಗಿ ಖಾಸಗಿ ಸ್ವತ್ತಾಗಿ ಪರಿವರ್ತನೆಯಾಗಿಬಿಟ್ಟಿದೆ. ಆದರೆ ಕೊಳದಮಠವು ಧಾರ್ಮಿಕ ಪರಂಪರೆಗೆ ಅನುಗುಣವಾಗಿ ಮಠಾಧಿಪತಿಗಳನ್ನು ಹೊಂದಿದ್ದು, ತನ್ನ ಸಾಮಾಜಿಕ ಅಸ್ತಿತ್ವವನ್ನು ಮುನ್ನಡೆಸಿಕೊಂಡು ಬಂದಿದೆ. ಮುಂದೆ ಅವುಗಳ ಚಾರಿತ್ರಿಕ ಮಜಲುಗಳನ್ನು ಕುರಿತು ವಿಶದವಾಗಿ ಚರ್ಚಿಸಲಾಗಿದೆ.

### ೧. ಕರಿಸಿದ್ಧೇಶ್ವರಮಠ, ದೊಡ್ಡಪೇಟೆ

ಹಿಂದೆ ಬೆಂಗಳೂರಿನ ಕೋಟೆಗೆ ಪೂರ್ವ ದಿಕ್ಕಿನಲ್ಲಿದ್ದ ಅಲಸೂರು ಬಾಗಿಲಿಗೂ, ಪಶ್ಚಿಮ ದಿಕ್ಕಿನಲ್ಲಿದ್ದ ಸೊಂಡೆಕೊಪ್ಪದ ಬಾಗಿಲಿಗೂ ನೇರವಾದ ಒಂದೇ ಮಾರ್ಗವಿತ್ತು. ಪೂರ್ವದಲ್ಲಿ ಅಲಸೂರು ಪೇಟೆಯಿಂದ ಪ್ರಾರಂಭವಾಗುತ್ತಿದ್ದ ಈ ಮಾರ್ಗವು ಪಶ್ಚಿಮದಲ್ಲಿ ಅರಳೆಪೇಟೆಗೆ ಬಂದು ಮುಟ್ಟುತ್ತಿತ್ತು. ಪೂರ್ವದ ಈ ಮಾರ್ಗದ ಅಂಚಿನಲ್ಲಿ ಪ್ರಸನ್ನ ಗಂಗಾಧರೇಶ್ವರನ ಗುಡಿಯೂ, ಪಶ್ಚಿಮದ ಅಂಚಿಗೆ ವೀರಭದ್ರಸ್ವಾಮಿ ಗುಡಿಯೂ ಇದ್ದವು. ಮಾರ್ಗಮಧ್ಯದಲ್ಲಿ ಮೇಲ್ಭಾಗ (ಉತ್ತರ)ಕ್ಕೆ ದೊಡ್ಡಪೇಟೆಯೂ, ಕೆಳಭಾಗ (ದಕ್ಷಿಣ)ಕ್ಕೆ ಚಿಕ್ಕಪೇಟೆಯೂ ಹಂಚಿಕೊಂಡಂತಿದ್ದವು. ಗೌಡದೊರೆಗಳ ಕಾಲದಲ್ಲಿ ನಿರ್ಮಾಣವಾಗಿದ್ದ ಈ ಮಾರ್ಗ ಇಂದಿಗೂ ಉಳಿದುಕೊಂಡಿದೆ. ಅದೇ ಇಂದಿನ ಓ.ಟಿ.ಸಿ. ರಸ್ತೆ.[1] ಬೆಂಗಳೂರು ಮಹಾನಗರಪಾಲಿಕೆಯ ಮುಖ್ಯ ಕಛೇರಿಯ ಎದುರು (ಬಾದಾಮಿ ಕಟ್ಟಡದ ಬಲ) ಭಾಗದಿಂದ ಆರಂಭವಾಗುವ ಈ ರಸ್ತೆ ರೈಲ್ವೆ ಗೂಡ್ಸ್‌ಷೆಡ್ ರಸ್ತೆಗೆ ಬಂದು ಮುಟ್ಟುತ್ತದೆ.

ಈ ಓ.ಟಿ.ಸಿ. ರಸ್ತೆಯ ಬಗೆಗೆ ಹಳೆಯ ಕೋರ್ಟು ದಾಖಲೆಯೊಂದು ವಿಶೇಷವಾದ ಬೆಳಕು ಚೆಲ್ಲುತ್ತದೆ. 'ಕ್ರಿ.ಶ. ೧೬೮೭ರಲ್ಲಿ ಮೈಸೂರಿನ ಚಿಕ್ಕದೇವರಾಜ ಒಡೆಯರು ಬಿಜಾಪುರದ ಸುಲ್ತಾನನ ಕಡೆಯಿಂದ ಬೆಂಗಳೂರು ಪಟ್ಟಣವನ್ನು ಮೂರುಲಕ್ಷ ರೂಪಾಯಿಗಳಿಗೆ ಕೊಂಡುಕೊಂಡರು. ಆಗ ಬೆಂಗಳೂರಿನಲ್ಲಿ ತಾತ್ಕಾಲಿಕವಾದ ತಾಲ್ಲೂಕು ಕಛೇರಿಯನ್ನು ಮಾಡಿಕೊಳ್ಳಲು ಸ್ಥಳಾವಕಾಶ ಒದಗಿಸಿದ್ದುದು ದೊಡ್ಡಪೇಟೆಯ ಕರಿಸಿದ್ಧೇಶ್ವರ ಮಠ[2]'. ಹೀಗೆ ಓ.ಟಿ.ಸಿ. ರಸ್ತೆಯ ಹೆಸರಿನ ಮೂಲವನ್ನು ೧೭ನೆಯ ಶತಮಾನದ ಅಂತ್ಯದ ವೇಳೆಯಿಂದಲೇ ಗುರುತಿಸಲು ಅವಕಾಶವಿದೆ. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಈ ಮಾರ್ಗದುದ್ದಕ್ಕೂ ಹೊಂದಿಕೊಂಡಂತೆ ಇದ್ದ ಹತ್ತು ವೀರಶೈವ ಮಠಗಳಲ್ಲಿ[3] ಕರಿಸಿದ್ಧೇಶ್ವರ ಮಠವೂ ಒಂದು. ಬೆಂಗಳೂರಿನಲ್ಲೇ ಪ್ರಾಚೀನವೆನ್ನಬಹುದಾದ ಮಠಗಳಲ್ಲೊಂದಾದ ಕರಿಸಿದ್ಧೇಶ್ವರ ಮಠವು ಈಗಿನ ಅವಿನ್ಯೂ ರಸ್ತೆಯಲ್ಲಿರುವ ದೊಡ್ಡಪೇಟೆ ಚೌಕದ ಪಶ್ಚಿಮ ಬದಿಗೆ ದಿವಾನ್‌ಖಾನೆ ಗಲ್ಲಿಯಲ್ಲಿದೆ. ಪ್ರಾಚೀನವೆನ್ನಬಹುದಾದ ತನ್ನೆಲ್ಲಾ ಅವಶೇಷಗಳನ್ನು ಸಂಪೂರ್ಣವಾಗಿ ಕಳೆದುಕೊಂಡಿರುವ ಈ ಮಠ ಇಂದು ಅಂಗಡಿ ಮುಂಗಟ್ಟುಗಳಿಂದೊಡಗೂಡಿದ ಖಾಸಗಿ ಸ್ವತ್ತಾಗಿ ಪರಿಣಮಿಸಿದೆ.

ಮುಜರಾಯಿ ಇಲಾಖಾ ದಾಖಲೆಗಳಲ್ಲಿ ಕರಿಸಿದ್ಧೇಶ್ವರ ಮಠವನ್ನು 'ಕರಿಸಿದ್ಧ ಒಡೆಯರ ಮಠ', 'ಕರಿಸಿದ್ಧಪ್ಪನವರಮಠ', 'ಕರಿಸಿದ್ಧ ದೇವರಮಠ' ಎಂದು ಬೇರೆ ಬೇರೆ ಹೆಸರುಗಳಿಂದಲೂ ಗುರುತಿಸಲಾಗಿದೆ.[4] ಕೆಲವು ಕೋರ್ಟ್ ದಾಖಲೆಗಳಲ್ಲಿ ವ್ಯಕ್ತವಾಗಿರುವಂತೆ ಕ್ರಿ.ಶ. ೧೬೮೭ರ ವೇಳೆಗಾಗಲೇ ಕರಿಸಿದ್ಧೇಶ್ವರ ಮಠವು ಮೈಸೂರು ದೊರೆಗಳಿಗೆ ತಾಲ್ಲೂಕು ಕಛೇರಿಯನ್ನು ನಿರ್ಮಿಸಿಕೊಳ್ಳಲು ಸ್ಥಳಾವಕಾಶ ನೀಡುವಷ್ಟು ವಿಶಾಲವಾಗಿತ್ತು[5] ಎಂದಾಗ, ಈ ಮಠವು ೧೭ನೆಯ ಶತಮಾನದ ಆರಂಭದ ವೇಳೆಗಾಗಲೇ ಅಸ್ತಿತ್ವದಲ್ಲಿದ್ದಿರಬೇಕೆಂದು ಊಹಿಸಲವಕಾಶವಿದೆ. ಈ ಹಿನ್ನೆಲೆಯಲ್ಲಿ ಇಮ್ಮಡಿ ಕೆಂಪೇಗೌಡನ ಕಾಲ (ಕ್ರಿ.ಶ. ೧೫೫೭-೧೬೫೬)ದಲ್ಲೇ ಕರಿಸಿದ್ಧೇಶ್ವರ ಮಠವು ಪ್ರಾರಂಭವಾಗಿದ್ದಿರಬೇಕು

ಎನ್ನಲವಕಾಶವಿದ್ದರೂ ಖಚಿತವಾದ ದಾಖಲೆಗಳ ಕೊರತೆ ಇದ್ದೇ ಇದೆ.

ಮೈಸೂರು ದೊರೆಗಳ ಕಾಲದಲ್ಲಿ ಈ ಮಠಕ್ಕೆ ಸಾಕಷ್ಟು ದಾನ ಧರ್ಮಗಳು ದೊರಕಿರುವುದಕ್ಕೆ ಅನೇಕ ದಾಖಲೆಗಳು ಸಾಕ್ಷಿಯಾಗಿವೆ. ಅದರಲ್ಲಿ ಒಂದು ಕ್ರಿ.ಶ. ೧೮೪೦ರ ಭೂದಾನ ಸನ್ನದು ಲಭ್ಯವಾಗಿದ್ದು ಅದರ ಮುಖ್ಯಾಂಶಗಳನ್ನು ಈ ಕೆಳಗೆ ಕೊಡಲಾಗಿದೆ. ''...ಸ್ವಸ್ತಿಶ್ರೀ ವಿಜಯಾಭ್ಯುದಯ ಶಾ.ಶ. ೧೭೬೩ನೆಯ ಶಾರ್ವರಿ ಸಂವತ್ಸರದ ಶ್ರಾವಣ ಶುದ್ಧ ೧೫ರಲ್ಲೂ, ಶ್ರೀಮದ್ರಾಜಾದಿರಾಜ....ಮೈಸೂರು ದೊರೆಗಳ ಶಾಖಾನುವರ್ತಿಗಳಾದ ಚನ್ನಪಟ್ಟಣದ ತಿಮ್ಮಪ್ಪರಾಜಯ್ಯ ಅರಸಿನವರ ಪೌತ್ರ ಕೃಷ್ಣರಾಜಯ್ಯ ಅರಸಿನವರ ಪುತ್ರ ತಿಮ್ಮಪ್ಪರಾಜಯ್ಯ ಅರಸಿನವರು ಬೆಂಗಳೂರು ದೊಡ್ಡಪೇಟೆಯ ಕರಿಸಿದ್ಧೇಶ್ವರ ಮಠದ 'ಶ್ರೀ ಸಂಪಾದನೆ ಗುರುಪಾದಯ್ಯ, ನವರಿಗೆ ಬರೆದುಕೊಟ್ಟ ಭೂದಾನ ಸನ್ನದು.... ನಮಗೆ ಸರ್ವಮಾನ್ಯವಾಗಿ ನಡೆದು ಬಂದಿರುವ ಕ್ಲೋಸ್‌ಪೇಟೆ (ರಾಮನಗರ) ತಾಲ್ಲೂಕು ಕಗ್ಗಲಿಪುರದ[6] ಊರ ಮುಂದೆ... ಇರುವ ಖುಷ್ಕಿ ಭೂಮಿ ಬೀಜವರಿ ನಾಲ್ಕುಕೊಳಗದ ಒಂದು ಬಳ್ಳದ ಒಂದೂಕಾಲು ಪಡಿಯಷ್ಟು ವಿಸ್ತೀರ್ಣದ ಭಾಗವನ್ನು ಲಿಂಗಮುದ್ರೆ ಮಾಡಿಸಿ ಈಶ್ವರಾರ್ಪಣವಾಗಿ ಒಪ್ಪಿಸಲಾದ್ದು....[7]''. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಕ್ರಿ.ಶ. ೧೮೪೦ರ ವೇಳೆಗೆ ಶ್ರೀ ಸಂಪಾದನೆ ಗುರುಪಾದಯ್ಯನವರು ಕರಿಸಿದ್ಧೇಶ್ವರ ಮಠದ ಅಧಿಪತಿಗಳಾಗಿದ್ದುದು. ಇಲ್ಲಿ ಇವರ ಹೆಸರಿನ ಮುಂದೆ 'ಸಂಪಾದನೆ' ಎಂಬ ವಿಶೇಷಣ ವಿರುವುದರಿಂದ ಈ ಮಠವು 'ವಿರಕ್ತ ಪರಂಪರೆಯಲ್ಲಿ ಸಂಪಾದನೆ ಸಮಯಕ್ಕೆ ಸೇರಿದ ಮಠವೆ ಎಂದು' ಸ್ಪಷ್ಟವಾಗುತ್ತದೆ. ಸನ್ನದಿನ ಮೇಲ್ಭಾಗದಲ್ಲಿ ರಾಜಮುದ್ರೆಯ ಜೊತೆಗೆ 'ಶ್ರೀಕೃಷ್ಣರಾಜ ಒಡೆಯರೈಯ್ಯನವರು' ಎಂದೂ; ಕೆಳಗೆ ಶ್ರೀರಾಮ ಎಂಬ ರುಜುವೂ ಇರುವುದರಿಂದ ಇದು ಮುಮ್ಮಡಿ ಕೃಷ್ಣರಾಜ ಒಡೆಯರ ಕೃಪೆಯಿಂದ ಪ್ರಾಪ್ತವಾದುದೆಂದು ತಿಳಿದು ಬರುತ್ತದೆ.

'ಮುಂದೆ ೧೮೮೮ರ ಫೆಬ್ರವರಿ ೧೩ ರಂದು ಕಗ್ಗಲಿಪುರದ ಸದರಿ ಆಸ್ತಿ ಹಾಗೂ ಅದರೊಳಗಿನ ಮಠವನ್ನೂಸಹ, ಇದೇ ಕರಿಸಿದ್ಧೇಶ್ವರ ಮಠದ ಆಗಿನ ಗುರುಗಳಾಗಿದ್ದ ಸಿದ್ಧಲಿಂಗದೇವರು, ಅರಳೆಪೇಟೆಯ ನರಗುಂದದೇವರ ಮಠದಲ್ಲಿ ವಾಸವಾಗಿದ್ದ ಗುರುಶಾಂತಯ್ಯನವರ ಕೊಮಾರ ಶಿವಯ್ಯನವರಿಗೆ ಕರಾರು ಮೂಲಕ ಒಪ್ಪಿಸಿಕೊಟ್ಟಿದ್ದರು. ಆ ಕರಾರಿನ ಪ್ರಕಾರ ಸದರಿ ಮಠ ಮತ್ತು ಅದರ ಆಸ್ತಿ-ಪಾಸ್ತಿಗಳನ್ನು ಕಾಲಕಾಲಕ್ಕೆ ದುರಸ್ತು, ಆಬಾದು ಮಾಡಿಕೊಂಡು ಬಂದಂತಾ ಭಕ್ತರಿಗೆ ವಿಭೂತಿ ಅನ್ನೋದಕಗಳನ್ನು ಕೊಟ್ಟುಕೊಂಡು ಇರುವುಂತೆ ಸೂಚಿಸಲಾಗಿತ್ತು.[8]

೧೯೦೨ರ ಮುಜರಾಯಿ ಇಲಾಖಾ ದಾಖಲೆಗಳಲ್ಲೂ ಕೂಡ ಬೆಂಗಳೂರು ತಾಲ್ಲೂಕು ಬೇಗೂರು ಹೋಬಳಿ ಗೊಟ್ಟಿಗೆರೆ ಗ್ರಾಮದ ಸರ್ವೆ ನಂ : ೫ರಲ್ಲಿ ೩ ಎಕರೆ ೩೨ ಗುಂಟೆ ಖುಷ್ಕಿ ಭೂಮಿಯೂ; ಸರ್ವೆ ನಂ : ೩೫ರಲ್ಲಿ ೧೭ ಗುಂಟೆ ತರಿ ಭೂಮಿಯೂ; ಇದೇ ತಾಲ್ಲೂಕು ವರ್ತೂರು ಹೋಬಳಿ ಗುಂಜೂರು ಗ್ರಾಮದ ಸರ್ವೆ ನಂ: ೨೭೭ರಲ್ಲಿ, ೬ ಎಕರೆ ೧೦ ಗುಂಟೆ ಖುಷ್ಕಿ ಭೂಮಿಗಳು ಕರಿಸಿದ್ಧೇಶ್ವರ ಮಠದ ಹೆಸರಿಗಿದ್ದುದಾಗಿ ಖಚಿತವಾಗಿದೆ.[9] ಇದರ ಜೊತೆಗೆ ಈ ಬೆಂಗಳೂರಿಗೇ ಸೇರ್ಪಟ್ಟಿರುವ ಬ್ಯಾಟರಾಯನಪುರ ಮತ್ತು ಯಶವಂತಪುರಗಳ ಬಳಿಯಲ್ಲೂ ಕೆಲವು ಜಮೀನುಗಳು ಈ ಮಠದ ಹೆಸರಿನಲ್ಲಿದ್ದುದಾಗಿ ಇಲಾಖಾ ದಾಖಲೆಗಳಲ್ಲಿ[10] ವ್ಯಕ್ತವಾಗಿದೆ.

೧೮೯೨ ರಿಂದ ೧೯೩೩ ರವರೆಗೆ ಈ ಮಠದ ಅಧಿಪತಿಗಳಾಗಿದ್ದವರು ಸಿದ್ಧವೀರಸ್ವಾಮಿಗಳು. ಸದಾ ಅನಾರೋಗ್ಯದ ಪ್ರಕೃತಿಯವರಾಗಿದ್ದ ಇವರ ಕಾಲದಲ್ಲಿ ಮಠವು ಹಿಂದಿನ ತನ್ನ ವರ್ಚಸ್ವಿ ಪರಂಪರೆಯನ್ನು ಕಳೆದುಕೊಳ್ಳತೊಡಗಿತ್ತು. ಭಕ್ತರ ಸಹಕಾರದೊಂದಿಗೆ ಇದನ್ನೆಲ್ಲಾ ಗ್ರಹಿಸಿದ್ದ ಚಿತ್ರದುರ್ಗದ ಜಯದೇವ ಜಗದ್ಗುರುಗಳು ೧೯೦೮ರಲ್ಲಿ ತಮ್ಮ ಶಾಖೆಯಾಗಿದ್ದ ಧಾರವಾಡ ಜಿಲ್ಲಾ ಬ್ಯಾಡಗಿ ಮಠದ ಚನ್ನಬಸವದೇವರನ್ನು ಸಿದ್ಧವೀರಸ್ವಾಮಿಗಳ ಉತ್ತರಾಧಿಕಾರಿಗಳನ್ನಾಗಿ ನೇಮಿಸಿದ್ದರು.[11] ಮರುವರ್ಷವೇ ಹೆಚ್ಚಿನ ಧಾರ್ಮಿಕ ಅಧ್ಯಯನಕ್ಕೆಂದು ಬೆಳಗಾವಿಯ ಅಥಣಿಗೆ ಹೋದ ಚನ್ನಬಸವದೇವರು ಮತ್ತೆ ಬರಲೇ ಇಲ್ಲ. ಇದೇ ವೇಳೆಗೆ ಸಿದ್ಧವೀರಸ್ವಾಮಿಗಳ ಅಣ್ಣನ ಮಗ ಸಿದ್ಧಾಂತಿ ಗುರುಬಸವಶಾಸ್ತ್ರಿಯು ಕರಿಸಿದ್ಧೇಶ್ವರ ಮಠದಲ್ಲೆ

ಉಳಿದುಕೊಂಡಿದ್ದು ದಿನೇ ದಿನೆ ಮಠದ ಸಮಗ್ರ ವ್ಯವಹಾರಗಳನ್ನು ತಮ್ಮ ನಿಯಂತ್ರಣಕ್ಕೆ ಒಳಪಡಿಸಿಕೊಂಡಿದ್ದರು. ಮುಂದೆ ಸಿದ್ಧವೀರಸ್ವಾಮಿಗಳು ಶಯನಾವಸ್ಥೆಯಲ್ಲಿದ್ದಾಗ ದಿನಾಂಕ : ೧೮.೧೧.೧೯೨೯ರಲ್ಲಿ ತಮ್ಮ ಮುಂದಿನ ಮಠಾಧಿಪತ್ಯಕ್ಕೆ ಸಂಬಂಧಿಸಿದಂತೆ ಕರಾರೊಂದನ್ನು ಬರೆಸಿದ್ದರು.[12] ಈ ಕರಾರಿನ ಪ್ರಕಾರ ಸದರಿ ಸಿದ್ಧಾಂತಿ ಗುರುಬಸವಶಾಸ್ತ್ರಿಗಳ ಮಗ ಆರು ವರ್ಷದ ಶಾಂತವೀರ ಒಡೆಯನನ್ನು ಮುಂದಿನ ಉತ್ತರಾಧಿಕಾರಿಯನ್ನಾಗಿ ಚುನಾಯಿಸಲಾಗಿತ್ತು. ಮೈನರ್ ಗಾರ್ಡಿಯನ್ ಆಗಿ ಶಾಸ್ತ್ರಿಗಳೇ ಇರುವಂತೆ ಸೂಚಿಸಲಾಗಿತ್ತು. ನಂತರ ದಿನಾಂಕ:೨೬.೧೨.೧೯೩೩ ರಂದು ಸಿದ್ಧವೀರಸ್ವಾಮಿಗಳು ಶಿವಾಧೀನರಾದರು.[13] ಇದೇ ಸಂದರ್ಭಕ್ಕೆ ಬ್ಯಾಡಗಿ ಚನ್ನಬಸವ ಸ್ವಾಮಿಗಳು ಇಪ್ಪತ್ತು ವರ್ಷಗಳ ನಂತರ ಮಠಕ್ಕೆ ಪ್ರವೇಶ ಮಾಡಿ, ತಾವೇ ನಿಜವಾದ ಉತ್ತರಾಧಿಕಾರಿಗಳೆಂದು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದರು.[14] ಈ ವ್ಯಾಜ್ಯವು ಉಭಯತರಿಗೂ ಪ್ರತಿಷ್ಠೆಯ ಪ್ರಶ್ನೆಯಾಗಿ ಮಠದ ಭಕ್ತ ವರ್ಗವು ಇಬ್ಭಾಗವಾಯಿತು. ಕೊನೆಗೆ ದಿನಾಂಕ : ೮.೧೨.೧೯೩೭ರಲ್ಲಿ ಸರ್ಕಾರವು ಒಂದು ಆದೇಶವನ್ನು ಹೊರಡಿಸಿ ಶಾಂತವೀರ ಒಡೆಯರೆ ಕರಿಸಿದ್ಧೇಶ್ವರ ಮಠದ ನಿಜವಾದ ಮಠಾಧಿಪತಿಯೆಂದು ಸಾರಿತು.[15]

ಮುಂದೆ ೧೯೪೪ರಲ್ಲಿ ಮಠದ ಭಕ್ತರೆಲ್ಲಾ ಸೇರಿ, ಸಿದ್ಧಾಂತಿ ಗುರುಬಸವಶಾಸ್ತ್ರಿಯು ಪ್ರಾಪ್ತವಯಸ್ಕರಾಗಿರುವ ಶಾಂತವೀರ ಒಡೆಯರಿಗೆ ಯೋಗ್ಯ ಶಿಕ್ಷಣವನ್ನೂ ನೀಡದೆ, ಅಧಿಕಾರವನ್ನೂ ವಹಿಸಿಕೊಡದೆ ಮಠದ ಆಸ್ತಿ-ಪಾಸ್ತಿಗಳನ್ನೆಲ್ಲಾ ತನ್ನ ಸ್ವಂತ ಆಸ್ತಿಯಂತೆ ವ್ಯವಹರಿಸುತ್ತಿರುವುದಾಗಿ ಸರ್ಕಾರದಲ್ಲಿ ದೂರಿತ್ತರು. ಈ ದೂರಿನನ್ವಯ ಮುಜರಾಯಿ ಇಲಾಖೆಯು ದಿನಾಂಕ : ೨೯.೬.೧೯೪೫ ರಂದು ಒಂದು ಆದೇಶ ನೀಡಿ ಶೀಘ್ರವಾಗಿ ಸದರಿ ಸ್ವಾಮಿಗೆ ಅಧಿಕಾರ ವಹಿಸಿಕೊಡಬೇಕೆಂದು ಸೂಚಿಸಿತ್ತು.[16] ಇಲಾಖೆಯ ಆದೇಶದಂತೆ ಮಠಾಧಿಪತ್ಯ ವಹಿಸಿಕೊಂಡಿದ್ದ ಶಾಂತವೀರ ಒಡೆಯರು ಅತ್ತ ಕೆಲವೇ ದಿನಗಳಲ್ಲಿ ಕಣ್ಮರೆಯಾದವರು ಮತ್ತೆ ಕಾಣಿಸಿಕೊಳ್ಳಲೇ ಇಲ್ಲ. ಇಷ್ಟಾದಾಗ್ಯೂ ಒಳ್ಳೆಯ ವಿದ್ಯಾವಂತರೂ ವ್ಯವಹಾರ ಚತುರರೂ ಆಗಿದ್ದ ಸಿದ್ಧಾಂತಿ ಗುರುಬಸವ ಶಾಸ್ತ್ರಿಗಳು ದುರ್ಗದ ಜಗದ್ಗುರುಗಳ ವಿರೋಧವನ್ನು ಎದುರಿಸಿದ್ದಲ್ಲದೆ[17] ಸ್ಥಳೀಯ ಭಕ್ತರನ್ನೂ ಬದಿಗಿರಿಸಿ ಮಠವನ್ನು ತಮ್ಮ ಸ್ವಯಂ ಆಧಿಪತ್ಯದಲ್ಲೇ ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದರು.[18] ಈಗಲೂ ಕೂಡ ಕರಿಸಿದ್ಧೇಶ್ವರ ಮಠದ ಅಳಿದುಳಿದಿರುವ ಆಸ್ತಿಗಳನ್ನು ಇವರ ವಂಶಸ್ಥರೇ ಅನುಭವಿಸುತ್ತಿದ್ದಾರೆ.

**ಕರಿಸಿದ್ಧೇಶ್ವರ ಮಠದ ಗುರು ಪರಂಪರೆ:**

೧. ಸಂಪಾದನೆ ಗುರುಪಾದಯ್ಯನವರು. ಕ್ರಿ.ಶ.ಸು. ೧೮೩೦-೧೮೬೦.

೨. ಸಿದ್ಧಲಿಂಗದೇವರು. ಕ್ರಿ.ಶ. ೧೮೬೦-೧೮೯೨.

೩. ಸಿದ್ಧವೀರಸ್ವಾಮಿಗಳು (ಒಡೆಯರು). ೧೮೯೨-೧೯೩೩.

೪. ಶಾಂತವೀರ ಒಡೆಯರು. ೧೯೩೩.

---

**ಅಡಿಟಿಪ್ಪಣಿಗಳು**

1. Old Taluk Chacheri Road (ಹಳೆ ತಾಲ್ಲೂಕು ಕಚೇರಿ ರಸ್ತೆ.)
2. Judgement Order No : 28-55/1911-12. dt: 15.12.1911. Revenue Commissioner Court. Bangalore. P. 92.
3. ಓ.ಟಿ.ಸಿ. ರಸ್ತೆಯಲ್ಲಿದ್ದ ಹತ್ತು ಮಠಗಳು ಯಾವುವೆಂದರೆ-ಕರಿಸಿದ್ಧೇಶ್ವರಮಠ, ಬಸವಲಿಂಗ ಶಾಸ್ತ್ರಿ ಮಠ, ಫಲಹಾರ ಸ್ವಾಮಿ ಮಠ, ಮಹಂತರ ಮಠ, ಬಳೆಮಠ, ಮುತ್ತಿನಕಂತೆಮಠ, ದೇಶದಮಠ, ಚಿಣಿಮಿಣಿ ದೇವರ ಮಠ, ಹೊಸಮಠ, ಚೌಕಿಮಠ.
4. Muzrai File No : 303/1932. Sl.No : 1-12. P. 2, 6, 34.
5. Judgement Order No : 28-55/1911-12. dt: 15.12.1911. Revenue Commissioner Court. Bangalore. P. 92
6. ಕನಕಪುರ ರಸ್ತೆಯಲ್ಲಿರುವ ಈಗಿನ ಕಗ್ಗಲಿಪುರ ಗ್ರಾಮವು ಬೆಂಗಳೂರು ದಕ್ಷಿಣ ತಾಲ್ಲೂಕಿಗೆ ಸೇರಿದೆ.

7. ಸನ್ನದಿನ ಮೂಲ ಪ್ರತಿಯು ನರಗುಂದದೇವರ ಮಠದಲ್ಲಿದೆ. ಇದರ ನೆರಳಚ್ಚು ಪ್ರತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ.
8. ಒಂದು ರೂನ ಛಾಪಾಕಾಗದ. ಸಂ : ೫೭೨. ದಿ : ೧೩.೨.೧೮೮೮.
9. Register for Muzrai Institutions Endowed with Inam Lands in Bangalore Taluk. dt: 31.12.1902. P. 182-183.
10. Muzrai File No : 303/1932-33. Sl.No : 1-12. P. 59.
11. Muzrai File No : 84/1935-36. Sl.No : 1-9, P. 37
12. Muzrai File No : 84/1935-36. Sl.No : 1-9. P. 37, 38.
13. Ibid. 2 & 3.
14. Ibid.
15. Order No : 850-2. dt : 8th dece. 1937. (Muzrai File No : 84/1935-6. P. 46)
16. Order No : 761/1944-45. dt. 29, June-1947 (Muzrai File No : 150/1947. Sl. No : 1-2. P. 5)
17. ಕರಿಸಿದ್ಧೇಶ್ವರ ಮಠವು ಮುರಿಗಾ ಪರಂಪರೆಗೆ ಸೇರಿದ್ದಲ್ಲವೆಂದೂ ದುರ್ಗದವರಿಗೂ ಈ ಮಠಕ್ಕೂ ಸಂಬಂಧವಿಲ್ಲವೆಂದು ವಾದಿಸಿದ ಶಾಸ್ತ್ರಿಯ ತರ್ಕವು ನ್ಯಾಯಾಲಯದಲ್ಲಿ ಪುರಸ್ಕೃತಗೊಂಡಿತ್ತು. (Muzrai File No : 84/1935-36. Sl.No : 1-9. P. 45-46)
18. ಕರಿಸಿದ್ಧೇಶ್ವರ ಮಠದ ಸರ್ವಾಧಿಕಾರಿಗಳೆನಿಸಿದ್ದ ಸಿದ್ಧಾಂತಿ ಗುರುಬಸವ ಶಾಸ್ತ್ರಿಗಳ ಕಾಲದ ಬಹುತೇಕ ವ್ಯವಹಾರಗಳ ಬಗೆಗೆ ಹೆಚ್ಚಿನ ಮಾಹಿತಿಗಳನ್ನು ಒದಗಿಸಿದವರು ಹೊಳವನಹಳ್ಳಿ ಮಠದ ಸಿದ್ಧಲಿಂಗಸ್ವಾಮಿಗಳು (೯೨) ಕೊರಟಗೆರೆ ತಾಲ್ಲೂಕು. ತುಮಕೂರು ಜಿಲ್ಲೆ.

## ೨. ಕೊಳದಮಠ, ಅಣ್ಣೆಪುರ

ಹಿಂದೆ ಬೆಂಗಳೂರು ಪಟ್ಟಣದ ಹಳೆಯ ಕೋಟೆಯಿಂದ ಹೊರಭಾಗದಲ್ಲಿದ್ದ ಪ್ರಮುಖ ವೀರಶೈವ ಮಠಗಳಲ್ಲಿ ಅಣ್ಣೆಪುರದ ಕೊಳದ ಮಠವೂ ಒಂದು. ಅಣ್ಣೆಪುರವು ಕೋಟೆಯ ದಕ್ಷಿಣಭಾಗಕ್ಕಿದ್ದ ಜಿಗಣಿ ಬಾಗಿಲಿನ ಮಾರ್ಗದಲ್ಲಿತ್ತು.[1] ಜಿಗಣಿ ಮಾರ್ಗದಿಂದ ಬರುತ್ತಿದ್ದ ವರ್ತಕರು, ರೈತರು ಮುಂತಾದ ಸಂಚಾರಿ ಜನರಿಗೆ, ಹಿಂದೆ ಕೊಳದಮಠದ ಮುಂಭಾಗದಲ್ಲಿದ್ದ ಕೊಳ ಹಾಗೂ ಪಕ್ಕದ ವಿಶ್ರಾಂತಿ ಮಂಟಪಗಳು ಆಶ್ರಿತ ತಾಣಗಳಾಗಿದ್ದವು. ಮಠದಲ್ಲಿ ವಿಭೂತಿ, ಅನ್ನೋದಕಗಳು ದೊರೆಯುತ್ತಿದ್ದವು. ಅಂದಿನ ಮಠಗಳು ಮಾರ್ಗಾಯಾಸದಿಂದ ಬಳಲಿ ಬಂದ ಭಕ್ತರಿಗೆ, ಉಚಿತ ಪೂಜೆ ಪ್ರಸಾದಗಳಿಗೆ ಸೂಕ್ತ ಏರ್ಪಾಟು ಮಾಡುತ್ತಿದ್ದುದು ಸಾಮಾನ್ಯವಾಗಿತ್ತು.

ಕೊಳದ ಮಠವನ್ನು ಮುಜರಾಯಿ ಇಲಾಖಾ ದಾಖಲೆಗಳಲ್ಲಿ ಹಾಗೂ ಮಠದ ಹಳೆಯ ದಾಖಲೆಗಳಲ್ಲಿ 'ಕೊಳದಮಠ', 'ಕೊಳಲಮಠ', 'ಕೊಂಡಲಮಠ', 'ಕೊಂಡಲುಮಠ', 'ಕೊಂಡ್ಲುಮಠ' ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ.[2] ಮೊದಲು ಈ ಮಠದ ಮುಂಭಾಗದಲ್ಲಿ ವಿಶೇಷ ಶಿಲ್ಪಾಲಂಕಾರಗಳಿಂದ ನಿರ್ಮಾಣವಾಗಿದ್ದ ಸುಂದರವಾದ ಹಾಗೂ ವಿಶಾಲವಾಗಿದ್ದ ಕೊಳವೊಂದಿತ್ತು.[3] ಆದ್ದರಿಂದಲೇ ಈ ಮಠಕ್ಕೆ 'ಕೊಳದಮಠ'ವೆಂದು ಹೆಸರು ಬಂದಿತೆಂದು ಈಗಲೂ ಹಳೆಯ ತಲೆಮಾರಿನ ಜನರು ಹೇಳುತ್ತಾರೆ. ಈ 'ಕೊಳದ' ಪದದ ವ್ಯತ್ಯಸ್ತರೂಪದ ಬಳಕೆಯೇ 'ಕೊಳಲ' ಆಗಿರುವ ಸಾಧ್ಯತೆಯುಂಟು. ಇನ್ನು 'ಕೊಂಡಲ' ಎಂಬ ಪದವನ್ನು ವಿಚಾರ ಮಾಡಿದಾಗ ಸಂಸ್ಕೃತದ 'ಕುಂಡ' ಎಂಬ ಪದವೇ ಕನ್ನಡ ಮತ್ತು ತೆಲುಗಿನಲ್ಲಿ 'ಕೊಂಡ'ವಾಗಿದೆ. ಉಭಯ ಭಾಷೆಗಳಲ್ಲೂ 'ಕೊಂಡ' ಎಂದರೆ ಬೆಟ್ಟ; ನೀರು ನಿಲ್ಲುವ ಹೊಂಡ ಅಥವಾ ಕೊಳ ಎಂಬ ಬೇರೆ ಬೇರೆ ಅರ್ಥಗಳೇ ಇವೆ.[4] ಈ ಹಿನ್ನೆಲೆಯಲ್ಲಿ ಲಾಲ್‌ಬಾಗಿನ ಒಳಗಿರುವ ಪುಟ್ಟ ಬೆಟ್ಟದ ಉತ್ತರದ ತಡಿಗೆ, ಈ ಮಠವಿದ್ದು ಮಠದ ಮುಂಭಾಗದಲ್ಲೂ ಒಂದು ಕೊಳವಿದ್ದುದರಿಂದ 'ಕೊಳದಮಠ' ಅಥವಾ 'ಕೊಂಡಲ ಮಠ' ಎಂಬ ಹೆಸರುಗಳು ರೂಢಿಗೆ ಬಂದಿರುವಂತಿದೆ.

ಕೊಳದಮಠದ ವಿಚಾರವಾಗಿ 'ಕೊಂಡ' ಎನ್ನುವ ಮಾತಿಗೆ ಒಂದು ವಿಶೇಷವಾದ ಐತಿಹ್ಯವಿದೆ. ಈ ಐತಿಹ್ಯದ ಪ್ರಕಾರ ''ಇಲ್ಲಿಗೆ ಸುಮಾರು ಮುನ್ನೂರು ವರ್ಷಗಳ ಹಿಂದೆ ಬೆಂಗಳೂರು ಪಟ್ಟಣದಲ್ಲಿ ಪ್ರಸಿದ್ಧವಾಗಿದ್ದ ಮೂರು ಪೇಟೆಗಳೇ ದೊಡ್ಡಪೇಟೆ, ಮಾಮೂಲುಪೇಟೆ ಹಾಗೂ ಅರಳೆಪೇಟೆಗಳು. ಈ ಪೇಟೆಗಳ ಯಜಮಾನರುಗಳಾಗಿ ಅನುಕ್ರಮವಾಗಿ ತಿಪ್ಪಶೆಟ್ಟಿ, ಕೊಂಡಶೆಟ್ಟಿ ಹಾಗೂ ಗಂಗಶೆಟ್ಟಿ ಎಂಬ ಧನಿಕ ವೀರಶೈವ ವರ್ತಕರುಗಳಿದ್ದರು. ಧರ್ಮಾಭಿಮಾನಿಗಳಾಗಿದ್ದ ಇವರು ಸರ್ವಜನೋಪಯುಕ್ತವಾಗಲೆಂದು ಪಟ್ಟಣದ ಹೊರಭಾಗದಲ್ಲಿ ತಮ್ಮ ತಮ್ಮ ಹೆಸರಿನಲ್ಲಿ ಒಂದೊಂದು ಮಠಗಳನ್ನು ನಿರ್ಮಾಣ ಮಾಡಿಸಿದ್ದರು. ಅವುಗಳೇ ಅನುಕ್ರಮವಾಗಿ 'ಹನುಮಂತಪುರದ ತಿಪ್ಪಶೆಟ್ಟಿಮಠ', 'ಅಣ್ಣೆಪುರದ ಕೊಂಡಶೆಟ್ಟಿಮಠ' ಹಾಗೂ 'ಕೆಂಪಾಪುರದ ಗಂಗಶೆಟ್ಟಿಮಠ'ಗಳಾಗಿವೆ.[5] ಈ ಕೊಂಡಶೆಟ್ಟರ ಮಠವನ್ನೇ ಮುಂದೆ ಕಾಲಾನುಕ್ರಮದಲ್ಲಿ 'ಕೊಂಡಲಮಠ' ವೆಂದು ಕರೆಯುವುದು ರೂಢಿಗತವಾಗಿ ಬಂದಿತೆಂದು ಹೇಳುವುದುಂಟು.''[6]

ಮಠದ ಪ್ರಾಚೀನತೆಯನ್ನು ಕುರಿತಂತೆ ಈಗಿನ ಮಠಾಧೀಶರಾಗಿರುವ ಇಮ್ಮಡಿ ಶಾಂತವೀರಸ್ವಾಮಿಗಳು ಒಂದು ಸಾವಿರ ವರ್ಷಗಳಷ್ಟು ಪ್ರಾಚೀನವಾದ ಇತಿಹಾಸವುಳ್ಳ ಮಠವಿದೆಂದು ಹೇಳುತ್ತಾರೆ. ಅವರೇ ಸೂಚಿಸುವಂತೆ ಕೊಳದಮಠವೇ ಸಂಪಾದನೆಸಮಯದ ಮೂಲಮಠವೂ ಕೂಡ.[7] ಅಂದ ಹಾಗೆ ಸಮಯ ಭೇದಗಳು ಹುಟ್ಟಿಕೊಂಡುದೇ ೧೮ನೆಯ ಶತಮಾನದ ಆದಿಭಾಗದಲ್ಲಿ[8] ಎಂದಾಗ, ಸಾವಿರ ವರ್ಷಗಳ ಇತಿಹಾಸದ ಬಗೆಗೆ ಇನ್ನೂ ಗಂಭೀರವಾದ ಪರಿಶೀಲನೆಗಳು ನಡೆಯಬೇಕಾಗಿದೆ. ಸದ್ಯಕ್ಕೆ ಲಭ್ಯವಾಗಿರುವ ಮಾಹಿತಿಗಳ ಪ್ರಕಾರ ಕೊಳದ ಮಠವು ಮುಜರಾಯಿ ಇಲಾಖೆಗೆ ಒಳಪಟ್ಟ ಮಠವಾಗಿದೆ. ಇಲಾಖಾ ದಾಖಲೆಗಳ ಪ್ರಕಾರ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆ (೧೮೦೦-೧೮೩೧)ಯಲ್ಲಿ ಬೆಂಗಳೂರು ತಾಲ್ಲೂಕು, ಅಗರ ಹೋಬಳಿ ಅಣ್ಣೆಪುರ ಗ್ರಾಮದಲ್ಲಿ ೧೬ ಕೊಳಗ ೯ ೧/೨ ಪಡಿಯಷ್ಟು ಬೀಜವರಿ ವಿಸ್ತೀರ್ಣದ ಜಮೀನನ್ನು ಮಠಕ್ಕೆ ಇನಾಮಾಗಿ ನೀಡಲಾಗಿತ್ತು.[9] ಅಂದರೆ ೧೮೦೦ಕ್ಕೂ ಮುಂಚಿನಿಂದಲೇ ಈ ಮಠವಿದ್ದುದು ಖಚಿತ

ವಾದಂತಾಗಿದೆ. ಜೊತೆಗೆ ಮಠದ ಕೇಂದ್ರ ಬಿಂದುವಿನಂತಿರುವ ಜಲಕಂಠೇಶ್ವರಸ್ವಾಮಿ[10] ದೇಗುಲದ ಮಾದರಿಯ ಗದ್ದುಗೆಯನ್ನು ನೋಡಿದರೆ, ಮತ್ತು ಅದರೊಳಗಿನ ಅಂದವಾದ ಮುದ್ರಿಕೆಗಳುಳ್ಳ ಸ್ಥೂಲ ಕಂಭಗಳು, ಗರ್ಭ ಗುಡಿಯ ಮುಂಭಾಗದಲ್ಲಿ ಅಲಂಕೃತವಾದ ಬಾಗಿಲುವಾಡ ಇತ್ಯಾದಿಗಳನ್ನು ಗಮನಿಸಿದರೆ ಇವೆಲ್ಲಾ ಕೆಂಪೇಗೌಡರ ಕಾಲದ ಶಿಲ್ಪಕಲಾ ಮಾದರಿಗಳನ್ನೇ ಹೋಲುತ್ತವೆ. ಆದ್ದರಿಂದ ಈ ಮಠವು ಕನಿಷ್ಠ ಮುನ್ನೂರೈವತ್ತರಿಂದ ನಾನ್ನೂರು ವರ್ಷಗಳಷ್ಟು ಹಳೆಯದೆನ್ನಬಹುದಾಗಿದೆ. ಸದರಿಮಠವು ವಿರಕ್ತ ಪರಂಪರೆಯಲ್ಲಿ 'ಸಂಪಾದನೆ ಸಮಯ'ಕ್ಕೆ ಸೇರಿದ ಮಠವೆಂದು[11] ಮುಜರಾಯಿ ದಾಖಲೆಗಳು ಖಚಿತಪಡಿಸುತ್ತವೆ.[12]

ಮಠದ ಗುರುಪರಂಪರೆಗೆ ಬಂದಾಗ ನಮಗೆ ದೊರಕುವ ಅಧಿಕೃತ ಮಾಹಿತಿ 'ಕರಣಹಸಿಗೆ' ಎಂಬ ಗ್ರಂಥದಲ್ಲಿನ ವಿವರಗಳು. ಕೊಳದ ಮಠದ ಗುರುಗಳಾಗಿದ್ದ ಸಿದ್ಧಲಿಂಗದೇವರು ಎಂಬುವರು ಶಾಲಿವಾಹನ ಶಕ ೧೬೦೭ (ಕ್ರಿ.ಶ. ೧೬೮೫)ರ ಪಾರ್ಥಿವನಾಮ ಸಂವತ್ಸರದ ಜೇಷ್ಠ ಶುದ್ಧ ೧೦ರಲ್ಲಿ ಈ ಗ್ರಂಥವನ್ನು ಬರೆದು ಪೂರ್ಣ ಮಾಡಿದ್ದಾರೆ. ಇದರಲ್ಲಿ ಅವರೇ ಹೇಳಿಕೊಂಡಿರುವಂತೆ - 'ತಾವು ಶ್ರೀ ಸಂಸ್ಥಾನ ಕೊಳದ ಮಠದ ಅಧಿಕಾರಿಗಳಾಗಿದ್ದ ಶಿವಲಿಂಗ ದೇಶಿಕೇಂದ್ರರ ಕರಕಮಲಸಂಜಾತ' ಎಂಬ ಮಾತುಗಳಿವೆ.[13] ಇಲ್ಲಿ ೧೬೮೫ರಲ್ಲಿ ಗುರುಗಳಾಗಿದ್ದ ಸಿದ್ಧಲಿಂಗ ದೇವರಿಗಿಂತ ಮುಂಚಿತವಾಗಿ ಈ ಮಠದ ಗುರುಗಳಾಗಿದ್ದವರು ಶಿವಲಿಂಗ ದೇಶಿಕೇಂದ್ರರೆಂಬುದು ಸ್ಪಷ್ಟವಾಗಿದೆ. ಇಲ್ಲಿನ 'ಸಂಸ್ಥಾನ' ಎಂಬ ಮಾತಿಗೆ ಮೂಲನೆಲೆ; ಸಮೂಹಗಳ ಕೇಂದ್ರ ಎಂಬ ಅರ್ಥಗಳುಂಟು.[14] ಅಂದರೆ ಒಂದು ಮಠ ಮೂಲಕೇಂದ್ರವಾಗಿದ್ದುಕೊಂಡು ಅಂತಹ ಮಠ ಹಲವಾರು ಶಾಖಾ ಮಠಗಳ ರಚನೆಗೂ ಕಾರಣವಾಗಿರುತ್ತದೆ. ಈ ರೀತಿಯ ಮಠಗಳಿಗೆ ಮಾತ್ರ ಸಂಸ್ಥಾನದ ಮಠಗಳೆಂದು ಹೇಳುವುದುಂಟು.[15] ಹಿಂದೆ ಇಂಥ ಒಂದೊಂದು ಸಂಸ್ಥಾನ ಮಠಕ್ಕೂ ಕನಿಷ್ಠ ೭೩ ಶಾಖಾ ಮಠಗಳಿರುತ್ತಿದ್ದುದಾಗಿ ತಿಳಿದುಬರುತ್ತದೆ.[16] ಒಟ್ಟಾರೆ ಈಗ ದೊರಕಿರುವ ಮಾಹಿತಿಗಳ ಪ್ರಕಾರ ಕೊಳದ ಮಠವು ಒಂದು ಸಂಸ್ಥಾನ ಮಠವಾಗಿದ್ದುದಂತೂ ಖಚಿತವಾದಂತಾಗಿದೆ.

'ಕರಣಹಸಿಗೆ'ಯ ಕರ್ತೃಗಳಾದ ಸಿದ್ಧಲಿಂಗದೇವರ (೧೬೮೫) ಗುರುಗಳಾಗಿದ್ದ ಶಿವಲಿಂಗ ದೇಶಿಕೇಂದ್ರರ ಕಾಲ ಸುಮಾರು ೧೬೫೦ ರಿಂದ ೧೬೭೫ ಎಂದಿಟ್ಟುಕೊಳ್ಳ ಬಹುದು. ಮುಂದೆ ೧೯೨೫ರ ಮುಜರಾಯಿ ಇಲಾಖಾ ದಾಖಲೆಗಳಲ್ಲಿ ವೀರಭದ್ರದೇವರ ಗುರು ಹುಚ್ಚಪ್ಪದೇವರು, ಅವರ ಗುರುಗಳೇ ಬಸವಲಿಂಗದೇವರು ಎಂಬ ಮಾತುಗಳಿವೆ.[17] ಜೊತೆಗೆ ಹುಚ್ಚಪ್ಪದೇವರು ೧೯೧೧ರ ವೇಳೆಗೆ ವೀರಭದ್ರ ದೇವರನ್ನು ತಮ್ಮ ಮುಂದಿನ ಉತ್ತರಾಧಿಕಾರಿಯನ್ನಾಗಿ ಆಯ್ಕೆ ಮಾಡಿಕೊಂಡಿದ್ದಂತೆ ತಿಳಿದು ಬರುತ್ತದೆ.[18] ಈ ಹುಚ್ಚಪ್ಪ ದೇವರು ೧೯೧೮ರಲ್ಲಿ ಶಿವಾಧೀನರಾಗಿದ್ದಾರೆ. ಪ್ರಾಯಶಃ ಹುಚ್ಚಪ್ಪದೇವರು ೧೯೦೦ ಕ್ಕೂ ಮುಂಚಿತವಾಗಿಯೇ ಅಧಿಕಾರಕ್ಕೆ ಬಂದಿರುವಂತಿದೆ. ಈ ಹಿನ್ನೆಲೆಯಲ್ಲಿ ಸಿದ್ಧಲಿಂಗದೇವರ ನಂತರ ಬಸವಲಿಂಗದೇವರು ೧೮೯೦ರ ಸುಮಾರಿನಲ್ಲಿ ಇದ್ದಿರ ಬೇಕೆನಿಸುತ್ತದೆ.

ವೀರಭದ್ರದೇವರು ೧೯೨೪ರಲ್ಲಿ ಪಾರ್ಶ್ವವಾಯು ರೋಗ ಪೀಡಿತರಾದರು. ಮಠಾಧಿಪತ್ಯವನ್ನು ಮುನ್ನಡೆಸುವುದು ಕಷ್ಟವಾಗಿ ದಿನಾಂಕ : ೧೦.೩.೧೯೨೪ ರಲ್ಲಿ ಒಂದು ಇಚ್ಛಾಪತ್ರವನ್ನು ರಚಿಸಿದರು. ಅದರ ಪ್ರಕಾರ-ಶಾಂತವೀರ ಮರಿದೇವರು ತಮ್ಮ ಮುಂದಿನ ಮಠಾಧಿಪತಿಯಾಗಿಯೂ; ಯಜಮಾನ್ ಚಿಕ್ಕವೀರಪ್ಪನವರು ಮಠದ ಸಕಲ ವ್ಯವಹಾರಗಳಿಗೂ ಧರ್ಮಕರ್ತರಾಗಿಯೂ ಇರುವಂತೆ ಸೂಚಿಸಲಾಗಿತ್ತು.[19] ಮುಂದೆ ವೀರಭದ್ರದೇವರು ಅದೇ ರೋಗದಿಂದ ೧೯೨೭ರಲ್ಲಿ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು. ಇದುವರೆಗೂ ಮಠದ ಇನಾಂ ಜಮೀನುಗಳೆಲ್ಲಾ (೧೨ ಎಕರೆ ೩೦ ಗುಂಟೆ) ಸುರಕ್ಷಿತವಾಗಿ ಉಳಿದುಕೊಂಡಿದ್ದುದಾಗಿ ಮೇಲ್ಕಂಡ ಕರಾರು ಸೂಚಿಸುತ್ತದೆ.[20] ವೀರಭದ್ರದೇವರು ಶಿವಾಧೀನರಾದ ಕೆಲವೇ ದಿನಗಳಲ್ಲಿ ಮಠದ ಧರ್ಮಕರ್ತರಾಗಿದ್ದ ಯ॥ ಚಿಕ್ಕವೀರಪ್ಪನವರು ಶಾಂತವೀರ ಮರಿದೇವರ ಆಯ್ಕೆ ಸಮರ್ಪಕವಾದುದಲ್ಲವೆಂದೂ,ಅದೇ ಸಂದರ್ಭಕ್ಕೆ ಚನ್ನಮಲ್ಲಯ್ಯ ಎಂಬ ವಟುವನ್ನು ತಾವೇ ಆಯ್ಕೆ ಮಾಡಿಬಿಟ್ಟಿದ್ದರು.[21] ಆಗ ಮಠದ ಭಕ್ತರು ಯ॥ ನಂಜುಂಡಪ್ಪನವರ ನೇತೃತ್ವದಲ್ಲಿ ಈ ಅಕ್ರಮಗಳನ್ನೆಲ್ಲಾ ವಿರೋಧಿಸಿ ಸರ್ಕಾರಕ್ಕೆ ಮನವಿ ಸಲ್ಲಿಸಿದ್ದರು. ಹಗರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು, ದಿನಾಂಕ : ೨೮.೧೧.೧೯೩೩ರಲ್ಲಿ ಒಂದು ಆದೇಶವನ್ನು

ಹೊರಡಿಸಿ, ಸದರಿ ಶಾಂತವೀರಮರಿದೇವರೇ ಕೊಳದಮಠದ ನಿಜವಾದ ಮಠಾಧಿಪತಿಯಾಗಿ ಮುಂದುವರೆಯುವುದೆಂದು ಸಾರಿತು.[22] ನಂತರದ ಕೆಲವೇ ದಿನಗಳಲ್ಲಿ ಶಾಂತವೀರ ಮರಿದೇವರು ಅಕಾಲ ಮರಣಕ್ಕೆ ತುತ್ತಾದರು. ಮುಂದಿನ ಹದಿನೈದು ವರ್ಷಗಳ ಕಾಲ ಕೊಳದ ಮಠಕ್ಕೆ ಮಠಾಧೀಶರೇ ಇಲ್ಲದಂತಾಗಿತ್ತು. ಈ ಮಧ್ಯೆ ೧೯೪೫ರ ವೇಳೆಗೆ ಟಿ.ಜಿ. ಚನ್ನಬಸವಾರಾಧ್ಯ ಎಂಬುವವರು ಕೊಳದ ಮಠದ ಉಸ್ತುವಾರಿ ದಾರರಾಗಿದ್ದರು. ಇವರು ೧೯೪೯ರಲ್ಲಿ ತಮ್ಮ ಮಗನಾದ ೬ ವರ್ಷಗಳ ಶಾಂತವೀರಮರಿದೇವರು ಎಂಬ ಬಾಲಕನನ್ನು ಮಠದ ಮುಂದಿನ ಉತ್ತರಾಧಿಕಾರಿಯನ್ನಾಗಿ ಗೊತ್ತು ಪಡಿಸಿದ್ದರು.[23] ಮುಂದೆ ದಿನಾಂಕ : ೨೮.೪.೧೯೬೧ ರಲ್ಲಿ ಇವರಿಗೆ ಪಟ್ಟಾಧಿಕಾರವನ್ನು ವಿಧಿವತ್ತಾಗಿ ನೆರವೇರಿಸಲಾಯಿತು.[24] ಇವರೇ ಈಗಿನ ಕೊಳದ ಮಠದ ಮಠಾಧಿಪತಿಗಳಾಗಿರುವ ಇಮ್ಮಡಿ ಶಾಂತವೀರ ಸ್ವಾಮಿಗಳು.

ಕೊನೆಯದಾಗಿ ಕೊಳದಮಠವು ಒಂದು ''ಶ್ಮಶಾನದಮಠ'ವೆಂಬುದಾಗಿ ಸ್ಥಳೀಯ ಜನರ ಬಹುತೇಕ ನಂಬಿಕೆಯಾಗಿದೆ. ಕಳೆದ ಶತಮಾನದಲ್ಲಿ ಕೊಳದಮಠವೇ ಏಕೆ ಬೆಂಗಳೂರು ಪಟ್ಟಣದ ಒಳಗಿನ ಬಹುತೇಕ ಮಠಗಳ ಆವರಣಗಳೆಲ್ಲಾ ವೀರಶೈವರ ಶ್ಮಶಾನಕೇಂದ್ರಗಳೇ ಆಗಿದ್ದವು.[25] ಆಗ ಶಂಕರದೇವರಮಠ, ದೇಶದಮಠ, ನರಗುಂದದೇವರಮಠ, ದಿಗಂಬರ ಶೆಟ್ಟರಮಠ, ಬೇಲಿಮಠ ಇವೇ ಮುಂತಾದ ಮಠಗಳ ಆವರಣದೊಳಗೆ ವೀರಶೈವರ ಶವಸಂಸ್ಕಾರ ಮಾಡುವ ಪದ್ಧತಿ ರೂಢಿಯಲ್ಲಿತ್ತು.[26] ಮುಂದೆ ಸರ್ಕಾರ ೧೮೬೭-೬೮ನೇ ಸಾಲಿನಲ್ಲಿ ಬೆಂಗಳೂರು ಪಟ್ಟಣದ ಒಳಭಾಗದಲ್ಲಿದ್ದ ಎಲ್ಲಾ ಶ್ಮಶಾನಗಳನ್ನೂ ಮುಚ್ಚಿಸಿಬಿಟ್ಟಿತು.[27] ಅಲ್ಲಿಂದೀಚೆಗೆ ಸಹಜವಾಗಿಯೇ ಪಟ್ಟಣದಿಂದ ಹೊರಭಾಗದಲ್ಲಿದ್ದ ವೀರಶೈವರ ಮಠಗಳು ಅಂತ್ಯ ಸಂಸ್ಕಾರದ ಕೇಂದ್ರಗಳಾದವು. ಅದರಲ್ಲಿ ಕೊಳದ ಮಠವೂ ಒಂದು. ಇಲ್ಲಿ ಬೆಂಗಳೂರಿನ ಅನೇಕ ಪ್ರತಿಷ್ಠಿತ ವ್ಯಕ್ತಿಗಳ, ಮಹನೀಯರ ಹಾಗೂ ಅನೇಕ ಮಠಾಧಿಪತಿಗಳ ಸಮಾಧಿ (ಗದ್ದುಗೆ)ಗಳು[28] ಇಂದಿಗೂ ಉಳಿದು ಕೊಂಡಿರುವುದನ್ನು ನೋಡಬಹುದಾಗಿದೆ. ಮಠದ ಭಕ್ತರಾಗಿದ್ದ ಹಾಗೂ ಮಾಜಿ ಮಂತ್ರಿಗಳೂ ಆಗಿದ್ದ ಶ್ರೀ ಎಚ್. ಸಿದ್ಧಯ್ಯನವರ ಸಮಾಧಿಯೂ ಈ ಮಠದ ಆವರಣದ ಒಳಗೆ ಇದ್ದು, ಇವರ ಗೌರವಾರ್ಥವಾಗಿ ಕೊಳದ ಮಠದ ಮುಂಭಾಗದ ರಸ್ತೆಯನ್ನು ಹೆಚ್. ಸಿದ್ಧಯ್ಯ ರಸ್ತೆ ಎಂದು ನಾಮಕರಣ ಮಾಡಲಾಗಿತ್ತು.

**ಕೊಳದಮಠದ ಗುರು ಪರಂಪರೆ :**

೧. ಶಿವಲಿಂಗದೇಶಿಕೇಂದ್ರ ಸ್ವಾಮಿಗಳು. ಸು. ೧೮೫೦-೧೮೭೫.

೨. ಸಿದ್ಧಲಿಂಗದೇವರು. ಸು, ೧೮೭೬-೧೮೯೦.

೩. ಬಸವಲಿಂಗದೇವರು. ಸು, ೧೮೯೦-೧೮೯೫.

೪. ಹುಚ್ಚಪ್ಪದೇವರು. ೧೮೯೫-೧೯೧೮.

೫. ವೀರಭದ್ರದೇವರು. ೧೯೧೧-೧೯೨೭.

೬. ಶಾಂತವೀರಮರಿದೇವರು. ೧೯೨೪-೧೯೩೪.

೭. ಇಮ್ಮಡಿ ಶಾಂತವೀರದೇವರು. ೧೯೬೧ ರಿಂದಾ....

---

**ಅಡಿಟಿಪ್ಪಣಿಗಳು**

1. Muzrai File No : 215/1931. Sl.No: 1-2. P. 5.
2. Muzrai File No : 215/1931. and 191 of 1933. Cover Pages ಹಾಗೂ ಮಠಕ್ಕೂ ತಾಲ್ಲೂಕು ಕಛೇರಿಗೂ ನಡುವೆ ನಡೆದಿರುವ ಕೆಲವು ವ್ಯವಹಾರ ಪತ್ರಗಳು. (೧೯೨೦-೧೯೨೫).
3. ಹಿಂದೆ ಲಾಲ್‌ಭಾಗ್ ಒಳಗಿನ ಕೆರೆ (ಸಿದ್ಧಾಪುರದ ಕೆರೆ) ಸದಾ ತುಂಬಿ ಹರಿಯುತ್ತಿತ್ತು. ಹೀಗೆ ಕೆರೆಯಿಂದ ಬಂದ ನೀರು ದೊಡ್ಡ ಹಳ್ಳವಾಗಿ ಮಠದ ಮುಂಭಾಗದಲ್ಲಿ ಹರಿದು ಹೋಗುತ್ತಿತ್ತು. ಮಠದ ಪಕ್ಕದಲ್ಲಿ ಹಳ್ಳದ ತಿರುವು ಒಂದು ಆಳವಾದ ಕೊಣ(ಕೊಳ)ವಾಗಿ ಬಹಳ ದಿನಗಳವರೆಗೆ ಹಾಗೆಯೇ ಉಳಿದಿತ್ತು. ಆದ್ದರಿಂದಲೇ ಈ ಮಠಕ್ಕೆ ಕೊಳದಮಠವೆಂಬ ಹೆಸರು ಬಂದಿತು. ಮಠದ ಮುಂದೆ ಕಟ್ಟಿಸಲ್ಪಟ್ಟಿದ್ದ ಕಲ್ಯಾಣಿಯು ಅಂತಹ ವಿಶೇಷವಾದ್ದೇನಾಗಿರಲಿಲ್ಲವೆಂದು ಗೌರಮ್ಮ (೮೨ವರ್ಷ. ಮಠದ ಸೇವಕಿ) ಹೇಳುತ್ತಾರೆ.
4. ಕನ್ನಡ ನಿಘಂಟು. ಸಂ-೨. ಕನ್ನಡ ಸಾಹಿತ್ಯ ಪರಿಷತ್ತು. ಪು. ೨೧೫೩.
5. ಈ ಮೂರು ಮಠಗಳಲ್ಲಿ ಮೊದಲಿನ ಎರಡು ಮಠಗಳು ಇಂದಿಗೂ ಉಳಿದಿವೆ. ಆದರೆ ಕೆಂಪಾಪುರ (ಈಗಿನ ಮಾಗಡಿ ರಸ್ತೆಯ ಉತ್ತರಭಾಗದಲ್ಲಿ ಮಿನರ್ವ ಮಿಲ್ಲಿನ ಹಿಂಭಾಗ)ದಲ್ಲಿದ್ದ ಗಂಗಶೆಟ್ಟಿಮಠವು ಹೇಳ ಹೆಸರಿಲ್ಲದಂತಾಗಿದೆ.

6. ಈ ಐತಿಹ್ಯವನ್ನು ಹಿಂದೆ ಬೈಯಂಡಹಳ್ಳಿ ಜೋಡಿದಾರ್ ನಂಜಪ್ಪನವರು ಹೇಳುತ್ತಿದ್ದುದಾಗಿ ಅವರ ಹಿರಿಯ ಮಗ ಬಿ.ಎನ್. ಶಿವಣ್ಣ (ನಿವೃತ್ತ ಶಿಕ್ಷಕ. ೮೩ ವರ್ಷ. ಬೈಯಂಡಹಳ್ಳಿ ಗ್ರಾಮ. ಬೆಂಗಳೂರು ಉತ್ತರ ತಾಲ್ಲೂಕು) ನವರು ಈಗಲೂ ಹೇಳುತ್ತಾರೆ.
7. ಸಂಪಾದನೆಯ ಸಿದ್ಧವೀರಪ್ಪನವರು ಸಂಪಾದನಾ ಸಮಯದ ಮೂಲಕರ್ತರಾಗಿದ್ದು ಆಗಲವಾಡಿಯಲ್ಲಿ ಮೊದಲ ಮಠವನ್ನು ಮಾಡಿದಂತೆ ತಿಳಿದು ಬರುತ್ತದೆ. ಆಮೇಲೆ ಬೆಂಗಳೂರು, ವಂಟಮುರಿ ಮುಂತಾದೆಡೆ ಇವರ ಮಠಗಳಾದಂತಿವೆ. (ನಿರಂಜನ ವಂಶ ರತ್ನಾಕರ. ಭಾಗ-೨. ಸಂ : ಫ.ಗು. ಹಳಕಟ್ಟಿ. ಪು. ೧೩೫, ೧೩೬.)
8. ನಿರಂಜನ ವಂಶರತ್ನಾಕರ. ಭಾಗ-೨. (ಬುಡದ ಕೆಲವು ಮಾತುಗಳು ) ಸಮಯಗಳ ಬೆಳವಣಿಗೆ. ಪು. ೧೭.
9. Register of Muzrai Institutions Endowed with Inam Lands in Bangalore Taluk. dt: 31.12.1902. P.184-185.
10. ಈ ಜಲಕಂಠೇಶ್ವರ ಸ್ವಾಮಿಗಳೇ ಕೊಳದಮಠದ ಮೂಲಗುರುಗಳೆಂದು ಮಠದ ಕೆಲವು ಭಕ್ತರು ಹೇಳುತ್ತಾರೆ.
11. ಎಸ್. ಶಿವಣ್ಣನವರು ಶೋಧಿಸಿರುವ ಮಾಹಿತಿ ಪ್ರಕಾರ 'ಶ್ರೀ ಶೀಲ ಸಂಪ್ರದಾಯಸಮಯ'ಕ್ಕೆ ಸೇರಿದ ಮಠವೆಂದು ಗುರುತಿಸಲಾಗಿದೆ. (ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು. ಸಂ : ಎಸ್. ಶಿವಣ್ಣ. ಪು. ೨೬೧) ಬಹುಶಃ ಇದು ಶೀಲ ಸಂಪ್ರದಾಯವಿರಲಿಕ್ಕಿಲ್ಲ; 'ಶೀಲಸಂಪಾದನೆಯ ಸಮಯ'ವೆಂದು ಗ್ರಹಿಸುವುದು ಉಚಿತವಾಗಿದೆ.
12. Muzrai Miss-Case No : 65/1922-23. dt: 12.9.1925. P.2
13. ಎಸ್. ಶಿವಣ್ಣ. ಸಂ : ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು. ಪು. ೨೬೧.
14. ಕನ್ನಡ ನಿಘಂಟು. ಸಂ-೮. ಕನ್ನಡ ಸಾಹಿತ್ಯ ಪರಿಷತ್ತು. ಪು. ೮೨೭೪.
15. ಹೇಳಿಕೆ : ಶಿವರುದ್ರಸ್ವಾಮಿಗಳು (೮೩) ಮಠಾಧಿಪತಿ. ಕಂಚುಗಲ್ಲು ಬಂಡೆಮಠ. ಮಾಗಡಿ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ.
16. ಕೊಳದಮಠದ ಈಗಿನ ಗುರುಗಳಾಗಿರುವ ಶಾಂತವೀರಸ್ವಾಮಿಗಳೂ (೫೩ ವರ್ಷ) ಕೂಡ ಮೇಲಿನ ಹೇಳಿಕೆಯನ್ನು ಪುಷ್ಟೀಕರಿಸಿ ತಮ್ಮ ಸಂಸ್ಥಾನಕ್ಕೆ ಅನೇಕ ಶಾಖಾಮಠಗಳಿದ್ದುದಾಗಿ ಹೇಳುತ್ತಾರಾದರೂ, ಅಧಿಕೃತ ದಾಖಲೆಗಳನ್ನು ಒದಗಿಸಲು ಸಾಧ್ಯವಾಗಿಲ್ಲ.
17. Muzrai Miss-Case No : 65/1922-23 (ಸಂಗಮಸ್ವಾಮಿ ಹೇಳಿಕೆ) dt : 12.9.1925.
18. Ibid.,
19. Muzrai File No : 1/1931. Sl.No : 42-44. P.5.
20. Ibid.
21. Ibid. P. 5.
22. Muzrai File No : 191/1933. Sl.No : 1-2. P.6 .
23. ಈ ಮೇಲ್ಕಂಡ ಮಾಹಿತಿಗಳನ್ನು ವಾರಪತ್ರಿಕೆಯೊಂದರಿಂದ ಸಂಗ್ರಹಿಸಿಕೊಳ್ಳಲಾಗಿದೆ. (ಎಸ್. ಮಹದೇವಪ್ರಕಾಶ್ 'ಬೆಂಗಳೂರಿನ ವೀರಶೈವಮಠಗಳ ಆಸ್ತಿ-ಪಾಸ್ತಿಗಳು'. ವಾರಪತ್ರಿಕೆ. ಸಂ : ಬಿ.ವಿ. ವೈಕುಂಠ ರಾಜು. ದಿನಾಂಕ : ೧೪.೬.೧೯೮೭. ಪು. ೧೯).
24. ಬಿ. ಶಿವಮೂರ್ತಿ ಶಾಸ್ತ್ರಿ. (ಸಂ) ಶರಣಸಾಹಿತ್ಯ. (ಮಾಸಪತ್ರಿಕೆ) ದಿ : ೨೪.೧೨.೧೯೬೧. ಪು. ೪೬, ೪೭.
25. ಬೆಂಗಳೂರು ತಾಲ್ಲೂಕು ಕಛೇರಿಗೆ ಅರಳೆಪೇಟೆ ದೇಶದ ಕಳಸಪ್ಪಶೆಟ್ಟಿಯು ಬರೆದುಕೊಂಡ ಅರ್ಜಿ. ಸಂಗ್ರಹ:ಬೇಲಿಮಠ. ದಿ:೧೬.೮.೧೮೮೦.
26. ಅದೇ.
27. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೬೧.
28. ಗಂಜಾಂಮಠದ ನಂಜುಂಡಸ್ವಾಮಿಗಳು, ಚಿದ್ಘನಸ್ವಾಮಿಗಳು, ಸರ್ಪಭೂಷಣಮಠದ ಮಹಾದೇವಸ್ವಾಮಿಗಳು, ಮಾಜಿ ಮಂತ್ರಿಗಳಾಗಿದ್ದ ಎಚ್.ಸಿದ್ಧಯ್ಯನವರು, ಸರ್.ಕೆ.ಪಿ. ಪುಟ್ಟಣ್ಣಶೆಟ್ಟರು, ದೇಶದ ಸಿದ್ಧಬಸಪ್ಪಶೆಟ್ಟರು, ಕವಿ ಸಿದ್ಧಯ್ಯಪುರಾಣಿಕರ ತಂದೆ ಕಲ್ಲಿನಾಥಶಾಸ್ತ್ರಿಗಳು ಇವರೇ ಮೊದಲಾದ ಗುರುಗಳೂ, ಗಣ್ಯ ಮಹನೀಯರುಗಳ ಅನೇಕ ಸಮಾಧಿಗಳು ಕೊಳದಮಠದ ಆವರಣದಲ್ಲಿವೆ.

## ೨.೪. ಚೀಲಾಳಸಮಯದ ಮಠಗಳು

ವಿರಕ್ತವರ್ಗದ ವೀರಶೈವಮಠಗಳ ಪರವಾಗಿ ಚೀಲಾಳಸಮಯಕ್ಕೆ ಸೇರಿದ ಎರಡು ಮಠಗಳು ಮಾತ್ರ ಬೆಂಗಳೂರಿನಲ್ಲಿ ಇರುವುದಾಗಿ ತಿಳಿದುಬರುತ್ತದೆ. ಅವುಗಳೆಂದರೆ. ೧. ತೋಟದದೇವರಮಠ ಮತ್ತು ೨. ನರಗುಂದದೇವರಮಠ. ಇವೆರಡೂ ಮಠಗಳೂ ಈಗಲೂ ಅಸ್ತಿತ್ವದಲ್ಲಿದ್ದು ಅವು ಒಬ್ಬರೇ ಮಠಾಧಿಪತಿಗಳ ಅಧೀನದಲ್ಲಿ ಉಳಿದುಕೊಂಡು ಬಂದಿವೆ. ಮುಂದೆ ಇವುಗಳ ವಿವರವಾದ ಐತಿಹಾಸಿಕ ನೋಟವನ್ನು ಕುರಿತು ವಿಶದವಾಗಿ ಪರಿಚಯಿಸಲಾಗಿದೆ.

**೧. ತೋಟದದೇವರಮಠ.**

**೨. ನರಗುಂದದೇವರಮಠ, ಅರಳೆಪೇಟೆ.**

ಪ್ರಾಚೀನ ಬೆಂಗಳೂರಿನಲ್ಲಿ ಪ್ರತಿಷ್ಠಿತವಾಗಿದ್ದ ಮೂರು ಪೇಟೆಗಳಲ್ಲಿ[1] ಅರಳೆಪೇಟೆಯು ಪ್ರಮುಖವಾದದ್ದು. ಈ ಪೇಟೆಯನ್ನು ಹಿಂದೆ 'ಅಮೃತಸಾಗರದ ಅರಳೆಪೇಟೆ' ಎಂದು ಕರೆಯುವುದೇ ಹೆಚ್ಚಿನ ರೂಢಿಯಲ್ಲಿತ್ತು.[2] 'ಧರ್ಮಾಂಬುಧಿಕೆರೆ'ಯನ್ನು ಕಳೆದ ಶತಮಾನದಲ್ಲಿ 'ದೊಡ್ಡಕೆರೆ' ಎಂತಲೂ[3]; ಅದರಲ್ಲಿ ಸದಾ ಹಾಲಿನಂತಹ ಬೆಳ್ಳಗಿನ ನೀರಿದ್ದು ವಿಶಾಲವಾದ ಕೆರೆಯಾಗಿದ್ದುದರಿಂದ 'ಅಮೃತಸಾಗರ'ವೆಂತಲೂ ಕರೆಯಲಾಗುತ್ತಿತ್ತು. ಈ ಕೆರೆಗೆ ಹಿಂಭಾಗದಲ್ಲೇ ಇದ್ದ ಅರಳೆಪೇಟೆಗೆ ಸಹಜವಾಗಿಯೆ 'ಅಮೃತಸಾಗರದ ಅರಳೆಪೇಟೆ'[4] ಎಂಬ ಹೆಸರು ಪ್ರಚಲಿತವಾದುದಾಗಿ ಸ್ಥಳೀಯ ಐತಿಹ್ಯ ಒಂದರಿಂದ ವ್ಯಕ್ತವಾಗುತ್ತದೆ.[5]

ನಗರದ ರೈಲುನಿಲ್ದಾಣದ ಮುಂಭಾಗದಲ್ಲಿರುವುದೇ ಗುಬ್ಬಿ ತೋಟದಪ್ಪನವರ ಛತ್ರ. ಈ ಛತ್ರದ ಬಲಭಾಗದ ಮೂಲೆಯಿಂದ ಅರಳೆಪೇಟೆ ಮುಖ್ಯ ರಸ್ತೆಗೆ ಇಳಿದರೆ, ಮೊದಲು ಸಿಗುವುದು ಅರುಣಾಚಲೇಶ್ವರನ ದೇಗುಲ. ದಕ್ಷಿಣಾಭಿಮುಖವಾಗಿ ಹಾಗೇ ಮುನ್ನಡೆದರೆ ಮುಂದೆ ಸಿಗುವುದೇ ಅಮೃತ ಮಲ್ಲೇಶ್ವರನ ದೇಗುಲ.[6] ಅಲ್ಲಿಂದ ಮುಂದೆ ಸಿಗುವ ಅಡ್ಡರಸ್ತೆಯೇ ಓ.ಟಿ.ಸಿ. ರಸ್ತೆ.[7] (Old Taluk Cacheri Road) ಈ ರಸ್ತೆಯು ಬಲ ಪಾರ್ಶ್ವಕ್ಕಿರುವುದೇ ವೀರಭದ್ರಸ್ವಾಮಿಯ ದೇವಾಲಯ. ಈ ದೇಗುಲದ ಮುಂಭಾಗದ ಬೀದಿಯಲ್ಲೆ ಇತಿಹಾಸ ಪ್ರಸಿದ್ಧವಾದ ಕೋಟೆಯ ಸೊಂಡೆಕೊಪ್ಪದ ಬಾಗಿಲಿದ್ದುದು.[8]

ಅರಳೆಪೇಟೆಯ ಮುಖ್ಯರಸ್ತೆಯಲ್ಲಿ ಓ.ಟಿ.ಸಿ. ರಸ್ತೆಯನ್ನು ದಾಟಿ ಮುನ್ನಡೆದರೆ ಮತ್ತೊಂದು ಪ್ರಾಚೀನ ದೇಗುಲದ ದರ್ಶನವಾಗುತ್ತದೆ. ಅದೇ ಅರಳೆಗುಡಿ[9] ಬಸವೇಶ್ವರನ ದೇವಾಲಯ. ಈ ದೇಗುಲದ ಬಲಭಾಗದಲ್ಲಿಯೇ 'ನರಗುಂದದೇವರ ಮಠ'ವಿರುವ 'ನರಗುಂದ ದೇವರ ಗಲ್ಲಿ' ಇದೆ. ಇದನ್ನು ಹಿಂದೆ ತೆಂಗಿನ ಮರದ ಗಲ್ಲಿ ಎಂತಲೂ; ಆ ಗಲ್ಲಿಯ ಸುತ್ತಮುತ್ತಲಿನ ಭಾಗವನ್ನು 'ಗೌಡನಪೇಟೆ' ಎಂತಲೂ ಕರೆಯಲಾಗುತ್ತಿತ್ತು.[10] ಅರಳೆಗುಡಿ ಬಸವೇಶ್ವರನ ದೇವಾಲಯದ ಹಿಂಬದಿಗೆ, ನರಗುಂದದೇವರ ಮಠದ ಗಲ್ಲಿಗೆ ಅಡ್ಡಲಾಗಿರುವುದೇ 'ತೋಟದ ದೇವರಮಠ'ವಿರುವ ತೋಟದ ದೇವರಗಲ್ಲಿ. ಈಗಲೂ ಅದೇ ಗಲ್ಲಿಗಳಲ್ಲಿ ಇವೆರಡೂ ಮಠಗಳ ಅಸ್ತಿತ್ವ ಉಳಿದುಕೊಂಡು ಬಂದಿದೆ.

ಇವೆರಡೂ ಮಠಗಳಲ್ಲಿ ಮೊಟ್ಟಮೊದಲಿಗೆ ಪ್ರಾರಂಭವಾದದ್ದು ತೋಟದ ದೇವರಮಠ. ಹೆಸರೇ ಸೂಚಿಸುವಂತೆ ತೋಟದ ದೇವರು ಈ ಮಠದ ಪ್ರಾರಂಭದ ಗುರುಗಳಾಗಿದ್ದುದರಿಂದ ಅವರ ಹೆಸರೇ ಆ ಮಠಕ್ಕೂ ಕರೆಯಲ್ಪಟ್ಟಿತು.[11] ಈ ಮಠವನ್ನು ಕುರಿತು ನಮಗೆ ದೊರಕುವ ಪ್ರಥಮ ದಾಖಲೆ (ಶಾಲಿವಾಹನ ಶಕ ೧೭೪೫ರದು.)ಯಲ್ಲಿ ಉಲ್ಲೇಖವಾಗಿರುವಂತೆ ಕ್ರಿ.ಶ. ೧೮೨೩ರಲ್ಲಿ "ದೇವಣಾಪುರ[12] ಮಹಾ ಮಹಾಂತಿನ ಮಠದ ಅತೀತ ಧರ್ಮ ಸಿಂಹಾಸನಾಧಿಪತಿಗಳಾಗಿದ್ದ ಪಟ್ಟದ ಪರುವತ ಸ್ವಾಮಿಗಳು,[13] ಬೆಂಗಳೂರು ಅರಳೆಪೇಟೆಯಲ್ಲಿರುವ 'ಕೌದಿ ಚರಚೀಲಾಳಸಮಯ'ದ ತೋಟಾಸ್ವಾಮಿಯವರ ಶಿಷ್ಯರಾದಂತಾ ಚನ್ನಬಸವ ಸ್ವಾಮಿಗಳ ಶಿಷ್ಯರು ತೋಟಾಸ್ವಾಮಿಯವರಿಗೆ ಇವರ ಮಠದಲ್ಲಿ ನಡೆಯುವ ಧರ್ಮ ದಾಸೋಹಕ್ಕಾಗಿ; ಹುಣಸಮಾರನಹಳ್ಳಿಯಲ್ಲಿ ನೀಡಿರುವ ಭೂದಾನ ಸಮರ್ಪಣಾ ಪತ್ರವು", ಉಭಯ ಮಠಗಳ ಬಗೆಗೂ ಸಾಕಷ್ಟು ಬೆಳಕು ಚೆಲ್ಲುತ್ತದೆ. ತೋಟದದೇವರ ಮಠವು 'ಚೀಲಾಳಸಮಯ'ಕ್ಕೆ[14] ಸೇರಿದ್ದು, ಅದರ ಪ್ರಥಮ ಹಾಗೂ ದ್ವಿತೀಯ ಗುರುಗಳ ಹೆಸರೂ ಪ್ರಸ್ತಾಪವಾಗಿವೆ. ಜೊತೆಗೆ

೧೮೨೩ರ ವೇಳೆಗೆ ಆ ಮಠವು ಅರಳೆಪೇಟೆಯಲ್ಲೇ ಇದ್ದು ಆ ವೇಳೆಗಾಗಲೇ ಮಠದಲ್ಲಿ ನಿತ್ಯವೂ ಧರ್ಮದಾಸೋಹ ನಡೆಯುತ್ತಿದ್ದುದಾಗಿ ತಿಳಿದು ಬರುತ್ತದೆ. ಬಹುಶಃ ಇಲ್ಲಿಗೆ ಹತ್ತಾರು ವರ್ಷಗಳ ಹಿಂದಿನಿಂದಲೇ ಆ ಮಠದಲ್ಲಿ ಇಂತಹ ಧರ್ಮದಾಸೋಹಗಳನ್ನು ನಡೆಸುತ್ತಿದ್ದುದಕ್ಕಾಗಿ ಮೇಲ್ಕಂಡ ಭೂದಾನ ದೊರಕಿರಬಹುದೆಂದು ತರ್ಕಿಸಲು ಅವಕಾಶವಿದೆ. ಮೇಲಾಗಿ ಈಗಾಗಲೇ ಇಬ್ಬರು ಮಠಾಧಿಪತಿಗಳು ಆಗಿ ಹೋಗಿರುವ ಹಿನ್ನೆಲೆಯಲ್ಲಿ ತೋಟದದೇವರಮಠವು ಕ್ರಿ.ಶ.೧೭೫೦ರ ಸುಮಾರಿಗೆ[15] ಪ್ರಾರಂಭವಾಗಿರಬೇಕೆಂದು ಹೇಳಬಹುದಾಗಿದೆ.

ತೋಟದದೇವರಮಠದ ಮೂಲಗುರುಗಳಾಗಿದ್ದ ತೋಟದ ಸ್ವಾಮಿಯವರ ಬಗೆಗಾಗಲಿ, ಅವರ ನಂತರದ ಗುರುಗಳಾಗಿದ್ದ ಚೆನ್ನಬಸವಸ್ವಾಮಿಗಳ ಬಗೆಗಾಗಲಿ ಹೆಚ್ಚಿನ ಮಾಹಿತಿ ಲಭ್ಯವಾಗಿಲ್ಲ.[16] ಮೂರನೆಯ ಗುರುಗಳಾಗಿದ್ದ ಇಮ್ಮಡಿ ತೋಟದ ಸ್ವಾಮಿಗಳ ಕಾಲದಲ್ಲಿ ಮಠವು ಬಹಳ ಪ್ರಸಿದ್ಧಿಯನ್ನು ಪಡೆದಂತೆ ತಿಳಿದು ಬರುತ್ತದೆ.[17] ಆ ಕಾಲಕ್ಕೆ ಅರಳೆ ವ್ಯಾಪಾರದ ನಿಮಿತ್ಯ ಧಾರವಾಡ ಜಿಲ್ಲಾ ನರಗುಂದದಿಂದ ಬಂದು ಬೆಂಗಳೂರಿನ ಅರಳೆಪೇಟೆಯಲ್ಲೇ ನೆಲೆಸಿದ್ದ ಡಮಾಮಿ[18] ಮುದುಕಪ್ಪನವರು ಮಠದ ಪರಮ ಭಕ್ತರಾಗಿದ್ದರು. ಧನಿಕವರ್ತಕರಾಗಿದ್ದ ಇವರು ಕ್ರಿ.ಶ.೧೮೨೫ರಲ್ಲಿ ಪಟ್ಟಣದ ಹೊರಭಾಗವಾದ ಧರ್ಮಾಂಬುಧಿ ಕೆರೆಯ ಕೋಡಿಯ ಹಿಂಬದಿಯಲ್ಲಿದ್ದ ಬರಗೆಮುದ್ದನಹಳ್ಳಿಯಲ್ಲಿ (ಈಗಿನ ರೈಲ್ವೆ ನಿಲ್ದಾಣದ ಉತ್ತರ ಭಾಗದ ರೈಲ್ವೆ ಬ್ರಿಡ್ಜಿಗೆ ಎದುರು[19] ಭಾಗದಲ್ಲಿ) ಸ್ವತಃ ಮೂರು ವರಹದ ಭೂಮಿಯನ್ನು ಕೊಂಡು, ಅದರಲ್ಲಿ ಇಪ್ಪತ್ತೇಳು ಅಂಕಣದ ಕಲ್ಲುಕಟ್ಟಡದ ಮಠ, ಕಲ್ಲಿನ ಬಸವಮಂಟಪ, ಕಲ್ಲುಕಟ್ಟಿದ ಬಾವಿಗಳನ್ನು ಕಟ್ಟಿಸಿ; ಜೊತೆಗೆ ಹೂದೋಟ, ಹಣ್ಣಿನ ಮರದ ತೋಪುಗಳನ್ನೂ ನಿರ್ಮಿಸಿ ಇಮ್ಮಡಿ ತೋಟದ ಸ್ವಾಮಿಗಳಿಗೆ ಒಪ್ಪಿಸಿದ್ದರು.[20] ಇದುವರೆಗೆ ಅರಳೆಪೇಟೆಯಲ್ಲಿದ್ದ ತೋಟದ ದೇವರ ಮಠವು ಈಗ (ಕ್ರಿ.ಶ. ೧೮೨೫ರಲ್ಲಿ) ಪಟ್ಟಣದ ಹೊರಗಿನ ಪ್ರಶಾಂತ ಸ್ಥಳಕ್ಕೆ ವರ್ಗಾಯಿಸಲ್ಪಟ್ಟಿತು. ನರಗುಂದದ ಡಮಾಮಿ ಮುದುಕಪ್ಪನವರು ಈ ವಿನೂತನ ಮಠವನ್ನು ನಿರ್ಮಿಸಿಕೊಟ್ಟರಾದ ಕಾರಣ ಮುಂದೆ ಈ ಮಠವು 'ನರಗುಂದದವರಮಠ'ವೆಂದೇ ಪ್ರಸಿದ್ಧಿಯಾಯಿತು.[21] ಈಗ ಅದು 'ನರಗುಂದದವರ' ಹೋಗಿ 'ನರಗುಂದದೇವರ ಮಠ'ವೆಂದಾಗಿದೆ.

ನಾಡಿನ ನಾನಾಭಾಗಗಳಿಂದ ಪಟ್ಟಣಕ್ಕೆ ಬರುತ್ತಿದ್ದ ವರ್ತಕರ ಪೂಜೆ-ಪ್ರಸಾದಾದಿ ಸೌಲಭ್ಯಗಳಿಗೆ ಈ ನರಗುಂದದವರ ಮಠ ಹೇಳಿಮಾಡಿಸಿದಂತಿತ್ತು. ಮಠದಲ್ಲಿ ನಿತ್ಯವೂ ಬಂದಂತಹ ಯಾತ್ರಾರ್ಥಿಗಳಿಗೆ ಹಾಗೂ ವ್ಯಾಪಾರ-ವ್ಯವಹಾರಸ್ಥರಿಗೆ ಧರ್ಮದಾಸೋಹ ನಡೆಯುತ್ತಿತ್ತು. ಅದರ ಸೇವಾರ್ಥವಾಗಿ ಸ್ಥಳ-ಪರಸ್ಥಳದ ಶೆಟ್ಟಿ ಯಜಮಾನರು ಹಾಗೂ ಅರಳೆವರ್ತಕರು ಸೇರಿ ಕ್ರಿ.ಶ. ೧೮೨೭ರಲ್ಲಿ ಇಮ್ಮಡಿ ತೋಟದಸ್ವಾಮಿಗಳಿಗೆ ದಾನ ಶಾಸನವೊಂದನ್ನು ಬರೆದುಕೊಟ್ಟರು. ಆ ಪ್ರಕಾರ ಅರಳೆವ್ಯಾಪಾರಸ್ಥರು ತಮ್ಮ ವ್ಯಾಪಾರದ ಇಪ್ಪತ್ತನೇ ಒಂದು ಲಾಭಾಂಶವನ್ನು ನಿರಂತರವಾಗಿ ಮಠದ ದಾಸೋಹ ಸೇವೆಗೆ ಅರ್ಪಿಸುವಂತೆ ಕರಾರಾಗಿತ್ತು.[22] ಹೀಗೆ ಹತ್ತೊಂಬತ್ತನೆ ಶತಮಾನದ ಪೂರ್ವಾರ್ಧದಲ್ಲಿ ಈ ಮಠ ಬೆಂಗಳೂರು ಪಟ್ಟಣದಲ್ಲೇ ವಿಶೇಷವಾದ ಮಾನ್ಯತೆಯನ್ನು ಪಡೆದಿತ್ತು. ಮುಂದೆ ಕ್ರಿ.ಶ. ೧೮೩೩ರ ವೇಳೆಗೆ ಮುಮ್ಮಡಿ ತೋಟದ ಸ್ವಾಮಿಗಳು ಅಧಿಕಾರಕ್ಕೆ ಬಂದು ಹಿಂದಿನವರು ನಡೆಸುತ್ತಿದ್ದ ಸೇವಾ ಕಾರ್ಯಗಳನ್ನೆಲ್ಲಾ ಯಥಾಪ್ರಕಾರ ನಿರ್ವಹಿಸಿದಂತೆ ತೋರುತ್ತದೆ. ಇವರು ಸರ್ಕಾರದೊಂದಿಗೆ ವ್ಯವಹರಿಸಿ ೧೮೪೪-೪೫ರ ಸಾಲಿನಲ್ಲಿ ಮಠದ ಆಸ್ತಿ-ಪಾಸ್ತಿಯ ಮೇಲಿನ ಕಂದಾಯುವನ್ನು ಮನ್ನಾ ಮಾಡಬೇಕೆಂದು ವಿನಂತಿಸಿಕೊಂಡ ದಾಖಲೆಗಳಿವೆ.[23]

೧೮೫೦ರ ವೇಳೆಗೆ ಚನ್ನಮಲ್ಲಸ್ವಾಮಿ ಎಂಬುವರು ಈ ಮಠದ ಮಠಾಧಿಪತಿಗಳಾಗಿದ್ದರು. ಇವರ ಕಾಲದಲ್ಲಿ ಹೊಸಕೋಟೆಯಲ್ಲಿದ್ದ ದೇಶದಮಠವೂ; ಭೈರಮಂಗಲದ ಮಠದ ತೋಂಟದದೇವರು ತೀರಿಕೊಂಡಾಗ (೧೮೫೦ರಲ್ಲಿ) ಆ ಮಠವೂ ಹಾಗೂ ಕ್ಲೋಸ್‌ಪೇಟೆ (ರಾಮನಗರದ)ಯ ಮಠಕ್ಕೆ ಸೇರಿದ್ದ ಸಂಗನ ಬಸವನದೊಡ್ಡಿಯ ಆಸ್ತಿಗಳೂ ಕೂಡ ಇವರ ಅಧೀನಕ್ಕೆ ಒಳಪಟ್ಟಿದ್ದವು.[24] ಇವರ ನಂತರ ೧೮೫೫ರ ವೇಳೆಗೆ ಅಧಿಕಾರಕ್ಕೆ ಬಂದವರು ಸಿದ್ಧಲಿಂಗದೇವರು.[25] ಇವರ ಕಾಲದಲ್ಲಿ ಮಠವು ಬಹಳ ಸ್ಥಿತ್ಯಂತರಗಳನ್ನು ಕಂಡಿತ್ತು. ಇದುವರೆಗೂ ದೇಶೀಯ ಸಾಂಸ್ಕೃತಿಕ ಹಿರಿಮೆಗೆ ಮೈವೆತ್ತು ನಿಂತಿದ್ದ ಬೆಂಗಳೂರು ಪಟ್ಟಣ; ಪಾಶ್ಚಾತ್ಯ (ಆಂಗ್ಲರ) ನಾಗರಿಕತೆಯ ಹೊಸಗಾಳಿಗೆ ಮೈಯೊಡ್ಡಬೇಕಾಯಿತು. ೧೮೬೪ರ ವೇಳೆಗೆ ಪ್ರಥಮ ಬಾರಿಗೆ ಬೆಂಗಳೂರು-ಜೋಲಾರ ಪೇಟೆಗಳ ನಡುವೆ ರೈಲು ಸಂಪರ್ಕ

ಆರಂಭವಾಯಿತು.[26] ಮುಂದೆ ೧೮೬೮ರ ವೇಳೆಗೆ ಬೆಂಗಳೂರು-ಮೈಸೂರುಗಳ ನಡುವಿನ ರೈಲ್ವೆ ಮಾರ್ಗದ ವಿಸ್ತರಣೆ ಹಾಗೂ ಬೆಂಗಳೂರು ನಗರ ರೈಲು ನಿಲ್ದಾಣದ ಅಭಿವೃದ್ಧಿ ಕಾರ್ಯಗಳು ಆರಂಭವಾಗಿದ್ದವು. ಈ ಸಂದರ್ಭದಲ್ಲಿ ಧರ್ಮಾಂಬುಧಿ ಕೆರೆ ಕೋಡಿ ಬಳಿ ಇದ್ದ ನರಗುಂದದೇವರ ಮಠ ಹಾಗೂ ಈಗಿನ ರೈಲ್ವೆ ನಿಲ್ದಾಣದ ದಕ್ಷಿಣ ಪಾರ್ಶ್ವಕ್ಕಿದ್ದ ದಿಗಂಬರಶೆಟ್ಟರ ಮಠ ಇವೆರಡೂ ವೀರಶೈವಮಠಗಳ ಆಸ್ತಿ-ಪಾಸ್ತಿಗಳೆಲ್ಲಾ ರೈಲ್ವೆ ಇಲಾಖೆಗೆ ಆಕ್ರಮಿತವಾಗಿಬಿಟ್ಟವು.[27] ಆಗ ಗತ್ಯಂತರವಿಲ್ಲದೆ ರೈಲ್ವೆ ಇಲಾಖೆ ನೀಡಿದ ಪರಿಹಾರವನ್ನು ಪಡೆದು ಸ್ಥಳಾಂತರಗೊಳ್ಳಬೇಕಾದ್ದು ಅನಿವಾರ್ಯವಾಯಿತು. ತತ್ಪರಿಣಾಮವಾಗಿ ನರಗುಂದದೇವರ ಮಠವು ಇದುವರೆಗೆ ನಡೆಸಿಕೊಂಡು ಬಂದಿದ್ದ ನಿರಂತರ ಸೇವಾಕಾರ್ಯಗಳೆಲ್ಲಾ ಸ್ಥಗಿತಗೊಳ್ಳಬೇಕಾಯಿತು. ಆಗ ಮಠವು ತನ್ನ ಮೂಲ ಸ್ಥಾನವಾದ, ಅರಳೆಪೇಟೆಯಲ್ಲಿ ಜೀರ್ಣಾವಸ್ಥೆಯಲ್ಲಿದ್ದ ಹಳೆಯ ತೋಟದದೇವರ ಮಠಕ್ಕೆ ವರ್ಗಾಯಿಸಲ್ಪಟ್ಟಿತು. ೧೮೨೫ರಿಂದ ೧೮೭೦ರ ವರೆಗೆ ೪೫ ವರ್ಷಗಳ ಕಾಲ ಅವಿರತ ಸಮಾಜಸೇವೆ ನಡೆಸಿದ್ದ ಡಮಾಮಿ ಮುದುಕಪ್ಪನವರ ಈ ಮಠ ಆಧುನಿಕತೆಯ ಅಲೆಗೆ ಸಿಕ್ಕಿ ಸಂಪೂರ್ಣವಾಗಿ ಕುಸಿದುಬಿದ್ದಿತು. ೧೮೭೮ರಲ್ಲಿ ರೈಲ್ವೆ ಇಲಾಖೆಯಿಂದ ದೊರೆತ ಅಲ್ಪ-ಸ್ವಲ್ಪ ಪರಿಹಾರವೂ ಮಠದ ದಾನಿಗಳಿಗೆ ಹೋಯಿತು. ಸಿದ್ಧಲಿಂಗದೇವರು ತಮ್ಮ ಹಳೆಯ ಮಠವನ್ನು ಪುನರುಜ್ಜೀವನಗೊಳಿಸಿದರಾದರೂ ಹಿಂದಿನಿಂದ ನಡೆದು ಬಂದಿದ್ದ ಸಾರ್ವತ್ರಿಕ ಸೇವೆಗಳನ್ನು ಮುನ್ನಡೆಸುವುದು ಕಷ್ಟವಾಯಿತು. ಸಾಹಸ ಪ್ರವೃತ್ತಿಯ ಇವರು ದೇಶದ ಮೇಲೆ ಸಂಚರಿಸಿ ಧರ್ಮಭಿಕ್ಷೆಯನ್ನು ಎತ್ತಿ ೧೮೮೦ರ ವೇಳೆಗೆ ಹಳೆಯ ತೋಟದದೇವರ ಮಠಕ್ಕೆ ಎದುರಿಗೆ ಮುದ್ದಪ್ಪ ಸ್ವಾಮಿಯ ಮಠದ ಪಕ್ಕದಲ್ಲಿ ೪೪ ಅಂಕಣದ ಹೊಸಮಠವೊಂದನ್ನು ನಿರ್ಮಾಣ ಮಾಡಿದರು.[28] ಡಮಾಮಿ ಮುದುಕಪ್ಪನ ಸ್ಮರಣಾರ್ಥವಾಗಿ ತಮ್ಮ ನೂತನ ಮಠಕ್ಕೆ ನರಗುಂದದೇವರ ಮಠವೆಂದೇ ನಾಮಕರಣ ಮಾಡಿದರು.[29] ನರಗುಂದದ ಪಂಚಗೃಹದ ಗುಡ್ಡದ ಹಿರೇಮಠದ ಪಟ್ಟಾಧ್ಯಕ್ಷರಾಗಿದ್ದ ಚನ್ನವೀರಯ್ಯನವರಿಗೂ ಇವರಿಗೂ ತೀರಾ ನಿಕಟವಾದ ಸಂಪರ್ಕವಿತ್ತು. ಸಾಕಷ್ಟು ಜನಾನುರಾಗಿಗಳಾಗಿದ್ದ ಸಿದ್ಧಲಿಂಗಸ್ವಾಮಿಗಳು ೧೮೮೧ರಲ್ಲಿ ಶಿವಾಧೀನರಾದಾಗ[30] ಹಳೆಯ ತೋಟದದೇವರ ಮಠದಲ್ಲಿಯೇ ಅವರ ಗದ್ದುಗೆ ಮಾಡಲಾಯಿತು. ಇಂದಿಗೂ ಆ ಗದ್ದುಗೆಗೆ ನಿತ್ಯಪೂಜೆ ಪುನಸ್ಕಾರಗಳು ನಡೆಯುತ್ತಿವೆ.

೧೮೭೭ರ ವೇಳೆಗಾಗಲೇ ಸಿದ್ಧಲಿಂಗಸ್ವಾಮಿಗಳ ಉತ್ತರಾಧಿಕಾರಿಗಳಾಗಿದ್ದ ಬಸವರಾಜಸ್ವಾಮಿಗಳು ಶಿವಯೋಗಿ ಬಸಪ್ಪಸ್ವಾಮಿಗಳೆಂದೇ ಹೆಸರಾಗಿದ್ದರು.[31] ಇವರ ಕಾಲಕ್ಕೆ ಹೊಸಕೋಟೆ, ಭೈರಮಂಗಲದ ಮಠಗಳ ಜೊತೆಗೆ ಕಗ್ಗಲಿಪುರದ ಸಿದ್ಧಲಿಂಗದೇವರ ಮಠವೂ ಇವರ ನೇರ ಆಡಳಿತಕ್ಕೆ ಒಳಪಟ್ಟಿತ್ತು.[32] ತಮ್ಮ ಮಠದ ಪುರೋಭಿವೃದ್ಧಿಗಾಗಿ ಯಲಹಂಕ ಹೋಬಳಿಯ ದೊಡ್ಡಬೆಟ್ಟಹಳ್ಳಿ ಗ್ರಾಮದ ಸರ್ವೆ ನಂ : ೮ರಲ್ಲಿ ೩ ಎಕರೆ ೧೦ ಗುಂಟೆ ಜಮೀನನ್ನು;[33] ಅದೇ ಹೋಬಳಿಯ ವೀರಸಾಗರ ಗ್ರಾಮದ ಸರ್ವೆ ನಂ : ೨೬ರಲ್ಲಿ ೬ ಎಕರೆ ೧೭ ಗುಂಟೆ ಜಮೀನನ್ನು[34] ಖರೀದಿಸಿದ್ದರು. ಇದರ ಜೊತೆಗೆ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಮಾವತ್ತೂರಿನಲ್ಲೂ ಇವರಿಗೆ ಸೇರಿದ ಜಮೀನುಗಳಿದ್ದವು.[35]

ಶಿವಯೋಗಿ ಬಸಪ್ಪಸ್ವಾಮಿಗಳು ಒಳ್ಳೆಯ ವಿಚಾರವಾದಿಗಳಾಗಿದ್ದರು. ಇವರು 'ಜಂಗಮೇತರ ಜಾತಿಯವರು ಮಠಾಧಿಪತಿಗಳಾಗಲು ಅರ್ಹರಲ್ಲ'ವೆಂಬ ಹಾನಗಲ್ಲ ಕುಮಾರಸ್ವಾಮಿಗಳ ನಿಲುವಿಗೆ ವಿರೋಧವಾಗಿದ್ದರು.[36] ವೀರಶೈವರ ಒಳಪಂಗಡಗಳ ಆಂತರಿಕ ಸಾಮರಸ್ಯಕ್ಕಾಗಿ ಗಂಜಾಂಮಠದ ಚಿದ್ಘನಸ್ವಾಮಿಗಳೊಂದಿಗೆ ಬಹಳಷ್ಟು ಹೋರಾಟ ನಡೆಸಿದ್ದರು.[37] ಸದಾ ಅನಾರೋಗ್ಯ ಪೀಡಿತರಾಗಿದ್ದ ಇವರು ೧೯೦೮ರಲ್ಲಿ ಲಿಂಗೈಕ್ಯರಾದರು. ಇವರ ಗದ್ದುಗೆಯು ಮಾಗಡಿ ರಸ್ತೆಯಲ್ಲಿರುವ ಶಂಕರಣ್ಣನವರ ತೋಟದಲ್ಲಿದೆ.

೧೯೦೪ರ ವೇಳೆಗಾಗಲೇ ಬಸಪ್ಪಸ್ವಾಮಿಗಳ ಉತ್ತರಾಧಿಕಾರಿಗಳಾಗಿ ಆಯ್ಕೆಯಾಗಿದ್ದ ಕರಿಬಸವಸ್ವಾಮಿಗಳು ೧೯೦೮ರ ವರೆಗೂ ಭೈರಮಂಗಲದ ಮಠದ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು.[38] ಮುಂದೆ ಬಸಪ್ಪಸ್ವಾಮಿಗಳ ನಿಧನಾನಂತರ ಬೆಂಗಳೂರಿನ ನರಗುಂದದೇವರ ಮಠಕ್ಕೆ ಬಂದು ನಿಂತು, ಮಠದ ಎಲ್ಲಾ ಜವಾಬ್ದಾರಿಗಳನ್ನೂ ನಿರ್ವಹಿಸತೊಡಗಿದರು. ಸರ್ಪಭೂಷಣ ಮಠದ ಚನ್ನಬಸವಸ್ವಾಮಿಗಳಿಗೆ

ಪೂರ್ವಾಶ್ರಮದ ದಾಯಾದಿಗಳಾಗಿದ್ದ ಇವರು, ಅವರು ನಡೆಸುತ್ತಿದ್ದ ಸಂಸ್ಕೃತ ಪಾಠಶಾಲೆಯನ್ನು ಕೆಲವು ವರ್ಷಗಳ ಕಾಲ (೧೯೨೨-೨೪) ತಮ್ಮ ಮಠದಲ್ಲೂ ನಡೆಸಲು ಅನುವು ಮಾಡಿಕೊಟ್ಟಿದ್ದರು.[39] ತಮ್ಮ ಅಧೀನದಲ್ಲಿದ್ದ ಭೈರಮಂಗಲದ ಮಠಕ್ಕೆ ೧೯೨೦ರಲ್ಲಿ ಶಿವರುದ್ರಸ್ವಾಮಿ ಎಂಬುವರನ್ನು ನೇಮಿಸಿ ಅದರ ಜವಾಬ್ದಾರಿಯನ್ನು ಅವರಿಗೆ ವಹಿಸಿಕೊಟ್ಟಿದ್ದರು.[40] ಬೆಂಗಳೂರಿನ ಮಠ ಹಾಗೂ ಇಲ್ಲಿನ ಆಸ್ತಿ-ಪಾಸ್ತಿಗಳನ್ನು ಬಿಟ್ಟರೆ ಹೊರಗಿನ ವ್ಯವಹಾರಗಳೆಲ್ಲಾ ಇವರ ಕಾಲಕ್ಕೆ ಕೈಬಿಟ್ಟಿರುವಂತೆ ಕಂಡುಬರುತ್ತದೆ. ದಿನಾಂಕ : ೧.೮.೧೯೨೩ರಲ್ಲಿ ಇವರು ಪಶುಪತಿ ಸಿದ್ಧಲಿಂಗಯ್ಯನಿಗೆ ಬರೆದುಕೊಟ್ಟ ಟ್ರಸ್ಟ್ ಡೀಡಿನ ಪ್ರಕಾರ ಉಳಿದಿದ್ದ ಆಸ್ತಿಗಳೆಂದರೆ-ನರಗುಂದದೇವರ ಮಠದ ಭಾಗ, ತೋಟದದೇವರ ಮಠದ ಭಾಗ ಹಾಗೂ ಯಲಹಂಕದ ಬಳಿಯ ಬೆಟ್ಟಹಳ್ಳಿ ಮತ್ತು ವೀರಸಾಗರದ ಜಮೀನುಗಳು ಮಾತ್ರ.[41] ಕರಿಬಸವಸ್ವಾಮಿಗಳು ದಿನಾಂಕ: ೨೫.೧೨.೧೯೨೫ರಲ್ಲಿ ಶಿವಾಧೀನರಾದಾಗ ಕೊಳದ ಮಠದಲ್ಲಿ ಇವರ ಅಂತ್ಯಕ್ರಿಯಾದಿಗಳನ್ನು ನಡೆಸಲಾಯಿತು.

ಮೇಲ್ಕಂಡ ಕರಾರಿನ ಪ್ರಕಾರ ಪಶುಪತಿ ಸಿದ್ಧಲಿಂಗಯ್ಯನವರ ಪುತ್ರ ಒಂಬತ್ತು ವರ್ಷದ ನಂಜೆಮರಿಯನ್ನು ಮುಂದಿನ ಮಠಾಧಿಪತಿಗಳನ್ನಾಗಿ ಮಾಡಲಾಗಿತ್ತು. ಆದರೆ ೧೯೩೫ರಲ್ಲಿ ಪಶುಪತಿ ಸಿದ್ಧಲಿಂಗಯ್ಯನವರು ತೀರಿಕೊಂಡಾಗ ನಂಜೆಮರಿಯವರು ಗೃಹಸ್ಥಾಶ್ರಮವನ್ನು ಸ್ವೀಕರಿಸಬೇಕಾಯಿತು. ಮುಂದೆ ಇವರ ಕಿರಿಯ ಸಹೋದರ ಪರಮೇಶ್ವರಯ್ಯನವರನ್ನು ೧೯೫೦ರಲ್ಲಿ ಮಠಾಧಿಪತಿಗಳನ್ನಾಗಿ ಮಾಡಿ ಇಮ್ಮಡಿ ಬಸಪ್ಪಸ್ವಾಮಿಗಳೆಂದು ನೂತನ ನಾಮಕರಣ ಮಾಡಲಾಗಿತ್ತು. ಅನಾರೋಗ್ಯದ ಕಾರಣ ಇವರೂ ಕೂಡ ೧೯೬೩ರಲ್ಲಿ ಲಿಂಗೈಕ್ಯರಾದರು. ಕೊನೆಗೆ ನಂಜೆಮರಿಯವರ ದ್ವಿತೀಯ ಪುತ್ರರಾದ ರಾಜಶೇಖರಯ್ಯನವರಿಗೆ ದಿನಾಂಕ : ೧೯.೨.೧೯೬೯ರಲ್ಲಿ ಮಠದ ಉತ್ತರಾಧಿಕಾರತ್ವದ ದೀಕ್ಷೆ ನೀಡಲಾಯಿತು. ಇವರೇ ಈಗಿರುವ ಇಮ್ಮಡಿಕರಿಬಸವ ಸ್ವಾಮಿಗಳು.[42] ಸದ್ಯಕ್ಕೆ ಉಳಿದಿರುವ ಮಠದ ಆಸ್ತಿಗಳೆಂದರೆ ಸಿಟಿ ಸರ್ವೆ ನಂ : ४೬೨ರಲ್ಲಿರುವ ೬೮೮.೯ ಚದರಗಜ ವಿಸ್ತೀರ್ಣವುಳ್ಳ ನರಗುಂದದೇವರ ಮಠದ ಭಾಗ; ಹಾಗೂ ಸಿಟಿ ಸರ್ವೆ ನಂ : ೫೨೯ರಲ್ಲಿರುವ ३೬೪.೨ ಚದರಗಜ ವಿಸ್ತೀರ್ಣವುಳ್ಳ ತೋಟದದೇವರ ಮಠದ ಭಾಗಗಳು ಮಾತ್ರ.[43]

**ನರಗುಂದದೇವರ ಮಠ ಅಥವಾ ತೋಟದದೇವರ ಮಠದ ಗುರು ಪರಂಪರೆ :**

೧. ತೋಟದಸ್ವಾಮಿಗಳು. ಕ್ರಿ.ಶ.ಸು. ೧೭೫೦.

೨. ಚನ್ನಬಸವಸ್ವಾಮಿಗಳು. ಕ್ರಿ.ಶ.ಸು ೧೭೮೦.

೩. ಇಮ್ಮಡಿ ತೋಟದಸ್ವಾಮಿಗಳು. ಕ್ರಿ.ಶ.ಸು. ೧೮೦೦-೧೮೩೨.

೪. ಮುಮ್ಮಡಿ ತೋಟದಸ್ವಾಮಿಗಳು. ಕ್ರಿ.ಶ. ೧೮೩೩-೧೮೪೫.

೫. ಚನ್ನಮಲ್ಲಸ್ವಾಮಿಗಳು. ಕ್ರಿ.ಶ. ೧೮೪೫-೧೮೫೫.

೬. ಸಿದ್ಧಲಿಂಗದೇವರುಗಳು. ಕ್ರಿ.ಶ. ೧೮೫೫-೧೮೮೧.

೭. ಬಸವರಾಜಸ್ವಾಮಿ ಅಥವಾ ಶಿವಯೋಗಿ ಬಸಪ್ಪ ಸ್ವಾಮಿಗಳು. ಕ್ರಿ.ಶ. ೧೮೭೭-೧೯೦೮.

೮. ಕರಿಬಸವಸ್ವಾಮಿಗಳು. ೧೯೦೪-೧೯೨೫.

೯. ಇಮ್ಮಡಿ ಬಸಪ್ಪಸ್ವಾಮಿಗಳು. ೧೯೫೦-೧೯೬೩.

೧೦. ಇಮ್ಮಡಿ ಕರಿಬಸವಸ್ವಾಮಿ. ೧೯೬೯ ರಿಂದ...

---

**ಅಡಿಟಿಪ್ಪಣಿಗಳು**

1. ದೊಡ್ಡಪೇಟೆ, ಮಾಮೂಲುಪೇಟೆ ಮತ್ತು ಅರಳೆಪೇಟೆಗಳು.
2. ಜೀರಗೆಕಟ್ಟೆ ಬಸವಪ್ಪ. 'ಅರಳೆಪೇಟೆಯ ಮಹತ್ವ'. ಅಮೃತಸಾಗರದ ಅರಳೆಪೇಟೆಯ ಮಹತ್ವ. (ಪ್ರ) ಅರಳೆಪೇಟೆ ದೇವಸ್ಥಾನಗಳ ಟ್ರಸ್ಟ್ (೧೯೭೦) ಪು. ೧೦.
3. ನರಗುಂದದೇವರ ಮಠದ ಇಮ್ಮಡಿತೋಟದಸ್ವಾಮಿಯವರು ಕಂದಾಯದ ಅಧಿಕಾರಿಗಳಿಗೆ ಬರೆದುಕೊಂಡ ಮನವಿಪತ್ರ. ಕ್ರೋಧಿ ಸಂವತ್ಸರ (ಕ್ರಿ.ಶ. ೧೮೪೪.) ಪು. ೧.
4. ಜೀರಗೆಕಟ್ಟೆ ಬಸವಪ್ಪನವರು, 'ಅರಳೆಪೇಟೆಯು ಅತ್ಯಂತ ಪ್ರಾಚೀನ ಐತಿಹ್ಯವನ್ನೂ ಮತ್ತು ಸಂಸ್ಕೃತಿಯನ್ನೂ ಹೊಂದಿ, ''ಅಮೃತಸಾಗರ'' ಎಂಬ ಬಿರುದನ್ನು ಪಡೆದಿತ್ತು' ಎಂಬುದಾಗಿ ತಿಳಿಸಿದ್ದಾರೆ. (ಪೂರ್ವೋಕ್ತ)
5. ಸ್ಥಳೀಯ ಐತಿಹ್ಯದ ಪ್ರಕಾರ - ಸುಪ್ರಸಿದ್ಧ ಕೆಂಪಾಂಬುಧಿಕೆರೆಯನ್ನೂ, ಸಮೀಪದ ಪ್ರಳಯಕಾಲದ ವೀರಭದ್ರನಗುಡಿಯನ್ನೂ ಲೋಕ ಕಲ್ಯಾಣಾರ್ಥವಾಗಿ ಕಟ್ಟಿಸಿ ಹೆಸರು ಪಡೆದವನು ಹಿರಿಯಕೆಂಪೇಗೌಡ. ಅವನನ್ನೇ ಅನುಕರಿಸಿ ಇಮ್ಮಡಿ ಕೆಂಪೇಗೌಡನೂ ಕೂಡ ಬೆಂಗಳೂರು

ಪಟ್ಟಣಿಗರಿಗೆ ಕುಡಿಯುವ ನೀರಿನ ಅನುಕೂಲಕ್ಕಾಗಿ ಧರ್ಮಾಂಬುಧಿಕೆರೆಯನ್ನು ನಿರ್ಮಿಸಿ, ಕೆರೆಗೆ ಹಿಂಬದಿಯ ಅರಳೆಪೇಟೆಯಲ್ಲಿ ವೀರಭದ್ರನ ಗುಡಿಯೊಂದನ್ನೂ ಕಟ್ಟಿಸಿದನು. ಧರ್ಮನಿಧಿಯೆಂದೇ ಹೆಸರಾಗಿದ್ದ ಇಮ್ಮಡಿ ಕೆಂಪೇಗೌಡನು ತನ್ನ ಆಳ್ವಿಕೆಯಲ್ಲಿ ಅನೇಕ ಕೆರೆ ಕಟ್ಟೆಗಳನ್ನೂ ದೇವಾಲಯಗಳನ್ನೂ ನಿರ್ಮಿಸಿ ಧರ್ಮಾಗ್ರೇಸರನೆಂದು ಹೆಸರುವಾಸಿಯಾಗಿದ್ದನು. ಇವನ ಧರ್ಮಭೀರುತ್ವದ ಕುರುಹಾಗಿ ನಿರ್ಮಾಣವಾದದ್ದೇ ನಗರದ ಮಧ್ಯದಲ್ಲಿರುವ 'ಧರ್ಮರಾಯ'ನ ಗುಡಿಯು-ಎಂಬುದಾಗಿ ಹೊಳವನಹಳ್ಳಿ ಸಿದ್ಧಲಿಂಗಸ್ವಾಮಿ (೯೨)ಗಳು (ಮಠಾಧಿಪತಿ. ಕೊರಟಗೆರೆ ತಾ. ತುಮಕೂರು ಜಿಲ್ಲೆ.) ಹೇಳುತ್ತಾರೆ.

6. ಅಮೃತಸಾಗರವೆಂದು ಪ್ರಸಿದ್ಧವಾದ ಧರ್ಮಾಂಬುಧಿಕೆರೆ ನಿರ್ಮಾಣವಾದಾಗಲೇ ಈ ಅಮೃತಮಲ್ಲೇಶ್ವರನ ಗುಡಿಯೂ ನಿರ್ಮಾಣವಾದುದಾಗಿ ಸ್ಥಳೀಯರು ನಂಬಿದ್ದಾರೆ.

7. ಕ್ರಿ.ಶ. ೧೬೮೭ರಲ್ಲಿ ಮೈಸೂರಿನ ಚಿಕ್ಕದೇವರಾಜ ಒಡೆಯರು ಬೆಂಗಳೂರು ಪಟ್ಟಣವನ್ನು ಬಿಜಾಪುರದ ಸುಲ್ತಾನನಿಂದ ಮೂರು ಲಕ್ಷ ರೂಗಳ ಶುದ್ಧಕ್ರಯಕ್ಕೆ ಕೊಂಡುಕೊಂಡರು. ಆಗ ತಾಲ್ಲೂಕು ಕಛೇರಿಯ ನಿರ್ಮಾಣಕ್ಕೆ ದೊಡ್ಡಪೇಟೆಯ ಕರಿಸಿದ್ಧೇಶ್ವರ ಮಠದ ಜಾಗದಲ್ಲಿ ಅವಕಾಶ ಒದಗಿಸಲಾಗಿತ್ತು. ಮುಂದೆ ಆಂಗ್ಲರ ಆಳ್ವಿಕೆಯ ಕಾಲದಲ್ಲಿ ಅದೇ ರಸ್ತೆಯಲ್ಲೆ ತಾಲ್ಲೂಕು ಕಛೇರಿ ನಿರ್ಮಾಣವಾಗಿತ್ತು. ಈ ಎಲ್ಲಾ ಕಾರಣಗಳಿಗಾಗಿ ಆ ರಸ್ತೆಯನ್ನು ಓ.ಟಿ.ಸಿ. ರಸ್ತೆಯೆಂದು ಕರೆಯಲಾಗುತ್ತದೆ. (ನೋಡಿ : Revenue Commissioners Court Judgement Order No : 28-55-1911. dt: 15.12.1911. P. 91, 92)

8. ನೋಡಿ : ವೀರಭದ್ರಸ್ವಾಮಿ ದೇಗುಲದ ಇನಾಂತಿ ಪಟ್ಟೆ. ದಿ : ೮.೯.೧೮೭೫.

9. ಹಿಂದಿನ ಕಾಲದಲ್ಲಿ ಈ ದೇಗುಲದ ಮುಂಭಾಗದ ಆವರಣದಲ್ಲೆ ಅರಳೆವ್ಯಾಪಾರ ನಡೆಯುತ್ತಿತ್ತಂತೆ. ಅದಕ್ಕೆ ಸಾಕ್ಷಿ ಎಂಬಂತೆ ಈ ದೇಗುಲದ ಮುಂದೆ ದೊಡ್ಡ ದೊಡ್ಡ ಅರಳೆ ಬೇಲುಗಳನ್ನು ತೂಗುವ ತ್ರಾಸಿನ ಆಧಾರ ಸ್ತಂಭವಿದ್ದುದನ್ನು ಕಂಡವರು ಈಗಲೂ ಹೇಳುತ್ತಾರೆ.

10. Bangalore Town Municipal Commission House and Land Rate Bill. 1876-77 C.No. 163.

11. ಸ್ವಭಾನುನಾಮ ಸಂವತ್ಸರ (೧೮೨೩)ದ ದಾನಶಾಸನ ಪತ್ರ. ನರಗುಂದದೇವರ ಮಠ.

12. ಈ ದೇವಣಾಪುರವೇ ಈಗಿನ ದೇವನಹಳ್ಳಿ. ವಿಶ್ವಕೋಶದಲ್ಲಿ ಇದರ ಮೂಲ ಹೆಸರು ದೇವನದೊಡ್ಡಿ ಎಂದು ಗುರುತಿಸಲ್ಪಟ್ಟಿದೆ. (ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ. ಮೈಸೂರು ವಿಶ್ವವಿದ್ಯಾಲಯ.ಪು. ೭೭೫)

13. ಮೇಲ್ಕಂಡ ದಾಖಲೆಯಲ್ಲಿ ದೇವಣಾಪುರ ಧರ್ಮಸಿಂಹಾಸನಕ್ಕೆ ಕಾರಣಕರ್ತರಾದ ಪಟ್ಟದ ಪರುವತಸ್ವಾಮಿಗಳು ಎಂದು ಹೇಳಿರುವುದರಿಂದ ಸುಮಾರು ೧೭೫೦ರ ವೇಳೆಗೆ, ಮೊದಲ ಪರ್ವತಸ್ವಾಮಿಗಳಿಂದ ಆ ಮಠ ಪ್ರಾರಂಭವಾಗಿರಬೇಕೆಂದು ಊಹಿಸಬಹುದು. ಆದರೆ ಹುಣಸಮಾರನಹಳ್ಳಿಯ ಮಠದ ಪಟ್ಟದ ಪರ್ವತರಾಜ ಶಿವಾಚಾರ್ಯಸ್ವಾಮಿಗಳು ಹೇಳುವ ಪ್ರಕಾರ-ಕೆಂಪೇಗೌಡನ ಮೂಲ ಪುರುಷನಾದ ರಣಭೈರೇಗೌಡನ ಕಾಲ (೧೪ನೇ ಶತಮಾನ)ದಲ್ಲೇ ನಮ್ಮ ಮೂಲಗುರುಗಳು (?) ಅವನ ಕುಲಗುರುಗಳಾಗಿದ್ದರು. ಮುಂದೆ ಈತನ ಮನೆತನದ ಪಾಳೆಯಗಾರರು ನಮ್ಮ ಪೂರ್ವಿಕ ಗುರುಗಳಿಗೆ ಶಾಶ್ವತ ನೆಲೆಯನ್ನು ಒದಗಿಸಿ ಏಳು ಗ್ರಾಮಗಳ ಎಲ್ಲೆಕಟ್ಟುಗಳನ್ನು ವಹಿಸಿಕೊಟ್ಟು ದೇವಂಡಹಳ್ಳಿಯಲ್ಲಿ ಮಠವೊಂದನ್ನು ನಿರ್ಮಿಸಿಕೊಟ್ಟರು. ಹೀಗೆ ಗೌಡ ಮನೆತನದವರ ಕುಲಗುರುಗಳ ಕೇಂದ್ರವಾಗಿದ್ದ ಊರೇ ದೇವಣಾಪುರವಾಗಿ ಪ್ರಸಿದ್ಧಿಗೊಂಡಿದ್ದಿತು. ಈ ದೇವಣಾಪುರ ಧರ್ಮಸಿಂಹಾಸನವು ಕಾಲಾನಂತರದಲ್ಲಿ ಯಲಹಂಕ ನಾಡಪ್ರಭುಗಳ ಅಭ್ಯುದಯದ ಕಾಲಕ್ಕೆ (೧೬ನೆಯ ಶತಮಾನದಲ್ಲಿ) ಹುಣಸಮಾರನಹಳ್ಳಿಗೆ ವರ್ಗಾಯಿಸಲ್ಪಟ್ಟಿತು. ಮುಂದೆ ಮೈಸೂರಿನ ದೊರೆಗಳೂ ಕೂಡ ಹಿಂದೆ ನಮ್ಮ ಮಠಕ್ಕೆ ನೀಡಲಾಗಿದ್ದ ಎಲ್ಲಾ ಧಾರ್ಮಿಕ ಕೊಡುಗೆಗಳನ್ನು ಮುಂದುವರೆಸಿದರೆಂದು ವಿವರಿಸುತ್ತಾರೆ. (ಸಂದರ್ಶನದ ದಿನಾಂಕ : ೧೫.೬.೧೯೯೫)

14. ಶೂನ್ಯಪೀಠದ ವಿರಕ್ತ ಪರಂಪರೆಯಲ್ಲಿ ಬರುವ ಐದು ಪ್ರಮುಖ ಸಮಯ ಭೇದಗಳಲ್ಲಿ 'ಚೀಲಾಳಸಮಯ'ವೂ ಒಂದು. ಮೇಲ್ಕಂಡ ದಾಖಲೆಯಲ್ಲಿ ಚೀಲಾಳ ಪದಕ್ಕೆ 'ಕೌದಿಚರ' ಎಂಬ ವಿಶೇಷಣವು ಸೇರಿಕೊಂಡಿರುವುದನ್ನು ಗಮನಿಸಿದರೆ, ಬಹುಶಃ ಇದು ಚೀಲಾಳಸಮಯದ ಉಪಭೇದವಿರಬೇಕೆಂದು ಊಹಿಸಬಹುದು. ಚಿದಾನಂದಮೂರ್ತಿಯವರು ಚೀಲಾಳಯ್ಯ ಎಂಬುವರಿಂದ ಚೀಲಾಳ ಸಮಯ ಪ್ರಾರಂಭವಾಯಿತೆಂದು (ಹೊಸತು ಹೊಸತು. ಪು. ೩೧೯) ಹೇಳಿದರೆ ; ಚನ್ನಮಲ್ಲಿಕಾರ್ಜುನರು ಚೀಲಾಳಸಮಯದ ಮೂಲಗುರು ತೋಟದಸ್ವಾಮಿಗಳೆಂದು (ನಿರಂಜನ ವಂಶರತ್ನಾಕರ-೨. ಸದ್ಧರ್ಮದೀಪಿಕೆ ಸಂಚಿಕೆ. ಪು. ೮೫) ಹೇಳುತ್ತಾರೆ. ಬಹುಶಃ ಈ 'ಚೀಲಾಳ' ಎಂಬ ಪದವನ್ನು ಸ್ವಲ್ಪ ವ್ಯತ್ಯಾಸ ಮಾಡಿ 'ಚೇಲಾಳು' ಎಂದಿಟ್ಟುಕೊಂಡರೆ, ಈ ಸಮಯಭೇದಗಳ ಸಾಂದರ್ಭಿಕ ಅರ್ಥವು ಪರಿಪೂರ್ಣವಾಗುತ್ತದೆ. ಕನ್ನಡ ನಿಘಂಟಿನಲ್ಲಿ 'ಚೇಲ' ಎಂದರೆ 'ಶಿಷ್ಯ' ಅಥವಾ 'ಅನುಯಾಯಿ' ಎಂಬರ್ಥವಿದೆ. (ಕನ್ನಡ ನಿಘಂಟು. ಸಂಪುಟ-೩. ಪು. ೨೮೯೫) ಈ ಹಿನ್ನೆಲೆಯಲ್ಲಿ ಮುರಿಗಾ ಶಾಂತವೀರರ ಪರಮಾಪ್ತ ಶಿಷ್ಯನೂ, ಅನುಯಾಯಿಯೂ ಆಗಿದ್ದ ತೋಟದಸ್ವಾಮಿಯ ಸಮಯಭೇದವೇ 'ಚೇಲಾಳುಸಮಯ'ವಾಗಿರಬೇಕೆಂಬುದು ಹೆಚ್ಚು ಅರ್ಥಪೂರ್ಣವಾಗಿದೆ. ರೂಢಿಯಲ್ಲಿ 'ಚೇಲಾಳು' ಹೋಗಿ ಈಗ 'ಚೀಲಾಳ' ಆಗಿರಬಹುದು. ಬಹುಶಃ ಮುರಿಗಾ ಹೋಗಿ 'ಮುರುಘಾ' ಆದ ರೀತಿಯಲ್ಲಿ.

15. ಚಿತ್ರದುರ್ಗದ ಮುರಿಗಾ ಶಾಂತವೀರರ ಅಂತ್ಯಕಾಲ (ದಿ : ೭.೫.೧೭೦೩)ದಲ್ಲಿ ಅವರ ಉತ್ತರಾಧಿಕಾರತ್ವಕ್ಕಾಗಿ ನಡೆದ ಹೋರಾಟದಲ್ಲಿ ಸಿಡಿದು ಬಂದ ಸಮಯಭೇದಗಳಲ್ಲಿ ಚೀಲಾಳ ಸಮಯವೂ ಒಂದು. ಅಂದರೆ ಈ ಸಮಯ ಸರಿಸುಮಾರು ೧೭೦೩ರಲ್ಲೆ ಪ್ರಾರಂಭವಾಗಿ ಅದರ ಶಾಖೆಗಳು ನಾಡಿನ ನಾನಾಭಾಗಗಳಿಗೆ ಹಬ್ಬಿರಬೇಕು. ಮುಂದೆ ೧೭೫೦ರ ವೇಳೆಗೆ ಇದರ ಒಂದು ಶಾಖೆ ಬೆಂಗಳೂರಿನಲ್ಲೂ ಪ್ರಾರಂಭವಾಗಿದ್ದಿರಬೇಕು. ಈ ಸಂದರ್ಭದ ಇನ್ನೊಂದು ಮುಖ್ಯ ವಿಷಯವೇನೆಂದರೆ ಚೀಲಾಳಸಮಯದ ಮೂಲ ಗುರುಗಳ ಹೆಸರೂ ಮತ್ತು ನರಗುಂದದೇವರ ಮಠದ ಮೂಲಗುರುಗಳ ಹೆಸರೂ ಒಂದೇ ಆಗಿರುವುದು ಗಮನಾರ್ಹ.

16. ಬೆಂಗಳೂರು ಪಟ್ಟಣವು ಕ್ರಿ.ಶ. ೧೭೫೮ರಲ್ಲಿ ಹೈದರಾಲಿಗೆ ಜಹಗೀರಿಯಾಗಿ ಸಿಕ್ಕಿತು. ಮುಂದೆ ೧೭೬೧ ರಿಂದ ೧೭೯೯ರ ವರೆಗೆ ಹೈದರ್ ಮತ್ತು ಟಿಪ್ಪೂಗಳ ಆಳ್ವಿಕೆಯಲ್ಲಿ ಮುಸ್ಲಿಮೇತರರ ಧಾರ್ಮಿಕ ಔನ್ನತ್ಯವು ಕುಂಠಿತವಾದಂತೆ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ

ಮಠದ ಮೊದಲಿನ ಇಬ್ಬರು ಗುರುಗಳ ಕಾಲ (ಕ್ರಿ.ಶ. ಸು. ೧೭೫೦ರಿಂದ ೧೮೦೦)ದಲ್ಲಿ ತೋಟದದೇವರ ಮಠವು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರಲಿಕ್ಕೆ ಸಾಕು.

17. ತೋಟದದೇವರ ಮಠದ ಮೂರನೆ ಗುರುಗಳಾಗಿದ್ದ ಇಮ್ಮಡಿ ತೋಟದಸ್ವಾಮಿಗಳ ಕಾಲ ಸುಮಾರು ೧೮೦೦ ರಿಂದ ೧೮೩೨ ಎಂದಿಟ್ಟುಕೊಳ್ಳಬಹುದು. (ಏಕೆಂದರೆ ಕ್ರಿ.ಶ. ೧೮೩೩ರ ವೇಳೆಯ ಮುಮ್ಮಡಿ ತೋಟದಸ್ವಾಮಿಗಳ ಕಾಲದ ದಾಖಲೆ ಪತ್ರಗಳು ಲಭ್ಯವಾಗುತ್ತವೆ.) ಇವರ ಕಾಲಾವಧಿಯಲ್ಲಿ ಮೈಸೂರಿನ ಅರಸರಾಗಿದ್ದ ಮುಮ್ಮಡಿ ಕೃಷ್ಣರಾಜಒಡೆಯರು ೧೮೨೨ರಲ್ಲಿ ಬೆಂಗಳೂರಿನ ಬಹುತೇಕ ಮಠಗಳಿಗೆ ಭೂದಾನ ನೀಡಿದ ವಿವರಗಳು ಲಭ್ಯವಾಗಿವೆ. ಇಂತಹ ಸೌಲಭ್ಯ ಆ ಕಾಲಕ್ಕಾಗಲೇ ಹೆಸರುವಾಸಿಯಾಗಿದ್ದ ತೋಟದದೇವರ ಮಠಕ್ಕೂ ಲಭ್ಯವಾಗಿರಲೇ ಬೇಕು. ಆದರೆ ಈ ಸಂಬಂಧವಾದ ಯಾವ ಮಾಹಿತಿಯೂ ದೊರೆಯುವುದಿಲ್ಲ.

18. 'ಡಮಾಮಿ' ಎಂಬುದು ಒಂದು ಬಗೆಯ ರಣವಾದ್ಯ. ಯುದ್ಧದ ಕಾಲದಲ್ಲಿ ಬಾರಿಸುವ ಒಂದು ವಿಧದ ದೊಡ್ಡ ನಗಾರಿ. (ಕನ್ನಡ ನಿಘಂಟು. ಸಂ - ೩. ಕನ್ನಡ ಸಾಹಿತ್ಯ ಪರಿಷತ್ತು. ಪು. ೩೧೭೪) ಡಮಾಮಿ ಎಂಬುದು ಇಲ್ಲಿ ಇವರ ಮನೆತನದ ಸೂಚನೆಯಾಗಿದೆ.

19. ಈಗಲೂ ಸಾಕ್ಷಿಗೆಂಬಂತೆ ಆ ಭಾಗದಲ್ಲಿ ಎರಡು ಬಿಲ್ವ ವೃಕ್ಷಗಳು ಹಾಗೆಯೇ ಉಳಿದುಕೊಂಡು ಬಂದಿವೆ.

20. ಸ್ಥಳ-ಪರಸ್ಥಳದ ಶೆಟ್ಟಿ, ಯಜಮಾನರು ಬರೆದುಕೊಟ್ಟ ದಾನಶಾಸನ. ಸರ್ವಜಿತು ಸಂವತ್ಸರ. ಕ್ರಿ.ಶ. ೧೮೨೭ ಮತ್ತು ಈ ಮಠದ ನಾಲ್ಕನೆಯ ಗುರುಗಳಾಗಿದ್ದ ಮುಮ್ಮಡಿ ತೋಟದದೇವರು ಕಂದಾಯಾಧಿಕಾರಿಗಳಿಗೆ ಬರೆದುಕೊಂಡ ಮನವಿ ಪತ್ರ. ೧೮೪೪ರ ಕ್ರೋಧಿಸಂವತ್ಸರ.

21. ಮಠದ ದಾಖಲಾತಿಗಳ ಪ್ರಕಾರ ನರಗುಂದದ ಡಮಾಮಿಮುದುಕಪ್ಪನವರು ಕ್ರಿ.ಶ. ೧೮೩೦ರ ವೇಳೆಗೆ ಸ್ವದೇಶಕ್ಕೆ ತೆರಳಿಬಿಟ್ಟರು. ಮುಂದೆ ನರಗುಂದದಿಂದಲೇ ಅವರ ಮಕ್ಕಳಾಗಿದ್ದ ಡಮಾಮಿ ಬಸಪ್ಪ, ರುದ್ರಪ್ಪ ಮುಂತಾದವರು ಈ ಮಠದ ವಾರ್ಷಿಕ ಕಂದಾಯ ಇತ್ಯಾದಿ ಖರ್ಚುಗಳನ್ನು (೧೮೪೫ರ ವರೆಗೆ) ಭರಿಸುತ್ತಿದ್ದ ವ್ಯವಹಾರಪತ್ರಗಳಿವೆ.

22. ಸ್ಥಳ-ಪರಸ್ಥಳದ ಶೆಟ್ಟಿ, ಯಜಮಾನರು ಬರೆದುಕೊಟ್ಟ ದಾನಶಾಸನ. ಸರ್ವಜಿತು ಸಂವತ್ಸರ. ಕ್ರಿ.ಶ. ೧೮೨೭.

23. ಮುಮ್ಮಡಿ ತೋಟದದೇವರು ಬೆಂಗಳೂರು ಡಿವಿಜನ್ ಸೂಪರಿನ್‌ಟೆಂಡೆಂಟ್ ಅವರಿಗೆ ಬರೆದುಕೊಂಡ ಮನವಿ ಹಾಗೂ ಅದಕ್ಕೆ ಯಂಡಾರ್ಸ್. ನಂ : ೧೨೧. ದಿ : ೯.೮.೧೮೪೪.

24. ಹೊಸಕೋಟೆಯ ನಂಜುಂಡಯ್ಯ ಬರೆದುಕೊಟ್ಟ ಕರಾರು. ಸಾಧಾರಣ ಸಂವತ್ಸರ ಕ್ರಿ.ಶ. ೧೮೫೦ ಮತ್ತು ಇದೇ ಸಂವತ್ಸರದಲ್ಲಿ ಭೈರಮಂಗಲದ ಮಠದ ತೋಂಟದ ದೇವರು ತೀರಿಕೊಂಡಾಗ ತಯಾರಿಸಿದ್ದ ತಪಶೀಲುಪತ್ರ (೧೮೫೦)ಗಳು.

25. ನರಗುಂದದ ಸಾಹುಕಾರ್ ಸಿದ್ಧರಾಮಶೆಟ್ಟಿ, ವೀರಪ್ಪಹುಂಡೇಕಾರ, ಅಂದಾನಪ್ಪ ಕುಂದಗೋಳ ಮುಂತಾದವರು ಸಿದ್ಧಲಿಂಗದೇವರಿಗೆ ಬರೆದ ಪತ್ರ. ನಳನಾಮ ಸಂವತ್ಸರ. (೧೮೫೬)

26. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೫೪.

27. ಅರಳೆಪೇಟೆ ದೇಶದ ಕಳಸಪ್ಪಶೆಟ್ಟಿಯು ಕುಂಪಣಿ ಸರ್ಕಾರಕ್ಕೆ ಬರೆದುಕೊಂಡ ಮನವಿಪತ್ರ. ದಿ : ೧೬.೮.೧೮೮೦.

28. ಸಿದ್ಧಲಿಂಗದೇವರ ಕಾಲದ ಅನೇಕ ವ್ಯವಹಾರ ಪತ್ರಗಳು ಈ ಮೇಲಿನ ಸಂಗತಿಗಳನ್ನು ದೃಢಪಡಿಸುತ್ತವೆ. ಜೊತೆಗೆ ನೂತನ ಮಠದ ಕಟ್ಟಡ ನಿರ್ಮಾಣದ ಸಂದರ್ಭದಲ್ಲಿ ಸಿದ್ಧಲಿಂಗದೇವರು ಬರೆದಿರುವ ಖರ್ಚುಬಾಬ್ತುಗಳ ವಿವರಣಾ ಪಟ್ಟಿಗಳಿಂದಲೂ ಸಾಕಷ್ಟು ವಿಚಾರಗಳು ತಿಳಿದುಬರುತ್ತವೆ. (೧೮೭೪-೧೮೮೧)

29. ನರಗುಂದದ ಪಂಚಗೃಹದ ಗುಡ್ಡದ ಹಿರೇಮಠದ ಪಟ್ಟದ ಚನ್ನವೀರಯ್ಯನವರಿಗೂ, ಬೆಂಗಳೂರಿನ ನರಗುಂದದೇವರ ಮಠದ ಸಿದ್ಧಲಿಂಗದೇಶಿಕೇಂದ್ರರಿಗೂ ಸಾಕಷ್ಟು ಪತ್ರವ್ಯವಹಾರಗಳು ನಡೆದಿದ್ದುದಕ್ಕೆ ಸಾಕ್ಷಿಯಾಗಿ ಈಗಲೂ ಆ ಪತ್ರಗಳಿವೆ.

30. ಈ ಲೆಕ್ಕಾಚಾರವನ್ನು ಮಾಡಲು ಮುನಿಸಿಪಲ್ ಕಂದಾಯದ ರಸೀತಿಗಳು ನೆರವಾಗುತ್ತವೆ. (C.R.No:53/1448. 1880-81)

31. ಸಿದ್ಧಲಿಂಗಸ್ವಾಮಿಗಳು ದೇಶಸಂಚಾರದಲ್ಲಿದ್ದಾಗ ಬಸವರಾಜಸ್ವಾಮಿಗಳಿಗೆ ಬರೆದ ಪತ್ರಗಳು.

32. ಕಗ್ಗಲಿಪುರದ ಚನ್ನವೀರಯ್ಯನು ಬರೆದುಕೊಟ್ಟ ಕರಾರು ಪತ್ರ. ದಿ : ೨೩.೩.೧೯೦೭.

33. ಕ್ರಯಪತ್ರ: Rg. No : 2831. Vol- No : 238. Dt : 6.2.1896.

34. ಕ್ರಯಪತ್ರ : Rg. No : 147. vol-No : 36. Dt : 23.7.1901

35. ಶಾಲ್ಯದ ರುದ್ರಪ್ಪನು ಬಸಪ್ಪಸ್ವಾಮಿಗಳಿಗೆ ಬರೆದ ಪತ್ರ . ದಿ : ೪.೯.೧೯೦೪.

36. ಗೊಂಡೇದಹಳ್ಳಿ ವಿಭೂತಿನಾಗಯ್ಯನ ಪತ್ರ. ದಿ : ೨೨.೬.೧೯೦೭.

37. ಚಿದ್ಘನಸ್ವಾಮಿಗಳ ಪತ್ರ. ದಿ : ೯.೧೧.೧೯೦೯.

38. ಭೈರಮಂಗಲದ ಮಲ್ಲಪ್ಪನ ಕರಾರುಪತ್ರ. ದಿ : ೯.೮.೧೯೦೯.

39. ಸಂಸ್ಕೃತ ಪಾಠಶಾಲೆಗೆ ಸೇರಲು ಬಯಸುವವರಿಗೆ ಸೂಚನಾ ಕೈಚೀಟಿ. (ಮುದ್ರಿತ) ದಿ : ೨೬.೬.೧೯೨೪.

40. Muzrai File No : 317/1920. Sl. No : 1-4. P.8.

41. ಟ್ರಸ್ಟ್ ಡೀಡ್ ಪತ್ರ. Rg. No: 223. vol. No : 54. P.276-279. Dt: 9.8.1923. P. 2.

42. ಟಿ.ಆರ್. ಮಹಾದೇವಯ್ಯ. (ಸಂ) ಧರ್ಮದೀಪ್ತಿ. (೧೯೮೨) ಪು. ೨-೫.

43. ನಗರ ಭೂ ಸರ್ವೇಕ್ಷಣಾ ದಾಖಲೆ. ಸ್ಥಳೀಯ ಕ್ಷೇತ್ರ ಸಂಖ್ಯೆ:೮೧ಎ. ಚಿಕ್ಕಪೇಟೆ, ವಾಲ್ಯುಂ. ನಂ:೧-೬:ಕ್ರ.ಸಂ. ೪೭೨ ಮತ್ತು ೫೨೯.

## ೨.೫. ಇತರೆ ವಿರಕ್ತಮಠಗಳು

ಬೆಂಗಳೂರು ಪಟ್ಟಣದಲ್ಲಿ ಇದ್ದಿರುವ ಅನೇಕ ವೀರಶೈವ ವಿರಕ್ತಮಠಗಳ ಪರವಾಗಿ ಕೆಲವು ಮಠಗಳು ಖಚಿತವಾಗಿ ಯಾವ ಸಮಯಭೇದಕ್ಕೆ ಸೇರಿದವು ಎಂಬುದನ್ನು ಗುರುತಿಸಲು ಸಾಧ್ಯವಾಗಿಲ್ಲ. ಅಂತಹ ಮಠಗಳನ್ನು ಕುರಿತು ಇತರೆ ವಿರಕ್ತಮಠಗಳು ಎಂಬ ಶೀರ್ಷಿಕೆಯಲ್ಲಿ ಪಟ್ಟಿಮಾಡಿ, ಪರಿಶೀಲನೆಗೆ ಒಳಪಡಿಸ ಲಾಗಿದೆ. ಅವುಗಳಾವುವೆಂದರೆ-

೧. ಸಪ್ಪಣ್ಣಸ್ವಾಮಿಮಠ. ಬಳೆಬಾಗಿಲು.
೨. ಶಂಕರದೇವರಮಠ. ಮನೆವಾರ್ತೆಪೇಟೆ.
೩. ಮೇಲಿನಮಠ. ಸುಂಕೇನಹಳ್ಳಿ.
೪. ಕೆಳಗಿನಮಠ. ಸುಂಕೇನಹಳ್ಳಿ.
೫. ಗಂಗಶೆಟ್ಟಿಮಠ. ಕೆಂಪಾಪುರ.
೬. ಗವಿಮಠ. ಸಿದ್ಧರಾಮನದಿಣ್ಣೆ.
೭. ರುದ್ರಾರಾಧ್ಯರ ಚೌಕಿಮಠ. ಮಾಮೂಲುಪೇಟೆ.
೮. ಮೂಲೆಮಠ. ಮಾಮೂಲುಪೇಟೆ.
೯. ಹೊಸಮಠ. ಅರಳೆಪೇಟೆ.
೧೦. ಅಲಸೂರಿನ ಜಂಗಮಮಠ.
೧೧. ಅಲಸೂರಿನ ಸಾಲಿಮಠ.
೧೨. ಅಲಸೂರಿನ ಹಾಲಿನಬೀದಿಮಠ.
೧೩. ಅಲಸೂರಿನ ಶಿವಾನುಭವಮಠ.
೧೪. ಜಂಗಮಮಠ. ದೊಡ್ಡಕುಂಟೆ ಗ್ರಾಮ.
೧೫. ದಂಡಿನ ಮಹಾಲಿಂಗೇಶ್ವರಸ್ವಾಮಿ ಗದ್ದುಗೆಮಠ.
೧೬. ದಂಡಿನ ನಂಜುಂಡಸ್ವಾಮಿ ಗದ್ದುಗೆಮಠ.

ಈ ಮೇಲ್ಕಂಡ ಮಠಗಳ ಪರವಾಗಿ ಸರ್ಪಭೂಷಣ ಶಿವಯೋಗಿಗಳು ಸ್ಥಾಪಿಸಿದ್ದ ಸಪ್ಪಣ್ಣಸ್ವಾಮಿ ಮಠವಂತೂ ಅದ್ಭುತವಾದ ಚಾರಿತ್ರಿಕ ಹಿನ್ನೆಲೆಯನ್ನು ಒಳಗೊಂಡಿದೆ. ಮೇಲಾಗಿ ಈ ಹೊತ್ತಿಗೂ ಕೂಡ ಆ ಮಠವು ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿ ಬೆಂಗಳೂರಿನ ಜನತೆಯ ಕಣ್ಮಣಿಯಾಗಿದೆ. ಇದರ ಜೊತೆಗೆ ಶಂಕರದೇವರಮಠ ಹಾಗೂ ಸುಂಕೇನಹಳ್ಳಿಯ ಮಠಗಳೂ ಕೂಡ ಇಂದಿಗೂ ತಮ್ಮ ಧಾರ್ಮಿಕ ಅಸ್ತಿತ್ವವನ್ನು ಉಳಿಸಿಕೊಂಡು ಬರುವಲ್ಲಿ ಯಶಸ್ವಿಯಾಗಿವೆ. ಇನ್ನುಳಿದ ಮಠಗಳಲ್ಲಿ ಅಲಸೂರಿನ ಶಿವಾನುಭವಮಠವೊಂದನ್ನು ಬಿಟ್ಟು ಉಳಿದ ಎಲ್ಲಾ ಮಠಗಳೂ ಸಂಪೂರ್ಣ ಅವಸಾನದ ಸ್ಥಿತಿಯನ್ನು ಮುಟ್ಟಿವೆ. ಅದರಲ್ಲೂ ಗಂಗಶೆಟ್ಟಿಮಠ, ರುದ್ರಾರಾಧ್ಯರ ಚೌಕಿಮಠ ಹಾಗೂ ಮೂಲೆಮಠ ಇವುಗಳ ಹೆಸರೇ ಇಂದು ಅಪರಿಚಿತವಾಗಿಬಿಟ್ಟಿವೆ.

ಪ್ರಸ್ತುತ ಶೀರ್ಷಿಕೆಯ ಅಡಿಯಲ್ಲಿ ಬರುವ ವೀರಶೈವ ವಿರಕ್ತಮಠಗಳನ್ನು ಕುರಿತು ವಿಪುಲವಾದ ಮಾಹಿತಿಗಳನ್ನಾಧರಿಸಿ ಅವುಗಳ ಐತಿಹಾಸಿಕ ಪರಂಪರೆಯನ್ನು ವಿಸ್ತೃತವಾಗಿ ವಿಶ್ಲೇಷಿಸಲಾಗಿದೆ.

### ೧. ಸಪ್ಪಣ್ಣಸ್ವಾಮಿಮಠ, ಬಳೆಬಾಗಿಲು ( ಸರ್ಪಭೂಷಣ ಮಠ, ಕೆಂಪೇಗೌಡವೃತ್ತ )

ಬೆಂಗಳೂರು ರೈಲು ನಿಲ್ದಾಣದ ಮುಂಭಾಗದ ಪ್ರದೇಶವೆಲ್ಲಾ ಇಂದು ವಿಶಾಲವಾದ ನಗರ ಬಸ್‌ನಿಲ್ದಾಣವಾಗಿ ಪರಿವರ್ತನೆಯಾಗಿಬಿಟ್ಟಿದೆ. ದಿನ ನಿತ್ಯ ಇಲ್ಲಿ ಬಂದು ಹೋಗುವ ಸಾವಿರಾರು ಮೋಟಾರು ವಾಹನಗಳು ಹಾಗೂ ಲಕ್ಷಾಂತರ ಮಂದಿ ಜನ ಪ್ರವಾಹದೊಂದಿಗೆ, ತನ್ನ ಮೂಲಸ್ವರೂಪವನ್ನೇ ಸಂಪೂರ್ಣವಾಗಿ ಮರೆಮಾಚಿರುವ ಈ ಭಾಗವು, ಹಿಂದೆ ಅಷ್ಟೇ ಸಮೃದ್ಧವಾದ ಕೆರೆಯಾಗಿತ್ತು ಎಂದರೆ ಆಶ್ಚರ್ಯ ಪಡಬೇಕಾಗಿಲ್ಲ. ನಾಡಿನ ಧರ್ಮಪ್ರಭುವೆಂದೇ ಹೆಸರಾಗಿದ್ದ ಹಿರಿಯ ಕೆಂಪೇಗೌಡನು ನಿರ್ಮಿಸಿದ ಈ ಕೆರೆಯನ್ನು 'ಧರ್ಮಾಂಬುಧಿಕೆರೆ'[1] ಅಥವಾ 'ದೊಡ್ಡಕೆರೆ' ಎಂದೇ ಹಳೆಯ ತಲೆಮಾರಿನ ಜನರು ಈಗಲೂ ಗುರುತಿಸುತ್ತಾರೆ. ಹಿಂದೆ ಕೆರೆಗೆ ಪೂರ್ವಭಾಗದ ಏರಿಯ ಹಿಂಬದಿಗೂ ಬೆಂಗಳೂರಿನ ಕೋಟೆಯ ಉತ್ತರಭಾಗದಲ್ಲಿದ್ದ ಬಳೆಯಬಾಗಿಲಿನ[2] ಮುಂಬದಿಗೂ ನಡುವಿನ ಬಯಲಿನಲ್ಲಿ ಒಂದು ವಿರಕ್ತಮಠವಿತ್ತು. ಅದೇ 'ಸಪ್ಪಣ್ಣಸ್ವಾಮಿಮಠ'. ಅರ್ಥಾತ್ ಈಗಿನ ಸರ್ಪಭೂಷಣ ಮಠ. ೧೯ನೆಯ ಶತಮಾನದ ಅಂತ್ಯದ ವೇಳೆಗೆ ಈ ಮಠದ ಸುತ್ತ ಆಳೆತ್ತರದ ಗೋಡೆಗಳಿದ್ದವು. ಪೂರ್ವದಿಕ್ಕಿನ ದ್ವಾರದ ಮೇಲ್ಭಾಗದಲ್ಲಿ ಒಂದು ದೊಡ್ಡಬಸವನ ಪ್ರತಿಮೆ ಇರಿಸಲಾಗಿತ್ತು. ಅದರ ಕೆಳಭಾಗದಲ್ಲಿ "ಶ್ರೀ ಸಪ್ಪಣ್ಣ ಸ್ವಾಮಿಮಠ, ಚಿಕ್ಕಮಗಳೂರು ಬಸವೇಗೌಡನ ಧರ್ಮ" ಎಂಬುದಾಗಿ ಬರೆಯಲ್ಪಟ್ಟಿತ್ತು.[3] ಇದು ಈಗಿನ ಸರ್ಪಭೂಷಣಮಠದ ಕನಿಷ್ಠ ಒಂದು ಶತಮಾನದಷ್ಟು ಹಳೆಯ ಚಿತ್ರಣ.

ಇಂದು ನಗರದ ಕೇಂದ್ರಬಿಂದುವಿನಂತಿರುವ ಕೆಂಪೇಗೌಡ ವೃತ್ತದ ಬಳಿ ನಿಂತರೆ, ಅಜ-ಗಜಾಂತರ

ವ್ಯತ್ಯಾಸಗಳಾಗಿಬಿಟ್ಟಿವೆ. ಈ ವೃತ್ತದ ಪಶ್ಚಿಮ ಪಾರ್ಶ್ವಕ್ಕೆ ಹಬ್ಬಿ ನಿಂತಿರುವ ಬೃಹತ್ ವ್ಯಾಪಾರಿ ಸಮುಚ್ಚಯಗಳ ನಡುವೆಯೂ ಸರ್ಪಭೂಷಣಮಠ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ಒಂದು ದೊಡ್ಡ ಸಾಹಸದ ಕಥೆಯಾಗಿದೆ. ಮಠದ ಮೂಲ ಕರ್ತರಾಗಿದ್ದ ಸರ್ಪಭೂಷಣ ಶಿವಯೋಗಿಗಳ ತಪೋಭೂಮಿಯೂ, ಸಾಧನಾ ಕ್ಷೇತ್ರವೂ ಆಗಿದ್ದ ಈ ಸ್ಥಳ, ಇಂದಿಗೂ ಭಕ್ತಜನರ ಪವಿತ್ರ ಭಾವನೆಗಳಿಗೆ ಆರಾಧನಾ ಕೇಂದ್ರವಾಗಿಯೇ ಉಳಿದು ಬಂದಿದೆ.

ಸರ್ಪಭೂಷಣ ಶಿವಯೋಗಿಗಳ ಕಾಲ (೧೮೪೫)ದಲ್ಲಿ ಸ್ವತಃ ಅವರಿಂದಲೇ ಪ್ರಾರಂಭವಾದ ಈ ಮಠಕ್ಕೆ 'ಸರ್ಪಭೂಷಣಮಠ' ಎಂಬ ಹೆಸರು ಪ್ರಚಲಿತವಾಗಿದೆ. ಸರ್ಪಭೂಷಣರ ಜೀವನ ಚರಿತ್ರೆಯನ್ನು ಬರೆದಿರುವ ಮಲ್ಲಾಬಾದಿ ವೀರಭದ್ರಪ್ಪನವರೂ ಕೂಡ ಇದೇ ಅಭಿಪ್ರಾಯಕ್ಕೆ ಒತ್ತುಕೊಟ್ಟಿದ್ದಾರೆ.[4] ಆದರೆ ಮಠದ ಕೆಲವು ಮೂಲ ದಾಖಲೆಗಳನ್ನು ಪರಿಶೀಲಿಸಿದಾಗ ಇದಕ್ಕೂ ಮೊದಲು 'ಓಂಕಾರೇಶ್ವರ ಗದ್ದುಗೆಮಠ'[5], 'ಕೆರೆನಂಜುಂಡಯ್ಯನಮಠ'[6] ಎಂಬ ಹೆಸರುಗಳೂ ಇದ್ದುದಾಗಿ ತಿಳಿದು ಬರುತ್ತದೆ. ಮಠದ ಆವರಣದ ಒಳಗೆ ಓಂಕಾರೇಶ್ವರನಗುಡಿಯು ಈಗಲೂ ಪ್ರಧಾನವಾದ ದೇಗುಲವಾಗಿದೆ. ಇದು ಉತ್ತರಾಭಿಮುಖವಾಗಿದ್ದು ಗರ್ಭಗುಡಿಯಲ್ಲಿ ಶಿವಲಿಂಗಮೂರ್ತಿಯನ್ನು ಇರಿಸಲಾಗಿದೆ. ಬಹುಶಃ ಇದು ಮೂಲತಃ ಗದ್ದುಗೆಯೇ ಆಗಿದ್ದು ಸರ್ಪಭೂಷಣರ ಕಾಲದಲ್ಲಿ ದೇವಾಲಯದ ಸ್ವರೂಪವನ್ನು ಪಡೆದಿರುವಂತಿದೆ. ಅಂದರೆ ೧೮೦೦ರ ವೇಳೆಗಾಗಲೇ ಇಲ್ಲೊಂದು ಮಠವಿತ್ತು ಎಂಬ ವಿಚಾರ ಸ್ಪಷ್ಟವಾಗುತ್ತದೆ.

೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಬೆಂಗಳೂರಿನ ಒಳಭಾಗದಲ್ಲಿದ್ದ ಬಹುತೇಕ ಮಠಗಳೆಲ್ಲಾ ವೀರಶೈವರ ರುದ್ರಭೂಮಿಗಳೂ ಆಗಿದ್ದವು. ಹಿಂದೆ ವೀರಶೈವರ ಮನೆತನಗಳವರಲ್ಲಿ ಸಾವಾದರೆ ಶವಗಳನ್ನು ಅವರಿಗೆ ಸಂಬಂಧಪಟ್ಟ ಮಠಗಳ ಆವರಣಗಳಲ್ಲೇ ಅಂತ್ಯಕ್ರಿಯೆ ನಡೆಸಲಾಗುತ್ತಿತ್ತು.[7] ಅದೇರೀತಿ ಸರ್ಪಭೂಷಣರಿಗಿಂತ ಮೊದಲು ಈ ಮಠವು 'ಸ್ಥಳಬಣಜಿಗರ' (ವೀರಶೈವರಲ್ಲಿ ಒಂದು ಉಪಜಾತಿ) ರುದ್ರಭೂಮಿಯೂ ಆಗಿತ್ತು. ಸ್ಥಳಬಣಜಿಗರ ಮುಖಂಡನಾಗಿದ್ದ ಕೆಂಪುನೂಲು ನಂಜುಂಡಯ್ಯನೆ ಇದರ ಮುಖ್ಯಸ್ಥನಾಗಿದ್ದ. ದೊಡ್ಡಕೆರೆ (ಧರ್ಮಾಂಬುಧಿಕೆರೆ)ಗೆ ಸಮೀಪದಲ್ಲೂ, ಕೆಂಪುನೂಲು ನಂಜುಂಡಯ್ಯನ[8] ಯಜಮಾನಿಕೆಯಲ್ಲೂ ಈ ಮಠವಿದ್ದುದರಿಂದ 'ಕೆರೆನಂಜುಂಡಯ್ಯನಮಠ'ವೆಂದು ಕರೆಯುವುದು ರೂಢಿಯಲ್ಲಿತ್ತು.[9] ಪೂರ್ವದಲ್ಲಿ ಓಂಕಾರಪ್ಪ ಎಂಬುವರು ಈ ವರ್ಗದ ಜನತೆಗೆ ಗುರುಗಳಾಗಿದ್ದಿರಬೇಕು. ಇವರ ಗದ್ದುಗೆಯೇ ಈಗಿನ ಓಂಕಾರೇಶ್ವರನ ಗುಡಿ ಇದ್ದಿರಬೇಕು.

ಸರ್ಪಭೂಷಣರ ವಂಶಸ್ಥರ ಮೂಲಸ್ಥಳ ಬೆಂಗಳೂರಿಗೆ ಸಮೀಪದ ಬಾಣಾವರ ಗ್ರಾಮ. ಹೆಸರುಘಟ್ಟ ಮಾರ್ಗದಲ್ಲಿರುವ ಈ ಗ್ರಾಮವನ್ನು ಈಗ ಚಿಕ್ಕಬಾಣಾವರ[10] ಎಂದು ಕರೆಯಲಾಗುತ್ತದೆ. ತಂದೆ ಮಲ್ಲಿಕಾರ್ಜುನಪ್ಪ ತಾಯಿ ಮಹಾದೇವಮ್ಮ. ಈ ಪುಣ್ಯದಂಪತಿಗಳು ೧೮ನೆಯ ಶತಮಾನದ ಉತ್ತರಾರ್ಧ ದಲ್ಲಿ ವ್ಯಾಪಾರದ ನಿಮಿತ್ತ ಬೆಂಗಳೂರಿನ ಮಾಮೂಲು ಪೇಟೆಗೆ ಬಂದು ನೆಲೆಸಿದ್ದರು.[11] ಇವರ ನಾಲ್ವರು ಪುತ್ರರಲ್ಲಿ ಎರಡನೆಯ ಮಗನೇ ಸಪ್ಪಯ್ಯ ಅಥವಾ ಸಪ್ಪಣ್ಣ.[12] ಈ ಸಪ್ಪಣ್ಣನೇ ನಮ್ಮ ಮುಂದಿನ 'ಸರ್ಪಭೂಷಣ[13] ಶಿವಯೋಗಿ'. ಕವಿಚರಿತ್ರಕಾರರು ಇವರ ಕಾಲವನ್ನು ಸುಮಾರು ಕ್ರಿ.ಶ. ೧೭೦೦ ಎಂದು ಗುರುತಿಸಿದ್ದಾರೆ.[14] ಮಲ್ಲಾಬಾದಿ ವೀರಭದ್ರಪ್ಪನವರು ಮತ್ತು ಡಾ। ಎಚ್. ತಿಪ್ಪೇರುದ್ರಸ್ವಾಮಿಯವರು ಸರ್ಪಭೂಷಣರ ಕಾಲವನ್ನು ಕ್ರಿ.ಶ. ೧೭೯೫ರಿಂದ ೧೮೪೫ ಎಂಬುದಾಗಿ ಗುರುತಿಸಿದ್ದಾರೆ.[15] ಮಠದ ದಾಖಲೆಗಳಾಗಲಿ ಅಥವಾ ಸರ್ಪಭೂಷಣರ ಕೃತಿಗಳಾಗಲಿ ನೇರವಾಗಿ ಅವರ ವೈಯಕ್ತಿಕ ವಿಚಾರಗಳಿಗೆ ಸಂಬಂಧಿಸಿದಂತೆ ಏನೊಂದು ಮಾಹಿತಿಯನ್ನೂ ಕೊಡಲಾರದವಾಗಿವೆ. ಆದರೆ ಸರ್ಪಭೂಷಣರ ನಂತರದ ಗುರುಗಳಾಗಿದ್ದ ಫಾಲಲೋಚನ ಸ್ವಾಮಿಗಳ ಕಾಲದ ೧೮೪೭ರ 'ಸಮಾಖ್ಯಪತ್ರ' ಹಾಗೂ ಗುರುಸ್ವಾಮಿಗಳ ಕಾಲದ ಕೆಲವು ದಾಖಲೆಪತ್ರಗಳು ಇವರ ಕಾಲಕ್ಕೆ ಸಂಬಂಧಿಸಿದಂತೆ ಹಲವು ಪೂರಕ ಮಾಹಿತಿಗಳನ್ನು ಸಂಗ್ರಹಿಸಿಕೊಡುವಲ್ಲಿ ನೆರವಾಗಿವೆ. ಅಲ್ಲದೆ ಇವು ಮೇಲ್ಕಂಡ ವಿದ್ವಾಂಸರುಗಳು ಗುರುತಿಸಿರುವ ಕಾಲ ನಿರ್ಣಯಕ್ಕೆ ಪೋಷಕವಾಗಿಯೇ ಇವೆ. ಆದ್ದರಿಂದ ಸರ್ಪಭೂಷಣರ ಜೀವಿತ ಕಾಲವನ್ನು ಮೇಲಿನ ವಿದ್ವಾಂಸರುಗಳು ಗುರುತಿಸಿರುವಂತೆ ಕ್ರಿ.ಶ. ೧೭೯೫ ರಿಂದ ೧೮೪೫ ಎಂದೇ ಇಟ್ಟುಕೊಳ್ಳುವುದು ಉಚಿತವಾಗಿದೆ.

೧೯ನೆಯ ಶತಮಾನದ ಆದಿಭಾಗದಲ್ಲಿ ಬೆಂಗಳೂರಿನ

ಹನುಮಂತಪುರ ಗ್ರಾಮ (ಈಗಿನ ಗಾಂಧಿನಗರ) ದಲ್ಲಿದ್ದ ತಿಪ್ಪಶೆಟ್ಟಿ (ಜಂಗಮ) ಮಠವು ವೀರಶೈವ ವಿರಕ್ತಮಠಗಳಿಗೆ ವೈದಿಕ ಶಿಕ್ಷಣ ನೀಡುವ ಪ್ರಸಿದ್ಧ ಕೇಂದ್ರವಾಗಿತ್ತು.[16] ಆಗ ಮಠದ ಗುರುಗಳಾಗಿದ್ದ ಸೋಲೂರು ಬುಡಕಟ್ಟಿನ ಸಮಯದ ಗುರುಸಿದ್ಧಸ್ವಾಮಿಗಳು[17] ಉತ್ತಮ ಶಿವಜ್ಞಾನಿಗಳೂ ದಿವ್ಯ ತಪೋಧನರೂ ಆಗಿದ್ದರು. ಇಂತಹ ಸದ್ಗುರುವಿನ ಕೃಪೆಗೆ ಪಾತ್ರನಾದ ಸಪ್ಪಣ್ಣನಿಗೆ ಬಾಲ್ಯದಿಂದಲೂ ಅವರ ಮಠದಲ್ಲಿಯೇ ಶಿಕ್ಷಣ ದೊರೆಯಿತು. ಸೂಕ್ಷ್ಮಮತಿಯೂ, ಚುರುಕಿನ ಸ್ವಭಾವ ದವನೂ ಆಗಿದ್ದ ಸಪ್ಪಣ್ಣ ಚಿಕ್ಕಂದಿನಿಂದಲೂ ಗುರುಗಳ ಮೆಚ್ಚಿನ ಶಿಷ್ಯನಾಗಿದ್ದ. ಮುಂದೆ ಪ್ರಾಪ್ತವಯಸ್ಕನಾಗಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಪಾರಂಗತನಾದಾಗ ಗುರುಗಳು ಸಪ್ಪಣ್ಣನಿಗೆ ವಿರಕ್ತಾಶ್ರಮ ದೀಕ್ಷೆಯನ್ನು ಅನುಗ್ರಹಿಸಿ ಸರ್ಪಭೂಷಣನೆಂದು ನೂತನ ನಾಮಕರಣ ಮಾಡಿದರು.[18]

ಮಲ್ಲಾಬಾದಿಯವರ ಪ್ರಕಾರ ಸರ್ಪಭೂಷಣರು ಇಪ್ಪತ್ತರ ತಾರುಣ್ಯಾವಸ್ಥೆಯಲ್ಲಿದ್ದಾಗ ಗುರುಗಳ ಅನುಮತಿ ಪಡೆದು ದೇಶ ಸಂಚಾರ ಕೈಗೊಂಡರು. ನಾಡಿನ ಪವಿತ್ರಕ್ಷೇತ್ರಗಳನ್ನೆಲ್ಲಾ ಸಂದರ್ಶಿಸಿ ಕಾಶಿಯವರೆಗೂ ಯಾತ್ರೆ ಮಾಡಿ ಬಂದ ಇವರು ಹನ್ನೆರಡು ವರ್ಷಗಳ ನಂತರ ಮತ್ತೆ ಸ್ವಕ್ಷೇತ್ರಕ್ಕೆ ಮರಳಿ ಬಂದರು. ೧೮೧೬ರ ವೇಳೆಗೆ ಪ್ರಾರಂಭವಾದ ಇವರ ದೇಶ ಸಂಚಾರ, ೧೮೨೮ಕ್ಕೆ ಮುಕ್ತಾಯವಾಗಿದೆ. ಅದೇ ವರ್ಷವೇ ಗುರುಸಿದ್ಧ ಗುರುಗಳು ಶಿವಾಧೀನರಾದಾಗ ಸರ್ಪಭೂಷಣರು ತಮ್ಮ ಅನುಪಸ್ಥಿತಿಯಲ್ಲಿ ಗುರುಗಳ ಸೇವೆಗೈದಿದ್ದ ಚಿಕ್ಕ(ಇಮ್ಮಡಿ) ಗುರುಸಿದ್ಧ ಸ್ವಾಮಿಗಳಿಗೆ ತಿಪ್ಪಶೆಟ್ಟಿ ಮಠದ ಜವಾಬ್ದಾರಿಯನ್ನು ವಹಿಸಿ, ತಾವು ಗ್ರಂಥಾವ ಲೋಕನದಲ್ಲಿ ಮಗ್ನರಾದುದಾಗಿ ತಿಳಿಸಲಾಗಿದೆ.[19]

ಈ ಸಂದರ್ಭದ ಘಟನಾವಳಿಗೆ ಸಂಬಂಧಿಸಿದಂತೆ ಬೆಂಗಳೂರಿನ ಮಠಾಧಿಪತಿಗಳಲ್ಲಿ ಹಾಗೂ ಭಕ್ತವಲಯದಲ್ಲಿ ಒಂದು ದಟ್ಟವಾದ ವದಂತಿ ಇದೆ. ವದಂತಿಯ ಸೂಕ್ಷ್ಮ ಎಳೆಗಳನ್ನು ಪರಿಶೀಲಿಸಿದಾಗ ವಾಸ್ತವ ಸಂಗತಿಯೇ ಬೇರೆ ಎಂಬುದು ಮನದಟ್ಟಾಗುತ್ತದೆ. ಇಲ್ಲಿ ತಿಪ್ಪಶೆಟ್ಟಿಮಠದ ಗುರುಸಿದ್ಧಯತಿವರರ ಪರಮಾಪ್ತ ಶಿಷ್ಯರಾಗಿದ್ದ ಸರ್ಪಭೂಷಣರೇ ತಮ್ಮ ಮುಂದಿನ ಉತ್ತರಾಧಿಕಾರಿಗಳಾಗಬೇಕೆಂಬ ಗುರುವಿನ ಆಣತಿ ಈಡೇರಲಿಲ್ಲ. ಇದು ಇಲ್ಲಿನ ಸಂದಿಗ್ಧತೆಯ ಗುಟ್ಟು. ಸರ್ಪಭೂಷಣರು ದೇಶಸಂಚಾರ ಕೈಗೊಂಡರು ಎನ್ನುವುದಕ್ಕಿಂತ, ಬೇಸರದಿಂದ ಬೆಂಗಳೂರನ್ನು ಕೆಲವುಕಾಲ ತೊರೆದಿದ್ದರು ಎನ್ನುವುದು ವಾಸ್ತವವಾದೀತು. ಏಕೆಂದರೆ ಬೆಂಗಳೂರಿನ ಪೇಟೆ ಶೆಟ್ಟಿ ಯಜಮಾನರುಗಳು ಇವರನ್ನು ತಿಪ್ಪಶೆಟ್ಟಿಮಠದ ಮುಂದಿನ ಉತ್ತರಾಧಿಕಾರಿಗಳಾಗಲು ಸಮ್ಮತಿಸಲಿಲ್ಲ.[20] ಕಾರಣ ಇವರು ಜಂಗಮೇತರ ಜಾತಿಯವರಾಗಿದ್ದು, ಆಗ ವೀರಶೈವ ಉಪಜಾತಿಗಳವರಿಗೆ ಮಠಾಧಿಪತಿಗಳಾಗುವ ಅಧಿಕಾರವಿರಲಿಲ್ಲ.[21]

ಡಾ॥ ಎಂ.ಚಿದಾನಂದಮೂರ್ತಿಯವರು ಸರ್ಪ ಭೂಷಣರು 'ಬಣಜಿಗ'ರೆಂದು ಗುರುತಿಸಿದ್ದಾರೆ[22], ಸರ್ಪ ಭೂಷಣರ ವಂಶಸ್ಥರು ತಾವು 'ಜಂಗಮ'ರೆಂದು ಹೇಳಿಕೊಳ್ಳುತ್ತಾರೆ.[23] ಇನ್ನು ಸರ್ಪಭೂಷಣರ ವಂಶಸ್ಥರ ಮೂಲ ಸ್ಥಳವಾದ ಚಿಕ್ಕಬಾಣಾವರದಲ್ಲಿ ವಿಚಾರಿಸಿದರೆ ಇವರು 'ಲಾಳಗೊಂಡ ಲಿಂಗಾಯತ'ರೆಂದು ತಿಳಿದು ಬರುತ್ತದೆ.[24] ಲಾಳಗೊಂಡರದು ಜಂಗಮೇತರ ಲಿಂಗಾಯತ ಉಪಜಾತಿಗಳಲ್ಲಿ ಒಂದು ಪಂಗಡ.[25] ಬಹುಶಃ ಈ ಕಾರಣಕ್ಕಾಗಿಯೇ ಬೆಂಗಳೂರಿನ ಪೇಟೆ ಶೆಟ್ಟಿ, ಯಜಮಾನರುಗಳು ಸರ್ಪಭೂಷಣರನ್ನು ಮಠಾಧಿಪತ್ಯ ವಹಿಸಿಕೊಳ್ಳಲು ವಿರೋಧಿಸಿರಬೇಕು.

ಇಷ್ಟೆಲ್ಲಾ ವಿರೋಧಾಭಾಸಗಳ ಹಿನ್ನೆಲೆಯಲ್ಲಿ ತಿಪ್ಪಶೆಟ್ಟಿ ಮಠದ ಗುರುಸಿದ್ಧಸ್ವಾಮಿಗಳು ತೀರಿಕೊಂಡಾಗ ತಮಗೆ ಸಲ್ಲಬೇಕಾಗಿದ್ದ ಸ್ಥಾನ, ಮತ್ತೊಬ್ಬರಿಗೆ ಸಿಕ್ಕಾಗ ಸರ್ಪಭೂಷಣರು ತಮ್ಮ ಬದುಕಿನ ದಿಕ್ಕನ್ನೆ ಬದಲಿಸಿಕೊಂಡಂತಿದೆ. ಈ ಸಂದರ್ಭದಲ್ಲಿ ಅವರು ೧೮೨೮ರ ವೇಳೆಗೆ ಬೆಂಗಳೂರನ್ನು ತೊರೆದು ನಾಡಿನಾದ್ಯಂತ ಮನಬಂದಲ್ಲಿ ಸಂಚರಿಸಿದಂತಿದೆ.[26] ಬಹುಶಃ ಅವರ ಸಾಹಿತ್ಯ ಕೃಷಿಯನ್ನು ಆಧರಿಸಿ ಹೇಳುವುದಾದರೆ ಅವರು ಏಕಾಂತವಾಗಿದ್ದುದೇ ಹೆಚ್ಚು. ಅಪೇಕ್ಷಿಸಿದ್ದಕ್ಕಿಂತ ಉಪೇಕ್ಷಿಸಿದ್ದೇ ಬಹಳ. ಸಾಕಷ್ಟು ಬೌದ್ಧಿಕ ಎತ್ತರವನ್ನು ಗಳಿಸಿದ್ದ ಇವರಿಗೆ ಶಿವಮತದೊಳಗಿನ ಅಸಮತೋಲನ ಅಸಹ್ಯವೆನಿಸಿತ್ತು. ಈ ಸಂದರ್ಭದಲ್ಲಿ ಅವರು ಬಳ್ಳಾರಿ, ಉರುವಕೊಂಡ, ಶ್ರೀಶೈಲ, ನಾರದಗಡ್ಡೆ, ಸುರಪುರ ಮುಂತಾದ ಸ್ಥಳಗಳಲ್ಲಿ ಸಾಕಷ್ಟು ಸಮಯವನ್ನು ಕಳೆದಿರುವಂತಿದೆ. ಇವರ ಬಹುತೇಕ ಸಾಹಿತ್ಯ ಕೃಷಿಯೂ ಇಲ್ಲೇ ನಡೆದಿರಬೇಕು. ಜೊತೆಗೆ ಈ ಭಾಗದ ಅಸಂಖ್ಯಾತ ಭಕ್ತರು ಇವರ ಪ್ರಭಾವಕ್ಕೆ ಒಳಗಾಗಿದ್ದರು.

ಸರ್ಪಭೂಷಣರು ೧೮೩೮ರ ವೇಳೆಗೆ ಬೆಂಗಳೂರಿಗೆ

ಮರಳಿ ಬಂದಾಗ ಅವರಿಗೆ ಆಶ್ರಯ ನೀಡಿದವರು ಲಿಂಗಾಯತ ಉಪಜಾತಿಗಳಲ್ಲಿ ಒಂದು ವರ್ಗವಾದ ಸ್ಥಳಬಣಜಿಗರು ಎಂಬುದು ಗಮನಾರ್ಹ.[27] ಅವರನ್ನು ಕಣ್ಣಾರೆ ಕಂಡಿದ್ದ ದೇವೀರಮ್ಮನು[28] ಹೇಳುವ ಪ್ರಕಾರ ''ಸರ್ಪಭೂಷಣರು ಮರಳಿ ಬೆಂಗಳೂರಿಗೆ ಬಂದಾಗ ದೈಹಿಕವಾಗಿ ಬಹಳ ಕೃಷವಾಗಿದ್ದರು. ಆಗ ಸ್ಥಳಬಣಜಿಗರ ಮುಖಂಡನಾಗಿದ್ದ ಕೆಂಪುನೂಲು ನಂಜುಂಡಯ್ಯನು ತನ್ನ ಕುಲಸ್ಥರಿಗೆ ಸೇರಿದ ಮಠದಲ್ಲೇ ಅವರಿಗೆ ಇರಲಿಕ್ಕೆ ಅನುಕೂಲ ಮಾಡಿಕೊಟ್ಟನು. ಅಂದು ಈ ಮಠ (ಕೆರೆ ನಂಜುಂಡಯ್ಯನ ಮಠ)ದಲ್ಲಿ ಮೂರಂಕಣದ ಒಂದು ಪುಟ್ಟ ಕುಟೀರ ಹಾಗೂ ಚಿಕ್ಕ ಬಸವಣ್ಣನಗುಡಿ ಮತ್ತು ಒಂದು ಗದ್ದುಗೆ ಮಾತ್ರ ಇದ್ದವು. ಅವರು ಬೆಂಗಳೂರಿಗೆ ಮರಳಿ ಬಂದ ಆರೇಳು ತಿಂಗಳಲ್ಲೇ ಶಿವಾಧೀನರಾದರು.''[29] ಸರ್ಪಭೂಷಣರ ಗದ್ದುಗೆ ಮಠದ ಆವರಣದ ಒಳಗೇ ಇದೆ.

'ನಿರಾಭಾರಿ ಗುರುತಿಲಕ ಗುರುಸಿದ್ಧಯತಿ ವರೇಣ್ಯ'ರೆಂದು ಗುರುಗಳನ್ನು ಹೆಮ್ಮೆಯಿಂದ ಸ್ಮರಿಸುವ ಸರ್ಪಭೂಷಣರು[30] ಗುರುಕಾರುಣ್ಯದ ಮಾನಸ ಪುತ್ರರಾಗಿದ್ದವರು. ತಮ್ಮ ಮುಂದಿನ ಮಠಾಧಿಪತ್ಯವನ್ನು ಶಿಷ್ಯೋತ್ತಮನಲ್ಲಿ ಗುರುತಿಸಿದ್ದ, ಗುರುಸಿದ್ಧ ಗುರುಗಳು ತಮ್ಮ ಬಯಕೆ ಕೈಗೂಡುವ ಮುಂಚೆಯೇ ಕೈಲಾಸವಾಸಿಗಳಾಗಿದ್ದಾರೆ. ಧರ್ಮಾಧಿಕಾರಿಗಳ ಕೈ ಸೋತಾಗ, ದಂಡಾಧಿಕಾರಿಗಳ ಕೈಮೇಲಾಗಿದೆ. ಈ ಸಂದರ್ಭದಲ್ಲಿ ಅಸಾಧಾರಣವಾದ ಸಂಘರ್ಷವೇ ನಡೆದಂತಿದೆ. ಸಂಪ್ರದಾಯಗಳ ಪಾಲನೆಗಾಗಿ ಕಟಿಬದ್ಧ ರಾಗಿದ್ದ ಪೇಟೆ ಶೆಟ್ಟಿ ಯಜಮಾನರುಗಳು ಸರ್ಪಭೂಷಣ ರನ್ನು ಜಂಗಮೇತರರೆಂಬ ಒಂದೇ ಕಾರಣಕ್ಕೆ ತಿರಸ್ಕರಿಸಿ ರುವುದರಲ್ಲಿ ಅನುಮಾನವಿಲ್ಲ. ಎಷ್ಟೇ ವಿದ್ಯಾ-ಬುದ್ಧಿಗಳ ಸಿದ್ಧಿಸಂಪನ್ನರಾಗಿದ್ದಾಗ್ಯೂ ಸಂಪ್ರದಾಯ ವಾದಿಗಳ ಎದುರು ತಲೆ ಬಾಗಿರುವುದು ಅನಿವಾರ್ಯವಾಗಿದೆ. ಆಗ ಬಾಣಾವರದ ಮನೆತನದವರು ಪೇಟೆಶೆಟ್ಟಿ ಯಜಮಾನರು ಗಳ ವಿರುದ್ಧ ಒಂದು ದೊಡ್ಡ ಹೋರಾಟವನ್ನೇ ನಡೆಸಿ ದ್ದಾರೆ. ಅದರ ಸಾಂಕೇತಿಕ ರೂಪದಲ್ಲಿ ಅವರ ಮನೆಗಳಲ್ಲಿ ಈಗಲೂ ''ಧೂಳ್ತ''[31]ಎಂಬ ವಸ್ತುವನ್ನು ಕಾಪಾಡಿಕೊಂಡು ಬಂದಿರುವುದನ್ನು ನಾವು ನೋಡಬಹುದು.

ಈ ಹಿನ್ನೆಲೆಯಲ್ಲಿ ಸರ್ಪಭೂಷಣರು ಬೆಂಗಳೂರನ್ನು ತೊರೆದಿರುವುದು ಸತ್ಯ ಕಥೆ. ಮಲ್ಲಾಬಾದಿಯವರು ತಿಳಿಸಿರುವಂತೆ ಇಪ್ಪತ್ತರ ಹರೆಯದ ವೈರಾಗ್ಯ ಮೂರ್ತಿ, ಗುರುಗಳ ಆಶೀರ್ವಾದ ಪಡೆದು ದೇಶಸಂಚಾರ ಕೈಗೊಂಡರು[32] ಎಂಬುದು ಉತ್ಪ್ರೇಕ್ಷೆಯ ಮಾತಾದೀತು. ಹೀಗೆ ಹತ್ತಾರು ವರ್ಷಗಳ ಕಾಲ ಬೆಂಗಳೂರಿನಿಂದ ಹೊರಗಿದ್ದಾಗಲೇ ಇವರ ಸಾಹಿತ್ಯ ಸುಧೆ ಪ್ರವಹಿಸಿದೆ. ಇವರ ತತ್ತ್ವಪದಗಳಲ್ಲಿ ಮೇಲ್ಕಂಡ ಘಟನೆಗಳಿಗೆ ತಕ್ಕ ಛಾಯೆ ಎನ್ನುವ ರೀತಿ ಮಂದಮತಿಗಳನ್ನೂ ಜಡಸಂಪ್ರದಾಯವಾದಿಗಳನ್ನೂ ಕುರಿತು ಕಟಕಿಯಾಡಿರುವ ಅನೇಕ ದೃಷ್ಟಾಂತಗಳಿವೆ.[33] ಇವರ ತತ್ತ್ವ ಸಾಹಿತ್ಯ ದಿನೇದಿನೇ ಇವರನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ಯುದಲ್ಲದೆ ಹೋದೆಡೆಯೆಲ್ಲಾ ಇವರದೇ ಮನೆಮಾತಾಯಿತು. ಅಂತಿಮ ದಿನಗಳಲ್ಲಿ ಅನಾರೋಗ್ಯ ನಿಮಿತ್ತ ತೌರೂರಿಗೆ ಹಿಂತಿರುಗಿದಾಗ ಇವರಿಗೆ ಭವ್ಯ ಸ್ವಾಗತವೇ ದೊರಕಿರುವಂತಿದೆ. ಆಗಲೂ ಕೆಳಸ್ತರದ ಸಂಘಟನೆಯ ಹಿನ್ನೆಲೆಯಲ್ಲಿ ಸ್ಥಳಬಣಜಿಗ ವರ್ಗದವರು ಸರ್ಪಭೂಷಣರನ್ನು ಇದ್ದಷ್ಟು ದಿನ ತಮ್ಮ ಗುರುಗಳನ್ನಾಗಿ ಸ್ವೀಕರಿಸಿಕೊಂಡಿದ್ದಾರೆ. ಹೀಗಿದ್ದೂ ಯಾಜಮಾನಿಕೆಯವರ ಕೆಂಗಣ್ಣು ಇವರನ್ನು ವಕ್ರದೃಷ್ಟಿಯಿಂದಲೇ ನೋಡಿರು ವಂತಿದೆ. ಈ ಹಿನ್ನೆಲೆಯಲ್ಲಿ ಇವರ ವಿರೋಧಿಗಳ ಕುಯುಕ್ತಿಗೆ ತಕ್ಕ ಶಾಸ್ತಿಯಾದ, ಅನೇಕ ದಂತಕಥೆಗಳು ಹುಟ್ಟಿಕೊಂಡಿವೆ. (ಇವುಗಳ ಪರಿಶೀಲನೆಯು ಮುಂದೆ ಬರುವುದು.) ಹೀಗೆ ಒಂದೇ ಜನಾಂಗದ ಆಂತರಿಕ ವರ್ಗ ವೈಷಮ್ಯಗಳ ಹಿನ್ನೆಲೆಯಲ್ಲಿ ಸರ್ಪಭೂಷಣರ ಕವಿತಾ ಪ್ರೌಢಿಮೆ ಹಾಗೂ ಸಾತ್ವಿಕ ವರ್ಚಸ್ಸುಗಳಿಗೆ ಯಾವುದೇ ಬಾಧಕವಾಗದಿದ್ದುದೇ ಒಂದು ದೊಡ್ಡ ಪವಾಡವೆನ್ನಬೇಕು. ಯಾವುದೇ ಪ್ರತಿಷ್ಠಿತ ಹಿನ್ನೆಲೆಯ ಮಠಾಧಿಪತ್ಯ ಇಲ್ಲದೆಯೂ ಸರ್ಪಭೂಷಣರ ಶಿವಯೋಗ ಸಂಪನ್ನತೆ ಹಾಗೂ ಉಭಯ ಭಾಷಾ ಪ್ರಾವೀಣ್ಯತೆಗಳು, ಅವರನ್ನು ವೀರಶೈವ ತತ್ತ್ವ ಸಾಹಿತ್ಯದ ಇತಿಹಾಸದಲ್ಲಿಯೇ ಅಗ್ರ ಪಂಕ್ತಿಯಲ್ಲಿ ಇರಿಸಿವೆ. ಸರ್ಪಭೂಷಣರು ಮಠ ಮಂದಿರಗಳನ್ನು ಕಟ್ಟಿ ಭಕ್ತ ಜನೋದ್ಧಾರ ಮಾಡಿದರು ಎನ್ನುವುದಕ್ಕಿಂತ, ತಮ್ಮ ಸರಳ ಸಾತ್ವಿಕ ವೈರಾಗ್ಯ ಹಾಗೂ ನಿರ್ಮಲವಾದ ಶಿವಯೋಗದ ಮೂಲಕ ಜನಮನವನ್ನು ತಟ್ಟಿದರು ಎನ್ನುವುದೇ ಅವರ ವ್ಯಕ್ತಿತ್ವಕ್ಕೆ ಒಪ್ಪುವ ಮಾತು. ಉಳಿದ ಮಾತುಗಳೇನಿದ್ದರೂ ಅವರ ಎತ್ತರದ ಬದುಕಿಗೆ ಆರೋಪಿಸಿದ ಬಳುವಳಿಗಳೇ ಸರಿ. ಇಂತಹ ಮೇರು ಸದೃಶ ವ್ಯಕ್ತಿತ್ವದ ಸರ್ಪಭೂಷಣರು ಈ ಮಠದಲ್ಲಿದ್ದುದೇ ಒಂದು ಭಾಗ್ಯ. ಹೀಗಾಗಿ ಆ ಮಠಕ್ಕೆ ಅವರ ಹೆಸರು ಬಿಟ್ಟು

ಬೇರೊಂದು ಹೆಸರು ಬರಲು ಸಾಧ್ಯವೆ? ಇನ್ನು ಇವರ 'ಕೈವಲ್ಯಕಲ್ಪವಲ್ಲರಿ' ಹಾಗೂ 'ಜ್ಞಾನಶತಕ' ಕೃತಿಗಳು ಅವರ ಉಭಯ ಭಾಷಾ ಪ್ರಾವೀಣ್ಯತೆಗೆ ಹಿಡಿದ ಕನ್ನಡಿಯಂತಿವೆ. ಶ್ರೇಷ್ಠ ವಾಗ್ಗೇಯಕೃತಿ ಎಂದೇ ಹೆಸರಾಗಿರುವ ಕೈವಲ್ಯಕಲ್ಪವಲ್ಲರಿ ತತ್ತ್ವ ಸಾಹಿತ್ಯದ ಇತಿಹಾಸದಲ್ಲಿಯೇ ವಿಶೇಷವಾದ ಸ್ಥಾನವನ್ನು ಪಡೆದಿದೆ. ಹೀಗೆ ಸಂಗೀತ, ಸಾಹಿತ್ಯ ಮತ್ತು ವೈರಾಗ್ಯ ಇವುಗಳ ತ್ರಿವಳಿ ಸಂಗಮದಂತಿದ್ದ ಸರ್ಪಭೂಷಣರು ಬೆಂಗಳೂರಿನವರು ಎಂದು ಹೇಳಿಕೊಳ್ಳುವುದೇ ಒಂದು ಹೆಮ್ಮೆಯ ಸಂಗತಿ.

ಸರ್ಪಭೂಷಣ ಶಿವಯೋಗಿಗಳು ೧೮೫೯ರಲ್ಲಿ ಶಿವಾಧೀನರಾದ ನಂತರ ಅವರ ಶಿಷ್ಯರಾಗಿದ್ದ ಘಾಲಲೋಚನ ಸ್ವಾಮಿಗಳು ಸರ್ಪಭೂಷಣ ಮಠದ ಅಧಿಪತಿಗಳಾದರು.[34] ಇವರು ಸರ್ಪಭೂಷಣರಿಗೆ ಶ್ರೀಶೈಲ ಯಾತ್ರೆಯಲ್ಲಿ ಪರಿಚಯವಾಗಿ ಅವರ ಸಾತ್ವಿಕ ವರ್ಚಸ್ಸಿಗೆ ಮಾರುಹೋಗಿ, ಶಿಷ್ಯತ್ವವನ್ನು ಸ್ವೀಕರಿಸಿದವರು.[35] ಇವರ ಮೂಲಸ್ಥಳ ರಾಮಗಿರಿಯ ಹೊಸಪೇಟೆ[36] (ಅಂದರೆ ಈಗಿನ ರಾಮನಗರ[37]) ಮುಂದೆ 'ಕ್ಲೋಸ್ ಪೇಟೆ' ಎಂದೇ ಪ್ರಸಿದ್ಧವಾಗಿದ್ದ ಈ ಹೊಸ ಪೇಟೆಗೆ ಸೇರಿದ ಮುಖ್ಯಸ್ಥರು ಘಾಲಲೋಚನ ಸ್ವಾಮಿಗಳಿಗೆ ಕ್ರಿ.ಶ. ೧೮೪೪ ರಲ್ಲಿ ದಾನ ಶಾಸನವೊಂದನ್ನು ಬರೆದುಕೊಟ್ಟಿದ್ದಾರೆ. ಅದರ ಮುಖ್ಯಾಂಶಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. "...ಶ್ರೀಮದವಿರಳಾನಂದ ಬಂಧುರ ಸಮಸ್ತ ತತ್ವ ತಾತ್ವಿಕ ರಹಸ್ಯೋಪದೇಶ ಚರಣ ಚಾತುರೀ ಧುರೀಣ ನಿರಾಭಾರಿ ಗುರುಕುಲ ಕೇತನಾಯುಮಾನ ಶ್ರೀ ಸ್ವತಂತ್ರ ಸಿದ್ಧಲಿಂಗಾರ್ಯ ಪರಾನ್ವಯಾನ್ವಿತ ಶ್ರೀಮದ್ಗುರು ಸರ್ಪಭೂಷಣ ಶಿವಯೋಗೀಶ್ವರ ಸ್ವಾಮೀನಾಂ ಕರಕಮಲ ಸಂಜಾತರಾದಂತಾ ಶ್ರೀಮನ್ ಮಹಾಘಾಳಲೋಚನ ಶಿವಯೋಗೀಶ್ವರ ಸ್ವಾಮಿಯವರಿಗೆ...ಶಾಲಿವಾಹನ ಶಕ ೧೭೬೬ಕ್ಕೆ ಸಲ್ಲುವ ಕ್ರೋಧಿ ಸಂವತ್ಸರದ ಆಶ್ವಿಜ ಶುದ್ಧ ೭ ರಂದು ಕುಲೋಸುಪೇಟೆ ಶೆಟ್ರು ಯಜಮಾನರು ಮುಂತಾದ ಸ್ಥಳಪರಸ್ಥಳದ ಭಕ್ತರುಗಳು ತಮ್ಮ ಭಕ್ತಿಪೂರ್ವಕವಾಗಿ ಬರೆಯಿಸಿ ಒಪ್ಪಿಸಿದ ದಾನಶಾಸನ... ಬೆಂಗಳೂರು ಬಳೆಬಾಗಿಲು ಉತ್ತರ ದಿಗ್ಭಾಗದ ದೊಡ್ಡಕೆರೆಗೆ ಬಳಿಯಲ್ಲೂ ಇರುವ ತಮ್ಮ ಖಾಸಾ ಮಠಕ್ಕೆ ದೀಪಾರಾಧನೆ ದಾಸೋಹ ಮುಂತಾದ ಸೇವೆ ನಡೆಯತಕ್ಕ ಬಗ್ಗೆ..."[38] ಇತ್ಯಾದಿಯಾಗಿ ಮುಂದುವರೆಯುತ್ತದೆ. ಇದರ ತಪಶೀಲು ಪಟ್ಟಿಯ ಸೂಚನೆಯ ಪ್ರಕಾರ ಅದರಲ್ಲಿ ರುಜು ಮಾಡಿರುವ ಹದಿನೇಳು ಮಂದಿ ಭಕ್ತರು ಕೂಡಿ ತಾವು ಬೆಳೆದ ರಾಗಿ, ಭತ್ತ ಮುಂತಾದ ೪೦ ಖಂಡುಗ ದವಸವನ್ನು ಮಠಕ್ಕೆ ವರ್ಷಂಪ್ರತಿ ಕೊಡುವುದಾಗಿ ದಾನಶಾಸನಕ್ಕೆ ಸಹಿ ಮಾಡಿರುತ್ತಾರೆ.

ಈ ದಾನ ಶಾಸನದ ಪ್ರಕಾರ ಘಾಲಲೋಚನರು ಸರ್ಪಭೂಷಣ ಶಿವಯೋಗಿಗಳ ಕರಕಮಲ ಸಂಜಾತ ರೆಂಬುದು ಸ್ಪಷ್ಟವಾಗಿದೆ. ಇನ್ನೊಂದು ಮುಖ್ಯವಾದ ವಿಚಾರ, ಸರ್ಪಭೂಷಣರ ಪೂರ್ವಾಪರವನ್ನು ಹೇಳುವಾಗ "ಶ್ರೀ ಸ್ವತಂತ್ರ ಸಿದ್ಧಲಿಂಗಾರ್ಯ ಪರಾನ್ವಯಾನ್ವಿತ..." ಎಂಬ ಮಾತಿದೆ. ಇಲ್ಲಿ ವಿರಕ್ತ ಮಠಗಳಿಗೆ ಸಂಬಂಧಿಸಿದ ಯಾವ ಸಮಯಭೇದವನ್ನೂ[39] ಉಲ್ಲೇಖಿಸದೆ 'ಸ್ವತಂತ್ರ ಸಿದ್ಧಲಿಂಗಾರ್ಯ ಪರಾನ್ವಯ'ವಾದ ವಿಚಾರ ಏಕೆ ಬಂತು? ಎಂಬುದು ಇಲ್ಲಿನ ಪ್ರಶ್ನೆ. ಅದಕ್ಕೂ ಕಾರಣವಿದೆ. ಸರ್ಪಭೂಷಣರು ಮುರಿಗಾ ಪರಂಪರೆಯ ತಿಪ್ಪಶೆಟ್ಟಿ ಮಠದ[40] ಗುರುಸಿದ್ಧ ಶಿವಯೋಗಿಗಳ ಶಿಷ್ಯರಾಗಿದ್ದುದು ನಿಜ. ಅವರೆ ಮುಂದಿನ ಮಠಾಧಿಪತ್ಯದಿಂದಲೂ ವಂಚಿತರಾದದ್ದು ಈಗಾಗಲೇ ತಿಳಿದಿರುವ ಸಂಗತಿ. ಈ ಹಿನ್ನೆಲೆಯಲ್ಲಿ ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯರಾಗಿದ್ದ ಸ್ವತಂತ್ರ ಸಿದ್ಧಲಿಂಗೇಶ್ವರರು ಹೇಗೆ ಏಕಾಂತಪ್ರಿಯರೂ, ಶಿವಯೋಗ ಸಾಧಕರೂ ಆಗಿದ್ದು, ನಾಡಿನಾದ್ಯಂತ ಸಂಚರಿಸಿ ಅಲೌಕಿಕ ಪ್ರಕಾಶನವನ್ನು ಬೆಳಗಿ, ಸಕಲಯೋಗ ಗಳನ್ನೂ ಅರಿತು ಆಚರಿಸಿದ ಸಿದ್ಧಿ ಪುರುಷರಾಗಿದ್ದರೋ,[41] ಅದೇ ಸರಿದಾರಿಯನ್ನು ಅನುಸರಿಸಿ ಪ್ರಸಿದ್ಧಿಗೆ ಬಂದ ಸರ್ಪಭೂಷಣರೂ ಕೂಡ 'ಸ್ವತಂತ್ರ ಸಿದ್ಧಲಿಂಗಾರ್ಯ ಪರಾನ್ವಯಾನ್ವಿತ' ಎಂದಿಟ್ಟುಕೊಂಡಿರುವುದು ಅರ್ಥಪೂರ್ಣ ವಾಗಿಯೇ ಇದೆ. ಜೊತೆಗೆ ಕೆಂಪುನೂಲು ನಂಜುಂಡಯ್ಯನ ಕಡೆಯಿಂದ ಸರ್ಪಭೂಷಣರಿಗೆ ಈ ಮಠವು ಬಂದಿರುವುದಾದ ಕಾರಣ[42] ಮೇಲಿನ ಶಾಸನ ಪತ್ರದಲ್ಲಿ 'ತಮ್ಮ ಖಾಸಾ (ಸ್ವಂತ)ಮಠ'ವೆಂದು ಬಳಸಿರುವುದೂ ಕೂಡ ಆಧಾರಬದ್ಧವೇ ಆಗಿದೆ. ಈ ಕಾರಣಗಳಿಗಾಗಿ ಇವರು ಯಾವುದೇ ಸಮಯಭೇದಗಳಿಂದ ಹೊರತಾದವರು ಎಂಬುದನ್ನು ಈ ದಾನ ಶಾಸನವು ಸಾಬೀತುಪಡಿಸುತ್ತದೆ.

ಘಾಲಲೋಚನ ಸ್ವಾಮಿಗಳ ಕಾಲದ ಮತ್ತೊಂದು ಅಧಿಕೃತವಾದ ದಾಖಲೆ ಮೇಲ್ಕಂಡ ದಾಖಲೆಗಿಂತ ಎರಡು ವರ್ಷಗಳ ಮುಂಚಿನ ೧೮೪೨ರ 'ಸಮಾಖ್ಯ ಪತ್ರ'.[43] ಇದರಲ್ಲೂ ಕೂಡ ಮಠದ ಗುರು ಪರಂಪರೆಯನ್ನು ಮೇಲಿನ ದಾನ ಶಾಸನದಲ್ಲಿರುವಂತೆಯೇ ಹೇಳಿದೆ ಯಾದರೂ, ಇದರಲ್ಲಿ ಕೆಲವು ವಿಚಾರಗಳು ಬಹಳ

ಮಹತ್ವದವಾಗಿವೆ. ಸರ್ಪಭೂಷಣರಿಗೆ ಮಠದ ಜಾಗವನ್ನು ಒಪ್ಪಿಸಿಕೊಟ್ಟ ಕೆಂಪುನೂಲು ನಂಜುಂಡಯ್ಯನನ್ನು ಹತ್ತೂ ಕುಲಬಾಂಧವರು ಸೇರಿ ತಮ್ಮ ಕುಲಗುರುಗಳಾದ ಫಾಲಲೋಚನ ಸ್ವಾಮಿಗಳ ಸಮಕ್ಷಮದಲ್ಲಿ ಸ್ವಮತಸ್ಥನನ್ನಾಗಿ ಒಪ್ಪಿ ಬರೆಸಿಕೊಟ್ಟದ್ದೇ ಈ ಸಮಾಖ್ಯ (ಸಹಮತ) ಪತ್ರದ ತಿರುಳು. ಇದರ ಪ್ರಕಾರ-''ಶೋಭಕೃತು ಸಂವತ್ಸರದ (ಕ್ರಿ.ಶ. ೧೮೪೩ರಲ್ಲಿ) ಕಾರ್ತಿಕ ಶುದ್ಧ ಗುರುವಾರ ೧ ರಂದು ಬೆಂಗಳೂರಿನ ಸರ್ಪಭೂಷಣ ಮಠದಲ್ಲಿ ನಡೆದ ಈ ಸಮಾವೇಶದ ನೇತೃತ್ವ ವಹಿಸಿದ್ದವರು ಫಾಲಲೋಚನ ಸ್ವಾಮಿಗಳು. ಬೆಂಗಳೂರು ತುಮಕೂರು ಹಾಗೂ ಕೋಲಾರ ಈ ಪ್ರಾಂತ್ಯಗಳಿಗೆ ಸೇರಿದ ಸುಮಾರು ನಲವತ್ತು ಗ್ರಾಮಗಳ ಮುಖಂಡರುಗಳು ಈ ಸಭೆಗೆ ಸೇರಿದ್ದರು. ಇಲ್ಲಿಗೆ ನೂರು ವರ್ಷಗಳ ಹಿಂದೆ ನಂಜುಂಡಯ್ಯನ ವಂಶಸ್ಥನಾಗಿದ್ದ ರಾಮಣ್ಣನ ಕಾಲದಲ್ಲಿ ಅವರ ಜಿಂದಗಿ (ಆಸ್ತಿ), ದೇವರುಗಳೆಲ್ಲಾ ಶಿಥಿಲವಾಗಿ ಹೋಗಲು, ಅವರ ಗುಂಪಿನವರೆಲ್ಲಾ ಅಂದಿನಿಂದಲೂ ಪ್ರತ್ಯೇಕಿಸಲ್ಪಟ್ಟಿದ್ದರು. ಈಗ ತಮ್ಮ ಕುಲಗುರುಗಳ ಆಜ್ಞಾಪ್ರಕಾರ ಹತ್ತೂ ಕುಲಬಾಂಧವರೆದುರಿಗೆ ತಮ್ಮ ತಪ್ಪನ್ನು ತಿದ್ದಿಕೊಂಡು ಉಳಿದವರಂತೆ ತಾವೂ ಸ್ವಮತ ಬಾಂಧವರೊಡನೆ ಬೆರೆತು ಬಾಳಲು ಕೆಂಪುನೂಲು ನಂಜುಂಡಯ್ಯನ ಗುಂಪಿನವರಿಗೆ ಸಭೆಯು ಅನುಮೋದನೆ ನೀಡುತ್ತದೆ.''[44] ಮುಂದೆ ಕೆಲವೇ ದಿನಗಳಲ್ಲಿ ಇವರನ್ನೆಲ್ಲಾ ಶಿವಗಂಗೆಯ ಮೇಲಣ (ಮಲ್ಲಣ್ಣನ) ಗವಿಮಠದ ಪಟ್ಟದ ರಾಚೋಟಿ ಸ್ವಾಮಿಗಳವರಿಂದ[45] ಫಾಲಲೋಚನಸ್ವಾಮಿಗಳು ಲಿಂಗದೀಕ್ಷೆ ಮಾಡಿಸುತ್ತಾರೆ.[46]

ಹೀಗೆ ಫಾಲಲೋಚನಸ್ವಾಮಿಗಳು ಧಾರ್ಮಿಕವಾಗಿ ಹಾಗೂ ಸಾಮಾಜಿಕವಾಗಿ ಮಠದ ಘನತೆಯನ್ನು ಉತ್ತಮಪಡಿಸಿ ಹತ್ತಾರು ಅಂಕಣದ ನೂತನ ಕಟ್ಟಡವನ್ನೂ ಕಟ್ಟಿಸಿದ್ದರು. ಮಠದಲ್ಲಿ ನಿತ್ಯದಾಸೋಹ ಹಾಗೂ ಭಕ್ತರ ಸಮಾರಾಧನೆಗಳು ಅನುದಿನವೂ ನಡೆಯಲಾರಂಭಿಸಿದ್ದವು.[47] ಭಕ್ತ ಸಮುದಾಯದಲ್ಲಿ ಗುರುಗಳ ಬಗೆಗೆ ಅಪಾರವಾದ ಭಕ್ತಿ ಗೌರವಗಳು ವಿಜೃಂಭಿಸಿದ್ದವು. ಸರ್ಪಭೂಷಣರು ಹಾಕಿಕೊಟ್ಟಿದ್ದ ಅಸ್ತಿಭಾರದ ಮೇಲೆ ಮಠವನ್ನು ಸರ್ವ ವಿಧದಲ್ಲೂ ಅಭಿವೃದ್ಧಿ ಪಡಿಸಿದ್ದ ಫಾಲಲೋಚನ ಸ್ವಾಮಿಗಳು ೧೮೬೭ರಲ್ಲಿ ಲಿಂಗೈಕ್ಯರಾದರು.[48] ಇವರು ಲಿಂಗೈಕ್ಯರಾದ ಮೇಲೆ ಮುಂದಿನ ಮಠಾಧಿಪತ್ಯಕ್ಕಾಗಿ ಇವರ ಶಿಷ್ಯರುಗಳೇ ಆಗಿದ್ದ ಗುರುಸ್ವಾಮಿ ಹಾಗೂ ಸಿದ್ಧಲಿಂಗಸ್ವಾಮಿಗಳ ನಡುವೆ ಒಂದು ವರ್ಷಕಾಲ ಸಂಘರ್ಷ ನಡೆಯಿತು.[49] ಈ ಸಂಘರ್ಷದ ನಂತರ ಸರ್ಪಭೂಷಣ ಮಠದ ಮೂರನೆಯ ಮಠಾಧೀಶರಾಗಿ ಉಳಿದುಕೊಂಡವರೆ ಗುರುಸ್ವಾಮಿಗಳು.

ಗುರುಸ್ವಾಮಿಗಳು ೧೮೬೮ರಿಂದ ಅಧಿಕಾರಕ್ಕೆ ಬಂದ ಮೇಲೆ ದೇಶಮಧ್ಯೆ ಸಂಚರಿಸಿ ಧರ್ಮಭಿಕ್ಷೆಯನ್ನು ಎತ್ತಿ ಮಠವನ್ನು ಪುನರುಜ್ಜೀವನಗೊಳಿಸಿದರು.[50] ಇವರ ಕಾಲದಲ್ಲಿ ಮಠದ ಆವರಣದ ಸುತ್ತ ಪೂರ್ವ-ಪಶ್ಚಿಮದ ಕಡೆ ೫೦ ಗಜ ಹಾಗೂ ಉತ್ತರ-ದಕ್ಷಿಣಗಳ ಕಡೆ ೭೦ ಗಜ ಉದ್ದದ ಕಲ್ಲು ಗೋಡೆಗಳನ್ನು ನಿರ್ಮಿಸಿದ್ದರು. ೨೭ ಅಂಕಣವುಳ್ಳ ನೂತನ ಕಲ್ಲುಮಠವನ್ನು ಹಾಗೂ ಮಠದ ಮುಂದಿನ ಕೈತೋಟದಲ್ಲಿ ಒಂದು ಸುಂದರ ಕಲ್ಯಾಣಿಯನ್ನು ನಿರ್ಮಾಣ ಮಾಡಿಸಿದ್ದರು.[51] ಇವರೂ ಕೂಡ ತಮ್ಮ ಮಠದ ಪರಂಪರೆಯನ್ನು ಹೇಳಿಕೊಳ್ಳುವಾಗ ''....... ನಿರಾಭಾರಿ ಗುರುಕುಲ ಕೇತನಾಯಮಾನ ಶ್ರೀ ಸ್ವತಂತ್ರ ಸಿದ್ಧಲಿಂಗಾರ್ಯ ಪರಾನ್ವಯಾನ್ವಿತ ಮದ್ದುರು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಸ್ವಾಮೀನಾಂ ಕರಕಮಲ ಸಂಜಾತರಾದ ಶ್ರೀಮನ್ ಫಾಲಲೋಚನ ಶಿವಯೋಗೀಶ್ವರ ಸ್ವಾಮೀನಾಂ ಕರಕಮಲ ಸಂಜಾತರಾದಂತಾ ಸಪ್ಪಣ್ಣಸ್ವಾಮಿ ಮಠದ ಗುರುಸ್ವಾಮಿಗಳು....''[52] ಎಂದೇ ಸಂಬೋಧಿಸಿ ಕೊಂಡಿದ್ದಾರೆ.

ಗುರುಸ್ವಾಮಿಗಳ ಕಾಲದ ಅನೇಕ ದಾಸ್ತಾವೇಜು (ದಾಖಲೆಪತ್ರ)ಗಳು ಲಭ್ಯವಾಗಿದ್ದು, ಅವು ಮಠದ ಬಗೆಗೆ ವಿಶೇಷವಾದ ಬೆಳಕು ಚೆಲ್ಲುತ್ತವೆ. ಇವರು ೧೮೭೩ರಲ್ಲಿ ತಮ್ಮ ಮುಂದಿನ ಉತ್ತರಾಧಿಕಾರಿಯನ್ನಾಗಿ, ಮಾಗಡಿ ತಾಲ್ಲೂಕು ಕಲ್ಯಾ(ಕಲ್ಲೆಹ) ಮಠದ ಮಲ್ಲಯ್ಯನ ಮಗ ದುಂಡಿಬಸವ ಎಂಬುವವನನ್ನು ಸೂಚಿಸಿದ್ದರಾದರೂ; ಅದು ಭಕ್ತರಲ್ಲಿ ಅನುಮೋದನೆಯಾಗಲಿಲ್ಲ.[53] ನಂತರ ದಿನಾಂಕ: ೯.೧೧.೧೮೭೮ರಲ್ಲಿ ತಮ್ಮ ಪೂರ್ವಾಶ್ರಮದ ಖಾಸಾ ಸೋದರ ಸಿದ್ಧವೀರಯ್ಯನ ಮಗ ಸಿದ್ಧಲಿಂಗಯ್ಯ, ಈತನ ಮಗ ರುದ್ರಮರಿ ಎಂಬುವನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಚುನಾಯಿಸಿ, ಈತನಿಗೆ ತಮ್ಮ ಚರಂತಿಗೆಯನ್ನು ವಹಿಸಿಕೊಟ್ಟಿದ್ದರು.[54] ಈ ರುದ್ರಮರಿಯು ಮುಂದೆ ೧೮೮೩ರ ಆಗಸ್ಟ್ ಮಾಹೆಯಲ್ಲಿ ಅಕಾಲ ಮರಣಕ್ಕೆ ತುತ್ತಾದರು.[55] ತತ್ಪರಿಣಾಮವಾಗಿ ದಿನಾಂಕ : ೧೦.೧೦.೧೮೮೬ರಲ್ಲಿ ಮತ್ತೊಂದು ಮರಣಶಾಸನವನ್ನು

ಬರೆಯಿಸಿದರು. ಅದರ ಪ್ರಕಾರ-ತಿಪ್ಪಶೆಟ್ಟಿ ಮಠದ ಚರಮೂರ್ತಿ, ಇಮ್ಮಡಿ ಗುರುಸಿದ್ಧಸ್ವಾಮಿಗಳ ಗೋತ್ರಕ್ಕೆ ಸೇರಿದ ಮುರಿಗೆ ಸಮಯದ ಸೋಲೂರು ಬುಡಕಟ್ಟಿನ ಚನ್ನಬಸವಮರಿದೇವರು ಎಂಬುವವರನ್ನು ತಮ್ಮ ಮುಂದಿನ ಉತ್ತರಾಧಿಕಾರಿಯನ್ನಾಗಿ ವಿಧಿವತ್ತಾಗಿ ಆಯ್ಕೆ ಮಾಡಿಕೊಂಡರು.[56] ಮುಂದೆ ದಿ : ೨೫.೧೦.೧೮೮೭ರಲ್ಲಿ ಸಿಟಿ ಮುನಿಸಿಪಲ್ ಬೋರ್ಡಿಗೆ ಪತ್ರವೊಂದನ್ನು ಬರೆದು ತಮ್ಮ ಮಠದ ಮುಂದಿನ ಸಂಪೂರ್ಣ ಅಧಿಕಾರವು ಚನ್ನಬಸವದೇವರ ಹೆಸರಿನಲ್ಲೇ ನಡೆಯುವಂತೆ ಸೂಚನೆಯನ್ನೂ ನೀಡಿದ್ದರು.[57]

ಇಷ್ಟಾದಾಗ್ಯೂ ಮಾರನೆಯ ವರ್ಷವೇ ದಿ : ೧೪.೯. ೧೮೮೭ರಲ್ಲಿ ಮತ್ತೊಂದು ದಾಸ್ತಾವೇಜನ್ನು ಬರೆಸಿದರು. ಅದರ ಪ್ರಕಾರ-ಮೇಲ್ಕಂಡ ಚನ್ನಬಸವಮರಿದೇವರ ಹೆಸರಿಗೆ ಹುಟ್ಟಿದ್ದ ಮರಣಶಾಸನವು ಅಕ್ರಮವಾದುದು. ತಮ್ಮ ಗ್ಲಾನಿ (ಆಯಾಸಗೊಂಡ) ಮನಃಸ್ಥಿತಿಯಲ್ಲಿ ಒತ್ತಾಯ ಪೂರ್ವಕವಾಗಿ ಬರೆಯಿಸಲ್ಪಟ್ಟದ್ದೆಂದೂ ಕಾರಣ ನೀಡಿ, ಅದನ್ನು ರದ್ದು ಪಡಿಸಿದ್ದರು.[58] ಜೊತೆಗೆ ಸರ್ಪಭೂಷಣರ ವಂಶಸ್ಥರುಗಳಿಂದ ಕೂಡಿದ್ದ ಏಳು ಜನರ ಸಮಿತಿಯೊಂದನ್ನು[59] ಮಾಡಿ ಮಠಾಧಿಕಾರವನ್ನು ಸಂಪೂರ್ಣವಾಗಿ ಅವರಿಗೆ ಒಪ್ಪಿಸಿದ್ದೇ ಅಲ್ಲದೆ; ಅವರ ವಂಶಸ್ಥರಲ್ಲೇ ಒಬ್ಬರು ಯೋಗ್ಯರಾದವರನ್ನು ಮುಂದಿನ ಮಠಾಧಿಪತಿಯನ್ನಾಗಿ ಮಾಡುವಂತೆ ಸೂಚಿಸಿಬಿಟ್ಟರು.[60] ಮುಂದೆ ಈ ದಾಸ್ತಾವೇಜನ್ನು ವಿರೋಧಿಸಿ ಪೇಟೆ ಶೆಟ್ಟಿ ಯಜಮಾನರುಗಳು ಸಿಟಿ ಚೀಫ್ ಕೋರ್ಟಿನಲ್ಲಿ ದಾವಾ ಹೂಡಲಾಗಿ, ಸದರಿ ದಾಸ್ತಾವೇಜನ್ನು ದಿ : ೨೫.೩. ೧೮೮೯ರಲ್ಲಿ ವಜಾ ಮಾಡಲ್ಪಟ್ಟಿತ್ತು.[61] ಆಗ ಗುರುಸ್ವಾಮಿಗಳು ತಾವು ಹಿಂದೆ ಮಾಡಿದ್ದ ಮರಣಶಾಸನವನ್ನೇ ಒಪ್ಪಿಕೊಂಡುದಲ್ಲದೆ, ಇನ್ನು ಮುಂದೆ ಪೇಟೆ ಶೆಟ್ಟಿ ಯಜಮಾನರುಗಳ ವಿರೋಧವಾಗಿ ಇಂತಹ ಯಾವ ಅಕ್ರಮಗಳೂ ಮಠದಲ್ಲಿ ನಡೆಯದಂತೆ ನೋಡಿಕೊಳ್ಳುವುದಾಗಿ ಮತ್ತೊಂದು ದಾಸ್ತಾವೇಜನ್ನು ಬರೆದು ಕೊಡಬೇಕಾಯಿತು.[62] ಹೀಗೆ ಬದುಕಿನುದ್ದಕ್ಕೂ ಒಂದಿಲ್ಲೊಂದು ಗೋಜಲಿಗೆ ಸಿಲುಕಿ ತೊಳಲಾಡಿದ್ದ ಗುರುಸ್ವಾಮಿಗಳು ಹಾಗೂ ಇವರ ಉತ್ತರಾಧಿಕಾರಿಯಾಗಿದ್ದ ಚನ್ನಬಸವ ಮರಿದೇವರು ಇವರಿಬ್ಬರೂ ಸೇರಿ ದಿನಾಂಕ : ೨೫.೨.೧೮೯೮ರಲ್ಲಿ ದೊಡ್ಡಪೇಟೆಯ ಗೌಡರ ರುದ್ರಪ್ಪನವರ ಮಗ ವೀರಭದ್ರಪ್ಪನವರಿಗೆ ೧೪೯೬/- ರೂಗಳಿಗೆ ಮಠವನ್ನೇ ಭೋಗ್ಯ ಮಾಡಿದ್ದರು.[63] ಮುಂದಿನ ಹತ್ತು ವರ್ಷಗಳಲ್ಲಿ ಮಠದ ಕಟ್ಟಡಗಳಿಂದ ಬರುವ ಬಾಡಿಗೆ ಹಾಗೂ ತೋಟದ ಉತ್ಪನ್ನಗಳಿಂದ ಈ ಮೊಬಲಗನ್ನು ಉತ್ತಾರ ಹಾಕಿಕೊಳ್ಳುವಂತೆ ಕರಾರು ಮಾಡಲಾಗಿತ್ತು.[64] ಗುರುಸ್ವಾಮಿಗಳು ೧೮೯೯ರಲ್ಲಿ ತಮ್ಮ ೮೬ನೇ ವಯಸ್ಸಿನಲ್ಲಿ ಲಿಂಗೈಕ್ಯರಾದಾಗ, ಮಠದ ಆವರಣದಲ್ಲಿ ಅವರೇ ನಿರ್ಮಿಸಿಕೊಂಡಿದ್ದ ಗದ್ದುಗೆಯಲ್ಲಿ[65] ಅವರ ಅಂತ್ಯ ಸಂಸ್ಕಾರವನ್ನು ನಡೆಸಲಾಯಿತು.

ಮೇಲಿನ ದಾಖಲೆಗಳ ಹಿನ್ನೆಲೆಯಲ್ಲಿ ಯೋಚಿಸಿದಾಗ ತಿಪ್ಪಶೆಟ್ಟಿ ಮಠದ ಗೋತ್ರಕ್ಕೆ ಸೇರಿದ ಚನ್ನಬಸವ ಮರಿದೇವರ ಆಯ್ಕೆಯನ್ನು ಬಾಣಾವರದ (ಸರ್ಪಭೂಷಣರ) ಮನೆತನದವರು ವಿರೋಧಿಸಿರುವಂತಿದೆ. ಬಹುಶಃ ೫೦ ವರ್ಷಗಳಷ್ಟು ಹಿಂದಿನ ಗಾಯ ಇನ್ನೂ ಮಾಗಿದಂತಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ಖಾಸಾ (ಸ್ವಂತ) ಮಠವೆಂದೇ ಜಾಹೀರಾಗಿದ್ದ ಸರ್ಪಭೂಷಣಮಠದ ಮೇಲೂ ೧೮೮೫ರ ವೇಳೆಗೆ ಪೇಟೆ ಶೆಟ್ಟಿ ಯಜಮಾನರುಗಳು ತಮ್ಮ ಹಿಡಿತವನ್ನು ಸಾಧಿಸಿದ್ದರು ಎಂಬುದೂ ಖಚಿತವಾದಂತಾಗಿದೆ. ಇನ್ನೊಂದು ಮುಖ್ಯ ವಿಚಾರವೇನೆಂದರೆ ಇದೇ ಸುಮಾರಿಗೆ ಗುರುಸ್ವಾಮಿಗಳು ತಾವು ಸಾಕಿಕೊಂಡಿದ್ದ ಮರಿಯೊಂದನ್ನು ಬೆಂಗಳೂರಿನ ಮಹಾಂತರ (ಪಟ್ಟದ) ಮಠಕ್ಕೆ ಒಪ್ಪಿಸಿಕೊಟ್ಟಿದ್ದುದು[66] ಒಂದು ವಿಶೇಷ ಸಂಗತಿ.

ಚನ್ನಬಸವ ಸ್ವಾಮಿಗಳು ಸರ್ಪಭೂಷಣಮಠದ ನಾಲ್ಕನೆಯ ಮಠಾಧೀಶರಾಗಿ ೧೮೮೭ರ ವೇಳೆಗೆ ಆಯ್ಕೆಯಾಗಿದ್ದರಾದರೂ; ಅವರ ನಿಜವಾದ ಮಠಾಧಿಪತ್ಯ ಆರಂಭವಾದದ್ದು ೧೯೦೦ರ ನಂತರವೆ. ಇವರ ಕಾಲದ ಬಹಳ ಮಹತ್ವದ ಕೆಲಸವೆಂದರೆ ೧೯೦೨ರಿಂದ ತಮ್ಮ ಮಠದಲ್ಲಿ ವೇದಪಾಠಶಾಲೆಯನ್ನು ಪ್ರಾರಂಭಿಸಿದ್ದಲ್ಲದೇ, ಆಗ ಐದು ಮಂದಿ ಬಡ ವಿದ್ಯಾರ್ಥಿಗಳಿಗೆ ಉಚಿತ ಊಟ ಹಾಗೂ ವಸತಿ ಸೌಲಭ್ಯಗಳನ್ನು ಕಲ್ಪಿಸಿದ್ದುದು.[67] ಮಠದ ಖಾಲಿ ಕಟ್ಟಡಗಳನ್ನು ಸೂಕ್ತ ಬಾಡಿಗೆಗೆ ಒಳಗುಮಾಡಿ ಬಂದ ಆದಾಯದಿಂದ ಮಠದಲ್ಲಿ ನಿತ್ಯ ದಾಸೋಹ ಹಾಗೂ ಶೈಕ್ಷಣಿಕ ಅಭಿವೃದ್ಧಿಗೆ ವಿನಿಯೋಗಿಸ ತೊಡಗಿದರು. ಸಾಕಷ್ಟು ಜವಾಬ್ದಾರಿಗಳನ್ನು ಹೊತ್ತು ಮಠವನ್ನು ಮುನ್ನಡೆಸತೊಡಗಿದ್ದ ಚನ್ನಬಸವಸ್ವಾಮಿಗಳಿಗೆ

೧೯೧೧ರಿಂದ ಗಂಜಾಂ ಮಠದ ಜವಾಬ್ದಾರಿಯೂ ಇವರ ಹೆಗಲಿಗೆ ಬಿತ್ತು. ಗಂಜಾಂ ಮಠದ ಚಿದ್ಘನ ಶಿವಾಚಾರ್ಯರು ದಿನಾಂಕ : ೩.೧೨.೧೯೧೧ರಲ್ಲಿ ಶಿವಾಧೀನರಾದರು. ಅವರ ಮರಣ ಶಾಸನದ ಆಶಯದ ರೀತ್ಯಾ, ಸದರಿ ಮಠದ ಬಸವರಾಜ ಮರಿದೇವರಿಗೆ ಮೈನರ್ ಗಾರ್ಡಿಯನ್ ಆಗಿದ್ದು,[68] ಮುಂದೆ ೧೯೨೪ರವರೆಗೂ ಆ ಮಠವನ್ನು ಉದ್ಧರಿಸಿ ಮುನ್ನಡೆಸಿದ ಕೀರ್ತಿಗೆ ಇವರು ಪಾತ್ರರಾಗಿದ್ದರು.

೧೯೧೭ರಲ್ಲಿ 'ಕಿಚ್ಚಟ್ಟಿ ಛತ್ರದ ರಸ್ತೆ' (ಈಗಿನ ಕೆಂಪೇಗೌಡ ರಸ್ತೆ)ಯಿಂದ ನೇರವಾಗಿ ರೈಲ್ವೆ ನಿಲ್ದಾಣಕ್ಕೆ ನೂತನ ಮಾರ್ಗವನ್ನು ನಿರ್ಮಿಸಲಾಗಿತ್ತು. ಆಗ ಸರ್ಪಭೂಷಣ ಮಠದ ಉತ್ತರ ಭಾಗದ ಆಸ್ತಿ ಒತ್ತುವರಿಯಾಗಿ ೧೫೯೭.೯೧ ಚದರಗಜ ಭೂಮಿಯನ್ನು ಸರ್ಕಾರ ವಶಪಡಿಸಿಕೊಂಡಿತ್ತು.[69] ಈ ಬಾಬ್ತು ಬರಬೇಕಾದ ಪರಿಹಾರ ತಮಗೇ ಸೇರಬೇಕೆಂದು ಕೆಂಪುನೂಲು ನಂಜುಂಡಯ್ಯನ ಮಗ ಪ್ರಭಣ್ಣ ಎಂಬುವವರು ದಾವೆ ಹೂಡಿದ್ದರು.[70] ಇವುಗಳನ್ನೆಲ್ಲಾ ನಿಭಾಯಿಸಿ ಮಠಕ್ಕೆ ಬರಬೇಕಾಗಿದ್ದ ೪೮೮೩ರೂ ಪರಿಹಾರವನ್ನು ಪಡೆಯುವಲ್ಲಿ ಚನ್ನಬಸವಸ್ವಾಮಿಗಳು ಬಹಳಷ್ಟು ಶ್ರಮ ವಹಿಸಬೇಕಾಯಿತು.[71]

ಚನ್ನಬಸವಸ್ವಾಮಿಗಳು ೧೯೨೩ರಲ್ಲಿ ಗುಬ್ಬಿ ನಾಟಕ ಕಂಪನಿಗೆ ತಮ್ಮ ಮಠದ ಖಾಲಿ ಜಾಗದಲ್ಲಿ ನಿವೇಶನವನ್ನು ಒದಗಿಸಿಕೊಟ್ಟಿದ್ದರು. ಆ ಒಪ್ಪಂದದ ಪ್ರಕಾರ ತುಮಕೂರು ಜಿಲ್ಲಾ ಗುಬ್ಬಿ ಸ್ಥಳದ ಹಂಪಣ್ಣನವರ ಮಗ ಶ್ರೀ ಚನ್ನಬಸವೇಶ್ವರಸ್ವಾಮಿ ಕೃಪಾಪೋಷಿತ ನಾಟಕ ಮಂಡಳಿಗೆ ಮಾಲೀಕರಾಗಿದ್ದ ಜಿ.ಎಚ್. ವೀರಣ್ಣ (ಗುಬ್ಬಿವೀರಣ್ಣ) ನವರಿಗೆ ಮಠದ ಪೂರ್ವದಿಕ್ಕಿನ ಖಾಲಿ ಜಾಗವನ್ನು ಬಿಟ್ಟುಕೊಡಲಾಗಿತ್ತು. ಅವರು ತಮ್ಮ ಸ್ವಂತ ಖರ್ಚಿನಿಂದ ಸೂಕ್ತ ನಾಟಕ ಮಂದಿರವನ್ನು ನಿರ್ಮಿಸಿಕೊಂಡು ಮುಂದಿನ ೧೫ ವರ್ಷಗಳ ಕಾಲ ಇದನ್ನು ಬಳಸಿಕೊಂಡು ವಾರ್ಷಿಕ ೨೫೦ ರೂಗಳ ಬಾಡಿಗೆ ಕೊಡುವಂತೆಯೂ, ವಾಯಿದೆ ಮುಗಿದ ನಂತರ ಕಟ್ಟಡವನ್ನು ಮುಫತ್ತಾಗಿ ಮಠಕ್ಕೆ ಬಿಟ್ಟುಕೊಡುವಂತೆಯೂ ಕರಾರಾಗಿತ್ತು.[72]

ಚನ್ನಬಸವಸ್ವಾಮಿಗಳು ತಮ್ಮ ಮಠದ ಮುಂದಿನ ಉತ್ತರಾಧಿಕಾರಿಯ ಆಯ್ಕೆಗಾಗಿ ಆಗಿನ ಪ್ರಸಿದ್ಧ ಪತ್ರಿಕೆ 'ಮೈಸೂರ್ ಸ್ಟಾರ್' (ದಿನಾಂಕ:೨೮.೯.೧೯೨೪)ನಲ್ಲಿ ಒಂದು ಪ್ರಕಟಣೆಯನ್ನು ನೀಡಿದ್ದರು.[73] ಸಪ್ಪಣ್ಣ ಸ್ವಾಮಿಗಳಂಥ ಸುಪ್ರಸಿದ್ಧ ಮಹನೀಯರ ಈ ಮಠಕ್ಕೆ ಸದ್ವಂಶೀಯರೂ ಸಂಸ್ಕೃತ ಪಾರಂಗತರೂ ಹಾಗೂ ವೀರಶೈವ ಧರ್ಮದ ಬಗೆಗೆ ವಿಶೇಷ ಪರಿಣತಿಯುಳ್ಳ ವಟುವಿನ ಆಯ್ಕೆಗಾಗಿ ಬಹಳ ಶೋಧ ನಡೆಸಿದ್ದರು. ಕೊನೆಗೂ ತಮ್ಮ ಜೀವಿತಾವಧಿಯಲ್ಲಿ ಉತ್ತಮ ವಟುವಿನ ಆಯ್ಕೆ ಮಾಡುವುದು ಸಾಧ್ಯವಾಗಲೇ ಇಲ್ಲ. ಇವರ ಕಾಲದ ಮತ್ತೊಂದು ಸ್ಮರಣೀಯ ಘಟನೆಯೆಂದರೆ ಮಾಗಡಿಯ ಜಡೇದೇವರ ಮಠದಲ್ಲಿ ದಿ : ೧೨.೫.೧೯೨೫ ರಂದು ಜರುಗಿದ ವೀರಶೈವ ಪ್ರಾಂತೀಯ ಮಹಾಸಭೆಗೆ, ಅದರ ರೂವಾರಿಗಳಾಗಿ ಮುಂದೆ ನಿಂತು, ಆ ಮಠದ ಶಂಕರಸ್ವಾಮಿಗಳೊಂದಿಗೆ ಸಮಾರಂಭವನ್ನು ಯಶಸ್ವಿಯಾಗಿ ನೆರವೇರಿಸಿದ್ದು, ಅಂದಿನ 'ಮೈಸೂರ್ ಸ್ಟಾರ್' ಪತ್ರಿಕೆಯಲ್ಲಿ ವರದಿಯಾಗಿದೆ.[74] ಹುಣಸಮಾರನಹಳ್ಳಿಯ ಪಟ್ಟದ ನಂಜೇದೇವರಿಗೂ ಇವರಿಗೂ ಆತ್ಮೀಯವಾದ ಬಾಂಧವ್ಯವಿತ್ತು. ತಮ್ಮ ಅಂತಿಮ ದಿನಗಳಲ್ಲಿ ಅವರನ್ನು ತಮ್ಮ ವಿಶೇಷ ಸಲಹೆಗಾರರನ್ನಾಗಿ ನಡೆಸಿಕೊಂಡಿದ್ದರು.[75] ಬೆಂಗಳೂರಿನ ಇತಿಹಾಸದಲ್ಲಿಯೇ ಸರ್ಪಭೂಷಣ ಮಠಕ್ಕೆ ಒಂದು ವಿಶೇಷವಾದ ಸ್ಥಾನಮಾನವನ್ನು ತಂದುಕೊಟ್ಟಿದ್ದ ಚನ್ನಬಸವಸ್ವಾಮಿಗಳು ತಮ್ಮ ೬೯ನೆಯ ವಯಸ್ಸಿನಲ್ಲಿ ದಿನಾಂಕ : ೧೯.೧೦.೧೯೨೭ರಂದು ಲಿಂಗೈಕ್ಯರಾದರು.[76] ಇವರ ಅಂತ್ಯಕ್ರಿಯೆಗಳನ್ನು ಹುಣಸಮಾರನಹಳ್ಳಿಯಲ್ಲಿಯೇ ನೆರವೇರಿಸಲಾಯಿತು.[77]

ಚನ್ನಬಸವಸ್ವಾಮಿಗಳು ತಾವು ಶಿವಾಧೀನರಾಗುವ ಮುನ್ನ ದಿನಾಂಕ : ೬.೬.೧೯೨೭ರಂದು ಒಂದು ಇಚ್ಛಾಪತ್ರವನ್ನು ಬರೆಸಿ, ತಮ್ಮ ನಂತರದ ಮುಂದಿನ ಸಂಪೂರ್ಣ ಮಠಾಧಿಕಾರವನ್ನು ವಿರಕ್ತಾಶ್ರಮದ ಸೂತ್ರಾನುವರ್ತಿಗಳಾಗಿದ್ದ ಹುಣಸಮಾರನಹಳ್ಳಿಯ ಮಠದ ಬಸವಲಿಂಗ ಸ್ವಾಮಿಗಳಿಗೆ ಒಪ್ಪಿಸಿದ್ದರು.[78] ಇವರು ಮಠದ ದೈನಂದಿನ ಆಚರಣೆಗಳನ್ನು ಸುಸೂತ್ರವಾಗಿ ನಡೆಸಿಕೊಂಡು, ವೇದಪಾಠಶಾಲೆ ಹಾಗೂ ಉಚಿತ ವಿದ್ಯಾರ್ಥಿನಿಲಯಗಳನ್ನು ಮುಂದುವರೆಸಿಕೊಂಡು ಸಕಾಲದಲ್ಲಿ ಸೂಕ್ತ ವಟುವೊಬ್ಬರನ್ನು ತಮ್ಮ ಮುಂದಿನ ಮಠಾಧ್ಯಕ್ಷರನ್ನಾಗಿ ನೇಮಕ ಮಾಡುವಂತೆ ಸೂಚಿಸಲಾಗಿತ್ತು. ಜೊತೆಗೆ ಈ ಬಸವಲಿಂಗಸ್ವಾಮಿಗಳಿಗೆ ಸೂಕ್ತ ಸಲಹೆಗಾರರನ್ನಾಗಿ ಹುಣಸಮಾರನಹಳ್ಳಿಯ ಮಠದ

ಪಟ್ಟದ ನಂಜೇಸ್ವಾಮಿಗಳು, ತಿಪ್ಪಶೆಟ್ಟಿ ಮಠದ ಚರಮೂರ್ತಿಗಳಾಗಿದ್ದ ಪುಟ್ಟ ನಂಜುಂಡಸ್ವಾಮಿಗಳು, ಎಂ.ನಾಗಪ್ಪನವರು, ಬಾಣಾವರದ ಹುಚ್ಚಪ್ಪನವರು ಹಾಗೂ ದೊಡ್ಡಮಠದ ಎನ್. ಬಸೆಟ್ಟಪ್ಪನವರುಗಳನ್ನು ನೇಮಿಸಲಾಗಿತ್ತು.[79] ಈ ಕರಾರಿನ ರೀತ್ಯಾ ಚನ್ನಬಸವ ಸ್ವಾಮಿಗಳು ಶಿವಾಧೀನರಾದ ನಂತರ ಅಧಿಕಾರಕ್ಕೆ ಬಂದ ಬಸವಲಿಂಗಸ್ವಾಮಿಗಳು ಆರಂಭದಿಂದಲೂ ಮಠದ ಪುರೋಭಿವೃದ್ಧಿಗಾಗಿ ಶ್ರಮಿಸುತ್ತಾ ಸತ್‌ಪರಂಪರೆಗೆ ತಮ್ಮ ಶಕ್ತಿಮೀರಿ ಶ್ರಮಿಸತೊಡಗಿದರು. ಮಠದಲ್ಲಿ ಹಿಂದಿನಿಂದಲೂ ನಡೆದು ಬಂದಿದ್ದ ಪಾಠಶಾಲೆಯನ್ನು ಮತ್ತಷ್ಟು ಅಭಿವೃದ್ಧಿಪಡಿಸಿದ್ದಲ್ಲದೆ ಮುಂದೆ ಅಲ್ಲಿ ೪೦ ಮಂದಿ ವಿದ್ಯಾರ್ಥಿಗಳಿಗೆ ಅಧ್ಯಯನದ ಸೌಲಭ್ಯಗಳನ್ನು ಕಲ್ಪಿಸಲಾಗಿತ್ತು.[80] ಈ ಸಂಬಂಧವಾಗಿ ಮಹಾರಾಜಾ ಸರಕಾರದವರಿಂದ ಮಾಹೆಯಾನ ೪೦ ರೂಗಳ ಅನುದಾನವನ್ನು ಪಡೆಯುವಲ್ಲಿ ಬಸವಲಿಂಗಸ್ವಾಮಿಗಳು ಯಶಸ್ವಿಯಾಗಿದ್ದರು. ಈ ಅನುದಾನವು ದಿನಾಂಕ : ೧.೭.೧೯೨೯ ರಿಂದ ಮುಂದಿನ ಐದು ವರ್ಷಗಳವರೆಗೂ ಜಾರಿಯಲ್ಲಿತ್ತು.[81] ಇವರ ಕಾಲದಲ್ಲಿ ಶಾಲೆಗೆ ''ಶ್ರೀ ಸರ್ಪಭೂಷಣ ವೇದವಿದ್ಯಾಗುರುಕುಲವಾಸ'' ಎಂಬ ನೂತನ ನಾಮಕರಣವನ್ನು ಮಾಡಲಾಗಿತ್ತು. ಈ ಶಾಲೆಯನ್ನು ಅಧಿಕೃತವಾಗಿ ದಿನಾಂಕ : ೧೦.೧೨.೧೯೨೭ ರಂದು ರಾಜ್ಯಸಭಾ ಭೂಷಣ ದಿವಾನ್ ಬಹದ್ದೂರ್ ಸರ್.ಕೆ.ಪಿ. ಪುಟ್ಟಣ್ಣಶೆಟ್ಟಿ ಅವರಿಂದಲೇ ಉದ್ಘಾಟಿಸಿದ್ದಲ್ಲದೆ, ಮುಂದೆ ಈ ವಿದ್ಯಾ ಸಂಸ್ಥೆಗೆ ಅವರೇ ಅಧ್ಯಕ್ಷರಾಗಿ ಮುಂದುವರಿಯುವಂತೆ ಮಾಡಿದ್ದುದು[82] ಬಸವಲಿಂಗಸ್ವಾಮಿಗಳ ಹೆಗ್ಗಳಿಕೆಯಾಗಿತ್ತು.

ಬಸವಲಿಂಗಸ್ವಾಮಿಗಳ ಕಾಲದ ಇನ್ನೊಂದು ಮಹತ್ವದ ಸಾಧನೆ ಎಂದರೆ, ಸರ್.ಕೆ.ಪಿ.ಪುಟ್ಟಣ್ಣಶೆಟ್ಟರ ಸಹಕಾರದಿಂದ ಕಾವೇರಿ ಅಚ್ಚುಕಟ್ಟು (ಇರ್ವಿನ್ ನಾಲಾ) ಪ್ರದೇಶದಲ್ಲಿ ಮಠದ ಪಾಠಶಾಲಾ ಅಭಿವೃದ್ಧಿಗೋಸ್ಕರ ೬೦ ಎಕರೆ ಜಮೀನು ಇನಾಮಾಗಿ ಕೊಡುವಂತೆ ಮಹಾರಾಜ ಸರ್ಕಾರದಲ್ಲಿ ಒತ್ತಾಯ ತಂದಿದ್ದರು.[83] ಇದರ ಪರಿಣಾಮವಾಗಿ ಮಂಡ್ಯ ತಾಲ್ಲೂಕಿನ ಮುಟ್ಟನಗೆರೆ ಗ್ರಾಮದ ಸರ್ವೆ ನಂ:೧೮ ಹಾಗೂ ಹಲಸಗೆರೆ ಗ್ರಾಮದ ಸರ್ವೆ ನಂ:೨೮ರಲ್ಲಿ ಒಟ್ಟು ೨೫ ಎಕರೆ ೧೬ ಗುಂಟೆ ಜಮೀನನ್ನು ಸರ್ಕಾರದಿಂದ ಮಂಜೂರು ಮಾಡಲಾಗಿತ್ತು.[84] ಮುಂದೆ ತಮ್ಮ ಮಠಾಧಿಪತ್ಯದ ತೂಗುಯ್ಯಾಲೆಯ ನಡುವೆ ಬಸವಲಿಂಗ ಸ್ವಾಮಿಗಳು, ಎಕರೆ ಒಂದಕ್ಕೆ ಕೇವಲ ೫೦/-ರೂಗಳಷ್ಟುರಿಯಾಯ್ತಿ ದರದಲ್ಲಿ ಮಂಜೂರಾಗಿದ್ದ ಭೂಮಿಯನ್ನು ಉಳಿಸಿಕೊಳ್ಳಲು ಅಸಮರ್ಥರಾದರು. ಈ ಮಧ್ಯೆ ಮಠದ ಭಕ್ತರಿಗೂ ಬಸವಲಿಂಗಸ್ವಾಮಿಗಳಿಗೂ ನಡುವಿನ ಸಂಬಂಧ ದಿನೇದಿನೆ ತೀರಾ ಹದಗೆಟ್ಟಿತ್ತು. ಇವರ ಸಲಹೆಗಾರರಾಗಿದ್ದ ಎಂ. ನಾಗಪ್ಪ, ಬಾ.ಹುಚ್ಚಪ್ಪ, ಎನ್. ಬಸೆಟ್ಟಪ್ಪ ಇವರುಗಳೇ ಮುಂದೆ ನಿಂತು ಸರ್ಪಭೂಷಣಮಠಕ್ಕೆ ನೂತನ ಮಠಾಧಿಪತಿಯೊಬ್ಬರನ್ನು ನೇಮಿಸುವಂತೆ ಚಿತ್ರದುರ್ಗ ಸಂಸ್ಥಾನದ ಜಯದೇವ ಜಗದ್ಗುರುಗಳವರಲ್ಲಿ ಒತ್ತಡ ತಂದರು.[85] ತತ್ಪರಿಣಾಮವಾಗಿ ದಿನಾಂಕ : ೧೨.೮.೧೯೩೨ ರಂದು ಪಂಡಿತ ಮಹಾದೇವ ಶಾಸ್ತ್ರಿ (ಮಮದಾಪುರ) ಎಂಬುವರನ್ನು ಸರ್ಪಭೂಷಣ ಮಠಕ್ಕೆ ಮುಂದಿನ ಪಟ್ಟವನ್ನಾಗಿ ಆರಿಸಿ ಆಶೀರ್ವದಿಸಿ ಕಳುಹಿಸಿಕೊಟ್ಟರು.[86] ಈ ನೂತನ ಸ್ವಾಮಿಗಳ ಸ್ವಾಗತ ಕಾರ್ಯವು ಬಸವಲಿಂಗಸ್ವಾಮಿಗಳ ಸಮಕ್ಷಮದಲ್ಲಿ ಸರ್. ಕೆ.ಪಿ. ಪುಟ್ಟಣ್ಣಶೆಟ್ಟರ ನೇತೃತ್ವದಲ್ಲಿ ಅದ್ದೂರಿಯಾಗಿ ನಡೆದ ವಿಚಾರಗಳು ಅಂದಿನ ಮೈಸೂರ್ ಸ್ಟಾರ್ ಪತ್ರಿಕೆಯಲ್ಲೂ ವರದಿಯಾಗಿವೆ.[87]

ಇಷ್ಟೆಲ್ಲಾ ಪ್ರಯತ್ನಗಳಾದಾಗ್ಯೂ ಉಭಯ ಮಠಾಧಿಪತಿಗಳ ನಡುವೆ ಸಾಮರಸ್ಯ ಕುದುರುವ ಮೊದಲೇ ಅಸಮಾಧಾನದ ಅಲೆ ಎದ್ದಿತು. ಮೇಲ್ಕಂಡ ಮಹಾದೇವ ಸ್ವಾಮಿಗಳನ್ನು ಸರ್ಪಭೂಷಣ ಮಠಕ್ಕೆ ತಕ್ಕ ಆಯ್ಕೆಯಲ್ಲವೆಂದು ಬಸವಲಿಂಗಸ್ವಾಮಿಗಳು ತಿರಸ್ಕರಿಸಿಬಿಟ್ಟರು.[88] ಉಭಯರ ನಡುವೆ ನ್ಯಾಯಾಲಯದಲ್ಲಿ ಮೊಕದ್ದಮೆಯೂ ದಾಖಲಾಯಿತು. ಈ ಮಧ್ಯೆ ಬಸವಲಿಂಗಸ್ವಾಮಿಗಳು (೫೭ ವರ್ಷ) ದಿನಾಂಕ : ೨೩.೧೧.೧೯೩೩ ರಂದು ಒಂದು ಕರಾರನ್ನು ಹುಟ್ಟಿಸಿ ತಮಗೆ ಸರ್ಪಭೂಷಣಮಠದ ಮೇಲಿದ್ದ ಸಂಪೂರ್ಣ ಸಾರ್ವಭೌಮತ್ವವನ್ನು ಹುಣಸಮಾರನಹಳ್ಳಿಯ ಮಠದ ಪಟ್ಟದ ನಂಜೇಸ್ವಾಮಿಗಳಿಗೆ ಒಪ್ಪಿಸಿಬಿಟ್ಟಿದ್ದರು.[89] ದಿನಾಂಕ : ೨೯.೭.೧೯೩೬ರಂದು ಹೊರಬಿದ್ದ ನ್ಯಾಯಾಲಯದ ತೀರ್ಪಿಗನುಸಾರವಾಗಿ ''ಮಹಾದೇವಸ್ವಾಮಿಗಳೇ ಸರ್ಪಭೂಷಣಮಠದ ನಿಜವಾದ ಅಧಿಪತಿಗ'ಳೆಂದೂ; ಕೇವಲ ತಾತ್ಕಾಲಿಕ ವ್ಯವಸ್ಥೆಗಾಗಿ ಉಸ್ತುವಾರಿ ಸ್ವಾಮಿಗಳಾಗಿದ್ದ ಬಸವಲಿಂಗ ಸ್ವಾಮಿಗಳು ಹುಣಸಮಾರನಹಳ್ಳಿಯ ಪಟ್ಟದ ನಂಜೇದೇವರ ಹೆಸರಿನಲ್ಲಿ ಹುಟ್ಟಿಸಿದ್ದ ಕರಾರು ನ್ಯಾಯ

ಬಾಹಿರವಾದದ್ದೆಂದೂ; ಹಾಗೂ ಸರ್ಪಭೂಷಣಮಠದ ಮೇಲೆ ಚಿತ್ರದುರ್ಗದ ಮುರಗಿ ಮಠಕ್ಕೆ ಯಾವುದೇ ಬಗೆಯ ನಿರ್ದೇಶಾತ್ಮಕ ಅಧಿಕಾರವೂ ಇರುವುದಿಲ್ಲ''ವೆಂದೂ ಸಾರಲಾಯಿತು.[90] ಮುಂದೆ ದಿನಾಂಕ : ೧೨.೮.೧೯೩೮ ರಂದು ರಾಜ್ಯ ಶ್ರೇಷ್ಠ ನ್ಯಾಯಾಲಯವೂ ಕೂಡ ಇದೇ ತೀರ್ಮಾನವನ್ನು ಎತ್ತಿಹಿಡಿಯಲಾಗಿ[91] ಅಂದಿನಿಂದ ಮಹಾದೇವಸ್ವಾಮಿಗಳ ಅಧಿಕೃತವಾದ ಮಠಾಧಿಪತ್ಯ ಪ್ರಾರಂಭವಾಯಿತು.

ಇವರ ಕಾಲದಲ್ಲಿ ೧೯೫೦ರ ವರೆಗೂ ಮಠದ ಸಂಸ್ಕೃತ ಪಾಠಶಾಲೆಯನ್ನು ಮುನ್ನಡೆಸಿದ್ದರಾದರೂ ಕ್ರಮೇಣ ಅದರ ಜನಪ್ರಿಯತೆ ಕಡಿಮೆಯಾಯಿತು. ಮಠಧ ಉಚಿತ ವಿದ್ಯಾರ್ಥಿನಿಲಯವನ್ನು ಮುಂದುವರೆಸಿ ಗ್ರಾಮೀಣ ಭಾಗದ ೪೦-೫೦ ಮಂದಿ ವಿದ್ಯಾರ್ಥಿಗಳಿಗೆ ಸೌಲಭ್ಯ ಕಲ್ಪಿಸಿದ್ದರು. ಶಿವಾನುಭವ ತರಗತಿಗಳನ್ನು ಬೆಂಗಳೂರಿನಲ್ಲಿ ಮೊಟ್ಟಮೊದಲಿಗೆ ಪ್ರಾರಂಭಿಸಿದ್ದಲ್ಲದೆ ಬಸವಜಯಂತಿ ಮತ್ತು ಅಕ್ಕಮಹಾದೇವಿ ಜಯಂತಿಗಳಿಗೆ ಈ ಭಾಗದಲ್ಲಿ ಉತ್ತಮ ಚಾಲನೆ ನೀಡಿದವರು ಮಹಾದೇವಸ್ವಾಮಿಗಳು. ಇವರು ಉತ್ತಮ ವಾಗ್ಮಿಗಳೂ, ತತ್ವಜ್ಞಾನ ವಿಶಾರದರೂ ಆಗಿದ್ದು ಬೆಂಗಳೂರಿನ ಭಕ್ತ ಜನಕ್ಕೆ 'ಅಭಿನವ ಅಲ್ಲಮ'ರೆಂದೇ ಪ್ರಸಿದ್ಧರಾಗಿದ್ದರು. ಕನ್ನಡ ಸಾಹಿತ್ಯ ಲೋಕದ ಖ್ಯಾತನಾಮರಾದ ಬಿ.ಎಂ.ಶ್ರೀ., ಅ.ನ.ಕೃ. ಮುಂತಾದವರೊಂದಿಗೆ ವಿಶೇಷವಾದ ಸಖ್ಯವನ್ನಿರಿಸಿಕೊಂಡಿದ್ದ ಮಹಾದೇವಸ್ವಾಮಿಗಳು ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ನಿಕಟವಾದ ಸಂಪರ್ಕ ಬೆಳೆಸಿಕೊಂಡಿದ್ದರು. ಸರ್ಪಭೂಷಣ ಮಠವು ಇವರ ಕಾಲದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ನೆಲೆಬೀಡಾಗಿತ್ತು. ಜ್ಞಾನದಾನ ಮತ್ತು ಅನ್ನದಾನಗಳು ಮಠದ ನಿತ್ಯನೇಮಗಳಾಗಿದ್ದವು.[92]

ಮಠದ ವ್ಯವಹಾರಕ್ಕೆ ಸಂಬಂಧಪಟ್ಟಂತೆ ಮಹಾದೇವಸ್ವಾಮಿಗಳು ದಿನಾಂಕ : ೩.೧೦.೧೯೫೦ರಲ್ಲಿ ಮುರಿಗಾಮಠದ ಜಯದೇವ ಜಗದ್ಗುರುಗಳಿಗೆ ಒಂದು ಕರಾರನ್ನು ಬರೆದು ಕೊಟ್ಟಿದ್ದಾರೆ. ಈ ಕರಾರಿನಲ್ಲಿ - ''ನಾನು ತಮ್ಮಿಂದ ಆಶ್ರಮ ಸ್ವೀಕಾರ ಮಾಡಿ ತಮ್ಮ ಅನುಜ್ಞೆಯಂತೆ ಬೆಂಗಳೂರಿನ ಸರ್ಪಭೂಷಣಮಠದ ಮಠಾಧ್ಯಕ್ಷತೆಯನ್ನು ದಿನಾಂಕ : ೧೨.೮.೧೯೩೮ರಿಂದ ಕ್ರಮವಾಗಿ ವಹಿಸಿಕೊಂಡಿದ್ದೇನೆ. ಆ ಲಾಗಾಯ್ತು ಈ ವರೆವಿಗೂ ತಮ್ಮ ಸಲಹೆಯಂತೆ ಈ ಮಠದ ಕಾರ್ಯಭಾರವನ್ನು ನಿರ್ವಹಿಸಿಕೊಂಡು ಬಂದಿರುತ್ತೇನೆ.... ಈ ಮಠದ ವಿಶಿಷ್ಟ ಹಕ್ಕು ಬಾಧ್ಯತೆಗಳೂ ಇಲ್ಲಿನ ಸ್ವತ್ತುಗಳೂ ಹಾಗೂ ಈ ಮಠದ ಸರ್ವಾಧಿಕಾರವೂ ತಮಗೇ ಸೇರಿದ್ದು, ತಮ್ಮ ಆಜ್ಞಾನುಸಾರ ನಾನು ಈ ಮಠದ ಕಾರ್ಯಭಾರ ನಡೆಸುತ್ತಿದ್ದೇನೆ...''[93] ಎಂಬ ಇತ್ಯಾದಿ ವಿವರಗಳಿವೆ. ಮುಂದಿನ ಹತ್ತು ವರ್ಷಗಳವರೆಗೆ ಹಾಗೂ ಹೀಗೂ ತಮ್ಮ ವ್ಯವಹಾರವನ್ನು ಮುಂದುವರೆಸಿದ್ದ ಮಹಾದೇವ ಸ್ವಾಮಿಗಳು ದಿನಾಂಕ : ೨.೮.೧೯೬೧ರಲ್ಲಿ ಸರ್ಪಭೂಷಣ ಮಠಕ್ಕೆ ತಮ್ಮ ಮುಂದಿನ ಉತ್ತರಾಧಿಕಾರತ್ವದ ಕರಾರು ಪತ್ರವನ್ನು ಸಿದ್ಧಗೊಳಿಸಿದ್ದರು. ಇದರ ಪ್ರಕಾರ ಮಮದಾಪುರ ವಿರಕ್ತ ಮಠದ ಮೃತ್ಯುಂಜಯಸ್ವಾಮಿ (೩೨) ಎಂಬುವರನ್ನು ಮಠದ ಸಂಪ್ರದಾಯಗಳಿಗೆ ಅನುಗುಣವಾಗಿ, ಸ್ಥಳ ಪರಸ್ಥಳದ ಸ್ವಾಮಿಗಳು ಹಾಗೂ ಭಕ್ತಾದಿಗಳ ಸಲಹೆಯ ಮೇರೆಗೆ ಮುಂದಿನ ಉತ್ತರಾಧಿಕಾರಿಗಳನ್ನಾಗಿ ನೇಮಿಸಿಕೊಂಡಿದ್ದರು.[94] ಈ ಉತ್ತರಾಧಿಕಾರತ್ವದ ನೇಮಕಾತಿಯ ಹನ್ನೆರಡು ದಿನಗಳ ಅಂತರದಲ್ಲಿ ಹನ್ನೊಂದು ಮಂದಿ ಸದಸ್ಯರುಳ್ಳ ಒಂದು ಟ್ರಸ್ಟ್ ಕಮಿಟಿಯನ್ನು ರಚನೆ ಮಾಡಲಾಯಿತು.[95] ತಾವಿರುವವರೆಗೆ ತಾವೇ ಈ ಟ್ರಸ್ಟಿನ ಅಧ್ಯಕ್ಷರಾಗಿದ್ದು ತಮ್ಮ ನಂತರ ತಮ್ಮ ಉತ್ತರಾಧಿಕಾರಿಗಳೇ ಇದರ ಅಧ್ಯಕ್ಷರಾಗಿ ಮುಂದುವರಿಯುವಂತೆಯೂ; ಟ್ರಸ್ಟಿನ ಪಾರುಪತ್ತೆಗಳೆಲ್ಲಾ ಅಧ್ಯಕ್ಷರ ಮುಖೇಣವೇ ನಡೆಯುವಂತೆಯೂ, ಇವೇ ಮುಂತಾದ ನಿಬಂಧನೆಗಳ ಜೊತೆಗೆ, ಮಠದಲ್ಲಿ ನಡೆಯಬೇಕಾಗಿದ್ದ ಕಾರ್ಯಭಾರಗಳ ಅನೇಕ ವಿವರಗಳನ್ನು ಈ ಕರಾರಿನಲ್ಲಿ ಅಳವಡಿಸಲಾಗಿತ್ತು. ಟ್ರಸ್ಟಿಗೆ 'ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಟ್ರಸ್ಟ್' ಎಂದೇ ನಾಮಕರಣ ಮಾಡಲಾಗಿತ್ತು.[96] ಮಠದ ಸಮಗ್ರ ಆಸ್ತಿಗಳೂ ಹಾಗೂ ವಹಿವಾಟುಗಳೆಲ್ಲಾ ಟ್ರಸ್ಟಿನ ಆಧಿಪತ್ಯಕ್ಕೆ ಒಳಪಟ್ಟಿದ್ದವು. ಮುಂದಿನ ಎರಡು ತಿಂಗಳ ಅಂತರದಲ್ಲಿ ಮಹಾದೇವ ಸ್ವಾಮಿಗಳೇ ತಾವು ರಚಿಸಿದ್ದ 'ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಟ್ರಸ್ಟ್'ಅನ್ನು (ದಿ : ೧೧.೧೦.೧೯೬೧ ರಂದು) ವಜಾ ಮಾಡಿಸಿರುವ ದಾಖಲೆ ಇದೆ.[97] ನಂತರದ ಮೂರೇ ದಿನಗಳಲ್ಲಿ ದಿ: ೧೪.೧೦.೧೯೬೧ರಂದು ಸರ್ಪಭೂಷಣಮಠದಲ್ಲಿ ಬಂದು ಮೊಕ್ಕಾಂ ಮಾಡಿದ್ದ

ಚಿತ್ರದುರ್ಗ ಬೃಹನ್ಮಠದ ಜಯವಿಭವ ಜಗದ್ಗುರುಗಳು ಹದಿನೈದು ಮಂದಿ ಸದಸ್ಯರುಗಳುಳ್ಳ[98] ಮತ್ತೊಂದು ಟ್ರಸ್ಟ್ ಡೀಡನ್ನು ತಯಾರಿಸಿದರು. ಇದಕ್ಕೂ "ಶ್ರೀ ಸರ್ಪಭೂಷಣಶಿವಯೋಗಿಗಳ ಮಠದ ಟ್ರಸ್ಟ್" ಎಂದೇ ಹೆಸರಿಸಲಾಗಿತ್ತು.[99] ಈ ಕರಾರಿನ ಕೊನೆಯಲ್ಲಿ ಮಹಾದೇವಸ್ವಾಮಿಗಳು ಒಪ್ಪಿತ ಸಾಕ್ಷಿ ಎಂದು ರುಜು ಮಾಡಿದ್ದಾರೆ. ಇಷ್ಟೆಲ್ಲಾ ವ್ಯವಹಾರಗಳ ತಾಕಲಾಟದ ನಡುವೆ ದಿನಾಂಕ : ೧೨.೧೧.೧೯೬೧ ರಂದು ಮಹಾದೇವ ಸ್ವಾಮಿಗಳು ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು.[100] ಬಹುಶಃ ಸರ್ಪಭೂಷಣಮಠದ ಐತಿಹಾಸಿಕ ಪರಂಪರೆಯೆ ಇವರೊಂದಿಗೆ ಅಂತ್ಯವಾಯಿ ತೆಂದರೆ ತಪ್ಪಾಗಲಾರದು.

ಮಠದ ಭಕ್ತರ ಅಪೇಕ್ಷೆಯ ಮೇರೆಗೆ ಶಿವಕುಮಾರ ಸ್ವಾಮಿಗಳನ್ನು ದಿನಾಂಕ : ೨.೧೨. ೧೯೬೩ರಂದು ಸರ್ಪಭೂಷಣಮಠದ ಮುಂದಿನ ಮಠಾಧಿಪತಿಗಳನ್ನಾಗಿ ಜಯವಿಭವ ಜಗದ್ಗುರುಗಳೇ ನೇಮಕ ಮಾಡಿದ್ದರು.[101] ಮೇಲ್ಕಂಡ ಟ್ರಸ್ಟಿಗೂ ಮಠಾಧಿಪತಿಗಳಿಗೂ ಯಾವತ್ತೂ ಸಾಮರಸ್ಯವೇರ್ಪಡಲೇ ಇಲ್ಲ. ಈ ಮಧ್ಯೆ ಮುರಿಗಾ ಸಂಸ್ಥಾನವು ದಿನಾಂಕ : ೬.೮.೧೯೭೦ರಂದು ಒಂದು ಆದೇಶವನ್ನು ಹೊರಡಿಸಿ, ಶಿವಕುಮಾರಸ್ವಾಮಿಗಳನ್ನು ಮಠಾಧಿಪತ್ಯದಿಂದ ನಿವೃತ್ತಿಗೊಳಿಸಿಬಿಟ್ಟಿತ್ತು.[102] ಅವರು ನ್ಯಾಯಾಲಯದ ಮೊರೆ ಹೊಕ್ಕಾಗ ಹತ್ತಾರು ವರ್ಷಗಳ ಕಾಲ ನಡೆದಿದ್ದ ಈ ವಿವಾದವು ದಿನಾಂಕ : ೩೦.೧೧.೧೯೮೩ ರಂದು ರಾಜಿಯಲ್ಲಿ ಪರ್ಯಾವಸಾನ ಗೊಂಡಿತು. ಕೊನೆಗೆ ದಿನಾಂಕ : ೨೦.೧೧.೧೯೮೫ರಲ್ಲಿ ಶಿವಕುಮಾರಸ್ವಾಮಿಗಳು ಆಕಸ್ಮಿಕ ಅಪಘಾತವೊಂದರಲ್ಲಿ ಲಿಂಗೈಕ್ಯರಾದರು.[103].

ಮುಂದೆ ಮಠದ ಭಕ್ತರ ಒತ್ತಾಸೆಗನುಗುಣವಾಗಿ ಕೆರೂರು ಕನಕೇರಿ ಮಠದ ಪ್ರವಚನಾಚಾರ್ಯ ಮಲ್ಲಿಕಾರ್ಜುನಸ್ವಾಮಿಗಳು ದಿನಾಂಕ : ೧೫.೧.೧೯೮೬ ರಿಂದ ಸರ್ಪಭೂಷಣಮಠದ ಮಠಾಧಿಪತ್ಯವನ್ನು ವಹಿಸಿಕೊಂಡರು.[104] ಇವರ ಕಾಲದಲ್ಲಿ ನಡೆದ ಮಠದ ಸಾಂಸ್ಕೃತಿಕ ಚಟುವಟಿಕೆಯು ನಾಡಿನಾದ್ಯಂತ ವಿದ್ವಜ್ಜನರ ಗಮನ ಸೆಳೆಯಿತು. ಇವರ ಕಾರ್ಯ ಸಾಧನೆಗಳನ್ನು ಕುರಿತು ಡಾ। ಎಸ್. ವಿದ್ಯಾಶಂಕರ ಅವರು - "ಶ್ರೀ ಸರ್ಪಭೂಷಣಶಿವಯೋಗೀಶ್ವರ ಮಠದ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ವೀರಶೈವ ಧರ್ಮ-ಸಾಹಿತ್ಯ-ಸಂಸ್ಕೃತಿಗಳನ್ನು ಕುರಿತು ನಾಡಿನ ಖ್ಯಾತ ವಿದ್ವಾಂಸರುಗಳಿಂದ ಉಪನ್ಯಾಸಗಳನ್ನು ನಿರಂತರವಾಗಿ ಏರ್ಪಡಿಸುತ್ತಾ ಬಂದಿರುವರು. ಇಲ್ಲಿ ಪ್ರತಿವರ್ಷ ನಡೆಸುತ್ತಾ ಬಂದಿರುವ ಶ್ರಾವಣಮಾಸದ ವಿಶೇಷ ಕಾರ್ಯ ಕ್ರಮಗಳು ಅತ್ಯಂತ ಜನಪ್ರಿಯವಾಗಿವೆ. ಪ್ರತಿ ಯುಗಾದಿಯ ಸಂದರ್ಭದಲ್ಲಿ ಅಲ್ಲಮಪ್ರಭು, ನಿಜಗುಣರು ಹಾಗೂ ಸರ್ಪಭೂಷಣ ಶಿವಯೋಗಿಗಳ ಜಯಂತಿಗಳನ್ನು ವೈಭವ ದಿಂದ ಆಚರಿಸಲಾಗುವುದು" ಎಂದು ಹೇಳಿದ್ದಾರೆ.[105]

೧೯೫೫ರ ವೇಳೆಗೆ ಈ ಮಠದ ಬಗೆಗೆ ನ್ಯಾಯಾಲಯ ದಲ್ಲಿದ್ದ ವಿವಾದಗಳು ಬಿರುಸಿನ ತಿರುವುಗಳನ್ನು ಪಡೆದುವಾದ ಕಾರಣ, ಮಠದ ಸದ್ಭಕ್ತ ಜನಮನಕ್ಕೆ ನುಂಗಲಾಗದ ತುತ್ತಾಗಿವೆ. ಯಾವಾಗ ಸರ್ಪಭೂಷಣರು ವಿರಕ್ತಾಶ್ರಮ ದೀಕ್ಷೆಯನ್ನು ಕೈಗೊಂಡು, ತಮ್ಮ ಗುರುವಿನ ಆಣತಿಯಂತೆ ತಿಪ್ಪಶೆಟ್ಟಿ ಮಠದ ಉತ್ತರಾಧಿಕಾರತ್ವವನ್ನು ಪಡೆದಾಗ ಎದ್ದ ವಿವಾದದ ಅಲೆಗಳು; ಮುಂದೆ ಅವರಿಂದಲೇ ಪ್ರಾರಂಭವಾದ ಮಠಕ್ಕೂ ನಿತ್ಯ ನಿರಂತರ ವಾಗಿ ಮುಂದುವರೆದಿದ್ದು ಒಂದು ದೊಡ್ಡ ವಿಪರ್ಯಾಸವೇ ಸರಿ. ಮಠದ ಐತಿಹಾಸಿಕ ಪರಂಪರೆಯ ಉದ್ದಕ್ಕೂ ಈ ತಪೋಕ್ಷೇತ್ರ ಒಂದಿಲ್ಲೊಂದು ವಿವಾದಕ್ಕೆ ಎಡೆಯಾಗಿರುತ್ತಿ ದ್ದುದು ಮಾಮೂಲಾಗಿಬಿಟ್ಟಿದೆ. ಇಷ್ಟೆಲ್ಲಾ ವಿವಾದಗಳ ಹಿನ್ನೆಲೆಯಲ್ಲೂ ಧಾರ್ಮಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಸರ್ಪಭೂಷಣಮಠವು ಎಂದಿನಂತೆ ತನ್ನ ಉತ್ತಮ ಸ್ಥಿತಿಯನ್ನು ಕಾಪಾಡಿಕೊಂಡಿತ್ತು ಎಂಬುದು ಹೆಮ್ಮೆಯ ವಿಚಾರವಾಗಿದೆ.

**ಸರ್ಪಭೂಷಣಮಠದ ಗುರು ಪರಂಪರೆ :**

೧. ಸರ್ಪಭೂಷಣ ಶಿವಯೋಗಿಗಳು. ೧೮೩೯.
೨. ಫಾಲಲೋಚನ ಸ್ವಾಮಿಗಳು. ೧೮೩೯-೧೮೬೭.
೩. ಗುರುಸ್ವಾಮಿಗಳು. ೧೮೬೮-೧೮೮೯.
೪. ಚನ್ನಬಸವಸ್ವಾಮಿಗಳು. ೧೮೮೬-೧೯೨೭.
೫. ಬಸವಲಿಂಗಸ್ವಾಮಿಗಳು (ಉಸ್ತುವಾರಿ). ೧೯೨೭-೧೯೩೮.
೬. ಮಹಾದೇವಸ್ವಾಮಿಗಳು. ೧೯೩೮-೧೯೬೧.
೭. ಶಿವಕುಮಾರಸ್ವಾಮಿಗಳು. ೧೯೬೩-೧೯೮೫.
೮. ಮಲ್ಲಿಕಾರ್ಜುನಸ್ವಾಮಿಗಳು. ೧೯೮೬ ರಿಂದ...

## ಶ್ರೀ ಸರ್ಪಭೂಷಣ ಶಿವಯೋಗಿಗಳು ಪ್ರವಾಸ ಮಾಡಿದ ಸ್ಥಳಗಳ ನಕ್ಷೆ



## ಶ್ರೀ ಸರ್ಪಭೂಷಣ ಶಿವಯೋಗಿಗಳು ಪ್ರವಾಸ ಮಾಡಿದ ಸ್ಥಳಗಳ ಪಟ್ಟಿ

೧. ಬೆಂಗಳೂರಿನಿಂದ ಚಿತ್ರದುರ್ಗಕ್ಕೆ.
೨. ದಾವಣಗೆರೆ.
೩. ಹರಿಹರ.
೪. ಹಾವೇರಿ.
೫. ಹಾನಗಲ್ಲ.
೬. ಹುಬ್ಬಳ್ಳಿ.
೭. ಬೆಳಗಾವಿ.
೮. ಪೂನಾ ಮಾರ್ಗವಾಗಿ ಕಾಶಿಗೆ.
೯. ಕಾಶಿಯಿಂದ ಸೊಲ್ಲಾಪುರಕ್ಕೆ (ಸೊನ್ನಲಿಗೆ).
೧೦. ಬಸವನಬಾಗೇವಾಡಿ.
೧೧. ಕೂಡಲಸಂಗಮ.
೧೨. ಬಾಗಲುಕೋಟೆ.
೧೩. ಗುಳೇದಗುಡ್ಡ.
೧೪. ಹುನಗುಂದ.
೧೫. ಇಳಕಲ್.
೧೬. ಐಹೊಳೆ.
೧೭. ಪಟ್ಟದಕಲ್ಲು.
೧೮. ಬಾದಾಮಿ.
೧೯. ಸವದತ್ತಿ.
೨೦. ನರಗುಂದ.
೨೧. ನವಲುಗುಂದ.
೨೨. ಗದುಗು.
೨೩. ಕೊಪ್ಪಳ.
೨೪. ಹಂಪಿ.
೨೫. ಬಳ್ಳಾರಿ.
೨೬. ಉರವಕೊಂಡ.
೨೭. ಗುತ್ತಿ.
೨೮. ಆಧವಾನಿ.
೨೯. ಶ್ರೀಶೈಲ.
೩೦. ರಾಯಚೂರು.
೩೧. ನಾರದಗಡ್ಡೆ.
೩೨. ಸುರಪುರ.
೩೩. ಮುದಗಲ್ಲು.
೩೪. ಕೂಡ್ಳಗಿ.
೩೫. ಕೊಟ್ಟೂರು.
೩೬. ಸಿದ್ಧಗಂಗೆ.
೩೭. ಶಿವಗಂಗೆ.
೩೮. ಗುಬ್ಬಿ.
೩೯. ಬಾಣಾವರ.
೪೦. ಎಡೆಯೂರು.
೪೧. ಮೈಸೂರು.
೪೨. ನಂಜನಗೂಡು.
೪೩. ಕೊಳ್ಳೇಗಾಲ.
೪೪. ಕನಕಪುರದಿಂದ ಬೆಂಗಳೂರಿಗೆ.

[ಈ ಪಟ್ಟಿಯನ್ನು ಮಲ್ಲಾಬಾದಿ ವೀರಭದ್ರಪ್ಪನವರು (ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನ ಚರಿತ್ರೆ. ಪು. ೧೪-೨೬) ಹಾಗೂ ಬಿ. ಶಿವಮೂರ್ತಿ ಶಾಸ್ತ್ರಿಗಳು (ವೀರಶೈವ ಮಹಾ ಪುರುಷರು. ಪು. ೨೫-೨೯) ಗುರುತಿಸಿರುವುದನ್ನು ಆಧರಿಸಿ ರಚಿಸಲಾಗಿರುತ್ತದೆ.]

---

**ಅಡಿಟಿಪ್ಪಣಿಗಳು**

1. ಡಾ। ಸೂರ್ಯನಾಥ ಕಾಮತ್. ಕರ್ನಾಟಕ ರಾಜ್ಯ ಗೆಜೆಟಿಯರ್. ಭಾಗ-೩. ಪು. ೫೫೩.
2. ಸರ್ಪಭೂಷಣಮಠದ ಹಳೆಯ ದಾಖಲೆಗಳಲ್ಲಿ ಬಳೆಯ ಬಾಗಿಲನ್ನು ಯಶವಂತಪುರದ ಬಾಗಿಲು, ನೆಲಮಂಗಲದ ಬಾಗಿಲು ಎಂದೂ ಕರೆಯಲಾಗಿದೆ.
3. So. No : 42/1891-92. Judicial Assistant Commissioner Court. Bangalore. P. 5. dt. 31.8. 1892.
4. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರು ಶ್ರೀ ಸರ್ಪಭೂಷಣಶಿವಯೋಗಿಗಳ ಜೀವನಚರಿತ್ರೆ (ಧಾರವಾಡ. ೧೯೫೨) ಪು. ೨೭, ೨೮.
5. Bangalore District Revenue Commissioner Court Judgement Order No : 28-55/1911-12. dtd: 15.12.1911 (List of Mutts)
6. So. No: 42/1891-92. Judicial Assistant Commissioner Court. Bangalore. P-7. Sarpabhushanamutt.

7. ಮೈಸೂರು ಸಂಸ್ಥಾನದ ಮುಖ್ಯಸ್ಥರಿಗೆ ಅರಳೆಪೇಟೆ ದೇಶದ ಕಳಸಪ್ಪ ಶೆಟ್ಟಿಯು ಬರೆದುಕೊಂಡ ಅಹವಾಲು. ದಿ : ೧೪.೧೧.೧೮೭೯.
8. ಕೆಂಪುನೂಲು ನಂಜುಂಡಯ್ಯನ ಸಮಾಧಿಯೂ ಕೂಡ ಈ ಮಠದ ಆವರಣದೊಳಗೆ ಇತ್ತು ಎಂಬುದಾಗಿ So. No: 42/1891-92 ದಾಖಲೆಯಿಂದ ತಿಳಿದು ಬರುತ್ತದೆ.
9. So. No: 42/1891-92ರ ದಾಖಲೆ. ಪು. ೬.
10. ೧೯ನೆಯ ಶತಮಾನದ ಅಂತ್ಯದ ವೇಳೆಗೆ ಬೆಂಗಳೂರು ಶಿವಮೊಗ್ಗ ನಡುವಿನ ರೈಲ್ವೆ ಮಾರ್ಗವು ನಿರ್ಮಾಣವಾಗಿತ್ತು. ಆಗ ಈ ಮಾರ್ಗದಲ್ಲಿ ಬರುವ ಎರಡು ಬಾಣಾವರ ಗ್ರಾಮಗಳನ್ನು ಗುರುತಿಸಲು ಅನುಕೂಲವಾಗುವ ದೃಷ್ಟಿಯಿಂದ ಬೆಂಗಳೂರಿನ ಸಮೀಪದ ಬಾಣಾವರವನ್ನು 'ಚಿಕ್ಕಬಾಣಾವರ'ವೆಂದೂ; ಅರಸಿಕೆರೆಗೆ ಸಮೀಪದಲ್ಲಿ ಸಿಗುವ ಬಾಣಾವರವನ್ನು 'ದೊಡ್ಡಬಾಣಾವರ'ವೆಂದೂ ಗುರುತಿಸಲಾಗಿತ್ತು. ಅದಕ್ಕೂ ಮುನ್ನ ಇವೆರಡೂ ಬಾಣಾವರಗಳೆಂದೇ ಕರೆಯಲ್ಪಡುತ್ತಿದ್ದುದಾಗಿ ತಿಳಿದುಬರುತ್ತದೆ.
11. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರು ಶ್ರೀಸರ್ಪಭೂಷಣ ಶಿವಯೋಗಿಗಳ ಜೀವನಚರಿತ್ರೆ. ಪು. ೯.
12. ಮಲ್ಲಾಬಾದಿಯವರು, ಸಪ್ಪಣ್ಣನು ೫ನೆಯ ಮಗನೆಂದೂ ಈತನಿಗೆ ಮಲ್ಲಣ್ಣಪ್ಪ, ಮಲ್ಲಶೆಟ್ಟಪ್ಪ, ಹುಚ್ಚಣ್ಣಪ್ಪ ಮತ್ತು ಚನ್ನಮಲ್ಲಪ್ಪ ಎಂಬ ನಾಲ್ವರು ಅಣ್ಣಂದಿರಿದ್ದುದಾಗಿ ತಿಳಿಸಿದ್ದಾರೆ. (ಅದೇಪುಟ) ಆದರೆ ಗುರುಸ್ವಾಮಿಗಳು ತಮ್ಮ ಕರಾರು ಪತ್ರವೊಂದರಲ್ಲಿ ಸರ್ಪಭೂಷಣರ ಅಣ್ಣ ಶಾಂತಪ್ಪ, ೧ನೇ ತಮ್ಮ ಮಲ್ಲಣ್ಣ ಹಾಗೂ ೨ನೇ ತಮ್ಮ ಹುಚ್ಚಣ್ಣ ಎಂಬುದಾಗಿ ಒಟ್ಟು ನಾಲ್ಕು ಜನ ಸೋದರರು ಮಾತ್ರ ಎಂದು ಖಚಿತಪಡಿಸಿದ್ದಾರೆ. (ಹಕ್ಕುದಾರಿಪತ್ರ. ದಿ : ೧೪.೯.೧೮೮೭).
13. ಈತನು ಮೂರುವರ್ಷದ ಬಾಲಕನಿದ್ದಾಗ ಕಾಳಸರ್ಪವೊಂದು ಈತನ ಕೊರಳಿಗೆ ಸುತ್ತಿಕೊಂಡು ತಲೆಯ ಮೇಲೆ ಹೆಡೆಯಾಡಿಸುತ್ತಿತ್ತು. ಆದಕಾರಣ ಈತನಿಗೆ ಸರ್ಪಭೂಷಣನೆಂಬ ಹೆಸರು ಬಂದಿದ್ದಾಗಿ ತ.ಸು.ಶಾಮರಾಯ ಹೇಳುತ್ತಾರೆ.(ಶಿವಶರಣ ಕಥಾರತ್ನಕೋಶ. ಪು. ೪೮೧)
14. ಆರ್. ನರಸಿಂಹಾಚಾರ್. ಕರ್ನಾಟಕ ಕವಿಚರಿತೆ. ಸಂ-೨. ಪು. ೩೬೦.
15. ಮಲ್ಲಾಬಾದಿ ವೀರಭದ್ರಪ್ಪ. ಪೂರ್ವೋಕ್ತ. ಪು. ೧೦, ಮತ್ತು ೪೩. ಹಾಗೂ ಡಾ। ಎಚ್. ತಿಪ್ಪೇರುದ್ರಸ್ವಾಮಿ. ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪು. ೩೯೦.
16. ಎಂ.ಜಿ. ನಂಜುಂಡಾರಾಧ್ಯ. (ಸಂ.) ಜ್ಞಾನಶತಕಂ. ಶಿವಯೋಗಿಗಳ ಪರಿಚಯ. ಪು. iii.
17. ಎಂ.ಎಸ್. ಬಸವರಾಜಯ್ಯ. (ಸಂ.) ಭುಜಂಗಮಾಲಾ ಶಿವಸಂಕೀರ್ತನಂ. ಪ್ರಸ್ತಾವನೆ. ಪು.i, ii.
18. ಎಂ.ಜಿ. ನಂಜುಂಡಾರಾಧ್ಯ. ಪೂರ್ವೋಕ್ತ. ಪು.xii.
19. ಮಲ್ಲಾಬಾದಿ ವೀರಭದ್ರಪ್ಪ. ಪೂರ್ವೋಕ್ತ. ಪು. ೨೩-೨೬.
20. ೧೯ನೆಯ ಶತಮಾನದಲ್ಲಿ ಬೆಂಗಳೂರಿನ ಮೂರು ಪ್ರಮುಖ ಪೇಟೆಗಳಾಗಿದ್ದ ಅರಳೆಪೇಟೆ, ದೊಡ್ಡಪೇಟೆ, ಮಾಮೂಲು ಪೇಟೆಗಳ ಶೆಟ್ಟಿ ಯಜಮಾನರುಗಳು ತಮ್ಮ ಸಮಾಜದ ಮೇಲೆ ಧಾರ್ಮಿಕವಾಗಿ ಹಾಗೂ ಸಾಮಾಜಿಕವಾಗಿ ಸಂಪೂರ್ಣ ಅಧಿಕಾರವುಳ್ಳವರಾಗಿದ್ದರು. ಅಂದು ಇವರ ಆಣತಿಯನ್ನು ಮೀರಿ ಯಾವುದೇ ಪ್ರಮುಖ ಕಾರ್ಯಗಳೂ ಜರುಗುವಂತಿರಲಿಲ್ಲ. (೧೮೨೩ರಲ್ಲಿ ಬೇಲಿಮಠದ ಕೆಂಪುನಂಜೆ ಸ್ವಾಮಿಗಳ ಪರವಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ಹೊರಡಿಸಿದ ನಿರೂಪ; ೧೮೭೯ರಲ್ಲಿ ಅರಳೆಪೇಟೆಯ ಕಳಸಪ್ಪಶೆಟ್ಟಿ ಸಂಸ್ಥಾನಕ್ಕೆ ಬರೆದ ಅರ್ಜಿ ಹಾಗೂ ೧೯೦೬ರಲ್ಲಿ ಗೊಂಡೇದಹಳ್ಳಿ ವಿಭೂತಿ ನಾಗಯ್ಯನು ಹಾನಗಲ್ಲು ಕುಮಾರಸ್ವಾಮಿಗಳಿಗೆ ಬರೆದಿರುವ ಪತ್ರಗಳಲ್ಲಿ ಈ ವಿಚಾರ ಸ್ಪಷ್ಟವಾಗಿದೆ.)
21. ಗೊಂಡೇದಹಳ್ಳಿ ವಿಭೂತಿ ನಾಗಯ್ಯನು ಹಾನಗಲ್ಲು ಕುಮಾರಸ್ವಾಮಿಗಳಿಗೆ ಬರೆದಿರುವ ಪತ್ರ. ದಿ : ೨೨.೬.೧೯೦೬ ಗಂಜಾಂಮಠ.
22. ಡಾ। ಎಂ. ಚಿದಾನಂದಮೂರ್ತಿ. ಲಿಂಗಾಯತ ಅಧ್ಯಯನಗಳು. ಪು. ೪೮೮.
23. ಹೇಳಿಕೆ: ಬಾಣಾವರದ ಗೌರಮ್ಮ (೩೮) ನವರು. ಬೆಂಗಳೂರು. (ದಿ : ೨೩.೧.೧೯೯೩)
24. ಹೇಳಿಕೆ : ಉತ್ತರಹಳ್ಳಿ ವೆಂಕಟರಮಣಯ್ಯ (೬೮)ನವರು. ಶ್ಯಾನುಭೋಗ ಮನೆತನ. ಚಿಕ್ಕಬಾಣಾವರ. ದಿ : ೨೭.೧.೧೯೯೩.
25. ಡಾ। ಎಂ. ಚಿದಾನಂದಮೂರ್ತಿಯವರು ಜಂಗಮ ಜಾತಿಯ ಅನುಶ್ರೇಣಿಯ ಹದಿನೆಂಟು ಉಪಜಾತಿಗಳಲ್ಲಿ ಲಾಳಗೊಂಡರದು ಕೊನೆಯ ಸ್ಥಾನವೆಂದು ಗುರುತಿಸಿದ್ದಾರೆ. (ಲಿಂಗಾಯತ ಅಧ್ಯಯನಗಳು. ಪು. ೪೬೭) ಈ ಲಾಳಗೊಂಡ ಲಿಂಗಾಯತರು ಹೆಸರುಘಟ್ಟ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ದೇವನಹಳ್ಳಿ, ಯಲಹಂಕಗಳ ನಡುವಿನ ಪ್ರಾಂತ್ಯದಲ್ಲಿ ಈಗಲೂ ವಿಶೇಷವಾಗಿ ಇರುವುದನ್ನು ನಾವು ಗುರುತಿಸಬಹುದಾಗಿದೆ. 'ಲಾಳಗೊಂಡ'ಪದದ ವಿಶ್ಲೇಷಣೆ ಸ್ವಲ್ಪ ಕಠಿಣವೇ ಆಗಿದೆ. ಲಾಳಗೊಂಡ ಎಂಬ ಪೂರ್ಣ ಪದಕ್ಕೆ ನಿಘಂಟಿನಲ್ಲಿ ಅರ್ಥವಿಲ್ಲ. ಪದವಿಭಾಗ ಮಾಡಿ ಅರ್ಥೈಸುವುದಾದರೆ ಲಾಳ=ಒಂದು ದೇಶ (ಈಗಿನ ಗುಜರಾತ್). ಗೊಂಡ=ಗೌಡ; ಯಜಮಾನ ಎಂಬ ಅರ್ಥಗಳಿವೆ. ಆದ್ದರಿಂದ ಈ ಜನತೆ ಮಧ್ಯೆಯುಗದಲ್ಲಿ ಮಹಮದೀಯರ ಧಾಳಿಗೆ ಹೆದರಿ ಗುಜರಾತಿನಿಂದ ದಕ್ಷಿಣ ಭಾರತದ ಕಡೆಗೆ ಬಂದವರಿರಬೇಕು! ಮತ್ತೊಂದು ರೀತಿಯಲ್ಲಿ ವಿಶ್ಲೇಷಿಸುವುದಾದರೆ, ಲಾಲ್ ಎಂದರೆ ಕೆಂಪು ಅಥವಾ ಕಂದು ಬಣ್ಣ ಎಂದರ್ಥ. ಬಹುಶಃ ಇವರು ಕೆಂಪು ಅಥವಾ ಕಂದು ಬಣ್ಣದ ಗೌಡ ಲಿಂಗಾಯತ ಮತದವರಾಗಿರಬೇಕು! ಅಥವಾ ಹುಣಸಮಾರನಹಳ್ಳಿಯ ಎಚ್.ಆರ್. ಶಿವಯ್ಯ (೭೪ ವರ್ಷ. ನಿವೃತ್ತ ಶಿಕ್ಷಕರು) ನವರು ಹೇಳುವಂತೆ – ಅದು 'ಲಾಳಗೊಂಡ' ಅಲ್ಲ. 'ಹಾಲುಗೌಡ'ದ ಅಪಭ್ರಂಶದ

ರೂಪ 'ಲಾಲುಗೊಂಡ'. ಬೆಂಗಳೂರು ಮತ್ತು ಸುತ್ತಮುತ್ತಲ ಭಾಗದಲ್ಲಿ ಪ್ರಧಾನವಾಗಿರುವ ಗೌಡ ಲಿಂಗಾಯತರ ಒಳಪ್ರಭೇದಗಳಲ್ಲಿ ಇದೂ ಒಂದು. ಈ ಹಾಲುಗೌಡ ಲಿಂಗಾಯತ ಪಂಗಡದವರು ಹಿಂದೆ ಪಶುಪಾಲನೆ ಹಾಗೂ ಬೇಸಾಯವನ್ನು ತಮ್ಮ ಕುಲ ಕಸುಬನ್ನಾಗಿ ಇರಿಸಿಕೊಂಡಿದ್ದರು ಎಂಬುದಾಗಿ ತಿಳಿಸುತ್ತಾರೆ.

26. ನೋಡಿ : ಹಿಂದೆ ಸರ್ಪಭೂಷಣರು ದೇಶಸಂಚಾರ ಮಾಡಿದ್ದಿರಬಹುದಾದ ಸ್ಥಳಗಳನ್ನು ನಕ್ಷೆಯೊಂದರ ಸಹಾಯದಿಂದ ಗುರುತಿಸಲಾಗಿದೆ.

27. ಸರ್ಪಭೂಷಣರಿಗೆ ಮಹಾರಾಜರ ಕಡೆಯಿಂದ ಮಠದ ಜಾಗವನ್ನು ಕೊಡಿಸಿ ಕೊಟ್ಟವರು ತೋಫಖಾನೆ ಕೃಷ್ಣರಾಯರು ಎಂಬುದಾಗಿ ಮಲ್ಲಾಬಾದಿಯವರು (ಬೆಂಗಳೂರಿನ ಶ್ರೀಸರ್ಪಭೂಷಣ ಶಿವಯೋಗಿಗಳ ಜೀವನ ಚರಿತ್ರೆ. ಪು. ೨೭, ೨೮) ಹೇಳಿದ್ದಾರೆ. ಸರ್ಪಭೂಷಣಮಠದಲ್ಲಿದ್ದ ಕಂಥೆ ಕಾಯಕದ ಶಿವಲಿಂಗಯ್ಯ (೭೬) ನವರು ಹೇಳುವ ಪ್ರಕಾರ ಈ ಜಾಗವನ್ನು ಒಬ್ಬ ಕೋಮಟಿ ಶೆಟ್ಟಿ, ಶಿವಯೋಗಿಗಳಿಗೆ ದಾನವಾಗಿ ನೀಡಿದ್ದನು ಎನ್ನುತ್ತಾರೆ. ಸಾಮಾನ್ಯವಾಗಿ ದಾನವಾಗಿ ಕೊಟ್ಟ ಭೂಮಿಗಳಿಗೆ ಚಕ್ಕುಬಂದಿ ಗುರುತಿಗೆ ಲಿಂಗಮುದ್ರೆ ಕಲ್ಲುಗಳಿರುತ್ತವೆ. ಅಂತಹ ಎರಡು ಲಿಂಗಮುದ್ರೆಕಲ್ಲುಗಳು ಮಠದ ಓಂಕಾರೇಶ್ವರನ ಗುಡಿಯ ಮುಂಭಾಗದ ಜಗುಲಿಯ ಮೇಲೆ ಈಗಲೂ ಇವೆ. ಮೇಲಾಗಿ ಮಹಾರಾಜರಿಂದ ದಾನವಾಗಿ ಈ ಭಾಗ ಪ್ರಾಪ್ತವಾಗಿದ್ದರೆ ಮುಜರಾಯಿ ದಾಖಲೆಗಳಲ್ಲಿ ಈ ಬಗೆಗೆ ಉಲ್ಲೇಖವಿರಬೇಕಾಗಿತ್ತು. ಆದರೆ ಅಂತಹ ಉಲ್ಲೇಖಗಳೇನೂ ದೊರಕಿಲ್ಲ.

28. ದೇವೀರಮ್ಮ. ಕೆಂಪುನೂಲು ನಂಜುಂಡಯ್ಯನ ತಂಗಿ. ಈಕೆ ದಿ : ೩೧.೮.೧೮೯೨ರಲ್ಲಿ ನ್ಯಾಯಾಲಯದಲ್ಲಿ ಹೇಳಿಕೆ ನೀಡಿದಾಗ ೮೦ ವರ್ಷದ ವಯೋವೃದ್ಧೆಯಾಗಿದ್ದಳು.

29. S.No : 42/1891-92. dt: 31.8.1892. Assistant Commissioner Court. Bangalore Dist. P.1.

30. ಕೈವಲ್ಯಕಲ್ಪವಲ್ಲರಿ. ಸಂ : ಶಿ.ಶಿ. ಬಸವನಾಳ. ಪ್ರಾರ್ಥನಾ ಸ್ಥಲ. ೧/೧.

31. "ಧೂಳ್ತ" ಇದು ಗಂಧದ ರೂಪದಲ್ಲಿ ಇರುವ ಹಣೆಗೆ ಹಚ್ಚಿಕೊಳ್ಳುವ ತಿಲಕದಂತಹ ವಸ್ತು. ಬಾಣಾವರದ ಜನರ ಮನೆಗಳವರಲ್ಲಿ ಈಗಲೂ ಇದನ್ನು ಸಂಗ್ರಹಿಸಿಟ್ಟುಕೊಂಡು, ಆಚೀಚೆ ಹೋಗಿಬರುವಾಗ ಇದನ್ನು ಹಣೆಗೆ ಹಚ್ಚಿಕೊಳ್ಳುವುದುಂಟು. ಇದರ ಇತಿವೃತ್ತಾಂತ ಬಹಳ ಸ್ವಾರಸ್ಯಕರವಾಗಿದೆ. ಪೇಟೆಶೆಟ್ಟಿ ಯಜಮಾನರುಗಳು ಸರ್ಪಭೂಷಣರನ್ನು ತಿಪ್ಪಶೆಟ್ಟಿ ಮಠದ ಮುಂದಿನ ಮಠಾಧಿಪತಿಯಾಗಲು ವಿರೋಧಿಸಿದಾಗ, ಅದನ್ನು ಪ್ರತಿಭಟಿಸಿದವರ ಸಂಖ್ಯೆಯೂ ಸಾಕಷ್ಟಿತ್ತು. ಈ ಸಂಘರ್ಷವನ್ನು ನೋಡಿ ಸಹಿಸದ ಸರ್ಪಭೂಷಣರು ಬೆಂಗಳೂರನ್ನೇ ತೊರೆದು ಕಣ್ಮರೆಯಾದರು. ಆಗ ಬಾಣಾವರದ ಮನೆತನದವರು ಹಾಗೂ ಸರ್ಪಭೂಷಣರಿಗೆ ಬೆಂಬಲವಾಗಿದ್ದವರೆಲ್ಲಾ ಸೇರಿ, ಇವರಿಗೆ ಕಂಟಕವಾಗಿದ್ದವರ ವಿರುದ್ಧ ಒಂದು ಯಾಗವನ್ನೇ ಮಾಡಿದ್ದರು. ಆ ಯಾಗದ ಬೂದಿಯೇ ಈ "ಧೂಳ್ತ". ಅದನ್ನು ಮುಗಿದಂತೆ ದಿನೇದಿನೆ ಹೆಚ್ಚಿಸಿಕೊಂಡು ಉಳಿಸಿಕೊಂಡಿದ್ದೇವೆ ಎಂಬುದಾಗಿ ಬಾಣಾವರದ ಗೌರಮ್ಮ (೫೮. ಬೆಂಗಳೂರು)ನವರು ಹೇಳುತ್ತಾರೆ.

32. ಮಲ್ಲಾಬಾದಿ ವೀರಭದ್ರಪ್ಪ. ಶ್ರೀಸರ್ಪಭೂಷಣ ಶಿವಯೋಗಿಗಳ ಜೀವನ ಚರಿತ್ರೆ. ಪು. ೧೪.

33. ಕೈವಲ್ಯಕಲ್ಪವಲ್ಲರಿ. ಸಂ : ಎಚ್. ಟಿ. ಮಹಾಂತಶಾಸ್ತ್ರಿ. ಗದಗ. ೨/೨; ೩/೧, ೮, ೧೬; ೫/೧, ೪,೨೮,೨೯.

34. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನ ಚರಿತ್ರೆ. ಪು. ೪೩, ೪೪.

35. ಅದೇ. ಪು. ೨೦.

36. Sl. No : 42/1891 -92. dt: 31.8.1892. Assistant Commissioner Court. Bangalore Dist. P.1.

37. ಈಗಿನ ರಾಮನಗರವನ್ನು ಹಿಂದೆ ಕ್ಲೋಸ್‌ಪೇಟೆ, ಹೊಸಪೇಟೆ, ನವಿಪೇಟೆ ಹಾಗೂ ರಾಮಗಿರಿ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿತ್ತು. ೧೮೦೦ರಲ್ಲಿ ದಿವಾನ್ ಪೂರ್ಣಯ್ಯನವರು ರಾಮಗಿರಿಯನ್ನು ವಿನೂತನವಾಗಿ ಅಭಿವೃದ್ಧಿಪಡಿಸಿ ಹಳೆ ಮೈಸೂರಿನ ರೆಸಿಡೆಂಟ್ ಆಗಿದ್ದ ಸರ್‌ಬ್ಯಾರಿಕ್ಲೋಸ್ ಎಂಬುವರ ಗೌರವಾರ್ಥ ಕ್ಲೋಸ್‌ಪೇಟೆ ಎಂಬ ಹೆಸರನ್ನು ಇಟ್ಟುದಾಗಿ ಸ್ಥಳೀಯ ಶಾಸನವೊಂದು ತಿಳಿಸುತ್ತದೆ. (ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ. ಮೈಸೂರು ವಿಶ್ವವಿದ್ಯಾಲಯ ಪು. ೧೨೫೩.)

38. ಕ್ಲೋಸ್‌ಪೇಟೆಯ ಶೆಟ್ಟಿ ಯಜಮಾನರು ಫಾಲಲೋಚನಸ್ವಾಮಿಗಳಿಗೆ ಬರೆದುಕೊಟ್ಟಿರುವ ದಾನಶಾಸನ. ಕ್ರೋಧಿ ಸಂವತ್ಸರ. ಆಶ್ವೀಜ ಶುದ್ಧ ೭ (ಕ್ರಿ.ಶ. ೧೮೪೪)

39. ವಿರಕ್ತವರ್ಗದವರ ಐದು ಪ್ರಮುಖ ಸಮಯಭೇದಗಳಾವುವೆಂದರೆ ೧. ಮುರಿಗಾಸಮಯ, ೨. ಕೆಂಪಿನಸಮಯ, ೩. ಕುಮಾರಸಮಯ, ೪. ಚೀಲಾಳಸಮಯ, ಹಾಗೂ ೫. ಸಂಪಾದನೆಸಮಯಗಳು.

40. ತಿಪ್ಪಶೆಟ್ಟಿಮಠವು ಮುರಿಗಾಸಮಯದ ಸೋಲೂರು ಬುಡಕಟ್ಟಿಗೆ ಸೇರಿದ ಮಠವೆಂದು ವಿಭೂತಿಪುರ ಮಠದ ಹಾಗೂ ಬಳ್ಳನಪುರ ಮಠದ ಪಟ್ಟಾಧ್ಯಕ್ಷರುಗಳು ಚಿತ್ರದುರ್ಗ ಸಂಸ್ಥಾನಕ್ಕೆ ಬರೆದ ಬಿನ್ನಹಪತ್ರ (ಭಾವನಾಮ ಸಂವತ್ಸರ ಬಹುಳ ೧೩. ಕ್ರಿ.ಶ. ೧೮೭೪) ದಲ್ಲಿ ಸ್ಪಷ್ಟವಾಗಿ ತಿಳಿಸಲಾಗಿರುತ್ತೆ.

41. ಎಚ್.ಪಿ. ಮಲ್ಲೇದೇವರು. (ಸಂ) ಅರ್ಚನ. (ಮೈಸೂರು -೧೯೮೪) ಪು. ೯೮೨, ೯೮೩.

42. Sl. No : 42/1891 -92. dt: 31.8.1892. Assistant Commissioner Court. Bangalore Dist. P.1.

43. ಕೆಂಪುನೂಲು ನಂಜುಂಡಯ್ಯನನ್ನು ಮತ್ತೆ ಲಿಂಗಾಯತ ಮತಪದ್ಧತಿಗೆ ಸೇರಿಸಿಕೊಳ್ಳಲು ನೂರಾರು ಜನರು ಸೇರಿದ್ದ ಸಭೆಯಲ್ಲಿ ಸಹಮತವನ್ನು ಸೂಚಿಸಿ ಅನುಮೋದನೆ ಮಾಡಿ ಒಪ್ಪಿಗೆ ರುಜು ಹಾಕಿರುವ ಪತ್ರವೇ ಈ ಸಮಾಖ್ಯಪತ್ರ (ಶೋಭಕೃತ್ ಸಂವತ್ಸರ ಕಾರ್ತಿಕ ಶುದ್ಧ ೧)

44. ಅದೇ ಸಮಾಖ್ಯಪತ್ರದಲ್ಲಿರುವಂತೆ, ಯಥಾನಕಲನ್ನು ಬರೆದುಕೊಳ್ಳಲಾಗಿದೆ.

45. ಮಲ್ಲಾಬಾದಿ ವೀರಭದ್ರಪ್ಪನವರು, ಸರ್ಪಭೂಷಣರೇ ತಮ್ಮ ಶಿಷ್ಯರಾಗಿದ್ದ ಫಾಲಲೋಚನ ಸ್ವಾಮಿಗಳಿಗೆ ನೇಮಿಸಿ ಕೆಂಪುನೂಲು ನಂಜುಂಡಯ್ಯನ ಕಡೆಯ ೭೦೦ ಮಂದಿ ಭಕ್ತರಿಗೆ ಮಾಗಡಿ ತಾಲ್ಲೂಕು ಕಂಚುಗಲ್ಲು ಬಂಡೇಮಠ (ವಿರಕ್ತಮಠ)ದಲ್ಲಿ ಲಿಂಗದೀಕ್ಷೆಯನ್ನು ಕೊಡಿಸಿದ್ದಾಗಿ ತಿಳಿಸಿದ್ದಾರೆ. (ಬೆಂಗಳೂರಿನ ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನ ಚರಿತ್ರೆ. ಪು. ೩೭, ೩೮) ಮೇಲ್ಕಂಡ ದಾಖಲೆಯ ಪ್ರಕಾರ ಸರ್ಪಭೂಷಣರು ತೀರಿಕೊಂಡ ಮೇಲೆ ಫಾಲಲೋಚನಸ್ವಾಮಿಗಳೇ ಈ ಕೆಲಸ ಮಾಡಿಸಿದ್ದಾಗಿ ತಿಳಿದುಬರುತ್ತದೆ. (So. No: 42/1891-92)

46. So. No: 42/1891-92. dt: 31.8.1892. Assistant Commissioner Court. Bangalore Dist. P.3.

47. Ibid. P-4.

48. So. No : 59/1873. dt: 5.9.1873. Bangalore District Assistant Judicial Court.

49. So. No: 42/1891-92. dt: 31.8.1892. P. 2.

50. ಗುರುಸ್ವಾಮಿಗಳು ನಂದಿದುರ್ಗ ಡಿವಿಜನ್ ಕಮಿಷನರ್ ಸಾಹೇಬರಿಗೆ ಬರೆದುಕೊಂಡ ಅಹವಾಲು. ದಿನಾಂಕ : ೩೧.೧೨.೧೮೭೬.

51. ಅದೇ.

52. ಗುರುಸ್ವಾಮಿಗಳ ಒಂದನೇ ಮರಣಶಾಸನಪತ್ರ. (ರಿ.ನಂ: ೨. ಸಂಪುಟ-೧. ಪು. ೭೫-೭೮. ದಿ : ೧೬.೧೧.೧೮೭೮) ಪು. ೧.

53. Miss Case No : 5/1873. Nandidurga Division Court. Bangalore. P. 2.

54. ಗುರುಸ್ವಾಮಿಗಳ ಒಂದನೇ ಮರಣಶಾಸನ ಪತ್ರ. (ಪೂರ್ವೋಕ್ತ) ಪು. ೧ (ಈ ಮರಣ ಶಾಸನಕ್ಕೆ ಮೂರುಪೇಟೆಯ ಶೆಟ್ಟಿ ಯಜಮಾನರುಗಳು ಹಾಗೂ ತಿಪ್ಪಶೆಟ್ಟಿಮಠದ ಚರಮೂರ್ತಿ ಇಮ್ಮಡಿ ಗುರುಸಿದ್ಧಸ್ವಾಮಿಗಳ ಸಾಕ್ಷಿ ರುಜುಗಳಿರುತ್ತವೆ.)

55. ಗುರುಸ್ವಾಮಿಗಳ ಎರಡನೇ ಮರಣಶಾಸನಪತ್ರ. (ರಿ.ನಂ : ೬. ಸಂಪುಟ-೩. ಪು. ೫೨-೫೪. ದಿ:೧೧.೧೦.೧೮೮೬) ಪು. ೧.

56. ಅದೇ.

57. ಮುನಿಸಿಪಲ್ ಬೋರ್ಡಿನ ಅಧಿಕಾರಿಗಳಿಗೆ ಗುರುಸ್ವಾಮಿಗಳ ಮನವಿಪತ್ರ. ದಿ : ೨೫.೧೦.೧೮೮೬.

58. ೧೫ ರೂಪಾಯಿಗಳ ಛಾಪಾಕಾಗದ. ಪು. ೨. (ರಿಜಿಸ್ಟರ್ ಕರಾರು. ಅಸಲ್ ಮುಕ್ತಾ ನಕಲು.)

59. ಈ ಏಳು ಜನರ ಸಮಿತಿಯಲ್ಲಿ ಸರ್ಪಭೂಷಣರ ಅಣ್ಣ ಬಾಣಾವರದ ಶಾಂತಪ್ಪನ ಮಕ್ಕಳಾದ ೧. ಚನ್ನಮಲ್ಲಪ್ಪ ೨. ಚಂದ್ರಣ್ಣ. ೩. ಪುಟ್ಟಣ್ಣ, ಮತ್ತು ಸರ್ಪಭೂಷಣರ ಒಂದನೇ ತಮ್ಮನಾಗಿದ್ದ ಬಾಣಾವರದ ಮಲ್ಲಣ್ಣನ ಮಗ ೪. ಗುರುಮಲ್ಲಪ್ಪ, ಹಾಗೂ ಸರ್ಪಭೂಷಣರ ಎರಡನೇ ತಮ್ಮನಾಗಿದ್ದ ಬಾಣಾವರದ ಹುಚ್ಚಣ್ಣನವರ ಮಕ್ಕಳಾದ ೫. ಪರ್ವತಪ್ಪ, ೬. ಗುರುಬಸಣ್ಣ, ೭. ಶಿವಪ್ಪ ಇವರುಗಳು ಸದಸ್ಯರಾಗಿದ್ದರು. ಮುಂದೆ ಇಲ್ಲಿರುವ ಬಾಣಾವರಧ ಗುರುಬಸಣ್ಣ ಎನ್ನುವವರು ಮಾಮೂಲುಪೇಟೆ ಗಂಜಾಂಮಠಕ್ಕೆ (೧೮೯-೧೯೦೮ರ ವರೆಗೆ) ಸರ್ವಾಧಿಕಾರಿಯಾಗಿದ್ದರು.

60. ೧೫ ರೂಪಾಯಿಗಳ ಛಾಪಾಕಾಗದ. ಪು. ೩. (ರಿಜಿಸ್ಟರ್ ಕರಾರು. ಅಸಲ್ ಮುಕ್ತಾ ನಕಲು.)

61. ರಾಜಿಕರಾರು ಪತ್ರ. (ರಿ. ನಂ:೯೮೧. ಸಂಪುಟ-೧೭. ಪು. ೨೧೦-೨೧೩. ದಿ : ೧೫.೮. ೧೮೮೯) ಪು. ೧.

62. ಈ ಸಂದರ್ಭದಲ್ಲಿ ಗುರುಸ್ವಾಮಿಗಳು ಬಾಣಾವರದ ಸೋದರರಿಗೆ ಮಠದ ಪೂರ್ಣಾಧಿಕಾರವನ್ನು ವಹಿಸಿ ಕೊಟ್ಟಾಗ ಪೇಟೆಶೆಟ್ಟಿ ಯಜಮಾನರುಗಳು ಅದನ್ನು ವಿರೋಧಿಸಿ ನ್ಯಾಯಾಲಯದಲ್ಲಿ ಗೆದ್ದದ್ದು ನಿಜ. ಆದರೆ ಮುಂದೆ ಮಠದ ಆವರಣದೊಳಗೆ ನಡೆದ ಸಂಘರ್ಷದಲ್ಲಿ ಬಾಣಾವರದ ಮನೆತನದವರು ಮಠದ ಮೂಲದಾಸ್ತಾವೇಜುಗಳೂ ಸೇರಿದಂತೆ ಅನೇಕ ಅಮೂಲ್ಯ ವಸ್ತುಗಳನ್ನು ಬಳಿದುಕೊಂಡು ಹೋದರೆಂದು ನ್ಯಾಯಾಲಯದೊಳಗೇ ಆರೋಪಿಸಲಾಗಿದೆ. (ಕೆಂಪುನೂಲು ನಂಜುಂಡಯ್ಯನ ತಂಗಿ ದೇವೀರಮ್ಮ(೬೦)ನು, ದಿ : ೩೧.೮.೧೮೯೨ ರಂದು ಈ ಹೇಳಿಕೆ ನೀಡಿದ್ದಾಳೆ. So. No : 42/1891-92. Assistant Commissioner Court. Bangalore District P.4)

63. ದಾಸ್ತಾವೇಜು. (ರಿ.ನಂ: ೧೨೪೨. ಸಂಪುಟ-೨೫. ಪು. ೭೪-೭೭, ದಿ: ೨೫.೨.೧೮೯೮) ಪು. ೧,೨.

64. ಮಠಕ್ಕೆ ಸೇರಿದ ಒಟ್ಟು ೪೫ ಅಂಕಣಗಳ ಕಟ್ಟಡಗಳು, ಖಾಲಿಭೂಮಿ, ಕಲ್ಯಾಣಿ, ಹೂವಿನತೋಟ, ಇವೆಲ್ಲಾ ಸ್ಥಿರಾಸ್ತಿಗಳೂ ಈ ಕರಾರಿಗೆ ಒಳಪಟ್ಟಿದ್ದವು. (ಅದೇ. ಪು. ೩.)

65. ಗುರುಸ್ವಾಮಿಗಳು ೧೮೮೭ರ ವೇಳೆಗಾಗಲೇ ತಮ್ಮ ಗದ್ದುಗೆಯನ್ನು ತಾವೇ ತಯಾರು ಮಾಡಿಸಿದ್ದರು. ಈಗ ಮಠದಲ್ಲಿರುವ ಗದ್ದುಗೆ ಸಾಲಿನಲ್ಲಿ ಪಶ್ಚಿಮದ ಕೊನೆಗೆ ಬಿಲ್ವಪತ್ರೆ ಮರವಿರುವ ಚೌಕಟ್ಟು ಭಾಗವೇ ಈ ಗದ್ದುಗೆಯಾಗಿದೆ.

66. So. No : 42/1891-92. dt: 31.8.1892. Assistant Commissioner Court. Bangalore Dist. I. P.1,

67. ಬಸವಲಿಂಗಯ್ಯನವರ ವ್ಯವಹಾರ ಪತ್ರ. ದಿ : ೧೧.೪.೧೯೩೦. ಸರ್ಪಭೂಷಣಮಠ.

68. ಚಿದ್ಘನ ಶಿವಾಚಾರ್ಯರ ಮರಣಶಾಸನ ಪತ್ರ. ದಿ : ೨.೧೨.೧೯೧೧. ಗಂಜಾಂಮಠ.

69. Land Acquisition Case. No : 3 of 1917-18. P-ii. (ನೂತನ ರಸ್ತೆ ನಿರ್ಮಾಣಕ್ಕಾಗಿ ಮಠದ ಉತ್ತರ ಭಾಗದ ಆಸ್ತಿ ಒತ್ತುವರಿಯಾದಾಗ, ಮಠದ ರಕ್ಷಣಾಗೋಡೆಯೂ ಸೇರಿ ಅದರೊಳಗಿದ್ದ ಪುರಾತನವಾದ ೬ ಅಡಿ ಅಗಲದ ಒಂದು ಕುಡಿಯುವ ನೀರಿನ ಬಾವಿ, ೫ ಬಿಲ್ವಪತ್ರೆ ವೃಕ್ಷಗಳು, ೨ ಮಾವಿನಮರಗಳು, ಒಂದು ತೆಂಗಿನ ಮರ, ಒಂದು ಚಕೋತ ಹಣ್ಣಿನ ಮರ, ೩ ಹಲಸಿನಮರ, ೨ ಕಣಗಿಲೆ ಮರ, ಒಂದು ಸೀಬೆ ಮರ, ಅನೇಕ ಸಣ್ಣಪುಟ್ಟ ಹೂಗಿಡಗಳು ಹಾಗೂ ಶೌಚಾಲಯ ಇಷ್ಟು ಅದರೊಳಗೆ ಸೇರಲ್ಪಟ್ಟಿದ್ದವು.)

70. ಕೆಂಪುನೂಲು ನಂಜುಂಡಯ್ಯನ ಮಗ ಪ್ರಭಣ್ಣ ಎಂಬುವವರು ೧೮೮೫ ರಿಂದಲೂ ಮಠದ ಆಸ್ತಿಯ ಮೇಲಿನ ಹಕ್ಕು ತಮ್ಮ ವಂಶೀಯರಿಗೇ ಸೇರಿದ್ದಾಗಿ ನ್ಯಾಯಾಲಯದಲ್ಲಿ ವಾದಿಸುತ್ತಾ ಬಂದಿದ್ದರು. (So No : 42/1891-92. Asst. Commi. court. Bangalore. Dist.) ಈ ಸಂಬಂಧವಾದ ವಿವಾದವನ್ನು ೧೯೧೮ರ ವರೆಗೂ ಜೀವಂತವಾಗಿರಿಸಿಕೊಂಡು ಹೋರಾಡಿದ್ದರಾದರೂ ಕೊನೆಗೆ ಈ ವಿವಾದ ಮಠದ ಪರವಾಗಿಯೇ ಆಯಿತು. (L.A. Case No : 3/1917-18 dt : 15.2.1918. p. 6)

71. L.A. Case No : 3/1917-18. dt : 15.2.1918. P.7.

72. ಕರಾರು ಪತ್ರ. ರಿ.ನಂ: ೨೪೮೯. ಸಂಪುಟ-೫೭೦. ಪು. ೧೬೦-೧೬೫. ದಿ : ೨೪.೧.೧೯೨೪.

73. ಮೈಸೂರ್ ಸ್ಟಾರ್. ಸಂಚಿಕೆ-೬೯, ಸಂ-೩೭. ಪು. ೬. ದಿ : ೨೮.೯.೧೯೨೪. (ಮುಂದೆ ಇದೇ ಪತ್ರಿಕೆಯಲ್ಲಿ ಜೂನ್ ೧೯೨೭ರ ಸಂಚಿಕೆಯಲ್ಲೂ ಇಂಥದೇ ಪ್ರಕಟಣೆಯನ್ನು ನೀಡಲಾಗಿದೆ.)

74. ಮೈಸೂರ್ ಸ್ಟಾರ್. ಸಂಚಿಕೆ ೨೩. ಸಂ-೩೭. ಪು. ೫. ದಿ : ೬.೬.೧೯೨೫ (ಪ್ರತ್ಯಕ್ಷವರದಿ).

75. ಚನ್ನಬಸವಸ್ವಾಮಿಗಳ ಇಚ್ಛಾಪತ್ರ. ದಿ : ೬.೬.೧೯೨೭..

76. ಫಿರ್ಯಾದಿ ಬಸವಲಿಂಗಯ್ಯನವರು (ಸರ್ಪಭೂಷಣ ಮಠದ ಸ್ವಾಮಿಗಳು) ಬೆಂಗಳೂರು ಸಿಟಿ ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಬರೆದುಕೊಂಡ ಮನವಿ ಪತ್ರ. ದಿ : ೧೧.೪.೧೯೩೦. ಪು. ೧.

77. ಸರ್ಪಭೂಷಣಮಠದ ಚನ್ನಬಸವಸ್ವಾಮಿಗಳ ಗದ್ದುಗೆ ಹಾಗೂ ಇವರ ನಂತರದ ಸ್ವಾಮಿಗಳಾಗಿದ್ದ ಬಸವಲಿಂಗ ಸ್ವಾಮಿಗಳ ಗದ್ದುಗೆ ಇವೆರಡೂ ಹುಣಸಮಾರನಹಳ್ಳಿಯ ಮಠದ ಸ್ವಾಮಿಗಳ ಗದ್ದುಗೆ ಸಾಲಿನಲ್ಲಿಯೇ ಇವೆ. ಹಬ್ಬ ಹರಿದಿನಗಳಲ್ಲಿ ಈ ಗದ್ದುಗೆಗಳಿಗೆಲ್ಲಾ ಈಗಲೂ ಅಲ್ಲಿ ವಿಶೇಷವಾದ ಪೂಜೆ ಸಲ್ಲಿಸಲಾಗುತ್ತದೆ ಎಂಬುದಾಗಿ ಅಲ್ಲಿನ ಪಟ್ಟದ ಪರ್ವತರಾಜ ಶಿವಾಚಾರ್ಯ ಸ್ವಾಮಿಗಳು (೬೦) ತಿಳಿಸಿರುತ್ತಾರೆ.

78. ಚನ್ನಬಸವಸ್ವಾಮಿಗಳು ಬರೆದಿಟ್ಟ ಇಚ್ಛಾಪತ್ರ. ದಿ : ೬.೬.೧೯೨೭. ಇದರಲ್ಲಿ ಕಂಚುಗಲ್ ಬಂಡೇಮಠದ ಚರಮೂರ್ತಿ ತೋಟದ ಸ್ವಾಮಿಗಳು, ಶಂಕರದೇವರಮಠದ ಶಂಕರಸ್ವಾಮಿಗಳು, ಎನ್. ಬಸಪ್ಪಪ್ಪ (ದೊಡ್ಡಮಠ)ಯ॥ ಚಿಕ್ಕವೀರಪ್ಪ ಮತ್ತು ಬಿ.ಪಿ. ವೀರಭದ್ರಪ್ಪ ಇವರುಗಳು ಸಾಕ್ಷಿ ರುಜು ಹಾಕಿರುತ್ತಾರೆ.

79. ಅದೇ ಇಚ್ಛಾಪತ್ರದಲ್ಲಿರುವಂತೆ. ಪು. ೧, ೨.

80. Muzrai File No : 111/1928. Sl.No. : 3, 4. P. 4.

81. G.O. No : 103-4/Muz. 111-1928-4. dt : 12th July 1929.

82. Muzrai File No : 111/1928. Sl.No : 3,4. P. 3 & 4.

83. Muzrai File No : 202 of 1930. Sl.No: 1-2. P. 3-7.

84. Same File. P. 9, 10.

85. ಈ ಸಂಬಂಧವಾಗಿ ಚಿತ್ರದುರ್ಗದ ಜಯದೇವ ಜಗದ್ಗುರುಗಳಿಗೂ, ಬೆಂಗಳೂರಿನ ಸರ್ಪಭೂಷಣಮಠದ ಬಸವಲಿಂಗ ಸ್ವಾಮಿಗಳಿಗೂ ಹಾಗೂ ಇನ್ನಿತರ ಪ್ರಮುಖ ಮಠಾಧಿಪತಿಗಳ ಮತ್ತು ಪುರಪ್ರಮುಖರಿಗೂ ನಡುವೆ ನಡೆದ ೬೬ ವ್ಯವಹಾರ ಪತ್ರಗಳನ್ನು ಒಂದೆಡೆ ಸಂಗ್ರಹಿಸಲಾಗಿದೆ. ಇವು ದಿ : ೨೪.೧೦.೧೯೩೦ ರಿಂದ ೨೩.೧೦.೧೯೩೨ರ ಒಳಗಿನವುಗಳಾಗಿವೆ.

86. ಚಿತ್ರದುರ್ಗ ಸಂಸ್ಥಾನದಿಂದ ಬೆಂಗಳೂರಿನ ಪುರಪ್ರಮುಖರಿಗೆ ಬರೆದಿರುವ ಪತ್ರ. ದಿ : ೧೧.೮.೧೯೩೨. ಈ ಪತ್ರ ಸಂ : ೧೨೫/೪೬.

87. ಮೈಸೂರ್ ಸ್ಟಾರ್. ಸಂಚಿಕೆ-೩೫, ಸಂ-೪೫. ಪು. ೫. ದಿನಾಂಕ : ೨೯.೮.೧೯೩೨.

88. ಬಸವಲಿಂಗಸ್ವಾಮಿಗಳು ಮಹಾದೇವಸ್ವಾಮಿಗಳಿಗೆ ವಿರುದ್ಧವಾಗಿ ಇವರು ಸರ್ಪಭೂಷಣ ಮಠಕ್ಕೆ ಅಕ್ರಮವಾಗಿ ಬಂದವರೆಂದು ಸಾರುವ ಕರಪತ್ರಗಳನ್ನು ಹೊರಡಿಸಿ ಭಕ್ತರಿಗೆಲ್ಲಾ ಹಂಚಿಸಿದ್ದರು. (ಈ ಕರಪತ್ರವನ್ನು ಸಂಗ್ರಹಿಸಲಾಗಿದೆ.)

89. ಬಸವಲಿಂಗಸ್ವಾಮಿಗಳು ಬರೆಸಿದ ಕರಾರು ಪತ್ರ. ರಿ.ನಂ: ೧೨೨೫. ಸಂ-೨೪೪. ಪು. ೨೬೦-೨೭೧. ದಿ : ೨೫.೧೧.೧೯೩೩.

90. The First Munsiff Court at Bangalore : O.S.No:594/1933-34 dt. 29.7.1936. P. 47.

91. In the High Court of Mysore at Bangalore. S.A. No : 529 of 1937-38. P. 1-3.

92. ಮಹಾದೇವಸ್ವಾಮಿಗಳ ಜೀವನ ಮತ್ತು ಸಾಧನೆಗಳನ್ನುಕುರಿತ "ಅಭಿನವ ಅಲ್ಲಮ" ಎಂಬ ಕಿರು ಹೊತ್ತಗೆಯನ್ನು ಪ್ರೊ.ಚ.ಸುಂದರೇಶನ್ ಅವರು ಹೊರತಂದಿದ್ದಾರೆ. (ಬೆಂಗಳೂರು-೧೯೭೨.)

93. ಮಹಾದೇವಸ್ವಾಮಿಗಳು ಜಯದೇವ ಜಗದ್ಗುರುಗಳಿಗೆ ಬರೆದುಕೊಟ್ಟಿರುವ ಕರಾರುಪತ್ರ. ರಿ.ನಂ : ೨೧೬೭. ಸಂ-೧೦೮೬. ಪು. ೨೪೮-೨೫೦. ದಿ : ೩.೧೦.೧೯೫೦. ಸಬ್‌ರಿಜಿಸ್ಟ್ರಾರ್ ಆಫೀಸ್. ಬೆಂಗಳೂರು.

94. ಮಹಾದೇವಸ್ವಾಮಿಗಳು ಬರೆಸಿದ ಉತ್ತರಾಧಿಕಾರತ್ವದ ಪತ್ರ. ದಿ : ೨.೮.೧೯೬೧. ಇದರಲ್ಲಿ ಹತ್ತು ಮಂದಿ ಸಾಕ್ಷಿ ರುಜು ಮಾಡಿದ್ದಾರೆ.

95. ಈ ಟ್ರಸ್ಟಿನಲ್ಲಿ ಸದಸ್ಯರಾಗಿದ್ದವರು-೧. ನಿಜಗುಣಸ್ವಾಮಿಗಳು. ೨. ಶಂಕರಪ್ಪಶೆಟ್ಟಿ, ೩. ಬಿ.ವಿಶ್ವನಾಥಪ್ಪ, ೪. ಎಂ.ಎಲ್. ಶ್ರೀಕಂಠಯ್ಯ ೫. ಬಿ.ಎಸ್. ಪುಟ್ಟಸಿದ್ಧಯ್ಯ, ೬. ಎಚ್. ಪುಟ್ಟಸ್ವಾಮಿ, ೭. ಕೆ.ಎಸ್. ಗಂಗಾಧರ್. ೮. ಆರ್. ಚಂದ್ರಶೇಖರಯ್ಯ. ೯. ಜಿ. ಶಿವಪ್ಪ, ೧೦. ಜಿ.ಆರ್. ಶ್ರೀಕಂಠಪ್ಪ, ೧೧. ಎ.ಆರ್. ರೇವಣಸಿದ್ಧಪ್ಪ.

96. ಮಹಾದೇವಸ್ವಾಮಿಗಳು ಬರೆಸಿದ ಟ್ರಸ್ಟ್ ಡೀಡ್ ಪತ್ರ. ರಿ.ನಂ : ೧೪೯೨/೧೯೬೧-೬೨, ೧ನೇ ಬುಕ್, ಸಂಪುಟ-೧೮೦೨. ಪು. ೨೩೭-೨೪೨. ದಿ : ೧೪.೮.೧೯೬೧. ಬೆಂಗಳೂರು ಸಬ್‌ರಿಜಿಸ್ಟ್ರಾರ್ ಕಛೇರಿ.

97. ಮಹಾದೇವಸ್ವಾಮಿಗಳ ಟ್ರಸ್ಟ್ ಡೀಡ್ ವಜಾಪತ್ರ. ರಿ. ನಂ: ೨೦೯೫/೧೯೬೧-೬೨. ಸಂ-೧೮೪೦. ಪು. ೧೧೬, ೧೧೭. ದಿ : ೨೧.೧೦.೧೯೬೧.

98. ಈ ಟ್ರಸ್ಟ್‌ನಲ್ಲೂ ಮೊದಲಿನ ಟ್ರಸ್ಟಿನಲ್ಲಿದ್ದ ಸದಸ್ಯರುಗಳನ್ನೇ ಉಳಿಸಿಕೊಳ್ಳಲಾಗಿತ್ತು. ಆದರೆ ನಿಜಗುಣಸ್ವಾಮಿಗಳು ಹಾಗೂ ಕೆ.ಎಸ್. ಗಂಗಾಧರ್ ಅವರನ್ನು ಕೈಬಿಟ್ಟು, ಹೊಸದಾಗಿ ವೈ.ಸಿ. ಬಸಪ್ಪ, ರುದ್ರಪ್ಪ, ಮಲ್ಲಿಕಾರ್ಜುನಯ್ಯ, ಚನ್ನರುದ್ರಯ್ಯ, ಚೆನ್ನಸೋಮಣ್ಣ ಇವರುಗಳನ್ನು ನೇಮಕ ಮಾಡಲಾಗಿತ್ತು.

99. ಚಿತ್ರದುರ್ಗ ಬೃಹನ್ಮಠದ ಜಯವಿಭವ ಜಗದ್ಗುರುಗಳು ಬರೆಸಿದ ಟ್ರಸ್ಟ್ ಡೀಡ್ ಪತ್ರ. ರಿ.ನಂ: ೨೦೯೬/೧೯೬೧-೬೨. ಸಂ : ೧೮೩೮. ಪು. ೨೦೪-೨೧೮. ದಿ : ೧೭.೧೦.೧೯೬೧.

100. ಶ್ರೀ ಸರ್ಪಭೂಷಣ ಶಿವಯೋಗೀಶ್ವರಮಠದ ಚಾರಿತ್ರಿಕ ಹಿನ್ನೆಲೆ. ಭಕ್ತಮಂಡಳಿಯ ಪ್ರಕಟಣೆ. ದಿ : ೨೫.೩.೧೯೯೫. ಪು. ೨.

101. ಮಠದ ಟ್ರಸ್ಟಿಗಳ ಹಾಗೂ ಭಕ್ತಮಂಡಳಿಯವರ ವಿಜ್ಞಾಪನಾ ಪತ್ರಿಕೆ. ದಿ : ೨.೧೨.೧೯೬೩. ಪು. ೧.

102. ಬೃಹನ್ಮಠದಿಂದ ಬಂದ ಆದೇಶ ಪತ್ರ. ಸಂ : ೧೬೯೩.. ದಿ : ೬.೮.೧೯೭೦. (ಶಿವಕುಮಾರಸ್ವಾಮಿಗಳಿಗೆ)

103. ಶ್ರೀಸರ್ಪಭೂಷಣ ಶಿವಯೋಗೀಶ್ವರ ಮಠದ ಚಾರಿತ್ರಿಕ ಹಿನ್ನೆಲೆ. ಪು. ೨.

104. ಅದೇ. ಪು. ೩, ೪.

105. ಡಾ। ಎಸ್. ವಿದ್ಯಾಶಂಕರ. (ಸಂ) ಹದಿನಾಡು ವೀರಶೈವ ಅರಸು ಮನೆತನ. ಸಂಪಾದಕರ ಕೆಲವು ಮಾತುಗಳು. ಪು. ೧.

## ೨. ಶಂಕರದೇವರ ಮಠ, ಮನೆವಾರ್ತೆಪೇಟೆ

ಹದಿನೆಂಟನೆಯ ಶತಮಾನದ ಅಂತ್ಯದ ವೇಳೆಗೆ ಬೆಂಗಳೂರು ಪಟ್ಟಣದಲ್ಲಿ ಪ್ರಮುಖವಾಗಿದ್ದ ಮೂರು ಪೇಟೆಗಳಲ್ಲಿ ಅರಳೆಪೇಟೆಯು ಬಹಳ ಪ್ರಸಿದ್ಧವಾದ ಪೇಟೆಯಾಗಿತ್ತು. ಆ ಕಾಲದಿಂದಲೂ ಇದನ್ನು ಅಮೃತಸಾಗರದ ಅರಳೆಪೇಟೆ ಎಂದೇ ಕರೆಯಲಾಗುತ್ತಿತ್ತು.[1] ಬೆಂಗಳೂರು ಪಟ್ಟಣ ದಿನೇ ದಿನೆ ಅಭಿವೃದ್ಧಿಗೊಂಡಂತೆಲ್ಲಾ ಇಲ್ಲಿನ ಅಗತ್ಯತೆಗಳಿಗೆ ಅನುಗುಣವಾದ ಅನೇಕ ಉದ್ಯಮವರ್ಗದವರು ಬಂದು ನೆಲೆಸತೊಡಗಿದರು. ಮುಂದೆ ಈ ಉದ್ಯಮಸ್ಥರು ನೆಲೆಸಿದ್ದ ಒಂದೊಂದು ಕೇರಿಯೂ ಪ್ರಮುಖ ಪೇಟೆಗಳಲ್ಲಿನ ಉಪಪೇಟೆಗಳಾಗಿ ಪರಿವರ್ತನೆಯಾದವು. ಕಳೆದ ಶತಮಾನದ ಉತ್ತರಾರ್ಧದ ವೇಳೆಗೆ ಅರಳೆಪೇಟೆಯೊಂದರಲ್ಲೇ ಇಂತಹ ಹದಿನಾಲ್ಕು ಉಪಪೇಟೆಗಳಿದ್ದುದಾಗಿ ತಿಳಿದುಬರುತ್ತದೆ.[2]

ಅರಳೆಪೇಟೆಯ ಉಪಪೇಟೆಗಳಲ್ಲಿ ಮನೆವಾರ್ತೆ ಪೇಟೆಯೂ ಒಂದು ಪ್ರಮುಖ ಪೇಟೆ. ಹಿಂದೆ ಬೆಂಗಳೂರಿನ ಪ್ರಮುಖ ಪೇಟೆಗಳಲ್ಲಿದ್ದ ಧನಿಕ ವರ್ತಕರಿಗೆ ಹಾಗೂ ಅಧಿಕಾರಿ ವರ್ಗದವರಿಗೆ ಗೃಹೋಪಯೋಗಿ ಅಗತ್ಯ ಸೇವೆಗಳನ್ನು ಪೂರೈಸುತ್ತಿದ್ದ ಜನವರ್ಗವೊಂದಿತ್ತು. ಇವರು 'ವರ್ತನೆ' ಮಾಡಿಕೊಂಡು ಪ್ರತನಿತ್ಯ ಪೇಟೆಯ ಮನೆಗಳವರಿಗೆ ಹಾಲು, ತರಕಾರಿ, ಸೌದೆ ಮತ್ತಿತರ ಸೇವೆಗಳನ್ನು ಪೂರೈಸುತ್ತಿದ್ದರು. ಹೀಗೆ ವರ್ತನೆ ಮನೆಗಳವರಿದ್ದ ಕೇರಿಯನ್ನು ಮುಂದೆ ಮನೆವಾರ್ತೆಪೇಟೆ ಎಂದು ಕರೆಯುವುದು ರೂಢಿಗೆ ಬಂತು. 'ಮನೆವಾರ್ತೆ' ಅಥವಾ 'ಮನವಾರ್ತೆ' ಎಂದರೆ ಮನೆಯ ಕೆಲಸ ಅಥವಾ ಗೃಹಕೃತ್ಯ ಎಂಬ ಅರ್ಥವೇ ಇರುವುದು[3] ಮೇಲಿನ ಮಾತಿಗೆ ಪೋಷಕವಾಗಿಯೇ ಇದೆ. ಈಗಲೂ ಕೂಡ ಈ ಪೇಟೆಯನ್ನು ಮನೆವಾರ್ತೆಪೇಟೆ ಅಥವಾ ಮನವಾರ್ತಪೇಟೆ ಎಂದು ಕರೆಯುವುದು ರೂಢಿಯಲ್ಲಿದೆ.

ಹತ್ತೊಂಬತ್ತನೆಯ ಶತಮಾನದ ಅಂತ್ಯದ ವೇಳೆಗೆ ಮನೆವಾರ್ತೆಪೇಟೆಯಲ್ಲಿ ಎರಡು ವೀರಶೈವ ಮಠಗಳಿದ್ದವು. ಅವುಗಳಲ್ಲೊಂದು ''ಶಂಕರದೇವರಮಠ''[4] ಇಂದಿಗೂ ಉಳಿದು ಬಂದಿದೆ. ಮಠದ ಹಿರಿಯ ಗುರುಗಳಾಗಿರುವ ಶಾಂತಕುಮಾರಸ್ವಾಮಿಗಳ[5] ಹೇಳಿಕೆಯ ಪ್ರಕಾರ- 'ತೋಂಟದ ಸಿದ್ಧಲಿಂಗೇಶ್ವರರ ಪರಂಪರೆಯಲ್ಲಿ ಬಂದಿರುವ ಶಂಕರದೇವರಮಠ ಬೆಂಗಳೂರಿನ ಪ್ರಾಚೀನ ಮಠಗಳಲ್ಲಿ ಒಂದು. ಇದು ಕನಿಷ್ಠ ೩೫೦ ವರ್ಷಗಳಷ್ಟು ಹಳೆಯದಾಗಿದ್ದು, ಶಂಕರದೇವರು ಎಂಬುವರೇ ಇದರ ಮೂಲಗುರುಗಳಾಗಿದ್ದುದರಿಂದ ಸಹಜವಾಗಿಯೇ ಈ ಮಠಕ್ಕೆ ''ಶಂಕರದೇವರಮಠ''[6] ಎಂಬ ಹೆಸರು ಬಂದಿದೆ. ಇದುವರೆಗೆ ಒಂಬತ್ತು ಜನ ಗುರುಗಳು ಆಗಿ ಹೋಗಿದ್ದಾರೆ. ಮಠದ ಆವರಣದೊಳಗೆ ನಾಲ್ಕು ಗದ್ದುಗೆಗಳಿವೆ. ಉಳಿದವು ಮಾಗಡಿರಸ್ತೆಯ ಶಂಕರಣ್ಣನವರ ತೋಟದಲ್ಲಿ, ಕೊಳದ ಮಠದಲ್ಲಿ ಹಾಗೂ ಹುಣಸಮಾರನಹಳ್ಳಿಯಲ್ಲೂ ಇವೆ.'

ಶಂಕರದೇವರಮಠ ಒಂದು ಸ್ವತಂತ್ರವಾದ ಮಠ. ಇದಕ್ಕೆ ಯಾವುದೇ ಸರ್ಕಾರಿ ಇನಾಮುಗಳಾಗಲಿ ರಾಜಮಹಾರಾಜರ ದಾನ ದತ್ತಿಗಳಾಗಲಿ ಲಭ್ಯವಾಗಿಲ್ಲ.[7] ಆದ್ದರಿಂದ ಬೆಂಗಳೂರಿನ ಮುಜರಾಯಿ ಇಲಾಖೆಗೆ ಸೇರದೆ ಇರುವ ಪ್ರಮುಖ ಮಠಗಳಲ್ಲಿ ಇದೂ ಒಂದು. ಆದರೆ ಖಾಸಗಿಯಾಗಿ ಕೆಲವೊಂದು ದಾನ ಧರ್ಮಗಳು ಬಂದುದಕ್ಕೆ ಸೂಕ್ತ ಆಧಾರಗಳಿವೆ. 'ಅರಳೆಪೇಟೆಯ ಸುಪ್ರಸಿದ್ಧ ವರ್ತಕರಾಗಿದ್ದ ಶಂಕರಣ್ಣನವರು ತಮ್ಮ ಕುಲಗುರುಗಳಾಗಿದ್ದ ಶಂಕರಸ್ವಾಮಿಗಳ ಮಠದಲ್ಲಿ ನಿತ್ಯನಡೆಯುತ್ತಿದ್ದ ದೀಪಾರಾಧನೆಗೆ ಮತ್ತು ಅತಿಥಿ ಅಭ್ಯಾಗತರುಗಳ ಆದರಣೆಯ ಉಪಯೋಗಾರ್ಥವಾಗಿ, ಬೆಂಗಳೂರು ತಾಲ್ಲೂಕು, ಯಶವಂತಪುರ ಹೋಬಳಿ ಸಾಣೇಗುರುವಿನ ಹಳ್ಳಿ ಗ್ರಾಮದಲ್ಲಿ ಐದು ಎಕರೆ ಹದಿನೈದು ಗುಂಟೆ ಖುಷ್ಕಿ ಭೂಮಿಯನ್ನು ದಿನಾಂಕ : ೬.೬.೧೮೫೬ ರಂದು ದಾನವಾಗಿ ಅರ್ಪಿಸಿದ್ದರು.[8] ಮುಂದೆ ದಿನಾಂಕ: ೨೧.೧೨.೧೯೨೭ ರಂದು ಸದರಿ ಧರ್ಮವನ್ನು ಅಭಿವೃದ್ಧಿ ಪಡಿಸುವುದಕ್ಕೋಸ್ಕರ ಇದೇ ಶಂಕರಣ್ಣನವರ ಮಕ್ಕಳಾದ ಶಂಕರಪ್ಪನವರ ಶಿವಪ್ಪ, ಶಂಕರಪ್ಪನವರ ಬಸಪ್ಪ ಎಂಬುವರು ತಮಗೆ ಪಿತ್ರಾರ್ಜಿತವಾಗಿ ಬಂದಿದ್ದು, ಹಳೆತರಗುಪೇಟೆಯಲ್ಲಿ ಮುನಿಸಿಪಲ್ ಡೋರ್ ನಂಬರ್ ೪ ರಲ್ಲಿದ್ದ ೮ ಅಂಕಣದ, ನಾಲ್ಕು ಸಾವಿರ ರೂ. ಕಿಮ್ಮತ್ತಿನ ಅಂಗಡಿ ಮನೆಯನ್ನೂ ಮಠಕ್ಕೆ ಒಪ್ಪಿಸಿದ್ದರು.[9]

ಇನ್ನು ಮಠಾಧೀಶರ ವಿಚಾರಕ್ಕೆ ಬಂದಾಗ, ೧೮೫೦ರ ವೇಳೆಗೆ ಶಂಕರಣ್ಣನವರ ಮನೆತನದ ಕುಲಗುರುಗಳಾಗಿದ್ದ ಹಿರಿಯ ಶಂಕರಸ್ವಾಮಿಗಳು ಶಿವಾಧೀನರಾಗಿದ್ದರು.

ಇಮ್ಮಡಿ ಶಂಕರಸ್ವಾಮಿಗಳು ೧೮೭೭ರ ವೇಳೆಗೆ ಹಿರಿಯ ಗುರುಗಳ ಉತ್ತರಾಧಿಕಾರಿಗಳಾಗಿ ನೇಮಕವಾಗಿದ್ದರು.[10] ಮಠದ ಇತಿಹಾಸದಲ್ಲಿ ಇವರದು ಸುದೀರ್ಘವಾದ ಬದುಕು. ಮುಂದೆ ಭಕ್ತರಿಂದ ಬಂದಿದ್ದ ದಾನಧರ್ಮಗಳನ್ನು ಸದುಪಯೋಗಮಾಡಿಕೊಂಡು ಮಠದಲ್ಲಿ ನಿರಂತರವಾಗಿ ಧರ್ಮಕಾರ್ಯಗಳು ನಡೆಯುವಂತೆ ಮಾಡಿದ್ದರು. ಮಠದ ಸುತ್ತ, ಕೆಲವು ನೂತನ ಕಟ್ಟಡಗಳನ್ನು ನಿರ್ಮಿಸಿ ಬಂದ ಬಾಡಿಗೆಯಿಂದ ಮಠದಲ್ಲಿ ಸಂಸ್ಕೃತ ಹಾಗೂ ವೇದಪಾಠಶಾಲೆಯೂ ನಡೆಯುವಂತೆ ವ್ಯವಸ್ಥೆ ಮಾಡಿದ್ದರು.[11] ಇಮ್ಮಡಿ ಶಂಕರ ಸ್ವಾಮಿಗಳು ೧೯೦೮ರಲ್ಲಿ ವಿದ್ಯಾವಂತ ಯುವಕರಾಗಿದ್ದ ಮಹಾದೇವ ಮರಿದೇವರು ಎಂಬುವರನ್ನು ತಮ್ಮ ಮಠದ ಮುಂದಿನ ಉತ್ತರಾಧಿಕಾರಿಗಳನ್ನಾಗಿ ಆಯ್ಕೆ ಮಾಡಿಕೊಂಡಿದ್ದರು.[12] ಆದರೆ ಈ ಮರಿದೇವರು ೧೯೨೫ರ ವೇಳೆಗೆ ಅಕಾಲ ಮರಣಕ್ಕೆ ತುತ್ತಾದರು.

ಮುಂದೆ ತಮ್ಮ ಎಂಬತ್ತರ ಇಳಿವಯಸ್ಸಿನಲ್ಲಿ ದಿನಾಂಕ : ೪.೮.೧೯೩೫ರಂದು ಟ್ರಸ್ಟ್ ಡೀಡ್ ಒಂದನ್ನು ರಚಿಸಿದ್ದರು. ಈ ಕರಾರಿನ ಪ್ರಕಾರ 'ತಮ್ಮ ಮಠದ ನಿವಾಸಿಗಳೇ ಆಗಿದ್ದ ಬಣಕನಹಳ್ಳಿ ನಂಜುಂಡಯ್ಯನವರ ಮಗ ಬಸವಯ್ಯ ಎಂಬುವರಿಗೆ ಮಠದ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಡಲಾಗಿತ್ತು. ಜೊತೆಗೆ ಸದರಿ ಬಸವಯ್ಯನವರ ಮಗ ಎಂಟುವರ್ಷದ ಶಾಂತಮೂರ್ತಿಯೇ ಮುಂದಿನ ವಟುವೆಂದು ಸೂಚಿಸಿ, ಆತ ಪ್ರಾಪ್ತವಯಸ್ಕನಾಗುವವರೆಗಿನ ಮಠದ ಉತ್ತರೋತ್ತರ ಅಭಿವೃದ್ಧಿ ಹಾಗೂ ಜವಾಬ್ದಾರಿಗಳನ್ನು ಬಸವಯ್ಯನವರೇ ನಿರ್ವಹಿಸುವಂತೆ ಆದೇಶಿಸಲಾಗಿತ್ತು.'[13] ಆ ಸಂದರ್ಭದಲ್ಲಿ ಮಠದ ಹೆಸರಿಗಿದ್ದ ಸ್ಥಿರಾಸ್ತಿಗಳೆಂದರೆ-ಮನೆವಾರ್ತೆ ಪೇಟೆಯಲ್ಲಿ ಮುನಿಸಿಪಲ್ ಡೋರ್ ನಂ : ೨೧, ೨೨ ರಲ್ಲಿದ್ದ ಮಠದ ಕಟ್ಟಡ ಹಾಗೂ ಗದ್ದುಗೆಗಳು ಮತ್ತು ಖಾಲಿ ಜಮೀನು; ಇದೇ ನಂಬರಿನಲ್ಲಿ ಮಠದ ಹೊರ ಆವರಣಕ್ಕೆ ಹೊಸಕೋಟೆಯ ವೀರಭದ್ರಯ್ಯನ ಮಗ ತೋಟದ ದೇವರು ಮೂವತ್ತು ವರ್ಷಗಳ ಕರಾರಿನ ಮೇರೆಗೆ ಕಟ್ಟಿಕೊಂಡಿದ್ದ ಎರಡು ಅಂಗಡಿ ಮನೆಗಳು ಹಾಗೂ ಒಂದು ಗೋದಾಮು, ಜೊತೆಗೆ ಇಮ್ಮಡಿ ಶಂಕರದೇವರು ತಾವೇ ಸ್ವತಃ ಸಂಪಾದಿಸಿದ್ದ ಆಸ್ತಿಗಳಾವುವೆಂದರೆ-ಮಾಗಡಿ ತಾಲ್ಲೂಕು ತಾವರೆಕೆರೆ ಹೋಬಳಿ ಚುಂಚನಕುಪ್ಪೆ ಗ್ರಾಮದ ದಾಖಲೆಯ ಕರೇಸಿದ್ದನಪಾಳ್ಯದ ಸರ್ವೆ ನಂ : ೬೦ರಲ್ಲಿ ೭ ಎಕರೆ ೧೦ ಗುಂಟೆ ಖುಷ್ಕಿ, ಸರ್ವೆ ನಂ : ೫೬ ರಲ್ಲಿ ೧೬ ಗುಂಟೆ ತರಿ ಭೂಮಿಗಳು ಮತ್ತು ಇದೇ ಗ್ರಾಮದಲ್ಲಿ ೯/೨ನೇ ನಂಬರಿನ ಮನೆ ವಠಾರ ಒಂದು. ಇವುಗಳ ಜೊತೆಗೆ ೧೮೯೭ರಲ್ಲಿ ಅರಳೆಪೇಟೆಯ ಶಂಕರಣ್ಣನವರು ಸಾಣೇಗುರುವಿನಹಳ್ಳಿ ಗ್ರಾಮದಲ್ಲಿ ಸದರಿ ಮಠಕ್ಕೆ ದಾನವಾಗಿ ನೀಡಿರುವ ೫ ಎಕರೆ ೧೫ ಗುಂಟೆ ಖುಷ್ಕಿ ಜಮೀನು; ಹಾಗೂ ಸದರಿ ಶಂಕರಣ್ಣನವರ ಮಕ್ಕಳು ೧೯೨೭ರಲ್ಲಿ ದಾನವಾಗಿ ನೀಡಿರುವ ಹಳೆಯ ತರಗು ಪೇಟೆಯ ೮ ಅಂಕಣದ ಅಂಗಡಿ ಮನೆ, ಇವಿಷ್ಟೂ ಸೇರಿ ಮಠದ ಎಲ್ಲಾ ಆಸ್ತಿ-ಪಾಸ್ತಿಗಳನ್ನು ಮೇಲ್ಕಂಡ ಕರಾರಿನ ಪ್ರಕಾರ ಬಸವಯ್ಯನವರ ಹೆಸರಿಗೆ ವರ್ಗ ಮಾಡಲಾಗಿತ್ತು.[14]

ಮುಂದೆ ೧೯೪೨ರ ವೇಳೆಗೆ ಬಸವಯ್ಯನವರ ಅನುಪಸ್ಥಿತಿಯಲ್ಲಿ ಇಮ್ಮಡಿ ಶಂಕರಸ್ವಾಮಿಗಳ ಸಮಕ್ಷಮದಲ್ಲಿಯೇ ಶಂಕರಮರಿ ತೋಂಟದಾರ್ಯ ಎಂಬುವರು ತಾವೇ ಶಂಕರದೇವರ ಮಠದ ಮುಂದಿನ ಮಠಾಧೀಶರೆಂದು ದಾಖಲೆಗಳನ್ನು ನಿರ್ಮಿಸಿಕೊಂಡಿದ್ದರು. ಇವರು ದಿನಾಂಕ : ೨೪.೧.೧೯೪೪ ರಂದು ಸಪ್ಪಣ್ಣಸ್ವಾಮಿ ಮಠದ ಆವರಣದಲ್ಲಿ ವಾಸವಾಗಿದ್ದ ರಂಗಣ್ಣನವರ ಮಗ ಹನುಮಂತಪ್ಪ ಎಂಬುವರಿಗೆ, ಮಠದ ಕಟ್ಟಡ ಹಾಗೂ ಗದ್ದುಗೆಗಳನ್ನು ಉಳಿದು ಮಿಕ್ಕ ಭಾಗದ ಕಟ್ಟಡಗಳು, ಖಾಲಿ ಭೂಮಿ ಎಲ್ಲಾ ಸೇರಿ ಹತ್ತು ಸಾವಿರ ರೂಗಳಿಗೆ ಭೋಗ್ಯ ಮಾಡಿ ಬಿಟ್ಟಿದ್ದರು.[15] ಆಗ ಮಠದ ಭಕ್ತರ ಪರವಾಗಿ ಮೈಸೂರು ರಾಜ್ಯ ವೀರಶೈವ ಒಕ್ಕೂಟದವರು ದಿನಾಂಕ : ೨.೧. ೧೯೪೭ರಲ್ಲಿ ಸರ್ಕಾರಕ್ಕೆ ಒಂದು ಅರ್ಜಿಯನ್ನು ಸಲ್ಲಿಸಿ ಶಂಕರಮರಿ ತೋಂಟದಾರ್ಯ ಅವರಿಗೆ ಇಮ್ಮಡಿ ಶಂಕರದೇವರು ಬರೆದುಕೊಟ್ಟಿರುವ ಮಠಾಧಿಪತ್ಯದ ಕರಾರು ನ್ಯಾಯಬಾಹಿರವಾದದ್ದು, ಅಕ್ರಮವಾದದ್ದು ಎಂದು ವಾದಿಸಿದ್ದರು.[16] ತತ್ಪರಿಣಾಮವಾಗಿ ಸರ್ಕಾರವು ದಿನಾಂಕ: ೨೪.೩.೧೯೪೮ರಲ್ಲಿ ಮೂವರು ಸದಸ್ಯರುಳ್ಳ ತನಿಖಾ ಸಮಿತಿಯೊಂದನ್ನು[17] ನಿಯಮಿಸಿ, ಮಠದ ಆಮೂಲಾಗ್ರ ಅಕ್ರಮಗಳ ತನಿಖೆಗಾಗಿ ಆದೇಶ ನೀಡಿತ್ತು.[18] ಈ ಸಮಿತಿ ವರದಿಯ ಪ್ರಕಾರ-ಶಂಕರಮರಿ ತೋಂಟದಾರ್ಯರ ಮಧ್ಯಂತರ ನೇಮಕಾತಿಯು ಒತ್ತಾಯಕ್ಕಾಗಿ ಕೃತ್ರಿಮವಾಗಿ ನಡೆದದ್ದು. ಇವರ ಮಠಾಧಿಪತ್ಯದ ವ್ಯವಹಾರಗಳೆಲ್ಲಾ ಅನೂರ್ಜಿತವಾಗತಕ್ಕವು ಎಂದು ಸಾರಿತು.[19] ತತ್ಫಲವಾಗಿ ಬೆಂಗಳೂರಿನ ವೀರಶೈವ ಮುಖಂಡರುಗಳ ಮುಂದಾಳತ್ವದಲ್ಲಿ, ೧೯೫೫ರ ಅಕ್ಟೋಬರ್ ೧೮ ರಂದು ಸಂಸ್ಕೃತ ವಿದ್ವಾಂಸರಾಗಿರುವ ಈಗಿನ

ಶಾಂತಕುಮಾರಸ್ವಾಮಿಗಳು ಶಂಕರದೇವರಮಠದ ಮುಂದಿನ ಮಠಾಧಿಪತಿಗಳಾಗಿ ಅಧಿಕಾರ ಸ್ವೀಕರಿಸಿದರು.[20] ಈಗ ಸದರಿ ಸ್ವಾಮಿಗಳಿಗೆ ಎಪ್ಪತ್ತಕ್ಕೂ ಮೀರಿದ ವಯೋಮಾನವಾದ್ದರಿಂದ ೧೯೯೩ರಲ್ಲಿ ಮುಮ್ಮಡಿ ಶಂಕರಮರಿದೇವರು ಎಂಬುವರನ್ನು ತಮ್ಮ ಮುಂದಿನ ಉತ್ತರಾಧಿಕಾರಿಗಳನ್ನಾಗಿ ಆಯ್ಕೆ ಮಾಡಿಕೊಂಡಿರುತ್ತಾರೆ.[21] ನಗರ ಭೂಮಾಪನ ದಾಖಲಾತಿಗಳ ಪ್ರಕಾರ ಈಗಿನ ಶಂಕರದೇವರಮಠದ ಜಾಗದ ವಿಸ್ತೀರ್ಣ ೧೮೨೫.೯ ಚದರಗಜಗಳಷ್ಟು ಆಸ್ತಿಯು ಶಾಂತಕುಮಾರಸ್ವಾಮಿಗಳು, ಡಿ.ಎಂ. ಮರಿಯಪ್ಪ ಇವರುಗಳ ಹೆಸರಿನಲ್ಲಿದೆ.[22] ೧೯೯೬ರಲ್ಲಿ ಹಳೆಯ ಮಠದ ಕಟ್ಟಡವನ್ನು ಸಂಪೂರ್ಣವಾಗಿ ಕೆಡವಲಾಗಿದ್ದು, ನೂತನ ಬಹುಉಪಯೋಗಿ ಕಟ್ಟಡಗಳ ನಿರ್ಮಾಣಕ್ಕೆ ಸಿದ್ಧತೆ ನಡೆದಿತ್ತು. ಈ ಮಧ್ಯೆ ಹಳೆಯ ಗದ್ದುಗೆಗಳಿದ್ದ ಭಾಗವನ್ನು ನೂತನವಾದ ಕಟ್ಟಡದೊಂದಿಗೆ ಸಂರಕ್ಷಿಸಲಾಗಿದೆ.

---

## ಅಡಿಟಿಪ್ಪಣಿಗಳು

1. ಅರಳೇಪೇಟೆಯ ಮಹತ್ವ. (ಪ್ರ) ಅರಳೇಪೇಟೆ ದೇವಸ್ಥಾನಗಳ ಟ್ರಸ್ಟ್. ಪು. ೩, ೬.
2. ಮೈಸೂರು ಸೀಮೆಯ ಚೀಫ್ ಕಮಿಷನರ್ ಸಾಹೇಬರ ಜನಾಬಿಗೆ ಅರಳೇಪೇಟೆಯ ಲಿಂಗಾಯತ ಮತಸ್ಥರು ಬರೆದುಕೊಂಡ ಮನವಿ ಪತ್ರ. ದಿ : ೨೪.೧೧.೧೮೭೯.
3. ಕನ್ನಡ ನಿಘಂಟು. ಸಂ-೬. ಕನ್ನಡ ಸಾಹಿತ್ಯ ಪರಿಷತ್ತು, ಪು. ೬೯೩೦.
4. ಇನ್ನೊಂದು 'ನಿರ್ವಾಣಮ್ಮನಮಠ'. ನಿರ್ವಾಣಮ್ಮ ಮರಿಸ್ವಾಮಿಗಳವರ ಶಿಷ್ಯೆ.
5. ಶಾಂತಕುಮಾರ ಸ್ವಾಮಿಗಳು ಎಪ್ಪತ್ತನಾಲ್ಕು ವರ್ಷದ ವಯೋವೃದ್ಧರು. ಇವರು ಸಂಸ್ಕೃತ ವಿದ್ವಾಂಸರಾಗಿದ್ದು ಶಕ್ತಿ ವಿಶಿಷ್ಟಾದ್ವೈತ ಬೋಧನೆಯಲ್ಲಿ ನುರಿತ ಪ್ರಾಧ್ಯಾಪಕರಾಗಿದ್ದು ಬೆಂಗಳೂರು ಮತ್ತು ಮೈಸೂರಿನ ಸಂಸ್ಕೃತ ಕಾಲೇಜುಗಳಲ್ಲಿ ಮೂವತ್ತೈದು ವರ್ಷಗಳ ಕಾಲ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಈ ಮಠವನ್ನು ಕುರಿತಂತೆ ರಾಜ್ಯ ಪತ್ರಾಗಾರ ಇಲಾಖೆ ಹಾಗೂ ಇನ್ನಿತರ ಮಠಗಳಲ್ಲಿ ಸಿಕ್ಕ ಮಾಹಿತಿಗಳನ್ನು ಆಧರಿಸಿ ಕೆಲವು ವಿಚಾರಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.
6. ನಿರಂಜನವಂಶರತ್ನಾಕರ. ಭಾಗ-೨ (ಪು. ೬೧)ರಲ್ಲಿ 'ಶಿಖಾಪಟ್ಟದ ೨ನೆಯ ಮುರಿಗಾ ಗುರುಸಿದ್ಧಸ್ವಾಮಿಗಳಿಗೆ ತೊಂದರೆ ಕೊಡಲು ಉದ್ಯುಕ್ತರಾದ ಮೂರ್ತಿಗಳಲ್ಲಿ ಕೆಲವರಿಗೆ "ಸಮಯ ಬಿಟ್ಟ ಸಮಯದವರು ಶಂಕರ ದೇವರ ಸಮಯದವರು" ಎಂಬ ಮಾತಿದೆ. ಬಹುಶಃ ಬೆಂಗಳೂರಿನ ಮನೆವಾರ್ತೆ ಪೇಟೆಯ ಈ ಶಂಕರದೇವರ ಮಠವೂ ಕೂಡ ಇದೇ ರೀತಿಯ ಸಮಯ ಬಿಟ್ಟ "ಶಂಕರದೇವರ ಸಮಯ"ಕ್ಕೆ ಸೇರಿದ ಮಠವಾಗಿರಬೇಕು ಎಂದು ಊಹಿಸಲು ಅವಕಾಶವಿದೆ.'
7. Muzrai File No : 149/1946. Sl.No : 1-5, P. 4.
8. Registered Record No : 3076. vol-239. P. 214-217. dt: 6.6.1896.
9. Document No : 1214/1927-28. B.No: 1. P.10-14. dt: 22.12.1927.
10. Registered Record No : 2469/1943-44. vol-668. P. 247-249. dt : 26.1.1944.
11. Ibid.
12. ಹೊಸಕೋಟೆಯ ವೀರಭದ್ರಯ್ಯನು ನರಗುಂದದೇವರ ಮಠದ ಬಸಪ್ಪದೇವರಿಗೆ ಬರೆದಿರುವ ಪತ್ರ. ದಿ : ೧೬.೩.೧೯೦೬.
13. Registered Record No : 312. vol-303. P. 210-216.dt : 17.8.1935.
14. Ibid.
15. Registered Record No : 2469/1943-44. vol-668. P. 247-249 dt: 26.1.1944.
16. Muzrai File No : 149/1946. Sl.No. : 1-6. P. 2.
17. ಈ ತನಿಖಾ ಸಮಿತಿಯಲ್ಲಿ ಬೆಂಗಳೂರು ಸಬ್‌ಡಿವಿಷನ್ ಆಫೀಸರರು ಛೇರ್ಮನ್ನರಾಗಿಯೂ ಮತ್ತು ಪಿ. ಶಿವಶಂಕರ್ ಹಾಗೂ ಜಿ.ಸಿ. ವೀರಪ್ಪ ಎಂಬ ನ್ಯಾಯವಾದಿಗಳಿಬ್ಬರು ಸದಸ್ಯರಾಗಿದ್ದರು.
18. G.O. No : R11776-78. dt : 30.6.1948.
19. Muzrai File No : 217/1948. Sl.No : 1-4. P.3.
20. ಶಾಂತಕುಮಾರಸ್ವಾಮಿಗಳ ಹೇಳಿಕೆ. ಮಠಾಧಿಪತಿಗಳು. ಶಂಕರದೇವರಮಠ.
21. ಅದೇ.
22. ನಗರ ಭೂಮಾಪನಾ ಇಲಾಖೆಯ ದಾಖಲೆ. ೨ನೇ ವಿಭಾಗ. ಸ್ಥಳೀಯ ಕ್ಷೇತ್ರದ ಸಂ:೮೧. ಎ. ಚಿಕ್ಕಪೇಟೆ. ಕ್ರ.ಸಂ : ೨೧೧೯.

## ೩. ಮೇಲಿನಮಠ, ಸುಂಕೇನಹಳ್ಳಿ

ಬೆಂಗಳೂರು ಮಹಾನಗರದ ಅನೇಕ ಪ್ರೇಕ್ಷಣೀಯ ಸ್ಥಳಗಳಲ್ಲಿ ಬಹಳ ಪ್ರಮುಖವಾದದ್ದು ದೊಡ್ಡ ಬಸವೇಶ್ವರನ ದೇಗಲ. ನಗರದ ನಿರ್ಮಾಪಕ ಮೊದಲನೆಯ ಕೆಂಪೇಗೌಡನ ಕಾಲ (ಕ್ರಿ.ಶ. ೧೫೧೩-೧೫೬೯)ದಲ್ಲಿ ನಿರ್ಮಾಣವಾದ ಈ ದೇಗುಲವು[1] ಪುಟ್ಟ ಬೆಟ್ಟದ ಮೇಲಿದ್ದು ಹನ್ನೊಂದು ಅಡಿ ಎತ್ತರದ ಬೃಹತ್ ಬಸವನ ಶಿಲಾಮೂರ್ತಿಯನ್ನು ಒಳಗೊಂಡಿದೆ. ಈ ಶಿಲಾಮೂರ್ತಿಯ ಕೆಳಗೆ ಶಾಸನವೊಂದಿದ್ದು, ಅದರಲ್ಲಿ ''ಈ ಬಸವೇಶ್ವರನ ಪಾದದಿಂದ ವೃಷಭಾವತಿ ನದಿಯು ಹುಟ್ಟಿ ಪಶ್ಚಿಮಾಭಿಮುಖವಾಗಿ ಹರಿಯುತ್ತದೆ''[2] ಎಂಬುದಾಗಿ ಸೂಚಿಸಲಾಗಿದೆ. ಹಿಂದೆ 'ವೃಷಭಾದ್ರಿ' ಎಂದೇ ಕರೆಯಲ್ಪಡುತ್ತಿದ್ದ ಈ ಪುಟ್ಟ ಬೆಟ್ಟದ ಪಶ್ಚಿಮ ಭಾಗಕ್ಕೆ ಸುಂಕೇನಹಳ್ಳಿ ಎಂಬ ಗ್ರಾಮವಿತ್ತು. ೧೯ನೆಯ ಶತಮಾನದ ಆರಂಭದ ದಿನಗಳಿಂದಲೂ ಈ ಗ್ರಾಮದ ಎಲ್ಲೆಕಟ್ಟಿನ ಒಳಗೆ ಎರಡು ವೀರಶೈವ ಮಠಗಳಿದ್ದವು. ಅವುಗಳೇ ಮೇಲಿನಮಠ ಮತ್ತು ಕೆಳಗಿನ ಮಠ. ಭೂದಾಖಲೆಗಳಲ್ಲಿ ಇವುಗಳನ್ನು ಸುಂಕೇನಹಳ್ಳಿಯ ಜಂಗಮಮಠಗಳೆಂದೂ ಕರೆದಿರುವುದುಂಟು.[3] ಮೂಲತಃ ಇವೆರಡೂ ಪ್ರತ್ಯೇಕವಾದ ಮಠಗಳೇ ಆಗಿದ್ದರೂ, ೨೦ನೆಯ ಶತಮಾನದ ಆರಂಭದ ವೇಳೆಗೆ ಒಂದೇ ಆಡಳಿತಕ್ಕೆ ಒಳಪಟ್ಟಿದ್ದವು.[4] ಸದ್ಯಕ್ಕೆ ಇವೆರಡೂ ಮಠಗಳು ಒಟ್ಟಿಗೆ ಸೇರಿ ''ನಿಜಗುಣ ಜಂಗಮಮಠ''ವೆಂಬ ನೂತನ ಹೆಸರನ್ನು ಪಡೆದಿವೆ. ಇವುಗಳ ಐತಿಹಾಸಿಕ ಪರಂಪರೆಯನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಈ ಎರಡೂ ಮಠಗಳನ್ನು ಪ್ರತ್ಯೇಕವಾಗಿ ಪರಿಶೀಲನೆಗೆ ಒಳಪಡಿಸಲಾಗಿದೆ.

ಈಗಿನ ಬಸವನಗುಡಿ ಮುಖ್ಯರಸ್ತೆಯಲ್ಲಿ ರಾಮಕೃಷ್ಣ ಚೌಕದಿಂದ ದಕ್ಷಿಣಾಭಿಮುಖವಾಗಿ ಮುನ್ನಡೆದರೆ, ಸ್ವಲ್ಪ ಅಂತರದಲ್ಲಿಯೇ ವೃಷಭಾದ್ರಿಯ ದರ್ಶನವಾಗುತ್ತದೆ. ಈ ಪುಟ್ಟ ಬೆಟ್ಟದ ಬುಡದಲ್ಲಿ ೧೩ ಅಡಿ ಎತ್ತರದ ಶಿಲಾಮೂರ್ತಿಯುಳ್ಳ ವರಸಿದ್ಧಿವಿನಾಯಕನ ದೇಗುಲವಿದೆ. ಈ ದೇಗುಲಕ್ಕೆ ಅಭಿಮುಖವಾಗಿರುವುದೇ ನಿಜಗುಣ ಕಲ್ಯಾಣ ಕ್ಷೇತ್ರ. ಇದು ಈಗಿನ ನಿಜಗುಣ ಜಂಗಮಮಠಕ್ಕೆ ಸೇರಿದ ಆಸ್ತಿಯಾಗಿದೆ. ಹಿಂದೆ ಮೇಲ್ಕಂಡ ಬೆಟ್ಟದ ಪಶ್ಚಿಮ ಬದಿಗಿದ್ದುದೇ ಮೇಲಿನಮಠ[5]ವಾಗಿತ್ತು. ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ - ''ಪೂರ್ವಕ್ಕೆ ದೊಡ್ಡ ಬಸವಣ್ಣನಗುಡಿ, ಪಶ್ಚಿಮಕ್ಕೆ ಸುಂಕೇನಹಳ್ಳಿ ಗ್ರಾಮ, ಉತ್ತರಕ್ಕೆ ಸುಂಕೇನಹಳ್ಳಿಗೆ ಹೋಗುವ ದಾರಿ, ದಕ್ಷಿಣಕ್ಕೆ ಈ ಮಠಕ್ಕೆ ಸೇರಿದ ತೋಪು ಹೊಲಾ, ಈ ಚೆಕ್ಕುಬಂದಿಗೆ ಒಳಪಟ್ಟ ಸದರಿ ದೊಡ್ಡಬಸವಣ್ಣನ ಗುಡಿಯ ಬಳಿ ಇರುವ ಮೇಲಿನ ಮಠ'' ಎಂದೇ ಗುರುತಿಸಲಾಗಿದೆ.[6]

ಮೇಲಿನ ಮಠಕ್ಕೆ ಸಂಬಂಧಪಟ್ಟಂತೆ ನಮಗೆ ದೊರಕುವ ಮೊದಲ ಅಧಿಕೃತ ದಾಖಲೆ ೧೮೦೪ರ 'ದೆ' ಎಂಬ ಮುದ್ರೆಯುಳ್ಳ ಪತ್ರ. ಅದರ ಪೂರ್ಣ ಪಾಠಾಂಶ ಹೀಗಿದೆ. -''ರಕ್ತಾಕ್ಷಿ ಸಂವತ್ಸರದ ಆಶ್ವಿಜ ಶುದ್ಧ ೫ರಲ್ಲು ಶ್ರೀಮತು ಸುಭೆದಾರ್ರು ಮಧ್ವರಾಯರವರು! ದೊಡಪೆಟೆ ಶಿದ್ದಪ್ಪ ಶೆಟ್ರಿಗೆ ಬರೆಶಿಕೊಟ ಕೈತೊಟದ ಸಾಗುವಳಿ ವುತ್ರಾ! ಅದಾಗಿ ನೀವು ಮಾಡಿಕೊಂಡು ಯಿರ್ರುವ ದೊಡ ಬಸವಂಣನ ಗುಡಿ ಬಳಿಯಲ್ಲಿರೋ ತೋಟ ೧ಕ್ಕೆ ಬಿಜವರಿ/೨ಕೊ ವರುಷ ೧ ಕ್ಕೆ ಕಂದಾಯ ಕಂ। ಗು ಯಂಟ್ಟು ಹಣ ಮೊಕರರ್ರು ಮಾಡ್ಸಿಕೊಟುಯಿರ್ರುವದ್ದರಿಂದಾ ಯಿ ಮೆರಿಗೆ ಕಂದಾಯವಂನ್ನು ವರ್ರುಷಾಂಪ್ರತ್ತಿಯಲ್ಲೂ ಸರಕಾರಕ್ಕೆ ತೆತ್ತುಕೊಂಡು ತೋಟದಲ್ಲಿ ಕೀಳ್ ಪೈರ್ರು ಹುವಿನಗಿಡ ಮುಂತಾದ್ದು ಹಾಕಿಶಿ ಕೊಂಡು ನೆಂಮ್ಮದಿಯಲ್ಲಿ ಯಿರ್ರುವದೂ ಯಂದು ಬರೆಶಿಕೊಟ್ಟ ಕೈತೊಟದ ಸಾಗುವಳಿ ವುತ್ರಾ ಸಹೀ... ''ರ್ರುಜು ಶ್ರೀರಾಮ...[7]'' ಎಂಬುದಾಗಿ ಮುಕ್ತಾಯವಾಗಿದೆ. ಇದರ ಮುಖ್ಯಾಂಶಗಳನ್ನು ಸಂಗ್ರಹಿಸಿ ಹೇಳುವುದಾದರೆ, 'ಬೆಂಗಳೂರಿನ ಸುಭೇದಾರರಾಗಿದ್ದ ಮಧ್ವರಾಯರು, ರಕ್ತಾಕ್ಷಿ ಸಂವತ್ಸರದ ಆಶ್ವೀಜ ಶುದ್ಧ ೫ ರಲ್ಲಿ (ಕ್ರಿ.ಶ. ೧೮೦೪ರಲ್ಲಿ) ದೊಡ್ಡಪೇಟೆಯ ಸಿದ್ಧಪ್ಪಶೆಟ್ರಿಗೆ ಬರೆಸಿಕೊಟ್ಟ ಕೈತೋಟದ ಸಾಗುವಳಿ ಪತ್ರದ ಪ್ರಕಾರ- ಅವರು ದೊಡ್ಡ ಬಸವಣ್ಣನ ಗುಡಿಯ ಬಳಿ ಮಾಡಿಕೊಂಡಿದ್ದ ಎರಡು ಕೊಳಗದ ಬೀಜವರಿಯ ಭೂಮಿಗೆ ಎಂಟುಹಣ ಕಂದಾಯವೆಂದು ಮೊಕರೂರು (ಗೊತ್ತುಮಾಡು) ಮಾಡಲಾಗಿತ್ತು.' ಇದು ಮೈಸೂರು ಸಂಸ್ಥಾನದ ಆಡಳಿತದ ಪರವಾಗಿ ಬಂದಿದ್ದ ಸರಕಾರಿ ಆದೇಶಪತ್ರವೆಂದು ತಿಳಿದುಬರುತ್ತದೆ.

ಮೇಲ್ಕಂಡ ಪತ್ರಕ್ಕೆ ಸಂವಾದಿಯಾಗಿ ನಮಗೆ ದೊರೆಯುವ ಮತ್ತೊಂದು ಅಧಿಕೃತವಾದ ದಾಖಲೆ

ಶುಕ್ಲನಾಮ ಸಂವತ್ಸರದ (ಕ್ರಿ.ಶ. ೧೮೬೯) ವೈಶಾಖ ಶುದ್ಧ ೫ ರ ಪತ್ರ. ಇದರ ಪ್ರಕಾರ - ''ಬೆಂಗಳೂರಿನ ದೊಡ್ಡಪೇಟೆಯ ಚಿಕ್ಕಣ್ಣಶೆಟ್ಟರ ಮಗ ಗುರುಬಸಪ್ಪ ಶೆಟ್ಟರಿಗೆ ಬೆಟ್ಟಹಳ್ಳಿ ನಂಜಯ್ಯನವರ ಮಗ ವೀರಯ್ಯನು ಬರೆಸಿಕೊಟ್ಟ ಕರಾರು ಏನೆಂದರೆ - ಇದೇ ಬೆಂಗಳೂರು ದೊಡ್ಡಬಸವೇಶ್ವರನ ದೇವಸ್ಥಾನಕ್ಕೆ ಪಶ್ಚಿಮದಲ್ಲಿರುವ ನಿಮ್ಮ ಹಿರಿಯರು ಕಟ್ಟಿಸಿರುವ ಮಠದಲ್ಲಿ ನೀವು ಗೊತ್ತುಪಡಿಸಿದ ರೀತಿ ಇದ್ದುಕೊಂಡು, ಮಠಕ್ಕೆ ಬಂದಂಥಾ ಅತಿಥಿ ಅಭ್ಯಾಗತರಿಗೆ ಅಗ್ಗವಣಿ (ಸ್ನಾನದ ನೀರು) ವಿಭೂತಿ ಕೊಟ್ಟುಕೊಂಡು, ಮಠದ ಪೌಳಿ ವಗೈರೆ ಯಾವತ್ತೂ ದುರಸ್ತು ಮಾಡಿಕೊಂಡು ಮಠದ ತೋಪು ಹೊಲಗಳನ್ನೂ ಸಹಾ ನೋಡಿಕೊಂಡು ಹೋಗಲುಳ್ಳ ವನು...[8]'' ಎಂಬ ಇತ್ಯಾದಿ ವಿವರಗಳಿವೆ.

ಇವರೆಡೂ ಪತ್ರಗಳನ್ನು ಆಧರಿಸಿ ಹೇಳುವುದಾದರೆ ೧೮೦೪ರ ವೇಳೆಗೆ ಬೆಂಗಳೂರಿನ ದೊಡ್ಡಪೇಟೆಯ ಸಿದ್ಧಪ್ಪಶೆಟ್ರು, ಮೈಸೂರು ಸಂಸ್ಥಾನದವರ ಅನುಮತಿ ಪಡೆದು ದೊಡ್ಡಬಸವೇಶ್ವರನ ದೇವಾಲಯದ ಸಮೀಪ ಎರಡು ಕೊಳಗದ ಬೀಜವರಿಯ ಜಮೀನನ್ನು ಕಂದಾಯಕ್ಕೆ ಮಾಡಿಕೊಂಡಿದ್ದಾರೆ. ಮುಂದೆ ಅಲ್ಲೊಂದು ಮಠವನ್ನು ನಿರ್ಮಾಣ ಮಾಡಿಸಿ, ಬಂದಂಥಾ ಅತಿಥಿ ಅಭ್ಯಾಗತರಿಗೆ ಪೂಜೆ ಪ್ರಸಾದಗಳ ಸೌಲಭ್ಯಗಳನ್ನು ಕಲ್ಪಿಸಿಕೊಡುವ ಏರ್ಪಾಡು ಮಾಡಿರುತ್ತಾರೆ. ನಂತರ ಅವರ ವಂಶಸ್ಥರು[9] ತಮ್ಮ ಹಿರಿಯರು ಹಾಕಿಕೊಟ್ಟ ಸತ್ ಸಂಪ್ರದಾಯವನ್ನು ಮುನ್ನಡೆಸಿಕೊಂಡು ಬಂದಿರುತ್ತಾರೆ. ಹೀಗೆ ೧೯ನೆಯ ಶತಮಾನದ ಆದಿ ಭಾಗದಲ್ಲಿ ದೊಡ್ಡಪೇಟೆಯ ಸಿದ್ಧಪ್ಪ ಶೆಟ್ಟರಿಂದ ಸ್ಥಾಪಿಸಲ್ಪಟ್ಟ ಮಠವೇ ಸುಂಕೇನಹಳ್ಳಿಯ ಮೇಲಿನಮಠ. ಈ ಮಠವನ್ನು ಮುಂದೆ ೧೯೦೦ ರ ವರೆಗೂ ಇವರ ಮನೆತನದವರೇ ಮೇಲ್ವಿಚಾರಣೆ ನಡೆಸಿಕೊಂಡು ಬಂದುದಕ್ಕೆ ಆಧಾರಗಳಿವೆ. ಮೊದಲು ದಿನಾಂಕ : ೧೬.೨.೧೮೬೯ ರಂದು ಬೆಂಗಳೂರು ದೊಡ್ಡಪೇಟೆಯ ಚಿಕ್ಕಣ್ಣ ಶೆಟ್ಟರ ಮಗ ಗುರು ಬಸಪ್ಪಶೆಟ್ಟರಿಗೆ, ಬೆಟ್ಟಹಳ್ಳಿಯ ನಂಜಯ್ಯನವರ ಮಗ ವೀರಯ್ಯನು ಮೇಲಿನ ಮಠದ ಉಸ್ತುವಾರಿ ನೋಡಿಕೊಳ್ಳುವ ಕರಾರು ಬರೆದು ಕೊಟ್ಟಿದ್ದಾನೆ.[10] ನಂತರ ಇದೇ ಗುರುಬಸಪ್ಪಶೆಟ್ಟರಿಗೆ ಮೇಲ್ಕಂಡ ವೀರಯ್ಯನ ಮಗ ವೀರಭದ್ರಯ್ಯ ಎಂಬುವನು ದಿನಾಂಕ :೧೭.೬.೧೮೭೪ರಲ್ಲಿ ಇಂಥದೇ ಕರಾರು ಬರೆದುಕೊಟ್ಟಿದ್ದಾನೆ.[11] ಅನಂತರ ಸಂಗಯ್ಯ ಎಂಬ ಅಯ್ಯ(ಸ್ವಾಮಿ)ನವರು ದಿನಾಂಕ : ೨.೧.೧೭೮೩ರಂದು ಮೇಲ್ಕಂಡ ಗುರುಬಸಪ್ಪಶೆಟ್ಟರಿಗೆ ಮತ್ತೊಂದು ಅದೇ ರೀತಿಯ ಕರಾರು ಬರೆದು ಕೊಟ್ಟಿದ್ದಾರೆ.[12] ಹೀಗೆ ಬರೆದುಕೊಟ್ಟಿರುವ ಪ್ರತಿಯೊಂದು ಕರಾರಿನಲ್ಲಿಯೂ 'ನಿಮ್ಮ ಹಿರಿಯರು ಕಟ್ಟಿಸಿರುವ ಮಠದಲ್ಲಿ'..... ಎಂಬ ಮಾತು ಮತ್ತೆ ಮತ್ತೆ ಪುನರುಕ್ತವಾಗಿರುವುದನ್ನು ಗಮನಿಸಬಹುದು.

ಈ ಮಧ್ಯೆ ೧೮೨೨ರಲ್ಲಿ ಮೈಸೂರಿನ ದೊರೆಗಳಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರು ಬೆಂಗಳೂರಿನ ಬಹುತೇಕ ಮಠಗಳಿಗೆ ಭೂದಾನ ಮಾಡಿರುವ ದಾಖಲೆಗಳಿವೆ. ಆ ಸಂದರ್ಭದಲ್ಲಿ ಸುಂಕೇನಹಳ್ಳಿಯ ಮೇಲಿನ ಮಠಕ್ಕೂ[13] ಕೂಡ ಇಂತಹ ಸದವಕಾಶ ಪ್ರಾಪ್ತವಾಗಿತ್ತು.[14] ತತ್ಪರಿಣಾಮವಾಗಿ ಬೆಂಗಳೂರು ತಾಲ್ಲೂಕು, ಅಗರ ಹೋಬಳಿ ಎಡೆಯೂರು ನಾಗಸಂದ್ರದ ಬಳಿ ಐದು ಕೊಳಗ ಹತ್ತೂವರೆ ಪಡಿಯಷ್ಟು ಬೀಜವರಿಯ ಜಮೀನು ಇನಾಮಾಗಿ ದೊರಕಿತ್ತು.[15] ಮೇಲಿನಮಠದ ದಾಖಲೆಗಳಲ್ಲಿ ಸದರಿ ಭೂಮಿಯನ್ನು ಸರ್ವೆ ನಂ : ೫೩ ರಲ್ಲಿ ೫ ಎಕರೆ ೧ ಗುಂಟೆ ಎಂದು ಸ್ಪಷ್ಟವಾಗಿ ಗುರುತಿಸಲಾಗಿದೆ.[16] ಮುಂದೆ ೧೮೯೯ರಲ್ಲಿ ಈ ಮೇಲಿನಮಠದ ಇನಾಂ ಭೂಮಿಯು ಬಸವನಗುಡಿ (ಬಸವನಪುರ) ಬಡಾವಣೆಯ ವಿಸ್ತರಣೆಗೆ ಸೇರ್ಪಡೆಯಾಗಿಬಿಟ್ಟಿತು. ಇದರ ಪರಿಹಾರಾರ್ಥವಾಗಿ ೬೫೩ ರೂ ೪ ಆಣೆ ಪರಿಹಾರ ಧನ ದೊರೆಯಿತು.[17] ಮಠದ ಹೆಸರಿನಲ್ಲಿ ಗೌರ್ನಮೆಂಟ್ ಸೇವಿಂಗ್ಸ್ ಬ್ಯಾಂಕಲ್ಲಿದ್ದ ಈ ಹಣವು ದಿನಾಂಕ : ೩.೫.೧೯೦೬ರ ವೇಳೆಗೆ ಬಡ್ಡಿ ಸೇರಿ ೯೧೪ರೂ ೮ ಆಣೆ ೯ ಪೈಸೆಗಳಷ್ಟಾಗಿತ್ತು.[18]

ಈ ವೇಳೆಗೆ ಮೇಲಿನ ಮಠದ ಮೇಲ್ವಿಚಾರಣೆಯು ದೊಡ್ಡಪೇಟೆಯ ಸಿದ್ದಪ್ಪಶೆಟ್ಟರ ಮನೆತನದವರಿಂದ ಕೈಬಿಟ್ಟುಹೋಗಿತ್ತು. ಮೂರೂ ಪೇಟೆಗಳ ದೇಶದ ಶೆಟ್ಟಿ ಯಜಮಾನರುಗಳ ಆದೇಶದಂತೆ ಕೋಟೆ ಕಾಳಪ್ಪನವರ ಮಗ ಕಪ್ಪಣ್ಣನೆಂಬುವರು ಮೇಲಿನಮಠದ (ಮತ್ತು ಕೆಳಗಿನಮಠಕ್ಕೂ) ಏಜೆಂಟರಾಗಿ ನೇಮಕವಾಗಿದ್ದರು.[19] ಇದಕ್ಕೂ ಮುನ್ನ ಮೇಲಿನಮಠಕ್ಕೆ ಸಂಬಂಧಪಟ್ಟಂತೆ ಸಿಗುವ ಏಕಮಾತ್ರ ಮಠಾಧಿಪತಿಯ ಹೆಸರು ಸಂಗಯ್ಯನವರದು. ಇವರು ದೊಡ್ಡಪೇಟೆಯ ಗುರುಬಸಪ್ಪಶೆಟ್ಟರ ನಿರ್ದೇಶನ

ದಂತೆ ದಿನಾಂಕ : ೨.೧.೧೮೯೩ ರಿಂದ ಮೇಲಿನ ಮಠದ ಗುರುಗಳಾಗಿ ನೇಮಕವಾಗಿದ್ದರು.[20] ಇವರ ಕಾಲದಲ್ಲಿ ಮಠದ ಭಕ್ತರಿಂದ ಕಾಣಿಕೆಯನ್ನು ಸಂಗ್ರಹಿಸಿ ದೊಡ್ಡ ಬಸವೇಶ್ವರನ ದೇವಾಲಯದ ಉಪಯೋಗಕ್ಕೆ ಹಾಗೂ ಬಂದು ಹೋಗುವ ಭಕ್ತರ ಅನುಕೂಲಕ್ಕಾಗಿ ಮಠದ ಮುಂದೆ ಒಂದು ಬಾವಿಯನ್ನು ನಿರ್ಮಾಣ ಮಾಡಿಸಿದ್ದರು.[21] ಆಗ ಈ ದೇವಾಲಯದ ಮೇಲುಸ್ತುವಾರಿಯೂ ಕೂಡ ದೊಡ್ಡಪೇಟೆಯ ಗುರುಬಸಪ್ಪಶೆಟ್ಟರಿಗೇ ಸೇರಿತ್ತು[22] ಎಂಬುದು ಗಮನಾರ್ಹ ಸಂಗತಿ. ಮೇಲಿನ ಮಠದ ಸಂಗಯ್ಯನವರು ದಿನಾಂಕ: ೨೮.೬.೧೮೯೯ರಲ್ಲಿ ಬೆಂಗಳೂರು ಜಿಲ್ಲಾಧಿಕಾರಿಗಳಿಗೆ ಒಂದು ಮನವಿ ಪತ್ರ ಸಲ್ಲಿಸಿದ್ದಾರೆ. ಅದರ ಪ್ರಕಾರ ತಮ್ಮ ಮಠದ ಇನಾಂತಿ ಜಮೀನು ಸರ್ವೆ ನಂ : ೫೩೮ ಬಾಬ್ತು ಬಸವಣ್ಣನ ಪೇಟೆಯ ವಿಸ್ತರಣೆಗೆ[23] ಸೇರಿಹೋದ್ದರಿಂದ ಸಮೀಪದಲ್ಲೇ ಬದಲಿ ಜಮೀನು ಕೊಡಿಸುವಂತೆ ಕೇಳಿಕೊಂಡಿದ್ದರು. ಅದನ್ನು ಸರ್ಕಾರವೂ ಅನುಮೋದಿಸಿ ತಮಗೆ ಬೇಕಾದ ಭೂಮಿಯನ್ನು ಆಯ್ಕೆ ಮಾಡಿ ಸೂಚಿಸುವಂತೆ ಆದೇಶ ನೀಡಿತ್ತು.[24] ಈ ವ್ಯವಹಾರವು ಪೂರೈಸುವ ಮುಂಚೆಯೇ ಸಂಗಯ್ಯನವರು ದಿನಾಂಕ:೨೬.೧.೧೯೦೦ರಲ್ಲಿ ಪ್ಲೇಗು ರೋಗಕ್ಕೆ ತುತ್ತಾದರು.[25] ಇವರು ಶಿವಾಧೀನರಾಗುವ ಮುನ್ನ ದೊಡ್ಡಪೇಟೆಯ ಗುರುಬಸಪ್ಪಶೆಟ್ಟರ ಮಗ ಸಿದ್ದಬಸಪ್ಪ ಶೆಟ್ಟರು ಹಾಗೂ ಯಜಮಾನ್ ರುದ್ರಪ್ಪನವರುಗಳಿಗೆ ತಮ್ಮ ಮಠದ ಜವಾಬ್ದಾರಿಯನ್ನು ಒಪ್ಪಿಸಿ, ವ್ಯವಹಾರಾದಿಗಳನ್ನು ನೋಡಿಕೊಳ್ಳುವುದರ ಜೊತೆಗೆ ಮುಂದಿನ ಮಠದ ಮರಿಯ ಆಯ್ಕೆಯನ್ನು ಅವರಿಗೇ ಒಪ್ಪಿಸಿದ್ದರು.[26]

ಸುಂಕೇನಹಳ್ಳಿಯ ಮೇಲಿನಮಠದ ಯಜಮಾನಿಕೆಯನ್ನು ಕುರಿತ ವಿವಾದ ೧೯೦೦ ರಿಂದಲೇ ಪ್ರಾರಂಭವಾಯಿತು. ಮೇಲ್ಕಂಡ ಸಂಗಯ್ಯಮೂರ್ತಿಗಳು ಶಿವಾಧೀನರಾದಾಗ ಬೆಂಗಳೂರಿನ ಪೇಟೆಶೆಟ್ಟಿ ಯಜಮಾನರುಗಳು ಹಾಗೂ ಹತ್ತೂ ಮಂದಿ ಕುಲಸ್ತರು ಸೇರಿ ಮೇಲಿನ ಮಠದ ಜವಾಬ್ದಾರಿಯನ್ನು ಕೋಟೆ ಕಾಳಪ್ಪನವರ ಮಗ ಕಪ್ಪಣ್ಣನವರಿಗೆ ವಹಿಸಿಕೊಟ್ಟಿದ್ದಾರೆ.[27] ಮುಂದೆ ಈ ಏಜೆಂಟ್ ಕಪ್ಪಣ್ಣನಿಗೂ, ದೊಡ್ಡಪೇಟೆಯ ಸಿದ್ಧಬಸಪ್ಪಶೆಟ್ಟಿ ಹಾಗೂ ಯಜಮಾನ್ ರುದ್ರಪ್ಪನವರುಗಳ ನಡುವೆಯೂ ಮಠದ ಆಸ್ತಿಗಳ ಮೇಲ್ವಿಚಾರಣೆಗೆ ಸಂಬಂಧಿಸಿದಂತೆ ಅನೇಕ ವಿವಾದಗಳು ನಡೆದಿವೆ. ಈ ಮಧ್ಯೆ ಮೇಲಿನಮಠದ ಹೆಸರಿಗೆ ಎಸ್.ಬಿ. ಅಕೌಂಟ್ (ನಂ:೬೦೪೩)ನಲ್ಲಿ ಗೌರ್ನವೆಂಟ್ ಸೇವಿಂಗ್ಸ್ ಬ್ಯಾಂಕಿನಲ್ಲಿದ್ದ ಹಣವು ೧೯೦೮ರ ವೇಳೆಗೆ ೯೭೦ರೂ, ૩ ಆಣೆ ೫ ಪೈಸೆಗಳಷ್ಟು ಇದ್ದದ್ದು ೧೯೨೦ರ ವೇಳೆಗೆ ೧೪೮೭ರೂ ೮ ಆಣೆ, ೧೧ ಪೈಸೆಗಳಷ್ಟಾಗಿತ್ತು.[28] ಈ ವೇಳೆಗೆ ಮೇಲಿನಮಠದ ಏಜೆಂಟನಾಗಿದ್ದ ಕಪ್ಪಣ್ಣನು ಮಠದ ಆವರಣದಲ್ಲಿದ್ದ ವೀರಭದ್ರಸ್ವಾಮಿ ಹಾಗೂ ಬಸವೇಶ್ವರನ ಗುಡಿಗಳ ದೀಪಾರಾಧನೆ ಮತ್ತು ಮಠದ ನಿತ್ಯನಿರ್ವಹಣೆಗಾಗಿ ಮೇಲ್ಕಂಡ ಮೊತ್ತದ ಬಡ್ಡಿಯ ಮೊಬಲಗನ್ನು ಕೋರಿ ಅರ್ಜಿ ಸಲ್ಲಿಸಿದ್ದನು.[29]

೧೯೧೯ರ ಮುನಿಸಿಪಲ್ ದಾಖಲೆಗಳ ಪ್ರಕಾರ ಮೇಲಿನಮಠದ ಸುತ್ತಲಿನ ಜಮೀನಿನ ವಿಸ್ತೀರ್ಣ ಪೂರ್ವ ೫೧೫ ಅಡಿ, ಪಶ್ಚಿಮ ೪೬೭ ಅಡಿ, ಉತ್ತರ ૩೫೦ ಅಡಿ, ದಕ್ಷಿಣ ૩૩೬ ಅಡಿಗಳಷ್ಟಿತ್ತು.[30] ಸದ್ಯಕ್ಕೆ ನಿಜಗುಣ ಜಂಗಮಮಠದ ಆಸ್ತಿಯಾಗಿರುವ ಈ ಮೇಲಿನಮಠದ ಭಾಗದಲ್ಲಿ ಅಳಿದುಳಿದಿರುವ ಆಸ್ತಿಯ ವಿಸ್ತೀರ್ಣ ೪೯೮೪.೭ ಚದರ ಗಜಗಳು ಮಾತ್ರ.[31] ಸದರಿ ಮಠದ ನಿಜಗುಣ ಕಲ್ಯಾಣಕೇಂದ್ರವಿರುವುದು ಈಗ ಇದೇ ಭಾಗದಲ್ಲಿ.

---

**ಅಡಿಟಿಪ್ಪಣಿಗಳು**

1. M.Fazulul Hasan. Bangalore Through The Centuries. P. 16, 17.
2. ಎಪಿಗ್ರಾಫಿಯ ಕರ್ನಾಟಿಕ.ix. ಬೆಂಗಳೂರು. ೨೦. (ಸುಂಕೇನಹಳ್ಳಿ)
3. Muzrai File No : 130/1925. Sl. No : 1-8. P. 10.
4. O.S. No : 69/1903-04. Additional Municipal Court. Bangalore. P. 1.
5. ಬಹಳ ಹಿಂದೆ ಮೇಲಿನ ಮಠವು ಬೆಟ್ಟದ ಮೇಲಿನ ದೊಡ್ಡಬಸವಣ್ಣನಗುಡಿಗೆ ಬಲಪಕ್ಕದಲ್ಲೇ ಇದ್ದುದಾಗಿಯೂ, ಕಾಲಾನಂತರ ಅದು

ಶಿಥಿಲವಾಗಿ (ಈಗ ಆ ಸ್ಥಳದಲ್ಲಿ ದೊಡ್ಡ ಜಲಾಗಾರ ಕೇಂದ್ರವಿದೆ) ಹೋದಮೇಲೆ ಬೆಟ್ಟದ ಬುಡದಲ್ಲಿ ಬೇರೆ ಮಠವನ್ನು ಕಟ್ಟಲಾಯಿತೆಂದೂ ಕೆಲವರು ಹೇಳುತ್ತಾರೆ. ಬೆಟ್ಟದ ಮೇಲಿದ್ದುದರಿಂದ ಈ ಮಠಕ್ಕೆ ಮೇಲಿನಮಠವೆಂಬ ಹೆಸರಿದ್ದುದಾಗಿ ಸೂಚಿಸುತ್ತಾರೆ.

6. ಎಂಟು ಆಣೆಯ ಛಾಪಾಕಾಗದ : ನಂ : ೬೧೧. ದಿನಾಂಕ : ೨೨.೧೧.೧೮೭೬. (ಚನ್ನಬಸಮ್ಮನ ಹೆಸರಿಗೆ)
7. 'ದ' ಮುದ್ರಾಂಕಿತವುಳ್ಳ ಕೋರಿಕಾಗದ : ರಕ್ತಾಕ್ಷಿ ಸಂವತ್ಸರ (ಕ್ರಿ.ಶ. ೧೮೦೪) ಆಶ್ವೀಜ ಶುದ್ಧ ೫.
8. ಎರಡು ಆಣೆಯ ಛಾಪಾಕಾಗದ : ದಿನಾಂಕ : ೧೬.೨.೧೮೬೯ (ವೀರಯ್ಯನ ಹೆಸರಿಗೆ)
9. ದೊಡ್ಡಪೇಟೆಯ ಸಿದ್ದಪ್ಪ ಶೆಟ್ರು. (೧೮೦೪) ಇವರ ವಂಶಸ್ಥರು : ಚಿಕ್ಕಣ್ಣಶೆಟ್ರು (೧೮೬೦) ಗುರುಬಸಪ್ಪ ಶೆಟ್ರು (೧೮೬೯-೧೮೭೬), ಸಿದ್ಧಬಸಪ್ಪಶೆಟ್ರು (೧೯೦೦-೧೯೨೭).
10. ಪೂರ್ವೋಕ್ತ ಎರಡು ಆಣೆಯ ಛಾಪಾಕಾಗದ. ವೀರಯ್ಯನಿಗೆ. ದಿ : ೧೬.೨.೧೮೬೯.
11. ಎಂಟು ಆಣೆಯ ಛಾಪಾಕಾಗದ. ವೀರಯ್ಯನ ಮಗ ವೀರಭದ್ರಯ್ಯನಿಗೆ. ದಿ : ೧೭.೬.೧೮೭೪.
12. ದಿನಾಂಕ : ೨.೧.೧೮೯೩ರಂದು ದೊಡ್ಡ ಪೇಟೆಯ ಗುರುಬಸಪ್ಪಶೆಟ್ಟಿಯು ತಾಲ್ಲೂಕು ಕಛೇರಿಗೆ ಬರೆದುಕೊಂಡ ಅರ್ಜಿ.
13. ಈ ಸಂಬಂಧವಾದ ಭೂದಾನ ಸನ್ನದುಪತ್ರ ದೊರಕಿಲ್ಲ. ಆದರೆ ಸರ್ವೆ ನಂ. : ೫೩ರ ಕ್ಯುಟ್‌ರೆಂಟ್ ಕಾಪಿ ಲಭ್ಯವಾಗಿದ್ದು, ಅದರಲ್ಲಿ ಮೇಲಿನಮಠದ ವಿಚಾರಣೆಕರ್ತ ಎಂದೇ ನಮೂದಿಸಲಾಗಿದೆ.
14. Muzrai File No : 720/1916-17. SL. No: 1-17. P. 3.
15. Inam Certificate, General No : 41033/Quit rent Register No: 185. dt: 1.7.1875.
16. Muzrai File No : 720/1916-17. Sl. 1-17. No : P. 21.
17. Ibid.
18. Ibid.
19. O.S. No.: 69/1903-04. Additional Municipal Court, Bangalore. P. 1.
20. ದಿ : ೨.೧.೧೮೯೩ರಂದು ದೊಡ್ಡಪೇಟೆಯ ಗುರುಬಸಪ್ಪಶೆಟ್ಟರು ತಾಲ್ಲೂಕು ಕಛೇರಿಗೆ ಬರೆದುಕೊಟ್ಟ ದಾಖಲೆಪತ್ರ.
21. ದಿ : ೮.೬.೧೮೯೬ರಂದು ಸಂಗಯ್ಯನವರು ತಾಲ್ಲೂಕು ಕಛೇರಿಗೆ ಬರೆದುಕೊಂಡ ಅರ್ಜಿ.
22. ಅದೇ.
23. ಹಿಂದಿನ ಕೆಲವು ದಾಖಲೆಗಳಲ್ಲಿ ಬಸವನಪುರ ವಿಸ್ತರಣೆ, ಬಸವಣ್ಣನಪೇಟೆ ವಿಸ್ತರಣೆ, ಬಸವನಗುಡಿ ವಿಸ್ತರಣೆ, ದೊಡ್ಡಬಸವೇಶ್ವರನ ಬಡಾವಣೆ ಎಂಬ ಬೇರೆ ಬೇರೆ ಹೆಸರುಗಳು ಬಳಕೆಯಾಗಿವೆ.
24. ದಿ : ೨೮.೬.೧೮೯೯ ರಂದು ಸಂಗಯ್ಯನವರು ಬೆಂಗಳೂರು ಜಿಲ್ಲಾ ಡೆಪ್ಯುಟಿ ಕಮೀಷನರ್ ಅವರಿಗೆ ಸಲ್ಲಿಸಿರುವ ಮನವಿಪತ್ರ.
25. O.S. No : 69/1903-04. Additional Municipal Court. Bangalore, P. 2.
26. ಸಂಗಯ್ಯನವರು ಸಾಯುವ ಮುನ್ನ ಬರೆದುಕೊಟ್ಟಿರುವ ಪತ್ರ. ದಿ : ೨೨.೧.೧೯೦೦.
27. O.S. No : 69. (ಪೂರ್ವೋಕ್ತ) ಪು. ೧, ೨.
28. Muzrai File No : 720/1916-17. Sl.No:1-17.: P. 42.
29. Ibid. P. 43.
30. ಸಿಟಿ ಮುನಿಸಿಪಲ್ ಕೌನ್ಸಿಲ್ ಆಫೀಸಿನಿಂದ ಬಂದಿರುವ ತಿಳಿವಳಿಕೆ ಪತ್ರ ಸಂ : ೨೮೧/೨೬.೮.೧೯೧೯.
31. ಭೂ ದಾಖಲೆ ಇಲಾಖೆ. ಹನುಮಂತನಗರ. ಸ್ಥಳೀಯ ಕ್ಷೇತ್ರ. ಸಂ : ೧೯. Sl.No : 1781. Provisional Chalta No : 38 (ನಿಜಗುಣಸ್ವಾಮಿ ಛತ್ರ.)

## ೪. ಕೆಳಗಿನಮಠ, ಸುಂಕೇನಹಳ್ಳಿ

ಹಿಂದೆ ಬೆಂಗಳೂರಿನ ದೊಡ್ಡಬಸವೇಶ್ವರನ ದೇಗುಲವಿರುವ ವೃಷಭಾದ್ರಿಯ ಪಶ್ಚಿಮ ಭಾಗಕ್ಕೆ ಕೂಗಳತೆಯ ದೂರದಲ್ಲಿ ಸುಂಕೇನಹಳ್ಳಿ ಎಂಬ ಗ್ರಾಮವಿತ್ತು. ಈ ಪುಟ್ಟ ಗ್ರಾಮದ ಉತ್ತರ ಬದಿಗಿದ್ದುದೇ ಕೆಳಗಿನಮಠ.[1] ಆಗ ಕೆಳಗಿನ ಮಠವನ್ನು 'ಗುರುಸಿದ್ಧದೇವರಮಠ', 'ಸುಂಕೇನಹಳ್ಳಿಯ ಜಂಗಮಮಠ'ವೆಂದೂ ಕರೆಯುವುದು ರೂಢಿಯಲ್ಲಿತ್ತು.[2] ೧೯೦೦ರ ಅನಂತರ ಸುಂಕೇನಹಳ್ಳಿಯಲ್ಲಿದ್ದ ಮೇಲಿನಮಠ ಮತ್ತು ಕೆಳಗಿನಮಠ ಇವೆರಡಕ್ಕೂ ಏಜೆಂಟನಾಗಿದ್ದ ಕಪ್ಪಣ್ಣನು ಅವುಗಳ ಆಸ್ತಿ-ಪಾಸ್ತಿಗಳಿಗೆ ಸಂಬಂಧಿಸಿದಂತೆ ಅನೇಕ ವ್ಯವಹಾರಗಳನ್ನು ನಡೆಯಿಸಿದ್ದಾನೆ. ಸುಮಾರು ಮೂವತ್ತು ವರ್ಷಗಳಷ್ಟು ಸುದೀರ್ಘವಾಗಿ ವಹಿವಾಟು ನಡೆಸಿರುವ ಕಪ್ಪಣ್ಣನ ಕಾಲದ[3] ಅನೇಕ ದಾಖಲೆ ಪತ್ರಗಳು ಲಭ್ಯವಾಗಿದ್ದು, ಅವು ಕೆಳಗಿನಮಠದ ಐತಿಹಾಸಿಕತೆಯ ಬಗೆಗೆ ವಿಶೇಷವಾಗಿ ಬೆಳಕು ಚೆಲ್ಲುತ್ತವೆ.

ಕೆಳಗಿನಮಠಕ್ಕೆ ರಾಜಮಹಾರಾಜರು ಅಥವಾ ಇನ್ನಾವುದೇ ಶ್ರೀಮಂತ ಭಕ್ತರಿಂದ ದೊರಕಿರಬಹುದಾದ ದಾನಧರ್ಮಗಳ ಬಗೆಗೆ ಯಾವ ವಿವರಗಳೂ ಲಭ್ಯವಾಗಿಲ್ಲ. ಕ್ರಿ.ಶ. ೧೮೨೨ರ ವೇಳೆಗಾಗಲೇ ಸುಂಕೇನಹಳ್ಳಿಯಲ್ಲಿದ್ದ ಈ ಮಠ ಸಾಕಷ್ಟು ಪ್ರಚಲಿತವಾಗಿದ್ದು, ಸುವರ್ಣಾದಾಯದ ಗೋಷ್ವಾರೆ ಪಟ್ಟೆಯಲ್ಲಿ ದಾಖಲಾಗಿದೆ.[4] ಅದೇ ವೇಳೆಗೆ ಬೆಂಗಳೂರಿನ ಬಹುತೇಕ ಮಠಗಳಿಗೆ ಮೈಸೂರಿನ ಮುಮ್ಮಡಿಕೃಷ್ಣರಾಜ ಒಡೆಯರು ಭೂದಾನ ನೀಡಿದ್ದ ಸದವಕಾಶವು ಕೆಳಗಿನ ಮಠಕ್ಕೆ ತಪ್ಪಿಹೋಯಿತೆನ್ನುವುದೇ ನಂಬಲಾಗದ ಸಂಗತಿಯಾಗಿದೆ. ಏಜೆಂಟ್ ಕಪ್ಪಣ್ಣನು ಈ ಮಠಕ್ಕೆ ಶೋಭಕೃತು ಸಂವತ್ಸರ (ಕ್ರಿ.ಶ. ೧೮೪೨ರಲ್ಲಿ) ದಲ್ಲಿ ಸಂಸ್ಥಾನದವರಿಂದ ಭೂದಾನ ಸಿಕ್ಕಿದ್ದುದಾಗಿ ಸಾಬೀತುಪಡಿಸಲು ಪ್ರಯತ್ನಿಸಿರುವುದುಂಟು.[5] ಆದರೆ ಮುಜರಾಯಿ ಇಲಾಖೆಯು ಇದನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸಿ ಗುರುಸಿದ್ದೇವರ (ಕೆಳಗಿನ) ಮಠದ ಹೆಸರಿಗೆ ಯಾವುದೇ ಇನಾಮುಗಳು ಕೊಡಲ್ಪಟ್ಟಿಲ್ಲವಾದ ಕಾರಣ ಇದೊಂದು ಖಾಸಗಿ ಮಠವೆಂದು ದಿನಾಂಕ : ೧೫.೦೫.೧೯೨೪ ರಂದು ತೀರ್ಮಾನಿಸಿದೆ.[6]

ಇನ್ನು ಕೆಳಗಿನಮಠದ ಪ್ರಾಚೀನತೆಗೆ ಸಂಬಂಧಿಸಿದಂತೆ ದೊರಕುವ ಅಧಿಕೃತವಾದ ದಾಖಲೆ ದುಂದುಭಿ ಸಂವತ್ಸರದ (ಕ್ರಿ.ಶ. ೧೮೦೨ರ) ಸುವರ್ಣಾದಾಯ ಗೋಷ್ವಾರೆ ಪಟ್ಟೆ. ಇದರಲ್ಲಿ ಕೆಳಗಿನ ಮಠಕ್ಕೆ ಕುಳ ೦/೧ಕ್ಕೆ ಎರಡು ಗದ್ಯಾಣ ಕಂದಾಯವೆಂದು ಗೊತ್ತುಪಡಿಸಲಾಗಿದೆ.[7] ಅಂದರೆ ಕ್ರಿ.ಶ. ೧೮೦೦ರ ವೇಳೆಗಾಗಲೇ ಈ ಮಠವಿತ್ತು ಎಂಬುದು ಖಚಿತವಾಗುತ್ತದೆ. ಮುಂದೆ (೧೮೨೪ರ ವರೆಗೂ) ಇಂತಹ ಅನೇಕ ಕುಳವಾರು ದಾಖಲೆಗಳು ಸಿಕ್ಕಿವೆಯಾದರೂ ಅವುಗಳಲ್ಲಿ ಮಠದ ಒಡೆಯರು ಎಂದಷ್ಟೇ ನಮೂದಾಗಿರುವುದರಿಂದ ೧೮೨೪ರ ವರೆಗೂ ಈ ಕೆಳಗಿನಮಠದ ಮಠಾಧಿಪತಿಗಳಾಗಿದ್ದವರು ಯಾರು? ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಆದರೆ ತಾರಣ ಸಂವತ್ಸರದ (ಕ್ರಿ.ಶ. ೧೮೨೪) ಸುವರ್ಣಾದಾಯದ ಗೋಷ್ವಾರೆ ಪಟ್ಟೆಯಲ್ಲಿ ಸುಂಕೇನಹಳ್ಳಿಯ ಕೆಳಗಿನಮಠದ ನಂಜಒಡೆಯರು ಎಂಬುದಾಗಿ ಗುರುತಿಸಲಾಗಿದೆ.[8]

ಏಜೆಂಟ್ ಕಪ್ಪಣ್ಣನ ಹೇಳಿಕೆಯ ಪ್ರಕಾರ 'ಬೆಂಗಳೂರು ತಾಲ್ಲೂಕು, ಕೊತ್ತನೂರು ದಾಖಲೆ, ವಡ್ಡರಪಾಳ್ಯದಲ್ಲಿ, ಗುರುಸಿದ್ಧೇವರಮಠದ ಹೆಸರಿಗೆ ಕೆಲವು ಇನಾಂ ಜಮೀನುಗಳಿದ್ದವು.[9] ಅವುಗಳಲ್ಲಿ ಶಾಂತವೀರ ಒಡೆಯರು ಬಿನ್ ನಂಜ ಒಡೆಯರು ಎಂಬುದಾಗಿ ಕೆಲವು ದಾಖಲೆಗಳಲ್ಲಿ ಗುರುತಿಸಲಾಗಿತ್ತು[10]...' ಈ ಹಿನ್ನೆಲೆಯಲ್ಲಿ ಚರ್ಚಿಸುವುದಾದರೆ ಮುಜರಾಯಿ ಇಲಾಖಾ ದಾಖಲೆಗಳಲ್ಲಿ ಗುರುತಿಸಿರುವಂತೆ ಕೆಳಗಿನಮಠಕ್ಕೆ ಗುರುಸಿದ್ಧದೇವರಮಠವೆಂಬ ಇನ್ನೊಂದು ಹೆಸರಿದ್ದುದೂ ಈಗಾಗಲೇ ವ್ಯಕ್ತವಾಗಿದೆ. ಬಹುಶಃ ಸುಂಕೇನಹಳ್ಳಿಯ ಕೆಳಗಿನಮಠದ ಪ್ರಾರಂಭದ ಗುರುಗಳೇ ಗುರುಸಿದ್ಧದೇವರಾಗಿದ್ದುದರಿಂದ, ಈ ಮಠಕ್ಕೆ ಸಹಜವಾಗಿಯೇ 'ಗುರುಸಿದ್ಧದೇವರಮಠ'ವೆಂದು ಹೆಸರು ಬಂದಿರುವುದಾಗಿ ಹೇಳುವುದೇ ಸರಿ ಎನಿಸುತ್ತದೆ. ಮೇಲ್ಕಂಡ ಸುವರ್ಣಾದಾಯ ಗೋಷ್ವಾರೆ ಪಟ್ಟೆಗಳನ್ನು ಅನುಸರಿಸಿ ಹೇಳುವುದಾದರೆ, ಕ್ರಿ.ಶ. ೧೮೦೦ ರಿಂದ ೧೮೨೪ರ ವರೆಗೂ ಗುರುಸಿದ್ಧ (ಒಡೆಯರು) ದೇವರು, ಕೆಳಗಿನಮಠದ ಪ್ರಥಮ ಮಠಾಧೀಶರಾಗಿದ್ದರು. ಮಠದ ಆವರಣದೊಳಗೇ ಇದ್ದ ಇವರ ಗದ್ದುಗೆಯು ಮುಂದೆ

೧೯೩೦ರ ವರೆಗೂ ವಿಶೇಷವಾಗಿ ಭಕ್ತರ ಆರಾಧನಾ ಕೇಂದ್ರವಾಗಿದ್ದುದಾಗಿ ದಾಖಲೆಗಳು ವ್ಯಕ್ತಪಡಿಸುತ್ತವೆ.[11]

೧೮೨೪ರ ನಂತರ ಗುರುಸಿದ್ಧದೇವರ ಶಿಷ್ಯರಾಗಿದ್ದ ನಂಜಒಡೆಯರು ಮುಂದಿನ ಮಠಾಧಿಪತಿಗಳಾಗಿದ್ದಾರೆ. ಇವರ ಕಾಲದಲ್ಲಿ ನೂತನವಾಗಿ ಪೈಮಾಯಿಷಿ (ಗೊತ್ತುಪಡಿಸಿದ) ಆದ ಲೆಕ್ಕದ ಪ್ರಕಾರ 'ಗ್ರಾಮಕ್ಕೆ ಉತ್ತರ ಮಠ, ಮಠದ ಮುಂದಿನ ತೋಪು ಬಾವಿ ಸಹ ೭೦xಜಗಜ; ಗ್ರಾಮಕ್ಕೆ ಪೂರ್ವ ೧೧೪೦ ಗಜ[12]...' ಎಂದು ನಮೂದಾಗಿದೆ. ಈ ನಂಜಒಡೆಯರ ನಂತರ ಶಾಂತವೀರ (ಒಡೆಯರು) ದೇವರು ಕೆಳಗಿನ ಮಠದ ಮಠಾಧೀಶರಾಗಿದ್ದುದಕ್ಕೆ, ಮೇಲ್ಕಂಡ ಕಪ್ಪಣ್ಣನವರ ಹೇಳಿಕೆ ಸಹಾಯಕವಾಗಿದೆಯೇ ಹೊರತು, ನೇರ ಮಾಹಿತಿಯುಳ್ಳ ದಾಖಲೆಗಳಾವೂ ಲಭ್ಯವಾಗಿಲ್ಲ. ಮುಂದೆ ಕ್ರಿ.ಶ. ೧೮೩೭ರ ಸುವರ್ಣಾದಾಯದ ತಾಕುವಾರು ಲೆಕ್ಕದಲ್ಲಿ ಪ್ರಭುವಯ್ಯನವರ ಹೆಸರು ನೊಂದಾವಣೆಯಾಗಿದೆ.[13] ಈ ಹಿನ್ನೆಲೆಯಲ್ಲಿ ಶಾಂತವೀರ ಒಡೆಯರು ಕ್ರಿ.ಶ. ೧೮೩೭ಕ್ಕೂ ಮುಂಚೆ, ನಂಜಒಡೆಯರು ಹಾಗೂ ಪ್ರಭುವಯ್ಯನವರ ನಡುವಿನ ಅವಧಿಯಲ್ಲಿ ಕೆಳಗಿನಮಠದ ಮಠಾಧಿಪತಿಗಳಾಗಿ ಹೋಗಿದ್ದಾರೆ.

ಪ್ರಭುವಯ್ಯನವರ ಕಾಲದಲ್ಲಿ ಕೆಳಗಿನಮಠದ ಸುತ್ತಾ ಕಾವಲುಗೋಡೆಯನ್ನು ನಿರ್ಮಿಸಲಾಗಿತ್ತು. ಮಠದ ಆವರಣದ ಮಧ್ಯೆ ಗುರುಸಿದ್ಧಸ್ವಾಮಿಗಳ ಗದ್ದುಗೆ ವಿಶೇಷ ಪೂಜಾಸ್ಥಳವಾಗಿತ್ತು. ಮುಂಭಾಗಕ್ಕೆ ಅನೇಕ ಸಮಾಧಿಗಳೂ, ೨೮ ಬಿಲ್ವಪತ್ರೆ ಮರಗಳೂ, ವಿವಿಧ ಫಸಲು ಬಿಡುವ ಮಾವು, ಹಲಸು, ತೆಂಗು, ಸೀಬೆ ಇವೇ ಮೊದಲಾದ ಜಾತಿಯ ೫೩ ದೊಡ್ಡ ಮರಗಳುಳ್ಳ ತೋಪು ಇದ್ದಿತು.[14] ಇವರು ಮಠವನ್ನು ಸಾಕಷ್ಟು ಅಭಿವೃದ್ಧಿಗೆ ತಂದಿದ್ದರಾದ ಕಾರಣ, ಇವರ ಕಾಲದಲ್ಲಿ 'ಪ್ರಭುವಯ್ಯನವರ ಮಠ'ವೆಂದು ಕರೆಯುವುದೂ ರೂಢಿಗೆ ಬಂದಿತ್ತು. ಇವರ ಅಂತಿಮ ದಿನಗಳ (ಕ್ರಿ.ಶ. ೧೮೬೭ರ) ತಾಕುವಾರು ಸಾಗುವಳಿ ಲೆಕ್ಕದ ಪ್ರಕಾರ- ಮಠದ ಮುಂದಿನ ಹೊಲ ಒಂದು ತಾಕು, ಹಾಗೂ ಊರ ಮುಂದಿನ ಹೊಲ (ಸುಂಕೇನಹಳ್ಳಿಗೆ ಪೂರ್ವ ಭಾಗ) ಒಂದು ತಾಕು, ಸೇರಿ ಇವೆರಡಕ್ಕೂ ೨.೧ ಹಣ ರೂ ಕಂದಾಯ ಕಟ್ಟಿರುವ ದಾಖಲೆಗಳಿವೆ.[15] ಆಗ ಮಠದ ಸದರಿ ಭೂಮಿಗಳನ್ನು 'ಸರಕಾರಿ ಸಾಗುವಳಿ' ಎಂದೇ ಗುರುತಿಸಲಾಗಿದೆ.

ಪ್ರಭುವಯ್ಯನವರು ತಮ್ಮ ಮಠದ ಮುಂದಿನ ಮರಿಯನ್ನಾಗಿ ಮರುಳಯ್ಯ ಎಂಬುವವರನ್ನು ರುಧಿರೋದ್ಗಾರಿ ಸಂವತ್ಸರದ (ಕ್ರಿ.ಶ. ೧೮೬೩) ನಿಜಶ್ರಾವಣ ಬಹುಳ ೫ ರಂದು ಆಯ್ಕೆ ಮಾಡಿಕೊಂಡಿದ್ದರು.[16] ಇವರು ೧೮೬೭ರಲ್ಲಿ ಪ್ರಭುವಯ್ಯನವರು ಶಿವಾಧೀನರಾದ[17] ನಂತರ ಕೆಳಗಿನ ಮಠದ ಐದನೆಯ ಮಠಾಧೀಶರಾಗಿ ಅಧಿಕಾರಕ್ಕೆ ಬಂದರು. ಇವರ ಕಾಲದ ದಾಖಲೆಗಳ ಪ್ರಕಾರ ೧೮೭೭ರ ವೇಳೆಗೆ ಮಠದ ಆಸ್ತಿಗಳ ಪುನರ್ ಮಾಪನಾ ಕಾರ್ಯ ನಡೆದಿತ್ತು. ೧೮೭೭ರ ರೆವಿನ್ಯೂ ಸರ್ವೆ ಪ್ರಕಾರ ಮರುಳಯ್ಯನವರ ಮಠಕ್ಕೆ ಊರ ಮುಂದಿನ ಹೊಲ ಸರ್ವೆ ನಂ : ೨ರಲ್ಲಿ ೯ ಎಕರೆ ೧೬ ಗುಂಟೆ ಖುಷ್ಕಿ ಹಾಗೂ ಮಠದ ಮುಂದಿನ ಹೊಲ, ತೋಪು ಸೇರಿ ಸರ್ವೆ ನಂ : ೩೭ರಲ್ಲಿ ೫ ಎಕರೆ ೨೩ ಗುಂಟೆ ಖುಷ್ಕಿ ಜಮೀನುಗಳಿದ್ದವು.[18] ಇವರ ಅವಸಾನದ ವೇಳೆಗೆ ಮಠದ ಬಹಳಷ್ಟು ಆಸ್ತಿಗಳೆಲ್ಲಾ ಕೈಬಿಟ್ಟು ಹೋಗಿದ್ದವು. ಸದರಿ ಮರುಳಯ್ಯನವರು ೧೮೯೯ರಲ್ಲಿ ಪ್ಲೇಗುರೋಗಕ್ಕೆ ಬಲಿಯಾದರು.[19] ಈ ವೇಳೆಗೆ ಕೆಳಗಿನ ಮಠದಲ್ಲೆ ವಾಸ್ತವ್ಯ ಹೂಡಿದ್ದ ಚನ್ನಬಸಮ್ಮ ಮತ್ತು ಈಕೆಯ ಮಗ ಶಂಕರಯ್ಯ ಎಂಬುವರು ಸರ್ವೆ ನಂ : ೩೭ರ ಪೈಕಿ ೨ ಎಕರೆ ೨೩ ಗುಂಟೆ ಭೂಮಿಯನ್ನು ತಮ್ಮ ಹೆಸರಿಗೆ ಖಾತೆ ಮಾಡಿಸಿಕೊಂಡಿದ್ದರು. ಈ ದಾಖಲೆಯಲ್ಲಿ 'ಪಟ್ಟೆದಾರ ಮರುಳಯ್ಯನ ಹೆಂಡತಿ ಚೆನ್ನಬಸಮ್ಮ ಮತ್ತು ಮಗ ಶಂಕರಯ್ಯ' ಎಂದೇ ನಮೂದಾಗಿತ್ತು.[20] ಮುಂದೆ ಈ ಶಂಕರಯ್ಯನು ದಿನಾಂಕ : ೮.೮.೧೯೦೨ರಲ್ಲಿ ಮಠದ ಸದರಿ ಆಸ್ತಿಯನ್ನು ಮತ್ತೊಬ್ಬರಿಗೆ ಪರಭಾರೆ ಮಾಡಿದ್ದನು. ಆ ಪರಭಾರೆ ದಾಖಲೆಯಲ್ಲೂ ಕೂಡ...''..ಸುಂಕೇನಹಳ್ಳಿ ಕೆಳಗಿನಮಠದ ಮರುಳಯ್ಯನವರ ಮಗನಾದ ಶಂಕರಯ್ಯನಾದ ನಾನು.... ನನ್ನ ಪಿತ್ರಾರ್ಜಿತವಾದ ನನ್ನ ಹೆಸರಿಗೆ ಪಟ್ಟೆಯಾಗಿ ನನ್ನ ಸ್ವಾಧೀನಾನುಭವದಲ್ಲಿರುವ ಸರ್ವೆ ನಂ : ೩೭ರ ೨ ಎಕರೆ ೨೩ ಗುಂಟೆ ಭೂಮಿಯನ್ನು....ನನ್ನ ದರದು ನಿಮಿತ್ಯಾ ಗವರ್ನಮೆಂಟ್ ಒಂದುನೂರು ರೂಗಳ ಶುದ್ಧ ಕ್ರಯಕ್ಕೆ ಕೊಟ್ಟು....''[21] ಎಂದೇ ನಮೂದಿಸಲಾಗಿದೆ. ಹೀಗೆ ಸುಂಕೇನಹಳ್ಳಿ ಕೆಳಗಿನಮಠವು ೧೯೦೦ ರ ವೇಳೆಗೆ ತನ್ನ ಮೂಲ ಧಾರ್ಮಿಕ ಪರಂಪರೆಗಳಿಂದ ಸಂಪೂರ್ಣವಾಗಿ ವಿಮುಖವಾಗಿತ್ತು. ಮಠಾಧೀಶರ ಅಜಾಗರೂಕತೆಯಿಂದಾಗಿ ಮಠದ ಆಸ್ತಿ-

ಪಾಸ್ತಿಗಳು ಪರಾಧೀನವಾಗತೊಡಗಿದ್ದವು. ಆಗ ಪೇಟೆ ಶೆಟ್ಟಿ ಯಜಮಾನರುಗಳು ಸೇರಿ ಕೋಟೆ ಕಾಳಪ್ಪನ ಮಗ ಕಪ್ಪಣ್ಣನನ್ನು ಕೆಳಗಿನಮಠದ ನಿಗಾವಣೆದಾರನನ್ನಾಗಿ ದಿನಾಂಕ : ೧೩.೧.೧೯೦೦ರಂದು ನೇಮಕ ಮಾಡಿದ್ದರು.[22]

**ಕೆಳಗಿನಮಠದ ಗುರು ಪರಂಪರೆ :**

೧. ಗುರುಸಿದ್ಧದೇವರು. ಸು. ಕ್ರಿ.ಶ. ೧೮೦೦-೧೮೨೪.

೨. ನಂಜ ಒಡೆಯರು. ಸು. ಕ್ರಿ.ಶ. ೧೮೨೪-೧೮೩೦.

೩. ಶಾಂತವೀರ ಒಡೆಯರು. ಸು. ಕ್ರಿ.ಶ. ೧೮೩೦-೧೮೩೬.

೪. ಪ್ರಭುವಯ್ಯನವರು. ಕ್ರಿ.ಶ. ೧೮೩೭-೧೮೬೬.

೫. ಮರುಳಯ್ಯನವರು. ಕ್ರಿ.ಶ. ೧೮೬೬-೧೮೯೯.

**ಏಜೆಂಟ್‌ಕಪ್ಪಣ್ಣನ ಆಡಳಿತ**

ಕಳೆದ ಶತಮಾನದಲ್ಲಿ ಸುಂಕೇನಹಳ್ಳಿಯ ಇವೆರಡೂ ಮಠಗಳೂ ಪ್ರತ್ಯೇಕ ಆಡಳಿತಕ್ಕೆ ಒಳಪಟ್ಟಿದ್ದವು. ೧೮೯೯ರ ವೇಳೆಗೆ ಮೇಲಿನಮಠದ ಸಂಗಯ್ಯನವರೂ ಹಾಗೂ ಕೆಳಗಿನಮಠದ ಮರುಳಯ್ಯನವರೂ ಪ್ಲೇಗಿನ ಮಾರಿಗೆ ಬಲಿಯಾಗಿದ್ದರು. ಇವರ ನಂತರ ದಿಕ್ಕಿಲ್ಲದಂತಾಗಿದ್ದ ಉಭಯ ಮಠಗಳಿಗೂ ಬೆಂಗಳೂರಿನ ಮೂರು ಪೇಟೆ ಶೆಟ್ಟಿ ಯಜಮಾನರುಗಳೂ ಸೇರಿ ಕಪ್ಪಣ್ಣನನ್ನೇ ಏಜೆಂಟ್ (ನಿಗಾವಣೆದಾರ)ನನ್ನಾಗಿ ನೇಮಿಸಿದ್ದರು. ಏಜೆಂಟ್ ಕಪ್ಪಣ್ಣನು ಅಧಿಕಾರಕ್ಕೆ ಬಂದ ಮೇಲೆ ಅವಸಾನದ ಅಂಚಿನಲ್ಲಿದ್ದ ಮಠಗಳ ರಕ್ಷಣೆಗಾಗಿ ಅವಿರತ ಪ್ರಯತ್ನ ನಡೆಸಿದನು. ಮಠದ ಆಸ್ತಿಗಳನ್ನು ಉಳುಮೆ ಮಾಡುತ್ತಿದ್ದ ರೈತರು ಅವರವರ ಹೆಸರಿಗೆ ಖಾತೆ ಮಾಡಿಸಿಕೊಂಡಿದ್ದರು. ಈಗಾಗಲೇ ಮಠದ ಆಸ್ತಿಯನ್ನು ಪರಭಾರೆ ಮಾಡಿದ್ದ ಶಂಕರಯ್ಯನ ಮೇಲೆ ನ್ಯಾಯಾಲಯದಲ್ಲಿ ದಾವೆ ಹೂಡಿದನು. ಸದರಿ ಶಂಕರಯ್ಯ ಹಾಗೂ ಈತನ ತಾಯಿ ಚೆನ್ನಬಸಮ್ಮ ಇವರುಗಳು ದಿವಂಗತ ಮರುಳಯ್ಯ (ಕೆಳಗಿನಮಠದ ಸ್ವಾಮಿ)ನವರಿಗೆ ಕೇವಲ ಸೇವಕ ವೃತ್ತಿಯಲ್ಲಿದ್ದವರೇ ಹೊರತು ರಕ್ತ ಸಂಬಂಧಿಗಳಲ್ಲ ಎಂಬ ಕಪ್ಪಣ್ಣನ ವಾದವನ್ನು ನ್ಯಾಯಾಲಯವು ಎತ್ತಿ ಹಿಡಿಯಿತು. ಪರಭಾರೆಯಾಗಿದ್ದ ಆಸ್ತಿಗಳು ಮತ್ತೆ ಮಠಕ್ಕೆ ಉಳಿಯುವಂತಾಯಿತು.[23]

೧೯೦೬ರ ವೇಳೆಗೆ ಇವೆರಡೂ ಮಠಗಳ ಆಸ್ತಿ-ಪಾಸ್ತಿಗಳಿಗೆ ಸಂಬಂಧಿಸಿದಂತೆ ಅನೇಕ ವ್ಯವಹಾರಗಳನ್ನು ನಡೆಸಿದ್ದಾನೆ. ಈ ಪತ್ರಗಳಲ್ಲೆಲ್ಲಾ ಏಜೆಂಟ್ ಕಪ್ಪಣ್ಣ, ಧರ್ಮಕರ್ತ ಕಪ್ಪಣ್ಣ ಎಂದು ಸಂಬೋಧಿಸಲಾಗಿದೆ. ೧೯೧೬ರ ವರೆಗೂ ಸದರಿ ಮಠಗಳ ಆವರಣಗಳು ವೀರಶೈವರ ರುದ್ರಭೂಮಿಗಳೂ ಆಗಿದ್ದವು.[24] ಇದೇ ವೇಳೆಗೆ ಕೆಳಗಿನಮಠದ ಆವರಣದಲ್ಲಿದ್ದು ಪಾಳು ಬಿದ್ದಿದ್ದ ಕೊಳವನ್ನು ಸುತ್ತು ಗೋಡೆ ಹಾಕಿ ರಕ್ಷಿಸುವಂತೆ ಮುನಿಸಿಪಲ್ ಬೋರ್ಡ್‌ನಿಂದ ಆದೇಶ ನೀಡಲಾಗಿತ್ತು.[25] ೧೯೧೯ರ ವೇಳೆಗೆ ಇವೆರಡೂ ಮಠಗಳಿಗೆ ಸಂಬಂಧಿಸಿದಂತೆ ಚಿತ್ರದುರ್ಗ ಬೃಹನ್ಮಠದವರು ವ್ಯವಹಾರ ನಡೆಸಿರುವ ಕೆಲವು ದಾಖಲೆ ಪತ್ರಗಳು ಸಿಗುತ್ತವೆ ಯಾದರೂ; ಮುಂದೆ ೧೯೨೭ರ ವರೆಗೂ ಏಜೆಂಟ್ ಕಪ್ಪಣ್ಣನ ಸರ್ವಾಧಿಕಾರತ್ವ ಅನಿರ್ಬಾಧಿತವಾಗಿ ಮುನ್ನಡೆದಿತ್ತು.[26] ಈ ಮಧ್ಯೆ ಬೆಂಗಳೂರಿನ ವೀರಶೈವ ಮಠಪ್ರಮುಖರ ಅಪೇಕ್ಷೆಯ ಮೇರೆಗೆ ೧೯೧೯ರಲ್ಲಿ ಚಿತ್ರದುರ್ಗ ಸಂಸ್ಥಾನದ ಪರವಾಗಿ ಚರಮೂರ್ತಿ ಶಾಂತವೀರದೇವರು ಎಂಬುವರನ್ನು ಮೇಲಿನಮಠಕ್ಕೂ, ಬಸವಮರಿದೇವರು ಎಂಬುವರನ್ನು ಕೆಳಗಿನಮಠಕ್ಕೂ ಸ್ವಾಮಿಗಳನ್ನಾಗಿ ನೇಮಿಸಲಾಗಿತ್ತು.[27] ಆದರೆ ಈ ಮಠಗಳ ಮೇಲೆ ಸಂಪೂರ್ಣ ಹತೋಟಿಯನ್ನಿರಿಸಿಕೊಂಡಿದ್ದ ಕಪ್ಪಣ್ಣನ ಆಡಳಿತದಲ್ಲಿ ಇವರಾರೂ ಹೆಚ್ಚು ಕಾಲ ನಿಲ್ಲಲು ಅವಕಾಶವಾಗಲಿಲ್ಲ.

ಮೇಲಿನಮಠದ ಬಾಬ್ತು ನಾಗಸಂದ್ರ ಗ್ರಾಮದ ಸರ್ವೆ ನಂ : ೫೩ರ ಇನಾಂತಿ ಜಮೀನಿನ ಪರಿಹಾರಾರ್ಥವಾಗಿ ಬಂದಿದ್ದ ಹಣ ೬೫೩ ರೂ, ೪ ಆಣೆಗಳು ಮುಂದೆ ೧೯೨೪ರ ವೇಳೆಗೆ ೧೭೭೭ ರೂ. ೧೩ ಆಣೆ ೭ ಪೈಸೆಗಳಷ್ಟು ಅಭಿವೃದ್ಧಿಯಾಗಿತ್ತು.[28] ಕಪ್ಪಣ್ಣನ ಸತತ ಪ್ರಯತ್ನದಿಂದಾಗಿ ಸರಕಾರದಿಂದ ಇವೆರಡೂ ಮಠಗಳ ಅಭಿವೃದ್ಧಿಗಾಗಿ ದೊಡ್ಡತೋಗೂರು ಗ್ರಾಮದ ಬಳಿ ಸರ್ವೆ ನಂ : ೬೮ರಲ್ಲಿ ೬ ಎಕರೆ ಜಮೀನು ಹಾಗೂ ಪಿಳ್ಳಗಾನಹಳ್ಳಿ ಗ್ರಾಮದ ಬಳಿ ಸರ್ವೆ ನಂ: ೨ರಲ್ಲಿ ೧೬ ಎಕರೆ ದರಖಾಸ್ತು (ಬೇಡಿಕೆ ಅರ್ಜಿ) ಜಮೀನುಗಳು ಮಂಜೂರಾಗಿದ್ದವು.[29] ಇಷ್ಟೆಲ್ಲಾ ವ್ಯವಹಾರಗಳನ್ನು ನಿಭಾಯಿಸಿದ್ದ ಕಪ್ಪಣ್ಣನು ಚಿತ್ರದುರ್ಗ ಸಂಸ್ಥಾನದ ಜಯದೇವ ಜಗದ್ಗುರುಗಳಲ್ಲಿ ಮನವಿ (೧೯೨೫ರಲ್ಲಿ) ಮಾಡಿಕೊಂಡು, ತನಗೆ ೮೦ಕ್ಕೂ ಮೀರಿದ ವೃದ್ಧಾಪ್ಯವಾದ ಕಾರಣ ಸಂಸ್ಥಾನದವರೆ ಈ

ಮಠಗಳ ನಿಗಾವಣೆ ಮಾಡಿಕೊಳ್ಳುವಂತೆ ಕೋರಿದ್ದನು. ಆದರೆ ಜಗದ್ಗುರುಗಳು ಮನವಿದಾರನು ಮಠಗಳ ಪುರೋಭಿವೃದ್ಧಿಗಾಗಿ ಮಾಡಿದ್ದ ಧರ್ಮಕಾರ್ಯಗಳನ್ನು ಪರಿಶೀಲಿಸಿ ಸೂಕ್ತ ಏರ್ಪಾಡು ಮಾಡಲು ನಿರಾಕರಿಸಿದ್ದರಾದ ಕಾರಣ ಕಪ್ಪಣ್ಣನೇ ಮಠಾಧಿಪತ್ಯವನ್ನು ಮುಂದುವರೆಸಿದ್ದನು.[30]

ದಿನಾಂಕ : ೧೭.೬.೧೯೨೬ರಲ್ಲಿ ಕಪ್ಪಣ್ಣನು ತಾನೀಗಾಗಲೇ ಸಾಕಿಕೊಂಡಿದ್ದ ಹೊಸಕೋಟೆಯ ಗಿರಿಮಲ್ಲಪ್ಪನ ಮಗ ಸಿದ್ಧಲಿಂಗಪ್ಪ ಎಂಬ ವಟುವಿಗೆ ಮಂಡ್ಯದ ಬಳಿ ಗುತ್ತಲಮಠದ ಪಟ್ಟದ ಚಂದ್ರಶೇಖರ ಸ್ವಾಮಿಗಳಿಂದ ವಿಧಿವತ್ತಾಗಿ ಜಂಗಮದೀಕ್ಷೆಯನ್ನು ಕೊಡಿಸಿದ್ದನು.[31] ಸದರಿ ಏರ್ಪಾಡನ್ನು ಮಾನ್ಯ ಮಾಡಬೇಕೆಂದು ಮುಜರಾಯಿ ಇಲಾಖೆಗೆ ಮನವಿ ಬಂದಾಗ, ಇಲಾಖೆಯವರು "ಪ್ರಸ್ತುತ ಮಠದ ಶಿಷ್ಯವರ್ಗದಿಂದ ತಗಾದೆ ಬಾರದ ಹೊರತು ಸರಕಾರ ಇದರಲ್ಲಿ ಪ್ರವರ್ತಿಸಲಾಗದೆಂದು" ಆದೇಶ ನೀಡಿದ್ದರು.[32] ಹೀಗೆ ಸುಮಾರು ೨೭ ವರ್ಷಗಳಷ್ಟು ಸುದೀರ್ಘವಾಗಿ ಸುಂಕೇನಹಳ್ಳಿಯ ಇವೆರಡೂ ಮಠಗಳ ರಕ್ಷಕನಾಗಿ, ಪ್ರಾಮಾಣಿಕ ಧರ್ಮಕರ್ತನಾಗಿ ಕರ್ತವ್ಯ ನಿರ್ವಹಿಸಿದ್ದ ಕಪ್ಪಣ್ಣನ ಅಂತಿಮ ದಿನಗಳ ಮಾಹಿತಿಗಳು ಲಭ್ಯವಾಗಿಲ್ಲ. ಆದರೂ ಮೇಲ್ಕಂಡ ಮಠಗಳಿಗೆ ಸಂಬಂಧಿಸಿದಂತೆ ಈತನ ವ್ಯಕ್ತಿತ್ವ ಹಾಗೂ ಸಾಧನೆಗಳನ್ನು ಕುರಿತು ಚಿತ್ರದುರ್ಗ ಸಂಸ್ಥಾನದವರಿಗೆ ಸದರಿ ಮಠಗಳ ಮೇಲಿದ್ದ ಆಸ್ಥೆ ಇವುಗಳನ್ನು ಕುರಿತು ವಿಶೇಷವಾಗಿ ಬೆಳಕು ಚೆಲ್ಲುವ ಅಮೂಲ್ಯ ದಾಖಲೆಯೊಂದನ್ನು ಮುಂದಿನ ಅನುಬಂಧದಲ್ಲಿ ಕೊಡಲಾಗಿದೆ.[33]

ಮುಂದೆ ಚಿತ್ರದುರ್ಗ ಸಂಸ್ಥಾನದ ಜಯದೇವ ಜಗದ್ಗುರುಗಳಅನುಮತಿಯಂತೆ ೧೯೩೮ರಲ್ಲಿ ಸುಂಕೇನಹಳ್ಳಿಯ ಇವೆರಡೂ ವಿರಕ್ತ ಮಠಗಳಿಗೆ ಮಠಾಧಿಪತಿಯನ್ನಾಗಿ ಶರಣಯ್ಯ ಎಂಬ ವಟುವನ್ನು ಬೆಂಗಳೂರಿನ ಭಕ್ತರೆಲ್ಲಾ ಸೇರಿ ಆಯ್ಕೆ ಮಾಡಿದರು.[34] ಅವರೇ ಈಗಿನ ಗವಿಪುರ ಬಡಾವಣೆಯಲ್ಲಿರುವ ನಿಜಗುಣಜಂಗಮ ಮಠದ ಶ್ರೀ ನಿಜಗುಣ ಮಹಾಸ್ವಾಮಿಗಳು.[35] ಇವರು ತಮ್ಮ ಪೂರ್ವಾಶ್ರಮದ ಸೋದರಿಯ ಮಗ ರಾಜಶೇಖರಯ್ಯನವರ ಪುತ್ರ ರುದ್ರಯ್ಯ ಎಂಬ ವಟುವನ್ನು ಆಯ್ಕೆ ಮಾಡಿಕೊಂಡು ದಿನಾಂಕ : ೮.೩.೧೯೯೬ರಂದು ಮುಂದಿನ ಉತ್ತರಾಧಿಕಾರಿಗಳನ್ನಾಗಿ ಸ್ವೀಕರಿಸಿದ್ದಾರೆ.[36]

ಸುಂಕೇನಹಳ್ಳಿಯ ಮೇಲಿನ ಮತ್ತು ಕೆಳಗಿನ ಇವೆರಡೂ ಮಠಗಳಿಗೆ ಸಂಬಂಧಿಸಿದಂತೆ ಒಂದು ಮುಖ್ಯವಾದ ವಿಚಾರವನ್ನು ಹೇಳಲೇಬೇಕಾಗಿದೆ. ಸರಿಸುಮಾರು ೧೮೦೨ ರಿಂದ ೧೯೨೭ರವರೆಗೆ ಈ ಮಠಗಳಿಗೆ ಸೇರಿದ ಅನೇಕ ಹಳೆಯ ದಾಖಲೆಗಳು, ಕೋರ್ಟು ಕಛೇರಿಯ ವ್ಯವಹಾರ ಪತ್ರಗಳು ಹಾಗೂ ಮುಜರಾಯಿ ಇಲಾಖಾ ಕಡತಗಳು ಲಭ್ಯವಾಗಿವೆಯಷ್ಟೆ. ಆದರೆ ಎಲ್ಲೂ ಕೂಡ ಸದರಿ ಮಠಗಳು ಇಂಥದೇ ಸಮಯಭೇದಗಳಿಗೆ ಸೇರಿದವೆಂದಾಗಲಿ ಅಥವಾ ಯಾವುದೇ ಮೂಲ ಮಠದ ಶಾಖೆಗಳೆಂದಾಗಲೀ ಪ್ರಸ್ತಾಪವಾಗಿರುವುದಿಲ್ಲ.

---

**ಅಡಿಟಿಪ್ಪಣಿಗಳು**

1. ಇಂದಿನ ಗವಿಪುರ ಬಡಾವಣೆಯ ಎರಡನೆಯ ಮುಖ್ಯರಸ್ತೆಯಲ್ಲಿರುವ ನಿಜಗುಣ ಜಂಗಮಮಠವೇ ಅಂದಿನ ಸುಂಕೇನಹಳ್ಳಿಯ ಕೆಳಗಿನ ಮಠವಾಗಿತ್ತು.
2. Muzrai File No : 130/1925. Sl.No: 1-8. P. 19.
3. Muzrai File No : 39/1926-27. Sl. No: 1-8. P. 11-12.
4. O.S. No. : 69/1903-04. Exibit - S. Principal Munsiff Court. Bangalore. P. 1.
5. Muzrai File No : 302/1923. Sl. No : 1-2. P. 7-8.
6. Ibid. P. 12.
7. O.S. No : 69/1903-04 Exibit-S. Principal Munsiff Court. Bangalore. P. 1.
9. Ibid. P. 2.
9. ಹಿಂದಿನ ಸರ್ವೆ ನಂ : ೧೮/೧, ೨೪/೧, ೨೬/೧, ಮತ್ತು ೨೭/೧ ಇವುಗಳ ಒಟ್ಟು ವಿಸ್ತೀರ್ಣ ೧೬ ಎಕರೆ.
10. ಬೆಂಗಳೂರು ತಾಲ್ಲೂಕು ಅಮಲ್ದಾರವರ ರೂಬುರೂಬು ಗುರುಸಿದ್ಧೇವರಮಠದ ಏಜೆಂಟ್ ಕಪ್ಪಣ್ಣ ಬರೆಸಿದ ಹೇಳಿಕೆ. ದಿನಾಂಕ : ೧೮.೪.೧೯೨೧. ಪು. ೧.

11. ಸಾಮಾನ್ಯವಾಗಿ ಬೆಂಗಳೂರಿನ ಬಹುತೇಕ ಮಠಗಳಲ್ಲಿ ಮೂಲಗುರುಗಳ ಗದ್ದುಗೆ ವಿಶೇಷ ಪೂಜಾ ಕೇಂದ್ರಗಳಾಗಿ ಪರಿವರ್ತನೆಯಾಗಿವೆ. ಅದೇ ರೀತಿ ಸುಂಕೇನಹಳ್ಳಿ ಕೆಳಗಿನಮಠದ ಮೂಲ ಗುರುಗಳಾಗಿದ್ದ ಗುರುಸಿದ್ಧದೇವರ ಗದ್ದುಗೆಯೂ ವಿಶೇಷ ಪೂಜಾಕೇಂದ್ರವಾಗಿತ್ತು. ಈಗಲೂ ಕೂಡ ನಿಜಗುಣ ಜಂಗಮಮಠದ ಒಳಗೆ ಈ ಗದ್ದುಗೆ ಉಳಿದುಕೊಂಡು ಬಂದಿದೆ.
12. O.S.No : 69/1903-04. Exibit-S. Principal Munsiff Court. Bangalore. P. 1,2.
13. O.S.No : 69/1903-04. Exibit-B. P. 1.
14. Ibid. Exibit - S. P. 1,2.
15. ಕುಳವಾರು ಜಮಾಬಂಧಿ ತಃಖ್ತೆ. ಅಕ್ಷಯ ಸಂವತ್ಸರ. (೧೮೬೬)
16. ಬೆಂಗಳೂರು ತಾಲ್ಲೂಕು ಕಛೇರಿಯಲ್ಲಿ ದೊಡ್ಡಪೇಟೆ ಚನ್ನಶೆಟ್ಟಿಯ ಹೇಳಿಕೆ. ದಿನಾಂಕ : ೧೧.೬.೧೮೭೨.
17. ಪ್ರಭುವಯ್ಯನವರ ಪವತಿ ತಃಖ್ತೆ. ಪ್ರಭವ ಸಂವತ್ಸರ. (೧೮೬೭)
18. ಬೆಂಗಳೂರು ತಾಲ್ಲೂಕು ಕಛೇರಿ ದಾಖಲೆ. ೧೮೭೭. ಕಾಪಿ : ದಿ : ೩.೧.೧೯೦೬.
19. ಮರುಳಯ್ಯನ ಪವತಿ ತಃಖ್ತೆ; ೧೮೯೯-೧೯೦೦. ಬೆಂಗಳೂರು ತಾಲ್ಲೂಕು ಕಛೇರಿ.
20. ಸುಂಕೇನಹಳ್ಳಿ ಕೆಳಗಿನಮಠದ ಮರುಳಯ್ಯನ ಹೆಂಡತಿ ಚೆನ್ನಬಸಮ್ಮನ ಅಹವಾಲು, ಬೆಂಗಳೂರು ತಾಲ್ಲೂಕು ಕಛೇರಿಗೆ. ದಿನಾಂಕ : ೨.೧೨.೧೯೦೧.
21. ಒಂದು ರೂ ಛಾಪಾಕಾಗದ : ರಿ.ನಂ. : ೪೮೩. ಸಂ : ೩೯. ಪು. ೨೫೫ ದಿ : ೮.೧೧.೧೯೦೨.
22. O.S. No : 69/1903-04. Principal Munsiff Court. Bangalore P. 1.
23. ಸುಂಕೇನ ಹಳ್ಳಿ ಗ್ರಾಮದ ಪಾಂಚಾನನದ ಮುದ್ದಪ್ಪನ ಕ್ರೈಫಿಯತ್ತು. ದಿ : ೩೦.೩.೧೯೧೦.
24. ಬೆಂಗಳೂರು ಮುನಿಸಿಪಲ್ ಹೆಲ್ತ್ ಆಫೀಸ್ ನೋಟೀಸ್. ದಿ : ೨೭.೧೧.೧೯೧೬.
25. ಅದೇ.
26. S.D.O/A.C.No. 353. Dt : 7.6.1927.
27. ಚಿತ್ರದುರ್ಗ ಸಂಸ್ಥಾನಕ್ಕೆ ಚರಮೂರ್ತಿ ಶಾಂತವೀರದೇವರು ಬರೆದ ಪತ್ರ. ದಿ : ೮.೯.೧೯೧೯. ಮತ್ತು ದೇಶದ ಸಿದ್ಧಬಸಪ್ಪ ಶೆಟ್ಟಿ ಬರೆದ ಪತ್ರ. ದಿ : ೧೬.೩.೧೯೨೦.
28. Muzrai File No : 39/1926. Sl. No : 18. P. 20.
29. Ibid. P.14 & 21.
30. ಬೆಂಗಳೂರು ತಾಲ್ಲೂಕು ಅಮಲ್ದಾರ್ ಕಛೇರಿಯ ದಾಖಲೆ. ದಿ : ೧೨.೯.೧೯೨೫..
31. ಮುಜರಾಯಿ ಇಲಾಖೆಗೆ ಕಪ್ಪಣ್ಣನು ಬರೆದುಕೊಂಡ ಮನವಿ ಅರ್ಜಿ. ದಿ : ೭.೯.೧೯೨೬.
32. S.D.O/A.C. No: 353. Dt : 7.6.1927.
33. ಮಧುಗಿರಿ ಲಾಯರ್ ನಂಜುಂಡಯ್ಯನು ಸಂಸ್ಥಾನಕ್ಕೆ ದಿ : ೬.೭.೧೯೨೪ರಂದು ಬರೆದಿರುವ ಸುದೀರ್ಘಪತ್ರವನ್ನು ಅನುಬಂಧದಲ್ಲಿ ಯಥಾವತ್ತಾದ ನಕಲು ಕೊಡಲಾಗಿದೆ. ಪತ್ರ ಸಂ : ೨೬.
34. ಷಣ್ಮುಖಯ್ಯ ಅಕ್ಕೂರಮಠ. ಶ್ರೀ ನಿಜಗುಣಸ್ವಾಮಿಗಳ ಜೀವನದರ್ಶನ. ಶೂನ್ಯ ಸಂಪಾದನೆ ಒಂದು ಅಧ್ಯಯನ. ಸಂ : ಡಾ। ಸಾ.ಶಿ. ಮರುಳಯ್ಯ. ಪು. ೨೭, ೨೮.
35. ಮೇಲ್ಕಂಡ ಈ ನಿಜಗುಣಸ್ವಾಮಿಗಳು ಇತ್ತೀಚೆಗೆ ತಮ್ಮ ೮೨ನೇ ವಯಸ್ಸಿನಲ್ಲಿ ದಿನಾಂಕ ೧೮.೯.೧೯೯೭ ರಂದು ಲಿಂಗೈಕ್ಯರಾಗಿರುತ್ತಾರೆ.
36. ಉತ್ತರಾಧಿಕಾರತ್ವದ ಆಮಂತ್ರಣ ಪತ್ರಿಕೆ. ದಿ : ೮.೩.೧೯೯೬.

## ೫. ಗಂಗಶೆಟ್ಟಿಮಠ, ಕೆಂಪಾಪುರ

ಗಂಗಶೆಟ್ಟಿಮಠವು ಒಂದು ವಿರಕ್ತ ಮಠವಾಗಿದ್ದು, ಅದು ಈಗಿನ ಮಾಗಡಿ ರಸ್ತೆಗೆ ಪಕ್ಕದ ಗೋಪಾಲ ಪುರದಲ್ಲಿ, ಮಿನರ್ವ ಬಟ್ಟೆಗಿರಣಿಗೆ ಹಿಂಭಾಗದಲ್ಲಿತ್ತು. ಹಿಂದೆ ಈ ಭಾಗವನ್ನೆಲ್ಲಾ ಕೆಂಪಾಪುರವೆಂದೇ ಕರೆಯಲಾಗುತ್ತಿತ್ತು. ಇಲ್ಲಿಗೆ ಸುಮಾರು ೨೫೦ ವರ್ಷಗಳಿಗೂ ಹಿಂದೆ ಬೆಂಗಳೂರು ಪಟ್ಟಣದ ಧನಿಕ ವರ್ತಕರಾಗಿದ್ದ ಗಂಗಶೆಟ್ಟಿ ಎಂಬ ಭಕ್ತಶ್ರೇಷ್ಠರು ಈ ಮಠವನ್ನು ನಿರ್ಮಾಣ ಮಾಡಿಸಿ ಅದಕ್ಕೆ ಉಚಿತವಾದ ದಾನಧರ್ಮಗಳನ್ನು ನೀಡಿದ್ದರು. ಇದರ ಜೊತೆಗೆ ಈಗಿನ ಮಿನರ್ವ ಬಟ್ಟೆಗಿರಣಿಗೆ ಉತ್ತರ ಭಾಗದ ಮೈದಾನವೆಲ್ಲಾ ಹಿಂದೆ ಒಂದು ಸಮೃದ್ಧವಾದ ಕೆರೆಯಾಗಿತ್ತು. ಅದನ್ನೂ ಕೂಡ ಈ ಗಂಗಶೆಟ್ಟರೇ ನಿರ್ಮಾಣ ಮಾಡಿಸಿದ್ದರಾದ್ದರಿಂದ ಇಂದಿಗೂ ಆ ಭಾಗವನ್ನು ಗಂಗಶೆಟ್ಟಿ ಕೆರೆಯ ಮೈದಾನವೆಂದೇ ಗುರುತಿಸಲಾಗುತ್ತಿದೆ.[1]

ವಿಶ್ವಸನೀಯವಾದ ಒಂದು ಐತಿಹ್ಯದ ಪ್ರಕಾರ - ಬಹಳ ಹಿಂದೆ ಬೆಂಗಳೂರು ಪಟ್ಟಣದ ಮೂರು ಪೇಟೆಗಳ[2] ಶೆಟ್ಟಿ ಯಜಮಾನರಾಗಿದ್ದ ತಿಪ್ಪಶೆಟ್ಟಿ, ಕೊಂಡಶೆಟ್ಟಿ ಹಾಗೂ ಗಂಗಶೆಟ್ಟಿ ಎಂಬ ಸಹೋದರರು ಧರ್ಮಾರ್ಥವಾಗಿ ತಮ್ಮ ಹೆಸರಿನ ಒಂದೊಂದು ಮಠಗಳ ನಿರ್ಮಾಣಕ್ಕೆ ಕಾರಣರಾಗಿದ್ದರು. ಅವುಗಳಲ್ಲಿ ಗಂಗಶೆಟ್ಟಿಯವರು ಕಟ್ಟಿಸಿದ ಕೆಂಪಾಪುರದ 'ಗಂಗಶೆಟ್ಟಿಯವರ ಮಠ'[3] ವೂ ಒಂದು ಎಂಬುದಾಗಿ ಹೇಳುವುದುಂಟು.[4] ಸದರಿ ಮಠವು ಈಗ ಉಳಿದಿಲ್ಲ.

---

### ಅಡಿಟಿಪ್ಪಣಿಗಳು

1. ಹೇಳಿಕೆ : ಗಮಕ ವಿದ್ವಾನ್ ಚನ್ನಬಸಪ್ಪ (೭೬), ನಿವೃತ್ತ ಶಿಕ್ಷಕರು. ಮಹಾಲಕ್ಷ್ಮಿ ಬಡಾವಣೆ. ಬೆಂಗಳೂರು.
2. ಹಿಂದೆ ದೊಡ್ಡಪೇಟೆ, ಮಾಮೂಲ್‌ಪೇಟೆ ಮತ್ತು ಅರಳೆಪೇಟೆ ಈ ಮೂರು ಪೇಟೆಗಳು ಮಾತ್ರ ಪ್ರಚಲಿತವಾಗಿದ್ದವು.
3. ಉಳಿದೆರಡು-ಹನುಮಂತಪುರದ 'ತಿಪ್ಪಶೆಟ್ಟಿಮಠ' ಹಾಗೂ ಅಣ್ಣೆಪುರದ 'ಕೊಂಡಶೆಟ್ಟರಮಠ'
4. ಈ ಮಾತನ್ನು ತಾವು ಬಾಲಕರಾಗಿದ್ದಾಗ ತಮ್ಮ ತಂದೆ (ಜೋಡಿದಾರ್ ನಂಜಪ್ಪ)ಯವರು ಹೇಳುತ್ತಿದ್ದುದಾಗಿ, ಬಿ.ಎನ್. ಶಿವಣ್ಣ (ವಯಸ್ಸು ೭೫, ನಿವೃತ್ತ ಶಿಕ್ಷಕರು, ಬೈಯ್ಯಂಡಹಳ್ಳಿ, ಬೆಂಗಳೂರು ಉತ್ತರ)ನವರು ಹೇಳುತ್ತಾರೆ.

## ೬. ಗವಿಮಠ, ಸಿದ್ಧರಾಮನದಿಣ್ಣೆ

ಇಂದಿನ ರಾಜಾಜಿನಗರದ ಐದನೆಯ ವಿಭಾಗದ ಪ್ರದೇಶವನ್ನು ಹಿಂದೆ ಸಿದ್ಧರಾಮನದಿಣ್ಣೆ ಎಂದೇ ಕರೆಯಲಾಗುತ್ತಿತ್ತು. ಬಹಳ ಹಿಂದಿನಿಂದಲೂ ಈ ಭಾಗದಲ್ಲಿ ಪ್ರಸಿದ್ಧ ವೀರಶೈವ ವಿರಕ್ತ ಮಠವೊಂದಿತ್ತು. ಅದನ್ನು 'ಗವಿಮಠ'ವೆಂದೇ ಕರೆಯಲಾಗುತ್ತಿತ್ತು. ಮೊದಲು ಆ ಭಾಗದಲ್ಲಿ ಗವಿಯೊಂದು ಇದ್ದುದಾಗಿ ಹೇಳುವುದುಂಟು.[1]

೧೯ನೆಯ ಶತಮಾನದ ಅಂತ್ಯದ ವೇಳೆಗೆ ಇಲ್ಲಿ ಜಡೇಸ್ವಾಮಿಗಳೆಂಬ ಮಠಾಧಿಪತಿಯೊಬ್ಬರು ಇದ್ದರು. ಇವರ ಶಿಷ್ಯರಾಗಿದ್ದ ಚಂದ್ರಶೇಖರ ಸ್ವಾಮಿಯವರು ಮಠದ ಧಾರ್ಮಿಕ ಚಟುವಟಿಕೆಗಳನ್ನು ಸಂಭ್ರಮದಿಂದ ನಡೆಸುತ್ತಿದ್ದುದಕ್ಕೆ ಕೆಲವು ಆಧಾರಗಳಿವೆ.[2] ೧೯೧೧ರಲ್ಲಿ ಈ ಮಠವನ್ನು "ಶ್ರೀಮತ್‌ಕಲ್ಯಾಣಪುರಿ ಬೆಂಗಳೂರು ಮಾಗಡಿ ರಸ್ತೆಗೆ ಸೇರಿದ ಸಿದ್ಧರಾಮನದಿಣ್ಣೆಯಲ್ಲಿರುವ ಶ್ರೀ ಜಡೇದೇವರಗವಿಮಠ"[3] ಎಂದೇ ಗುರುತಿಸಲಾಗಿದೆ.

ಗವಿಮಠದ ಜಾಗವು ಈಗ ತನ್ನ ಮೂಲಸ್ವರೂಪವನ್ನು ಸಂಪೂರ್ಣವಾಗಿ ಕಳೆದುಕೊಂಡು "ಭದ್ರಗಿರಿ ಕೇಶವದಾಸರ ದಾಸಾಶ್ರಮ"ವಾಗಿ ಪರಿವರ್ತನೆಯಾಗಿಬಿಟ್ಟಿದೆ. ಆದರೂ ಇದರ ಒಳಭಾಗದಲ್ಲಿ ಸಾಕಷ್ಟು ಹಳೆಯದೆನ್ನಬಹುದಾದ ಈಶ್ವರನ ಗುಡಿ ಹಾಗೂ ಅಳಿದುಳಿದ ಮೂರ್ನಾಲ್ಕು ಗದ್ದುಗೆಗಳೂ ಗವಿಮಠವಿದ್ದುದಕ್ಕೆ ಸಾಕ್ಷಿರೂಪವಾಗಿ ಉಳಿದಿವೆ. ಇದಕ್ಕೆ ಸಮೀಪದಲ್ಲಿನ ಮಾಗಡಿ ರಸ್ತೆಯಲ್ಲಿರುವ ಆಂಡಾಳಮ್ಮನವರ ಮಠವೂ ಕೂಡ ಪೂರ್ವದಲ್ಲಿ ಗವಿಮಠದ ಶಾಖೆಯೇ ಆಗಿದ್ದುದಾಗಿ ಹೇಳುವುದುಂಟು.[4]

---

**ಅಡಿಟಿಪ್ಪಣಿಗಳು**

1. ಹೇಳಿಕೆ : ಸಿದ್ಧಲಿಂಗಪ್ಪ (೭೮), ಮಾಗಡಿರಸ್ತೆ ನಿವಾಸಿ. ಬೆಂಗಳೂರು.
2. ಗವಿಮಠದ ಮಹಾಶಿವರಾತ್ರಿ ಮಹೋತ್ಸವಾಹ್ವಾನ ಪತ್ರಿಕೆ. ದಿ : ೯.೩.೧೯೧೧.
3. ಅದೇ.
4. ಹೇಳಿಕೆ : ಸಿದ್ಧಲಿಂಗಪ್ಪ. (ಪೂರ್ವೋಕ್ತ)

---

## ೭. ರುದ್ರಾರಾಧ್ಯರ ಚೌಕಿಮಠ ಮತ್ತು ೮. ಮೂಲೆಮಠ, ಮಾಮೂಲುಪೇಟೆ

೧೯೦೮ರ ಸರ್ಕಾರಿ ಹುಕುಂ ಒಂದರ ಪ್ರಕಾರ ಕಳೆದ ಶತಮಾನದಲ್ಲಿ ಬೆಂಗಳೂರಿನ ಸುಪ್ರಸಿದ್ಧ ಮೂರು ಪೇಟೆಗಳಲ್ಲಿ ಒಂದಾಗಿದ್ದ ಮಾಮೂಲುಪೇಟೆಯೊಳಗೆ ಮೂರು ವೀರಶೈವ ವಿರಕ್ತ ಮಠಗಳಿದ್ದವು. ಅವುಗಳಾವುವೆಂದರೆ ೧. ರುದ್ರಾರಾಧ್ಯರ ಚೌಕಿಮಠ, ೨. ಮೂಲೆಮಠ ಮತ್ತು ೩. ಜಂಗಮಮಠ.[1] ಈ 'ಜಂಗಮಮಠ'ವೇ ಇಂದಿನ ಮಾಮೂಲುಪೇಟೆಯ 'ಗಂಜಾಂಮಠ'ವೆಂದು ಪ್ರಸಿದ್ಧಿಯಾಗಿದೆ. ಆದರೆ 'ರುದ್ರಾರಾಧ್ಯರ ಚೌಕಿಮಠ' ಹಾಗೂ 'ಮೂಲೆಮಠ'ಗಳನ್ನು ಕುರಿತು ಮತ್ಯಾವ ಮಾಹಿತಿಯೂ ಲಭ್ಯವಾಗಿಲ್ಲ. ಅವುಗಳಿದ್ದ ಸ್ಥಳವನ್ನು ಗುರುತಿಸುವುದಿರಲಿ, ಆ ಮಠಗಳ ಹೆಸರುಗಳೇ ಇಂದು ಅಪರಿಚಿತವಾಗಿಬಿಟ್ಟಿವೆ.

---

**ಅಡಿಟಿಪ್ಪಣಿ**

1. ಮೈಸೂರು ಮಹಾರಾಜರ ಸರಕಾರಿ ಹುಕುಂ. ಮುಜರಾಯಿ ನಂ : ೯೦೬. ದಿ : ೨೮.೮.೧೯೦೮. ಪು. ೧.

## ೯. ಹೊಸಮಠ, ಅರಳೆಪೇಟೆ

ಬೆಂಗಳೂರಿನ ಇಂದಿನ ಅನೇಕ ಅಪರಿಚಿತ ಮಠಗಳಲ್ಲಿ ಹೊಸಮಠವೂ ಒಂದು. ಇದು ಈಗ ಸಂಪೂರ್ಣವಾಗಿ ಖಾಸಗಿ ಮನೆಯಾಗಿ ಪರಿವರ್ತನೆಯಾಗಿಬಿಟ್ಟಿದೆ. ಆದರೂ ತನ್ನ ಹಳೆಯ ಕುರುಹುಗಳ ಸಂಕೇತವೋ ಎಂಬಂತೆ ಉತ್ತರಾಭಿಮುಖವಾಗುಳ್ಳ ಇದರ ಮುಖ್ಯ ಬಾಗಿಲಿನ ಮೇಲೆ ಲಿಂಗಮುದ್ರಾಂಕಿತ ಚಿತ್ರವಿದೆ. ಮನೆಯ ಒಳಭಾಗದಲ್ಲಿ ಈಗಲೂ ಉಳಿದಿರುವ ಗದ್ದುಗೆಯೊಂದನ್ನು ನೋಡಬಹುದಾಗಿದೆ. ಮೂಲತಃ ಇದೊಂದು ವಿರಕ್ತ ಮಠವಾಗಿದ್ದುದಾಗಿ ತಿಳಿದುಬರುತ್ತದೆ.

ಹೊಸಮಠವು ಬೆಂಗಳೂರಿನಲ್ಲೇ ತೀರಾ ಪರಿಚಿತವಾದ ಅರಳೆಪೇಟೆಯ ವೀರಭದ್ರಸ್ವಾಮಿ ದೇಗುಲದ ಬಲಭಾಗಕ್ಕಿರುವ ಗುರುವಣ್ಣದೇವರಮಠದ ಚೌಕಿಯ ಪಕ್ಕದಲ್ಲಿಯೇ ಇದೆ. ಮಠಕ್ಕೆ ಸಂಬಂಧಿಸಿದ ನೇರವಾದ ದಾಖಲೆಗಳೇನೂ ಲಭ್ಯವಾಗಿಲ್ಲ. ಆದರೆ ಗುರುವಣ್ಣ ದೇವರಮಠದ ಚೌಕಿಗೆ ಸಂಬಂಧಿಸಿದ ವ್ಯವಹಾರಪತ್ರಗಳಲ್ಲಿ ಚೌಕಿಗೆ ಪೂರ್ವ ಭಾಗವೇ ಹೊಸಮಠ[1] ಎಂದು ಸ್ಪಷ್ಟಪಡಿಸಲಾಗಿದೆ.

---

**ಅಡಿಟಿಪ್ಪಣಿ**

1. ಗುರುವಣ್ಣದೇವರಮಠದ ಗುರುಮಹಾಂತಸ್ವಾಮಿಗಳ ಕಾಲದ ಕರಾರುಪತ್ರ (ದಿ : ೧೮.೧೦.೧೮೭೫), ಹಾಗೂ ನಂಜುಂಡ ಸ್ವಾಮಿಗಳ ಕಾಲದ ಕರಾರು ಪತ್ರ (ರಿ.ನಂ: ೨೦೫೦. ಸಂ - ೧೯೭. ಪು. ೩೩೦-೩೩೧. ದಿ : ೧೫.೨.೧೮೯೪) ಗಳಲ್ಲಿ ಈ 'ಹೊಸಮಠ'ದ ಹೆಸರು ಪ್ರಸ್ತಾಪವಾಗಿದೆ. ಮೊದಲು ಈ ಮಠವೂ ಕೂಡ ರೈಲ್ವೆ ನಿಲ್ದಾಣದ ಒಳಗೇ ಇದ್ದುದಾಗಿ ಕೆಲವು ಸ್ಥಳೀಯರು ಅಭಿಪ್ರಾಯಪಡುತ್ತಾರೆ.

## ೧೦. ಅಲಸೂರಿನ ಜಂಗಮಮಠ

ಹಿಂದೆ ಬೆಂಗಳೂರು ಪಟ್ಟಣದ ಸುತ್ತಲೂ ಇದ್ದ ಇತಿಹಾಸ ಪ್ರಸಿದ್ಧವಾದ ಕೋಟೆಗೆ, ಪೂರ್ವಭಾಗದಲ್ಲಿ ಅಲಸೂರು ಬಾಗಿಲು ಇತ್ತು. ಆಗ ಪಟ್ಟಣದಿಂದ ಅಲಸೂರು ಒಂದು ಪ್ರತ್ಯೇಕವಾದ ಊರೇ ಆಗಿತ್ತು. ಯಲಹಂಕ ನಾಡಪ್ರಭುವಾಗಿದ್ದ ಹಿರಿಯ ಕೆಂಪೇಗೌಡ ಒಮ್ಮೆ ವನವಿಹಾರಾರ್ಥವಾಗಿ ಬಂದಿದ್ದಾಗ ಕಾಡಿನ ಮಧ್ಯೆ ಆಯಾಸಗೊಂಡವನಾಗಿ ಮರವೊಂದರ ನೆರಳಿನಲ್ಲಿ ವಿಶ್ರಮಿಸತೊಡಗಿದನು. ಆಗ ಅವನಿಗೊಂದು ಕನಸು ಬಿದ್ದು, ತಾನು ಮಲಗಿರುವ ಜಾಗದಲ್ಲಿ ಹಿಂದೆ ಮಾಂಡವ್ಯ ಋಷಿಯು ಸೋಮೇಶ್ವರ ಲಿಂಗವನ್ನು ಪೂಜಿಸುತ್ತಿದ್ದಂತೆಯೂ, ಕಾಲಾನಂತರ ಅದು ಮರಳಿನಲ್ಲಿ ಹೂತು ಹೋಗಿರುವಂತೆಯೂ ಭಾಸವಾಯಿತು. ಅದೇ ಸ್ಥಳವನ್ನು ಶೋಧಿಸಿದಾಗ ಸೋಮೇಶ್ವರ ಲಿಂಗದ ಉದ್ಭವವಾಗಲು, ಕೆಂಪೇಗೌಡ ಅದಕ್ಕೆ ಸುಂದರವಾದ ದೇವಾಲಯವನ್ನು ನಿರ್ಮಾಣ ಮಾಡಿಸಿ, ಅಲಸೂರಿನ ನಿರ್ಮಾಣಕ್ಕೂ ಕಾರಣನಾದನೆಂದು ಹೇಳುವುದುಂಟು.[1] ಆದರೆ ಕೆಲವು ಇತಿಹಾಸಕಾರರು ಈ ದೇಗುಲವು ಕೆಂಪೇಗೌಡನಿಗೂ ಮೊದಲೇ ಚೋಳದೊರೆಗಳ ಕಾಲ (ಕ್ರಿ.ಶ. ೧೧, ೧೨, ನೆಯ ಶತಮಾನ)ದಲ್ಲಿ ನಿರ್ಮಾಣ ವಾದುದಾಗಿ ಗುರುತಿಸಿದ್ದಾರೆ.[2] ಸರಿಸುಮಾರು ಎಂಟುನೂರು ವರ್ಷಗಳಿಗೂ ಮಿಕ್ಕು ಇತಿಹಾಸವುಳ್ಳ ಅಲಸೂರಿನ ಸೋಮೇಶ್ವರ ದೇಗುಲವು, ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಪುನರುಜ್ಜೀವನಗೊಂಡು[3], ಇಂದಿನ ಬೆಂಗಳೂರಿನಲ್ಲೇ ಪ್ರಾಚೀನವಾದ ಹಾಗೂ ಬೃಹತ್ ದೇಗುಲಗಳಲ್ಲಿ ಪ್ರಮುಖವಾದ ದೇಗುಲವೆನಿಸಿದೆ.

ಇಷ್ಟೆಲ್ಲಾ ಐತಿಹಾಸಿಕ ಹಿನ್ನೆಲೆಯುಳ್ಳ ಅಲಸೂರಿನಲ್ಲಿ ಗೌಡದೊರೆಗಳ ಕಾಲದಿಂದಲೇ ಕೆಲವು ವೀರಶೈವ ಮಠಗಳು ಪೋಷಿಸಲ್ಪಟ್ಟಿದ್ದುವೆಂದು ಹೇಳುವುದುಂಟು. ಆದರೆ ಈ ಮಾತಿಗೆ ಸೂಕ್ತವಾದ ಅಧಿಕೃತ ಆಧಾರಗಳೇನೂ ದೊರೆಯುವುದಿಲ್ಲ. ಆದರೂ ಈ ಶತಮಾನದ ಪೂರ್ವಾರ್ಧದಲ್ಲಿ ಕೆಲವು ಮಠಗಳು ಅಲಸೂರಿನಲ್ಲಿ ಸುಸ್ಥಿತಿಯಲ್ಲಿದ್ದುದನ್ನು ಕಂಡವರಿದ್ದಾರೆ. ಜೊತೆಗೆ ಆ ಮಠಗಳಿದ್ದ ಜಾಗಗಳನ್ನೂ ಗುರುತಿಸಬಹುದಾಗಿದೆ. ಅವುಗಳಲ್ಲಿ ಒಂದು "ಅಲಸೂರಿನ ಜಂಗಮಮಠ". ಈ ಜಂಗಮಮಠವು ಒಂದು ವಿರಕ್ತ ಮಠವಾಗಿದ್ದು, ಇದು ಅಲಸೂರಿನ ನಡುವೆ ಹಾದುಹೋಗುವ ಜೋಗುಪಾಳ್ಯದ ರಸ್ತೆಯ ಎಂಟನೆಯ ಬೀದಿಯಲ್ಲಿದೆ. ಹಿಂದೆ ಈ ಮಠವಿರುವ ಜಾಗದಿಂದ ಅಲಸೂರಿನ ಮುಖ್ಯ ರಸ್ತೆಯಲ್ಲಿರುವ ಬಸವೇಶ್ವರನ ದೇಗುಲದವರೆಗಿನ ವಿಶಾಲವಾದ ಭೂಭಾಗವೆಲ್ಲಾ ಈ ಜಂಗಮಮಠದ ಆಸ್ತಿಯಾಗಿತ್ತು. ೧೯೧೦ರ ಸುಮಾರಿಗೆ ಚನ್ನಮಲ್ಲಪ್ಪ ಎಂಬ ಜಂಗಮರು ಇಲ್ಲಿ ವಾಸವಾಗಿದ್ದರು. ಮುಂದೆ ಇವರು ಸಂಸಾರಿಗಳಾಗಿದ್ದ ಕಾರಣ ಇವರ ಮನೆತನದವರು ಸದರಿ ಮಠವನ್ನು ಖಾಸಗಿ ಸ್ವತ್ತಾಗಿ ಪರಿವರ್ತಿಸಿ ಕೊಂಡಿದ್ದಾರೆ. ೧೯೪೦ರ ವರೆಗೂ ಈ ಮಠದ ಭಾಗವು ಕಲ್ಯಾಣಮಂಟಪವಾಗಿದ್ದುದನ್ನು ಕಂಡವರಿದ್ದಾರೆ.[4] ಪ್ರಸ್ತುತ ಮಠದ ಭಾಗದಲ್ಲಿ ಈ ಚನ್ನಮಲ್ಲಪ್ಪ (ಜಂಗಮರು) ನವರ ವಂಶಸ್ಥರಾದ-ಡೈರಿಶಿವಣ್ಣನವರ ಕುಟುಂಬದವರು ವಾಸವಾಗಿದ್ದಾರೆ.

---

### ಅಡಿಟಿಪ್ಪಣಿಗಳು

1. Mysore Gazetteer, Vol-v. Ed. by : C. Hayavadana Rao. (1930) P. 170. (ಎಸ್.ಕೆ. ನರಸಿಂಹಯ್ಯನವರು ಈ ಘಟನಾವಳಿಯನ್ನು ಜಯಪ್ಪಗೌಡನ ಹೆಸರಿಗೆ ಆರೋಪಿಸಿದ್ದಾರೆ. ಮಾಗಡಿ ಕೆಂಪೇಗೌಡ. ಪು : ೩೧, ೩೨.)
2. ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-೩. ಪ್ರ.ಸಂ : ಡಾ॥ ಸೂರ್ಯನಾಥ ಯು ಕಾಮತ್. ೧೯೮೬. ಪು. ೫೫೪.
3. ಅದೇ.
4. ಹೇಳಿಕೆ : ಅಶ್ವತ್ಥಪ್ಪ. (೭೬) ಸ್ಥಳೀಯ ನಿವಾಸಿ. ಅಲಸೂರು.

## ೧೧. ಅಲಸೂರಿನ ಸಾಲಿಮಠ

ಈಗಿನ ಅಲಸೂರಿನ ಜೋಗುಪಾಳ್ಯದ ರಸ್ತೆಯಲ್ಲಿ ಒಂದು ಅರಳಿಕಟ್ಟೆ ಇದೆ. ಹಿಂದೆ ಈ ಅರಳಿಕಟ್ಟೆಯ ಬಳಿಯಿದ್ದುದೇ ಸಾಲಿಮಠ. ಇಲ್ಲಿ ೧೯೩೫ರ ವರೆಗೂ ಒಬ್ಬ ವಿರಕ್ತಗುರುಗಳಿದ್ದು ಅವರು ನಿತ್ಯವೂ ಮಕ್ಕಳಿಗೆ ಅಕ್ಷರಾಭ್ಯಾಸ ಮಾಡಿಸುತ್ತಿದ್ದುದಾಗಿ ಹೇಳಲಾಗುತ್ತದೆ. ಕೆಲವು ಕಾಲ ಸಂಸ್ಕೃತ ಪಾಠವನ್ನೂ ಕೂಡ ಇಲ್ಲಿ ಉಚಿತವಾಗಿ ಹೇಳಿಕೊಡಲಾಗುತ್ತಿತ್ತಂತೆ. ಆಗ ಈ ಮಠವನ್ನು 'ಈರಣ್ಣನವರ ಸಾಲಿಮಠ'ವೆಂದೇ ಕರೆಯುತ್ತಿದ್ದುದಾಗಿ ತಿಳಿದುಬರುತ್ತದೆ.[1] ಈ ಮಠವೂ ಕೂಡ ಈಗ ಖಾಸಗಿ ಮನೆಯಾಗಿ ಪರಿವರ್ತನೆಯಾಗಿ ಬಿಟ್ಟಿದೆ.

---

**ಅಡಿಟಿಪ್ಪಣಿ**

1. ಹೇಳಿಕೆ : ಅಶ್ವತ್ಥಪ್ಪ. (೭೬) ಸ್ಥಳೀಯ ನಿವಾಸಿ. ಅಲಸೂರು. (ಸದರಿ ಅಶ್ವತ್ಥಪ್ಪನು ತನ್ನ ಬಾಲ್ಯಾವಸ್ಥೆಯಲ್ಲಿ ತಾನೂ ಕೂಡ ಈ ಸಾಲಿಮಠದಲ್ಲಿ ಮರಳಿನ ಮೇಲೆ ಅಕ್ಷರ ತಿದ್ದಿದ್ದಾಗಿ ಹೇಳುತ್ತಾರೆ. ಆಗ ಒಬ್ಬ ಜಂಗಮಯ್ಯಗಳು ಅಲ್ಲಿದ್ದುದನ್ನು ತಾವು ಕಂಡಿದ್ದಾಗಿ ತಿಳಿಸಿದ್ದಾರೆ.)

---

## ೧೨. ಅಲಸೂರಿನ ಹಾಲಿನಬೀದಿ ಮಠ

ಅಲಸೂರಿನ ಮುಖ್ಯರಸ್ತೆಯ ಒಂದನೇ ಅಡ್ಡರಸ್ತೆಯಲ್ಲಿ ಒಂದು ವೀರಶೈವರ ಕಲ್ಯಾಣಮಂಟಪವಿದೆ. ಈ ಕಲ್ಯಾಣಮಂಟಪದ ಬೀದಿಯನ್ನು ಹಿಂದೆ ಹಾಲಿನ ಬೀದಿ ಎಂದೇ ಕರೆಯಲಾಗುತ್ತಿತ್ತು. ಕಲ್ಯಾಣಮಂಟಪದ ಒಳಾಂಗಣದಲ್ಲಿ ಒಂದು ಶಿಲಾಫಲಕವಿದ್ದು ಅದರಲ್ಲಿ ''ವೀರಶೈವರಮಠ, ಹಾಲಿನಬೀದಿ, ಅಲಸೂರು, ಬೆಂಗಳೂರು, ೧೯೧೮'' ಎಂಬ ವಿವರಗಳಿವೆ. ೧೯೧೦ರ ವರೆಗೂ ಇದೊಂದು ವಿರಕ್ತರ ಜಂಗಮಮಠವಾಗಿದ್ದು ಬಹಳ ದಿನಗಳವರೆಗೂ ಮಠಾಧಿಪತಿಗಳೇ ಇರಲಿಲ್ಲವಾದ್ದರಿಂದ, ಸ್ಥಳೀಯ ಮುಖಂಡರೆಲ್ಲಾಸೇರಿ ಇದನ್ನು ಸಮಾಜದವರ ಉಪಯೋಗಾರ್ಥವಾಗಿ ಮಠದ ಜಾಗದಲ್ಲಿ ಒಂದು ನೂತನ ಕಲ್ಯಾಣಮಂಟಪವನ್ನು ನಿರ್ಮಿಸಿದುದಾಗಿ ತಿಳಿದುಬರುತ್ತದೆ.[1] ಇಂದಿಗೂ ಆ ಕಲ್ಯಾಣಮಂಟಪವು ಸಾರ್ವಜನಿಕರ ಉಪಯೋಗಕ್ಕಾಗಿ ಬಳಕೆಯಾಗುತ್ತಿದೆ.

---

**ಅಡಿಟಿಪ್ಪಣಿ**

1. ಹೇಳಿಕೆ : ಯ॥ ನಾಗಪ್ಪ. (೭೪) ಹಾಲಿನಬೀದಿ ಕಲ್ಯಾಣಮಂಟಪದ ವ್ಯವಸ್ಥಾಪಕರು, ಅಲಸೂರು.

## ೧೩. ಅಲಸೂರಿನ ಶಿವಾನುಭವಮಠ

ಅಲಸೂರಿನ ಲಕ್ಷ್ಮೀಪುರ ಬಡಾವಣೆಯ ೧೪ನೆಯ ಬಿ, ತಿರುವಿನಲ್ಲಿ ಒಂದು ವೀರಶೈವರಮಠವಿದೆ. ಅದೇ ಅಲಸೂರಿನ ಶಿವಾನುಭವಮಠ. ಶಂಭುಶೆಟ್ಟಪ್ಪ ಎನ್ನುವ ಭಕ್ತರು ಸಂಸಾರದಲ್ಲಿ ನಿರಸನ ಹುಟ್ಟಿ ವಿರಕ್ತಿಯನ್ನು ಹೊಂದಿ ಈ ಮಠವನ್ನು ಸ್ಥಾಪಿಸಿದ್ದಾಗಿ ತಿಳಿದುಬರುತ್ತದೆ. ಈ ಶತಮಾನದ ಪೂರ್ವಾರ್ಧದಲ್ಲಿ ಪ್ರಾರಂಭವಾಗಿರುವ ಸದರಿಮಠಕ್ಕೆ ಈಗ ಸ್ವಾಮಿಗಳಾರೂ ಇರುವುದಿಲ್ಲ. ಸದ್ಯಕ್ಕೆ ಶಂಭುಶೆಟ್ಟಪ್ಪನವರ ವಂಶಸ್ಥರೇ ಒಂದು ಧರ್ಮದರ್ಶಿ ಮಂಡಳಿಯನ್ನು ರಚಿಸಿಕೊಂಡು ಮಠದ ಧಾರ್ಮಿಕ ಚಟುವಟಿಕೆಗಳನ್ನು ಮುನ್ನಡೆಸಿಕೊಂಡು ಬರುತ್ತಿದ್ದಾರೆ.

**ಅಡಿಟಿಪ್ಪಣಿ**

1. ಹೇಳಿಕೆ : ಶ್ರೀಮತಿ ಗಂಗಮ್ಮ (೬೫) ಶಿವಾನುಭವಮಠದ ವಿಚಾರಣಕರ್ತೆ. ಅಲಸೂರು.

## ೧೪. ಜಂಗಮಮಠ, ದೊಡ್ಡಕುಂಟೆ ಗ್ರಾಮ

ಅಲಸೂರು ಕೆರೆಯ ಪಶ್ಚಿಮ ಭಾಗದಿಂದ ಹಾದು ಹೋಗುವ ಜೋಡಿರಸ್ತೆಯಲ್ಲಿ ದೊಡ್ಡಕುಂಟೆ ಗ್ರಾಮದ ಎಲ್ಲೆಕಟ್ಟು ಸಿಗುತ್ತದೆ. ಈ ಗ್ರಾಮವನ್ನು ಹಿಂದೆ ದಂಡಪ್ಪನದೊಡ್ಡಿ ಎಂದು ಕರೆಯಲಾಗುತ್ತಿತ್ತು.[1] ಇಲ್ಲಿನ ಪಿ.ಎಸ್.ಕೆ. ನಾಯ್ಡು ರಸ್ತೆಯ ಪಕ್ಕದಲ್ಲಿರುವ ವಿಶಾಲ ಮಿಲಿಟರಿ ಮೈದಾನದ ಅಂಚಿನಲ್ಲಿ ಒಂದು ಗದ್ದುಗೆ ಇದೆ. ವಿಚಾರ ಮಾಡಿದಾಗ ಈ ಪ್ರದೇಶದಲ್ಲಿ ಬಹಳ ಹಿಂದೆ ಪುರಾತನವಾದ ಒಂದು ವೀರಶೈವರ ಜಂಗಮ ಮಠವಿದ್ದುದಾಗಿ ತಿಳಿದುಬರುತ್ತದೆ. ದಾಖಲೆಗಳಲ್ಲಿ ಈ ಮಠಕ್ಕೆ ೧೮೭೦ರ ಸರ್ವೆಸೆಟಲ್ ಮೆಂಟ್ ಪ್ರಕಾರ ಇನ್ನೂ ೪ ಎಕರೆ ೧೦ ಗುಂಟೆ ಜಮೀನಿನ ಜೊತೆಗೆ, ೧೦೦×೭೪ ಚದರ ಗಜ ವಿಸ್ತೀರ್ಣದ ಮಠದ ನಿವೇಶನವಿದ್ದುದಾಗಿಯೂ ತಿಳಿದು ಬರುತ್ತದೆ.[2] ಇದಕ್ಕೂ ಮುನ್ನ ಮಠದ ಬಹುತೇಕ ಆಸ್ತಿಗಳು ದಂಡು ಪ್ರದೇಶದ ವಿಸ್ತರಣೆಗಾಗಿ ಸೇರಿಹೋದುವೆಂದು ಹೇಳುವುದುಂಟು.[3] ೧೯೨೦ರ ವರೆಗೂ ಮಠದ ಆಸ್ತಿ-ಪಾಸ್ತಿಗಳ ವಿಚಾರವಾಗಿ ವ್ಯವಹಾರಗಳು ನಡೆದಿರುವುದಕ್ಕೆ ಆಧಾರಗಳಿವೆ. ಸದ್ಯಕ್ಕೆ ಈ ಮಠವು ಹೇಳ ಹೆಸರಿಲ್ಲದಂತಾಗಿದೆ.

**ಅಡಿಟಿಪ್ಪಣಿಗಳು**

1. ಬೆಂಗಳೂರು ತಾಲ್ಲೂಕು ಕಛೇರಿಗೆ ದೊಡ್ಡಕುಂಟೆ ಗ್ರಾಮದ ಪಟೇಲ್ ದೊಡ್ಡ ಹನುಮಂತಪ್ಪನು ಬರೆದುಕೊಂಡ ಅಹವಾಲ್ ಅರ್ಜಿ. ದಿನಾಂಕ : ೫.೫.೧೯೨೦. ಪು. ೧.
2. ಅದೇ. ಪು. ೧, ೨.
3. ಹೇಳಿಕೆ : ಆರ್. ಅರುಣಾಚಲಮ್ (೬೭) ನಿವೃತ್ತ ಸೈನಿಕ. ಸ್ಥಳೀಯ ನಿವಾಸಿ.

## ೧೫. ದಂಡಿನ ಮಹಾಲಿಂಗೇಶ್ವರಸ್ವಾಮಿ ಗದ್ದುಗೆಮಠ, ನಾರಾಯಣ ಪಿಳ್ಳೈ ಬೀದಿ

ಗೌಡ ದೊರೆಗಳ ಕಾಲದಲ್ಲಿ ಅಲಸೂರನ್ನು ಬಿಟ್ಟರೆ ಪಕ್ಕದ ದಂಡು ಪ್ರದೇಶಕ್ಕೆಅಂತಹ ವಿಶೇಷ ಆದ್ಯತೆಗಳೇನೂ ಕಂಡುಬರುವುದಿಲ್ಲ. ಹೈದರ್ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲೂ ಈ ಭಾಗವು ಬೆಂಗಳೂರು ಪಟ್ಟಣದ ಸಮೀಪದ ಹಳ್ಳಿಗಾಡು ಪ್ರದೇಶವೇ ಆಗಿತ್ತು. ಟಿಪ್ಪುವಿನ ಮರಣಾ (೧೭೯೯)ನಂತರ ಆಂಗ್ಲರ ಸೇನಾಕೋಟೆಯ ದೆಸೆಯಿಂದಾಗಿ ಈ ಪ್ರದೇಶ ವಿನೂತನ ಬದಲಾವಣೆಗಳಿಗೆ ಮೈಯೊಡ್ಡಬೇಕಾಯಿತು. ಮೈಸೂರು ಸಂಸ್ಥಾನವು ಆಂಗ್ಲರ ಆಧಿಪತ್ಯಕ್ಕೆ ಒಳಪಟ್ಟ ಮೇಲೆ ಶ್ರೀರಂಗಪಟ್ಟಣದಲ್ಲಿ ನೆಲೆನಿಂತಿದ್ದ ಅವರ ಸೇನಾ ತುಕಡಿಗಳಿಗೆ ಅದು ಪ್ರಶಸ್ತವಾದ ಸ್ಥಳವಾಗಿರಲಿಲ್ಲ. ದಿವಾನ್ ಪೂರ್ಣಯ್ಯನವರ ಸಲಹೆಯ ಮೇರೆಗೆ ೧೮೦೯ರ ವೇಳೆಗೆ ಬೆಂಗಳೂರಿನ ಈಗಿನ ದಂಡು ಪ್ರದೇಶವನ್ನು ಖಾಯಂ ನೆಲೆಯನ್ನಾಗಿ ಆರಿಸಿಕೊಂಡ ಪ್ರಯುಕ್ತ ಸೇನಾತುಕಡಿಗಳೆಲ್ಲಾ ಇಲ್ಲಿಗೆ ಬಂದು ನೆಲೆನಿಂತವು.[1] ಅಂದಿನಿಂದಲೂ ಈ ಭಾಗವನ್ನು ದಂಡು ಪ್ರದೇಶವೆಂದು ಕರೆಯುವುದು ರೂಢಿಗತವಾಗಿದೆ. ಅದಕ್ಕೂ ಮುಂಚಿನಿಂದಲೇ ಈ ಭಾಗದಲ್ಲಿ ಹಲವಾರು ವೀರಶೈವ ಮಠಗಳಿದ್ದುದಕ್ಕೆ ಕೆಲವು ಸೂಚನೆಗಳಿವೆ.[2] ಸದ್ಯಕ್ಕಂತೂ ಈ ಭಾಗದಲ್ಲಿ ಯಾವ ಮಠವೂ ಉಳಿದಿಲ್ಲವಾದರೂ, ಕೆಲವು ಸಾಕ್ಷ್ಯಾಧಾರಗಳ ನೆರವಿನಿಂದ ಹಿಂದಿದ್ದ ಮಠಗಳ ಸಂಕ್ಷಿಪ್ತ ಪರಿಚಯುವನ್ನು ಮಾಡಿಕೊಳ್ಳಲು ಅವಕಾಶವಿದೆ. ಅವುಗಳಲ್ಲೊಂದು ''ಮಹಾಲಿಂಗೇಶ್ವರಸ್ವಾಮಿ ಗದ್ದುಗೆಮಠ''.

ಈ ಶತಮಾನದ ಆರಂಭದ ದಿನಗಳಲ್ಲಿ ದಂಡು ಪ್ರದೇಶದ ನಾರಾಯಣ ಪಿಳ್ಳೈ ಬೀದಿಯಲ್ಲಿ ಒಂದು ವೀರಶೈವರ ವಿರಕ್ತಮಠವಿತ್ತು. ಈ ಮಠವನ್ನು 'ಮಹಾಲಿಂಗೇಶ್ವರಸ್ವಾಮಿ ಗದ್ದುಗೆಮಠ' ಅಥವಾ 'ದಂಡು ಮಹಾಲಿಂಗೇಶ್ವರಮಠ'ವೆಂದೂ ಕರೆಯಲಾಗುತ್ತಿತ್ತು. ೧೯೧೭ರ ಮೈಸೂರ್ ಸ್ಟಾರ್ ಪತ್ರಿಕಾ ವರದಿಯ ಪ್ರಕಾರ ''ಬೆಂಗಳೂರಿನ ದಂಡಿನ ನಾರಾಯಣಪಿಳ್ಳೈ ಬೀದಿಯಲ್ಲಿರುವ ಶ್ರೀ ಮಹಾಲಿಂಗೇಶ್ವರಸ್ವಾಮಿಗಳ ಗದ್ದುಗೆಮಠದ ಮಠಾಧಿಪತಿಗಳಾದ 'ಶ್ರೀ ಮಹಾಲಿಂಗ ಶಿವಯೋಗಿ'ಗಳು ಕಳೆದ ಫೆಬ್ರವರಿ ೨೪ ರಂದು ಶಿವೈಕ್ಯರಾದರು. ಇವರಿಗೆ ಅವಸಾನ ಕಾಲದಲ್ಲಿ ೧೦೮ ವರ್ಷ ವಯಸ್ಸಾಗಿದ್ದಿತು ಮತ್ತು ಇವರು ಏಕಭುಕ್ತವನ್ನು ಮಾಡಿಕೊಂಡಿದ್ದರಲ್ಲದೆ ಪೂರ್ಣ ಶಿವಾನುಭವಿಗಳಾಗಿದ್ದರು. ಇವರು ಇಷ್ಟು ದೀರ್ಘಕಾಲ ಜೀವಿಸಿರಲು ಇವರ ಜಿತೇಂದ್ರಿಯತ್ವವೂ, ತಪಸ್ಸಿನ ವೈಭವವೂ ಕಾರಣಗಳಾಗಿದ್ದವು[3]''- ಎಂದಿದೆ.

ಸ್ಥಳೀಯ ಮಾಹಿತಿಗಳ ಪ್ರಕಾರ ಈ ಮಠವನ್ನು 'ದಂಡಿನಮಠ', ''ಮಾಳಿಗೆಪ್ಪನಮಠ''ವೆಂದೂ ಕರೆಯಲಾಗುತ್ತಿತ್ತು. ಕೋರ್ಟ್ ದಾಖಲೆಯೊಂದರಲ್ಲಿ ೪೫ ಗಜ ಅಗಲ, ೮೦ ಗಜ ಉದ್ದದ ವಿಸ್ತೀರ್ಣದಲ್ಲಿ ಈ ಮಠವಿತ್ತು.[4] ಪ್ರಸ್ತುತ ಮಠದ ಭಾಗ ಈಗ ಖಾಸಗಿ ಮನೆಗಳಾಗಿ ಮಾರ್ಪಾಟಾಗಿಬಿಟ್ಟಿದೆ. ಮಠದ ಉಳಿದ ವಿದ್ಯಮಾನಗಳ ಬಗೆಗೆ ಹೆಚ್ಚಿನ ಮಾಹಿತಿಗಳು ಲಭ್ಯವಾಗಿಲ್ಲ.

---

**ಅಡಿಟಿಪ್ಪಣಿಗಳು**

1. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೨೭೪.
2. Revenue Commissioner Court Judgement Order. File No : 28-55/1911-12. Bangalore. dt :15.12.1911. P. 94-96.
3. ಮೈಸೂರ್ ಸ್ಟಾರ್. ಸಂ-೧೭. ಸಂ-೩೦. ಪು. ೩. ದಿನಾಂಕ : ೨೯.೪.೧೯೧೭.
4. Revenue Commissioner Court Judgement Order. File No : 28-55/1911-12. Bangalore. dt:15.12.1911. P. 88.

## ೧೬. ದಂಡಿನ ನಂಜುಂಡಸ್ವಾಮಿ ಗದ್ದುಗೆಮಠ, ನಾಲಾರಸ್ತೆ

ಶಿವಾಜಿನಗರದ ಬ್ರಾಡ್‌ವೇ ಮುಖ್ಯರಸ್ತೆಯಲ್ಲಿರುವ ನಾಲಾ ಪ್ರದೇಶದಲ್ಲಿ ಒಂದು ವೀರಶೈವ ವಿರಕ್ತ ಮಠವಿದೆ. ಮಠದ ಮುಂಭಾಗದ ಶಿಲಾಫಲಕದಲ್ಲಿ "ಶ್ರೀನಂಜುಂಡ ಸ್ವಾಮಿ ಗದ್ದುಗೆಮಠ" ಎಂದು ಬರೆದಿದೆ. ಇದರ ಮೇಲ್ಗಡೆ ಬಸವಮೂರ್ತಿ ಇದೆ. ಒಳಭಾಗದ ಕಿರುಕೋಣೆಯಲ್ಲಿ ಪೂರ್ವಾಭಿಮುಖವುಳ್ಳ ಒಂದೂವರೆ ಅಡಿ ಎತ್ತರವಾದ ಶಿವಲಿಂಗ ಮೂರ್ತಿಯುಳ್ಳ ಗದ್ದುಗೆ ಇದೆ. ಈ ಮಠದಲ್ಲಿ ಈಗ ತಮಿಳು ಭಾಷಿಕರ ಹಮಾಲಿ ಸಂಸಾರಗಳಿದ್ದು ಮಠದ ಪರಿಸರ ಸಂಪೂರ್ಣವಾಗಿ ನಶಿಸಿಹೋಗಿದೆ.[1]

---

**ಅಡಿಟಿಪ್ಪಣಿ**

1. ಇದೊಂದು ವೀರಶೈವರ ಮಠವೆಂದು ಪರಿಚಯಿಸಿ, ಸ್ಥಳಪರಿಶೀಲನೆಗೆ ಅವಕಾಶ ಮಾಡಿಕೊಟ್ಟವರು ಅಂಕಲೇಶ್ವರ ಮಠದ ಚನ್ನಬಸವಾರಾಧ್ಯ (೪೦)ರು.

## ೪.೩. ಇನ್ನುಳಿದ ಮಠಗಳು

ಲಭ್ಯವಿರುವ ಕೆಲವು ಅಧಿಕೃತ ಸಂಕ್ಷಿಪ್ತವಾದ ಮಾಹಿತಿಗಳ ಪ್ರಕಾರ ಬೆಂಗಳೂರಿನಲ್ಲಿ ಇನ್ನೂ ಅನೇಕ ವೀರಶೈವ ಮಠಗಳಿದ್ದುದಾಗಿ ತಿಳಿದು ಬರುತ್ತದೆ. ಇವು ಗುರುವರ್ಗದ ಮಠಗಳೋ ಅಥವಾ ವಿರಕ್ತ ವರ್ಗದ ಮಠಗಳೋ ಎಂದು ಗುರುತಿಸಲು ಸಾಧ್ಯವಾಗಿಲ್ಲ. ಈ ಹಿನ್ನೆಲೆಯಲ್ಲಿ ೧೯ನೆಯ ಶತಮಾನದ ಅಂತ್ಯದ ವೇಳೆಗೆ ಈ ಪಟ್ಟಣದಲ್ಲಿ ಇದ್ದುವೆಂದು ಖಚಿತವಾಗುವ ಕೆಲವು ಮಠಗಳನ್ನು ಇನ್ನುಳಿದ ಮಠಗಳ ಪಟ್ಟಿ ಎಂಬ ಶೀರ್ಷಿಕೆಯಲ್ಲಿ ಇಲ್ಲಿ ಕೊಡಲಾಗಿದೆ. ಈ ಕೆಳಕಂಡ ಮಠಗಳ ಬಗೆಗೆ ವಿಶೇಷವಾದ ಮಾಹಿತಿಗಳೇನೂ ದೊರಕಿಲ್ಲದ ಕಾರಣ ಅವುಗಳ ಹೆಸರು ಮತ್ತು ಸ್ಥಳಗಳನ್ನು ಮಾತ್ರ ಇಲ್ಲಿ ಸೂಚಿಸಲಾಗಿರುತ್ತದೆ. ಅವುಗಳೆಂದರೆ-

೧. ಮಿಂಚನಹಳ್ಳಿಮಠ. ಚಿಕ್ಕಪೇಟೆ.[1]
೨. ಫಲಹಾರಸ್ವಾಮಿಮಠ. ಚಿಕ್ಕಪೇಟೆ.[2]
೩. ಕೋಟಿಲಿಂಗದಮಠ. ಚಿಕ್ಕಪೇಟೆ.[3]
೪. ಕೊಂಡ್ಲುಮಠ. ಚಿಕ್ಕಪೇಟೆ.[4]
೫. ಚೌಕಿಮಠ.ಚಿಕ್ಕಪೇಟೆ. ಆರ್ಮುಗಂ ಮೊದಲಿಯಾರ್‌ಗಲ್ಲಿ.[5]
೬. ಫಾಲಾಕ್ಷಸ್ವಾಮಿಮಠ. ಚಿಕ್ಕಪೇಟೆ.[6]
೭. ಗದ್ದುಗೆಮಠ. ಅಂಚೆಪೇಟೆ[7]. ಸ್ಟೇಟ್ ಬ್ಯಾಂಕ್ ಹಿಂಭಾಗ. (ದೊಡ್ಡಪೇಟೆ)
೮. ಚಿಲುಮೆ ಗದ್ದುಗೆಮಠ. ಕೆ.ಕೆ.ಲೇನ್, ಅರಳೆಪೇಟೆ.[8]
೯. ಚಿಣಿಮಿಣಿದೇವರಮಠ. ಅರಳೆಪೇಟೆ[9] (ಮಸ್ತಾನ್ ಸಾಬರ ದರ್ಗದ ಬಲಭಾಗ).
೧೦. ಲಿಂಗದಗುಡಿಮಠ. ದೊಡ್ಡಪೇಟೆ. ಚೌಡೇಶ್ವರಿ ಬೀದಿ.[10]
೧೧. ದೇವೀರಮ್ಮನಮಠ. ಗಾಣಿಗರಪೇಟೆ.[11]
೧೨. ದಿಗಂಬರಶೆಟ್ಟುಮಠ. ರೈಲ್ವೆಸ್ಟೇಷನ್ ಒಳ ಭಾಗದಲ್ಲಿ.[12]
೧೩. ಬಳೆಮಠ. ಅರಳೆಪೇಟೆ.[13]
೧೪. ಮಲ್ಲಿಕಾರ್ಜುನಸ್ವಾಮಿಮಠ. ಸಂಪಿಗೆ ಹಳ್ಳಿ.[14]
೧೫. ಜಂಗಮಮಠ. ಗಂಗಮ್ಮನಗುಡಿ. ಪುರಭವನದ ಹಿಂಭಾಗ.[15]
೧೬. ಸಹಜಾನಂದಸ್ವಾಮಿಮಠ. ಕಳಾಸಿಪಾಳ್ಯ.[16]
೧೭. ನಂಜುಂಡಸ್ವಾಮಿ ಗದ್ದುಗೆಮಠ. ಗವಿಪುರ.[17]
೧೮. ಕಂತೆಭಿಕ್ಷದಸ್ವಾಮಿಮಠ. ಆವಲಹಳ್ಳಿ.[18]
೧೯. ಚಿದಾನಂದಸ್ವಾಮಿಮಠ. ಮಲ್ಲೇಶ್ವರ.[19]
೨೦. ಜಂಗಮಮಠ. ಶೇಷಾದ್ರಿಪುರ ಪೋಲೀಸ್ ಠಾಣೆ ಹಿಂಭಾಗ.[20]
೨೧. ಅರಳೆಗುಡಿಮಠ. ಅರಳೆಪೇಟೆ.[21]
೨೨. ಅಮೃತಮಲ್ಲೇಶ್ವರನಮಠ. ಅರಳೆಪೇಟೆ.[22]

ಇವುಗಳ ಜೊತೆಗೆ ಅವಧೂತ ಪರಂಪರೆಗೆ ಸೇರಿದ ಹುಬ್ಬಳ್ಳಿಯ ಸಿದ್ಧಾರೂಢರು ಸ್ಥಾಪಿಸಿರುವ ಕೆಲವು ಮಠಗಳೂ[23] ಹಾಗೂ ವೈಷ್ಣವ, ಜೈನ, ಬೌದ್ಧ ಇವೇ ಮೊದಲಾದ ಮಠಗಳಿಗೆ ಸೇರಿದ ಹಲವಾರು ವಿಭಿನ್ನ ಜಾತಿವಾರು ಮಠಗಳೂ ಕೂಡ ಬೆಂಗಳೂರಿನಲ್ಲಿ ಇವೆ. ಅವುಗಳನ್ನು ಇಲ್ಲಿನ ವೀರಶೈವ ಮಠಗಳ ಅಧ್ಯಯನದ ಪಟ್ಟಿಯ ಜೊತೆಗೆ ಪರಿಗಣಿಸಿರುವುದಿಲ್ಲ.

ಈ ಮಧ್ಯೆ ಎಷ್ಟೋ ಪ್ರಾಚೀನ ಕಾಲದ ಮಠಗಳು[24] ಸ್ಥಿತ್ಯಂತರವಾಗಿದ್ದಿರಬಹುದು. ಮೊದಲನೆಯ ಹಾಗೂ ಎರಡನೆಯ ಕೆಂಪೇಗೌಡರುಗಳ ಕಾಲ (ಕ್ರಿ.ಶ. ೧೫೧೩-೧೬೩೮)ದಲ್ಲಿನಿರ್ಮಾಣವಾಗಿ ಇದ್ದಿರಬಹುದಾದ ಬಹುತೇಕ ಮಠಗಳು, ಮುಂದೆ ಹೈದರ್ ಹಾಗೂ ಟಿಪ್ಪು ಸುಲ್ತಾನರುಗಳ ಕಾಲದ (ಕ್ರಿ.ಶ. ೧೭೬೧-೧೭೯೯) ವೇಳೆಗೆ ಅವಸಾನವಾಗಿರುವ ಸಾಧ್ಯತೆಯುಂಟು. ಈ ಹಿನ್ನೆಲೆಯಲ್ಲಿ ಪೂರ್ವದ ಎಷ್ಟೋ ವೀರಶೈವ ಮಠಗಳು ಇತಿಹಾಸದ ಕಾಲಗರ್ಭದಲ್ಲಿ ಮುಳುಗಿ ಹೋಗಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ನಮ್ಮ ಮಹಾನಗರಿಯ ಎಷ್ಟೋ ಮಠಗಳಲ್ಲಿ ಹಾಗೂ ಮನೆಗಳಲ್ಲಿ ಇನ್ನೂ ಉಳಿದಿರಬಹುದಾದ ತಾಮ್ರಪಟಗಳು ಹಾಗೂ ಹಳೆಯ ಕಡತಗಳನ್ನು ಪರಿಶೋಧಿಸುವ ಅವಕಾಶ ಒದಗಿದ್ದೇ ಆದರೆ[25], ಇಲ್ಲಿನ ಮಠಗಳ ಬಗೆಗೆ ಇನ್ನೂ ಹೆಚ್ಚಿನ ಬೆಳಕು ಚೆಲ್ಲುವ ಅವಕಾಶವಂತೂ ಇದ್ದೇ ಇದೆ. ಒಟ್ಟಾರೆ ೧೯ನೆಯ ಶತಮಾನದ ಉತ್ತರಾರ್ಧ ಹಾಗೂ ೨೦ನೆಯ ಶತಮಾನದ ಪೂರ್ವಾರ್ಧದ ಸಂದರ್ಭದಲ್ಲಿ ಬೆಂಗಳೂರು ಪಟ್ಟಣದಲ್ಲಿ ಒಟ್ಟು ಎಪ್ಪತ್ತನಾಲ್ಕು ವೀರಶೈವ ಮಠಗಳಿದ್ದುದಕ್ಕೆ ತಕ್ಕ ಪುರಾವೆಗಳು ಸಿಕ್ಕಂತಾಗಿವೆ. ಮುಂದೆ ಅವುಗಳ ಅಕಾರಾದಿ ಪಟ್ಟಿಯನ್ನು ಕೊಡಲಾಗಿದೆ.

ಇಂದಿನ ಬೆಂಗಳೂರು ಮಹಾನಗರದಲ್ಲಿ ಈಗಲೂ ಇರುವ ಹಾಗೂ ಹಿಂದೆ ಇದ್ದವೆಂದು ಹೇಳಲಾಗುವ ಸಮಗ್ರ ವೀರಶೈವ ಮಠಗಳ ಪಟ್ಟಿ-

೧. ಅಂಕಲೇಶ್ವರಮಠ, ಕೇವಲ್ರಿ ರಸ್ತೆ, ದಂಡುಪ್ರದೇಶ.

೨. ಅಮೃತ ಮಲ್ಲೇಶ್ವರನ ಗುಡಿಮಠ, ಅರಳೆಪೇಟೆ.
೩. ಅರಳೆಗುಡಿಮಠ, ಅರಳೆಪೇಟೆ.
೪. ಕಂತೆಭಿಕ್ಷದಮಠ, ಆವಲಹಳ್ಳಿ.
೫. ಕಂಬಳಿಸ್ವಾಮಿಮಠ, ಹೊಸಹಳ್ಳಿ.
೬. ಕಂಬಿನಂಜಯ್ಯನಮಠ, ಗುಡುಮಯ್ಯನಪೇಟೆ.
೭. ಕರಿಸಿದ್ಧೇಶ್ವರಮಠ, ದೊಡ್ಡಪೇಟೆ.
೮. ಕಲ್ಲುಮಠ, ಬಳೆಪೇಟೆ.
೯. ಕುದುರೆಗದ್ದುಗೆಮಠ, ಹಾದಿಬಸವಣ್ಣನ ಬೀದಿ, ಬಸವನಪುರ.
೧೦. ಕೆಳಗಿನಮಠ, ಸುಂಕೇನಹಳ್ಳಿ. (ನಿಜಗುಣಜಂಗಮ ಮಠ)
೧೧. ಕೊಂಡ್ಲುಮಠ, ಚಿಕ್ಕಪೇಟೆ.
೧೨. ಕೊಳದಮಠ, ಅಣ್ಣೆಪುರ.
೧೩. ಕೋಟಲಿಂಗದಮಠ, ಚಿಕ್ಕಪೇಟೆ.
೧೪. ಗಂಗಶೆಟ್ಟಿಮಠ, ಕೆಂಪಾಪುರ.
೧೫. ಗಂಜಾಂಮಠ, ಮಾಮೂಲ್‌ಪೇಟೆ.
೧೬. ಗದ್ದುಗೆಮಠ, ಅಂಚೆಪೇಟೆ.
೧೭. ಗದ್ದುಗೆಮಠ, ಯಶವಂತಪುರ.
೧೮. ಗದ್ದುಗೆಮಠ, ಜೇಡಹಳ್ಳಿ.
೧೯. ಗದ್ದುಗೆಮಠ, ಜಕ್ಕರಾಯನಕೆರೆ ದಂಡೆ.
೨೦. ಗವಿಪುರದಮಠ, ಗವಿಪುರದ ಗುಟ್ಟಹಳ್ಳಿ.
೨೧. ಗವಿಮಠ, ಸಿದ್ಧರಾಮನದಿಣ್ಣೆ.
೨೨. ಗುರುವಣ್ಣದೇವರ ಚೌಕಿಮಠ, ಅರಳೆಪೇಟೆ.
೨೩. ಗುರುವಣ್ಣದೇವರಮಠ, ಹನುಮಂತಪುರ ಸಮ್ಮತು.
೨೪. ಗೊಟ್ಟೂರಯ್ಯನಮಠ, ಹನುಮಂತಪುರ.
೨೫. ಚಿಣಮಿಣಿದೇವರಮಠ, ಅರಳೆಪೇಟೆ.
೨೬. ಚಿದಾನಂದಸ್ವಾಮಿಮಠ, ಜಕ್ಕಸಂದ್ರ, ಮಲ್ಲೇಶ್ವರ.
೨೭. ಚಿಲುಮೆಗದ್ದುಗೆಮಠ, ಅರಳೆಪೇಟೆ.
೨೮. ಚೌಕಿಮಠ, ಚಿಕ್ಕಪೇಟೆ.
೨೯. ಜಂಗಮಮಠ, ಗಂಗಮ್ಮನಗುಡಿ. (ಪುರಭವನದ ಹಿಂಭಾಗ)
೩೦. ಜಂಗಮಮಠ, ಶೇಷಾದ್ರಿಪುರ.
೩೧. ಜಂಗಮಮಠ, ಶಿವನಹಳ್ಳಿ.
೩೨. ಜಂಗಮಮಠ, ಅಲಸೂರು.
೩೩. ಜಂಗಮಮಠ, ದೊಡ್ಡಕುಂಟೆ ಗ್ರಾಮ, ದಂಡುಪ್ರದೇಶ.
೩೪. ತಿಪ್ಪಶೆಟ್ಟಿಮಠ, ಹನುಮಂತಪುರ.
೩೫. ತೋಟದದೇವರಮಠ, ಅರಳೆಪೇಟೆ.
೩೬. ದಿಗಂಬರಶೆಟ್ಟಿಮಠ, ರೈಲುನಿಲ್ದಾಣದ ಒಳಗೆ.
೩೭. ದೇವೀರಮ್ಮನಮಠ, ಗಾಣಿಗರಪೇಟೆ.
೩೮. ದೇಶದಮಠ, ಅರಳೆಪೇಟೆ.
೩೯. ದೊಡ್ಡಮಠ, ಅಕ್ಕಿಪೇಟೆ.
೪೦. ಧರ್ಮಶಾಲಾಮಠ, ಚಿಕ್ಕಪೇಟೆ.
೪೧. ನಂಜಯ್ಯನ ಚೌಕಿಮಠ, ಅರಳೆಪೇಟೆ.
೪೨. ನಂಜುಂಡಸ್ವಾಮಿ ಗದ್ದುಗೆಮಠ, ಗವಿಪುರ.
೪೩. ನಂಜುಂಡಸ್ವಾಮಿಗದ್ದುಗೆಮಠ, ನಾಲಾರಸ್ತೆ, ದಂಡುಪ್ರದೇಶ.
೪೪. ನಂಬೆಣ್ಣನಮಠ, ಅರಳೆಪೇಟೆ.
೪೫. ನರಗುಂದದೇವರಮಠ, ರೈಲುನಿಲ್ದಾಣದ ಒಳಗೆ.
೪೬. ನಿರಂಜನದೇವರಮಠ, ಹನುಮಂತಪುರ.
೪೭. ನಿರ್ವಾಣಮ್ಮನಮಠ, ಮನೆವಾರ್ತೆಪೇಟೆ
೪೮. ಫಲಹಾರಸ್ವಾಮಿಮಠ, ಚಿಕ್ಕಪೇಟೆ.
೪೯. ಫಾಲಾಕ್ಷಸ್ವಾಮಿಮಠ, ಚಿಕ್ಕಪೇಟೆ.
೫೦. ಬಳೆಮಠ, ಬಳೇಪೇಟೆ.
೫೧. ಬುರುಗಲುದೇವರಮಠ, ದೊಡ್ಡಬೈಲುಖಾನೆ.
೫೨. ಬೂದಿಸ್ವಾಮಿಮಠ, ಚಾಮರಾಜಪೇಟೆ.
೫೩. ಬೇಲಿಮಠ, ಅಗ್ರಹಾರದ ಬಾಗಿಲು.
೫೪. ಮರಿಸ್ವಾಮಿಮಠ, ಕಳಾಸಿಪಾಳ್ಯ.
೫೫. ಮರಿಸ್ವಾಮಿಮಠ, ಅರಳೆಪೇಟೆ.
೫೬. ಮಲ್ಲಿಕಾರ್ಜುನಸ್ವಾಮಿಗದ್ದುಗೆಮಠ, ಸಂಪಿಗೆಹಳ್ಳಿ.
೫೭. ಮಹಾಂತರಮಠ, ಚಿಕ್ಕಪೇಟೆ.
೫೮. ಮಹಾಲಿಂಗೇಶ್ವರಸ್ವಾಮಿ ಗದ್ದುಗೆಮಠ, ದಂಡುಪ್ರದೇಶ.
೫೯. ಮಾಳಿಗೆಮಠ, ದೊಡ್ಡಪೇಟೆ.
೬೦. ಮಿಂಚನಹಳ್ಳಿಮಠ, ಚಿಕ್ಕಪೇಟೆ.
೬೧. ಮುತ್ತಿನಕಂತೆಮಠ, ಕೊಟ್ಟಿಗೆಗಲ್ಲಿ.
೬೨. ಮುದ್ದಪ್ಪಸ್ವಾಮಿಮಠ, ಗೌಡನಪೇಟೆ.
೬೩. ಮೂಲೆಮಠ, ಮಾಮೂಲುಪೇಟೆ.
೬೪. ಮೇಲಿನಮಠ, ಸುಂಕೇನಹಳ್ಳಿ.
೬೫. ರುದ್ರಾರಾಧ್ಯರ ಚೌಕಿಮಠ, ಮಾಮೂಲುಪೇಟೆ.
೬೬. ಲಿಂಗದಗುಡಿಮಠ, ದೊಡ್ಡಪೇಟೆ, ಚೌಡೇಶ್ವರಿಗುಡಿ ಬೀದಿ.
೬೭. ವಿಭೂತಿಪುರದಮಠ, ಎಚ್.ಎ.ಎಲ್. ಸಮೀಪ.
೬೮. ಶಂಕರದೇವರಮಠ, ಮನೆವಾರ್ತೆಪೇಟೆ.
೬೯. ಶಿವಾನುಭವಮಠ, ಅಲಸೂರು.
೭೦. ಸಪ್ಪಣ್ಣಸ್ವಾಮಿಮಠ, ಬಳೆಬಾಗಿಲು.
೭೧. ಸಹಜಾನಂದಸ್ವಾಮಿಮಠ, ಕಳಾಸಿಪಾಳ್ಯ.
೭೨. ಸಾಲಿಮಠ, ಅಲಸೂರು.

೭೩. ಹಾಲಿನಬೀದಿಮಠ, ಅಲಸೂರು.
೭೪. ಹೊಸಮಠ, ಅರಳೆಪೇಟೆ.

೧೯೫೦ರ ಹಿಂದೂ ಮುಂದೂ ಬೆಂಗಳೂರಿನಲ್ಲಿ ಪ್ರಾರಂಭವಾಗಿದ್ದಿರಬಹುದಾದ ಕೆಲವು ಮಠಗಳನ್ನು ಈ ಪಟ್ಟಿಗೆ ಸೇರಿಸಿರುವುದಿಲ್ಲ.[26] ಜೊತೆಗೆ ಈಗಿನ ಬೆಂಗಳೂರಿನ ಹೊರವಲಯದ ಕೆಂಗೇರಿ, ನೆಲಮಂಗಲ, ಯಲಹಂಕ, ಹೊಸಕೋಟೆ ಹಾಗೂ ಬನ್ನೇರುಘಟ್ಟ ಈ ನಡುವಿನ ಗ್ರಾಮಾಂತರ ಭಾಗಗಳಲ್ಲಿ ಅನೇಕ ವೀರಶೈವ ಮಠಗಳಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಅವುಗಳನ್ನೂ ಕೂಡ ಇಲ್ಲಿ ಗಣನೆಗೆ ತೆಗೆದುಕೊಂಡಿರುವುದಿಲ್ಲ. ಈ ಪಟ್ಟಿ ಏನಿದ್ದರೂ ಇಂದಿನ ನಗರವಲಯದ ಪರಿಮಿತಿಗೆ ಮಾತ್ರ ಸೀಮಿತವಾಗಿರುತ್ತದೆ.

---

**ಅಡಿಟಿಪ್ಪಣಿಗಳು**

1. ಕೆ.ಪಿ. ಶಿವಲಿಂಗಯ್ಯ. ಬೆಂಗಳೂರಿನ ವೀರಶೈವ ಮಠಗಳು. ಸೇವಾಸಂಪದ. ಸಂ : ಗೊ.ರು. ಚನ್ನಬಸಪ್ಪ. ಪು. ೪೦೩.
2. ಅದೇ.
3. ಕೊಳದಮಠದ ದಾಖಲೆ. (ಸಂಗಯ್ಯಸ್ವಾಮಿ ಹೇಳಿಕೆ) ಕೇಸ್ ನಂ : ೬೫/೧೯೨೨-೨೩. ದಿ : ೧೨.೯.೧೯೨೫. ಪು. ೨.
4. Muzrai File No : 26/1929. Sl.No : 1,4,11. P 32.
5. ಹೇಳಿಕೆ : ವೈ.ಸಿ. ಬಸಪ್ಪ (೮೨) ಗಾಂಧಿನಗರ. ಬೆಂಗಳೂರು.
6. ಕೆ.ಪಿ. ಶಿವಲಿಂಗಯ್ಯ. ಪೂರ್ವೋಕ್ತ. ಅದೇ ಪುಟ.
7. ಹೇಳಿಕೆ : ಪುಟ್ಟತಾಯಮ್ಮ (೭೬) ಮಾಮೂಲುಪೇಟೆ. ಬೆಂಗಳೂರು.
8. ಹೇಳಿಕೆ : ಕರಿಬಸವಸ್ವಾಮಿಗಳು (೪೮) ಮಠಾಧಿಪತಿ. ನರಗುಂದದೇವರಮಠ. ಬೆಂಗಳೂರು.
9. ಅದೇ.
10. ಈಗಲೂ ಆ ಭಾಗದಲ್ಲಿ ಒಂದು ಗದ್ದುಗೆ ಇರುವುದನ್ನು ನೋಡಬಹುದು.
11. ವೀರಶೈವ ಸಮಾಜ ಸೇವಾಸಂಘ. ಬೆಂಗಳೂರು. ವಾರ್ಷಿಕ ವರದಿ. ೧೯೪೨. ಪು. ೨೩.
12. ಬೆಂಗಳೂರು ತಾಲ್ಲೂಕು ಕಛೇರಿಗೆ ಅರಳೆಪೇಟೆ ದೇಶದ ಕಳಸಪ್ಪಶೆಟ್ಟಿಯು ಬರೆದುಕೊಂಡ ಮನವಿ ಅರ್ಜಿ. ದಿನಾಂಕ : ೧೬.೮.೧೮೮೦.
13. ಅರಳೆಪೇಟೆಯ ಓ.ಟಿ.ಸಿ. ರಸ್ತೆಯಲ್ಲಿ ಈ ಮಠದ ಅಳಿದುಳಿದ ಶೇಷಭಾಗವು ಈಗಲೂ ಉಳಿದಿದೆಯಾದರೂ ಹೆಚ್ಚಿನ ವಿವರಗಳೇನೂ ದೊರಕಿಲ್ಲ.
14. ಮಹಾನಗರಪಾಲಿಕೆ ವೃತ್ತದ ಬಳಿಯೇ ಈ ಮಠವಿದೆಯಾದರೂ ಇಂದು ಅದೊಂದು ದೇಗುಲವುಳ್ಳ ಛತ್ರವಾಗಿ ಪರಿವರ್ತನೆಯಾಗಿ ಬಿಟ್ಟಿದೆ.
15. ಹೇಳಿಕೆ : ಕಂಥೆ ಕಾಯಕದ ಶಿವಲಿಂಗಯ್ಯ (೭೬) ಬೆಂಗಳೂರು.
16. ಅದೇ.
17. Revenue Commissioner Court File No : 28-55/1911-12. Bangalore dt: 15.12.1911. P. 87.
18. ಅದೇ.
19. ವೀರಶೈವ ಸಮಾಜ ಸೇವಾ ಸಂಘ. ಬೆಂಗಳೂರು. ವಾರ್ಷಿಕ ವರದಿ. ೧೯೪೨. ಪು. ೨೭.
20. ಹೇಳಿಕೆ : ಸಿದ್ಧಲಿಂಗಸ್ವಾಮಿ (೯೨) ಮಠಾಧಿಪತಿ. ಹೊಳವನಹಳ್ಳಿ. ತುಮಕೂರು ಜಿಲ್ಲೆ.
21. ಅರಳೆಗುಡಿಯಲ್ಲಿ ಈಗಲೂ ಸ್ವಾಮಿಗಳು ಹಾಕಿಕೊಳ್ಳಬಹುದಾದ ಲೋಹದ ಪಾದುಕೆಗಳಿವೆ. ಕೆ.ಪಿ. ಶಿವಲಿಂಗಯ್ಯನವರು ಪ್ರಾಚೀನಕಾಲದಲ್ಲಿ ಈ ಅರಳೆಗುಡಿ ಹಾಗೂ ಅಮೃತ ಮಲ್ಲೇಶ್ವರನ ಗುಡಿಗಳೆರಡೂ ಮಠಗಳೇ ಆಗಿದ್ದುವೆಂದು ಹೇಳುತ್ತಾರೆ. (ನೋಡಿ : ಕೆ.ಪಿ.ಶಿವಲಿಂಗಯ್ಯ. ಬೆಂಗಳೂರಿನ ವೀರಶೈವಮಠಗಳು. ಸೇವಾ ಸಂಪದ. ಸಂ : ಗೊ.ರು. ಚನ್ನಬಸಪ್ಪ. ಪು. ೪೦೩)
22. ಅದೇ.
23. ಬೆಂಗಳೂರಿನ ಪೀಣ್ಯ, ಚಾಮರಾಜಪೇಟೆ, ಜಯನಗರ, ಗಾಂಧಿನಗರ ಹಾಗೂ ದೊಡ್ಡಪೇಟೆಗಳಲ್ಲಿ ಹುಬ್ಬಳ್ಳಿಯ ಸಿದ್ಧಾರೂಢರು ಸ್ಥಾಪಿಸಿರುವ ಮಠಗಳು ಇಂದಿಗೂ ಉಳಿದಿರುವುದನ್ನು ನೋಡಬಹುದಾಗಿದೆ.
24. ಬೆಂಗಳೂರಿನಲ್ಲಿ ಬಹಳ ಹಿಂದಿನಿಂದಲೂ ವೀರಶೈವಮಠಗಳ ಜೊತೆಗೆ ವೈದಿಕ, ಪಾಂಚಾಳ, ಆರೂಢ ಹಾಗೂ ಇನ್ನಿತರ ಹಲವಾರು ಮತಭೇದಗಳಿಗೆ ಸಂಬಂಧಿಸಿದ ಅನೇಕ ಮಠಗಳಿದ್ದು ಅವು ಈಗಲೂ ಉಳಿದು ಬಂದಿರುವುದನ್ನು ನಾವು ಕಾಣಬಹುದಾಗಿದೆ. ಪ್ರಸ್ತುತ ಅಧ್ಯಯನದ ಕಕ್ಷೆಗೆ ಅವು ಬರುವುದಿಲ್ಲವಾದ ಕಾರಣ, ಅವುಗಳನ್ನು ಇಲ್ಲಿ ಪರಿಗಣಿಸಲಾಗಿಲ್ಲ.
25. ಬೆಂಗಳೂರಿನ ಅನೇಕ ಮಠಗಳ ಆಸ್ತಿ-ಪಾಸ್ತಿಗಳು ಇಂದು ಖಾಸಗಿ ಸ್ವತ್ತಾಗಿ ಕೌಟುಂಬಿಕರ ಪಾಲಾಗಿಬಿಟ್ಟಿವೆ. ಬಹಳಷ್ಟು ಮಠಗಳ ದಾಖಲೆಪತ್ರಗಳೆಲ್ಲಾ ಶೆಟ್ಟಿ ಯಜಮಾನರುಗಳ ಮನೆತನಗಳವರಲ್ಲಿ ಹಾಗೂ ಮಠಸ್ಥರ ಮನೆಗಳಲ್ಲಿಸೇರಿಬಿಟ್ಟಿವೆ. ಇವರುಗಳಾರೂ ಇಂದು ಅವುಗಳನ್ನು ಬೆಳಕಿಗೆ ತರಲು ಇಚ್ಛಿಸಲಾರರು. ಜೊತೆಗೆ ಎಷ್ಟೋಜನ ಮಠಾಧೀಶರೂ ಕೂಡ, ಹಲವಾರು ರೀತಿಯ ಮುಜುಗರಗಳಿಂದಾಗಿ ತಮ್ಮ ಮಠದಲ್ಲಿ ಉಳಿದಿರಬಹುದಾದ ದಾಖಲೆಗಳನ್ನು ಮುಕ್ತವಾಗಿ ತೋರಲು ಇಚ್ಛಿಸುವುದಿಲ್ಲ. ಮೇಲಾಗಿ ಅನೇಕ ಮಠಗಳವರು ತಮ್ಮ ಮಠದ ಹಳೆಯಕಾಲದ ದಾಖಲೆಗಳನ್ನು ಸುರಕ್ಷಿತವಾಗಿ ಸಂರಕ್ಷಿಸಲಾಗದೆ ಹಾಳಾಗಿರುವ ಸಾಧ್ಯತೆಯೂ ಉಂಟು. ಈ ಹಿನ್ನೆಲೆಯಲ್ಲಿ ಇನ್ನೂ ಬೆಳಕಿಗೆ ಬರಬೇಕಾದದ್ದು ಸಾಕಷ್ಟಿದೆ ಎಂಬುದಂತೂ ಸತ್ಯ.
26. ಅವುಗಳಾವುವೆಂದರೆ ಉರವಕೊಂಡಮಠ, ಶೇಷಾದ್ರಿಪುರ; ನಿಡುಮಾಮಿಡಿ ನಿವಾಸ, ಬಸವನಗುಡಿ ಇತ್ಯಾದಿ.

## ಬೆಂಗಳೂರು ನಗರದ ವೀರಶೈವ ಮಠಗಳ ವರ್ಗೀಕೃತ ಪಟ್ಟಿ

| ಗುರುವರ್ಗದ ಮಠಗಳು | | | | ವಿರಕ್ತವರ್ಗದ ಮಠಗಳು | | | | | ಇನ್ನುಳಿದ ಮಠಗಳು |
|---|---|---|---|---|---|---|---|---|---|
| ವೀರಸಿಂಹಾಸನದ ಮಠಗಳು | ಸದ್ಧರ್ಮಸಿಂಹಾಸನದ ಮಠಗಳು | ದೇವಸಿಂಹಾಸನದ ಮಠಗಳು | ಇತರೆ ಪಟ್ಟದ ಮಠಗಳು | ಮುರಿಗಾಸಮಯದ ಮಠಗಳು | ಕೆಂಪಿನಸಮಯದ ಮಠಗಳು | ಸಂಪಾದನೆಸಮಯದ ಮಠಗಳು | ಚೀಲಾಳಸಮಯದ ಮಠಗಳು | ಇತರೆ ವಿರಕ್ತ ಮಠಗಳು | |
| ೧. ಧರ್ಮಶಾಲಾ ಮಠ<br>೨. ಮಹಾಂತರ ಮಠ<br>೩. ವಿಭೂತಿಪುರದ ಮಠ<br>೪. ಮಾಳಿಗೆ ಮಠ<br>೫. ಅಂಕಲೇಶ್ವರ ಮಠ | ೧. ಮರಿಸ್ವಾಮಿ ಮಠ (ಕಳಾಸಿಪಾಳ್ಯ)<br>೨. ಮರಿಸ್ವಾಮಿ ಮಠ (ಅರಳೆಪೇಟೆ)<br>೩.ನಿರ್ವಾಣಮ್ಮನ ಮಠ<br>೪. ಕುದುರೆ ಗದ್ದುಗೆ ಮಠ<br>೫. ಬುರುಗಲು ದೇವರ ಮಠ<br>೬. ಗದ್ದುಗೆ ಮಠ (ಜಕ್ಕರಾಯನಕೆರೆ)<br>೭. ಬೂದಿ ಸ್ವಾಮಿ ಮಠ<br>೮. ಕಂಬಳಿ ಸ್ವಾಮಿ ಮಠ | ೧. ಮುತ್ತಿನ ಕಂತೆಮಠ | ೧.ಗವಿಪುರದ ಮಠ<br>೨. ಗದ್ದುಗೆಮಠ (ಯಶವಂತಪುರ)<br>೩. ಗದ್ದುಗೆಮಠ (ಜೇಡಹಳ್ಳಿ) | ೧. ಜಂಗಮಮಠ (ಗಂಜಾಂಮಠ)<br>೨. ತಿಪ್ಪಶೆಟ್ಟಿಮಠ<br>೩. ಗುರುವಣ್ಣ ದೇವರಮಠ<br>೪. ಗುರುವಣ್ಣ ದೇವರಮಠದ ಚೌಕಿಮಠ<br>೫. ಕಲ್ಲುಮಠ<br>೬. ಗೊಟ್ಟೂರಯ್ಯನಮಠ<br>೭. ದೇಶದಮಠ<br>೮. ನಿರಂಜನ ದೇವರಮಠ | ೧. ಬೇಲಿಮಠ<br>೨. ದೊಡ್ಡಹುಠ<br>೩. ಜಂಗಮ ಮಠ (ಶಿವನಹಳ್ಳಿ)<br>೪. ಕಂಬಿ ನಂಜಯ್ಯನ ಮಠ<br>೫. ಮುದ್ದಪ್ಪ ಸ್ವಾಮಿ ಮಠ<br>೬. ನಂಬೆಣ್ಣನ ಮಠ<br>೭. ನಂಜಯ್ಯನ ಚೌಕಿ ಮಠ | ೧. ಕರಿಸಿದ್ದೇಶ್ವರ ಮಠ<br>೨. ಕೊಳದ ಮಠ | ೧. ತೋಟದ ದೇವರಮಠ<br>೨. ನರಗುಂದ ದೇವರಮಠ | ೧.ಸಪ್ಪಣ್ಣಸ್ವಾಮಿಮಠ<br>೨. ಶಂಕರದೇವರಮಠ<br>೩. ಮೇಲಿನಮಠ<br>೪. ಕೆಳಗಿನಮಠ<br>೫. ಗಂಗಶೆಟ್ಟಿಮಠ<br>೬. ಗವಿಮಠ<br>೭. ರುದ್ರಾರಾಧ್ಯರ ಚೌಕಿಮಠ<br>೮. ಮೂಲೆಮಠ<br>೯. ಹೊಸಮಠ<br>೧೦. ಜಂಗಮಮಠ (ಅಲಸೂರು)<br>೧೧. ಸಾಲಿಮಠ<br>೧೨. ಹಾಲಿನಬೀದಿ ಮಠ<br>೧೩. ಶಿವಾನುಭವ ಮಠ<br>೧೪. ಜಂಗಮಮಠ (ದೊಡ್ಡಕುಂಟೆಗ್ರಾಮ)<br>೧೫. ದಂಡಿನಮಹಾ ಲಿಂಗೇಶ್ವರಮಠ<br>೧೬. ದಂಡಿನ ನಂಜುಂಡ ಸ್ವಾಮಿ ಗದ್ದುಗೆಮಠ | ೧. ಮಿಂಚನಹಳ್ಳಿ ಮಠ<br>೨. ಫಲಹಾರಸ್ವಾಮಿಮಠ<br>೩. ಕೋಟಿಲಿಂಗದಮಠ<br>೪. ಕೊಂಡ್ಲುಮಠ<br>೫. ಚೌಕಿಮಠ (ಚಿಕ್ಕಪೇಟೆ)<br>೬. ಫಾಲಾಕ್ಷಸ್ವಾಮಿಮಠ<br>೭. ಗದ್ದುಗೆಮಠ (ಅಂಚೆಪೇಟೆ)<br>೮. ಚಿಲುಮೆಗದ್ದುಗೆಮಠ<br>೯. ಚಿಣಮಿಣಿದೇವರಮಠ<br>೧೦. ಲಿಂಗದಗುಡಿಮಠ<br>೧೧. ದೇವೀರಮ್ಮನಮಠ<br>೧೨. ದಿಗಂಬರಶೆಟ್ರುಮಠ<br>೧೩. ಬಳೆಮಠ<br>೧೪. ಮಲ್ಲಿಕಾರ್ಜುನ ಸ್ವಾಮಿ ಗದ್ದುಗೆಮಠ<br>೧೫. ಜಂಗಮಮಠ (ಗಂಗಮ್ಮನಗುಡಿ ಬೀದಿ)<br>೧೬. ಸಹಜಾನಂದಸ್ವಾಮಿಮಠ<br>೧೭. ನಂಜುಂಡಸ್ವಾಮಿ ಗದ್ದುಗೆಮಠ (ಗವಿಪುರ)<br>೧೮. ಕಂತೆಭಿಕ್ಷದಸ್ವಾಮಿಮಠ<br>೧೯. ಚಿದಾನಂದಸ್ವಾಮಿಮಠ<br>೨೦. ಜಂಗಮಮಠ (ಶೇಷಾದ್ರಿಪುರ)<br>೨೧. ಅರಳೆಗುಡಿಮಠ<br>೨೨. ಅಮೃತ ಮಲ್ಲೇಶ್ವರನ ಗುಡಿಮಠ |

## ಬೆಂಗಳೂರು ನಗರದ ವೀರಶೈವ ಮಠಗಳ ಅಸ್ತಿತ್ವದ ಪಟ್ಟಿ

| ಮಠಾಧಿಪತಿಗಳು ಇರುವ ಮಠಗಳು ( ೧೭ ) | ಮಠಾಧಿಪತಿಗಳು | ಮಠಾಧಿಪತಿಗಳಿಲ್ಲದ ಗುರುತಿಸಲ್ಪಡುವ ಮಠಗಳು ( ೧೮ ) | ಗುರುತಿಸಲಾಗದ ಮಠಗಳು ( ೩೯ ) | |
|---|---|---|---|---|
| | ಷ॥ಬ್ರ॥ ಶ್ರೀ॥ನಿ॥ಪ್ರ॥ಗಳಾದ | | | |
| ಅಂಕಲೇಶ್ವರಮಠ | ಶ್ರೀ ಚನ್ನಬಸವಾರಾಧ್ಯರು | ಅಮೃತಮಲ್ಲೇಶ್ವರನ ಗುಡಿಯಮಠ | ಕಂಬಿನಂಜಯ್ಯನಮಠ | ಧರ್ಮಶಾಲಾಮಠ |
| ಕೊಳದಮಠ | ಶ್ರೀ ಶಾಂತವೀರಸ್ವಾಮಿಗಳು | ಅರಳೆಗುಡಿಮಠ | ಕಂತೆಭಿಕ್ಷದಸ್ವಾಮಿಮಠ | ನಂಜಯ್ಯನ ಚೌಕಿಮಠ |
| ಗಂಜಾಂಮಠ | ಶ್ರೀ ಚಿದ್ಘನಸ್ವಾಮಿಗಳು | ಕರಿಸಿದ್ದೇಶ್ವರಮಠ | ಕೊಂಡ್ನುಮಠ | ನಂಜುಂಡಸ್ವಾಮಿಗದ್ದುಗೆಮಠ |
| ಗುರುವಣ್ಣದೇವರಮಠ | ಶ್ರೀ ಮಲ್ಲಿಕಾರ್ಜುನಸ್ವಾಮಿಗಳು | ಕಲ್ಲುಮಠ | ಕೋಟಲಿಂಗದಮಠ | (ಗವಿಪುರ) |
| ತಿಪ್ಪಶೆಟ್ಟಿಮಠ | ಶ್ರೀ ಮಲ್ಲಿಕಾರ್ಜುನದೇವರು | ಕುದುರೆಗದ್ದುಗೆಮಠ | ಗಂಗಶೆಟ್ಟಿಮಠ | ನಂಬೆಣ್ಣನಮಠ |
| ದೊಡ್ಡಮಠ | ಶ್ರೀ ಚನ್ನವೀರಸ್ವಾಮಿಗಳು | ಗದ್ದುಗೆಮಠ (ಚೇಡಹಳ್ಳಿ) | ಗದ್ದುಗೆಮಠ (ಅಂಚೆಪೇಟೆ) | ನಿರಂಜನದೇವರಮಠ |
| ನರಗುಂದದೇವರಮಠ | ಶ್ರೀ ಕರಿಬಸವಸ್ವಾಮಿಗಳು | ಗುರುವಣ್ಣದೇವರಮಠದ ಚೌಕಿಮಠ | ಗದ್ದುಗೆಮಠ (ಜಕ್ಕರಾಯನಕೆರೆ ಬಳಿ) | ನಿರ್ವಾಣಮ್ಮನಮಠ |
| ಮತ್ತು ತೋಟದದೇವರಮಠ | | ಚಿಣಿಮಿಣಿದೇವರಮಠ | ಗದ್ದುಗೆಮಠ (ಯಶವಂತಪುರ) | ಫಲಾಹಾರಸ್ವಾಮಿಮಠ |
| ನಿಜಗುಣಜಂಗಮಮಠ | ಶ್ರೀ ನಿಜಗುಣಸ್ವಾಮಿಗಳು | ಜಂಗಮಮಠ (ಶಿವನಹಳ್ಳಿ) | ಗವಿಪುರದಮಠ | ಫಾಲಾಕ್ಷಸ್ವಾಮಿಮಠ |
| (ಮೇಲಿನಮಠ/ಕೆಳಗಿನಮಠ) | | ನಂಜುಂಡಸ್ವಾಮಿ ಗದ್ದುಗೆಮಠ (ದಂಡು) | ಗವಿಮಠ | ಮರಿಸ್ವಾಮಿಮಠ (ಅರಳೆಪೇಟೆ) |
| ಬೂದಿಸ್ವಾಮಿಮಠ | ಶ್ರೀ ಬಸವಲಿಂಗಸ್ವಾಮಿಗಳು | ದೇಶದಮಠ | ಗೊಟ್ಟೂರಯ್ಯನಮಠ | ಮಾಳಿಗೆಮಠ |
| ಮತ್ತು ಕಂಬಳಿಸ್ವಾಮಿಮಠ | | ಬಳೆಮಠ | ಚಿದಾನಂದಸ್ವಾಮಿಮಠ | ಮಿಂಚನಹಳ್ಳಿಮಠ |
| ಬೇಲಿಮಠ | ಶ್ರೀ ಶಿವರುದ್ರಸ್ವಾಮಿಗಳು | ಬುರುಗಲುದೇವರಮಠ | ಚಿಲುಮೆಗದ್ದುಗೆಮಠ | ಮುದ್ದಪ್ಪಸ್ವಾಮಿಮಠ |
| ಮುತ್ತಿನಕಂತೆಮಠ | ಶ್ರೀ ಸೋಮಶೇಖರಶಿವಾಚಾರ್ಯರು | ಮರಿಸ್ವಾಮಿಮಠ (ಕಳಾಸಿಪಾಳ್ಯ) | ಚೌಕಿಮಠ (ಚಿಕ್ಕಪೇಟೆ) | ಮೂಲೆಮಠ |
| ವಿಭೂತಿಪುರದಮಠ | ಶ್ರೀ ಸುವರ್ಣಲಿಂಗ ಶಿವಾಚಾರ್ಯರು | ಮಲ್ಲಿಕಾರ್ಜುನಸ್ವಾಮಿಗದ್ದುಗೆಮಠ | ಜಂಗಮ ಮಠ (ಅಲಸೂರು) | ರುದ್ರಾರಾಧ್ಯರ ಚೌಕಿಮಠ |
| ಶಂಕರದೇವರಮಠ | ಶ್ರೀ ಶಾಂತಕುಮಾರಸ್ವಾಮಿಗಳು | ಮಹಾಂತರಮಠ | ಜಂಗಮಮಠ (ಗಂಗಮ್ಮನಗುಡಿ ಬೀದಿ) | ಲಿಂಗದಗುಡಿಮಠ |
| ಸರ್ಪಭೂಷಣಮಠ | ಶ್ರೀ ಮಲ್ಲಿಕಾರ್ಜುನಸ್ವಾಮಿಗಳು | ಶಿವಾನುಭವಮಠ | ಜಂಗಮಮಠ (ದೊಡ್ಡಕುಂಟೆಗ್ರಾಮ) | ಸಹಜಾನಂದಸ್ವಾಮಿಮಠ |
| | | ಹಾಲಿನಬೀದಿಮಠ | ಜಂಗಮಮಠ (ಶೇಷಾದ್ರಿಪುರ) | ಸಾಲಿಮಠ |
| | | | ದಂಡಿನ ಮಹಾಲಿಂಗೇಶ್ವರ ಮಠ | ಹೊಸಮಠ |
| | | | ದಿಗಂಬರಶೆಟ್ಟಿಮಠ | |
| | | | ದೇವೀರಮ್ಮನಮಠ | |

ವಿ.ಸೂ. : ಮೇಲ್ಕಂಡ ದೊಡ್ಡಮಠ, ನರಗುಂದದೇವರಮಠ, ವಿಭೂತಿಪುರದ ಮಠ ಮತ್ತು ನಿಜಗುಣಜಂಗಮಮಠದ ಮಠಾಧಿಪತಿಗಳು ಇತ್ತೀಚೆಗೆ ಲಿಂಗೈಕ್ಯರಾಗಿರುತ್ತಾರೆ.

# ಬೆಂಗಳೂರು ನಗರ




(ಬೆಂಗಳೂರು ನಗರದ ನಕ್ಷೆಯೊಳಗೆ ಎಪ್ಪತ್ತು ನಾಲ್ಕು ಮಠಗಳನ್ನೂ ಒಟ್ಟಿಗೆ ಗುರುತಿಸುವುದು ಸಾಧ್ಯವಾಗದ ಕಾರಣ, ಮುಖ್ಯ ಪೇಟೆಗಳನ್ನು ಮಾತ್ರಗುರುತಿಸಿ ಅವುಗಳಲ್ಲಿದ್ದ ವೀರಶೈವಮಠಗಳ ಪಟ್ಟಿಯನ್ನು ಮುಂದೆ ಕೊಡಲಾಗಿದೆ.)

# ಬೆಂಗಳೂರು ನಕ್ಷೆಯಲ್ಲಿ ಗುರುತಿಸಿರುವ ವೀರಶೈವಮಠಗಳ ಪಟ್ಟಿ

**೧. ಅರಳೆಪೇಟೆಯಲ್ಲಿ ಇರುವ ಮಠಗಳು-**
೧. ಅಮೃತ ಮಲ್ಲೇಶ್ವರನ ಗುಡಿಮಠ
೨. ಅರಳೆಗುಡಿಮಠ
೩. ಗುರುವಣ್ಣದೇವರ ಚೌಕಿಮಠ
೪. ಚಿಣಿಮಿಣಿದೇವರಮಠ
೫. ಚಿಲುಮೆ ಗದ್ದುಗೆಮಠ
೬. ತೋಟದದೇವರಮಠ
೭. ದಿಗಂಬರಶೆಟ್ಟುಮಠ
೮. ದೇಶದಮಠ
೯. ದೊಡ್ಡಮಠ
೧೦. ನಂಜಯ್ಯನ ಚೌಕಿಮಠ
೧೧. ನಂಬೆಣ್ಣನಮಠ
೧೨. ನರಗುಂದದೇವರಮಠ
೧೩. ಬೇಲಿಮಠ
೧೪. ಮರಿಸ್ವಾಮಿ ಮಠ
೧೫. ಮುದ್ದಪ್ಪಸ್ವಾಮಿಮಠ
೧೬. ಹೊಸಮಠ

**೨. ದೊಡ್ಡಪೇಟೆಯಲ್ಲಿ ಇರುವ ಮಠಗಳು-**
೧. ಕಂಬಿ ನಂಜಯ್ಯನ ಮಠ
೨. ಕರಿಸಿದ್ಧೇಶ್ವರಮಠ
೩. ಗದ್ದುಗೆಮಠ
೪. ದೇವೀರಮ್ಮನಮಠ
೫. ಮಾಳಿಗೆಮಠ
೬. ಲಿಂಗದಗುಡಿಮಠ

**೩. ಚಿಕ್ಕಪೇಟೆಯಲ್ಲಿ ಇರುವ ಮಠಗಳು-**
೧. ಕೊಂಡ್ಲುಮಠ
೨. ಕೋಟಲಿಂಗದಮಠ
೩. ಚೌಕಿಮಠ
೪. ಧರ್ಮಶಾಲಾಮಠ
೫. ಫಲಹಾರಸ್ವಾಮಿಮಠ
೬. ಫಾಲಾಕ್ಷಸ್ವಾಮಿಮಠ
೭. ಮಹಾಂತರಮಠ
೮. ಮಿಂಚನಹಳ್ಳಿಮಠ

**೪. ಮಾಮೂಲುಪೇಟೆಯ ಮಠಗಳು-**
೧. ಗಂಜಾಂಮಠ
೨. ಮೂಲೆಮಠ
೩. ರುದ್ರಾರಾಧ್ಯರ ಚೌಕಿಮಠ

**೫. ಮನೆವಾರ್ತೆಪೇಟೆಯ ಮಠಗಳು -**
೧. ನಿರ್ವಾಣಮ್ಮನಮಠ
೨. ಶಂಕರದೇವರಮಠ

**೬. ಬಳೆಪೇಟೆಯಮಠಗಳು-**
೧. ಕಲ್ಲುಮಠ
೨. ಬಳೆಮಠ
೩. ಮುತ್ತಿನಕಂತೆಮಠ
೪. ಸರ್ಪಭೂಷಣಮಠ

**೭. ಗಾಂಧಿನಗರದ ಮಠಗಳು-**
೧. ಗೊಟ್ಟೂರಯ್ಯನಮಠ
೨. ತಿಪ್ಪಶೆಟ್ಟಿಮಠ
೩. ನಿರಂಜನದೇವರಮಠ

**೮. ದಂಡುಪ್ರದೇಶದ ಮಠಗಳು-**
೧. ಅಂಕಲೇಶ್ವರಮಠ
೨. ಜಂಗಮಮಠ
೩. ನಂಜುಂಡಸ್ವಾಮಿಗದ್ದುಗೆಮಠ
೪. ಮಹಾಲಿಂಗೇಶ್ವರಮಠ

**೯. ಅಲಸೂರಿನ ಮಠಗಳು-**
೧. ಜಂಗಮಮಠ
೨. ಶಿವಾನುಭವಮಠ
೩. ಸಾಲಿಮಠ
೪. ಹಾಲಿನಬೀದಿಮಠ

**೧೦. ಗವಿಪುರದ ಮಠಗಳು-**
೧. ಗವಿಪುರದಮಠ

೨. ನಂಜುಂಡಸ್ವಾಮಿ ಗದ್ದುಗೆಮಠ
೩. ನಿಜಗುಣಜಂಗಮಮಠ
(ಮೇಲಿನಮಠ ಮತ್ತು ಕೆಳಗಿನಮಠ)

**೧೧. ಕಳಾಸಿಪಾಳ್ಯಕ್ಕೆ ಸಮೀಪದ ಮಠಗಳು -**

೧. ಬುರುಗಲು ದೇವರಮಠ
೨. ಬೂದಿಸ್ವಾಮಿಮಠ
೩. ಮರಿಸ್ವಾಮಿಮಠ
೪. ಸಹಜಾನಂದಸ್ವಾಮಿ ಮಠ

**೧೨. ನಗರಪಾಲಿಕಾ ಕಚೇರಿಗೆ ಸಮೀಪದ ಮಠಗಳು-**

೧. ಜಂಗಮಮಠ (ಗಂಗಮ್ಮನಗುಡಿಬೀದಿ)
೨. ಮಲ್ಲಿಕಾರ್ಜುನಸ್ವಾಮಿ ಗದ್ದುಗೆಮಠ

**೧೩. ಕೆಂಪಾಪುರ ಅಗ್ರಹಾರಕ್ಕೆ ಸೇರಿದ ಮಠಗಳು-**

೧. ಗಂಗಶೆಟ್ಟಿಮಠ
೨. ಗುರುವಣ್ಣದೇವರಮಠ

**೧೪. ಕೊಳದಮಠ**

**೧೫. ಕುದುರೆಗದ್ದುಗೆಮಠ**

**೧೬. ಕಂತೆಭಿಕ್ಷದಮಠ**

**೧೭. ಕಂಬಳಿಸ್ವಾಮಿಮಠ**

**೧೮. ಗವಿಮಠ ( ಸಿದ್ಧರಾಮನದಿಣ್ಣೆ )**

**೧೯. ಗದ್ದುಗೆಮಠ ( ಜಕ್ಕರಾಯನಕೆರೆ )**

**೨೦. ಜಂಗಮಮಠ ( ಶೇಷಾದ್ರಿಪುರ )**

**೨೧. ಚಿದಾನಂದಸ್ವಾಮಿಮಠ**

**೨೨. ಗದ್ದುಗೆಮಠ ( ಯಶವಂತಪುರ )**

**೨೩. ಗದ್ದುಗೆಮಠ ( ಜೀಡಹಳ್ಳಿ )**

**೨೪. ಜಂಗಮಮಠ ( ಶಿವನಹಳ್ಳಿ )**

**೨೫. ವಿಭೂತಿಪುರದಮಠ**

ಅಧ್ಯಾಯ - ಐದು

# ಮಠಗಳು-ಶೈಕ್ಷಣಿಕವಾಗಿ

---

# ಅಧ್ಯಾಯ - ಐದು

# ೫. ಮಠಗಳು-ಶೈಕ್ಷಣಿಕವಾಗಿ

ಸ್ವಾತಂತ್ರ್ಯಪೂರ್ವದ ವೀರಶೈವ ಮಠಗಳಲ್ಲಿ ಸಾಮಾನ್ಯವಾಗಿ ಎರಡು ಅಂಶಗಳನ್ನು ಕಡ್ಡಾಯವಾಗಿ ಗುರುತಿಸಬಹುದಾಗಿತ್ತು. ಒಂದನೆಯದಾಗಿ ಯಾವುದೇ ಮಠ 'ಕೂಲಿಮಠ' (ಸಾಲಿಮಠ)ವಾಗಿರುತ್ತಿತ್ತು. ಎರಡನೆಯದಾಗಿ 'ದಾಸೋಹ ಕೇಂದ್ರ' (ಧರ್ಮಛತ್ರ) ವಾಗಿಯಾದರೂ ಇರುವುದು ಕಡ್ಡಾಯವಾಗಿರುತ್ತಿತ್ತು. ಕೆಲವು ವೇಳೆ ಬಹಳಷ್ಟು ಮಠಗಳು ಎರಡೂ ಪರಂಪರೆಯನ್ನು ಉಳಿಸಿಕೊಂಡಿರುವುದು ಸಾಮಾನ್ಯವಾಗಿತ್ತು. ಹಿಂದೆ ಒಂದುಪಕ್ಷ ಊರೆಲ್ಲಾ ತಿರುಗಿದರೂ ಸಿಗದ ಭಿಕ್ಷಾನ್ನ, ಊರಾಚೆಗಿನ ಮಠದಲ್ಲಂತೂ ತಪ್ಪದೆ ದೊರೆಯುತ್ತಿತ್ತು. ವೀರಶೈವ ಮಠಗಳ ಈ ಸತ್ ಸಂಪ್ರದಾಯವು ಬಹಳ ಪ್ರಾಚೀನಕಾಲದಿಂದಲೂ ಅನೂಚಾನವಾಗಿ ನಡೆದು ಬಂದಿದೆ. ಮಠಗಳು ಮೂಲತಃ ಗುರು-ಶಿಷ್ಯರು, ಸನ್ಯಾಸಿಗಳು ವಾಸಿಸುವ ಸ್ಥಳಗಳೇ ಆಗಿದ್ದರೂ; ಸ್ವಭಾವತಃ ಧಾರ್ಮಿಕ ಶಿಕ್ಷಣದ ಮಂದಿರಗಳಾಗಿದ್ದವು ಎಂಬುದನ್ನು ಇಲ್ಲಿ ಮನಗಾಣಬೇಕಾಗಿದೆ. ಮಠವು ಧರ್ಮಬೋಧನೆ ಮತ್ತು ಪ್ರಸಾರದ ಪ್ರಮುಖ ಕೇಂದ್ರವಾಗಿತ್ತು. ಇದೇ ಕಾರಣಕ್ಕಾಗಿ ಅಮರಸಿಂಹನು ''ಮಠಶ್ಛಾತ್ರಾದಿ ನಿಲಯಃ'' ಎಂದು ಕರೆದು 'ಮಠಗಳೆಂದರೆ ವಿದ್ಯಾಮಂದಿರ' ಗಳೆಂದೇ ವ್ಯಾಖ್ಯಾನಿಸಿದ್ದಾನೆ.[1] ಹೀಗೆ ಮಠವು ವಿದ್ಯೆ, ಜ್ಞಾನ, ಮತ, ಧರ್ಮಗಳ ಅಭ್ಯಾಸ ಹಾಗೂ ಪ್ರಸಾರ ಕಾರ್ಯಗಳನ್ನು ನಡೆಸುವ ಸ್ಥಾನ ಅಥವಾ ಸಂಸ್ಥಾನವಿದ್ದಂತೆ.[2]

ಜಗತ್ತಿನಲ್ಲಿ ವಿದ್ಯೆಗಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ ಎಂಬುದು ಪ್ರಾಚೀನ ಭಾರತದ ಕಲ್ಪನೆ. ಹಿಂದಿನ ಶಿಕ್ಷಣ ಕ್ರಮವು ಸಂಪೂರ್ಣವಾಗಿ ಧಾರ್ಮಿಕ ಚೌಕಟ್ಟುಳ್ಳದ್ದೇ ಆಗಿತ್ತು. ಅದರಲ್ಲೂ ಪ್ರಾಚೀನ ಭಾರತದ ವಿದ್ಯೆ ಲೌಕಿಕಕ್ಕಿಂತ ಪಾರಮಾರ್ಥದ ಎಡೆಗೇ ವಿಶೇಷ ಒಲವುಳ್ಳದ್ದಾಗಿತ್ತು. ಈ ಹಿನ್ನೆಲೆಯಲ್ಲಿ ವಿದ್ಯೆಯನ್ನು ಪರಾವಿದ್ಯೆ ಮತ್ತು ಅಪರಾವಿದ್ಯೆ ಎಂದು ಎರಡು ತೆರನಾಗಿ ವಿಭಜಿಸಲಾಗಿತ್ತು. ಮಾನವರ ಆತ್ಮವಿಕಸನಕ್ಕೆ ಸಾಧನವಾದ ಪರಾವಿದ್ಯೆಯನ್ನು ಶ್ರೇಷ್ಠವೆಂದೂ, ಲೌಕಿಕ ಹಿತಾಸಕ್ತಿಗೆ ಪೂರಕವಾದ ಅಪರಾವಿದ್ಯೆಯನ್ನು ಕನಿಷ್ಠವೆಂದೂ ಪರಿಗಣಿಸಲಾಗಿತ್ತು. ಹೀಗೆ ಪರಾವಿದ್ಯೆ ಶ್ರೇಯೋರೂಪದ್ದಾದರೆ, ಅಪರಾವಿದ್ಯೆ ಪ್ರೇಯೋರೂಪದ್ದು. 'ನಚಿಕೇತನು ಅನಿತ್ಯ ಫಲಗಳಿಗೆ ಕಾರಣವಾದ ಪ್ರೇಯೋಮಾರ್ಗವನ್ನು ಬಿಟ್ಟು, ಮೋಕ್ಷ ಕಾರಣವಾದ ಶ್ರೇಯೋಮಾರ್ಗವನ್ನು ಹಿಡಿದಿದ್ದರಿಂದ ಯಮನು ನಚಿಕೇತನನ್ನು ''ವಿದ್ಯಾರ್ಥಿ'' ಎಂದು ಕರೆಯುತ್ತಾನೆ.[3]

ವಿದ್ಯೆ ಇಲ್ಲದವನು ಪಶುವಿಗೆ ಸಮಾನ[4] ಎಂಬುದು ಪ್ರಾಚೀನ ಕಾಲದ ಉಲ್ಲೇಖ. ಇಲ್ಲಿ ವಿದ್ಯೆಗಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ಸರ್ವ ದ್ರವ್ಯಗಳಲ್ಲೂ ವಿದ್ಯೆಯೇ ನಿಜವಾದ ಧನ. ಏಕೆಂದರೆ ಇದನ್ನು ಯಾರೂ ಅಪಹರಿಸಲಾರರು. ಇದು ಅನರ್ಘ್ಯವಾದುದು ಮತ್ತು ಅಕ್ಷಯವಾದುದು.[5] ಹೀಗೆ ವಿದ್ಯೆಯು ಕಲ್ಪಲತೆ ಇದ್ದಂತೆ. ಅದು ಯಾವುದನ್ನು ತಾನೆ ಕೊಡುವುದಿಲ್ಲ? ತಾಯಿಯಂತೆ ಕಾಪಾಡುತ್ತದೆ. ತಂದೆಯಂತೆ ಸರಿಮಾರ್ಗದಲ್ಲಿ ಮುನ್ನಡೆಸುತ್ತದೆ. ಪ್ರಿಯೆಯಂತೆ ಕಷ್ಟಗಳನ್ನು ಹೋಗಲಾಡಿಸಿ ಸಂತೋಷಗೊಳಿಸುತ್ತದೆ. ಐಶ್ವರ್ಯವನ್ನು ತರುತ್ತದೆ. ದಿಕ್ಕುಗಳಲ್ಲಿ ಕೀರ್ತಿಯನ್ನು ಹರಡುತ್ತದೆ.[6]

ಭಾರತದಲ್ಲಿ ಬೌದ್ಧ ಧರ್ಮದ ಹುಟ್ಟುವಿಕೆಯೊಂದಿಗೆ ಬೌದ್ಧ ವಿಹಾರಗಳು ರೂಪುಗೊಂಡು ಮುಂದೆ ಅವೇ ವಿದ್ಯಾ

ಕೇಂದ್ರಗಳೂ ಆದವು. ಅವು ಆರಂಭದಲ್ಲಿ ಬೌದ್ಧ ಭಿಕ್ಷುಗಳಿಗೆ ಮಾತ್ರ ಮೀಸಲಾಗಿದ್ದು ಕಾಲಾನಂತರ ಉಳಿದವರಿಗೂ ಪ್ರವೇಶ ಕೊಡಲಾರಂಭಿಸಿದವು. "ಬೌದ್ಧ ವಿಹಾರಗಳು ವಿದ್ಯಾಕೇಂದ್ರಗಳಾಗಿ ಮಾರ್ಪಾಟಾದುದನ್ನು ನೋಡಿ ಅವುಗಳಿಂದ ಪ್ರೇರಣೆಯನ್ನು ಹೊಂದಿದ ಹಿಂದೂಗಳೂ ತಮ್ಮ ವಿದ್ಯಾ ಕೇಂದ್ರಗಳನ್ನು ಸ್ಥಾಪಿಸಿದ್ದಿರ ಬಹುದು" ಎಂಬುದಾಗಿ ಡಾ। ಆಳ್ತೇಕರ್ ಹೇಳಿದ್ದಾರೆ.[7] ಹಿಂದೂಗಳಲ್ಲಿ ವ್ಯವಸ್ಥಿತವಾದ ವಿದ್ಯಾಕೇಂದ್ರಗಳು ಕಾಣಿಸಿಕೊಳ್ಳುವುದೇ ಕ್ರಿ.ಶ. ೯ನೆಯ ಶತಮಾನದ ಅನಂತರ.

ಪ್ರಾಚೀನ ಕರ್ನಾಟಕದಲ್ಲಿ ವಿದ್ಯಾಭ್ಯಾಸವನ್ನು ನೀಡುತ್ತಿದ್ದ ಕೇಂದ್ರಗಳೆಂದರೆ-ಅಗ್ರಹಾರ,[8] ಬ್ರಹ್ಮಪುರಿ,[9] ದೇವಸ್ಥಾನ ಮತ್ತು ಘಟಿಕಾಸ್ಥಾನಗಳು.[10] ಹಿಂದೆ ವಿದ್ಯಾಕೇಂದ್ರಗಳಾಗಿದ್ದ ದೇವಸ್ಥಾನಗಳನ್ನು ಮಠಗಳೆಂದೂ ಕರೆಯುತ್ತಿದ್ದುದುಂಟು.[11] ಲಕುಲೀಶ, ಪಾಶುಪತ, ಕಾಳಾಮುಖರು ಕರ್ನಾಟಕಕ್ಕೆ ಆಗಮಿಸಿದ ನಂತರ ದೇವಸ್ಥಾನಗಳನ್ನು ನಿರ್ಮಿಸಿ ಅವುಗಳಿಗೆ ಸ್ಥಾನಪತಿಗಳಾಗಿ, ನಂತರ ದೇವಸ್ಥಾನಗಳನ್ನೇ ವಿದ್ಯಾಕೇಂದ್ರಗಳನ್ನಾಗಿ ಮಾರ್ಪಡಿಸಿದರು. ಈ ಲಕುಲೀಶ, ಪಾಶುಪತ, ಕಾಳಾಮುಖ ಶೈವ ಮುನಿಗಳು ಸ್ಥಾನಪತಿಗಳಾಗಿ ಇಲ್ಲಿನ ದೇವಾಲಯಗಳನ್ನು ನೋಡಿಕೊಳ್ಳುವ ಸಮಯದಲ್ಲಿ ಇವರು ವಾಸಿಸುತ್ತಿದ್ದ ಮನೆಗಳೇ ಮಠಗಳೆನಿಸಿಕೊಂಡವು.[12] ಅಂದು ಒಬ್ಬ ಆಧ್ಯಾತ್ಮ ಜೀವಿಯು ತನ್ನೊಡನೆ ಇತರರ ಆತ್ಮಕಲ್ಯಾಣವನ್ನು ಬಯಸುತ್ತಾ ತನ್ನ ಮನೆಯನ್ನೇ ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಚಟುವಟಿಕೆಗಳಿಗೆ ತೆರೆದಿಟ್ಟರೆ ಅದು ಮಠವೆಂಬ ಅಭಿಧಾನವನ್ನೇ ಪಡೆಯುತ್ತಿತ್ತು.[13] 'ಶೈವರಿಗೆ ದೇವಸ್ಥಾನ ಹಾಗೂ ಮಠ ಇವೆರಡೂ ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಕೇಂದ್ರಗಳಾಗಿದ್ದುವಾದರೆ; ವೀರಶೈವರಿಗೆ ಸ್ಥಾವರ ಲಿಂಗಪೂಜೆ ನಿಷಿದ್ಧವಾಗಿದ್ದರಿಂದ ಕೇವಲ ಮಠಗಳೇ ಆ ಕಾರ್ಯಗಳನ್ನು ನಿರ್ವಹಿಸುವ ಸಂಪೂರ್ಣ ಹೊಣೆಯನ್ನು ಹೊತ್ತ ಕೇಂದ್ರಗಳಾಗಿದ್ದವು.'[14] ಮುಂದೆ ಶೈವರು ಅಥವಾ ವೀರಶೈವ ವಿದ್ವಾಂಸರುಗಳ ಹತೋಟಿಯಲ್ಲಿದ್ದ ಇಂತಹ ಶಿಕ್ಷಣ ಕೇಂದ್ರಗಳನ್ನು 'ಶಿವಪುರ'[15] (ಶಿವಪುರಿ, ಪುರ) ಗಳೆಂದೂ ಕರೆಯುತ್ತಿದ್ದುದಾಗಿ ಡಾ। ಜಿ.ಎಸ್. ದೀಕ್ಷಿತ್ ತಿಳಿಸಿದ್ದಾರೆ.[16] ಕ್ರಿ.ಶ.೧೫ ಮತ್ತು ೧೬ನೇ ಶತಮಾನದ ಆರಂಭದವರೆಗೂ ಬೆಂಗಳೂರಿನ ಸುತ್ತಮುತ್ತ ಇಂತಹ ಅನೇಕ 'ಶಿವಪುರ' ಅಥವಾ 'ಪುರ'ವೆಂಬ ಅಭಿಧಾನವುಳ್ಳ ಗ್ರಾಮಗಳು ಹುಟ್ಟಿಕೊಂಡಿವೆ. ಮುಂದೆ ೨೦ನೆಯ ಶತಮಾನದ ಆರಂಭದವರೆಗೂ ಬೆಂಗಳೂರಿನ ಹಳೆಯ ತಾಲ್ಲೂಕು ಒಂದರಲ್ಲೇ ೭೪ 'ಪುರ'ವೆಂಬ ಅಭಿಧಾನವುಳ್ಳ ಗ್ರಾಮಗಳ ಪಟ್ಟಿಯೇ ದೊರೆಯುತ್ತದೆ.[17] ಬಹುಶಃ ಇವುಗಳಲ್ಲಿ ಬಹುತೇಕ ಪುರಗಳು ಯಲಹಂಕದ ಪ್ರಭುಗಳು ಹಾಗೂ ಅವರಿಗೂ ಮುಂಚಿನ ಕಾಲ (ಕ್ರಿ.ಶ. ೧೨-೧೬)ದಲ್ಲಿಯೇ ನಿರ್ಮಾಣವಾದುವಾಗಿದ್ದು, ಇವು ಶೈವರ ಅಥವಾ ವೀರಶೈವರ ವಿದ್ಯಾಕೇಂದ್ರಗಳೇ ಆಗಿದ್ದಿರಬೇಕು ಎನಿಸುತ್ತದೆ.

ಬೆಂಗಳೂರಿನ ವೀರಶೈವ ಮಠಗಳ ಶೈಕ್ಷಣಿಕ ಸೇವೆಯನ್ನು ಕುರಿತು ಚರ್ಚಿಸುವಾಗ, ಅವು ಸ್ವಾತಂತ್ರ್ಯ ಪೂರ್ವದಲ್ಲಿ ಶೈಕ್ಷಣಿಕವಾಗಿ ಎಷ್ಟರಮಟ್ಟಿಗೆ ತೊಡಗಿಸಿಕೊಂಡಿದ್ದವು ಎಂಬುದರ ಬಗೆಗೆ ಮುಂದೆ ಪರಿಶೀಲಿಸಲಾಗಿದೆ. ಹಿಂದೆಯೇ ಪ್ರಸ್ತಾಪವಾದಂತೆ ಮಠ ಎಂದಾಕ್ಷಣ, ಅದರ ಸಾಲಿಮಠ (ಶಾಲೆ) ಹಾಗೂ ಪ್ರಸಾದ ನಿಲಯ (ವಿದ್ಯಾರ್ಥಿ ನಿಲಯ)ಗಳು ಒಟ್ಟಿಗೇ ಇರುವಂತಹವು. ಆದ್ದರಿಂದ ಇಲ್ಲಿ ಪ್ರತಿಯೊಂದು ಮಠದ ವಿಚಾರ ಬಂದಾಗಲೂ ಅದರ ಶೈಕ್ಷಣಿಕ ಸೇವೆಯ ಜೊತೆಗೆ, ಅದಕ್ಕೆ ಪೋಷಕವಾಗಿದ್ದ ವಿದ್ಯಾರ್ಥಿನಿಲಯಗಳ ವಿಚಾರವಾಗಿಯೂ ಒಟ್ಟಿಗೆ ಚರ್ಚೆ ಮಾಡಲಾಗಿರುತ್ತೆ. ಏಕೆಂದರೆ ಜ್ಞಾನದಾನ ಮತ್ತು ಅನ್ನದಾನಗಳು ಮಠಗಳಲ್ಲಿ ಒಟ್ಟೊಟ್ಟಿಗೇ ನಡೆದಿರುವುದನ್ನು ಗುರುತಿಸಲು ಅನೇಕ ದೃಷ್ಟಾಂತಗಳಿವೆ.

### ೫.೧. ಧರ್ಮಶಾಲಾಮಠ

ಬೆಂಗಳೂರಿನ ಚಿಕ್ಕಪೇಟೆಯಲ್ಲಿ ತೂಗದ ಅಚ್ಚಪ್ಪನ ಮನೆಯ ಮಗ್ಗುಲಿಗೆ ಒಂದು ಶಾಸನವಿತ್ತು. ಇದರ ಕಾಲ ಕ್ರಿ.ಶ. ೧೬೩೩.[18] ಈ ಶಾಸನದಲ್ಲಿ ಉಲ್ಲೇಖವಾಗಿರುವ "ಧರ್ಮಶಾಲಾಮಠ"ವು ಇಮ್ಮಡಿ ಕೆಂಪೇಗೌಡನ ಕಾಲದ ಪ್ರಥಮ ವೀರಶೈವಮಠವಿದೆಂದು ಗುರುತಿಸಲು ಅವಕಾಶವಿದೆ. ಏಕೆಂದರೆ ಈ ಶಾಸನದಲ್ಲಿ ಉಕ್ತವಾಗಿರುವ ಇಮ್ಮಡಿಕೆಂಪೇಗೌಡನ ಗುರು (ಅಯ್ಯ)ಗಳೇ ಗುಮ್ಮಳಾಪುರದ ಮಠದ ಶಾಸನದಲ್ಲಿ ಉಕ್ತವಾಗಿರುವ ನಂಜೇದೇವಪ್ಪ

ಅಯ್ಯನವರು ಎಂಬುದು ಸ್ಪಷ್ಟವಾಗಿದೆ.[19] ಜೊತೆಗೆ ಗುಮ್ಮಳಾಪುರದ ಮಠವು ವೀರಸಿಂಹಾಸನದ ಬಾಳೆಹೊನ್ನೂರು ಪರಂಪರೆಗೆ ಸೇರಿರುವ ಮಠವಾದ್ದರಿಂದ,[20] ಮೇಲ್ಕಂಡ ಗುರುವಿಗೆ ಬೆಂಗಳೂರಿನ ಗುಜ್ಜರಿ ವಿಶ್ವನಾಥನು ನಿರ್ಮಿಸಿಕೊಟ್ಟ 'ಧರ್ಮಶಾಲಾಮಠ'ವು ವೀರಶೈವ ಮಠವೇ ಆಗಿತ್ತು ಎಂಬುದು ಖಚಿತವಾದ ವಿಚಾರ.

ಇಲ್ಲಿ 'ಧರ್ಮಶಾಲಾ' ಎಂಬ ಪದವು ಸೂಚಿಸುವಂತೆ, 'ಬಡವರ ಅಥವಾ ನಿರ್ಗತಿಕರ ವಸತಿಗಾಗಿ ಏರ್ಪಡಿಸಿದ್ದ ಒಂದು ಆಶ್ರಯಸ್ಥಾನ ಅಥವಾ ಅನ್ನಛತ್ರ' ಇದಾಗಿತ್ತು.[21] ಹಾಗೆಯೇ 'ಮಠ' ಎಂಬ ಪದವು ಸೂಚಿಸುವಂತೆ 'ಸನ್ಯಾಸಿಗಳು ಅಥವಾ ಗುರು-ಶಿಷ್ಯರು ಒಟ್ಟಿಗೆ ವಾಸಿಸುವ ಕುಟೀರ'ವಾಗಿತ್ತು.[22] ಈ ಹಿನ್ನೆಲೆಯಲ್ಲಿ ಮೇಲ್ಕಂಡ 'ಧರ್ಮಶಾಲಾಮಠ'ವು ಪಾಠಶಾಲೆ ಹಾಗೂ ವಿದ್ಯಾರ್ಥಿನಿಲಯಗಳನ್ನು ಹೊಂದಿದ್ದ ಬೆಂಗಳೂರಿನ ಪ್ರಥಮ ವೀರಶೈವ ಮಠವಿದೆಂದು ಖಚಿತವಾಗಿ ಹೇಳಬಹುದಾಗಿದೆ. ಬಹುಶಃ ಆ ಕಾಲದಲ್ಲಿ ಧಾರ್ಮಿಕ ಶಿಕ್ಷಣವನ್ನು ನೀಡುತ್ತಿದ್ದ ಪ್ರಮುಖ ವಿದ್ಯಾಕೇಂದ್ರವಿದಾಗಿದ್ದಿರಬೇಕು.

**೫.೨. ಕಲ್ಲುಮಠದ ಕೂಲಿಮಠ**

ಮೇಲ್ಕಂಡ ಮಾದರಿಯದೇ ಇನ್ನೊಂದು ಮಠ ನಗರದ ಬಳೆಪೇಟೆಗೆ ಸೇರಿದ ಕಲ್ಲುಮಠ. ಹಿಂದೆ ಈ ಮಠವನ್ನು 'ಕೂಲಿಮಠ'ವೆಂದೇ ಕರೆಯಲಾಗುತ್ತಿತ್ತು. ೧೯೨೦ರ ವರೆಗೂ ಇಲ್ಲಿ ಓದಿಸುವ ಅಯ್ಯಗಳಿದ್ದು ವಿದ್ಯಾರ್ಥಿಗಳಿಗೆ ಮರಳಿನ ಮೇಲೆ ಅಕ್ಷರಗಳನ್ನು ತಿದ್ದಿಸುತ್ತಿದ್ದರಂತೆ.[23] ಹೀಗೆ ಮಠದಲ್ಲಿ ಓದಿಸುವ ಅಯ್ಯಗಳು (ಜಂಗಮರು) ಇದ್ದುದರ ಸಂಕೇತವಾಗಿ, ಬಹಳ ಹಿಂದಿನಿಂದಲೂ ಈ ಮಠದ ಹಿಂಭಾಗದ ರಸ್ತೆ(ಬೀದಿ)ಯನ್ನು 'ಜಂಗಮ ಮಾಸ್ತರಗಲ್ಲಿ'[24] ಎಂದೇ ಕರೆಯುವುದು ಇಂದಿಗೂ ರೂಢಿಯಲ್ಲಿ ಉಳಿದಿದೆ.

ಪ್ರಾಚೀನಕಾಲದಿಂದಲೂ ಜ್ಞಾನದಾನ ಮತ್ತು ಅನ್ನದಾನಗಳನ್ನು ನಡೆಸುತ್ತಿದ್ದ ನಗರದ ಪ್ರಮುಖ ಮಠವಿದೆಂಬುದು ಸ್ಥಳೀಯರ ನಂಬಿಕೆ. ಮುಜರಾಯಿ ಇಲಾಖಾ ದಾಖಲೆಗಳ ಪ್ರಕಾರ ೧೮೦೮ರ 'ಹುಜೂರ್ ಜಾರಿಲೆಕ್ಕ'ದಲ್ಲಿ ಈ ಮಠದ ಅಯ್ಯನವರಾಗಿದ್ದ ಗೊಟ್ಟೂರಯ್ಯನವರಿಗೆ, ಮಠದಲ್ಲಿ ನಡೆಯುತ್ತಿದ್ದ ಶಿಷ್ಯಾರ್ಜನೆ ಹಾಗೂ ದೀಪಾರಾಧನೆಗಳಿಗಾಗಿ, ನೆರೆಯ ಹನುಮಂತಪುರ ಗ್ರಾಮದಲ್ಲಿ ಮುಮ್ಮಡಿಕೃಷ್ಣರಾಜ ಒಡೆಯರು ೮ ಕೊಳಗ ೨ ಪಡಿ ಬೀಜವರಿ ವಿಸ್ತೀರ್ಣದ ಜಮೀನುಗಳನ್ನು ಇನಾಮಾಗಿ ನೀಡಿದ್ದರು.[25] ಆದ್ದರಿಂದ ೧೯ನೆಯ ಶತಮಾನದ ಆರಂಭದ ವೇಳೆಗೆ ಮೇಲ್ಕಂಡ ಮಠದಲ್ಲಿ ಧಾರ್ಮಿಕ ಶಿಕ್ಷಣ ಹಾಗೂ ದಾಸೋಹ ವ್ಯವಸ್ಥೆಗಳಿದ್ದುದಾಗಿ ತಿಳಿಯಬಹುದಾಗಿದೆ. ಮುಂದೆ ಇದೇ ಕಾರಣಗಳಿಗಾಗಿ (೧೮೨೨ರ ವರೆಗೂ) ಬೆಂಗಳೂರಿನ ಹದಿನೆಂಟು ಮಠಗಳಿಗೆ ಮುಮ್ಮಡಿಕೃಷ್ಣರಾಜ ಒಡೆಯರು ಬೇರೆ ಬೇರೆ ಇನಾಮುಗಳನ್ನು ನೀಡಿರುವ ದಾಖಲೆಗಳಿವೆ.[26]

**೫.೩. ಬೇಲಿಮಠದ ವೇದಪಾಠಶಾಲೆ**

ಬೆಂಗಳೂರಿನ ಪುರಾತನ ಮಠಗಳಲ್ಲೊಂದಾದ ಬೇಲಿಮಠವು ಈ ಭಾಗದ ಕೆಂಪಿನಸಮಯದ ಮೂಲ ಶಾಖೆಯಾಗಿತ್ತು. ಮಠದ ಪರಂಪರೆಯಲ್ಲಿ ನಾಲ್ಕನೆಯ ಗುರುಗಳಾಗಿದ್ದ ಕೆಂಪುನಂಜೆಸ್ವಾಮಿಗಳ ಕಾಲ (ಕ್ರಿ.ಶ. ೧೮೧೮-೧೮೪೩)ದಲ್ಲಿ, ಮುಂದೆ ತಮ್ಮ ಶಾಖಾ ಮಠಗಳಿಗೆ ಮಠಾಧಿಪತಿಗಳಾಗಬೇಕಾದ ವಟುಗಳನ್ನು ಆರಿಸಿ ತಂದು, ಅವರಿಗೆ ಸೂಕ್ತ ಧರ್ಮಾಧಿಕಾರ ಹಾಗೂ ಮಠಾಧಿಪತ್ಯಗಳಿಗೆ ಸಂಬಂಧಿಸಿದ ಶಿಕ್ಷಣವನ್ನು ಇಲ್ಲಿ ನೀಡಲಾಗುತ್ತಿತ್ತು.[27]

ಮೈಸೂರಿನ ದೊರೆಗಳಾಗಿದ್ದ ಮುಮ್ಮಡಿಕೃಷ್ಣರಾಜ ಒಡೆಯರು ದಿನಾಂಕ : ೧೭.೧೦.೧೮೨೫ರಲ್ಲಿ ಕೆಂಪುನಂಜೆಸ್ವಾಮಿಗಳ ಪರವಾಗಿ ಹೊರಡಿಸಿರುವ ನಿರೂಪದಲ್ಲೂ ಕೂಡ, 'ಮಠದಲ್ಲಿ ಅನೇಕ ಶಿಷ್ಯರೂ, ವಟುಗಳೂ, ಗುರುಗಳೊಂದಿಗೆ ಇದ್ದು, ಜ್ಞಾನಾರ್ಜನೆ ಮಾಡುತ್ತಿದ್ದ' ವಿವರಗಳಿವೆ.[28] ಈ ಕಾರಣಕ್ಕಾಗಿಯೇ ಮಹಾರಾಜರು ಮಠಕ್ಕಾಗಿ ದೊಡ್ಡಬಸವೇಶ್ವರನ ಗುಡಿಗೆ ಹೋಗುವ ಮಾರ್ಗದಲ್ಲಿ ೧೨ ಕಂಠೀರಾಯಿ ವರಹದ ಭೂಮಿಯನ್ನು ಇನಾಮಾಗಿ ನೀಡಿದ್ದರು.[29] ಹೀಗಾಗಿ ಬೇಲಿಮಠದಲ್ಲಿ ೧೯ನೆಯ ಶತಮಾನದ ಆರಂಭದ ವೇಳೆಗಾಗಲೇ ಮಠಾಧಿಪತ್ಯ ಹಾಗೂ ಸನ್ಯಾಸಾಶ್ರಮ ಸ್ವೀಕಾರ ಮಾಡುವವರಿಗೆ ಅಗತ್ಯವಾದ ಧಾರ್ಮಿಕ ಶಿಕ್ಷಣ ಹಾಗೂ ಪ್ರಸಾದದ ವ್ಯವಸ್ಥೆಗಳನ್ನು ಮಾಡಲಾಗುತ್ತಿತ್ತು.

ಆ ಕಾಲದ ವಿದ್ಯಾರ್ಥಿಗಳು ಗುರುಗಳೊಂದಿಗೆ ಮಠದಲ್ಲೇ ವಾಸವಾಗಿದ್ದು ಅವರ ಮಾರ್ಗದರ್ಶನದಲ್ಲಿ ಶಿವಯೋಗ, ತರ್ಕ, ವೇದ, ವ್ಯಾಕರಣ ಹಾಗೂ ಸಂಸ್ಕೃತ ಸಾಹಿತ್ಯಗಳನ್ನು ಅಧ್ಯಯನ ಮಾಡುತ್ತಿದ್ದರು.[30] ಮುಂದೆ ಸಿದ್ಧಲಿಂಗಸ್ವಾಮಿಗಳ ಕಾಲ (ಕ್ರಿ.ಶ. ೧೮೪೩-೧೮೯೯) ದಲ್ಲೂ ಮಠದ ಶೈಕ್ಷಣಿಕ ಸೇವೆಯು ಮುಂದುವರೆದಿತ್ತು. ಆಗ ಇವರ ಉತ್ತರಾಧಿಕಾರಿಗಳಾಗಿದ್ದ ರುದ್ರಸ್ವಾಮಿಗಳು (ಕ್ರಿ.ಶ. ೧೮೫೮-೧೮೯೯) ಬೇಲಿಮಠದ ಶಾಖಾ ಮಠಗಳ ಮೇಲ್ವಿಚಾರಣೆಯ ಜೊತೆಗೆ, ಮಠದಲ್ಲಿ ನಡೆಯುತ್ತಿದ್ದ ಯುವ ವಟುಗಳ ಶಿಕ್ಷಣದ ಜವಾಬ್ದಾರಿಯನ್ನೂ ನಿರ್ವಹಿಸುತ್ತಿದ್ದರು.[31] ೧೮೮೫ರ ವೇಳೆಗೆ ಬೇಲಿಮಠದ ಶಾಲೆಯಲ್ಲಿ ೯ ಮಂದಿ ವಿದ್ಯಾರ್ಥಿ (ವಟುಗಳು) ಇದ್ದುದಾಗಿ ತಿಳಿದುಬರುತ್ತದೆ.[32]

ಮಠದ ಶಿಕ್ಷಣ ವ್ಯವಸ್ಥೆಗೆ ಒಂದು ವಿಶೇಷ ಸ್ವರೂಪ ಬಂದದ್ದು ಶಿವರುದ್ರಸ್ವಾಮಿಗಳ ಕಾಲ (೧೮೯೯-೧೯೪೧) ದಲ್ಲಿ. ಮಠದ ಉಪಯೋಗಾರ್ಥವಾಗಿ ಹಿಂದೆ ೧೮೭೭ರಲ್ಲಿ ಮಹಾರಾಜರು ನೀಡಿದ್ದ ಇನಾಂ ಭೂಮಿಯನ್ನು ಬಸವನಪುರ (ಬಸವನಗುಡಿ) ಬಡಾವಣೆಯ ವಿಸ್ತರಣೆಗಾಗಿ ೧೮೯೮ರಲ್ಲಿ ಸರ್ಕಾರದವರೇ ಸ್ವಾಧೀನಪಡಿಸಿಕೊಂಡರು.[33] ಆಗ ಇದರ ಪರಿಹಾರದ ರೂಪದಲ್ಲಿ ಬಂದ ಹಣದಿಂದ ನೆಲಮಂಗಲದ ಸಮೀಪದ ಹುಸ್ಕೂರು ಗ್ರಾಮದಲ್ಲಿ ಹನ್ನೆರಡೂವರೆ ಎಕರೆ ಖುಷ್ಕಿ ಜಮೀನನ್ನು ಹಾಗೂ ಶ್ರೀರಂಗಪಟ್ಟಣದ ಸಮೀಪ ಕಿರಂಗೂರು ಗ್ರಾಮದ ಬಳಿ ಹನ್ನೆರಡೂವರೆ ಎಕರೆ ತರಿ ಜಮೀನುಗಳನ್ನೂ ಕಂಡುಕೊಂಡರು.[34] ಮುಂದೆ ಮೇಲ್ಕಂಡ ಜಮೀನುಗಳ ಉತ್ಪನ್ನದಿಂದ ಬರುವ ಆದಾಯವನ್ನು ಬಳಸಿ, ಮಠದಲ್ಲಿ ಹಿಂದಿನಿಂದಲೂ ನಡೆದುಬಂದಿದ್ದ ಉಚಿತ ಪಾಠಶಾಲೆ ಹಾಗೂ ವಿದ್ಯಾರ್ಥಿನಿಲಯಗಳು ಶಾಶ್ವತವಾಗಿ ಹಾಗೂ ಅನಿರ್ಬಾಧಿತವಾಗಿ ನಡೆಯುವಂತೆ ವ್ಯವಸ್ಥೆಗೊಳಿಸಿದ್ದರು. ಆಗ ಸಂಸ್ಕೃತ ಮತ್ತು ವೇದಾಧ್ಯಯನಕ್ಕೆ ಮಾತ್ರ ಮೀಸಲಾಗಿದ್ದ ಈ ಶಾಲೆಯಲ್ಲಿ ೧೯೨೫ರ ವೇಳೆಗೆ ೪೦ ಮಂದಿ ವಿದ್ಯಾರ್ಥಿಗಳಿದ್ದರು. ಅಂದಿನ ಪಾಠಶಾಲಾ ಬೋಧಕವರ್ಗದವರಿಗೆ ೬೦/-ರೂಗಳ ಮಾಸಾಶನ ನೀಡಲಾಗುತ್ತಿತ್ತು.[35] ಮೇಲ್ಕಂಡ ಪಾಠಶಾಲೆಯ ನಿರ್ವಹಣೆಗಾಗಿ ಒಂದು ಆಡಳಿತ ಮಂಡಳಿಯನ್ನು ರಚಿಸಲಾಗಿತ್ತು. ಶಿವರುದ್ರಸ್ವಾಮಿಗಳೇ ಅಧ್ಯಕ್ಷರಾಗಿದ್ದ ಈ ಮಂಡಳಿಯಲ್ಲಿ ಸರ್.ಕೆ.ಪಿ. ಪುಟ್ಟಣ್ಣಶೆಟ್ಟರು, ದೇಶದ ಯಜಮಾನ್ ಬಸಪ್ಪ, ಶಂಕರಣ್ಣನವರ ಶಿವಪ್ಪ ಹಾಗೂ ತೂಬುಗೆರೆ ನಂಜಪ್ಪ ಇವರುಗಳು ಸದಸ್ಯರಾಗಿದ್ದರು.[36]

ಮುಂದೆ ಇಮ್ಮಡಿ ಸಿದ್ಧಲಿಂಗಸ್ವಾಮಿಗಳು ಅಧಿಕಾರಕ್ಕೆ ಬಂದಮೇಲೆ ದಿನಾಂಕ:೨೮.೪.೧೯೪೮ರಂದು ಬೇಲಿಮಠದ ಪಾಠಶಾಲೆಗೆ "ಶ್ರೀಶಿವರುದ್ರಸ್ವಾಮಿಗಳ ವೇದ ಪಾಠಶಾಲಾ ಮತ್ತು ಫ್ರೀ ಬೋರ್ಡಿಂಗ್ ಹೋಮ್" ಎಂಬ ನೂತನ ನಾಮಕರಣ ಮಾಡಿದರು.[37] ಇದೇ ಸಂದರ್ಭದಲ್ಲಿ ಬಿನ್ನಿ ಕಂಪೆನಿಯಲ್ಲಿ ೪೦,೧೨೫ ರೂಪಾಯಿಗಳ ಇಡುಗಂಟನ್ನು ಇರಿಸಿ, ಅದರ ಬಡ್ಡಿಯಿಂದ ಬರುವ ಮಾಹೆಯಾನ ೨೫೦ ರೂಪಾಯಿಗಳನ್ನು ಮೇಲ್ಕಂಡ ಫ್ರೀ ಬೋರ್ಡಿಂಗ್ ಹೋಮ್‌ನ (ಉಚಿತ ಪ್ರಸಾದ ನಿಲಯ) ನಿರ್ವಹಣೆಗಾಗಿ ಬಳಕೆಯಾಗುವಂತೆ ಗೊತ್ತುಪಡಿಸಿದ್ದರು.[38] ಈ ಸಂದರ್ಭದಲ್ಲಿ ೮೦ ಮಂದಿ ಗ್ರಾಮಾಂತರ ಭಾಗದ ಬಡವರ್ಗದ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿಯ ಸೌಲಭ್ಯಗಳನ್ನು ಕಲ್ಪಿಸಲಾಗಿತ್ತು. ಆಗ ಮಠದ ಪಾಠಶಾಲೆಯಲ್ಲಿ ಓದುವ ವಿದ್ಯಾರ್ಥಿಗಳ ಜೊತೆಗೆ, ಇನ್ನಿತರ ಸರ್ಕಾರಿ ಶಾಲಾ-ಕಾಲೇಜುಗಳಲ್ಲೂ ಓದುವ ವಿದ್ಯಾರ್ಥಿಗಳಿಗೂ ಇಲ್ಲಿ ಅವಕಾಶ ಮಾಡಿಕೊಡಲಾಗಿತ್ತು. ೧೯೪೫ರ ವೇಳೆಗೆ ಬೇಲಿಮಠದ ಈ ವಿದ್ಯಾರ್ಥಿನಿಲಯವು, ಸ್ವಾತಂತ್ರ್ಯಪೂರ್ವದಲ್ಲಿ ಬೆಂಗಳೂರಿಗೇ ಒಂದು ಮಾದರಿ ಉಚಿತ ಪ್ರಸಾದ ನಿಲಯವಾಗಿತ್ತು.

ಹೀಗೆ ದಿನೇದಿನೆ ಪ್ರವರ್ಧಮಾನಕ್ಕೆ ಬರತೊಡಗಿದ್ದ ಮಠದ ಪಾಠಶಾಲೆ ಹಾಗೂ ಉಚಿತ ವಿದ್ಯಾರ್ಥಿ ನಿಲಯಗಳಿಗೆ ಮಠದ ಆವರಣದೊಳಗಿನ ಜಾಗವು ಸಾಲದೇ ಹೋಯಿತು. ಆಗ ೧೯೫೦ರಲ್ಲಿ ಇಮ್ಮಡಿಸಿದ್ಧಲಿಂಗಸ್ವಾಮಿಗಳು ಶಂಕರಪುರ ಬಡಾವಣೆಯಲ್ಲಿ ೮೦,೦೦೦ ರೂಪಾಯಿಗಳಿಗೆ ವಿಶಾಲ ಕಟ್ಟಡವುಳ್ಳ ಒಂದು ನಿವೇಶನವನ್ನೇ ಖರೀದಿಸಿದರು.[39] ಇದುವರೆಗೆ ಬಿನ್ನಿ ಕಂಪೆನಿಯಲ್ಲಿದ್ದ ಇಡುಗಂಟನ್ನು ವಾಪಸುಪಡೆದು, ಈಗ ಒಂದು ಲಕ್ಷದ ಎರಡುಸಾವಿರ ರೂಪಾಯಿಗಳ ಬೃಹತ್ ಮೊತ್ತವನ್ನು ಧಾರ್ಮಿಕ ದತ್ತಿ ಇಲಾಖೆಯಲ್ಲಿ ಇರಿಸಲಾಯಿತು.[40] ಈ ಮೂಲಧನವನ್ನು ಶಾಶ್ವತವಾಗಿ ಇರಿಸಿ ಇದರಿಂದ ಬಂದ ಬಡ್ಡಿಯ ಹಣವನ್ನು

ಪಾಠಶಾಲೆ ಹಾಗೂ ವಿದ್ಯಾರ್ಥಿ ನಿಲಯಗಳಿಗೇ ಖಾಯಂ ಆಗಿ ವಿನಿಯೋಗವಾಗುವಂತೆ ಯೋಜನೆಯೊಂದನ್ನು ರೂಪಿಸಿದ್ದರು. ನೂತನವಾಗಿ ನಿರ್ಮಾಣ ಮಾಡಲಾಗಿದ್ದ ಶಂಕರಪುರದ ''ಶ್ರೀ ಶಿವರುದ್ರಸ್ವಾಮಿಗಳ ವೈದಿಕ ವಿದ್ಯಾರ್ಥಿನಿಲಯ''ವನ್ನು ದಿನಾಂಕ:೧೬.೧೧.೧೯೫೦ರಲ್ಲಿ ಮೈಸೂರಿನ ಮಹಾರಾಜರಾಗಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರು ಉದ್ಘಾಟಿಸಿದ್ದರು.[41] ಇಲ್ಲಿ ೧೫೦ ಮಂದಿ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿ ಸೌಲಭ್ಯಗಳನ್ನು ಕಲ್ಪಿಸಲಾಗಿತ್ತು.

೧೯ನೆಯ ಶತಮಾನದ ಆದಿಭಾಗದಿಂದ ೨೦ನೆಯ ಶತಮಾನದ ಮಧ್ಯಭಾಗದವರೆಗೆ ನಿರಂತರವಾಗಿ ಜನಸೇವೆಯನ್ನು, ಅದರಲ್ಲೂ ವೀರಶೈವ ಸಮಾಜದವರ ಶೈಕ್ಷಣಿಕ ಸೇವೆಯನ್ನು ಮುನ್ನಡೆಸಿಕೊಂಡು ಬಂದುದು ಬೇಲಿಮಠದ ಮಹತ್ವದ ಸಾಧನೆಯಾಗಿದೆ. ಮಠದ ಈ ಸಾರ್ಥಕ ಸೇವೆಯನ್ನು ಗಮನಿಸಿದ್ದ ಅಂದಿನ ರಾಜ್ಯ ಸರ್ಕಾರವು ೧೯೫೭ರಲ್ಲಿ ವಿದ್ಯಾರ್ಥಿನಿಲಯದ ಅಭಿವೃದ್ಧಿಗಾಗಿ, ನಗರದ ಯಶವಂತಪುರದ ಬಳಿ ೩೦ ಎಕರೆ ಜಮೀನನ್ನೂ ಮಂಜೂರು ಮಾಡಿತ್ತು.[42] ಮುಂದೆ ಸ್ವತಂತ್ರ ಭಾರತದ ಸಾರ್ವತ್ರಿಕ ಶಿಕ್ಷಣ ನೀತಿಯ ಪ್ರಭಾವದಿಂದಾಗಿ ಮಠದ ಈ ವೈದಿಕ ಪಾಠಶಾಲೆಯು ೧೯೬೫ರ ವೇಳೆಗೆ ಸ್ಥಗಿತಗೊಂಡಿತ್ತಾದರೂ, ವಿದ್ಯಾರ್ಥಿನಿಲಯವು ೧೯೯೦ರ ವರೆಗೂ ಮುಂದುವರೆದಿತ್ತು.

### ೫.೪. ಗಂಜಾಂಮಠದ ಶ್ರೀ ಪ್ರಮಥಗಣ ಮನೋರಂಜಿನಿ ಸಂಸ್ಕೃತ ಪಾಠಶಾಲೆ

ಬೆಂಗಳೂರಿನ ಮುರಿಗಾ ಸಮಯದ ಮೂಲ ಮಠವೇ ಮಾಮೂಲುಪೇಟೆಯ ಜಂಗಮಮಠ ಅಥವಾ ಈಗಿನ ಗಂಜಾಂಮಠ. ಇದರ ಮುಂದುವರೆದ ಶಾಖೆಯೇ ಈಗಿನ ಗಾಂಧಿನಗರದ ತಿಪ್ಪಶೆಟ್ಟಿಮಠ.[43] ಗಂಜಾಂ ಮಠವನ್ನು ದಿನಾಂಕ:೧೨.೭.೧೮೮೬ರಂದು ಮಾಮೂಲುಪೇಟೆಯ ಚನ್ನವೀರಶೆಟ್ಟರು ಹಾಗೂ ಅವರ ಮಗ ದಿಗಂಬರಶೆಟ್ಟರು ಇಬ್ಬರೂ ಕೂಡಿ ಹೆಗ್ಗುಂದದ ನಂಜುಂಡಸ್ವಾಮಿಗಳಿಗೆ 'ಶಿವಾರ್ಪಿತ'ವಾಗಿ ದಾನ ಮಾಡಿದ್ದರು.[44] ಈ ದಾನಿಗಳ ಉದಾರ ನೆರವಿನಿಂದಾಗಿ ಮುಂದೆ ದಿನಾಂಕ: ೧೫.೧೨.೧೮೮೬ರಂದು ಗಂಜಾಂಮಠದಲ್ಲಿ ನಂಜುಂಡ ಸ್ವಾಮಿಗಳು ''ಶ್ರೀ ಪ್ರಮಥಗಣ ಮನೋರಂಜಿನಿ ಸಂಸ್ಕೃತ ಪಾಠಶಾಲೆ''ಯನ್ನು ಪ್ರಾರಂಭಿಸಿದರು.[45]

ನಂಜುಂಡಸ್ವಾಮಿಗಳೇ ಹೇಳಿಕೊಂಡಿರುವಂತೆ ಶಾಲೆಯ ಪ್ರಾರಂಭದ ಹಿನ್ನೆಲೆ ಸ್ವಾರಸ್ಯಕರವಾಗಿದೆ. ''ಹಿಂದೆ ವೀರಶೈವ ಮತ ವಿಶಾರದರೂ, ವಿದ್ವಾಂಸರುಗಳೂ, ಅನೇಕ ಸಿದ್ಧಾಂತ ಗ್ರಂಥಗಳನ್ನು ರಚಿಸಿದ್ದರು. ಇತ್ತೀಚೆಗೆ ಅಂತಹ ಪಂಡಿತರಾಗಲಿ ಮತರಕ್ಷಕರಾದ ಕ್ಷತ್ರಿಯರಾಗಲಿ ಕಡಿಮೆಯಾಗುತ್ತಾ ಬಂದು, ಆಧುನಿಕರಲ್ಲಿ ಸಿದ್ಧಾಂತ ಗ್ರಂಥಗಳನ್ನೋದುವ ಶಕ್ತಿಯೂ ಕೂಡ ದುರ್ಬಲವಾಗತೊಡಗಿದೆ. ಜೊತೆಗೆ ವೀರಶೈವರ ದಾಸೋಹದ ಗುರುಮಠಗಳೂ, ರಾಜಾಶ್ರಯಗಳೂ ನಿಂತುಹೋಗಿವೆ. ವೀರಶೈವ ಭಕ್ತ ಮಾಹೇಶ್ವರ ಗುರುಗಳು ಕಡಿಮೆಯಾಗಿ ಬಿಟ್ಟಿದ್ದಾರೆ. ಈಚೆಗೆ ರಾಜಾಶ್ರಯವನ್ನು ಪಡೆದ ಅಲಿಂಗಿ ಬ್ರಾಹ್ಮಣರು ಓದಲಿಚ್ಛಿಸಿ ಬಂದ ವೀರಶೈವ ವಿದ್ಯಾರ್ಥಿಗಳನ್ನು ತುಚ್ಛೀಕರಿಸುತ್ತಿದ್ದಾರೆ. ಧನಿಕ ಶ್ರೇಷ್ಠರೂ ಇನ್ನೂ ಮುಂತಾದವರೂ ಇಂತಹ ವಿದ್ಯಾರ್ಥಿಗಳಿಗೆ ಅನ್ನೋದಕಗಳನ್ನು ನೀಡಿ ವಿದ್ಯಾಭ್ಯಾಸ ಕಲ್ಪಿಸುವುದಾದರೆ ಮುಂದಾದರೂ ವೀರಶೈವ ಸಮಾಜಕ್ಕೆ ಒಳಿತಾಗುವುದು.[46] ಈ ನಿಟ್ಟಿನಲ್ಲಿ ಆದರ್ಶಪ್ರಾಯವಾಗಿ ಪ್ರಮಥಗಣ ಮನೋರಂಜಿನಿ ಸಂಸ್ಕೃತಪಾಠಶಾಲೆಯನ್ನು ಪ್ರಾರಂಭಿಸಿದ್ದಾಗಿ ತಿಳಿದುಬರುತ್ತದೆ.

ಪ್ರಾರಂಭದ ದಿನಗಳಲ್ಲಿ ಈ ಶಾಲೆಯಲ್ಲಿ ಹತ್ತು ಮಂದಿ ವಿದ್ಯಾರ್ಥಿಗಳಿದ್ದರು. ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿಗಳನ್ನು ಮಠದಲ್ಲೇ ವ್ಯವಸ್ಥೆಗೊಳಿಸಲಾಗಿತ್ತು. ಮಾಹೆಯಾನ ವೇತನಾದಿ ಖರ್ಚು ವೆಚ್ಚಗಳನ್ನು ಮಾಮೂಲುಪೇಟೆಯಲ್ಲಿದ್ದ ಗುಬ್ಬಿ ತೋಟದಪ್ಪನವರು ಭರಿಸುತ್ತಿದ್ದರು.[47] ಈ ರೀತಿ ಪ್ರಾರಂಭವಾದ ಗಂಜಾಂ ಮಠದ ಪಾಠಶಾಲೆ ಮುಂದಿನ ಏಳೆಂಟು ವರ್ಷಗಳಲ್ಲಿ ಎಷ್ಟೊಂದು ಪ್ರವರ್ಧಮಾನಕ್ಕೆ ಬಂದಿತ್ತೆಂದರೆ, ಅಂದಿನ ಮುರಿಗಾಸಂಸ್ಥಾನದ ಜಗದ್ಗುರುಗಳಾಗಿದ್ದ ಬ್ಯಾಡಗಿಮುಪ್ಪಿನಪ್ಪನವರು ನಂಜುಂಡಸ್ವಾಮಿಗಳಿಗೆ ದಿನಾಂಕ: ೨೩.೬.೧೮೯೪ರಂದು ಪತ್ರವೊಂದನ್ನು ಬರೆದು, ನಮ್ಮ ಸಂಸ್ಥಾನದ ಮುಂದಿನ ಮರಿ(?) ''ಮುರಿಗ್ಯಾಮರಿ''ಯನ್ನು ನಿಮ್ಮ ಬಳಿಗೆ ಕಳುಹಿಸಿದ್ದೇವೆ. ನಿಮ್ಮಲ್ಲಿ ನಡೆಯುತಕ್ಕ ವಿಶೇಷ ಅಭ್ಯಾಸಗಳನ್ನು ಮಾಡಿಸಿ, ಮರಿಗೆ ಉಚಿತ

ಊಟೋಪಚಾರಗಳನ್ನು ಮಾಡಬೇಕಾಗಿ ಸೂಚಿಸಿದ್ದಾರೆ.[48] ಅಂದರೆ ಮುರಿಗಾ ಸಂಸ್ಥಾನದಂತಹ ಪ್ರಸಿದ್ಧ ಹಾಗೂ ಪ್ರತಿಷ್ಠಿತ ಪೀಠವೊಂದರ, ಮುಂದಿನ ಪೀಠಾಧಿಪತಿ ಯಾಗತಕ್ಕ ನಿಯೋಜಿತ ವಟುವಿಗೆ, ಬೆಂಗಳೂರಿನ ಗಂಜಾಂಮಠದಲ್ಲಿ ಉನ್ನತ ಶಿಕ್ಷಣ ನೀಡಿದ ವಿಚಾರ ಸಾಮಾನ್ಯವಾದುದೇನಲ್ಲ.

ನಂಜುಂಡಸ್ವಾಮಿಗಳ ಶಿಷ್ಯ (ಉತ್ತರಾಧಿಕಾರಿ)ರಾಗಿದ್ದ ಚಿದ್ಘನಶಿವಾಚಾರ್ಯರು ಮೇಲ್ಕಂಡ ಪಾಠಶಾಲೆ ಹಾಗೂ ಪ್ರಸಾದ ನಿಲಯಗಳ ಸುಭದ್ರ ಕಟ್ಟಡಗಳ ನಿರ್ಮಾಣಕ್ಕಾಗಿ ನಾಡಿನ ನಾನಾ ಭಾಗದ ಭಕ್ತರಿಂದ ಧರ್ಮಭಿಕ್ಷೆಯನ್ನು ಸಂಗ್ರಹಿಸಿದ್ದರು.[49] ಅದರಲ್ಲೂ ಶಿವಮೊಗ್ಗ, ಚಿಕ್ಕಮಗಳೂರು ಹಾಗೂ ಸಕಲೇಶಪುರ ಪ್ರಾಂತ್ಯದ ಅನೇಕ ಭಕ್ತರು ಮಠದ ಶೈಕ್ಷಣಿಕ ಸೇವೆಗೋಸ್ಕರ ಉದಾರ ಧನ ಸಹಾಯ ನೀಡಿದ ದಾಖಲೆಗಳಿವೆ.[50] ಇದೇ ಸಂದರ್ಭ (೧೯೧೧)ದಲ್ಲಿ ಮಠದ ಈ ಸತ್ಕಾರ್ಯಕ್ಕೋಸ್ಕರ ಗುಬ್ಬಿಯ ಪಾರ್ವತಮ್ಮನವರು ತಮ್ಮ ಚರ-ಸ್ಥಿರ ಸ್ವತ್ತು (೨೧೦೦/-ರೂ ಮೌಲ್ಯದ)ಗಳನ್ನೆಲ್ಲಾ ಚಿದ್ಘನಸ್ವಾಮಿಗಳಿಗೆ ದಾನವಾಗಿ ಅರ್ಪಿಸಿದ್ದರು.[51] ಚಿದ್ಘನಸ್ವಾಮಿಗಳು ತೀರಿಕೊಂಡ(೧೯೧೧ರಲ್ಲಿ) ಕೆಲವೇ ವರ್ಷಗಳಲ್ಲಿ (೧೯೧೬ರಲ್ಲಿ) ಮೇಲ್ಕಂಡ ಪಾಠಶಾಲೆಯನ್ನು "ಶ್ರೀಮನ್‌ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ವೈದಿಕ ಪಾಠಶಾಲೆ" ಎಂಬುದಾಗಿ ಪುನರ್‌ನಾಮಕರಣ ಮಾಡಲಾಗಿತ್ತು.[52] ಈ ವೇಳೆಗೆ ಮಠದ ಶಾಲೆಯಲ್ಲಿದ್ದ ೧೩ ಮಂದಿ ವಿದ್ಯಾರ್ಥಿಗಳು ಯಾರೆಂದರೆ...

೧. ಗಂಜಾಂಮಠದ ಮರಿ ಬಸವರಾಜದೇವರು.
೨. ಗೂಳೂರು ನಡುವಣಮಠದ ಮರಿ ಚನ್ನಬಸವ ಸ್ವಾಮಿ.
೩. ತುಮಕೂರು ಮುರುಘಾಮಠದ ಮರಿ ಸಿದ್ಧಲಿಂಗಸ್ವಾಮಿ.
೪. ಮಾಗಡಿ ಅರೆಶಂಕರದೇವರ ಮಠದ ಶಂಕರದೇವರು.
೫. ಐಕಂಡಳ್ಳಿ ಮಠದ ಷಣ್ಮುಖದೇವರು.
೬. ಚಿಕ್ಕಮಗಳೂರು ಮಠದ ಪ್ರಭುಲಿಂಗದೇವರು.
೭. ನಿಜಗಲ್ಲಿನ ಮಠದ ಮರಿ ವೀರಾರಾಧ್ಯ.
೮. ಮೈಲನಹಳ್ಳಿ ಮಠದ ಮರಿ ಸಿದ್ಧಲಿಂಗದೇವರು.
೯. ಹಾಸನ ಮಠದ ಮರಿ ಬಸವಲಿಂಗಾರಾಧ್ಯ.
೧೦. ಕಲ್ಯದ ಹುಚ್ಚಪ್ಪಾರಾಧ್ಯ.
೧೧. ಕರೂರು ಗುರುಲಿಂಗಾರಾಧ್ಯ.
೧೨. ಚಿಕ್ಕನಹಳ್ಳಿ ಸಿದ್ಧಾರಾಧ್ಯ.
೧೩. ತುಮಕೂರಿನ ಕುಪ್ಪಾರಾಧ್ಯ.[53]

ಇವರಲ್ಲಿ ೯ ಮಂದಿ ವಿದ್ಯಾರ್ಥಿಗಳು ನಿಯೋಜಿತ ಮಠಗಳ ಉತ್ತರಾಧಿಕಾರಿಗಳಾಗಿದ್ದು, ಉಳಿದ ೪ ಮಂದಿ ಮಾತ್ರ ಇತರೆ ವಿದ್ಯಾರ್ಥಿಗಳಾಗಿದ್ದರು. ಅಂದಿನ ವಿದ್ಯಾರ್ಥಿಗಳು ಅಭ್ಯಸಿಸುತ್ತಿದ್ದ ಪಠ್ಯವಿಷಯ ಗಳಾವುವೆಂದರೆ - ರಘುವಂಶದ ಪ್ರಥಮಸರ್ಗ, ಶಬ್ದರತ್ನಾವಳಿಕೋಶ, ಜ್ಯೋತಿಷ್ಯ, ಬಾಲಬೋಧೆ, ಮುಹೂರ್ತದರ್ಪಣ ಹಾಗೂ ವೇದಪಾಠ ಇವೇ ಮೊದಲಾದುವಿದ್ದವು. ಆಗ ಮಾಗಡಿಯ ಎಸ್.ವೀರಪ್ಪಶಾಸ್ತ್ರಿಗಳು ಗಂಜಾಂಮಠದ ಪಾಠಶಾಲ್ಲಾದ ಮುಖ್ಯ ಬೋಧಕರಾಗಿದ್ದರು.[54] ಮುಂದೆ ನಾಡಿನ ಪ್ರಸಿದ್ಧ ವಿದ್ವಾಂಸರುಗಳಾಗಿದ್ದ ಬಿ. ಶಿವಮೂರ್ತಿಶಾಸ್ತ್ರಿ, ಎಂ.ಜಿ.ನಂಜುಂಡಾರಾಧ್ಯ, ಟಿ.ಜಿ. ಸಿದ್ಧಪ್ಪಾರಾಧ್ಯ, ಎಂ.ಎಸ್. ಬಸವರಾಜಯ್ಯ ಇವರೇ ಮೊದಲಾದವರು ಗಂಜಾಂಮಠದ ಪಾಠಶಾಲೆಯ ವಿದ್ಯಾರ್ಥಿಗಳಾಗಿದ್ದುದಾಗಿ ತಿಳಿದುಬರುತ್ತದೆ.[55]

ಅನಂತರ ೧೯೨೪ರ ಸೆಪ್ಟೆಂಬರ್ ೧೫ರಿಂದ ಗಂಜಾಂಮಠದ ಪಟ್ಟಾಧಿಕಾರಿಗಳಾಗಿ ಬಂದ ಬಸವರಾಜ ಸ್ವಾಮಿಗಳು[56] ತಮ್ಮ ಹಿರಿಯರು ಮುನ್ನಡೆಸಿಕೊಂಡು ಬಂದಿದ್ದ ಪಾಠಶಾಲೆಯನ್ನು ಯಥಾಪ್ರಕಾರ ಕಾಪಾಡಿಕೊಂಡು ಬಂದರು. ಇವರ ಕಾಲಕ್ಕೆ ಮಠದ ವಿದ್ಯಾರ್ಥಿನಿಲಯದಲ್ಲಿ ೪೦ ಮಂದಿ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿಗಳನ್ನು ಕಲ್ಪಿಸಲಾಗಿತ್ತು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಆಗವು ಪ್ರಾಧ್ಯಾಪಕರಾಗಿದ್ದ ಕೆ.ಎಂ. ರಾಜಶೇಖರಯ್ಯ, ಮರಳೆಗವಿಮಠದ ಕಾಲಾಗ್ನಿರುದ್ರ ಮುನಿಸ್ವಾಮಿಗಳು, ಬೇಲಿಮಠದ ಶಿವರುದ್ರಸ್ವಾಮಿಗಳು ಇವರೇ ಮೊದಲಾದವರು ಬಸವರಾಜಸ್ವಾಮಿಗಳ ಶಿಷ್ಯರಾಗಿದ್ದರು.[57] ಗಂಜಾಂಮಠದ ಶಾಲೆ ಹಾಗೂ ವಿದ್ಯಾರ್ಥಿನಿಲಯಗಳು ೧೯೬೫ರ ವೇಳೆಗೆ ನಿಂತುಹೋಗಿದ್ದವು.

ಬಹಳ ಹಿಂದಿನಿಂದಲೂ ಈ ಪಾಠಶಾಲೆಯಲ್ಲಿ ಒಂದು ಅಮೂಲ್ಯ ಗ್ರಂಥಭಂಡಾರವಿತ್ತು. ೧೯೬೨ರ ಪಟ್ಟಿಯ ಪ್ರಕಾರ ಇಲ್ಲಿ ಒಟ್ಟು ೧೪,೩೦೬ ಕೃತಿಗಳನ್ನು ಸಂಗ್ರಹಿಸಲಾಗಿತ್ತು. ಇವುಗಳಲ್ಲಿ ಕನ್ನಡ ಮತ್ತು ಸಂಸ್ಕೃತದ ಕೃತಿಗಳು ಸಮಪ್ರಮಾಣದಲ್ಲಿದ್ದು, ಹಲವಾರು ಇಂಗ್ಲೀಷ್ ಹಾಗೂ ಹಿಂದಿ ಭಾಷಾ ಕೃತಿಗಳೂ ಇದ್ದವು.[58]

ಇನ್ನೊಂದು ಮುಖ್ಯವಾದ ವಿಚಾರವೇನೆಂದರೆ, ಗಂಜಾಂಮಠದ ಅಧಿಪತಿಗಳಾಗಿದ್ದ ನಂಜುಂಡಸ್ವಾಮಿಗಳು, ಚಿದ್ಘನಸ್ವಾಮಿಗಳು ಹಾಗೂ ಬಸವರಾಜಸ್ವಾಮಿಗಳು ಇವರೆಲ್ಲಾ, ಸ್ವತಃ ವೇದ, ಆಗಮ, ಪುರಾಣಾದಿ ಸಂಸ್ಕೃತ ಮತ್ತು ಕನ್ನಡ ಉಭಯಭಾಷಾ ಪ್ರವೀಣರಾಗಿದ್ದು, ತಾವೂ ಪಾಠಶಾಲಾ ಪ್ರಾಧ್ಯಾಪಕರುಗಳಾಗಿ ಸೇವೆ ಸಲ್ಲಿಸಿದ್ದುದು ಮಠಗಳ ಇತಿಹಾಸದಲ್ಲೇ ವಿಶೇಷವಾದ ಸಂಗತಿಯಾಗಿದೆ.

### ೫.೫. ಸರ್ಪಭೂಷಣಮಠದ ಶ್ರೀಮದ್ವೀರಶೈವ ಸಂಸ್ಕೃತ ಧರ್ಮಪಾಠಶಾಲೆ

ಬೆಂಗಳೂರಿನ ಸರ್ಪಭೂಷಣ (ಸಪ್ಪಣ್ಣಸ್ವಾಮಿ) ಮಠದಲ್ಲಿ ಬಹಳ ಹಿಂದಿನಿಂದಲೂ ಸಮಾಜೋದ್ಧಾರ್ಮಿಕ ಸೇವಾ ಚಟುವಟಿಕೆಗಳು ನಡೆದು ಬಂದಿದ್ದವಾದರೂ, ಅಧಿಕೃತವಾಗಿ ಶೈಕ್ಷಣಿಕ ಚಟುವಟಿಕೆ ಪ್ರಾರಂಭವಾದದ್ದು ಮಠದ ನಾಲ್ಕನೆಯ ಗುರುಗಳಾಗಿದ್ದ ಚನ್ನಬಸವಸ್ವಾಮಿಗಳ ಕಾಲದಿಂದ. ಇವರು ೧೮೫೪ರಲ್ಲಿ ಮೊಟ್ಟಮೊದಲಿಗೆ ಸರ್ಪಭೂಷಣ ಮಠದಲ್ಲಿ "ಶ್ರೀ ಮದ್ವೀರಶೈವ ಸಂಸ್ಕೃತ ಧರ್ಮಪಾಠಶಾಲಾ" ಎಂಬ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿದರು.[59] ಮೊದಲು ಐದು ಮಂದಿ ವಿದ್ಯಾರ್ಥಿಗಳಿಂದ ಆರಂಭವಾದ ಈ ಶಾಲೆಯಲ್ಲಿ ಉಚಿತ ಊಟ ಮತ್ತು ವಸತಿಗಳನ್ನು ಕಲ್ಪಿಸಲಾಗಿತ್ತು. ಪಾಠಶಾಲಾ ಪೋಷಕರಾಗಿದ್ದ ಚನ್ನಬಸವಸ್ವಾಮಿಗಳು ಮುಂದೆ ಒಂದೊಂದು ವರ್ಷ ನಗರದ ಬೇರೆ ಬೇರೆ ಮಠಗಳ ವತಿಯಲ್ಲಿ ಪಾಠಶಾಲೆ ನಡೆಯುವಂತೆ ವ್ಯವಸ್ಥೆ ಮಾಡಿದ್ದರು. ಹೀಗಾಗಿ ೧೮೫೬ರಲ್ಲಿ ನರಗುಂದ ದೇವರಮಠದಲ್ಲೂ, ೧೮೫೭ರಲ್ಲಿ ಕರಿಸಿದ್ಧೇಶ್ವರ ಮಠದಲ್ಲೂ ಅನಂತರ ೧೮೦೧ರಲ್ಲಿ[60] ಮಹಾಂತರ ಮಠದಲ್ಲೂ ಈ ಶಾಲೆ ನಿಯೋಜನೆಗೊಂಡಿತ್ತು. ಆಯಾ ವರ್ಷಗಳಲ್ಲಿ ಸಂಬಂಧಪಟ್ಟ ಮಠಗಳವರೇ ಮೇಲ್ಕಂಡ ಶಾಲಾನಿರ್ವಹಣಾ ಜವಾಬ್ದಾರಿಯನ್ನು ವಹಿಸಿದ್ದರು.[61] ಕೆಲವು ವರ್ಷಗಳ ಕಾಲ ಇದೊಂದು ರೀತಿಯ ಸಂಚಾರಿ ಶಿಕ್ಷಣ ಸಂಸ್ಥೆಯಾಗಿ ಕಾರ್ಯನಿರ್ವಹಿಸಿತು. ಮತ್ತೆ ೧೮೦೩ರ ನಂತರ ಶಾಲೆಯು ಕಾಯಂ ಆಗಿ ಸರ್ಪಭೂಷಣ ಮಠದಲ್ಲೇ ನಡೆಯುವಂತಾಯಿತು.

ಆಗ ಈ ಪಾಠಶಾಲೆಯಲ್ಲಿ ಕನ್ನಡ, ಸಂಸ್ಕೃತ ಮತ್ತು ವೇದಾಂತ, ಸಿದ್ಧಾಂತ ಹಾಗೂ ಲಿಂಗಧಾರಣೆ, ಉಪನಯನ, ವಿವಾಹ, ಅಂತ್ಯೇಷ್ಟಿಕ್ರಮ ಇವೇ ಮೊದಲಾದ ಸತ್ಕರ್ಮಾನುಷ್ಠಾನಗಳನ್ನು ಬೋಧಿಸಲಾಗುತ್ತಿತ್ತು. ವೇ॥ ನಂ. ಶಿವಪ್ಪಶಾಸ್ತ್ರಿಗಳು ಆಗ ಶಾಲಾ ಗುರುಗಳಾಗಿದ್ದರು.[62] ಹೆಚ್ಚುವರಿ ವಿದ್ಯಾರ್ಥಿಗಳು 'ವಾರಾನ್ನ', 'ಭಿಕ್ಷಾನ್ನ'[63] ಮಾಡಬೇಕಾಗಿತ್ತು. ಚನ್ನಬಸವಸ್ವಾಮಿಗಳು ತಮ್ಮ ಕಾಲದಲ್ಲಿ ಮಠದ ಖಾಲಿ ಕೊಠಡಿ[64] ಹಾಗೂ ಖಾಲಿ ನಿವೇಶನಗಳನ್ನು ಬಾಡಿಗೆಗೆ ನೀಡಿ, ಬಂದ ಉತ್ಪನ್ನವನ್ನು ಶಾಲೆ ಹಾಗೂ ವಿದ್ಯಾರ್ಥಿನಿಲಯದ ನಿರ್ವಹಣೆಗಾಗಿ ಬಳಸುವಂತೆ ವ್ಯವಸ್ಥೆ ಮಾಡಿದ್ದರು.

ದಿನಾಂಕ: ೬.೬.೧೯೨೭ರಿಂದ ಚನ್ನಬಸವಸ್ವಾಮಿಗಳ ಉತ್ತರಾಧಿಕಾರತ್ವವನ್ನು ವಹಿಸಿಕೊಂಡ ಬಸವ ಲಿಂಗಸ್ವಾಮಿಗಳು[65] ಮಠದ ಶೈಕ್ಷಣಿಕ ಸೇವೆಯನ್ನು ಆಮೂಲಾಗ್ರವಾಗಿ ಪರಿವರ್ತನೆಗೊಳಿಸಿದರು. ಹಿಂದಿನಿಂದ ನಡೆದುಬಂದಿದ್ದ "ಶ್ರೀಮದ್ವೀರಶೈವ ಸಂಸ್ಕೃತ ಧರ್ಮಪಾಠಶಾಲಾ" ಎಂಬ ಮಠದ ಪಾಠಶಾಲೆಯ ಹೆಸರನ್ನು ದಿನಾಂಕ: ೧೦.೧೦.೧೯೨೭ರಲ್ಲಿ "ಶ್ರೀಸರ್ಪಭೂಷಣ ವೇದವಿದ್ಯಾ ಗುರುಕುಲವಾಸ" ಎಂಬುದಾಗಿ ಪುನರ್‌ನಾಮಕರಣ ಮಾಡಿದ್ದರು.[66] ನೂತನ ಪಾಠಶಾಲೆಯ ಪೋಷಕ ಸಮಿತಿಯ ಅಧ್ಯಕ್ಷರಾಗಿ ದಿವಾನ್‌ಬಹಾದುರ್ ಸರ್.ಕೆ.ಪಿ. ಪುಟ್ಟಣ್ಣಶೆಟ್ಟರು ಇದ್ದುದರಿಂದ[67] ಶಾಲೆಯು ತ್ವರಿತಗತಿಯಲ್ಲಿ ಪ್ರಬುದ್ಧಮಾನಕ್ಕೆ ಬರತೊಡಗಿತ್ತು. ಆಗ ಮಠದಲ್ಲಿ ಉಚಿತ ಊಟ ಮತ್ತು ವಸತಿ ಸೌಲಭ್ಯ ಪಡೆದಿದ್ದ ವಿದ್ಯಾರ್ಥಿಗಳ ಸಂಖ್ಯೆ ೪೦ಕ್ಕೆ ಏರಿತ್ತು. ಇವರಲ್ಲಿ ಬಹಳಷ್ಟು ಮಂದಿ ಹಳ್ಳಿಗಾಡಿನಿಂದ ಬಂದವರೇ ಆಗಿದ್ದರು. ಸರ್ಕಾರವು ಆಗ ಶಾಲಾನಿರ್ವಹಣೆಗಾಗಿಯೇ ೩೫ ರೂಪಾಯಿಗಳ ಮಾಸಿಕ ಅನುದಾನವನ್ನೂ ಮಂಜೂರು ಮಾಡಿತ್ತು.[68] ಮುಂದೆ ೧೯೨೯ರ ಜುಲೈ ಮಾಹೆಯಿಂದ

೫ ವರ್ಷಗಳ ವರೆಗೆ ಜಾರಿಯಲ್ಲಿರುವಂತೆ ಈ ಅನುದಾನವನ್ನು ೪೦ ರೂಪಾಯಿಗಳಿಗೆ ಏರಿಸಲಾಗಿತ್ತು.[69] ಈ ವೇಳೆಯಲ್ಲಿ ವೇದವಿದ್ಯಾ ಪ್ರವೀಣರೆನಿಸಿದ್ದ ಸುಬ್ಬನರಸಿಂಹಶಾಸ್ತ್ರಿಗಳು ಪಾಠಶಾಲೆಯ ಮುಖ್ಯ ಗುರುಗಳಾಗಿದ್ದರು.[70]

ಆಗ ಮಠದ ಪಾಠಶಾಲೆಗೆ ಭೇಟಿ ನೀಡಿದ್ದ ಮೈಸೂರು ಪ್ರದೇಶ ರಾಜ್ಯಸಭಾ ಸದಸ್ಯರಾಗಿದ್ದ ಸಿ.ಎಸ್. ಬಾಲಸುಂದರಮ್ ಅಯ್ಯರ್ ಅವರು ಹೀಗೆ ಹೇಳಿದ್ದಾರೆ. "It gave me much pleasure to visit the Vedic School at Sappanna Swami Matt conducted by Sri Basavalinga Swami; where a fair member of youngmen of the Virasaiva community are being trained In the recitation of vedic mantras. This is a very commandable start and having reference to the unfortunately exclusive views of orthodox Brahminism in regard to the aspirations of other communities for studying the vedas and other sacred literature of the Hindu Religion, it is only in this manner by self help that progress can be made. I hope that in course of time more liberal ideas will permeate the Brahmins and persuade them to throw open the sacred writtings to all people willing to take the trouble of studying them. Such a course will, I am sure strengthen the position of Hindu Religion and philosophy, and lead to an intelligent understanding and practice of its great truths.

I wish every success to the Institution and the earnest endeavours of Sri Basavalinga Swami for whom I entertain a high regard."[71]

ಬಸವಲಿಂಗಸ್ವಾಮಿಗಳ ಸತತ ಪ್ರಯತ್ನದ ಫಲವಾಗಿ ಅಂದಿನ ಮೈಸೂರು ಸರ್ಕಾರವು ೧೯೩೦ರಲ್ಲಿ ಮಂಡ್ಯ ತಾಲ್ಲೂಕು ಮುದ್ದನಗೆರೆ ಹಾಗೂ ಹಲಸಗೆರೆ ಗ್ರಾಮಗಳ ಬಳಿ ನಾಲಾ ಅಚ್ಚುಕಟ್ಟು ಪ್ರದೇಶದಲ್ಲಿ ಒಟ್ಟು ೨೫ ಎಕರೆ ೧೬ ಗುಂಟೆ ವಿಸ್ತೀರ್ಣದ ಜಮೀನುಗಳನ್ನು ಮಠದ ಪಾಠಶಾಲಾ ಅಭಿವೃದ್ಧಿಗಾಗಿ ರಿಯಾಯ್ತಿ ಬೆಲೆಗೆ ಮಂಜೂರು ಮಾಡಿತ್ತು.[72] ಆದರೆ ಈ ವೇಳೆಗಾಗಲೇ ಮಠಾಧಿಪತ್ಯದ ವಿಚಾರವಾಗಿ ಎದ್ದಿದ್ದ ಗೊಂದಲಗಳಿಂದಾಗಿ, ಮಠದವರು ಮೇಲ್ಕಂಡ ಮಂಜೂರಾತಿಯನ್ನು ಉಳಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಮುಂದೆ ೧೯೩೩ ರಿಂದ ೧೯೩೮ರವರೆಗೆ ನಡೆದ ಮಠಾಧಿಪತ್ಯದ ವಿವಾದದ ಪ್ರಯುಕ್ತ ಪಾಠಶಾಲೆಯು ಕುಂಠಿತವಾಗತೊಡಗಿತ್ತು.

ಮೇಲ್ಕಂಡ ವಿವಾದವು ಬಗೆಹರಿದ ಮೇಲೆ ಪಾಠಶಾಲೆಯು ಎಂದಿನಂತೆ ಕಾರ್ಯಪ್ರವೃತ್ತವಾಯಿತು. ಮುಂದಿನ ಮಠಾಧಿಪತಿಗಳಾಗಿದ್ದ ಮಹಾದೇವಸ್ವಾಮಿಗಳು ೧೯೪೦ರಲ್ಲಿ ಮೊಟ್ಟಮೊದಲಿಗೆ ಬೆಂಗಳೂರಿನಲ್ಲಿ "ಶಿವಾನುಭವ"[73] ತರಗತಿಗಳನ್ನು ಪ್ರಾರಂಭಿಸಿದ್ದರು.[74] ೧೯೪೩ರಲ್ಲಿ ಮಠದ ವಿದ್ಯಾರ್ಥಿಗಳಿಗಾಗಿ ಒಂದು ಉಪಯುಕ್ತ ಗ್ರಂಥಭಂಡಾರವನ್ನು ಸ್ಥಾಪಿಸಿದ್ದರು. ೧೯೪೫ರ ವೇಳೆಗೆ ಮಠದ ವತಿಯಿಂದ ೬೦ ಮಂದಿ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿ ಸೌಲಭ್ಯಗಳನ್ನು ಕಲ್ಪಿಸಲಾಗಿತ್ತು.[75] ಮುಂದೆ ೧೯೫೫ರ ವೇಳೆಗೆ ಮಠದ ಪಾಠಶಾಲೆಯು ನಿಂತುಹೋಗಿತ್ತಾದರೂ, ಉಚಿತ ವಿದ್ಯಾರ್ಥಿನಿಲಯವು ಮಾತ್ರ ಸಾರೋದ್ಧಾರವಾಗಿ ನಡೆಯುತ್ತಾ ಬಂದಿರುವುದು ಹೆಮ್ಮೆಯ ಸಂಗತಿ. ಇಂದಿಗೂ ಕೂಡ ಪ್ರತಿವರ್ಷವೂ ಗ್ರಾಮಾಂತರ ಭಾಗದ ೬೦-೭೦ ಮಂದಿ ಬಡವಿದ್ಯಾರ್ಥಿಗಳು ಮಠದ ಈ ಸೌಲಭ್ಯವನ್ನು ಸದುಪಯೋಗಪಡಿಸಿಕೊಳ್ಳುತ್ತಿದ್ದಾರೆ.

**೫.೬. ಮಹಾಂತರಮಠದ ಸಂಸ್ಕೃತ ಪಾಠಶಾಲೆ**

ಮಹಾಂತರಮಠದಲ್ಲಿ ಕಳೆದ ಶತಮಾನದಲ್ಲಿ ಪಾಠಶಾಲೆ ಅಥವಾ ವಿದ್ಯಾರ್ಥಿನಿಲಯಗಳಿದ್ದುದಕ್ಕೆ ಯಾವ ಸೂಚನೆಗಳೂ ಇಲ್ಲ. ೧೯೦೧ರಲ್ಲಿ 'ಶ್ರೀಮದ್ವೀರಶೈವ ಸಂಸ್ಕೃತ ಧರ್ಮಪಾಠಶಾಲೆ'ಯನ್ನು ಇದರ ಪೋಷಕರಾಗಿದ್ದ ಸರ್ಪಭೂಷಣಮಠದ ಚನ್ನಬಸವಸ್ವಾಮಿಗಳು ಒಂದು ವರ್ಷದ ಮಟ್ಟಿಗೆ ಮಹಾಂತರಮಠದ ಆಶ್ರಯದಲ್ಲಿ ನಡೆಯುವಂತೆ ನಿಯೋಜಿಸಿದ್ದರು.[76] ಮುಂದೆ ಈ ಮಠದಲ್ಲಿ ಇದರದೇ ಆದ ಒಂದು ವಿದ್ಯಾಸಂಸ್ಥೆಯು ಪ್ರಾರಂಭವಾದದ್ದು ೧೯೨೬ರಲ್ಲಿ.[77]

'೧೯೨೫ರ ನವೆಂಬರ್ ಮಾಹೆಯಲ್ಲಿ ಶಿವಾನಂದ ಜಗದ್ಗುರುಗಳಿಗೆ ರಂಭಾಪುರಿ ವೀರಸಿಂಹಾಸನದ ಪಟ್ಟಾಭಿಷೇಕವಾಯಿತು. ಆಗ ವಿಶೇಷವಾಗಿ ನೆರೆದಿದ್ದ ಭಕ್ತ ಸಮೂಹದ ಮುಂದೆ ನೂತನ ಜಗದ್ಗುರುಗಳು ತಾವು ಪೀಠದ ಪರವಾಗಿ ಬೆಂಗಳೂರು ಪಟ್ಟಣದಲ್ಲಿ ವೀರಶೈವ ವಿದ್ಯಾರ್ಥಿಗಳಿಗಾಗಿ ಒಂದು ಸಂಸ್ಕೃತ ಪ್ರೌಢ ವಿದ್ಯಾಲಯವನ್ನು ಸ್ಥಾಪಿಸುವುದಾಗಿಯೂ, ಅದಕ್ಕಾಗಿ ಶಿಷ್ಯಕೋಟಿಯು ಅವರವರ ಶಕ್ತ್ಯಾನುಸಾರ ಉದಾರ ಧನಸಹಾಯ ಮಾಡಬೇಕಾಗಿ ಅಪ್ಪಣೆ ಕೊಡಿಸಿದ್ದರು.'[78] ಅದೇ ಪ್ರಕಾರ ಆ ಸಭೆಯಲ್ಲಿ ಹಾಜರಿದ್ದ ಬೆಂಗಳೂರಿನ ಚಿಕ್ಕಪೇಟೆಯ ಆರ್ಮುಗಂಮೊದಲಿಯಾರ್ ರಸ್ತೆಯ ನಿವಾಸಿಗಳಾಗಿದ್ದ, ಶಾಂತವೀರಪ್ಪನವರ ವಿರೂಪಾಕ್ಷಪ್ಪನವರ ಎಸ್. ಬುಳ್ಳಪ್ಪ ಎಂಬುವರು ಬೆಂಗಳೂರಿನ ವೀರಶೈವ ಮತಬಾಂಧವರಿಗಾಗಿ ಜಗದ್ಗುರುಗಳಿಂದ ಸ್ಥಾಪಿತವಾಗುವ ಸಂಸ್ಕೃತವಿದ್ಯಾಸಂಸ್ಥೆಗೋಸ್ಕರ ತಮ್ಮೆಲ್ಲಾ ಚರ-ಸ್ಥಿರ ಸ್ವತ್ತುಗಳನ್ನೂ ದಾನಮಾಡುವುದಾಗಿ ವಾಗ್ದಾನ ನೀಡಿದ್ದರು.[79] ಜಗದ್ಗುರುಗಳು ತಮ್ಮ ಪಟ್ಟಾಭಿಷೇಕದ ಸಂದರ್ಭದಲ್ಲಿ ಅಪ್ಪಣೆ ಕೊಟ್ಟಂತೆ ಬೆಂಗಳೂರಿನ ಮಹಾಂತರಮಠದಲ್ಲಿ ದಿನಾಂಕ : ೨೪.೮.೧೯೨೬ರಿಂದ ನೂತನ ಸಂಸ್ಕೃತ ಪಾಠಶಾಲೆ ಪ್ರಾರಂಭವಾಯಿತು. ಇದೇ ಶಾಲೆಯೆ ''ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಸಂಸ್ಕೃತ ಪಾಠಶಾಲೆ.''[80] ಆರಂಭದಲ್ಲಿ ೧೫ ಮಂದಿ ವಿದ್ಯಾರ್ಥಿಗಳಿಂದ ಪ್ರಾರಂಭವಾದ ಈ ಶಾಲೆಯಲ್ಲಿ ವಿದ್ಯಾರ್ಥಿನಿಲಯವಿರಲಿಲ್ಲ. ಮುಂದೆ ಈ ಪಾಠಶಾಲಾ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ದಿನಾಂಕ:೪.೩.೧೯೨೮ ರಲ್ಲಿ ಒಂದು ಗ್ರಂಥಭಂಡಾರವನ್ನು ತೆರೆಯಲಾಯಿತು. ''ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಕೃಪಾಪೋಷಿತ ವೀರಶೈವ ಧರ್ಮ ಗ್ರಂಥಭಂಡಾರ'' ಎಂಬ ಈ ಗ್ರಂಥಾಲಯವನ್ನು ದಿವಾನ್ ಬಹಾದುರ್ ಸರ್. ಕೆ.ಪಿ. ಪುಟ್ಟಣ್ಣಶೆಟ್ಟರು ಉದ್ಘಾಟಿಸಿದ್ದರು.[81] ಈ ವೇಳೆಗೆ ಪಂಡಿತ ಕೆ.ಎಸ್. ವಿಶ್ವನಾಥಶಾಸ್ತ್ರಿ ಎಂಬುವರು ಪಾಠಶಾಲಾ ಅಧ್ಯಾಪಕರಾಗಿದ್ದರು. ಹೀಗೆ ವಿದ್ಯುಕ್ತವಾಗಿ ನಡೆಯಲಾರಂಭಿಸಿದ್ದ ಪಾಠಶಾಲೆಗೆ ಹಿಂದೆ ಬುಳ್ಳಪ್ಪನವರು ವಾಗ್ದಾನ ಮಾಡಿದ್ದಂತೆ ದಿನಾಂಕ: ೧೨.೧೦.೧೯೩೧ರಂದು, ತಮ್ಮ ಪಿತೃ-ಪಿತಾಮಹರ ಜನ್ಮ ಸಾರ್ಥಕ್ಯವನ್ನು ಕೋರಿ, ಸರಿ ಸುಮಾರು ೧೨,೫೦೦ ರೂಪಾಯಿಗಳಷ್ಟು ಬೆಲೆಯ ತಮ್ಮೆಲ್ಲಾ ವಿಶಿಷ್ಟ ಆಸ್ತಿಗಳನ್ನೂ ಮೇಲ್ಕಂಡ ಶಿಕ್ಷಣ ಸಂಸ್ಥೆಗೆ ಒಪ್ಪಿಸಿಕೊಟ್ಟರು.[82]

ಈ ಸಂದರ್ಭದಲ್ಲಿ ಮೇಲ್ಕಂಡ ದಾನಿಗಳ ಸಮಗ್ರ ಆಸ್ತಿಗಳ ನಿರ್ವಹಣೆಗಾಗಿ ಒಂದು ಟ್ರಸ್ಟ್ ಕಮಿಟಿಯನ್ನು ರಚಿಸಲಾಗಿತ್ತು. ನಿವೃತ್ತ ನ್ಯಾಯಮೂರ್ತಿ ಎಚ್.ಕೆ. ವೀರಬಸವಯ್ಯನವರು ಇದರ ಅಧ್ಯಕ್ಷರಾಗಿಯೂ, ಎಸ್. ಬುಳ್ಳಪ್ಪನವರೆ ಕಾರ್ಯದರ್ಶಿಯಾಗಿಯೂ, ಗುಡೇಮಾರನ ಹಳ್ಳಿ ಗಂಗಪ್ಪ, ಎಸ್. ಸಾವಂದಶೆಟ್ಟಿ, ದೇಶದಯಜಮಾನ ಗಂಗಣ್ಣ, ಗ್ರಂಧಿಗೆ ಅಂಗಡಿ ಗುರುಸಿದ್ದಪ್ಪ, ಸರಾಫು ಟಿ. ಬಸಪ್ಪ, ಮಂಡಿ ಎನ್. ರುದ್ರಯ್ಯ ಇವರುಗಳು ಸದಸ್ಯರಾಗಿದ್ದರು. ಈ ಟ್ರಸ್ಟಿಗೆ ಶಿವಾನಂದ ಜಗದ್ಗುರುಗಳು ಮಹಾಪೋಷಕರಾಗಿಯೂ, ದಿವಾನ್‌ಬಹಾದುರ್ ಸರ್.ಕೆ.ಪಿ. ಪುಟ್ಟಣ್ಣ ಶೆಟ್ಟರು ಪೋಷಕರಾಗಿಯೂ ಇದ್ದರು.[83] ಟ್ರಸ್ಟಿಗಳು ಸಂಬಂಧಪಟ್ಟ ಸ್ವತ್ತುಗಳಿಂದ ಬಂದ ಉತ್ಪನ್ನವನ್ನು, ಉದ್ದೇಶಿತ ಸಂಸ್ಕೃತ ಮತ್ತು ವೇದಾಧ್ಯಯನ ನಿರತ ವಿದ್ಯಾರ್ಥಿಗಳ ಊಟ ಮತ್ತು ವಸತಿಗಳಿಗಾಗಿ ವಿನಿಯೋಗಿಸಬೇಕೇ ಹೊರತು, ಅನ್ಯತಃ ಇದರ ಹಣ ಬಳಕೆಯಾಗದಂತೆ ಕರಾರಿನಲ್ಲಿ ನಿಬಂಧನೆ ವಿಧಿಸಲಾಗಿತ್ತು.[84]

ಈ ಹಿನ್ನೆಲೆಯಲ್ಲಿ ಬೆಂಗಳೂರಿನ ಮಹಾಂತರಮಠದಲ್ಲಿ ರೂಪುಗೊಂಡ ಸಂಸ್ಥೆಯೇ ''ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಸಂಸ್ಕೃತ ಪಾಠಶಾಲೆ ಮತ್ತು ಫ್ರೀ ಬೋರ್ಡಿಂಗ್ ಹೋಮ್.'' ೧೯೩೨ರಿಂದ ಅಸ್ತಿತ್ವಕ್ಕೆ ಬಂದ ಈ ಶಿಕ್ಷಣ ಸಂಸ್ಥೆಯು ಪ್ರಾರಂಭದಿಂದಲೇ ೨೫ ಮಂದಿ ವಿದ್ಯಾರ್ಥಿಗಳಿಗೆ ಸಂಸ್ಕೃತ ಹಾಗೂ ವೇದಪಾಠ ಬೋಧನೆಯ ಜೊತೆಗೆ ಉಚಿತ ಊಟ ಮತ್ತು ವಸತಿಗಳ ಏರ್ಪಾಟು ಮಾಡಿತ್ತು.[85] ಮುಂದೆ ೧೯೩೪ ರಿಂದ ಗಂಗಾಧರ ಶಿವಾಚಾರ್ಯರು ಮಹಾಂತರಮಠದ ಅಧಿಪತಿಗಳಾಗಿ ಬಂದಮೇಲೆ ಮಠದ ಶೈಕ್ಷಣಿಕ ಸೇವೆಯು ಮತ್ತಷ್ಟು ಪ್ರಬುದ್ಧಮಾನಕ್ಕೆ ಬಂದಿತು. ಇವರ ಕಾಲದಲ್ಲಿ ಭಕ್ತರಿಂದ ಅನೇಕ ಬಗೆಯ ದಾನಧರ್ಮಗಳು ಮಠದ ಸತ್ಕಾರ್ಯಗಳಿಗಾಗಿ ಹರಿದು ಬಂದವು.[86] ತತ್ಫಲವಾಗಿ ೧೯೪೦ರ ವೇಳೆಗೆ ಮಠದ ವಿದ್ಯಾರ್ಥಿನಿಲಯದಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ ೧೨೦ಕ್ಕೆ ಮುಟ್ಟಿತ್ತು.

ಮಹಾಂತರಮಠದಲ್ಲಿ ಆಗ 'ಸಂಸ್ಕೃತ ವಿಭಾಗ'ದಲ್ಲಿ 'ಪ್ರಥಮ' ೩ ವರ್ಷದ ತರಗತಿಗಳೂ, 'ಕಾವ್ಯ' ೨ ವರ್ಷದ ತರಗತಿಗಳೂ, 'ವೇದ ವಿಭಾಗ'ದಲ್ಲಿ 'ಪ್ರಥಮ' ೨ ವರ್ಷದ ತರಗತಿಗಳೂ, 'ಪ್ರವೇಶ' ೨ ವರ್ಷದ ತರಗತಿಗಳೂ ನಡೆಯುತ್ತಿದ್ದವು. ಪ್ರತಿ ತರಗತಿಗಳಲ್ಲೂ ೧೦ ರಿಂದ ೧೫ ಮಂದಿ ವಿದ್ಯಾರ್ಥಿಗಳಿರುತ್ತಿದ್ದರು. ಶಾಲಾ ಬೋಧಕ ವರ್ಗದಲ್ಲಿ ನಾಲ್ಕು ಮಂದಿ ಅಧ್ಯಾಪಕರಿದ್ದರು.[87] ಮಠದ ಪಾಠಶಾಲಾ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಸೂಕ್ತವಾದ ಗ್ರಂಥಭಂಡಾರ ಹಾಗೂ ವಾಚನಾಲಯಗಳಿದ್ದವು. ಈ ಗ್ರಂಥಭಂಡಾರದಲ್ಲಿ ೧೨,೩೭೪ ಕೃತಿಗಳಿದ್ದವು.[88]

೧೯೫೦ರ ವೇಳೆಗೆ ಬೆಂಗಳೂರಿನಲ್ಲೇ ಅತ್ಯಧಿಕ ಸಂಖ್ಯೆಯ ಅಂದರೆ ೧೮೦ ಮಂದಿ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿಯನ್ನು ಒದಗಿಸಿದ್ದುದು ಮಹಾಂತರಮಠದ ಹೆಗ್ಗಳಿಕೆ. ಆಗ ವೇದ ಮತ್ತು ಸಂಸ್ಕೃತ ಅಧ್ಯಯನ ನಿರತ ವಿದ್ಯಾರ್ಥಿಗಳಿಗಿಂತ ಇತರೆ ಶಾಲಾ ಕಾಲೇಜುಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಈ ಸಂದರ್ಭದಲ್ಲಿ ನೂತನವಾಗಿ ನಿರ್ಮಾಣವಾಗಿದ್ದ ವಿದ್ಯಾರ್ಥಿನಿಲಯವನ್ನು ದಿನಾಂಕ: ೨೧.೨.೧೯೫೧ರಂದು ಆಗಿನ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಕೆ. ಚಂಗಲರೆಡ್ಡಿ ಅವರು ಉದ್ಘಾಟಿಸಿದ್ದರು. ಈ ಮಠದಲ್ಲಿ ವ್ಯಾಸಂಗ ಮಾಡಿದ ಅನೇಕ ಮಂದಿ ವಿದ್ಯಾರ್ಥಿಗಳು ಇಂದು ನಾಡಿನ ನಾನಾ ಭಾಗದ ವೀರಶೈವ ಮಠಗಳಿಗೆ ಮಠಾಧಿಪತಿಗಳಾಗಿದ್ದಾರೆ.[89] ಮತ್ತೆ ಕೆಲವರು[90] ಉನ್ನತ ಹುದ್ದೆಗಳನ್ನಲಂಕರಿಸಿ ಬುಳ್ಳಪ್ಪನವರ ಸಾರ್ಥಕ ಸೇವೆಗೆ ಕೀರ್ತಿ ತಂದಿದ್ದಾರೆ. ಹೀಗೆ ಅನೇಕ ಪಂಡಿತರು, ವಿದ್ವಾಂಸರು ಹಾಗೂ ಉಪಾಚಾರ್ಯರಿಗೆ ಈ ನಿಲಯವು ಬಹಳ ಹಿಂದಿನಿಂದಲೂ ಮಾತೃ ಸಂಸ್ಥೆಯಾಗಿ ಕಾರ್ಯನಿರ್ವಹಿಸಿತ್ತು.

ಈ ಹೊತ್ತಿನ ಬೆಂಗಳೂರಿನ ವೀರಶೈವ ಮಠಗಳ ಪರವಾಗಿ, ಪ್ರಾಚೀನ ಪರಂಪರೆಯ ವೈದಿಕ ಶಿಕ್ಷಣ ವ್ಯವಸ್ಥೆಯನ್ನು ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬಂದಿರುವ ಏಕೈಕ ಮಠವೆಂದರೆ ಮಹಾಂತರಮಠ ಒಂದೆ. ಈಗಲೂ ಪ್ರತಿವರ್ಷ ೬೦-೭೦ ಮಂದಿ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿಗಳನ್ನು ಕಲ್ಪಿಸುವ ವ್ಯವಸ್ಥೆ ಸಾರೋದ್ಧಾರವಾಗಿ ನಡೆದು ಬಂದಿದೆ.

**೫.೭. ತಿಪ್ಪಶೆಟ್ಟಿ ಮಠದ ಧಾರ್ಮಿಕ ಶಿಕ್ಷಣ**

ಇಲ್ಲಿಗೆ ಸುಮಾರು ೨೦೦ ವರ್ಷಗಳ ಹಿಂದೆ ಗುರು ಲಿಂಗ ಜಂಗಮ ಪ್ರೇಮಿಗಳೂ, ಸುಪ್ರಸಿದ್ಧ ವ್ಯಾಪಾರಿಗಳೂ ಆಗಿದ್ದ ತಿಪ್ಪಶೆಟ್ಟಿ ಎಂಬ ಧನಿಕ ಶ್ರೇಷ್ಠರೂ ಬೆಂಗಳೂರಿನ ವೀರಶೈವ ಕುಲಬಾಂಧವರ ವಿದ್ಯಾಭಿವೃದ್ಧಿಗೂ ಹಾಗೂ ನಿತ್ಯ ದಾಸೋಹಾರ್ಥವಾಗಿಯೂ, ಒಂದು ಮಠವನ್ನು ಸ್ಥಾಪಿಸಿದ್ದರು.[91] ಅದೇ ಈಗಿನ ಮಹಾನಗರದ ಗಾಂಧಿನಗರದಲ್ಲಿರುವ ತಿಪ್ಪಶೆಟ್ಟಿಮಠ. ಕರ್ನಾಟಕದ ಶ್ರೇಷ್ಠ ವಾಗ್ಗೇಯಕಾರರಲ್ಲಿ ಒಬ್ಬರಾಗಿದ್ದ ಸರ್ಪಭೂಷಣಶಿವಯೋಗಿಗಳಿಗೆ[92] ಗುರುವಾಗಿದ್ದ ಗುರುಸಿದ್ಧಸ್ವಾಮಿಗಳೇ ಈ ಮಠದ ಮೂಲ ಗುರುಗಳಾಗಿದ್ದರು. ೧೯ನೆಯ ಶತಮಾನದ ಆರಂಭದ ವೇಳೆಗೆ ಮಠಾಧಿಪತಿಗಳಾಗತಕ್ಕ ವೀರಶೈವ ವಟುಗಳಿಗೆ ಸೂಕ್ತ ಧಾರ್ಮಿಕ ಶಿಕ್ಷಣವನ್ನು ನೀಡುವ ಗುರುಕುಲಾಶ್ರಮವಿದಾಗಿತ್ತು.[93] ಆಗ ಸೀಮಿತ ಸಂಖ್ಯೆಯ ವಿದ್ಯಾರ್ಥಿಗಳಿಗೆ ಧರ್ಮ, ಸಂಗೀತ, ಸಾಹಿತ್ಯ, ತತ್ತ್ವಗಳನ್ನು ಕುರಿತು ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಶಿಕ್ಷಣ ನೀಡಲಾಗುತ್ತಿತ್ತು.[94] ಸ್ವತಃ ಗುರುಸಿದ್ಧ ಯತಿವರರೇ ವೀರಶೈವ ತತ್ತ್ವ ಹಾಗೂ ವೇದಾಂತ ಸಾಹಿತ್ಯದ ಬಗೆಗೆ ಅಸಾಧಾರಣ ಪಾಂಡಿತ್ಯವುಳ್ಳವರಾಗಿದ್ದರು. ಜೊತೆಗೆ ವಿರಕ್ತಾಶ್ರಮವನ್ನು ಸ್ವೀಕರಿಸಿ ಬರುವ ವಟುಗಳಿಗೆ ಆದರ್ಶ ದೀವಿಗೆಯಾಗಿದ್ದರು.

ತಿಪ್ಪಶೆಟ್ಟಿಮಠದ ಈ ಒಂದು ಸತ್ಪರಂಪರೆಯು ಇಮ್ಮಡಿ ಗುರುಸಿದ್ಧಸ್ವಾಮಿಗಳ ಕಾಲದ (೧೮೭೦)ವರೆಗೂ ಮುಂದುವರೆದಿದ್ದುದಾಗಿ ತಿಳಿದುಬರುತ್ತದೆ. ಸರ್ಪಭೂಷಣಮಠದ ಮೂರನೇ ಗುರುಗಳಾಗಿದ್ದ ಗುರುಸ್ವಾಮಿಗಳ ಸೂಚನೆಯ ಪ್ರಕಾರ- ''ತಾವು, ತಮ್ಮ ಗುರುಗಳಾಗಿದ್ದ ಫಾಲಲೋಚನ ಸ್ವಾಮಿಗಳು ಹಾಗೂ ಮೂಲಗುರುಗಳಾಗಿದ್ದ ಸರ್ಪಭೂಷಣ ಶಿವಯೋಗಿಗಳು ಮತ್ತು ತಮ್ಮ ಉತ್ತರಾಧಿಕಾರಿಯಾಗಿದ್ದ ಚನ್ನಬಸವ ಸ್ವಾಮಿಗಳು ಇವರೆಲ್ಲರೂ ತಿಪ್ಪಶೆಟ್ಟಿಮಠದ ಗುರುಕುಲದ ವಿದ್ಯಾರ್ಥಿಗಳೆಂದೇ'' ಹೇಳಿಕೊಂಡಿದ್ದಾರೆ.[95] ಇವಿಷ್ಟು ಕಳೆದ ಶತಮಾನದ ತಿಪ್ಪಶೆಟ್ಟಿಮಠದ ಶೈಕ್ಷಣಿಕ ಸೇವೆಗಳನ್ನು ಕುರಿತ ಸೂಚನೆಗಳಾಗಿವೆ.

ಮುಂದೆ ೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ಗುರುಸಿದ್ಧರಾಜದೇಶಿಕೇಂದ್ರರು ಮಠದ ಆಸ್ತಿ-ಪಾಸ್ತಿಗಳ ಉಸ್ತುವಾರಿಯ ಜೊತೆಗೆ ಬಡವರ್ಗದ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದನಿಲಯ, ವಿದ್ಯಾರ್ಥಿವೇತನ, ಗ್ರಂಥಭಂಡಾರ ಹಾಗೂ ಧಾರ್ಮಿಕ ಸಂಶೋಧನ ಕೇಂದ್ರ ಇವೇ ಮುಂತಾದುವನ್ನು ನಿರ್ವಹಿಸುವ ದೃಷ್ಟಿಯಿಂದ ೧೯೩೬ರಲ್ಲಿ ನಗರದ ವೀರಶೈವ ಪ್ರಮುಖರನ್ನು ಒಳಗೊಂಡ ಒಂದು ವಿಶ್ವಸ್ಥಮಂಡಳಿಯನ್ನು ರಚಿಸಿದ್ದರು.[96] ಪ್ರಾರಂಭದಲ್ಲಿ ಉತ್ತಮ ರೀತಿಯಲ್ಲೇ ಕಾರ್ಯ ನಿರ್ವಹಿಸುತ್ತಿದ್ದ ಈ ಮಂಡಳಿಯು ಕೆಲವೇ ವರ್ಷಗಳಲ್ಲಿ ಸ್ಥಗಿತಗೊಂಡಿತು. ಈ ಸಂದರ್ಭದಲ್ಲಿ ೩೦ ಮಂದಿ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿ ಸೌಲಭ್ಯಗಳನ್ನು ಮಠದ ವತಿಯಿಂದ ಕಲ್ಪಿಸಲಾಗಿತ್ತು.[97] ೧೯೪೦ರ ವೇಳೆಗೆ ಈ ವಿದ್ಯಾರ್ಥಿನಿಲಯವೂ ಮುಚ್ಚಲ್ಪಟ್ಟಿತ್ತು. ಮಠದ ಪರವಾಗಿ ಸ್ಮರಿಸಲೇ ಬೇಕಾದ ಇನ್ನೊಂದು ಶೈಕ್ಷಣಿಕ ಸಂಗತಿ ಎಂದರೆ, ೧೯೫೦ರಲ್ಲಿ ಬೆಂಗಳೂರು ನಗರಸಭೆಯವರು ಗಾಂಧಿನಗರದಲ್ಲಿ ಒಂದು ಬಾಲಕಿಯರ ಪ್ರೌಢಶಾಲೆಯನ್ನು ತೆರೆಯಲು ಮುಂದಾದರು. ಆಗ ಶಾಲೆಗೆ ಅಗತ್ಯವಾದ ಉಚಿತ ನಿವೇಶನವನ್ನು ಒದಗಿಸಿಕೊಟ್ಟವರು ತಿಪ್ಪಶೆಟ್ಟಿಮಠದ ಗುರುಗಳಾಗಿದ್ದ ಗುರುಸಿದ್ಧರಾಜದೇಶಿಕೇಂದ್ರ ಸ್ವಾಮಿಗಳು.[98]

ಕೊನೆಗೆ ೧೯೬೦ರಲ್ಲಿ ತಿಪ್ಪಶೆಟ್ಟಿ ಮಠವು ಚಿತ್ರದುರ್ಗ ಬೃಹನ್ಮಠದವರ ನೇರ ಆಡಳಿತಕ್ಕೆ ಒಳಪಟ್ಟಿತು. ಆಗ ಜಯವಿಭವ ಜಗದ್ಗುರುಗಳು ಒಂದು ವ್ಯಾಪಕವಾದ ಯೋಜನೆಯನ್ನು ರೂಪಿಸಿದ್ದರು. ಆ ಯೋಜನೆಯ ಪ್ರಕಾರ ಮಠದ ಆವರಣದಲ್ಲಿ ಉಚಿತ ವಿದ್ಯಾರ್ಥಿನಿಲಯ, ವಾಚನಾಲಯ, ಗ್ರಂಥಭಂಡಾರ, ಉಚಿತ ಆಯುರ್ವೇದ ಚಿಕಿತ್ಸಾಲಯ, ಧಾರ್ಮಿಕ ಸಂಶೋಧನಕೇಂದ್ರ ಇವೇ ಮೊದಲಾದವುಗಳ ನಿರ್ಮಾಣಾರ್ಥವಾಗಿ, ಅಂದಿನ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಎಸ್. ನಿಜಲಿಂಗಪ್ಪನವರಿಂದ ದಿನಾಂಕ:೧೦.೯.೧೯೬೦ರಂದು ಶಂಕು ಸ್ಥಾಪನೆಯನ್ನೂ ನೆರವೇರಿಸಲಾಗಿತ್ತು.[99] ಆದರೆ ಮುಂದೆ ಈ ಯೋಜನೆಗಳಿಗೆ ಚಾಲನೆ ದೊರೆಯಬೇಕಾದರೆ ೧೯೫೫ರ ವರೆಗೆ ಕಾಯಬೇಕಾಯಿತು.

**೫.೮. ಇನ್ನುಳಿದ ಮಠಗಳ ಶೈಕ್ಷಣಿಕ ಸೇವೆ**

೧೯೩೦ರ ದಶಕದಲ್ಲಿ ನಗರದ ಮನೆವಾರ್ತೆ ಪೇಟೆಯಲ್ಲಿರುವ ಶಂಕರದೇವರಮಠದಲ್ಲೂ ಕೂಡ 'ಶ್ರೀ ಶಂಕರದೇವರ ಸಂಸ್ಕೃತ ಪಾಠಶಾಲೆ' ಎಂಬ ಸಂಸ್ಥೆಯು ಇದ್ದುದಾಗಿ ಸೂಚನೆಗಳಿವೆ. ಆಗ ಮಠದ ಗುರುಗಳಾಗಿದ್ದ ಇಮ್ಮಡಿಶಂಕರಸ್ವಾಮಿಗಳು ಮಠದ ಮುಂಭಾಗದ ಬಯಲಿನಲ್ಲಿ ರಸ್ತೆಯ ಅಂಚಿಗಿದ್ದ ಕೆಲವು ಕಟ್ಟಡಗಳನ್ನು ಬಾಡಿಗೆಗೆ ನೀಡಿ, ಬಂದ ಹಣವನ್ನು ಪಾಠಶಾಲಾ ನಿರ್ವಹಣೆಗೆ ಬಳಸುತ್ತಿದ್ದುದಾಗಿ ತಿಳಿದು ಬರುತ್ತದೆ.[100]

ಮಾಗಡಿ ರಸ್ತೆಯಲ್ಲಿದ್ದ (ಈಗಿಲ್ಲ) ಗಂಗಶೆಟ್ಟಿ ಮಠದಲ್ಲಿ ಇದೇ ವೇಳೆಗೆ ಗ್ರಾಮಾಂತರ ಭಾಗದಿಂದ ವ್ಯಾಸಂಗಕ್ಕಾಗಿ ಬಂದ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿಗಳನ್ನು ಕಲ್ಪಿಸುವ ಅವಕಾಶವಿತ್ತು. ೧೯೩೨ರಲ್ಲಿ ಇಲ್ಲಿ ೫ ಮಂದಿ ವಿದ್ಯಾರ್ಥಿಗಳಿಗೆ ಉಚಿತ ಸೌಲಭ್ಯ ಕಲ್ಪಿಸಲಾಗಿತ್ತು. ಆಗ ಮಠದಲ್ಲೇ ವಾಸವಾಗಿದ್ದ ಗೌರಮ್ಮ ಎಂಬ ವಯೋವೃದ್ಧೆ ಮೇಲ್ಕಂಡ ಪ್ರಸಾದ ನಿಲಯದ ವ್ಯವಸ್ಥೆಯನ್ನು ನಿರ್ವಹಿಸುತ್ತಿದ್ದುದಾಗಿ ತಿಳಿದು ಬರುತ್ತದೆ.[101]

ಹಾಗೆಯೇ ಕಳಾಸಿಪಾಳ್ಯದ ಮರಿಸ್ವಾಮಿಮಠದಲ್ಲೂ ಒಂದು ಉಚಿತ ವಿದ್ಯಾರ್ಥಿನಿಲಯವಿದ್ದ ಸೂಚನೆಗಳಿವೆ. ಈ ಮಠದಲ್ಲಿ ೧೯೩೬ರಿಂದ ೧೯೪೮ರ ವರೆಗೂ ನಡೆದ ಈ ವಿದ್ಯಾರ್ಥಿನಿಲಯದಲ್ಲಿ ೩೦ ರಿಂದ ೪೦ ಮಂದಿ ವಿದ್ಯಾರ್ಥಿಗಳಿದ್ದುದಾಗಿಯೂ, ಅವರು ಪಟ್ಟಣದ ಬೇರೆಬೇರೆ ಶಾಲಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದುದಾಗಿಯೂ ತಿಳಿದುಬರುತ್ತದೆ.[102] ಹೀಗೆ ನಗರದ ನರಗುಂದದೇವರಮಠ, ಗುರುವಣ್ಣದೇವರಮಠ, ದೇಶದಮಠ, ಕೊಳದಮಠ, ಕಂಬಿನಂಜಯ್ಯನಮಠ ಇವೇ ಮೊದಲಾದ ಮಠಗಳಲ್ಲಿ ಬಹಳ ಹಿಂದಿನಿಂದಲೂ ಉಚಿತ ಶಿಕ್ಷಣ ಹಾಗೂ ಪ್ರಸಾದದ ವ್ಯವಸ್ಥೆಗಳಿದ್ದುದಾಗಿ ಹೇಳುವರಾದರೂ, ಅಧಿಕೃತ ಮಾಹಿತಿಗಾಗಿ ಶೋಧವನ್ನು ಮುಂದುವರಿಸಬೇಕಾಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿನ ಬೆಂಗಳೂರಿನ ವೀರಶೈವ ಮಠಗಳಲ್ಲಿ ಸಂಸ್ಕೃತ ಮತ್ತು ವೇದ ಪಾಠಗಳೇ ಪ್ರಧಾನವಾಗಿದ್ದ ಶಿಕ್ಷಣ ಕ್ರಮವಿತ್ತು. ಕೇವಲ ಧಾರ್ಮಿಕ

ಶಿಕ್ಷಣವನ್ನೇ ಕೇಂದ್ರವಾಗಿರಿಸಿಕೊಂಡಿದ್ದ ಈ ಸಂಸ್ಥೆಗಳು, ಅಂದಿನ ಸಾಮಾಜಿಕ ಹಿತಾಸಕ್ತಿಗೆ ಅನುಗುಣವಾಗಿಯೇ ಇದ್ದುವೆಂಬುದನ್ನು ಮನಗಾಣಬೇಕಾಗಿದೆ. ಸ್ವಾತಂತ್ರ್ಯಾನಂತರದ ಸಾರ್ವತ್ರಿಕ ಶಿಕ್ಷಣ ನೀತಿಗೆ ಅನುಗುಣವಾಗಿ, ಪ್ರಾದೇಶಿಕ ಭಾಷೆಯೇ ಪ್ರಧಾನ ಶಿಕ್ಷಣ ಮಾಧ್ಯಮವಾದ್ದರಿಂದ ಹಾಗೂ ಆಂಗ್ಲ ಮಾಧ್ಯಮದ ಉನ್ನತ ವ್ಯಾಸಂಗಗಳ ಪ್ರಭಾವದಿಂದಾಗಿ, ಕಾಲಕ್ರಮೇಣ ಮಠಗಳು ನಡೆಸುತ್ತಿದ್ದ ಸಂಸ್ಕೃತ ಮತ್ತು ವೇದಪಾಠ ಶಾಲೆಗಳು ಮುಚ್ಚಲ್ಪಟ್ಟವು. ಇಷ್ಟೆಲ್ಲಾ ವೈಪರೀತ್ಯಗಳ ನಡುವೆಯೂ ಇಂದಿಗೂ ಉಳಿದಿರುವ ಏಕೈಕ ವೈದಿಕಶಾಲೆ ಮಹಾಂತರಮಠದ 'ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಸಂಸ್ಕೃತ ಮತ್ತು ವೇದಪಾಠಶಾಲೆ'ಯೊಂದೇ. ಸಾರ್ವತ್ರಿಕ ಶಿಕ್ಷಣ ನೀತಿಗೆ ಅನುಗುಣವಾಗಿ ಇಂದಿಗೂ ವಿದ್ಯಾಸಂಸ್ಥೆಗಳನ್ನು ನಡೆಸುತ್ತಿರುವ ಮಠಗಳೆಂದರೆ, ಗಂಜಾಂ ಮಠ, ಶಿವನಹಳ್ಳಿಯ ಜಂಗಮಮಠ ಮತ್ತು ವಿಭೂತಿಪುರದ ಮಠಗಳು ಮಾತ್ರ.[103] ಈ ಸಂಸ್ಥೆಗಳಲ್ಲಿ ಪ್ರಾಥಮಿಕ ಹಂತದಿಂದ ಕಿರಿಯ ಕಾಲೇಜಿನ ಹಂತದವರೆಗೂ ಸಾವಿರಾರು ಮಂದಿ ವಿದ್ಯಾರ್ಥಿಗಳು ವ್ಯಾಸಂಗ ನಿರತರಾಗಿದ್ದಾರೆ. ಇವು ಸರ್ಕಾರಿ ಅನುದಾನಿತ ಸಂಸ್ಥೆಗಳಾಗಿದ್ದು, ಇಲ್ಲಿ ಸಮಾಜದ ಎಲ್ಲಾ ವರ್ಗದ ವಿದ್ಯಾರ್ಥಿಗಳೂ ಇದ್ದಾರೆ.

ಹೀಗೆ ಬೆಂಗಳೂರಿನ ಬಹಳಷ್ಟು ಮಠಗಳು ಕೇವಲ ಮಠಗಳಾಗಿ ಇರದೆ, ಒಂದೋ 'ಕೂಲಿಮಠ' (ಪಾಠಶಾಲೆ)ವಾಗಿ ; ಇಲ್ಲವೇ, 'ದಾಸೋಹ' ಕೇಂದ್ರ (ಪ್ರಸಾದನಿಲಯ)ಗಳಾಗಿ ಸೇವಾನಿರತವಾಗಿದ್ದವು ಎಂಬುದು ಉತ್ಪ್ರೇಕ್ಷೆಯ ಮಾತಲ್ಲ. ಸುಭದ್ರ ಸರ್ಕಾರಗಳ ಸಾರ್ವತ್ರಿಕ ಸೇವೆಯ ಅನುಪಸ್ಥಿತಿಯಲ್ಲಿ ಅಂದು ಮಠಗಳು ನೀಡುತ್ತಿದ್ದ ಶೈಕ್ಷಣಿಕ ಸೇವೆ ಅವಿಸ್ಮರಣೀಯವಾದದ್ದು. ಅನ್ನದಾನ ಮತ್ತು ಜ್ಞಾನದಾನ ಆ ಕಾಲದ ಮಠಗಳ ಮೂಲಮಂತ್ರವಾಗಿತ್ತು. ಅದೆಂತಹ ಕನಿಷ್ಠಮಟ್ಟದ ಮಠವಾದಾಗ್ಯೂ ಎರಡರಲ್ಲಿ ಒಂದನ್ನಾದರೂ ಪೂರೈಸುವುದು ಅವುಗಳ ಕಡ್ಡಾಯ ನೀತಿಯಾಗಿತ್ತು. ಅಂದಿನ ಮಠಗಳು ಹೆಣ್ಣು ಮಕ್ಕಳಿಗಾಗಿ ಇಂತಹ ಸೌಲಭ್ಯಗಳನ್ನು ಕಲ್ಪಿಸಿರಲಿಲ್ಲವಾದರೂ; ಗ್ರಾಮಾಂತರ ಭಾಗದ ಮಕ್ಕಳಿಗೆ ಅದರಲ್ಲೂ ಬಡವರ್ಗದ ಮಕ್ಕಳಿಗೆ ವಿಶೇಷ ಆದ್ಯತೆ ನೀಡಿದ್ದುದು ಶ್ಲಾಘನೀಯವಾದ ವಿಚಾರ.

ಮೇಲ್ಕಂಡ ಮಠಗಳ ಆಶ್ರಯದಲ್ಲಿ ನಡೆಯುತ್ತಿದ್ದ ಪಾಠಶಾಲೆಗಳಲ್ಲಿ, ಹಿಂದೆ ಸಂಸ್ಕೃತ ಮತ್ತು ವೇದ ಪಾಠಗಳ ಅಧ್ಯಯನಕ್ಕೆ ವಿಶೇಷವಾದ ಆದ್ಯತೆ ನೀಡಲಾಗಿತ್ತೇ ಹೊರತು, ವಚನಸಾಹಿತ್ಯದ ಅಧ್ಯಯನಕ್ಕೆ ಯಾವ ಅವಕಾಶವೂ ಇದ್ದಂತೆ ಕಾಣುವುದಿಲ್ಲ. ಆದರೂ ೧೯೩೦-೪೦ರ ದಶಕಗಳಲ್ಲಿ ಇಲ್ಲಿನ ಸರ್ಪಭೂಷಣಮಠದ ಅಧಿಪತಿಗಳಾಗಿದ್ದ ಮಹಾದೇವಸ್ವಾಮಿಗಳು ತಮ್ಮ ಮಠದ ಸಂಸ್ಕೃತ ಮತ್ತು ವೇದಾಧ್ಯಯನ ನಿರತ ವಿದ್ಯಾರ್ಥಿಗಳಿಗೆ ಆಯ್ದ ವಚನಗಳನ್ನು ಕಂಠಪಾಠ ಮಾಡಿಸುವ ಪರಿಪಾಠವನ್ನು ಜಾರಿಗೊಳಿಸಿದ್ದರು.[104] ಆದರೆ ಇದಕ್ಕಾಗಿ ವಿಶೇಷವಾದ ಪರೀಕ್ಷಾ ಕ್ರಮಗಳನ್ನೇನೂ ಅಳವಡಿಸಿರಲಿಲ್ಲ. ಇನ್ನೊಂದು ಮುಖ್ಯವಾದ ವಿಚಾರವೇನೆಂದರೆ, ಇಲ್ಲಿನ ಮಠಗಳು ಪರಂಪರಾನುಗತವಾಗಿ ನಡೆಸುತ್ತಾ ಬಂದಿದ್ದ ವೈದಿಕ ಪಾಠಶಾಲೆಗಳೆಲ್ಲಾ ವೀರಶೈವ ವಿದ್ಯಾರ್ಥಿಗಳಿಗೇ ಮೀಸಲಾಗಿದ್ದುವೇ ಹೊರತು, ಅನ್ಯಮತೀಯರಿಗೆ ಇಲ್ಲಿ ಅವಕಾಶವಿರಲಿಲ್ಲ.

---

## ಅಡಿಟಿಪ್ಪಣಿಗಳು

1. ಫ.ಗು. ಹಳಕಟ್ಟಿ. ಸಮಾಜವೂ ಮಠಗಳೂ. ಶಿವಾನುಭವ. ಸಂ-೨. ೧೯೩೮. ಪು. ೬೮.
2. ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು.. ಪು. ೬೮೬೦-೬೧
3. ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾಯಾಚ ವಿದ್ಯೇತಿಜ್ಞಾತಾ। ವಿದ್ಯಾಭೀಪ್ಸಿನಂ ನಚಿಕೇತ ಸಂಮನ್ಯೇನತ್ವಾಕಾಮಾ ಬಹವ್ಯೋ ಲೋಲುಪಂತ ॥
4. ವಿದ್ಯಾವಿಹೀನಃ ಪಶು ಸಮಾನಃ.
5. ಸರ್ವದ್ರವ್ಯೇಷು ವಿದ್ಯೈವ ಧನಮಾಹುರ ಮತ್ತಮಂ. ಅಹಾರ್ಯತ್ವಾದನರ್ಘ್ಯತ್ವಾದಕ್ಷಯ ತ್ವಾಚ್ಚ ಸರ್ವದಾ ॥
6. ಮಾತೇವ ರಕ್ಷತಿ ಪಿತೇವ ಹಿತೇ ನಿಯುಂಕ್ತೇ ಕಾಂತೇವ ಚಾಪಿ ರಮಯತ್ಯಪನೀಯ ಖೇದಂ। ಲಕ್ಷ್ಮೀಂ ತನೋತಿ ವಿತನೋತಿ ಚ ದಿಕ್ಷು ಕೀರ್ತಿಂ ಕಿಂಕಿಂನ ಸಾಧಯತಿ ಕಲ್ಪಲತೇವ ವಿದ್ಯಾ ॥

7. ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೨೦೬.
8. 'ಅಗ್ರಹಾರ'ವೆಂದರೆ ಬ್ರಾಹ್ಮಣ ಪಂಡಿತರಿಗೆ ಎಲ್ಲ ಆದಾಯವೂ ಸೇರುತ್ತಿದ್ದ ಊರು.
9. ದೊಡ್ಡಪಟ್ಟಣದ ಭಾಗವೊಂದರಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸವಾಗಿದ್ದರೆ ಅದನ್ನು 'ಬ್ರಹ್ಮಪುರಿ' ಎನ್ನುತ್ತಿದ್ದರು.
10. 'ಘಟಿಕಾಸ್ಥಾನ'ದ ಸ್ವರೂಪದ ಬಗೆಗೆ ವಿದ್ವಾಂಸರಲ್ಲೇ ಭಿನ್ನಾಭಿಪ್ರಾಯಗಳಿವೆಯಾದರೂ, ಅದೊಂದು ಧಾರ್ಮಿಕ ಶಿಕ್ಷಣ ಕೇಂದ್ರವೆಂದು ಭಾವಿಸಬಹುದು. (ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಪು. ೨೨೬.)
11. ಡಾ। ಪಿ.ವಿ. ನಾರಾಯಣ. ವಚನಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ. ಪು. ೨೬೪.
12. ಡಾ। ಸಂಗಮೇಶ ಸವದತ್ತಿಮಠ. ವೀರಶೈವ ಮಠಗಳ ಕೊಡುಗೆ. ವಿಶ್ವಪ್ರಭೆ. ಸಂ-೩. ಸಂ: ಪ್ರೊ.ಜಿ.ಎಚ್. ಹನ್ನೆರಡುಮಠ. ಪು. ೫೧೨.
13. ಅದೇ, ಪು. ೫೧೩.
14. ಅದೇ.
15. 'ಶಿವಪುರ'ದ ಉಲ್ಲೇಖಗಳು ವಚನಗಳಲ್ಲೂ (ಚೆನ್ನ ಬಸವಣ್ಣನ ವಚನಗಳು. ವ. ೧೨೭೯. ಪು. ೫೫೭; ಅಲ್ಲಮನ ವಚನ ಚಂದ್ರಿಕೆ. ವ. ೧೦೦೭. ಪು. ೨೨೨) ಹಾಗೂ ಹರಿಹರನ ರಗಳೆಗಳಲ್ಲೂ (ಹರಿಹರನ ರಗಳೆಗಳು. ಪು. ೧, ೨೦, ೫೦, ೨೬೧) ಉಕ್ತವಾಗಿರುವುದನ್ನು ನೋಡಬಹುದು.
16. ಉದ್ಧೃತ : ಡಾ. ಪಿ.ವಿ. ನಾರಾಯಣ. ಪೂರ್ವೋಕ್ತ. ಪು. ೨೬೪.
17. ಕರ್ನಾಟಕ ಗ್ರಾಮಸೂಚಿ. (ಪ್ರ) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪು. ೧೯೦-೧೯೪.
18. Epigraphia Carnatica. Vol-ix. Bangalore-2.
19. ಪಿ.ವಿ. ಕೃಷ್ಣಮೂರ್ತಿ. ಕೆಂಪೇಗೌಡನ ಜಯಪ್ರಶಸ್ತಿ ಒಂದು ಚಾರಿತ್ರಿಕ ಪರಿಶೀಲನೆ. ಇತಿಹಾಸ ದರ್ಶನ. ಸಂ -೪. ೧೯೮೯. ಪು. ೧೧೮.
20. ಹೇಳಿಕೆ : ರೇಣುಕ ಶಿವಾಚಾರ್ಯಸ್ವಾಮಿಗಳು (೬೩) ಮಠಾಧ್ಯಕ್ಷರು. ರಾಜಾಪುರಸಂಸ್ಥಾನಮಠ. ಆನೆಕಲ್ಲು ತಾಲ್ಲೂಕು. ಬೆಂಗಳೂರು ಜಿಲ್ಲೆ.
21. ಕನ್ನಡ ನಿಘಂಟು. ಸಂ-೪. ಕನ್ನಡ ಸಾಹಿತ್ಯ ಪರಿಷತ್ತು. ಪು. ೪೨೦೬.
22. ಅದೇ. ಸಂ-೭, ಪು. ೬೮೬೦, ೬೧.
23. ಹೇಳಿಕೆ : ನಂಜೆಮರಿ (೮೦) ನರಗುಂದದೇವರಮಠ. ಬೆಂಗಳೂರು.
24. ಈಗ ಈ ಗಲ್ಲಿಯಲ್ಲಿರುವ ಶಿಲಾಫಲಕದ ಮೇಲೆ "ಜಂಗಮಮೇಸ್ತ್ರಿಗಲ್ಲಿ" ಎಂದು ಬರೆದಿರುವುದನ್ನು ನೋಡಬಹುದು.
25. Muzrai File No : 21/1906. Sl.No : 1-4. P-7.
26. Register of Muzrai Institutions in Bangalore Taluk. 1902. P.180-185.
27. ಮಡಿವಾಳಯ್ಯನವರ ಪತ್ರ. ಮಾಚೆನಾಯಕನಹಳ್ಳಿಮಠ. ನೆಲಮಂಗಲ ತಾಲ್ಲೂಕು. ತಾರಣ ಸಂವತ್ಸರ (ಕ್ರಿ.ಶ. ೧೮೨೪) ಬೇಲಿಮಠ.
28. 'ಷಹಾನಿರೂಪ'. ಮೈಸೂರು ಮಹಾರಾಜರು. ಪಾರ್ಥಿವ ಸಂವತ್ಸರ ಆಶ್ವೀಜಮಾಸ ಶುದ್ಧ ೬. ಸೋಮವಾರ. (ದಿ:೧೭.೧೦.೧೮೨೫) ಬೇಲಿಮಠ.
29. ಬೇಲಿಮಠದ ಭೂದಾನ ಸನ್ನದು. ಚಿತ್ರಭಾನು ಸಂವತ್ಸರ. ದಿ: ೧೦.೨.೧೮೨೨.
30. ಹೊಸಕೋಟೆಯ ಪ್ರಭುವಯ್ಯನವರ ಪತ್ರ. ಶೋಭಕೃತು ಸಂವತ್ಸರ (ಕ್ರಿ.ಶ. ೧೮೪೩) ಬೇಲಿಮಠ.
31. ಮಾಚೆನಾಯಕನಹಳ್ಳಿ ಗ್ರಾಮಸ್ಥರ ಪತ್ರ. ಸಿದ್ಧಾರ್ಥಿ ಸಂವತ್ಸರ (ಕ್ರಿ.ಶ. ೧೮೫೯) ಬೇಲಿಮಠ.
32. ಮರಳೆಗವಿಮಠದ ಶಿವರುದ್ರಸ್ವಾಮಿಗಳ ಪತ್ರ. ದಿ : ೧೬.೩.೧೮೮೫. ಬೇಲಿಮಠ.
33. ಮುನಿಸಿಪಲ್ ಕಮೀಷನ್ ಕಛೇರಿ ಆದೇಶ ಪತ್ರ. ಸಂ:.೮೬. ದಿ : ೧೬.೧೧.೧೯೮೮. ಬೇಲಿಮಠ.
34. ಶಿವರುದ್ರಸ್ವಾಮಿಗಳು ಬರೆಸಿರುವ ಟ್ರಸ್ಟ್‌ಡೀಡ್ ಪತ್ರ. ಪು. ೬. ಬೇಲಿಮಠ. (ರಿ.ನಂ.: ೩೭೮೮. ವಾಲ್ಯುಂ-೫೭೬. ಪು. ೪೧೮-೪೩೯. ದಿ:೮.೫.೧೯೨೪.)
35. ಅದೇ. ಪುಟ. ೭,೮.
36. ಅದೇ. ಪುಟ. ೨, ೩.
37. Muzrai File No: 140/1945. Sl.No: 1-4. p. 2.
38. Ibid. P. 3
39. ಇದಿಷ್ಟೂ ಮಾಹಿತಿಗಳನ್ನು ಬೇಲಿಮಠದ ಬಿಡಿ ಬಿಡಿ ಕಾಗದ ಪತ್ರಗಳಿಂದ ಹಾಗೂ ವಾರಪತ್ರಿಕೆ (ಸಂ. ಬಿ.ವಿ. ವೈಕುಂಠರಾಜು. ದಿ. ೨೪.೫.೧೯೮೭. ಪು. ೧೫, ೧೬) ಇವುಗಳಿಂದ ಆರಿಸಿಕೊಂಡಿದೆ.
40. ಅದೇ.
41. ಅದೇ.

42. ಮಠದ ಆಡಳಿತ ಮಂಡಳಿಯವರ ಅಸಡ್ಡೆಯಿಂದ ಮೇಲ್ಕಂಡ ಭೂ ಮಂಜೂರಾತಿ ಕೈತಪ್ಪಿ ಹೋದುದಾಗಿ ತಿಳಿದುಬರುತ್ತದೆ. ಹೆಚ್ಚಿನ ವಿವರಗಳಿಗಾಗಿ (ಎಸ್. ಮಹದೇವ ಪ್ರಕಾಶ್. ಬೆಂಗಳೂರಿನ ವೀರಶೈವ ಮಠಗಳ ಆಸ್ತಿ-ಪಾಸ್ತಿ. ಲ. ವಾರಪತ್ರಿಕೆ. ಸಂ : ಬಿ.ವಿ. ವೈಕುಂಠರಾಜು, ದಿ:೨೪.೫.೧೯೮೭. ಪು. ೧೫-೧೬).
43. ನೋಡಿ : ಹಿಂದಿನ ಅಧ್ಯಾಯ-೪. ತಿಪ್ಪಶೆಟ್ಟಿಮಠದ ಐತಿಹಾಸಿಕ ಪರಂಪರೆ.
44. ದಾನಪತ್ರದ ರಿ.ನಂ : ೫೮. ೧ನೇ ಬುಕ್. ೮೬ನೇ ವಾಲ್ಯುಂ. ಪು. ೩೨೨-೩೨೫. ದಿ: ೧೫.೭.೧೮೮೬. ಗಂಜಾಂಮಠ.
45. ನಂಜುಂಡಸ್ವಾಮಿಗಳು. ಸದ್ವಿದ್ಯಾನ್ನದಾನ ಪ್ರಾಭವ ಪ್ರಕಾಶಿಕಾ. ೧೮೯೩. ಪು. ೩.
46. ಅದೇ. ಪು. ೨,೩.
47. ಅದೇ. ಪು. ೩.
48. ಮುರಿಗಾ ಸಂಸ್ಥಾನದಿಂದ ಬಂದಿರುವ ಪತ್ರ. ದಿ : ೨೩.೬.೧೮೯೪. ಗಂಜಾಂಮಠ
49. ಚಿದ್ಘನ ಶಿವಾಚಾರ್ಯರ ದಿನಚರಿ ಪುಸ್ತಕದಲ್ಲಿ ಈ ಬಗೆಗೆ ವಿವರಗಳಿವೆ. ಗಂಜಾಂಮಠ.
50. ಅದೇ.
51. ದಾಖಲೆ ಪತ್ರದ ರಿ.ನ.:೪೨. ೧ನೇ ಬುಕ್. ಪು. ೩೩೮-೩೪೩. ದಿ:೩೦.೧.೧೯೦೧. ಸಬ್‌ರಿಜಿಸ್ಟ್ರಾರ್ ಕಛೇರಿ, ಗುಬ್ಬಿ. ಗಂಜಾಂಮಠ.
52. ಶಾಲಾವಾರ್ಷಿಕ ಪರೀಕ್ಷಾ ಯೋಜನಾ ಪಟ್ಟಿ. ೧೯೧೬. ಪು. ೧. ಗಂಜಾಂಮಠ.
53. ಅದೇ. ಪು. ೨.
54. ಅದೇ. (ಮಾಗಡಿಯ ಈ ವೀರಪ್ಪಶಾಸ್ತ್ರಿಗಳು ಆಗ ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ 'ವೀರಶೈವ ಧರ್ಮ ಸಂಗ್ರಹ' ಎಂಬ ಮಾಸಪತ್ರಿಕೆಯ ಸಂಪಾದಕರಾಗಿದ್ದರು.)
55. ಹೇಳಿಕೆ : ಚಿದ್ಘನಸ್ವಾಮಿಗಳು (೪೭) ಈಗಿನ ಮಠಾಧಿಪತಿ. ಗಂಜಾಂಮಠ. ಬೆಂಗಳೂರು.
56. ಬಸವರಾಜಸ್ವಾಮಿಗಳ ಪಟ್ಟಾಧಿಕಾರ ಮಹೋತ್ಸವದ ಆಹ್ವಾನಪತ್ರ. ದಿ: ೧೫.೯.೧೯೨೪. ಗಂಜಾಂಮಠ.
57. ಹೇಳಿಕೆ : ಶಿವರುದ್ರಸ್ವಾಮಿಗಳು (೫೦) ಮಠಾಧಿಪತಿ. ಬೇಲಿಮಠ, ಬೆಂಗಳೂರು.
58. ಗ್ರಂಥಭಂಡಾರದ ತಪಶೀಲು ಪಟ್ಟಿ. ದಿ: ೬.೧೧.೧೯೬೨. ಗಂಜಾಂಮಠ.
59. ''ಶ್ರೀಮದ್ವೀರಶೈವ ಸಂಸ್ಕೃತ ಧರ್ಮಪಾಠಶಾಲಾ'' ಎಂಬ ಅಂಕಿತವುಳ್ಳ ಕರಪತ್ರ. ದಿ : ೬.೫.೧೯೦೧. ಸರ್ಪಭೂಷಣಮಠ.
60. ಬೆಂಗಳೂರಿನಲ್ಲಿ ೧೮೯೭ರಲ್ಲಿ ಎರಡನೆಯ ಬಾರಿಗೆ ಪ್ಲೇಗುರೋಗವು ಕಾಣಿಸಿಕೊಂಡು ಮುಂದೆ ೧೯೦೦ರ ವರೆಗೆ ಪ್ರಬಲವಾಗಿ ಹರಡಿತ್ತು. ಈ ಸಂದರ್ಭದಲ್ಲಿ ಮೂರು-ನಾಲ್ಕು ವರ್ಷಗಳ ಕಾಲ ಪಟ್ಟಣದ ಎಲ್ಲಾ ಶಿಕ್ಷಣ ಸಂಸ್ಥೆಗಳೂ ಮುಚ್ಚಲ್ಪಟ್ಟಿದ್ದವು.
61. ಪೂರ್ವೋಕ್ತ ಕರಪತ್ರ. ಅದೇ.
62. ಅದೇ.
63. ಹಿಂದೆ ಮಠಗಳಲ್ಲಿ ಸೀಮಿತ ಸಂಖ್ಯೆಯ ವಿದ್ಯಾರ್ಥಿಗಳಿಗೆ ಮಾತ್ರ ಉಚಿತ ಊಟ ಮತ್ತು ವಸತಿಗಳನ್ನು ಕಲ್ಪಿಸಲಾಗುತ್ತಿತ್ತು. ಹೆಚ್ಚುವರಿ ವಿದ್ಯಾರ್ಥಿಗಳು ಒಂದೊಂದು ವಾರ ಒಬ್ಬೊಬ್ಬ ಗೃಹಸ್ಥರ ಮನೆಯಲ್ಲಿ ಊಟೋಪಚಾರ ಪಡೆಯುತ್ತಿದ್ದರು. ಕೆಲವು ವೇಳೆ ದಿನಕ್ಕೊಬ್ಬರ ಮನೆಯಲ್ಲಿ ಇಂತಹ ವಿದ್ಯಾರ್ಥಿಗಳಿಗೆ ಊಟದ ಸೌಲಭ್ಯ ಕಲ್ಪಿಸಲಾಗುತ್ತಿತ್ತು. ಇದೇ ಪರಿಪಾಠವನ್ನು ವಾರಾನ್ನ, ಭಿಕ್ಷಾನ್ನವೆಂದು ಕರೆಯುತ್ತಿದ್ದುದುಂಟು.
64. ೧೯೨೫ರಿಂದ ೧೯೩೨ರ ವರೆಗೆ ಬೆಳ್ಳಾವಿ ನರಹರಿಶಾಸ್ತ್ರಿಗಳು ಸರ್ಪಭೂಷಣ ಮಠದಲ್ಲಿದ್ದ ಮನೆಯೊಂದರಲ್ಲಿ ಬಾಡಿಗೆದಾರರಾಗಿ ವಾಸವಾಗಿದ್ದರು. ಆಗ ಇವರು ಕೋಟೆಯ ಸರ್ಕಾರಿ ಮಾಧ್ಯಮಿಕ ಶಾಲಾ ಮುಖ್ಯಸ್ಥರಾಗಿದ್ದರು. (ಬಾಡಿಗೆ ಕರಾರುಪತ್ರ. ಸರ್ಪಭೂಷಣಮಠ. ದಿ: ೧೭.೩.೧೯೩೦.)
65. ಚನ್ನಬಸವಸ್ವಾಮಿಗಳ ಇಚ್ಛಾಪತ್ರ (ಮರಣಶಾಸನ) ದಿ : ೬.೬.೧೯೨೭. ಸರ್ಪಭೂಷಣಮಠ.
66. Muzrai File No : 111/1928. Sl. No : 3-4. P.5.
67. Ibid. P.6.
68. Ibid. p.3.
69. G.O.No. 103-04/Muz. 111-1928-4 dt : 12th july 1929.
70. ಎಂ.ಜಿ. ನಂಜುಂಡಾರಾಧ್ಯ. ತ್ರಿವಿಧದಾಸೋಹಿ ಗೌಡರ ವೀರಭದ್ರಪ್ಪ. ಪು. ೮೧.
71. Muzrai File No: 111/1928. Sl. No: 3-4, p. 12.13.
72. Muzrai File No: 202/1930. Sl. No: 1-2. P.9,10.
73. 'ಶಿವಾನುಭವ' ಎಂದರೆ - ಶಿವಸಂಬಂಧವಾದ ಆತ್ಮ ಜ್ಞಾನಕ್ಕೆ ಸಂಬಂಧಪಟ್ಟದ್ದು. ಶಿವತತ್ತ್ವದ ಮೂಲಭೂತ ವಿಚಾರಗಳನ್ನು ಕುರಿತ ಜ್ಞಾನಾರ್ಜನೆಗೆ ಸಂಬಂಧಿಸಿದ್ದು. ವೀರಶೈವ ಧರ್ಮಾನುಸಾರ ಈ ಧರ್ಮದ ಮೂಲತತ್ತ್ವಗಳಾದ ಷಟ್‌ಸ್ಥಲ, ಅಷ್ಟಾವರಣ ಹಾಗೂ ಪಂಚಾಚಾರಗಳನ್ನು ಕುರಿತು ವಿಶದವಾದ ತಿಳುವಳಿಕೆಯನ್ನು ನೀಡುವಂಥದ್ದು.

74. ಚ. ಸುಂದರೇಶನ್. ಅಭಿನವ ಅಲ್ಲಮ. ನಿಲವು. ಪು.೮.
75. Dr. H.M. Sadashivaiah. A Comparitive Study of Two Virasaiva Monasteries. 1967. p. 153.
76. "ಶ್ರೀಮದ್ವೀರಶೈವ ಸಂಸ್ಕೃತ ಧರ್ಮಪಾಠಶಾಲಾ" ಎಂಬ ಅಂಕಿತವುಳ್ಳ ಕರಪತ್ರ. ದಿನಾಂಕ:೬.೫.೧೯೦೧. ಸರ್ಪಭೂಷಣಮಠ.
77. ಮಹಾಂತರಮಠದ 'ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಸಂಸ್ಕೃತ ಪಾಠಶಾಲಾ' ಪ್ರಾರಂಭೋತ್ಸವದ ಕರಪತ್ರ. ದಿ: ೨೪.೮.೧೯೨೬.
78. ಬುಳ್ಳಪ್ಪನವರ ದಾನದ ಕರಾರುಪತ್ರ. ದಿ:೧೬.೧೦.೧೯೩೧. ಪು. ೧,೨. ಮಹಾಂತರಮಠ. (ರಿ.ನಂ. ೮೧೧. ೧ನೇ ಬುಕ್. ೧೮೫ನೇ ವಾಲ್ಯುಂ. ಪು. ೨೫೮-೨೬೭)
79. ಅದೇ. ಪು. ೨.
80. ಪೂರ್ವೋಕ್ತ. ಪಾಠಶಾಲಾ ಪ್ರಾರಂಭೋತ್ಸವದ ಕರಪತ್ರ. ದಿ: ೨೪.೮.೧೯೨೬.
81. 'ಮೈಸೂರ್ ಸ್ಟಾರ್' ಪತ್ರಿಕೆ. ಸಂಪುಟ-೪೨. ಸಂಚಿಕೆ-೧೭. ಪು. ೫. ದಿ: ೨೭.೪.೧೯೨೮.
82. ಬುಳ್ಳಪ್ಪನವರ ದಾನದ ಕರಾರುಪತ್ರ (ರಿ.ನಂ: ೮೧೧. ೧ನೇ ಬುಕ್. ೧೮೫ನೇ ವಾಲ್ಯುಂ. ೨೫೮-೨೬೭ನೇ ಪುಟ. ದಿ: ೧೬.೧೦.೧೯೩೧). ಪು. ೧೨. ಮಹಾಂತರಮಠ.
83. ಅದೇ. ಪು. ೩, ೪.
84. ಅದೇ. ಪು. ೫.
85. ಮಹಾಂತರಮಠದ ಪ್ರಕಟಣೆ. (ಕರಪತ್ರ) ದಿ: ೧೨.೫.೧೯೩೧.
86. ಈ ವೇಳೆಯಲ್ಲಿ ಬೆಂಗಳೂರು, ಗುಡೇಮಾರನಹಳ್ಳಿ, ಕನಕಪುರ, ಹಾರೋಹಳ್ಳಿ ಇನ್ನೂ ಮುಂತಾದೆಡೆ ಭಕ್ತರಿಂದ ಅನೇಕ ಸ್ಥಿರ ಆಸ್ತಿಗಳು ಮಠಕ್ಕೆ ದಾನವಾಗಿ ಬಂದುದಾಗಿ ಮಠದ ಕೆಲವು ಕಾಗದ ಪತ್ರಗಳಿಂದ ತಿಳಿದುಬರುತ್ತದೆ.
87. ಹೇಳಿಕೆ : ಷಣ್ಮುಖಯ್ಯ ಅಕ್ಕೂರಮಠ (೫೪) ಮಠದ ಹಳೆಯ ವಿದ್ಯಾರ್ಥಿ. ಉಪನ್ಯಾಸಕರು. ಸರ್ವೋದಯ ಪ್ರಥಮದರ್ಜೆ ಕಾಲೇಜು. ಬೆಂಗಳೂರು.
88. ಗ್ರಂಥಭಂಡಾರದ ಪುಸ್ತಕಗಳ ಪಟ್ಟಿ. ರಚನೆ : ವಿಲೋಚನ ಶರ್ಮ. ದಿ: ೧೪.೯.೧೯೭೨. ಮಹಾಂತರಮಠ.
89. ಮಹಾಂತರಮಠದಲ್ಲಿ ಓದಿದ ಮಠಾಧೀಶರ ಪಟ್ಟಿ.
ಸುವರ್ಣಲಿಂಗ ಶಿವಾಚಾರ್ಯಸ್ವಾಮಿ. ವಿಭೂತಿಪುರದಮಠ, ಬೆಂಗಳೂರು.
ಸೋಮಶೇಖರ ಶಿವಾಚಾರ್ಯಸ್ವಾಮಿ. ಮುತ್ತಿನಕಂತೆಮಠ, ಬೆಂಗಳೂರು.
ಸದ್ಯೋಜಾತಸ್ವಾಮಿ. ದಾವಣಗೆರೆಮಠ.
ಶಾಂತವೀರಸ್ವಾಮಿ. ಕೊಪ್ಪಳದ ಗವಿಮಠ.
ಮರುಳಸಿದ್ಧಸ್ವಾಮಿ. ಕುಪ್ಪೂರುಗದ್ದುಗೆಮಠ.
ಚಂದ್ರಮೌಳಿಶಿವಾಚಾರ್ಯಸ್ವಾಮಿ. ಹರಪನಹಳ್ಳಿಮಠ.
ರೇಣುಕಶಿವಾಚಾರ್ಯಸ್ವಾಮಿ. ರಾಜಾಪುರ ಸಂಸ್ಥಾನಮಠ.
ಪರ್ವತರಾಜ ಶಿವಾಚಾರ್ಯಸ್ವಾಮಿ, ಹುಣಸಮಾರನಹಳ್ಳಿಮಠ.
ಶಂಕರಸ್ವಾಮಿ. ಮಾಗಡಿ ಜಡೇದೇವರಮಠ.
ಕೋಟಗಿ ಪಟ್ಟದದೇವರು. ಸೊಲ್ಲಾಪುರದಮಠ.
ದೊಡ್ಡಗುಣಿಯ ಪಟ್ಟದ್ದೇವರು, ಇನ್ನೂ ಮುಂತಾದವರು.
90. ವಿದ್ವಾಂಸರುಗಳು: ವಿ। ಎಂ.ಎಸ್. ಬಸವರಾಜಯ್ಯ, ಡಾ। ಶಿವಕುಮಾರಸ್ವಾಮಿ, ಡಾ। ಸಿ.ವೀರಣ್ಣ. ವಿ। ದಕ್ಷಿಣಾಮೂರ್ತಿ, ಪಂ। ಷಣ್ಮುಖಯ್ಯ ಅಕ್ಕೂರಮಠ, ವಿ। ಜಿ.ವಿ. ಶಿವಸ್ವಾಮಿ ಇನ್ನೂ ಮುಂತಾದವರು.
91. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರಿನ ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನಚರಿತ್ರೆ (೧೯೫೨) ಪು. ೬
92. ಡಾ। ಜಿ.ಎಸ್. ಶಿವರುದ್ರಪ್ಪ. ಸರ್ಪಭೂಷಣಶಿವಯೋಗಿ. ಎರಡುಮಾತು. (ಪ್ರ.ಕನ್ನಡ ಸಾಹಿತ್ಯ ಪರಿಷತ್ತು ೧೯೫) ಪು. ೧ ಮತ್ತು ಅಂತರಂಗದ ರತ್ನ. ಪು. ೧೦.
93. ಮಲ್ಲಾಬಾದಿ ವೀರಭದ್ರಪ್ಪ. ಪೂರ್ವೋಕ್ತ. ಪು. ೧೦, ೧೧.
94. ಅದೇ. ಪು. ೧೩.
95. ಗುರುಸ್ವಾಮಿಗಳ ಎರಡನೆಯ ಮರಣಶಾಸನ ಪತ್ರ. ಪು. ೧, ೨. ಸರ್ಪಭೂಷಣಮಠ. (ರಿ.ನಂ : ೬. ಸಂ-೩. ಪು. ೫೨-೫೪. ದಿ: ೧೧. ೧೦.೧೮೮೬. ಸಬ್‌ರಿಜಿಸ್ಟ್ರಾರ್ ಆಫೀಸು. ಬೆಂಗಳೂರು.)
96. ಎಸ್. ಮಹದೇವಪ್ರಕಾಶ್. ಬೆಂಗಳೂರಿನ ವೀರಶೈವ ಮಠಗಳ ಆಸ್ತಿ-ಪಾಸ್ತಿಗಳು. ವಾರಪತ್ರಿಕೆ. ಸಂ : ಬಿ.ವಿ. ವೈಕುಂಠರಾಜು ದಿ: ೨೯.೩.೧೯೮೭. ಪು. ೧೦, ೧೧.

97. ಅದೇ.
98. Registered Record No: 910/1960-61. B-1, Vol-1770, P. 86-91. dt: 27.6.1960. Sub Registrar Office, Bangalore.
99. ಎಸ್. ಮಹದೇವಪ್ರಕಾಶ್. ಪೂರ್ವೋಕ್ತ. ಪು. ೧೧.
100. Registered Record No : 2469/1943-44: Vol-668. P. 247-249. dt : 26.1.1994.
101. ಹೇಳಿಕೆ : ಬಿ.ಎನ್. ಶಿವಣ್ಣ (೮೩ ವರ್ಷ. ಗಂಗಶೆಟ್ಟಿಮಠದ ಹಳೆಯ ವಿದ್ಯಾರ್ಥಿ) ನಿವೃತ್ತ ಶಿಕ್ಷಕರು. ಬ್ಯೆಯಂಡಹಳ್ಳಿ, ಬೆಂಗಳೂರು ಉತ್ತರ ತಾಲ್ಲೂಕು.
102. ಹೇಳಿಕೆ : ರೇವಮ್ಮ (೮೪) ಮರಿಸ್ವಾಮಿಮಠದ ನಿವಾಸಿ. ಬೆಂಗಳೂರು.
103. ಇತ್ತೀಚೆಗೆ (೧೯೮೦ರಿಂದ) ಶಿವನಹಳ್ಳಿ ಜಂಗಮಮಠವನ್ನು ದೊಡ್ಡಮಠದವರ ಕಡೆಯಿಂದ ಸಿದ್ಧಗಂಗಾಮಠದವರು ವಹಿಸಿಕೊಂಡ ಮೇಲೆ ಅಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳನ್ನು ಕಟ್ಟಿ ಬೆಳೆಯಿಸಿದ್ದಾರೆ. ಈಗ ಒಂದು ಸಾವಿರ ಮಂದಿ ವಿದ್ಯಾರ್ಥಿಗಳು ಇಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ.
104. ಹೇಳಿಕೆ : ಗಮಕವಿದ್ವಾನ್ ಚನ್ನಬಸಪ್ಪ (೮೭) ನಿವೃತ್ತ ಅಧ್ಯಾಪಕರು. ಮಹಾಲಕ್ಷ್ಮಿ ಬಡಾವಣೆ. ಬೆಂಗಳೂರು.

ಅಧ್ಯಾಯ - ಆರು

# ಮಠಗಳು-ಸಾಮಾಜಿಕವಾಗಿ

---

೬.೧. ದಾಸೋಹ ಕೇಂದ್ರಗಳಾಗಿ

೬.೨. ಸಾಂಸ್ಕೃತಿಕ ಕೇಂದ್ರಗಳಾಗಿ

೬.೩. ವ್ಯವಹಾರ ಕೇಂದ್ರಗಳಾಗಿ

೬.೪. ಆರೋಗ್ಯ ಕೇಂದ್ರಗಳಾಗಿ

೬.೫. ಕಲ್ಯಾಣ ಕೇಂದ್ರಗಳಾಗಿ

೬.೬. ಅಂತ್ಯ ಸಂಸ್ಕಾರದ ಕೇಂದ್ರಗಳಾಗಿ

## ಅಧ್ಯಾಯ - ಆರು

# ೬. ಮಠಗಳು-ಸಾಮಾಜಿಕವಾಗಿ

ಸಮಾಜವೆಂದರೆ ವ್ಯಕ್ತಿಗಳ ಸಮೂಹವೆಂದರ್ಥ. 'ಸಮಾಜ' ಪದದ ವ್ಯಾಪಕತೆಯನ್ನು ಗಣಿಸಿದಾಗ ಒಂದು ಜನಾಂಗ, ಇಲ್ಲವೆ ದೇಶ; ಅಷ್ಟೇ ಏಕೆ ಸಮಸ್ತ ಜಗತ್ತೇ ಸಮಾಜವೆನಿಸುತ್ತದೆ. ಮಾನವ ಎಷ್ಟೇ ಪ್ರತಿಭಾಶಾಲಿಯಾದರೂ ಸಮಾಜವು ಅವನಿಗೆ ಕಾಲಕಾಲಕ್ಕೆ ಅಗತ್ಯವಾದ ಸೂಕ್ತ ಸೌಲಭ್ಯಗಳನ್ನು ಕಲ್ಪಿಸದೇ ಹೋದರೆ ಬದುಕು ಸಾರ್ಥಕವಾಗಲಾರದು. ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ಸಾಮಾಜಿಕ ಸ್ಪಂದನೆಗಳು ಬಹುಮುಖ್ಯ ಪಾತ್ರ ವಹಿಸುತ್ತವೆ.

''ಸಮಾಜಸೇವೆಯು ಯಾವುದೇ ಲಾಭದ ಉದ್ದೇಶದಿಂದ ಸಮುದಾಯದ ಪ್ರಯೋಜನಾರ್ಥವಾಗಿ ರೂಪಿತವಾದುದಲ್ಲ. ಪ್ರತಿಕೂಲ ಪರಿಸ್ಥಿತಿಗೆ ಒಳಗಾದ ವ್ಯಕ್ತಿಗಳು ಮತ್ತು ಗುಂಪುಗಳು ಸಾಮುದಾಯಿಕ ಸಂಪನ್ಮೂಲಗಳನ್ನು ಯಾವುದರ ಮೂಲಕ ದೊರಕಿಸಿಕೊಳ್ಳಬಹುದೋ ಅಂತಹ ಮಾಧ್ಯಮಿಕ ಚಟುವಟಿಕೆಯೇ ಸಮಾಜಸೇವೆ. ಇದೊಂದು ಪವಿತ್ರ ವೃತ್ತಿ, ಒಂದು ವ್ಯವಸ್ಥಿತ ಕ್ರಮ. ಜನರ ಅಂತರಂಗದಲ್ಲಿ ಸುಪ್ತವಾಗಿರುವ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರ ಗೊಳಿಸುವುದು. ಎಚ್ಚರಗೊಳಿಸಿದ್ದನ್ನು ಕ್ರಿಯಾತ್ಮಕ ಗೊಳಿಸುವುದು. ಹೀಗೆ ಸಮಾಜದ ಒಳಿತಿಗಾಗಿ ನಡೆಯುವ ವ್ಯಕ್ತಿಗತ ಹಾಗೂ ಸಾಮಾಜಿಕ ಚಟುವಟಿಕೆಗಳು ಸಮಾಜಸೇವೆಗಳೆನಿಸುತ್ತವೆ''ಎಂಬುದಾಗಿ ಸಮಾಜಶಾಸ್ತ್ರಜ್ಞ ಎ.ಇ. ಫಿಂಕ್ ಹೇಳಿದ್ದಾನೆ.[1]

ವೀರಶೈವ ಮಠಗಳು ಸಾಮಾನ್ಯವಾಗಿ ಸಾಕಷ್ಟು ಆಸ್ತಿ-ಪಾಸ್ತಿಯುಳ್ಳವಾಗಿದ್ದು ಭಕ್ತರಿಂದ, ರಾಜಮಹಾರಾಜರಿಂದ ಬಹಳಷ್ಟು ದಾನಧರ್ಮಗಳನ್ನು ಪಡೆದಿದ್ದವು. ಇವು ಮೂಲತಃ ಧಾರ್ಮಿಕ ಸಂಸ್ಥೆಗಳೇ ಆಗಿದ್ದರೂ, ಸಾಮಾಜಿಕವಾಗಿ ಹಲವು ನಿಟ್ಟಿನಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತವೆ. ಇವುಗಳ ಕಾರ್ಯ ಕಾರಣದ ಮೂಲ ಮಾಧ್ಯಮವು ಧರ್ಮದ ತಳಹದಿಯುಳ್ಳದ್ದಾಗಿದ್ದರೂ, ಅದು ಸಾಮಾಜಿಕ ಚಟುವಟಿಕೆಗಳ ಬಗೆಗೆ ಪರಿಷ್ಕಾರ ಕ್ರಮವುಳ್ಳದಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಮಠಗಳ ಬಹಳಷ್ಟು ಸೇವಾಕಾರ್ಯಗಳು ಜನಪರವಾದ ಮೌಲ್ಯಗಳನ್ನು ಉಳ್ಳವಾಗಿರುತ್ತವೆ. ಇದೇ ಕಾರಣಕ್ಕಾಗಿ ಈ ಹೊತ್ತಿಗೂ ಕೂಡ ಮಠಗಳ ಬಗೆಗೆ ಜನಸಾಮಾನ್ಯರಲ್ಲಿ ವಿಶೇಷವಾದ ಭಕ್ತಿ-ಗೌರವಗಳು ಉಳಿದು ಬರುವಂತಾಗಿದೆ.

ಸಾಮಾನ್ಯವಾಗಿ ಮಠಗಳಲ್ಲಿ ಪೂಜಾದಿ ಕ್ರಿಯಾವಿಧಿಗಳೇ ವಿಶೇಷವಾಗಿ ಕಾಣಬರುವುದಾದರೂ ಬಂದು ಹೋಗುವ ಭಕ್ತರಿಗೆ ಪೂಜೆ, ಪ್ರಸಾದ, ಪ್ರವಚನಗಳ ಮೂಲಕ ಜನಮನವನ್ನು ತಣಿಸುತ್ತಿದ್ದುದುಂಟು. ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ಬಿತ್ತಿಬೆಳೆದ ಸಾಮಾಜಿಕ ಕ್ರಾಂತಿಯ ಬೇರುಗಳು ವೀರಶೈವಮಠಗಳಲ್ಲಿ ಇಂದಿಗೂ ಹೊಸತನವನ್ನು ಮೂಡಿಸುತ್ತಲಿವೆ. ಹಿಂದೆ ಶಿವಶರಣರು, ಬದುಕನ್ನು ಹಸನು ಮಾಡಿಕೊಂಡು ಇಲ್ಲಿ ಸಲ್ಲುವವರು ಮುಂದೆ ಪರಲೋಕದಲ್ಲೂ ಅರ್ಹರಾಗುತ್ತೇವೆ ಎಂಬ ಸಾರ್ವಕಾಲಿಕ ಸತ್ಯವನ್ನು ಸಾರಿದ್ದರು. ಇದೇ ಸತ್ಪರಂಪರೆಯನ್ನು ಮುಂದುವರೆಸಿದ ವೀರಶೈವಮಠಗಳು, ಮುಂದೆ ನಾನಾ ಬಗೆಯ ಕಾರ್ಯಯೋಜನೆಗಳನ್ನು ರೂಪಿಸಿದ್ದವು. ತತ್ಫಲವಾಗಿ ಮಠಗಳು ದಾಸೋಹ, ಧಾರ್ಮಿಕ, ಶೈಕ್ಷಣಿಕ,[2] ಸಾಂಸ್ಕೃತಿಕ, ವ್ಯವಹಾರ, ಕಲ್ಯಾಣ ಹಾಗೂ ಅಂತ್ಯಸಂಸ್ಕಾರದ ಕೇಂದ್ರಗಳಾಗಿ ಕಾರ್ಯ ನಿರ್ವಹಿಸತೊಡಗಿದವು. ಹೀಗೆ ಸಾಮಾಜಿಕವಾಗಿ ನಾನಾ ವಿಧವಾದ ಜನಸೇವಾ ಕೇಂದ್ರಗಳಾಗಿ ಬೆಂಗಳೂರಿನ

ವೀರಶೈವ ಮಠಗಳು ಸಲ್ಲಿಸಿದ ಸಾಮಾಜಿಕ ಸೇವೆಗಳನ್ನು ಕುರಿತು ಮುಂದೆ ಪರಿಶೀಲಿಸಲಾಗಿದೆ.

### ೬.೧. ದಾಸೋಹ ಕೇಂದ್ರಗಳಾಗಿ

ಸಂಸ್ಕೃತದ 'ದಾಸಃ + ಅಹಂ' ಎಂಬ ಪದಗಳು ಸೇರಿ ಕನ್ನಡದಲ್ಲಿ 'ದಾಸೋಹಂ' ಎಂಬ ಪದವಾಗಿ ರೂಪುಗೊಂಡಿದೆ. 'ದಾಸೋಹ'ವೆಂದರೆ "ನಾನು ಸೇವಕ" ಎಂಬ ಭಾವನೆ ಉಳ್ಳದ್ದು. ಅಂದರೆ ತಾನು ಸೇವಕನಂತೆ ಶುಶ್ರೂಷೆ ಮಾಡುವುದು ತನ್ನ ಕರ್ತವ್ಯವೆಂದು ಭಾವಿಸುವುದು ಎಂದರ್ಥ.[3] ವೀರಶೈವರಲ್ಲಿ ದಾಸೋಹದ ಪರಿಕಲ್ಪನೆಯೆ ಬಹಳ ಪವಿತ್ರಭಾವನೆಯುಳ್ಳದ್ದಾಗಿದೆ. ಹನ್ನೆರಡನೆಯ ಶತಮಾನದ ವಚನಕಾರರು ಗುರು-ಲಿಂಗ-ಜಂಗಮರಿಗೆ ಮಾಡಬೇಕಾಗಿದ್ದ ಸೇವೆಯನ್ನು ತ್ರಿವಿಧ ದಾಸೋಹವೆಂದೇ ಪರಿಭಾವಿಸಿದ್ದರು.[4] ಎಷ್ಟೇ ವಿಧವಾದ ಪೂಜೆ, ದಾಸೋಹವಿಲ್ಲದೆ ನಿಷ್ಪ್ರಯೋಜನ ಎಂಬುದು ವಚನಕಾರರ ನಿಲುವಾಗಿತ್ತು. ಇಲ್ಲೂ ಕೂಡ ಕಿಂಕರ ಭಾವದಿಂದ ಮಾಡುವ ಗುರು-ಲಿಂಗ-ಜಂಗಮ ಸೇವೆ ಎಂದೇ ಅರ್ಥೈಸಲಾಗಿತ್ತು.

ದಾಸೋಹವು ದಾನವಲ್ಲ. ದಾನಕ್ಕೂ ದಾಸೋಹಕ್ಕೂ ವ್ಯತ್ಯಾಸವಿದೆ. ವ್ಯಕ್ತಿ ತಾನು ಗಳಿಸಿದ್ದನ್ನು ಅನ್ಯರಿಗೆ ನೀಡುವುದು ದಾನ. ದಾಸೋಹವೆಂಬುದು ವ್ಯಕ್ತಿ ತಾನು ಗಳಿಸಿದ್ದನ್ನು ಎಲ್ಲರೊಡನೆ ಸಮಭಾವದಿಂದ ಹಂಚಿಕೊಳ್ಳುವುದು ಎಂದರ್ಥ. ದಾನವು ಯಜಮಾನ ಸಂಸ್ಕೃತಿಯ ಪ್ರತೀಕವಾದರೆ, ದಾಸೋಹವು ಸಮಾನತೆಯ ಸಂಸ್ಕೃತಿಯ ಪ್ರತೀಕವಾಗಿದೆ.[5] ದಾಸೋಹವೆಂಬುದು ಯಾವುದೇ ಬಗೆಯ ಹಂಗಿಗೆ ಒಳಪಡದ ಒಂದು ಪ್ರಕ್ರಿಯೆ. ಇಲ್ಲಿ ನೀಡುವಾತ ಹೇಗೋ ಹಾಗೆಯೇ ಪಡೆದಾತನೂ ಕೂಡ ಹಂಗಿನಿಂದ ಅತೀತ ಭಾವನೆಯುಳ್ಳವನಾಗಿರುತ್ತಾನೆ.

ಮಠಗಳಿಗೂ ದಾಸೋಹಕ್ಕೂ ಇರುವ ನಂಟು ಬಹಳ ಹಳೆಯದು. ಪ್ರಾಯಶಃ ಮಠಗಳು ಪ್ರಾರಂಭವಾದಾಗಲೇ ಅದರ ಒಂದು ಪ್ರಮುಖ ಅಂಗವಾಗಿ ದಾಸೋಹ ಪ್ರಾರಂಭವಾಗಿದೆ. ಹಿಂದೆ ಮಠಗಳು ಸಾಧು-ಸಂತರಿಗೆ, ಯಾತ್ರಾರ್ಥಿಗಳಿಗೆ ನಿರಂತರವಾಗಿ ಅನ್ನದಾನ ಮಾಡುವ ಕೇಂದ್ರಗಳಾಗಿದ್ದುದರಿಂದ, ಅಲ್ಲಿ ಭೋಜನಶಾಲೆ ಅಥವಾ ಅನ್ನಛತ್ರಗಳು ಮಠದ ಅವಿಭಾಜ್ಯ ಅಂಗಗಳಾಗಿದ್ದವು. ಎಷ್ಟೋ ವೇಳೆ ಅಯ್ಯನವರ ಮಠಗಳು ಅನ್ನಛತ್ರಗಳೆಂದೇ ಪರಿಭಾವಿಸಲ್ಪಟ್ಟಿದ್ದವು.[6] ಇಲ್ಲಿ ಮಠಗಳಿಂದಾಗಿ ಅನ್ನಛತ್ರಗಳಾಗಿವೆಯೇ ಹೊರತು, ಅನ್ನಛತ್ರಗಳಿಂದಾಗಿ ಮಠಗಳಾಗಿರಲಾರವು ಎಂಬುದನ್ನು ಗಮನಿಸಬೇಕು.

ಬೆಂಗಳೂರಿನಲ್ಲಿ ಇಮ್ಮಡಿಕೆಂಪೇಗೌಡನ ಕಾಲ (ಕ್ರಿ.ಶ. ೧೬೩೩)ದ ಒಂದು ವೀರಶೈವಮಠವನ್ನು 'ಧರ್ಮಶಾಲಾಮಠ'ವೆಂದೇ ಕರೆಯಲಾಗಿದೆ.[7] ಹೆಸರೇ ಸೂಚಿಸುವಂತೆ ಈ ಮಠವು ಧರ್ಮಶಾಲೆ (ಅನ್ನಛತ್ರ) ಯಾಗಿ ಕಾರ್ಯ ನಿರ್ವಹಿಸಿದ್ದರ ಸೂಚನೆಗಳಿವೆ. ಅತಿಥಿ ಅಭ್ಯಾಗತರಿಗೆ ಹಾಗೂ ನಿರಾಶ್ರಿತರಿಗೆ ಉಚಿತ ಊಟೋಪಚಾರಗಳ ವ್ಯವಸ್ಥೆಗಾಗಿಯೇ ನಿರ್ಮಾಣವಾಗಿದ್ದ ಈ ಮಠವು, ಅಂದು ಬೆಂಗಳೂರಿನ ಪ್ರಮುಖ ದಾಸೋಹ ಕೇಂದ್ರವಾಗಿದ್ದು 'ಧರ್ಮಶಾಲಾಮಠ' ಎನ್ನಿಸಿಕೊಂಡಿತ್ತು.

ಕ್ರಿ.ಶ. ೧೬೮೭ರಿಂದ ಬೆಂಗಳೂರು ಪಟ್ಟಣವು ಮೈಸೂರಿನ ಚಿಕ್ಕದೇವರಾಜ ಒಡೆಯರ ಸ್ವಾಧೀನಕ್ಕೆ ಬಂದಮೇಲೆ[8] ಇದನ್ನು ಪ್ರಸಿದ್ಧ ವ್ಯಾಪಾರಿ ಕೇಂದ್ರವನ್ನಾಗಿ ಮಾಡಲು ಸಕಲ ಪ್ರಯತ್ನಗಳನ್ನು ನಡೆಸಿದ್ದರು. ಆಗ ದೇಶದ ನಾನಾಭಾಗದ ಕರಕುಶಲಿಗಳು, ವರ್ತಕರು, ವಿವಿಧ ಉದ್ದಿಮೆದಾರರು ಬೆಂಗಳೂರು ಪಟ್ಟಣಕ್ಕೆ ಬಂದು ನೆಲೆಸುವಂತಾಯಿತು. ಈ ಮಧ್ಯೆ ಪ್ರತಿನಿತ್ಯ ಪಟ್ಟಣಕ್ಕೆ ಬಂದು ಹೋಗುವ ವ್ಯಾಪಾರ, ವ್ಯವಹಾರಸ್ಥರು ಹಾಗೂ ಪ್ರವಾಸಿಗಳಿಗೆ ಮುಕ್ತವಾದ ಅವಕಾಶ ದೊರಕಿದ್ದಿತು. ಇಂತಹ ಪರಸ್ಥಳದ ಜನರಿಗೆ ಪಟ್ಟಣದಲ್ಲಿದ್ದ ಅಂದಿನ ಮಠಗಳಲ್ಲಿ ಮಾತ್ರ ಆಶ್ರಯ ದೊರೆಯುತ್ತಿತ್ತು. ೧೮ನೆಯ ಶತಮಾನದ ಪೂರ್ವಾರ್ಧದಲ್ಲಿ ಮೇಲ್ಕಂಡ ಈ ತೆರನಾದ ಜನಸೇವೆಗಾಗಿಯೇ ಬೆಂಗಳೂರಿನಲ್ಲಿ ಅನೇಕ ವೀರಶೈವಮಠಗಳು ಹುಟ್ಟಿಕೊಂಡಿದ್ದವು.

ನಗರದ ಪಶ್ಚಿಮ ಕಾರ್ಡ್ ರಸ್ತೆಗೆ ಸಮೀಪದಲ್ಲಿರುವ ಶಿವನಹಳ್ಳಿ ಜಂಗಮಮಠವು ಹಿಂದೆ ಕ್ರಿ.ಶ. ೧೭೮೨ರ ವೇಳೆಗಾಗಲೇ ಸಾಕಷ್ಟು ಸಮಾಜ ಸೇವಾ ಕಾರ್ಯಗಳಲ್ಲಿ ತೊಡಗಿದ್ದುದಕ್ಕೆ ಸೂಕ್ತ ಆಧಾರಗಳಿವೆ. ಮೇಲ್ಕಂಡ ಮಠದ ಅಂದಿನ ಮಠಾಧೀಶರಾಗಿದ್ದ ನಾಗಭೂಷಣದ ಸಂಗನಬಸವಪ್ಪ ದೇವರಿಗೆ, ಅವರು ತಮ್ಮ ಮಠದಲ್ಲಿ ನಿತ್ಯ ನಡೆಸುತ್ತಿದ್ದ 'ಧರ್ಮದಾಸೋಹ' ಹಾಗೂ 'ದೀಪಾರಾಧನೆ'ಗಳಿಗಾಗಿ ಕುಳವೊಂದಕ್ಕೆ ಕಂಠೀರಾಯಿ

ಒಂದು ಹಣದಂತೆ ಪ್ರತಿವರ್ಷ ಕೊಡುವುದಾಗಿ 'ದಂಡಿನಪೇಟೆ'[9] ಹಾಗೂ 'ಅರಳೆಪೇಟೆ'ಯ ಭಕ್ತರು ದಾನ ಶಾಸನವೊಂದನ್ನು ಬರೆದುಕೊಟ್ಟಿದ್ದಾರೆ.[10] ಈ ಸೂಚನೆಗಳಿಂದಾಗಿ ೧೮ನೆಯ ಶತಮಾನದ ಉತ್ತರಾರ್ಧದ ವೇಳೆಗೆ ಮೇಲ್ಕಂಡ ಮಠದಲ್ಲಿ ದಾಸೋಹ ಸೇವೆ ನಡೆಯುತ್ತಿದ್ದುದು ಸ್ಪಷ್ಟವಾದಂತಾಗಿದೆ. ಹೀಗಾಗಿ ಶಿವನಹಳ್ಳಿ ಜಂಗಮಮಠವು, ಸಿಕ್ಕಿರುವ ಅಧಿಕೃತ ದಾಖಲೆಗಳ ಪ್ರಕಾರ, ಕಳೆದ ಎರಡು ಶತಮಾನಗಳಿಗೂ ಹಿಂದಿನಿಂದಲೇ ದಾಸೋಹ ಕೇಂದ್ರವಾಗಿ ಬೆಂಗಳೂರಿನ ಉಳಿದೆಲ್ಲಾ ಮಠಗಳಿಗೂ ಮುಂಚೂಣಿಯಲ್ಲಿದ್ದುದಾಗಿ ತಿಳಿದುಬರುತ್ತದೆ.

ಟಿಪ್ಪುವಿನ ಮರಣಾ (ಕ್ರಿ.ಶ. ೧೭೯೯)ನಂತರ ಬೆಂಗಳೂರು ಪಟ್ಟಣದಲ್ಲಿ ಪರಸ್ಥಳದಿಂದ ಬಂದುಹೋಗುವ ವ್ಯಾಪಾರ ವ್ಯವಹಾರಸ್ಥರಿಗೆ ಮುಕ್ತವಾದ ಅವಕಾಶ ದೊರಕಿತ್ತು. ಆಗ ದೂರದ ಪಟ್ಟಣಗಳಾಗಿದ್ದ ಮುಂಬಯಿ, ಹೈದರಾಬಾದು, ಕಲ್ಲಿಕೋಟೆ ಹಾಗೂ ಉತ್ತರ ಕರ್ನಾಟಕದ ಬಹುಭಾಗದ ವ್ಯಾಪಾರಿಗಳು ಹಾಗೂ ಉದ್ದಿಮೆದಾರರು ಅನಿರ್ಬಾಧಿತ ವಾಗಿ ಬಂದುಹೋಗುವುದು ಮಾಮೂಲಾಗಿತ್ತು. ಈ ವೇಳೆಗಾಗಲೇ ಪಟ್ಟಣದಲ್ಲಿ ಪ್ರಸಿದ್ಧ ಮಠಗಳಾಗಿದ್ದ ತೋಟದದೇವರಮಠ, ದೊಡ್ಡಮಠ, ಬೇಲಿಮಠ, ಕರಿಸಿದ್ಧೇಶ್ವರಮಠ, ಗಂಜಾಂಮಠ, ಶಂಕರದೇವರಮಠ, ದೇಶದಮಠ ಇವೇ ಮೊದಲಾದ ಮಠಗಳು ಪರಸ್ಥಳದ ವರ್ತಕವುಂಡಳಿಯವರಿಗೆ ಉಚಿತ ಪ್ರಸಾದ ಹಾಗೂ ಪೂಜಾ ಸೌಲಭ್ಯಗಳನ್ನು ಕಲ್ಪಿಸುವ ಮೂಲಕ ಬೆಂಗಳೂರಿನ ಪ್ರಮುಖ ದಾಸೋಹ ಕೇಂದ್ರಗಳಾಗಿದ್ದವು.[11]

೧೯ನೆಯ ಶತಮಾನದ ಆರಂಭದ ವೇಳೆಗೆ ಬೆಂಗಳೂರಿನ ಪ್ರಸಿದ್ಧ ವರ್ತಕರಾಗಿದ್ದ ತಿಪ್ಪಶೆಟ್ಟರು ಹನುಮಂತಪುರ ಗ್ರಾಮ (ಈಗಿನ ಗಾಂಧಿನಗರ)ದಲ್ಲಿ ಒಂದು ಮಠವನ್ನು ಸ್ಥಾಪಿಸಿದ್ದರು. ಅಲ್ಲಿ ಪ್ರತಿನಿತ್ಯ ಪಟ್ಟಣಕ್ಕೆ ಬಂದು ಹೋಗುವ ಪರಸ್ಥಳದ ಜನರಿಗೆ ಹಾಗೂ ವಿದ್ಯಾಭ್ಯಾಸ ನಿರತರಾದ ವಿದ್ಯಾರ್ಥಿಗಳಿಗೆ ನಿತ್ಯವೂ ಉಚಿತ ದಾಸೋಹ ನಡೆಸುವ ವ್ಯವಸ್ಥೆ ಮಾಡಿದ್ದರು.[12] ಅಂದಿನ ವೀರಶೈವಮಠಗಳಲ್ಲಿ ಸಾಮಾನ್ಯವಾಗಿ ಶಿಷ್ಯಾರ್ಜನೆ ಹಾಗೂ ಗಣಾರಾಧನೆ (ಪಾಠಶಾಲೆ ಮತ್ತು ಪ್ರಸಾದ ನಿಲಯ)ಗಳು ನಡೆಯುವುದು ಮಾಮೂಲು ಪದ್ಧತಿಯಾಗಿತ್ತು. ಜೊತೆಗೆ ದೂರದ ಊರುಗಳಿಂದ ಬಂದ ಜನರಿಗೆ ಮಠಗಳೇ ಪ್ರಮುಖ ಆಶ್ರಿತ ಕೇಂದ್ರಗಳಾಗಿದ್ದವು.

ಅಂದಿನ ಮಠಗಳ ಸಮಾಜಸೇವಾಕಾರ್ಯಗಳಿಗೆ ಪೋಷಕವಾಗಿ ರಾಜಮಹಾರಾಜರು, ಧನಿಕ ಶ್ರೇಷ್ಠರು, ಪ್ರಸಿದ್ಧ ವರ್ತಕರು ಅನೇಕ ಬಗೆಯ ದಾನಧರ್ಮಗಳನ್ನು ನೀಡಿದ್ದರು. ಇದೇ ವೇಳೆಗೆ (ಕ್ರಿ.ಶ. ೧೮೦೮-೧೮೨೨)ಮೈಸೂರು ಮುಮ್ಮಡಿ ಕೃಷ್ಣರಾಜ ಒಡೆಯರು ಬೆಂಗಳೂರಿನ ಹದಿನೆಂಟು ವೀರಶೈವಮಠಗಳಿಗೆ ಇಲ್ಲಿ ನಡೆಯುತ್ತಿದ್ದ ನಿತ್ಯ ಸಮಾರಾಧನೆ ಮತ್ತು ಶಿಷ್ಯಾರ್ಜನೆಗೆ ಪೋಷಕವಾಗಿ ಉಚಿತ ಭೂದಾನ ಮಾಡಿರುವ ದಾಖಲೆ ಗಳಿವೆ.[13] ಅಂದರೆ ೧೯ನೆಯ ಶತಮಾನದ ಆರಂಭದ ವೇಳೆಯಲ್ಲಿ ಬೆಂಗಳೂರಿನ ಬಹುತೇಕ ಮಠಗಳು ಪ್ರಮುಖ ದಾಸೋಹ ಕೇಂದ್ರಗಳಾಗಿ ಸೇವಾನಿರತವಾಗಿದ್ದುದು ಮೇಲ್ಕಂಡ ದಾಖಲೆಗಳಿಂದ ಸ್ಪಷ್ಟವಾಗಿದೆ. ಇಂತಹ ಮಠಗಳು ಯಾವುವೆಂದರೆ...

ಅರಳೆಪೇಟೆಯ-ಬೇಲಿಮಠ, ದೊಡ್ಡಮಠ, ದೇಶದ ಮಠಗಳು, ಹನುಮಂತಪುರ ಗ್ರಾಮದ ತಿಪ್ಪಶೆಟ್ಟಿಮಠ, ಗೊಟ್ಟೂರಯ್ಯ (ಗೋದೂರಯ್ಯ)ನಮಠಗಳು, ಹನುಮಂತಪುರ ಗ್ರಾಮ ಸಮ್ಮತುವಿನ ಗುರುವಣ್ಣ ದೇವರಮಠ, ದೊಡ್ಡಪೇಟೆಯ ಕರಿಸಿದ್ಧೇಶ್ವರಮಠ, ಚಿಕ್ಕಪೇಟೆಯ ಬಸವಲಿಂಗಶಾಸ್ತ್ರಿಮಠ, ಮಾಮೂಲು ಪೇಟೆಯ ಜಂಗಮಮಠ, ಸುಂಕೇನಹಳ್ಳಿಯ ಜಂಗಮಮಠ, ಶಿವನಹಳ್ಳಿಯ ಜಂಗಮಮಠ, ಯಶವಂತಪುರದ ಗದ್ದುಗೆಮಠ, ಅಣ್ಣೆಪುರದ ಕೊಳಲಮಠ, ಕಳಾಸಿಪಾಳ್ಯದ ಮರಿಸ್ವಾಮಿಮಠ, ದೊಡ್ಡಕುಂಟೆ ಗ್ರಾಮದ ಮಹಾಲಿಂಗ ಸ್ವಾಮಿಮಠ, ದಂಡಿನಬೀಡು ಅಂಕಲೇಶ್ವರಮಠ, ಸಿದ್ಧರಾಮನದಿಣ್ಣೆ ಗವಿಮಠ, ವಿಭೂತಿಪುರದ ವೀರಸಿಂಹಾಸನದ ಮಠಗಳು.

೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಅರಳೆಪೇಟೆಯ ತೋಟದದೇವರಮಠವೂ, ದೂರಪ್ರಾಂತ್ಯ ಗಳಿಂದ ಬರುತ್ತಿದ್ದ ವರ್ತಕ ಸಮುದಾಯದವರಿಗೆ ಪ್ರಮುಖವಾದ ಆಶ್ರಿತ ಕೇಂದ್ರವಾಗಿತ್ತು. ಈ ಮಠದಲ್ಲಿ ನಿರಂತರವಾಗಿ ನಡೆಯುತ್ತಿದ್ದ 'ಧರ್ಮದಾಸೋಹ'ಕ್ಕೆ ಬೆಂಬಲವಾಗಿ, ಯಲಹಂಕದ ಬಳಿಯ ಹುಣಸಮಾರನ ಹಳ್ಳಿಯ ಪಟ್ಟದ ಪರ್ವತಸ್ವಾಮಿಗಳು (ಮುಮ್ಮಡಿ)

ತಮ್ಮ ಮಠಕ್ಕೆ ಸೇರಿದ್ದ ಮೂರು ಕೊಳಗ ಬೀಜವರಿ ವಿಸ್ತೀರ್ಣದ ಜಮೀನನ್ನು, ಕ್ರಿ.ಶ. ೧೮೩೪ರಲ್ಲಿ ತೋಟದ ಸ್ವಾಮಿ (ಇಮ್ಮಡಿ)ಗಳಿಗೆ 'ಶಿವಾರ್ಪಿತ'ವಾಗಿ ದಾನ ಮಾಡಿದ್ದರು.[14] ಮುಂದೆ ಇದೇ ಮಠಕ್ಕೆ ಕ್ರಿ.ಶ.೧೮೬೭ರಲ್ಲಿ ಅಮೃತಸಾಗರದ ಅರಳೆಪೇಟೆಗೆ ಅರಳೆವ್ಯಾಪಾರಕ್ಕಾಗಿ ಬರುತ್ತಿದ್ದ ಸ್ಥಳ-ಪರಸ್ಥಳದ ಅರಳೆ ವ್ಯಾಪಾರಿಗಳು, ತಮ್ಮ ವ್ಯಾಪಾರದ ಲಾಭದಲ್ಲಿ ಇಪ್ಪತ್ತನೇ ಒಂದು ಅಂಶವನ್ನು ಮೇಲ್ಕಂಡ ಮಠದ 'ಧರ್ಮದಾಸೋಹ'ಕ್ಕಾಗಿ ಕೊಡುವಂತೆ ದಾನ ಶಾಸನವೊಂದನ್ನು ಬರೆದುಕೊಟ್ಟಿದ್ದರು.[15] ಈ ದಾನದ ಬಗೆಯು ತಮ್ಮ ಪುತ್ರಪೌತ್ರ ಪಾರಂಪರ್ಯವಾಗಿ ನಡೆದುಬರುವಂತೆ ಸೂಚಿಸಲಾಗಿತ್ತು. ಮೇಲ್ಕಂಡ ಎರಡೂ ದಾನಶಾಸನ ಪತ್ರಗಳ ಪ್ರಕಾರ ಇಲ್ಲಿಗೆ ೧೮೦ ವರ್ಷಗಳಷ್ಟು ಹಿಂದಿನಿಂದಲೇ ಅರಳೆಪೇಟೆಯ ತೋಟದ ದೇವರಮಠವು, ದೂರದಿಂದ ಬಂದಂತಹ ಭಕ್ತರಿಗೆ ಹಾಗೂ ವರ್ತಕರಿಗೆ ಉಚಿತ ಊಟೋಪಚಾರ ಹಾಗೂ ಪೂಜೆ ಪ್ರಸಾದಗಳ ಸೌಲಭ್ಯಗಳನ್ನು ಕಲ್ಪಿಸಿಕೊಡುವ ಬೆಂಗಳೂರಿನ ಪ್ರಮುಖ ಧರ್ಮದಾಸೋಹ ಕೇಂದ್ರವಾಗಿದ್ದುದು ಖಚಿತವಾದ ವಿಚಾರವಾಗಿದೆ.

ದೊಡ್ಡಪೇಟೆಯ ಕರಿಸಿದ್ಧೇಶ್ವರಮಠದ ಸಂಪಾದನೆಯ ಗುರುಪಾದಯ್ಯನವರಿಗೆ ಕ್ರಿ.ಶ. ೧೮೪೦ರಲ್ಲಿ ಚನ್ನಪಟ್ಟಣದ ಇಮ್ಮಡಿ ತಿಮ್ಮಪ್ಪರಾಜಯ್ಯನೆಂಬ ಪಾಳೆಯಗಾರನು ಭೂದಾನ ಶಾಸನವೊಂದನ್ನು ಬರೆದುಕೊಟ್ಟಿದ್ದಾನೆ.[16] ಅದರ ಪ್ರಕಾರ 'ಸಂಪಾದನೆ ಗುರುಪಾದಯ್ಯನವರಿಗೆ ಕಗ್ಗಲಿಪುರಗ್ರಾಮದ (ಕನಕಪುರಮಾರ್ಗ) ಊರ ಮುಂದೆ ಮಠವೊಂದನ್ನು ಕಟ್ಟಿಸಿಕೊಟ್ಟು, ಸದರಿ ಮಠಕ್ಕೆ ನಾಲ್ಕುಕೊಳಗದ, ಒಂದು ಬಳ್ಳದ ಒಂದೂಕಾಲು ಪಡಿಯಷ್ಟು ಬೀಜವರಿ ವಿಸ್ತೀರ್ಣದ ಜಮೀನುಗಳನ್ನು ''ಈಶ್ವರಾರ್ಪಣ''ವಾಗಿ ದಾನ ಮಾಡಲಾಗಿತ್ತು'. ಪ್ರಸ್ತುತ ಭೂಮಿಯ ಹುಟ್ಟುವಳಿಯಿಂದ ಮಾರ್ಗಮಧ್ಯದಲ್ಲಿ ಬಂದ ಜನಗಳಿಗೆ ಅನ್ನೋದಕಗಳನ್ನೂ, ಅಗ್ನಿ-ವಿಭೂತಿಗಳನ್ನೂ ಕೊಟ್ಟುಕೊಂಡು ಹೋಗುವಂತೆ ಸೂಚಿಸಲಾಗಿತ್ತು.

ಬೆಂಗಳೂರಿನ ಸುಪ್ರಸಿದ್ಧ ಶಿವಜ್ಞಾನಿಗಳೆನಿಸಿದ್ದ ಸರ್ಪಭೂಷಣರ ಮಠದ ಎರಡನೆಯ ಗುರುಗಳಾಗಿದ್ದ ಫಾಲಲೋಚನಸ್ವಾಮಿಗಳ ಕಾಲ (ಕ್ರಿ.ಶ. ೧೮೪೯-೧೮೭೨) ದಲ್ಲಿ ಮಠವು ಸಾಕಷ್ಟು ಪ್ರವರ್ಧಮಾನಕ್ಕೆ ಬಂದಿತ್ತು. ಆಗ ಮಠದಲ್ಲಿ ನಡೆಯುತ್ತಿದ್ದ ನಿತ್ಯ ದಾಸೋಹದ ಪೋಷಣೆಗಾಗಿ ಕ್ಲೋಸ್‌ಪೇಟೆಯ (ಈಗಿನ ರಾಮನಗರ) ಶೆಟ್ರು, ಯಜಮಾನರು ಮುಂತಾದ ಸ್ಥಳ, ಪರಸ್ಥಳದ ಭಕ್ತರೆಲ್ಲಾ ಸೇರಿ, ೧೮೪೪ರಲ್ಲಿ ದಾನಶಾಸನ ವೊಂದನ್ನು ಬರೆದುಕೊಟ್ಟಿದ್ದರು.[17] ಅದರಲ್ಲಿದ್ದ ಕರಾರಿನಂತೆ 'ಮೇಲ್ಕಂಡ ಭಕ್ತರೆಲ್ಲರೂ ಸೇರಿ ಅವರವರ ಶಕ್ತ್ಯಾನುಸಾರ ವರ್ಷಕ್ಕೆ ೪೦ ಖಂಡುಗದಷ್ಟು[18] ದವಸ-ಧಾನ್ಯಗಳನ್ನು ಸಂಗ್ರಹಿಸಿ ಕೊಡುವುದಾಗಿಯೂ, ಇದರಿಂದಾಗಿ ಮಠದಲ್ಲಿ ಯಾವತ್ತೂ ಜಂಗಮದಾಸೋಹ ಹಾಗೂ ಲಿಂಗ ಪೂಜೆಗಳನ್ನು ನಿರಂತರವಾಗಿ ನಡೆಸುತ್ತಾ, ಭಕ್ತರಿಗೆ ಸದಾ ಕಲ್ಯಾಣವನ್ನು ಚಿಂತಿಸುತ್ತಿರಬೇಕೆಂದು ಪ್ರಾರ್ಥಿಸಲಾಗಿತ್ತು'. ಆ ಕಾಲದಲ್ಲಿ ಬೆಂಗಳೂರು ಪಟ್ಟಣದ ಸುತ್ತಮುತ್ತಲ ಅನೇಕ ಗ್ರಾಮಗಳ ರೈತ ಜನರು, ತಮ್ಮ ಎತ್ತಿನ ಬಂಡಿಗಳಲ್ಲಿ ಹಣ್ಣು-ತರಕಾರಿ, ಕಾಳು-ಕಡಿ, ದವಸ-ಧಾನ್ಯ, ಸೌದೆ-ಸೊಪ್ಪು ಇವೇ ಮುಂತಾದ ದಿನಬಳಕೆಯ ಪದಾರ್ಥಗಳನ್ನು ತುಂಬಿಕೊಂಡು ಬಂದು ಇಲ್ಲಿ ಮಾರಾಟ ಮಾಡುತ್ತಿದ್ದರು. ಆಗ ಸರ್ಪಭೂಷಣ ಮಠದ ಆವರಣದಲ್ಲಿ ಬಂಡಿಗಳು ನಿಲ್ಲಲು ಸೂಕ್ತ ಸ್ಥಳಾವಕಾಶ ಮಾಡಿಕೊಟ್ಟಿದ್ದುದಲ್ಲದೆ, ಬಂದ ರೈತಬಾಂಧವರಿಗೆ ಉಚಿತ ಪ್ರಸಾದದ ವ್ಯವಸ್ಥೆಯನ್ನೂ ಮಠದಲ್ಲೇ ಕಲ್ಪಿಸಿಕೊಡಲಾಗುತ್ತಿತ್ತು.[19] ಸರ್ಪಭೂಷಣ ಮಠದ ಈ ದಾಸೋಹ ವ್ಯವಸ್ಥೆಯು ಆಗ ಮಧ್ಯಾಹ್ನದ ಸಮಯಕ್ಕೆ ಮಾತ್ರ ಮೀಸಲಾಗಿತ್ತು.

ಹಿಂದೆ ಬೆಂಗಳೂರಿನ ಅನೇಕ ವೀರಶೈವಮಠಗಳು ಇಲ್ಲಿಗೆ ವ್ಯಾಪಾರದ ನಿಮಿತ್ತವಾಗಿ ಬರುತ್ತಿದ್ದ ಅಥವಾ ಇಲ್ಲೇ ಇದ್ದ ಶೆಟ್ಟಿ, ಯಜಮಾನ ಹಾಗೂ ವರ್ತಕ ಶ್ರೇಷ್ಠರಿಂದ ಪ್ರಾರಂಭವಾದವುಗಳೆ ಬಹಳವಾಗಿದ್ದವು ಎಂದೂ ಹೇಳುವುದುಂಟು.[20] ಇಂತಹ ಮಠಗಳಲ್ಲಿ ಒಂದು, ನಗರದ ಸುಂಕೇನಹಳ್ಳಿಯ ಮೇಲಿನಮಠ. ಈ ಮಠವನ್ನು ಕ್ರಿ.ಶ. ೧೮೦೪ರ ವೇಳೆಗೆ ದೊಡ್ಡಪೇಟೆಯ ಸಿದ್ಧಪ್ಪಶೆಟ್ರು ಪ್ರಾರಂಭಿಸಿದ್ದಾಗಿ ತಿಳಿದುಬರುತ್ತದೆ.[21] ಮುಂದೆ ಇವರ ಮನೆತನದವರು ಸದರಿ ಮಠವನ್ನು ಕಾಲಕಾಲಕ್ಕೆ (೧೮೬೯-೧೯೦೦) ಬೇರೆ ಬೇರೆ ಅಯ್ಯನವರುಗಳಿಗೆ ಒಪ್ಪಿಸಿಕೊಟ್ಟಿದ್ದಾರೆ. ಹೀಗೆ ಒಪ್ಪಿಸಿಕೊಟ್ಟಾಗ ಬರೆದಿರುವ ಕರಾರುಗಳಲ್ಲಿ ಒಂದು ಮಾತಂತೂ ಸ್ಪಷ್ಟವಾಗಿ ಹೇಳಿದೆ. 'ಮೇಲ್ಕಂಡ ಮಠವನ್ನೂ ಅದರ ಆಸ್ತಿ-ಪಾಸ್ತಿಗಳನ್ನೂ ಕಾಲಕಾಲಕ್ಕೆ ಆಬಾದು ಮಾಡಿಕೊಂಡು ಬಂದಂಥಾ ಅತಿಥಿ-ಅಭ್ಯಾಗತರಿಗೆ ''ಅಗ್ನಿ, ವಿಭೂತಿ,

ಅನ್ನೋದಕಗಳನ್ನು'' ಕೊಟ್ಟುಕೊಂಡು ಇರಬೇಕೆಂದು' ಕಡ್ಡಾಯವಾಗಿ ಸೂಚಿಸಲಾಗಿದೆ.[22] ಅಂದರೆ ಹಿಂದೆ ಮಠಗಳಿಗೆ ಬಂದಂಥಾ ಭಕ್ತರಿಗೆ ಬೆಂಕಿ, ಬಿಸಿನೀರು, ಅನ್ನ-ಪಾನಾದಿಗಳ ಆದಿಯಾಗಿ, ಪೂಜೆ-ಪ್ರಸಾದಗಳ ಸೌಲಭ್ಯಗಳನ್ನು ಕಲ್ಪಿಸುವುದು ಧರ್ಮದಾಸೋಹ ಸೇವೆಯ ಸಹಜ ಪ್ರಕ್ರಿಯೆಗಳಾಗಿದ್ದವು ಎಂಬುದಾಗಿ ಮನವರಿಕೆ ಯಾಗುತ್ತದೆ.

ಇದೇ ರೀತಿ 'ಮನೆವಾರ್ತೆಪೇಟೆ'ಯ ಶಂಕರದೇವರ ಮಠದಲ್ಲೂ ಕಳೆದ ಶತಮಾನಾಂತ್ಯದಲ್ಲಿ ನಿತ್ಯ ದಾಸೋಹ ಸೇವೆ ನಡೆಯುತ್ತಿದ್ದುದಕ್ಕೆ ಆಧಾರಗಳಿವೆ. 'ಮಠದ ಭಕ್ತರಾಗಿದ್ದ ಅರಳೆಪೇಟೆಯ ಶಂಕರಣ್ಣನವರು ನಗರಕ್ಕೆ ಸಮೀಪದ ಸಾಣೆಗುರುವಿನ ಹಳ್ಳಿಯ ಬಳಿ ದಿನಾಂಕ: ೬.೬.೧೮೯೬ರಂದು ೫ ಎಕರೆ ೧೫ ಗುಂಟೆ ಖುಷ್ಕಿ ಜಮೀನನ್ನು ಮಠಕ್ಕೆ ದಾನವಾಗಿ ನೀಡಿದ್ದರು. ಈ ದಾನಪತ್ರದಲ್ಲಿ ಸ್ಪಷ್ಟಪಡಿಸಿದ್ದಂತೆ ಪ್ರತಿನಿತ್ಯ ಮಠದಲ್ಲಿ ಬಂದ ಭಕ್ತರಿಗೆ ಪೂಜೆ ಪ್ರಸಾದಗಳನ್ನು ಕಲ್ಪಿಸುವುದರ ಜೊತೆಗೆ ಹಿರಿಯ ಗುರುಗಳ ಗದ್ದುಗೆಗೆ ದೀಪಾರಾಧನೆ ನಡೆಸಿಕೊಂಡು ಬರುವಂತೆ ಸೂಚಿಸಲಾಗಿತ್ತು.[23]

೨೦ನೆಯ ಶತಮಾನದ ಆರಂಭದ ವೇಳೆಗೆ ಅರಳೆಪೇಟೆಯ 'ದೇಶದಮಠ'ವನ್ನು 'ದಾಸೋಹದ ಮಠ'ವೆಂದೂ ಕರೆಯಲಾಗುತ್ತಿತ್ತು.[24] ಕಾರಣವೇನೆಂದರೆ ಆಗ ಈ ಮಠದಲ್ಲಿ ನಿರ್ಗತಿಕರು ಹಾಗೂ ಪರದೇಶಿಗಳಿಗೋಸ್ಕರ ಪ್ರತಿ ಸೋಮವಾರ ತಪ್ಪದೆ ಧರ್ಮದಾಸೋಹ ನಡೆಸಲಾಗುತ್ತಿತ್ತು. ದಾಸೋಹದಲ್ಲಿ ವಿಶೇಷವಾಗಿ ಅವರೆಕಾಳು ಹುಳಿ ಹಾಗೂ ರಾಗಿ ಹಿಟ್ಟು (ಮುದ್ದೆ)ಗಳು ಪ್ರಸಾದದ ಮುಖ್ಯ ವಸ್ತುಗಳಾಗಿದ್ದುದಾಗಿ ತಿಳಿದುಬರುತ್ತದೆ.[25] ಇದೇ ವೇಳೆಗೆ ವಿಭೂತಿಪುರದ ವೀರಸಿಂಹಾಸನದ ಮಠವೂ ಕೂಡ ಪ್ರಮುಖ ದಾಸೋಹ ಕೇಂದ್ರವಾಗಿದ್ದುದು ಸ್ಪಷ್ಟವಾಗಿದೆ. ''೧೯೦೭ರಲ್ಲಿ ಮಠದ ಗುರುಗಳಾಗಿದ್ದ ಪಟ್ಟದ ಸಿದ್ಧವೃಷಭರಾಜಸ್ವಾಮಿಯವರು ಮಹಾರಾಜ ಸರ್ಕಾರಕ್ಕೆ ಮನವಿಯೊಂದನ್ನು ಸಲ್ಲಿಸಿ, ತಮ್ಮ ಮಠದ ನಿತ್ಯ ದಾಸೋಹ ಹಾಗೂ ದೀಪಾರಾಧನೆಗಳಿಗೆ, ಮಠಕ್ಕಾಗಿ ಹಿಂದೆ (ಕ್ರಿ.ಶ. ೧೮೨೨ರಲ್ಲಿ) ಕೊಡಲ್ಪಟ್ಟಿದ್ದ ಇನಾಮು ಜಮೀನುಗಳು ಬಂಜರು ಭೂಮಿಗಳಾಗಿದ್ದು ಇವುಗಳಿಂದ ಬರುವ ಉತ್ಪನ್ನ ಏನೇನೂ ಸಾಲದಾಗಿದೆ. ಆದ ಪ್ರಯುಕ್ತ ಇನ್ನು ಮುಂದೆ ಮಹಾರಾಜ ಸರ್ಕಾರವು ಹಣಕಾಸಿನ ಅನುದಾನವನ್ನು ನೀಡಿ ಮಠದ ದಾಸೋಹ ಹಾಗೂ ದೀಪಾರಾಧನೆಗಳು ಮುಂದುವರಿಯುವಂತೆ ಮಾಡಬೇಕಾಗಿ ಕೋರಿಕೆ ಸಲ್ಲಿಸಿದ್ದಾರೆ.''[26] ಇದೇ ರೀತಿ ನಗರದ ಗುರುವಣ್ಣದೇವರ ಮಠ,[27] ಗೊಟ್ಟೂರಯ್ಯನಮಠ,[28] ಮಹಾಂತರ ಮಠ[29] ಇವೇ ಮೊದಲಾದ ವೀರಶೈವ ಮಠಗಳೆಲ್ಲಾ ಪ್ರಮುಖ ದಾಸೋಹ ಕೇಂದ್ರಗಳಾಗಿದ್ದುದನ್ನು ಮುಜರಾಯಿ ಇಲಾಖಾ ದಾಖಲೆಗಳು ಖಚಿತಪಡಿಸುತ್ತವೆ.

ಹೀಗೆ ೨೦ನೆಯ ಶತಮಾನದ ಪೂರ್ವಾರ್ಧದವರೆಗೂ ಬೆಂಗಳೂರಿನ ಅನೇಕ ಮಠಗಳು ಪ್ರಮುಖ ದಾಸೋಹ ಕೇಂದ್ರಗಳಾಗಿ ಸಮಾಜಸೇವೆ ಮಾಡಿದ್ದುದಾಗಿ ತಿಳಿದುಬರುತ್ತದೆ. ಆದರೆ ಮುಂದೆ ನಗರೀಕರಣದ ಪ್ರಭಾವ ಹಾಗೂ ಆಳುವ ಪ್ರಭುಗಳ ಪ್ರೋತ್ಸಾಹದ ಕೊರತೆಗಳಿಂದಾಗಿ ಇಂತಹ ದಾಸೋಹ ಕೇಂದ್ರಗಳ ಚೈತನ್ಯವು ದಿನೇ ದಿನೆ ಕುಸಿಯತೊಡಗಿತ್ತು. ಜೊತೆಗೆ ದಾಸೋಹದ ಪರಿಕಲ್ಪನೆಯೂ ಕೂಡ ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡು, ಧರ್ಮಾರ್ಥಕಾರ್ಯವೆಂಬ ಲೇಪನವನ್ನು ಪಡೆಯತೊಡಗಿತ್ತು. ಬೆಂಗಳೂರಿನಂತಹ ಮಹಾನಗರದಲ್ಲಿ ಇಂದು ಒಂದೆರಡು ಮಠಗಳಲ್ಲಿನ ಉಚಿತ ವಿದ್ಯಾರ್ಥಿನಿಲಯಗಳಿರುವುದನ್ನು ಬಿಟ್ಟರೆ, ಹಿಂದೆ ನಡೆಯುತ್ತಿದ್ದ ನಿತ್ಯ ದಾಸೋಹದ ಮಾದರಿ ದೃಷ್ಟಾಂತಗಳು ಒಂದೂ ಉಳಿದಿಲ್ಲ. ಕೆಲವು ಮಠಗಳಲ್ಲಿ ಹಬ್ಬ-ಹರಿದಿನಗಳ ಪ್ರಯುಕ್ತ ವಿಶೇಷ ಸಮಾರಾಧನೆಗಳು ನಡೆದಾಗ, ಅಲ್ಲಿ ನೂರಾರು ಮಂದಿ ಭಕ್ತರು ಒಟ್ಟಾಗಿ ಊಟೋಪಚಾರ ಮಾಡುವುದನ್ನು ನೋಡಿ ದಾಸೋಹದ ಪರಿಕಲ್ಪನೆಯ ನೆರಳನ್ನು ಅಪರೂಪಕ್ಕಾದರೂ ಒಮ್ಮೊಮ್ಮೆ ನೋಡಬಹುದಾಗಿದೆ. ಒಟ್ಟಾರೆ ಆ ಹೊತ್ತಿನ ಸಂದರ್ಭದಲ್ಲಿ ಅಂದಿನ ಸಾಮಾಜಿಕ ಅಗತ್ಯತೆಗಳಿಗೆ ಅನುಗುಣವಾಗಿ ಬೆಂಗಳೂರಿನ ಮಠಗಳು ನಡೆಸುತ್ತಿದ್ದ ದಾಸೋಹಸೇವೆ ಅವಿಸ್ಮರಣೀಯವಾದ ವಿಚಾರವಾಗಿದೆ.

### ೬.೨. ಸಾಂಸ್ಕೃತಿಕ ಕೇಂದ್ರಗಳಾಗಿ

ಯಾವುದೇ ಒಂದು ಸಮಾಜದ ಉತ್ತಮ ನಡಾವಳಿಗಳ ಪ್ರತೀಕವೇ ಸಂಸ್ಕೃತಿ. ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು, ವೈಯುಕ್ತಿಕವಾದ ಆಚರಣೆಗಳವರೆಗೂ ಇದರ ವ್ಯಾಪ್ತಿ ಹರಡಿಕೊಂಡಿದೆ.

ಇದು ವ್ಯಕ್ತಿಯ ಬುದ್ಧಿವಿಕಾಸ ಹಾಗೂ ಮಾನಸಿಕ ಪಕ್ವತೆಗಳನ್ನು ಆಧರಿಸಿದ್ದಾಗಿದೆ. ಈ ಅಂಶಗಳಿಂದಾಗಿಯೇ ಮನುಷ್ಯ ಪ್ರಾಣಿಗಳಿಗಿಂತ ಹೇಗೆ ಭಿನ್ನ ಎಂಬುದನ್ನು ಗುರುತಿಸಲು ಸಹಾಯಕವಾಗಿದೆ.

ಮೂಲತಃ 'ಸಂಸ್ಕೃತಿ' ಎಂಬ ಪದವು ಆಂಗ್ಲಭಾಷೆಯ 'Culture' ಎಂಬ ಪದಕ್ಕೆ ಸಂವಾದಿಯಾಗಿ ಹುಟ್ಟಿಕೊಂಡಿದೆ.[30] ಇದರ ಮೂಲ ಪದವಾದ 'cult' ಅಥವಾ 'cultus' ಎಂದರೆ 'ಗೌರವಿಸು; ಆರಾಧಿಸು; ಸೇವೆಮಾಡು' ಇವೇ ಮೊದಲಾದ ಅರ್ಥಗಳಿವೆ.[31] ಮ್ಯಾಥ್ಯೂ ಆರ್ನಾಲ್ಡ್ ಎಂಬ ಆಂಗ್ಲ ವಿದ್ವಾಂಸನ ಪ್ರಕಾರ "ನಾವು ಅರಿತ ಆಲೋಚನೆಗಳೂ, ಉಕ್ತಿಗಳೂ ನಮ್ಮ ಭಾವನೆ ಮತ್ತು ಪದ್ಧತಿಗಳ ಮೇಲೆ ಬೆಳಕು ಬೀರಬೇಕು. ನಮ್ಮನ್ನು ನಾವು ತಿದ್ದಿಕೊಳ್ಳಲು ಸಹಾಯ ಮಾಡಬೇಕು. ಹೀಗೆ ನಮ್ಮನ್ನು ನಾವು ಉತ್ತಮಗೊಳಿಸಿಕೊಳ್ಳಲು ಮಾಡುವ ಪ್ರಯತ್ನವೇ ಸಂಸ್ಕೃತಿ ಎನಿಸಿಕೊಳ್ಳುತ್ತದೆ."[32] ಇಲ್ಲಿ ಸಂಸ್ಕೃತಿ ಎಂಬುದು ವ್ಯಕ್ತಿಯ ಸ್ವಭಾವಕ್ಕೆ ಸಂಸ್ಕಾರ ವನ್ನು ಕೊಡುವ ಒಂದು ಶಕ್ತಿ ಇದ್ದಂತೆ. ಇದು ವ್ಯಕ್ತಿಯ ಮನಸ್ಸಿನ ಮೇಲೆ ವಿಶಿಷ್ಟವಾದ ಸಂಸ್ಕಾರವನ್ನು ಉಂಟುಮಾಡಿ ಆತನನ್ನು ಪರಿಪೂರ್ಣತೆಯ ಕಡೆಗೆ ನಡೆಯುವಂತೆ ಮಾಡುತ್ತದೆ. ಸಂಸ್ಕೃತಿಯ ಪರಮ ಉದ್ದೇಶವೇ ಇದು. ಇದಕ್ಕೆ ಪೂರಕವಾದ ಸಾಧನಗಳೆಲ್ಲವೂ ಸಂಸ್ಕೃತಿಯಲ್ಲೆ ಸಮಾವೇಶಗೊಳ್ಳುತ್ತವೆ. ಧರ್ಮ ಜಿಜ್ಞಾಸೆಯಾಗಲೀ, ಸಂಗೀತ-ಸಾಹಿತ್ಯಾದಿ ಕಲೆಗಳಾಗಲೀ ಸಾರ್ಥಕವಾಗಬೇಕಾದರೆ ಅವುಗಳನ್ನು ಅರಿತು ಆಚರಿಸಬಲ್ಲ ಸಂಸ್ಕಾರವು ವ್ಯಕ್ತಿಯಲ್ಲಿದ್ದರೆ ಮಾತ್ರ ಸುಸಂಸ್ಕೃತಿಯ ಹುಟ್ಟುವಿಕೆಗೆ ಸಾಧ್ಯವಾಗುತ್ತದೆ.[33]

ಭಾರತೀಯ ಸಂದರ್ಭದಲ್ಲಿ ಕ್ರಿ.ಶ.೧೦ನೆಯ ಶತಮಾನದಿಂದಲೂ ಶೈವದೇವಾಲಯ ಹಾಗೂ ಮಠಗಳು ಉತ್ತಮ ಸಂಸ್ಕೃತಿಯನ್ನು ಬೋಧಿಸಬಲ್ಲ ಸಾಂಸ್ಕೃತಿಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಾ ಬಂದಿವೆ.[34] ಮುಂದೆ ೧೨ನೇ ಶತಮಾನದ ವೇಳೆಗೆ ಬಸವಾದಿ ಪ್ರಮಥರಿಂದ ಪ್ರಾರಂಭವಾಗಿದ್ದ ಕಲ್ಯಾಣದ 'ಅನುಭವಮಂಟಪ'ವು ಕನ್ನಡನಾಡಿನ ಬಹುದೊಡ್ಡ ಸಾಂಸ್ಕೃತಿಕ ಕೇಂದ್ರವಾಗಿದ್ದುದು ಒಂದು ಐತಿಹಾಸಿಕ ದಾಖಲೆಯಾಗಿ ಉಳಿದಿದೆ. ಅನಂತರ ೧೬ನೆಯ ಶತಮಾನದ ಮಧ್ಯಭಾಗದಲ್ಲಿದ್ದ ತೋಂಟದ ಸಿದ್ಧಲಿಂಗೇಶ್ವರರ ಪ್ರಭಾವದಲ್ಲಿ ನೂರಾರು ವೀರಶೈವ ಮಠಗಳು ಉದಯವಾಗಿ, ಹಿಂದೆ ಬಸವಾದಿ ಪ್ರಮಥರು ಹಾಕಿಕೊಟ್ಟ ಸುಸಂಸ್ಕೃತ ಪರಂಪರೆಯನ್ನು ಮುನ್ನಡೆಯಿಸು ವಲ್ಲಿ ಯಶಸ್ವಿಯಾಗಿದ್ದವು. ಇದೇ ಪರಂಪರೆಯನ್ನು ಅನುಸರಿಸಿ ಬಂದ ಬೆಂಗಳೂರಿನ ವೀರಶೈವ ಮಠಗಳೂ ಕೂಡ, ೧೯ ಮತ್ತು ೨೦ನೆಯ ಶತಮಾನದ ಅವಧಿಯಲ್ಲಿ ಈ ಭಾಗದ ಅತ್ಯುತ್ತಮ ಸಾಂಸ್ಕೃತಿಕ ಕೇಂದ್ರಗಳಾಗಿ ಸೇವೆ ಸಲ್ಲಿಸಿರುವುದನ್ನು ಮುಂದೆ ಪರಿಶೀಲಿಸಲಾಗಿದೆ.

೧೯ನೆಯ ಶತಮಾನದ ಆರಂಭದ ವೇಳೆಗೆ ತಿಪ್ಪಶೆಟ್ಟಿಮಠವು ಬೆಂಗಳೂರಿನ ಪ್ರಸಿದ್ಧ ಸಾಂಸ್ಕೃತಿಕ ಕೇಂದ್ರಗಳಲ್ಲಿ ಒಂದಾಗಿತ್ತು. ಆಗ ಮಠದ ಮೂಲಗುರುಗಳಾಗಿದ್ದ ಗುರುಸಿದ್ಧಯತಿವರರು ಸಂಗೀತ, ಸಾಹಿತ್ಯ ಹಾಗೂ ಧಾರ್ಮಿಕ ತತ್ವಗಳಲ್ಲಿ ಉತ್ತಮ ಗತಿಯುಳ್ಳವರಾಗಿದ್ದು, ಗಣನೀಯ ಸಂಖ್ಯೆಯ ಶಿಷ್ಯರನ್ನು ಸಂಪಾದಿಸಿದ್ದರು.[35] ಅಂದು ಜ್ಞಾನದಾಸೋಹಕ್ಕೆ ಸಂಬಂಧಿಸಿದ ಧಾರ್ಮಿಕ ಉಪನ್ಯಾಸಗಳು ಮಠದ ಪ್ರಮುಖ ಸಾಂಸ್ಕೃತಿಕ ಚಟುವಟಿಕೆಗಳಾಗಿದ್ದವು. ಪ್ರತಿನಿತ್ಯ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಯಲ್ಲಿ ಅನೇಕ ಭಕ್ತರು ಪಾಲ್ಗೊಳ್ಳುತ್ತಿದ್ದರು. ಮುಂದೆ ಇವರ ಶಿಷ್ಯರಾಗಿದ್ದ ಸರ್ಪಭೂಷಣ ಶಿವಯೋಗಿಗಳೂ ಕೂಡ ತಮ್ಮ ಗುರುಗಳು ಹಾಕಿಕೊಟ್ಟಿದ್ದ ಸತ್ಪರಂಪರೆಯನ್ನು ಮುಂದುವರೆಸಿದ್ದರು. ಇವರು ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ನಾಡಿನಾದ್ಯಂತ ಸಂಚರಿಸಿ ವೀರಶೈವ ಧರ್ಮ ಮತ್ತು ಸಂಸ್ಕೃತಿಯ ಪ್ರಚಾರಕರಾಗಿ ಹೋದೆಡೆಯಲ್ಲೆಲ್ಲಾ ಉದ್ದಾಮ ಶಿವಾನುಭವಿಗಳೆಂದು ಪ್ರಖ್ಯಾತರಾಗಿದ್ದರು.[36] ಅನಂತರ ೧೮೪೯ರಲ್ಲಿ ಬೆಂಗಳೂರಿನ ಸರ್ಪಭೂಷಣ ಮಠಕ್ಕೆ ಕಾರಣಕರ್ತರಾಗಿ, ನಗರದ ಪ್ರಮುಖ ಸಾಂಸ್ಕೃತಿಕ ಕೇಂದ್ರವೊಂದರ ಶಂಕುಸ್ಥಾಪನೆಯನ್ನು ನೆರವೇರಿಸಿದ್ದರು.

೨೦ನೆಯ ಶತಮಾನದ ಪ್ರಾರಂಭದ ವೇಳೆಗೆ ಬೆಂಗಳೂರಿನ ಅನೇಕ ಮಠಗಳು ನಡೆಸುತ್ತಿದ್ದ ಸಾಂಸ್ಕೃತಿಕ ಚಟುವಟಿಕೆಗಳು ಅಂದಿನ 'ಮೈಸೂರ್‌ಸ್ಟಾರ್'ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. "೧೯೧೨ರಲ್ಲಿ ಆಷಾಢ ಮಾಸದಲ್ಲಿ ಒಂದು ತಿಂಗಳ ಪರ್ಯಂತ ಚಿಕ್ಕಪೇಟೆಯ ಕರಿಸಿದ್ಧೇಶ್ವರಮಠದಲ್ಲಿ ನಿತ್ಯ ಹರಿಕಥಾ ಶ್ರವಣವು

ನಡೆದಿತ್ತು. ನ್ಯಾಮತಿಯ ಹೊಳಲೂರು ಮಠದ ಶಿವಕಥಾ ಚನ್ನಯ್ಯ ಶಾಸ್ತ್ರಿಗಳು 'ಸಿರಿಯಾಳಶೆಟ್ಟಿಯಕಥೆ', 'ಮದನಸುಂದರಕಥೆ', 'ಆದಿಶೆಟ್ಟಿಯಕಥೆ' ಹಾಗೂ 'ಗಿರಿಜಾಕಲ್ಯಾಣದಕಥೆ'ಗಳನ್ನು ಒಂದೊಂದು ವಾರ ಒಂದೊಂದು ಕಥೆಯಂತೆ ಒಂದು ತಿಂಗಳ ಕಾಲ ಕಾರ್ಯಕ್ರಮವನ್ನು ನಡೆಸಿಕೊಟ್ಟಿದ್ದರು. ಈ ಕಥೆಗಳಲ್ಲಿ ಲೌಕಿಕ ರೀತ್ಯಾ ಶೃಂಗಾರಾದಿ ನವರಸಭರಿತವಾಗಿಯೂ ಮತ್ತು ನೀತಿಪ್ರಚೋದಕವಾಗಿಯೂ ಇರುವುದಲ್ಲದೆ, ವೀರಶೈವ ಧರ್ಮದ ರೀತ್ಯಾ ಶಿವ ಹಾಗೂ ಶಿವಭಕ್ತರ ಪ್ರಾಶಸ್ತ್ಯ ಮತ್ತು ಅಷ್ಟಾವರಣಗಳಲ್ಲಿ ಒಂದಾದ ಜಂಗಮ ಪ್ರಾಶಸ್ತ್ಯವನ್ನೂ ಪ್ರತಿಪಾದಿಸಲಾಗುತ್ತಿತ್ತು. ಬೆಂಗಳೂರಿನ ಅಭಿಮಾನಿ ಭಕ್ತರು ಹರಿಕಥಾಶ್ರವಣದಿಂದ ಸಂತುಷ್ಟರಾಗಿ ತಿಂಗಳ ಕೊನೆಯ ದಿನ ಅವರಿಗೆ ಬಂಗಾರದ ಪದಕವೊಂದನ್ನು ಕೊಟ್ಟು ಸನ್ಮಾನಿಸಿದ್ದರು.''[37]

೧೯೧೭ರ ಕಾರ್ತಿಕ ಮಾಸದಲ್ಲಿ ಮಾಮೂಲುಪೇಟೆಯ ಜಂಗಮಮಠ (ಗಂಜಾಂಮಠ)ದ ಆಶ್ರಯದಲ್ಲಿ ಒಂದು ತಿಂಗಳ ಕಾಲ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ಪ್ರತಿದಿನ ಸಂಜೆ ೭ ರಿಂದ ೮ ಗಂಟೆಯವರೆಗೆ ಮುಳುಗುಂದದ ಗವಿಮಠಾಧ್ಯಕ್ಷರಾಗಿದ್ದ ಬಸವಲಿಂಗಸ್ವಾಮಿಗಳು 'ಶ್ರೀಮದ್‌ವೃಷಭೇಂದ್ರ ವಿಜಯ' ವೆಂಬ ಪುರಾಣವಾಚನವನ್ನು ನಡೆಸಿಕೊಡುತ್ತಿದ್ದರು. ದಿನಾಂಕ:೧೨.೧೨.೧೯೧೭ರಂದು ಪ್ರಾರಂಭವಾಗಿದ್ದ ಈ ಕಾರ್ಯಕ್ರಮವು ದಿ:೧೦.೧.೧೯೧೮ರಂದು ಮುಕ್ತಾಯ ಗೊಂಡಿತ್ತು.[38]

೧೯೨೩ರ ಮಾಘ ಮಾಸದಲ್ಲಿ ಚಿಕ್ಕಪೇಟೆಯ ಮಹಾಂತರ ಮಠದಲ್ಲಿ ಒಂದು ತಿಂಗಳ ಕಾಲ ವಿಶೇಷ ಕಾರ್ಯಕ್ರಮವೊಂದನ್ನು ನಡೆಸಿಕೊಡಲಾಗಿತ್ತು. ಆಗ ವೇ॥ ಚಂದ್ರಶೇಖರಶಾಸ್ತ್ರಿಗಳು ಮತ್ತು ಕುಕನೂರು ಬಸಪ್ಪನವರು ಇಬ್ಬರೂ ಕೂಡಿ ಪ್ರತಿದಿನ ಸಂಜೆ ''ಶ್ರೀಮದಥಣಿ ಶಿವಯೋಗೀಶ್ವರಪುರಾಣ'' ಕೀರ್ತನ ಕಾರ್ಯಕ್ರಮವನ್ನು ನಡೆಸಿಕೊಟ್ಟಿದ್ದರು. ಕೊನೆಯ ದಿನ, ದಿನಾಂಕ: ೭.೨.೧೯೨೩ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದ್ದ ದಿವಾನ್ ಬಹಾದುರ್ ಸರ್.ಕೆ.ಪಿ.ಪುಟ್ಟಣ್ಣಶೆಟ್ಟರ ಕಡೆಯಿಂದ ಉಭಯ ಕೀರ್ತನಕಾರರಿಗೂ ಬೆಂಗಳೂರಿನ ಮಹಾಜನತೆ ಬಂಗಾರದ ಪದಕ ನೀಡಿ ಶಾಲು ಹೊದಿಸಿ ಸನ್ಮಾನಿಸಿತು. ನಿತ್ಯವೂ ಈ ಕಾರ್ಯಕ್ರಮದಲ್ಲಿ ಭಕ್ತರು ಅತ್ಯಂತ ಭಕ್ತಿ ಗೌರವಗಳಿಂದ ಪಾಲ್ಗೊಂಡು ಕಾರ್ಯಕ್ರಮವು ಯಶಸ್ವಿಯಾಗಿ ನಡೆಯಿತೆಂದು ವರದಿಯಾಗಿದೆ.[39] ಹೀಗೆ ಬೆಂಗಳೂರಿನ ಹಲವಾರು ಮಠಗಳಲ್ಲಿ ಬಹಳ ಹಿಂದಿನಿಂದಲೂ ಕಾರ್ತಿಕ, ಶ್ರಾವಣ, ಮಾಘ ಇವೇ ಮೊದಲಾದ ಮಾಸಗಳಲ್ಲಿ ವಿಶೇಷ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತಿದ್ದುದು ಮಾಮೂಲಾಗಿತ್ತು. ಮುಂದೆ ೧೯೪೦ರ ವೇಳೆಗೆ ಮಠಗಳ ಆಶ್ರಯದಲ್ಲೂ ಉನ್ನತ ವಿದ್ವಾಂಸರುಗಳನ್ನು ಕರೆಸಿ ವಿಚಾರ ಪ್ರಚೋದಕವಾದ ಉತ್ಕೃಷ್ಟ ಉಪನ್ಯಾಸಗಳುಳ್ಳ ಕಾರ್ಯಕ್ರಮಗಳು ಜರುಗತೊಡಗಿದವು. ಆಗ ದಿನಾಂಕ: ೧೧.೫.೧೯೪೦ರಿಂದ ದಿನಾಂಕ:೧೧.೫.೧೯೪೧ರವರೆಗೆ ಒಂದು ವರ್ಷದ ಅವಧಿಯಲ್ಲಿ ನಗರದ ಮಾಮೂಲು ಪೇಟೆಯ 'ಗಂಜಾಂಮಠ'ದಲ್ಲಿ ನಡೆದ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳ ಪಟ್ಟಿಯನ್ನು ಸಂಗ್ರಹಿಸಿ ಈ ಕೆಳಗೆ ಕೊಡಲಾಗಿದೆ.[40]

| ಕ್ರ.ಸಂ. | ದಿನಾಂಕ | ಕಾರ್ಯಕ್ರಮದವಿವರ/ವಿಷಯ | ನಡೆಸಿಕೊಡುವವರ ಹೆಸರು/ ಉಪನ್ಯಾಸಕರು | ಅಧ್ಯಕ್ಷತೆ |
|---|---|---|---|---|
| ೧. | ೧೧.೫.೧೯೪೦ | ಶ್ರೀಬಸವಣ್ಣನವರ ನೀತಿ ಬೋಧೆ | ಶ್ರೀಜೀರಗೆಕಟ್ಟೆ ಬಸಪ್ಪ | ಪಂ। ಪಂಚಾಕ್ಷರಿ ಗವಾಯಿಗಳು |
| ೨. | ೧೨.೫.೧೯೪೦ | ಶ್ರೀ ಬಸವಣ್ಣನವರ ಕನ್ನಡ ಸಾಹಿತ್ಯ ಸೇವೆ | ಶ್ರೀ ಎಂ.ಆರ್. ಶ್ರೀನಿವಾಸ ಮೂರ್ತಿ | ಪಂ। ಪಂಚಾಕ್ಷರಿ ಗವಾಯಿಗಳು |
| ೩. | ೧೩.೫.೧೯೪೦ | ವಚನಸಂಗೀತ | ಗವಾಯಿಗಳವರ ಸಂಗೀತಮಂಡಳಿ | ಪಂ। ಪಂಚಾಕ್ಷರಿ ಗವಾಯಿಗಳು. |
| ೪. | ೧೪.೫.೧೯೪೦ | ವ್ಯಾಯಾಮಪ್ರದರ್ಶನ ಮತ್ತು ಲಾವಣಿ | ಶ್ರೀ ಜಗದೇವಮಲ್ಲ ವ್ಯಾಯಾಮ ಶಾಲೆಯವರು | ಶ್ರೀ ಮಹಾದೇವಸ್ವಾಮಿಗಳು |
| ೫. | ೧೫.೫.೧೯೪೦ | ಬಸವಣ್ಣನವರ ಅರ್ಪಣಯೋಗ<br>ಬಸವಣ್ಣನವರ ಆತ್ಮನಿವೇದನೆ<br>ಮಹಾದೇವಿಯಕ್ಕನವರ ಬಾಳುವೆ | ಶ್ರೀಮತಿ ಕನಕಮ್ಮ<br>ಶ್ರೀಮತಿ ಎಸ್. ಬಸವರಾಜಮ್ಮ<br>ಶ್ರೀಮತಿ ಎಂ. ಗಿರಿಜಮ್ಮ | ಶ್ರೀ ಮುಪ್ಪಣ್ಣ ಚನ್ನಬಸಪ್ಪ ಬೆಳ್ಳುಳ್ಳಿ ದಾವಣಗೆರ |

| | | | | |
|---|---|---|---|---|
| ೬. | ೨೦.೬.೧೯೪೮ | ಜಪಾನಿನ ಅನುಭವಗಳು | ಶ್ರೀ ಕೆ.ಎಲ್. ನಂಜಪ್ಪ | ಶ್ರೀಮನ್‌ಮಹಾರಾಜ ನಿರಂಜನ ಜಯದೇವ ಜಗದ್ಗುರುಗಳು |
| ೭. | ೨೩.೮.೧೯೪೦ | ಶರಣರ ಅನುಭಾವ ವಿದ್ಯೆ | ಧಾರವಾಡ ನವಕಲ್ಯಾಣ ಮಠದ ಶ್ರೀಕುಮಾರಸ್ವಾಮಿಗಳು | ಶ್ರೀಮನ್‌ಮಹಾರಾಜ ನಿರಂಜನ ಜಯದೇವ ಜಗದ್ಗುರುಗಳು |
| ೮. | ೨೪.೮.೧೯೪೦ | ಶರಣರ ಅನುಭಾವ ವಿದ್ಯೆ | ಧಾರವಾಡ ನವಕಲ್ಯಾಣ ಮಠದ ಶ್ರೀಕುಮಾರಸ್ವಾಮಿಗಳು | ಶ್ರೀಮನ್ ಮಹಾರಾಜ ನಿರಂಜನ ಜಯದೇವ ಜಗದ್ಗುರುಗಳು |
| ೯. | ೨೫.೮.೧೯೪೦ | ಶರಣರ ಅನುಭಾವ ವಿದ್ಯೆ | ಧಾರವಾಡ ನವಕಲ್ಯಾಣ ಮಠದ ಶ್ರೀಕುಮಾರಸ್ವಾಮಿಗಳು | ಶ್ರೀಮನ್‌ಮಹಾರಾಜ ನಿರಂಜನ ಜಯದೇವ ಜಗದ್ಗುರುಗಳು |
| ೧೦. | ೨೯.೮.೧೯೪೦ | ಚತುರ್ವಿಧ ಸಾರಾಯಸಂಪತ್ತು | ಧಾರವಾಡ ನವಕಲ್ಯಾಣ ಮಠದ ಶ್ರೀಕುಮಾರಸ್ವಾಮಿಗಳು | ಶ್ರೀಮನ್‌ಮಹಾರಾಜ ನಿರಂಜನ ಜಯದೇವ ಜಗದ್ಗುರುಗಳು |
| ೧೧. | ೩೦.೮.೧೯೪೦ | ಚತುರ್ವಿಧ ಸಾರಾಯಸಂಪತ್ತು | ಧಾರವಾಡ ನವಕಲ್ಯಾಣ ಮಠದ ಶ್ರೀಕುಮಾರಸ್ವಾಮಿಗಳು | ಶ್ರೀಮನ್ ಮಹಾರಾಜ ನಿರಂಜನ ಜಯದೇವ ಜಗದ್ಗುರುಗಳು |
| ೧೨. | ೨೯.೪.೧೯೪೧ | ಪ್ರಭುಲಿಂಗಲೀಲೆಕಾವ್ಯವಾಚನ | ಶ್ರೀಮತಿ ಗೌರಮ್ಮ | ಶ್ರೀಮಹಾದೇವ ಸ್ವಾಮಿಗಳು |
| ೧೩. | ೩೦.೪.೧೯೪೧ | ಬಸವಣ್ಣನವರ ಭಕ್ತಿ ಭಂಡಾರ | ಶ್ರೀ ಸಿ.ಕೆ. ವೆಂಕಟರಾಮಯ್ಯ | ಶ್ರೀಮಹಾದೇವ ಸ್ವಾಮಿಗಳು |
| ೧೪. | ೧.೫.೧೯೪೧ | ವೀರಶೈವಧರ್ಮದ ವೈಶಿಷ್ಟ್ಯ | ಶ್ರೀವೀರಪ್ಪಬಸಪ್ಪ ಬಿಳೇ ಅಂಗಡಿ, ಹುಬ್ಬಳ್ಳಿ | ಶ್ರೀ ಜಿ. ಮಲ್ಲಿಕಾರ್ಜುನಯ್ಯ |
| ೧೫. | ೨.೫.೧೯೪೧ | ಶರಣರ ನುಡಿಯೂ ಇಂದಿನ ರಾಜಕೀಯ ಪರಿಸ್ಥಿತಿಯೂ | ಶ್ರೀವೀರಪ್ಪಬಸಪ್ಪ ಬಿಳೇ ಅಂಗಡಿ, ಹುಬ್ಬಳ್ಳಿ | ಶ್ರೀ ಕೆ.ರೇವಣ್ಣ |
| ೧೬. | ೩.೫.೧೯೪೧ | ಶರಣರನುಡಿಯೂ ಇಂದಿನ ಧಾರ್ಮಿಕ ನಡೆಯೂ | ಶ್ರೀ ವೀರಪ್ಪಬಸಪ್ಪ ಬಿಳೇಅಂಗಡಿ, ಹುಬ್ಬಳ್ಳಿ | ಶ್ರೀ ಮಹಾದೇವ ಸ್ವಾಮಿಗಳು |
| ೧೭. | ೪.೫.೧೯೪೧ | ಸಂಗೀತ ಕಛೇರಿ | ಕು॥ ಜಯಭಾಗ್ಯ, ಸರೋಜ, ಗೌರಮ್ಮ | ಶ್ರೀ ಮಹಾದೇವ ಸ್ವಾಮಿಗಳು |
| ೧೮. | ೫.೫.೧೯೪೧ | ಮೊಗ್ಗೆಯ ಮಾಯಿದೇವರ ದಿವ್ಯ ಬೋಧೆ ಮತ್ತು ಸಂಗೀತ | ಶ್ರೀ ಮಹಾದೇವಸ್ವಾಮಿಗಳು ಮತ್ತು ಶ್ರೀಮತಿ ಜಿ.ಎಸ್. ಪಾರ್ವತಮ್ಮ | ಶ್ರೀಮಹಾದೇವ ಸ್ವಾಮಿಗಳು |
| ೧೯. | ೬.೫.೧೯೪೧ | ಗಂಗಾಂಬಿಕಾ ಪರಿಣಯ, ಕೀರ್ತನೆ | ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು | ಶ್ರೀ ಮಹಾದೇವ ಸ್ವಾಮಿಗಳು |
| ೨೦. | ೭.೫.೧೯೪೧ | ಶ್ರೀ ಕಲ್ಯಾಣ ಬಸವೇಶ್ವರ | ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು | ಶ್ರೀಮಹಾದೇವಸ್ವಾಮಿಗಳು |
| ೨೧. | ೮.೫.೧೯೪೧ | ಪುರಾಣ ಪ್ರವಚನ | ಶ್ರೀ ಟಿ.ಎನ್. ಚನ್ನಪ್ಪ | ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು |
| ೨೨. | ೯.೫.೧೯೪೧ | ಪುರಾಣ ಪ್ರವಚನ | ಶ್ರೀ ಟಿ.ಎನ್. ಚನ್ನಪ್ಪ | ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು |
| ೨೩. | ೧೦.೫.೧೯೪೧ | ಸುಧಾರಿತಧರ್ಮ/ಲಕ್ಷ್ಮಮ್ಮನವರ ಲೌಕಿಕಜಾಣ್ಮೆ/ಜಾತಿ ಕುಲಗಳು | ಶ್ರೀಮತಿಭ್ರಮರಾಂಭ/ಶ್ರೀಮತಿ ಕನಕಮ್ಮ, ಕು॥ ಶಾರದಮ್ಮ | ಶ್ರೀ ಓ.ಎನ್.ಲಿಂಗಣ್ಣಯ್ಯ |
| ೨೪. | ೧೧.೫.೧೯೪೧ | ವ್ಯಾಯಾಮ ಪ್ರದರ್ಶನ ಮತ್ತು ವಿವಿಧ ವಿನೋದಾವಳಿ | ಶ್ರೀ ಜಗದೇವಮಲ್ಲ ವ್ಯಾಯಾಮ ಶಾಲೆಯವರು | ಶ್ರೀ ಕೆ.ಎಲ್. ನಂಜಪ್ಪ |

೧೯೪೦ರ ದಶಕದಲ್ಲಿ ಮಹಾದೇವಸ್ವಾಮಿಗಳ ಮಠಾಧಿಪತ್ಯದಲ್ಲಿ ಸರ್ಪಭೂಷಣಮಠದಲ್ಲೂ ಇಂತಹ ಅನೇಕ ಸಾಂಸ್ಕೃತಿಕ ಚಟುವಟಿಕೆಗಳು ನಡೆದುದಾಗಿ ತಿಳಿದುಬರುತ್ತದೆ.[41] ಪ್ರತಿ ಸೋಮವಾರ ಶಿವಾನುಭವ ಗೋಷ್ಠಿಗಳು ನಡೆಯುವಂತೆ ವ್ಯವಸ್ಥೆ ಮಾಡಲಾಗಿತ್ತು. ಪ್ರತಿ ವರ್ಷವೂ ಬಸವಜಯಂತಿಯ ಸಂದರ್ಭದಲ್ಲಿ ನಗರ ಸಂಕೀರ್ತನೆಯನ್ನು ಏರ್ಪಡಿಸಲಾಗುತ್ತಿತ್ತು.[42] ಆಗ ಶಾಲಾಮಕ್ಕಳು ಬಸವಸ್ತೋತ್ರ ಹಾಗೂ ವಚನಗಳನ್ನು ಗಟ್ಟಿಯಾಗಿ ಹಾಡುತ್ತಾ ನಗರದ ಮುಖ್ಯ ಬೀದಿಗಳಲ್ಲಿ ಮೆರವಣಿಗೆ ಹೋಗುತ್ತಿದ್ದರು. ಸ್ವತಃ

ಮಹಾದೇವಸ್ವಾಮಿಗಳೇ ಈ ಸಂಕೀರ್ತನ ಮೆರವಣಿಗೆಯ ನೇತೃತ್ವ ವಹಿಸುತ್ತಿದ್ದರು. ಇವರಿಗೆ ವಚನಸಾಹಿತ್ಯದ ಬಗೆಗೆ ಅಪಾರವಾದ ಭಕ್ತಿ-ಗೌರವವಿತ್ತು. ಅದರ ಪ್ರಸಾರಕ್ಕಾಗಿ ಏನೆಲ್ಲಾ ತ್ಯಾಗಕ್ಕೂ ಸಿದ್ಧರಾಗಿರುತ್ತಿದ್ದರು. ಪಂಚಾಕ್ಷರಿ ಗವಾಯಿಗಳ ಶಿಷ್ಯರಾಗಿದ್ದ ವಿದ್ವಾನ್ ಬಿ.ಆರ್.ಪುರಾಣಿಕ್ ಅವರು ಅನೇಕ ಶಿವಶರಣರ ವಚನಗಳನ್ನು ಸಂಗೀತಕ್ಕೆ ಅಳವಡಿಸಿ ಬಹಳ ಪ್ರಸಿದ್ಧಿ ಪಡೆದಿದ್ದರು. ಆಗ ಮಹಾದೇವಸ್ವಾಮಿಗಳು ಪುರಾಣಿಕರನ್ನು ಮಠಕ್ಕೆ ಕರೆಸಿ ದಿನಾಂಕ:೧.೧೦.೧೯೪೦ ರಂದು ಅವರಿಗೆ ''ವಚನಸಂಗೀತಪ್ರವೀಣ'' ಎಂಬ ಬಿರುದನ್ನಿತ್ತು ಗೌರವಿಸಿದ್ದರು.[43] ಮುಂದೆ ದಿನಾಂಕ: ೨೯.೧.೧೯೪೧ರಂದು ಬಿ.ಎಂ.ಶ್ರೀಯವರ ಅಧ್ಯಕ್ಷತೆಯಲ್ಲಿ ''ವಚನಶಾಸ್ತ್ರದ ಅಭ್ಯಾಸ ಮತ್ತು ಚರ್ಚೆ'' ಯನ್ನು ಕುರಿತು ವಿಚಾರ ಗೋಷ್ಠಿಯೊಂದನ್ನು ಏರ್ಪಡಿಸಿದ್ದರು.[44] ಆಗ ಜೀರಗೆಕಟ್ಟೆಬಸಪ್ಪ, ಬಿ.ಶಿವಮೂರ್ತಿಶಾಸ್ತ್ರಿ, ಓ.ಎನ್.ಲಿಂಗಣ್ಣಯ್ಯ ಮುಂತಾದ ವಿದ್ವಾಂಸರು ಈ ಗೋಷ್ಠಿಯಲ್ಲಿ ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ಮೈಸೂರು ಸಂಸ್ಥಾನದವರು, ದಾವಣಗೆರೆಯ ಪ್ರಸಿದ್ಧ ವಕೀಲರಾಗಿದ್ದ ಡಿ.ಎಚ್.ಚಂದ್ರಶೇಖರಯ್ಯನವರನ್ನು 'ಸಂಸ್ಥಾನದ ನ್ಯಾಯ ವಿಧಾಯಕ ಸಭೆಯ ಅಧ್ಯಕ್ಷ'ರನ್ನಾಗಿ ಆಯ್ಕೆಮಾಡಿದ್ದರು. ಆಗ ಮಹಾದೇವಸ್ವಾಮಿಗಳು ಅವರನ್ನು ಮಠಕ್ಕೆ ಬರಮಾಡಿಕೊಂಡು ದಿನಾಂಕ: ೬.೨.೧೯೪೧ರಲ್ಲಿ ಅಭಿನಂದನಾ ಸಮಾರಂಭವನ್ನು ಏರ್ಪಡಿಸಿ ಗೌರವಿಸಿದ್ದರು.[45]

ಸರ್ಪಭೂಷಣ ಮಠದಲ್ಲಿ ಸಮಾಜದ ಗಣ್ಯವ್ಯಕ್ತಿಗಳು, ದಾರ್ಶನಿಕರು ನಿಧನರಾದಾಗ ಸಂತಾಪಸೂಚಕ ಸಭೆಗಳನ್ನೂ ನಡೆಸಲಾಗುತ್ತಿತ್ತು. ಸಿದ್ಧಗಂಗಾ ಕ್ಷೇತ್ರದ ಉದ್ದಾನಸ್ವಾಮಿಗಳು (ಲಿಂಗೈಕ್ಯ ದಿ: ೧೧.೧.೧೯೪೧); ಬೇಲಿಮಠದ ಶಿವರುದ್ರಸ್ವಾಮಿಗಳು (ಲಿಂಗೈಕ್ಯ ದಿ: ೬.೮.೧೯೪೧); ಸಮಾಜಸೇವಕ ಎಂ. ನಾಗಪ್ಪ (ಲಿಂಗೈಕ್ಯ ದಿ: ೨೮.೮.೧೯೪೧); ವೀರಶೈವತತ್ವವಿಶಾರದ ವೀರಪ್ಪಬಸಪ್ಪಬಿಳೇ ಅಂಗಡಿ (ಲಿಂಗೈಕ್ಯ ದಿ: ೨೦.೧೧.೧೯೪೧); ಹಾಗೂ ಮೈಸೂರಿನ ವೀರಶೈವ ವಿದ್ಯಾರ್ಥಿನಿಲಯದ ಸ್ಥಾಪಕ ಕ್ಯಾತನಹಳ್ಳಿಸಿದ್ದಣ್ಣ (ಲಿಂಗೈಕ್ಯ ದಿ: ೨೦.೧೧.೧೯೪೧) ಇವರೇ ಮೊದಲಾದ ಗಣ್ಯವ್ಯಕ್ತಿಗಳು ಶಿವಾಧೀನರಾದಾಗ ಸಮಾಜಕ್ಕೆ ಆದ ನಷ್ಟ ಹಾಗೂ ದುಃಖವನ್ನು ಸೂಚಿಸಲಿಕ್ಕಾಗಿ ಮಠದಲ್ಲಿ ಸಂತಾಪಸೂಚಕ ಸಭೆಗಳನ್ನು ನಡೆಸಲಾಗಿತ್ತು.[46]

ಬೆಂಗಳೂರಿನ ಮಠಗಳ ಪರವಾಗಿ ಮತ್ತೊಂದು ಅಮೂಲ್ಯವಾದ ಸಾಂಸ್ಕೃತಿಕ ಕೊಡುಗೆ ಏನೆಂದರೆ, ಸರ್ಪಭೂಷಣಮಠದ ಆಶ್ರಯದಲ್ಲಿ ಗುಬ್ಬಿನಾಟಕ ಕಂಪೆನಿಯನ್ನು ನಗರದಲ್ಲೇ ಕಾಯಂ ಆಗಿ ನೆಲೆಯೂರುವಂತೆ ಮಾಡಿದ್ದು. ೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ನಗರದ ಜನತೆಯ ಮನರಂಜನೆಗಾಗಿ ಅನೇಕ ನಾಟಕ ಕಂಪೆನಿಗಳೂ, ಸರ್ಕಸ್ ಕಂಪೆನಿಗಳೂ ಬಂದು, ಕೆಲವು ದಿನ ಇಲ್ಲಿ ತಂಗಿದ್ದು ನಂತರ ಮುಂದಿನ ಊರುಗಳಿಗೆ ಹೋಗುವುದು ಮಾಮೂಲಾಗಿತ್ತು. ಇಂತಹ ಸಂದರ್ಭದಲ್ಲಿ ತುಮಕೂರು ಜಿಲ್ಲೆಯ ಗುಬ್ಬಿ ಸ್ಥಳದ ಹಂಪಣ್ಣನವರ ಮಗ ಜಿ.ಎಚ್. ವೀರಣ್ಣನವರು ಮುಂದೆ ಬಂದು, ಬೆಂಗಳೂರಿನ ಜನತೆಯ ನಿತ್ಯಮನರಂಜನೆಗಾಗಿ ತಮ್ಮ ಮಾಲೀಕತ್ವದಲ್ಲಿದ್ದ ''ಶ್ರೀ ಚನ್ನಬಸವೇಶ್ವರ ಸ್ವಾಮಿ ಕೃಪಾಪೋಷಿತ ನಾಟಕ ಮಂಡಳಿ''ಯನ್ನು ಬೆಂಗಳೂರು ನಗರದಲ್ಲೇ ಕಾಯಂ ಆಗಿ ನೆಲೆಗೊಳಿಸುವುದಾಗಿಯೂ ಇದಕ್ಕೆ ಅಗತ್ಯವಾದ ಸೂಕ್ತ ಸ್ಥಳಾವಕಾಶಕ್ಕಾಗಿ ಪುರಪ್ರಮುಖರಲ್ಲಿ ವಿನಂತಿಸಿದ್ದರು. ಆಗ ಸರ್ಪಭೂಷಣ ಮಠದ ಅಧ್ಯಕ್ಷರಾಗಿದ್ದ ಚನ್ನಬಸವಸ್ವಾಮಿಗಳು ತಮ್ಮ ಮಠದ ಆವರಣದಲ್ಲಿ ಪೂರ್ವಭಾಗದ ವಿಶಾಲ ನಿವೇಶನವನ್ನು ಬಿಟ್ಟುಕೊಟ್ಟು, ಗುಬ್ಬಿ ಕಂಪೆನಿಯವರು ಬೆಂಗಳೂರಿನಲ್ಲಿ ತಮ್ಮದೇ ಆದ ನಾಟಕ ಮಂದಿರವೊಂದನ್ನು ನಿರ್ಮಿಸಿಕೊಳ್ಳಲು ಅನುಕೂಲವಾಯಿತು.[47] ತತ್ಪರಿಣಾಮವಾಗಿ ದಿನಾಂಕ:೨೪.೪.೧೯೨೩ ರಿಂದ ಪ್ರತಿನಿತ್ಯ ನಗರದಲ್ಲಿ 'ಗುಬ್ಬಿಕಂಪೆನಿ'[48]ಯವರ ನಾಟಕ ಪ್ರದರ್ಶನಗಳು ನಡೆಯಲಾರಂಭಿಸಿ ಜನಮನವನ್ನು ಸೂರೆಗೊಂಡವು. ಹೀಗೆ ಸ್ವಾತಂತ್ರ್ಯಪೂರ್ವದಲ್ಲಿ ನಾಡಿನ ಹೆಸರಾಂತ ನಾಟಕಕಾರರೂ, ''ನಾಟಕರತ್ನ'' ಬಿರುದಾಂಕಿತರೂ ಆಗಿದ್ದ ಗುಬ್ಬಿ ವೀರಣ್ಣನವರ ಕಲಾಪ್ರೌಢಿಮೆಗೆ ಆಶ್ರಯ ನೀಡಿದ್ದ ಸರ್ಪಭೂಷಣಮಠವು ಬೆಂಗಳೂರಿನ ಜನತೆಯ ಸಾಂಸ್ಕೃತಿಕ ಬದುಕಿಗೆ ಒಂದು ಹೊಸ ತಿರುವನ್ನು ನೀಡಿದ್ದುದು ಸ್ಮರಣೀಯ ಸಂಗತಿ.

ನಗರದ ವೀರಶೈವ ಸಮಾಜಬಾಂಧವರ ಅದರಲ್ಲೂ ಮಹಿಳಾ ವರ್ಗದವರ ಸಾಂಸ್ಕೃತಿಕ ಬದುಕಿಗೂ ಒಂದು ಹೊಸ ತಿರುವನ್ನು ನೀಡಿದವರೂ ಸಹ ಸರ್ಪಭೂಷಣ

ಮಠದ ಮಹಾದೇವಸ್ವಾಮಿಗಳವರೇ ಆಗಿದ್ದಾರೆ. ಇವರ ಪ್ರೇರಣೆ ಹಾಗೂ ಪ್ರೋತ್ಸಾಹಗಳಿಂದಾಗಿ ೧೯೩೭ರ ಜೂನ್ ೧೨ರಂದು ನಗರದಲ್ಲಿ ಪ್ರಥಮವಾಗಿ ''ಶ್ರೀ ಮಹಾದೇವಿ ಯಕ್ಕನವರ ಸೇವಾಸಮಾಜ''ವು ಪ್ರಾರಂಭವಾಯಿತು.[49] ಆರಂಭದಲ್ಲಿ ಈ ಸಮಾಜವು[50] ಅಕ್ಕನ ಬಾಳಿನ ಬೆಳಕಿನಲ್ಲಿ ನಾಡಿನಾದ್ಯಂತ ಮಹಿಳಾ ಜಾಗೃತಿಯನ್ನು ಉಂಟುಮಾಡುವುದು, ಬಸವಾದಿ ಶಿವಶರಣರ ಇಹಪರಗಳನ್ನು ಕುರಿತು, ಜೀವನಸಿದ್ಧಾಂತಗಳನ್ನು ಕುರಿತು ಮಹಿಳೆಯರು ಸೂಕ್ತ ತಿಳುವಳಿಕೆ ಪಡೆಯುವಂತಾಗುವುದು ಹಾಗೂ ಸಮಾಜದ ಮಹಿಳಾಸೇವಾ ಸಂಘದ ನೆರವಿನಿಂದ ಮಹಿಳಾ ವರ್ಗದವರಿಗೆ ಕೈಲಾದ ಸೇವೆಯನ್ನು ಸಲ್ಲಿಸುವುದು ಇವೇ ಮೊದಲಾದ ಉದ್ದೇಶಗಳಿಂದ ಕಾರ್ಯಪ್ರವೃತ್ತವಾಯಿತು.[51]

ಮುಂದೆ ಇದೇ ಮಹಾದೇವಸ್ವಾಮಿಗಳು ಹಾಗೂ ಹರ್ಡೇಕರಮಂಜಪ್ಪನವರ ಪ್ರೇರಣೆಯಿಂದಾಗಿ ಧಾರವಾಡದ ಮಾಳಮಡ್ಡಿಯ ಶಿ.ಶಿ.ಬಸವನಾಳರ ಮನೆಯಲ್ಲಿ ೧೯೩೮ರಲ್ಲಿ ''ಧಾರವಾಡ ಮಾಳಮಡ್ಡಿ ಅಕ್ಕನಬಳಗ''ವು ಪ್ರಾರಂಭವಾಯಿತು.[52] ನಂತರ ಇದೇ ಸಂಸ್ಥೆಯ ಆಶ್ರಯದಲ್ಲಿ 'ಅಖಿಲ ಭಾರತ ಅಕ್ಕನ ಬಳಗಗಳ ಕೇಂದ್ರ ಸಂಸ್ಥೆ'ಯು ರೂಪುಗೊಂಡಿದ್ದಾಗಿಯೂ ತಿಳಿದುಬರುತ್ತದೆ.[53]

ಮಹಾದೇವಸ್ವಾಮಿಗಳ ಒತ್ತಾಸೆಯಿಂದಾಗಿಯೇ ಸರ್ಪಭೂಷಣಮಠದ ಆಶ್ರಯದಲ್ಲಿ ೧೯೫೮ರ ಜುಲೈ ೨೧ರಂದು ''ಅನುಭವಮಂಟಪ'' ಎಂಬ ಕೇಂದ್ರ ಸಂಸ್ಥೆಯೊಂದನ್ನು ಸ್ಥಾಪಿಸಲಾಗಿದ್ದಿತು.[54] ಈ ಸಂಸ್ಥೆಯೂ ಕೂಡ ಮಹಾದೇವಸ್ವಾಮಿಗಳ ಅಧ್ಯಕ್ಷತೆಯಲ್ಲಿಯೇ ರೂಪುಗೊಂಡು, ಅನೇಕ ಪುರಪ್ರಮುಖರನ್ನು ತನ್ನ ಕಾರ್ಯಕಾರಿ ಸಮಿತಿಯ ಸದಸ್ಯರುಗಳನ್ನಾಗಿ ಒಳಗೊಂಡಿತ್ತು.[55] ವ್ಯಾಪಕವಾಗಿ ವೀರಶೈವ ತತ್ವಗಳ ಅಧ್ಯಯನ, ಮನನ ಹಾಗೂ ಪ್ರಕಾಶನಗಳನ್ನು ನಡೆಯಿಸುವ ಧ್ಯೇಯೋದ್ದೇಶಗಳನ್ನು ಒಳಗೊಂಡಿದ್ದ ಈ ಸಂಸ್ಥೆಯು[56] ಅನೇಕ ಸಮಾಜೋಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಯಿಸುತ್ತಿತ್ತು.

ಒಮ್ಮೆ ಈ ಸಂಸ್ಥೆಯ ವತಿಯಿಂದ ೧೯೬೦ರ ಏಪ್ರಿಲ್ ೨೯ರಂದು 'ಬಸವಜಯಂತಿ' ಕಾರ್ಯಕ್ರಮವನ್ನು ಅತ್ಯಂತ ವೈಭವಯುತವಾಗಿ ನಗರದ ಪುರಭವನದಲ್ಲಿ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮವನ್ನು ಆಗಿನ ಮೈಸೂರು ರಾಜ್ಯದ ಉಸ್ತುವಾರಿ ರಾಜ್ಯಪಾಲರಾಗಿದ್ದ ಎಚ್.ವಿ. ಮಂಗಲದಾಸ್ ಪಕವಾಸ ಅವರು ಉದ್ಘಾಟಿಸಿದ್ದರು. ಅಂದಿನ ಮುಖ್ಯಮಂತ್ರಿಗಳಾಗಿದ್ದ ಬಿ.ಡಿ.ಜತ್ತಿಯವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.[57]

ಮುಂದೆ ಇದೇ ಮಠದ ಆಶ್ರಯದಲ್ಲಿ ೧೯೬೦ರ ವೇಳೆಗೆ ''ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಸಾಂಸ್ಕೃತಿಕ ವೇದಿಕೆ''ಯು ಪ್ರಾರಂಭವಾಗಿತ್ತು.[58] ಮಠದಲ್ಲಿ ಶ್ರಾವಣಮಾಸದ ಹಾಗೂ ಯುಗಾದಿಯ ವಿಶೇಷ ಕಾರ್ಯಕ್ರಮಗಳೆಲ್ಲವೂ ಈ ವೇದಿಕೆಯ ಆಶ್ರಯದಲ್ಲಿಯೇ ರೂಪುಗೊಳ್ಳುತ್ತಿದ್ದವು. ೧೯೬೫ರ ವರೆಗೂ ಸಕ್ರಿಯವಾಗಿ ಮಠದಲ್ಲಿ ಅನೇಕ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಿಯೋಜಿಸುತ್ತಿದ್ದ ಈ ವೇದಿಕೆಯು ಮುಂದೆ ಸ್ಥಗಿತಗೊಂಡಿತು.

ಇತ್ತೀಚೆಗೆ ಬೆಂಗಳೂರಿನ ಜನತೆಯನ್ನು ಸಾಂಸ್ಕೃತಿಕವಾಗಿ ತೊಡಗಿಸಿದ ಪ್ರಮುಖ ಮಠಗಳಲ್ಲಿ ಈಗಿನ ಗವಿಪುರ ಬಡಾವಣೆಯ ನಿಜಗುಣ ಜಂಗಮಮಠವೂ ಒಂದು. ಕಳೆದ ಹತ್ತು ವರ್ಷಗಳಿಂದ ಈ ಮಠವು ನಗರದ ಜನತೆಯ ಸಾಂಸ್ಕೃತಿಕ ಬದುಕಿಗೆ ಅನುವಾಗುವ ಅನೇಕ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿರುವುದು ಉಲ್ಲೇಖನಾರ್ಹ.

೧೯೮೭ರ ಜುಲೈ ೧೮ ರಿಂದ ೨೦ರವರೆಗೆ ಮೂರು ದಿನಗಳ ಕಾಲ ನಿಜಗುಣ ಜಂಗಮಮಠದ ಆಶ್ರಯದಲ್ಲಿ 'ಶಿವಾನುಭವ ಸಮ್ಮೇಳನ'ವನ್ನು ನಡೆಸಲಾಗಿತ್ತು. ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಪೀಠಾರೋಹಣದ ರಜತ ಮಹೋತ್ಸವದ ಸವಿನೆನಪಿಗಾಗಿ ಈ ಸಮ್ಮೇಳನವನ್ನು ಹಮ್ಮಿಕೊಳ್ಳಲಾಗಿತ್ತು.[59] ಈ ಸಂದರ್ಭದಲ್ಲಿ ಡಾ। ಎಂ. ಚಿದಾನಂದಮೂರ್ತಿ, ಡಾ। ಎಂ.ಎಂ.ಕಲಬುರ್ಗಿ, ಡಾ। ಎಸ್.ಎಂ. ವೃಷಭೇಂದ್ರಸ್ವಾಮಿ ಇವರುಗಳ ಅಧ್ಯಕ್ಷತೆಯಲ್ಲಿ ಶೂನ್ಯಸಂಪಾದನೆಯನ್ನು ಕುರಿತು ಮೂರು ವಿಚಾರಗೋಷ್ಠಿಗಳನ್ನು ಏರ್ಪಡಿಸಲಾಗಿತ್ತು. ಜೊತೆಗೆ

ಲಲಿತಾಂಬ ವೃಷಭೇಂದ್ರಸ್ವಾಮಿಯವರ ಅಧ್ಯಕ್ಷತೆಯಲ್ಲಿ ಮಹಿಳಾಗೋಷ್ಠಿಯನ್ನೂ, ಡಾ। ಸಿದ್ಧಯ್ಯಪುರಾಣಿಕರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿಗಳನ್ನೂ ಹಾಗೂ ಇಳಕಲ್ಲ ಮಹಾಂತಸ್ವಾಮಿಗಳ ಅಧ್ಯಕ್ಷತೆಯಲ್ಲಿ ಗುರುದರ್ಶನ ಗೋಷ್ಠಿಗಳನ್ನೂ ಏರ್ಪಡಿಸಲಾಗಿತ್ತು.[60] ಪ್ರಾರಂಭದ ದಿನ ಸಮ್ಮೇಳನಾಧ್ಯಕ್ಷರಾಗಿದ್ದ ಜಗದ್ಗುರು ಗಂಗಾಧರರಾಜ ಯೋಗೀಂದ್ರ ಮಹಾಸ್ವಾಮಿಗಳವರನ್ನು ೧೦೮ ಕುಂಭ ಕಳಸಗಳೊಡನೆ ಅದ್ದೂರಿ ಮೆರವಣಿಗೆಯೊಂದಿಗೆ ಕರೆತರಲಾಗಿತ್ತು. ಡಾ। ಶಿವಕುಮಾರಮಹಾಸ್ವಾಮಿಗಳು (ಸಿದ್ಧಗಂಗಾಮಠ) ಸಮ್ಮೇಳನವನ್ನು ಉದ್ಘಾಟಿಸಿದ್ದರು. ಕೊನೆಯದಿನ ರಾಜ್ಯದ ಸಚಿವರಾಗಿದ್ದ ಎಂ.ಪಿ.ಪ್ರಕಾಶ್ ಅವರು ಸಮಾರೋಪ ಭಾಷಣ ಮಾಡಿದ್ದರು. ಇದೇ ಸಂದರ್ಭದಲ್ಲಿ ಡಾ। ಜ.ಚ.ನಿ, ಡಾ। ಆರ್.ಸಿ.ಹಿರೇಮಠ, ಡಾ। ಎಲ್. ಬಸವರಾಜು, ಡಾ। ಎಚ್. ತಿಪ್ಪೇರುದ್ರಸ್ವಾಮಿ, ಪ್ರೊ। ಸಂ. ಶಿ. ಭೂಸನೂರಮಠ, ಡಾ। ಜೋಳದರಾಶಿ ದೊಡ್ಡನಗೌಡ, ಡಾ। ಎಂ. ಚಿದಾನಂದಮೂರ್ತಿ, ಡಾ।ವಿ.ಎಸ್. ಕಂಬಿ ಇವರೇ ಮೊದಲಾದವರನ್ನು ವಿಶೇಷವಾಗಿ ಸನ್ಮಾನಿಸಲಾಗಿತ್ತು.[61]

೧೯೮೮ರ ಸೆಪ್ಟೆಂಬರ್ ೧೦ ರಿಂದ ೧೨ರ ವರೆಗೆ ಇದೇ ಮಠದ ಆಶ್ರಯದಲ್ಲಿ ಮೂರು ದಿನಗಳ ಕಾಲ ಎರಡನೆಯ ಅಖಿಲಭಾರತ ಶರಣಸಾಹಿತ್ಯ ಸಮ್ಮೇಳನವನ್ನು ಏರ್ಪಡಿಸಲಾಗಿತ್ತು. ಈ ಸಮ್ಮೇಳನದ ಅಧ್ಯಕ್ಷರಾಗಿ ಡಾ। ಆರ್.ಸಿ. ಹಿರೇಮಠ ಅವರು ಆಯ್ಕೆಯಾಗಿದ್ದರು. ಅಂದಿನ ರಾಜ್ಯದ ರಾಜ್ಯಪಾಲರಾಗಿದ್ದ ಪಿ. ವೆಂಕಟಸುಬ್ಬಯ್ಯ ಅವರು ಸಮ್ಮೇಳನವನ್ನು ಉದ್ಘಾಟಿಸಿದ್ದರು. ಮೂರು ದಿನಗಳ ಅವಧಿಯಲ್ಲಿ ಒಟ್ಟು ಐದು ವಿಚಾರಗೋಷ್ಠಿಗಳನ್ನು ಏರ್ಪಡಿಸಲಾಗಿತ್ತು. ಕೊನೆಯ ದಿನ ಅಖಿಲಭಾರತ ಶರಣಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಡಾ। ಎಚ್.ತಿಪ್ಪೇರುದ್ರಸ್ವಾಮಿಯವರ ಅಧ್ಯಕ್ಷತೆಯಲ್ಲಿ ಬಹಿರಂಗ ಅಧಿವೇಶನವನ್ನು ಜರುಗಿಸಲಾಗಿತ್ತು. ಇದೇ ಸಂದರ್ಭದಲ್ಲಿ ಡಾ। ಆರ್.ಆರ್. ದಿವಾಕರ, ವೈ. ಚಂದ್ರಶೇಖರಶಾಸ್ತ್ರಿ, ಟಿ.ಎಸ್. ಶಾಮರಾವ್, ಶಾಂತಾದೇವಿ ಮಾಳವಾಡ, ಡಾ। ಜೋಳದರಾಶಿ ದೊಡ್ಡನಗೌಡ ಇವರುಗಳನ್ನು ಸನ್ಮಾನಿಸಲಾಯಿತು.[62]

೧೯೮೯ರ ಏಪ್ರಿಲ್ ೧ ರಿಂದ ೭ರ ವರೆಗೆ ಒಂದು ವಾರದ ಕಾಲ ಇದೇ ಮಠದ ವತಿಯಿಂದ 'ತತ್ವಚಿಂತನ ಗೋಷ್ಠಿ'ಯನ್ನು ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ವೀರಶೈವ ಸಿದ್ಧಾಂತಗಳಿಗೆ ಸಂಬಂಧಿಸಿದಂತೆ ನೂರೊಂದು ಸ್ಥಲಗಳು, ಅನುಭಾವ, ಶಿವಯೋಗ, ಗಣಾಚಾರದ ನಿಯಮ ಇವೇ ಮೊದಲಾದ ವಿಷಯಗಳನ್ನು ಕುರಿತು ಚಿಂತನೆ ನಡೆಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಸುತ್ತೂರು, ಹುಬ್ಬಳ್ಳಿ, ಆನಂದಪುರ, ಮುಂಡರಗಿ ಇವರೇ ಮೊದಲಾದ ಜಗದ್ಗುರುಗಳೂ ಹಾಗೂ ಸರ್ಪಭೂಷಣಮಠ, ಬೇಲಿಮಠ, ಗಂಜಾಂಮಠ, ನರಗುಂದದೇವರಮಠ, ಮುರುಗೋಡ ಮಠ, ಹಂದಿಗನೂರುಮಠ, ಹೊಸರಿತ್ತಿಮಠ, ನಂದಿವೇರಿಮಠ, ನಾಗಸಂದ್ರಮಠ ಇವೇ ಮೊದಲಾದ ಮಠಾಧಿಪತಿಗಳೂ ಪಾಲ್ಗೊಂಡಿದ್ದರು.[63]

ನಿಜಗುಣಮಠದ ಆಶ್ರಯದಲ್ಲೇ ೧೯೯೦ರ ಮಾರ್ಚಿ ೨೦ ರಿಂದ ೨೭ರ ವರೆಗೆ ಎಂಟುದಿನಗಳ ಕಾಲ ''ಶಿವಯೋಗಸಂಪದ'' ಎಂಬ ವಿಶೇಷ ಸಮಾವೇಶವನ್ನು ಜರುಗಿಸಲಾಗಿತ್ತು. ಆಗ ಶಿವಯೋಗಿವರೇಣ್ಯರಾದ ನಿಜಗುಣ ಶಿವಯೋಗಿಗಳು, ಸಿದ್ಧಲಿಂಗಯತಿಗಳು, ಷಣ್ಮುಖಶಿವಯೋಗಿಗಳು, ಮುರುಘೇಂದ್ರ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು ಇವರೇ ಮೊದಲಾದವರ ಜೀವನ ಹಾಗೂ ಸಾಧನೆಗಳನ್ನು ಕುರಿತು ಚಿಂತನೆ ನಡೆಸಲಾಗಿತ್ತು.[64] ಇದೇ ರೀತಿ ೧೯೯೧ರ ಸೆಪ್ಟೆಂಬರ್ ೧೫ ರಿಂದ ೨೧ ರವರೆಗೆ ಒಂದು ವಾರದ ಕಾಲ 'ಅನುಭಾವಸಪ್ತಾಹ'ವನ್ನು ಏರ್ಪಡಿಸಲಾಗಿತ್ತು. ಆಗ ವೀರಶೈವ ಧರ್ಮಗ್ರಂಥ' ನಿರ್ಣಯದ ವಿಚಾರ ಕಮ್ಮಟವನ್ನು ವ್ಯವಸ್ಥೆಗೊಳಿಸಲಾಗಿತ್ತು. ಈ ಕಮ್ಮಟದಲ್ಲಿ ಡಾ। ಸಿದ್ಧಯ್ಯಪುರಾಣಿಕ, ಡಾ। ಎಚ್. ತಿಪ್ಪೇರುದ್ರ ಸ್ವಾಮಿ, ಪಂ। ಚನ್ನಪ್ಪಎರೇಸೀಮೆ, ಡಾ। ಸಾ.ಶಿ. ಮರುಳಯ್ಯ, ಗೊ.ರು. ಚನ್ನಬಸಪ್ಪ, ಪ್ರೊ। ವಿ.ವಿ. ಸಂಗಮದ, ಪ್ರೊ। ಬಿ. ವಿರೂಪಾಕ್ಷಪ್ಪ, ಸಿದ್ಧಣ್ಣಲಂಗೋಟಿ ಇವರೇ ಮೊದಲಾದ ವಿದ್ವಾಂಸರುಗಳ ಜೊತೆಗೆ ನಾಡಿನ ಅನೇಕ ವೀರಶೈವ ಮಠಾಧಿಪತಿಗಳೂ ಪಾಲ್ಗೊಂಡಿದ್ದರು.[65] ಅನುಭಾವಸಪ್ತಾಹದ ಅಂಗವಾಗಿ ಪ್ರತಿದಿನ ಸಾಯಂಕಾಲ ಹಿರಿಯ ವಿದ್ವಾಂಸರುಗಳಿಂದ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತಿತ್ತು.[66]

ಇದೇ ಮಠದಲ್ಲಿ ೧೯೯೨ ಸೆಪ್ಟೆಂಬರ್ ೧೪ ರಿಂದ ೨೩ ರವರೆಗೆ ಹತ್ತು ದಿನಗಳ ಕಾಲ 'ಪ್ರವಚನಸಂಪದ'ವನ್ನು ಏರ್ಪಡಿಸಲಾಗಿತ್ತು. ಆಗ ಪ್ರತಿದಿನ ಸಂಜೆ ಬೇಲಿಮಠದ ಶಿವಾನುಭವ ಚರಮೂರ್ತಿಗಳಾದ ಶಿವರುದ್ರಸ್ವಾಮಿಗಳವರು ''ಮೊಗ್ಗೆಯಮಾಯಿದೇವರ ಶತಕತ್ರಯ''ವನ್ನು ಕುರಿತು ವಿಶೇಷ ಪ್ರವಚನವನ್ನು ನಡೆಸಿಕೊಟ್ಟಿದ್ದರು.[67] ಹಾಗೆಯೇ ೧೯೯೫ರ ಶ್ರಾವಣ ಮಾಸದಲ್ಲಿ, ಒಂದು ತಿಂಗಳಕಾಲ ನಿರಂತರವಾಗಿ ಪ್ರತಿದಿನ ಸಂಜೆ 'ಭೀಮಕವಿಯ ಬಸವಪುರಾಣ'ವನ್ನು ಕುರಿತು, ಸರ್ಪಭೂಷಣ ಮಠದ ಅಧಿಪತಿಗಳಾಗಿದ್ದ ಪ್ರವಚನಾಚಾರ್ಯ ಮಲ್ಲಿಕಾರ್ಜುನಸ್ವಾಮಿಗಳವರಿಂದ ಪ್ರವಚನಮಾಲೆಯನ್ನು ಏರ್ಪಡಿಸಲಾಗಿತ್ತು.[68]

ನಗರದ ಕೊಳದ ಮಠದಲ್ಲೂ ಕೂಡ ಪ್ರತಿವರ್ಷವೂ ಭಾರತೀಯ ಭಾಷಾ ಸಮ್ಮೇಳನ, ವಿಶ್ವಶಾಂತಿಸಮ್ಮೇಳನ, ಸರ್ವಧರ್ಮ ಸಮನ್ವಯ ಸಮ್ಮೇಳನ ಇವೇ ಮೊದಲಾದ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ. ಈ ಸಂದರ್ಭದಲ್ಲಿ ರಾಷ್ಟ್ರ ಮಟ್ಟದ ಕ್ಷೇತ್ರತಜ್ಞರಿಂದ ಉಪನ್ಯಾಸಗಳನ್ನು ಏರ್ಪಡಿಸ ಲಾಗುವುದಲ್ಲದೆ ಆಯಾ ಕ್ಷೇತ್ರಗಳಲ್ಲಿ ಗಮನಾರ್ಹಸೇವೆ ಸಲ್ಲಿಸಿದ ಗಣ್ಯರುಗಳನ್ನು ಸನ್ಮಾನಿಸಲಾಗುತ್ತದೆ. ಇದೇ ರೀತಿ ನಗರದ ಗುರುವಣ್ಣ ದೇವರ ಮಠದಲ್ಲೂ ಕೂಡ ಆಗಾಗ ವಿಶೇಷಸಾಂಸ್ಕೃತಿಕ ಉತ್ಸವಗಳನ್ನು ನೆರವೇರಿಸಲಾಗುತ್ತದೆ. ಇಲ್ಲಿ ಪ್ರತಿವರ್ಷವೂ ತಪ್ಪದೆ ನಡೆದುಬಂದಿರುವ ಬಸವಜಯಂತಿ ಕಾರ್ಯಕ್ರಮವಂತೂ ಬಹಳ ಅದ್ದೂರಿಯಾಗಿ ಜರುಗುತ್ತದೆ.

ಹೀಗೆ ಬೆಂಗಳೂರಿನ ಬಹಳಷ್ಟು ಮಠಗಳು ಇಂದಿಗೂ ನಿರಂತರವಾಗಿ ನಡೆಸಿಕೊಂಡು ಬಂದಿರುವ ಸಾಂಸ್ಕೃತಿಕ ಚಟುವಟಿಕೆಗಳು ನಗರದ ಜನತೆಗೆ ವರದಾನವಾಗಿವೆ. ಮೇಲಾಗಿ ಈ ಕಾರ್ಯಕ್ರಮಗಳು ಇಲ್ಲಿನ ಜನತೆಯನ್ನು ಸಾಮಾಜಿಕವಾಗಿ, ಸಾಹಿತ್ಯಕವಾಗಿ ಹಾಗೂ ಧಾರ್ಮಿಕವಾಗಿ ಪುನಶ್ಚೇತನಗೊಳಿಸುವ ಮೂಲಕ, ಅವರ ಸಾಂಸ್ಕೃತಿಕ ಬದುಕಿಗೆ ಸದಾ ಸ್ಫೂರ್ತಿಯ ನೆಲೆಯಾಗಿವೆ. ಒಟ್ಟಾರೆ ನಗರದ ನಾಗರೀಕತೆಯ ಸಂಕೀರ್ಣ ಬದುಕಿನ ನಡುವೆಯೂ, ಜನಮನವನ್ನು ಧಾರ್ಮಿಕ ಚೌಕಟ್ಟಿನೊಂದಿಗೆ ಸದಾ ಬೆಸೆಯುವ ಕಾರ್ಯ ಇಲ್ಲಿನ ಮಠಗಳ ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ನಡೆಯುತ್ತಿರುವುದು ಮೆಚ್ಚಬೇಕಾದ ಸಂಗತಿಗಳಾಗಿವೆ.

### ೬.೩. ವ್ಯವಹಾರ ಕೇಂದ್ರಗಳಾಗಿ

ವ್ಯವಹಾರವು ಸಾಮಾಜಿಕ ಜೀವನ ನಿರ್ವಹಣೆಯ ಒಂದು ವ್ಯವಸ್ಥಿತವಾದ ಚೌಕಟ್ಟಿಗೆ ಸಂಬಂಧಪಟ್ಟದ್ದು. ಮಾನವ ಈ ಭೂಮಂಡಲಕ್ಕೆ ಪರಿಚಯವಾದಾಗಿನಿಂದಲೂ ಆತನ ವ್ಯವಹಾರವು ನಿರಂತರವಾಗಿ ನಡೆದು ಬಂದಿರುವಂಥದ್ದು. ಕಾಲ, ದೇಶ, ಪರಿಸ್ಥಿತಿಗಳಿಗೆ ಅನುಗುಣವಾಗಿ ವ್ಯಾವಹಾರಿಕತೆಯ ರೀತಿ-ನೀತಿಗಳೂ ಕೂಡ ವ್ಯತ್ಯಾಸವಾಗುತ್ತಾ ಬಂದಿದ್ದು, ಆಧುನಿಕತೆಯ ಪ್ರಭಾವದಿಂದಾಗಿ ಅವುಗಳ ಮೌಲ್ಯಗಳೂ ಕೂಡ ಕಾಲಕಾಲಕ್ಕೆ ಬದಲಾವಣೆಯಾಗುತ್ತಾ, ಜೊತೆಗೆ ವಿನೂತನತೆಯನ್ನು ಪಡೆಯುತ್ತಿರುವುದು ಇವೆಲ್ಲವೂ ಸಹಜವಾದ ವಿಚಾರಗಳೇ ಆಗಿವೆ.

ಹಿಂದೆ ಕ್ರಿ.ಶ. ೧೦-೧೨ನೆಯ ಶತಮಾನಗಳ ಅಂತರದಲ್ಲಿ ದೇವಸ್ಥಾನ ಅಥವಾ ಮಠಗಳು ಅಂದಿನ ಸಾಮಾಜಿಕ ವ್ಯವಹಾರದ ಪ್ರಮುಖ ಕೇಂದ್ರಗಳಾಗಿದ್ದುದನ್ನು ಅನೇಕ ಶಾಸನಗಳು ದೃಢಪಡಿಸುತ್ತವೆ.[69] ಇವು ತಮ್ಮ ಭಕ್ತವಲಯದ ಆತ್ಮೀಯ ಭಾವನೆ, ನಂಬಿಕೆಗಳ ಕೇಂದ್ರಗಳಾಗಿ ಬೆಳೆದುಬಂದುದರ ಜೊತೆಗೆ, ಸಾಮಾಜಿಕ ವ್ಯವಹಾರಗಳ ನಿಯಂತ್ರಣ ಕೇಂದ್ರಗಳಾಗಿಯೂ ಪ್ರಭುತ್ವವನ್ನು ಸಾಧಿಸಿದ್ದವು. ಇಂತಹ ಸಾಮಾಜಿಕ ನಿಯಂತ್ರಣ ಶಕ್ತಿಯು ಮಠ-ಮಂದಿರಗಳಿಗೆ ಇದ್ದುದರಿಂದಲೇ ರಾಜಮಹಾರಾಜರೂ ಕೂಡ ಅವುಗಳ ಪ್ರಚಂಡಶಕ್ತಿಗೆ ತಲೆಬಾಗಿ ಉದಾರ ದಾನ-ಧರ್ಮಗಳನ್ನು ನೀಡಿದ್ದರು.[70] ಕಾಲಕಾಲಕ್ಕೆ ಇವುಗಳ ಸ್ಥಿತಿಗತಿಯು ಬಲಿಷ್ಠವಾದಂತೆಲ್ಲಾ ಸಮಾಜದೊಳಗಿನ ಆಚರಣೆಗಳಲ್ಲಿನ ನಿಯಮ ನಿಬಂಧನೆಗಳ ಮೇಲೆ ನಿರ್ಣಾಯಕವಾದ ಅಧಿಕಾರವನ್ನು ಸಂಪಾದಿಸಿದ್ದವು. ಹೀಗೆ ಮಠಗಳ ಧನ ಸಂಪತ್ತು ವೃದ್ಧಿಸಿದಂತೆಲ್ಲಾ ಅವುಗಳ ದಂಡನಾಶಕ್ತಿಗಳೂ ರಾಜ್ಯ ವ್ಯವಸ್ಥೆಗೆ ಪರ್ಯಾಯ ಶಕ್ತಿಯಾಗಿ ರೂಪುಗೊಂಡವು.[71] ಇಂಥದೇ ಶಕ್ತಿಯನ್ನು ರೂಢಿಸಿಕೊಂಡಿದ್ದ ವೀರಶೈವ ಮಠಗಳೂ ಶರಣ ತತ್ವಕ್ಕೆ ಅನುಗುಣವಾಗಿ ಸಾಮಾಜಿಕ ವ್ಯವಹಾರಗಳ ಪರಿಷ್ಕಾರ ಕೇಂದ್ರಗಳಾಗಿ ಸಾಕಷ್ಟು ಜನಪರವಾದ ಕೆಲಸಗಳನ್ನು ಮಾಡಿವೆ. ಈ ಹಿನ್ನೆಲೆಯಲ್ಲಿ ಬೆಂಗಳೂರಿನ ವೀರಶೈವಮಠಗಳೂ ಸಾಮಾಜಿಕ ವ್ಯವಹಾರ

ಕೇಂದ್ರಗಳಾಗಿ ವಹಿಸಿದ ಪಾತ್ರವನ್ನು ಕುರಿತು ಮುಂದೆ ಪರಿಶೀಲಿಸಲಾಗಿದೆ.

೧೮ನೆಯ ಶತಮಾನದ ಆದಿಭಾಗದಲ್ಲಿ ಬೆಂಗಳೂರಿನ 'ಸ್ಥಳಬಣಜಿಗ'ರು ಎಂಬ ವೀರಶೈವಧರ್ಮದ ಉಪಪಂಗಡ ವೊಂದಿತ್ತು. ಈ ಪಂಗಡದ ಮುಖ್ಯಸ್ಥನಾಗಿದ್ದ ಕೆಂಪುನೂಲು ನಂಜುಂಡಯ್ಯನ ತಾತ ರಾಮಣ್ಣನ ಕಾಲದಲ್ಲಿ ಆತನ ಇಷ್ಟಲಿಂಗವು ಕಳುವಾಗಿಹೋಗಿತ್ತು. ಮುಂದೆ ಆತನ ವಂಶಸ್ಥರು ಅಲಿಂಗಿಗಳಾಗಿಯೇ ಉಳಿದಿದ್ದು, ಮಿಕ್ಕ ಸಮಾಜಬಾಂಧವರಿಂದ ಬಹಿಷ್ಕೃತರಾಗಿ ತಮ್ಮೊಳಗೇ ಕೊಳ್ಳು ಕೊಡುವುದು ಮಾಡಿಕೊಂಡು ಕ್ಷುದ್ರ ಜೀವನ ನಡೆಸುವಂತಾಗಿತ್ತು.[72]

ಮುಂದೊಂದು ದಿನ ಕೆಂಪುನೂಲು ನಂಜುಂಡಯ್ಯ ಮತ್ತವನ ಕುಲಸ್ಥರು ಸೇರಿ, 'ಸರ್ಪಭೂಷಣಮಠ'ದ ಫಾಲಲೋಚನ ಸ್ವಾಮಿಗಳಲ್ಲಿ ಮೊರೆಯಿಟ್ಟು ತಮ್ಮಗಳ ಈ ಸೆರೆಯನ್ನು ಬಿಡಿಸಬೇಕಾಗಿ ಪ್ರಾರ್ಥಿಸಿದ್ದರು. ಆಗ ಗುರುಗಳು ಶೋಭಕೃತು ಸಂವತ್ಸರದ (ಕ್ರಿ.ಶ. ೧೮೪೩ರಲ್ಲಿ) ಕಾರ್ತಿಕ ಶುದ್ಧ ೧ ರಂದು ತಮ್ಮ ಮಠದಲ್ಲಿ ಇದೇ ಕಾರಣವಾಗಿ ಸಭೆಯೊಂದನ್ನು ಕರೆದರು. ಈ ಸಭೆಗೆ ಬೆಂಗಳೂರಿನ ಸುತ್ತಮುತ್ತಲಿನ ೨೬ ಗ್ರಾಮಗಳಿಗೆ ಸೇರಿದ್ದ ೫೨ ಮಂದಿ ಮುಖಂಡರುಗಳು ಬಂದಿದ್ದರು. ಇವರುಗಳ ಸಮಕ್ಷಮದಲ್ಲಿ "ಸದರಿ ನಂಜುಂಡಯ್ಯ ಮತ್ತು ಅವರ ಕುಲಸ್ಥರು ಯಾವತ್ತೂ ನಿಮ್ಮಗೋತ್ರ-ಸೂತ್ರಾನುವರ್ತಿಗಳೇ ಆಗಿದ್ದುದು ಸರಿಯಷ್ಟೆ. ಇಲ್ಲಿಗೆ (೧೮೪೩ಕ್ಕೆ) ನೂರು ವರ್ಷಗಳ ಹಿಂದೆ ಈತನ ತಾತನ ಕಾಲದಲ್ಲಾದ ಪ್ರಮಾದವನ್ನು ಈಗ ತಿದ್ದಿಕೊಂಡು ತಮ್ಮೆಲ್ಲರ ತಗಲುವಣಿಯಾಗಿ ಬಾಳುವೆ ಮಾಡಲು ಅವಕಾಶ ಮಾಡಿಕೊಡಬೇಕಾಗಿ ನಂಜುಂಡಯ್ಯನ ಕಡೆಯವರು ಪ್ರಾರ್ಥಿಸುತ್ತಿದ್ದಾರೆ. ಆದಕಾರಣ ಇಲ್ಲಿನೆರೆದ ಹತ್ತೂ ಕುಲಸ್ಥರೂ ನಿಮ್ಮಂತೆ ಸದರಿ ನಂಜುಂಡಯ್ಯನ ಕಡೆಯುವರನ್ನೂ ಪರಿಗ್ರಹಿಸುವುದು ಸರಿಯುಷ್ಟೆ" ಎಂಬುದಾಗಿ ಫಾಲಲೋಚನ ಸ್ವಾಮಿಗಳು ಅಪ್ಪಣೆ ಕೊಡಿಸಿದ್ದರು.[73] ಅದೇ ಪ್ರಕಾರ ಗುರುಗಳ ಆಣತಿಯಂತೆ ನಡೆಸಿಕೊಳ್ಳುವುದಾಗಿ ನೆರೆದಿದ್ದ ಮುಖಂಡರೆಲ್ಲಾ ಸೇರಿ 'ಸಮಾಖ್ಯಪತ್ರ'ವೊಂದನ್ನು ಬರೆದುಕೊಟ್ಟಿದ್ದರು. ಹೀಗೆ ಒಂದೇ ಸಮುದಾಯದವರಲ್ಲಿ ಉಂಟಾಗಿದ್ದ ಸಾಮಾಜಿಕ ವ್ಯವಹಾರಗಳ ಅಸಮತೋಲನವನ್ನು ಪರಿಹರಿಸಿದ್ದುದು ಮಠಗಳ ಸಮಾಜಸೇವೆಯ ಒಂದು ಉತ್ತಮ ದೃಷ್ಟಾಂತವಾಗಿದೆ.

ಇದೇ ಶತಮಾನದ ಉತ್ತರಾರ್ಧ (ಕ್ರಿ.ಶ.೧೮೭೧)ದಲ್ಲಿ ಒಮ್ಮೆ 'ಶೀಗೆಬೇಲಿಮಠ'ದ ಭಕ್ತರಾಗಿದ್ದ ಬೈಯ್ಯಂಡ ಹಳ್ಳಿಯ (ಬೆಂಗಳೂರು ಉತ್ತರ ತಾಲ್ಲೂಕು) ಗ್ರಾಮ ನಿವಾಸಿ ಚಿಕ್ಕಣ್ಣ ಎಂಬುವವರು, ತಮ್ಮ ತೋಟದಲ್ಲಿ ಬೆಳೆದಿದ್ದ ಬಿದಿರುಮೆಳೆಯನ್ನು ಕಟಾವು ಮಾಡಿ ಬೆಂಗಳೂರಿಗೆ ತಂದು ಮಾರಾಟ ಮಾಡಲು ಆಗಿನ ಸರಕಾರದ ಅನುಮತಿ ಬೇಕಾಗಿತ್ತು. ಆಗ ಮಠದ ಗುರುಗಳಾಗಿದ್ದ ಸಿದ್ಧಲಿಂಗಸ್ವಾಮಿಗಳು ಆ ರೈತನಿಗೆ ಸೂಕ್ತ ಮಾರ್ಗದರ್ಶನ ನೀಡಿ, ಸರ್ಕಾರಕ್ಕೆ ಒಂದು ಅರ್ಜಿಯನ್ನು ಬರೆಯಿಸಿ ಆತನ ಅಹವಾಲನ್ನು ಎತ್ತಿ ಹಿಡಿದರು. ಆ ಅರ್ಜಿಯ ಒಕ್ಕಣೆ ಹೀಗಿದೆ. - "ನಂದಿದುರ್ಗ ಫಾರೆಸ್ಟ್ ಇಲಾಖಾ ಅಶಿಸ್ಟಾಂಟು ಸಾಹೇಬರ ಜನಾಬಿಗೆ---ಸನ್ ೧೮೭೧ನೇ ಇಸವಿ ಜನವರಿ ತಾರೀಖು ೫ರಲ್ಲೂ ಬೆಂಗಳೂರು ಡಿಸ್ಟ್ರಿಕ್ಟ್, ನೆಲಮಂಗಲ ತಾಲ್ಲೂಕು, ಸೊಂಡೆಕೊಪ್ಪ ಸಂಮ್ಮತ್ತು ಜೋಡಿ ಬೈಯಂಡಹಳ್ಳಿ ಗ್ರಾಮದ ಚಿಕ್ಕಣ್ಣನು ಬರೆದುಕೊಂಡ ಅರ್ಜಿ-"[74] ಪತ್ರದ ಮುಖ್ಯ ವಿಷಯ "ಜೋಡಿ ಇನಾಮ್ ಗ್ರಾಮಗಳಲ್ಲಿ ಬೆಳೆದ ಉತ್ಪತ್ತಿ ವಗೈರೆ ಮಾರಾಟ ಮಾಡಲು ರೈತರೇ ಸ್ವತಂತ್ರರು. ಆದ್ದರಿಂದ ನಾನು ನನ್ನ ತೋಟದಲ್ಲಿ ಬೆಳೆದಿರುವ ಬಿದಿರುಮೆಳೆಯನ್ನು ಕಡಿದು ಮಾರಾಟ ಮಾಡಿಕೊಳ್ಳಲು ಎರಡು ದಿನದ ಮಟ್ಟಿಗೆ ಬೆಂಗಳೂರು ಪಟ್ಟಣದಲ್ಲಿ ಅನುಮತಿ ಕೋರಲಾಗಿತ್ತು." ಅರ್ಜಿ ಸಲ್ಲಿಸಿದ (ದಿ: ೫.೧.೧೮೭೧) ೨೫ ದಿನಗಳ ಒಳಗೆ ಸರ್ಕಾರದಿಂದ ಅನುಮತಿ ಪತ್ರ ಪ್ರಾಪ್ತವಾಗಿತ್ತು.[75] ಹೀಗೆ ರೈತಾಪಿ ಜನಗಳಿಗೆ ಸರ್ಕಾರದೊಂದಿಗೆ ವ್ಯವಹರಿಸುವಾಗ ಮಠಾಧೀಶರು ಸೂಕ್ತ ಮಾರ್ಗದರ್ಶನ ನೀಡುತ್ತಿದ್ದುದು ಸಾಮಾನ್ಯವಾಗಿತ್ತು.

ಸಾಮಾಜಿಕ ವ್ಯವಹಾರಗಳಿಗೆ ಸಂಬಂಧಿಸಿದಂತೆ ಬೆಂಗಳೂರಿನ 'ಗಂಜಾಂ (ಜಂಗಮ) ಮಠ'ವು ಕಳೆದ ಶತಮಾನದ ಉತ್ತರಾರ್ಧದಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸಿತ್ತು. ಹಿಂದೆ ಮೈಸೂರು ಸಂಸ್ಥಾನದವರು ೧೮೮೧ರ ಜನಗಣತಿಯ ಗೋಷ್ವಾರೆಯಲ್ಲಿ ವೀರಶೈವ ಮತಬಾಂಧವರನ್ನು ಮಾಮೂಲು ಗಣತಿಯಿಂದ ಬೇರ್ಪಡಿಸಿ, ಶೂದ್ರರ

ತರಗತಿಯಲ್ಲಿ ಸೇರಿಸಲಾಗಿತ್ತು.[76] ಆಗ ಇದು ಶಾಸ್ತ್ರಕ್ಕೂ, ಲೋಕ ವ್ಯವಹಾರಕ್ಕೂ ವಿರುದ್ಧವಾದದ್ದು. ಷಟ್ಕರ್ಮ[77] ನಿರತರೂ, ಶ್ರೇಷ್ಠ ಮತಾನುಸಾರಿಗಳೂ ಆದ ವೀರಶೈವ ಮತಸ್ಥರನ್ನು ಬ್ರಾಹ್ಮಣ ಮೊದಲಾದ ತರಗತಿಯಲ್ಲೇ ಸೇರಿಸಬೇಕಾಗಿ ಸಂಸ್ಥಾನದಾದ್ಯಂತ ಸಮಾಜ ಬಾಂಧವರು ಪ್ರತಿಭಟಿಸತೊಡಗಿದರು. ಈ ಪ್ರತಿಭಟನೆಯು ಮುಂದಿನ ಜನಗಣತಿಯವರೆಗೂ ಹಾಗೇ ಮುಂದುವರೆದಿತ್ತು.

ಒಮ್ಮೆ ''ಬೊಂಬಾಯಿಗೆ ಪ್ರಯಾಣಮಾಡುವ ಉದ್ದೇಶದಿಂದ ಆಗಿನ ಸಂಸ್ಥಾನದ ಮಹಾರಾಜರಾಗಿದ್ದ ೧೦ನೇ ಚಾಮರಾಜಒಡೆಯರು ದಿನಾಂಕ: ೧೬.೧.೧೮೯೧ರಂದು ಹರಿಹರದಲ್ಲಿ ಮೊಕ್ಕಾಂ ಮಾಡಿದ್ದರು. ಆಗ ಚಿತ್ರದುರ್ಗ ಮುರಿಗಾಸಂಸ್ಥಾನದ ಚರಮೂರ್ತಿಗಳಾಗಿದ್ದು, ಬೆಂಗಳೂರಿನ ಮಾಮೂಲು ಪೇಟೆಯ ಜಂಗಮ (ಗಂಜಾಂ) ಮಠದ ಅಧ್ಯಕ್ಷರೂ ಆಗಿದ್ದ ನಂಜುಂಡಸ್ವಾಮಿಗಳ ನೇತೃತ್ವದಲ್ಲಿ ನಾಲ್ಕುಸಾವಿರಮಂದಿ ವೀರಶೈವ ಪ್ರತಿನಿಧಿಗಳು ಇದ್ದ ಬೃಹತ್ ನಿಯೋಗವೊಂದು ಖುದ್ದಾಗಿ ಮಹಾರಾಜರನ್ನು ಭೇಟಿ ಮಾಡಿತ್ತು. ನಿಯೋಗದ ಮುಖಂಡರಾಗಿದ್ದ ಗಂಜಾಂ (ಜಂಗಮ) ಮಠದ ನಂಜುಂಡಸ್ವಾಮಿಗಳ ಸಪ್ರಮಾಣವಾದ ವಾದಸರಣಿಯನ್ನು ಆಲಿಸಿದ ಮಹಾರಾಜರು, ಸ್ಥಳದಲ್ಲೇ ಅಧಿಕಾರಿಗಳನ್ನು ಕರೆಸಿ ಆಗಿರುವ ಪ್ರಮಾದವನ್ನು ತಿದ್ದಿ, ಇನ್ನುಮುಂದೆ ಸಂಸ್ಥಾನದ ಜನಗಣತಿಯ ಗೋಷ್ವಾರೆಯಲ್ಲಿ ವೀರಶೈವಮತಸ್ಥರನ್ನು ಮೊದಲ ಶ್ರೇಣಿಯ ಬ್ರಾಹ್ಮಣ ವರ್ಗದಲ್ಲೇ ಸೇರಿಸಬೇಕಾಗಿ ಕಟ್ಟಪ್ಪಣೆ ಮಾಡಿಸಿದ್ದರು.''[78] ಹೀಗೆ ನಿಯೋಗದ ನೇತೃತ್ವವಹಿಸಿ ಸಂಸ್ಥಾನದ ವೀರಶೈವ ಮತಬಾಂಧವರಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಟ್ಟ ಬೆಂಗಳೂರಿನ ಗಂಜಾಂಮಠದ ನಂಜುಂಡಸ್ವಾಮಿಗಳಿಗೆ ಆಗ ಸಂಸ್ಥಾನದಾದ್ಯಂತ ಉತ್ತಮ ಘನತೆ-ಗೌರವಗಳ ಸಂಪಾದನೆಯಾಗಿತ್ತು. ಇದೇ ಸಂದರ್ಭಕ್ಕೆ 'ಮೈಸೂರು ರಾಜ್ಯಸಭಾ ಸದಸ್ಯರಾಗಲು ಅರ್ಹರಾದ ಬೆಂಗಳೂರು ಪಟ್ಟಣದ ದೊಡ್ಡಮನುಷ್ಯರ ಪಟ್ಟಿಯಲ್ಲಿ ಗಂಜಾಂ ಮಠದ ನಂಜುಂಡಸ್ವಾಮಿಗಳ ಹೆಸರೂ ಸೇರಿಸಲ್ಪಟ್ಟಿತ್ತು.'[79] ೧೨೪ ಮಂದಿ ಸದಸ್ಯರಿದ್ದ ಈ ಪಟ್ಟಿಯಲ್ಲಿ ಇದ್ದ ಏಕೈಕ ಮಠಾಧೀಶರ ಹೆಸರು ಇವರದೊಂದೇ ಆಗಿತ್ತು.

ಕಳೆದ ಶತಮಾನಾಂತ್ಯದ ವೇಳೆಗೆ ಸಂಸ್ಥಾನದ ಕೆಲವೆಡೆ ವೀರಭದ್ರಸ್ವಾಮಿ ದೇವಾಲಯಗಳ ಪ್ರತಿಷ್ಠಾರ್ಚನೆ, ಅಗ್ನಿಕುಂಡ, ನಂದೀಧ್ವಜೋತ್ಸವ ಮುಂತಾದವು ವೀರಶೈವೇತರ ಮತಸ್ಥರಿಂದಲೂ ನಡೆಯುವ ಪ್ರಯತ್ನಗಳು ಸನ್ನಿಹಿತವಾಗಿದ್ದವು. ಆಗ ಬೆಂಗಳೂರಿನ ಮೂರು ಪೇಟೆ (ದೊಡ್ಡಪೇಟೆ, ಅರಳೆಪೇಟೆ, ಮಾಮೂಲುಪೇಟೆ)ಗಳಲ್ಲಿನ ಶೆಟ್ಟಿ, ಯಜಮಾನರುಗಳ ಸಮಕ್ಷಮದಲ್ಲಿ ಗಂಜಾಂಮಠದ ನಂಜುಂಡಸ್ವಾಮಿಗಳು ಒಂದು ಮಹಜರನ್ನು ಸಿದ್ಧಗೊಳಿಸಿ, ಅದನ್ನು ಸಂಸ್ಥಾನದವರಿಗೆ ಕಳುಹಿಸಿಕೊಟ್ಟರು. ಆ ಮಹಜರಿನಲ್ಲಿದ್ದ ಮುಖ್ಯಾಂಶಗಳು ಹೀಗಿವೆ- ''ಇದೇ ಬೆಂಗಳೂರಿನ ಅರಳೆಪೇಟೆಯಲ್ಲಿ ಇರುವ ವೀರಭದ್ರಸ್ವಾಮಿ ದೇವಸ್ಥಾನ, ಗವಿಪುರದ ಪ್ರಳಯಕಾಲದ ವೀರಭದ್ರಸ್ವಾಮಿ ದೇವಸ್ಥಾನ, ಮತ್ತು ತಿಂಡ್ಲು ಗ್ರಾಮ (ಬಳ್ಳಾರಿ ರಸ್ತೆಯ ಗಂಗೇನಹಳ್ಳಿಗೆ ಸಮೀಪ)ದಲ್ಲಿರುವ ವೀರಭದ್ರಸ್ವಾಮಿ ದೇವಸ್ಥಾನ, ಈ ಮೂರು ದೇವಾಲಯಗಳ ಪೂಜಾ, ಪುಣ್ಯಾಹ, ನಾಂದಿ, ಅಂಕುರಾರ್ಪಣ, ಮಂಟಪದೇವತಾಪ್ರತಿಷ್ಠಾ, ಮಹಾಸ್ವಾಮಿಯ ಮಂಟಪಪ್ರವೇಶ, ಪಂಚಕಲಶಾರ್ಚನ, ಅಗ್ನಿಪ್ರತಿಷ್ಠಾಪನ, ನಂದೀ ಧ್ವಜೋತ್ಸವ, ಮಾಸೋತ್ಸವ, ಪಕ್ಷೋತ್ಸವ, ಸಂವತ್ಸರೋತ್ಸವ ಇವೇ ಮೊದಲಾದ ವೈದಿಕ ಕರ್ಮಗಳು ಅಪ್ರಾಕೃತ ಬ್ರಾಹ್ಮಣರಾದ, ವೀರಶೈವ ಮತಸ್ಥರಾದ ಲಿಂಗಾಂಗಿ ಬ್ರಾಹ್ಮಣರೇ ಪ್ರಮಥ ಪರಂಪರೆಯಿಂದ ವೇದಾಗಮ ಪುರಾಣ ಪುರಸ್ಸರವಾಗಿ ನಡೆಯಿಸಿಕೊಂಡು ಬಂದಿರುತ್ತಾರೆ. ಈ ವೀರಭದ್ರಸ್ವಾಮಿಯು ಲಿಂಗಮತಸ್ಥರ ಮುಖ್ಯ ದೇವರಾದ್ದರಿಂದ ಅನ್ಯಮತಸ್ಥರು ಸದರಿ ದೇವರ ಪ್ರತಿಷ್ಠಾರ್ಚನೆ ಮೊದಲಾದ ದೇವತಾ ಕಾರ್ಯಗಳನ್ನು ಮಾಡಕೂಡದು,--- ಹಾಗೊಂದು ವೇಳೆ ಮಾಡಿದ್ದೇ ಆದರೆ ನಮ್ಮ ಮತಸ್ಥರಲ್ಲಿ ತೀವ್ರ ಆಕ್ಷೇಪಣೆಗೆ ಕಾರಣವಾಗುತ್ತದೆ''[80] ಎಂಬುದಾಗಿ ಸಂಸ್ಥಾನದವರಲ್ಲಿ ಎಚ್ಚರವನ್ನು ಮೂಡಿಸಿ ಸಮಾಜೋದ್ಧಾರ್ಮಿಕ ವ್ಯವಹಾರಗಳಿಗೆ ಬಾಧಕವಾಗಬಹುದಾಗಿದ್ದ ಘಟನೆಗಳಿಗೆ ಸಂಸ್ಥಾನದವರ ಕಡೆಯಿಂದಲೇ ತೆರೆ ಎಳೆಸಿರುವುದುಂಟು. ಹೀಗೆ ಅಂದಿನ ವೀರಶೈವ ಸಮಾಜಬಾಂಧವರ ಮುಂದಾಳುವಾಗಿ ನಿಂತು, ಹಲವಾರು ಸಾಮಾಜಿಕ ವ್ಯವಹಾರಗಳಲ್ಲಿ ನ್ಯಾಯವನ್ನು ದೊರಕಿಸಿಕೊಟ್ಟ ಗಂಜಾಂಮಠದ ನಂಜುಂಡಸ್ವಾಮಿಗಳ ಕೀರ್ತಿ ಅಪ್ರತಿಮವಾದದ್ದು.

ಬೆಂಗಳೂರಿನ ಮಠಾಧೀಶರುಗಳು ಹಿಂದೆ ಸಾಂದರ್ಭಿಕವಾಗಿ ತಮ್ಮ ಭಕ್ತಸಮುದಾಯದವರ ಅವಶ್ಯಕತೆಗಳಿಗೆ ಅನುಗುಣವಾಗಿ ಸೂಕ್ತ ಹಣಕಾಸಿನ ನೆರವನ್ನೂ ನೀಡುತ್ತಿದ್ದುದಕ್ಕೆ ಹಲವಾರು ದೃಷ್ಟಾಂತಗಳಿವೆ. ೧೯ನೆಯ ಶತಮಾನದ ಉತ್ತರಾರ್ಧ ಹಾಗೂ ೨೦ನೆಯ ಶತಮಾನದ ಪೂರ್ವಾರ್ಧದ ಅವಧಿಯಲ್ಲಿ ಬೆಂಗಳೂರಿನ ಬೇಲಿಮಠ, ನರಗುಂದದೇವರಮಠ, ದೊಡ್ಡಮಠ, ಶಂಕರದೇವರಮಠ, ಗುರುವಣ್ಣದೇವರಮಠ, ಸರ್ಪಭೂಷಣಮಠ ಇವೇ ಮುಂತಾದ ಮಠಗಳ ಅಧಿಪತಿಗಳು ತಮ್ಮ ಭಕ್ತ ಸಮುದಾಯದವರಿಗೆ ಹಣಕಾಸಿನ ನೆರವು ನೀಡಿದ ಹಲವಾರು ದಾಖಲೆಗಳು ಲಭ್ಯವಾಗಿವೆ.[81] ಇವುಗಳ ಪರವಾಗಿ ಒಂದೇ ಒಂದು ದೃಷ್ಟಾಂತವನ್ನು ಮಾತ್ರ ಕೆಳಗೆ ನಮೂದಿಸಲಾಗಿದೆ.

೨೦ನೆಯ ಶತಮಾನದ ಆದಿಭಾಗದಲ್ಲಿ ಬೆಂಗಳೂರಿನಲ್ಲೇ ಪ್ರತಿಷ್ಠಿತ ಮಠವೆನಿಸಿಕೊಂಡಿದ್ದ ಬೇಲಿಮಠದ ಶಿವರುದ್ರಸ್ವಾಮಿಗಳ ಕಾಲ (೧೮೯೬-೧೯೪೧)ದಲ್ಲಿ ಭಕ್ತರಿಗೆ ನೀಡಲಾಗಿದ್ದ ಕೆಲವು ಹಣಕಾಸಿನ ಸಾಲದ ಬಾಬ್ತು ವಿವರ[82] ಈ ಕೆಳಕಂಡಂತಿದೆ.

| ( ದಿನಾಂಕ ) | ( ಹಣ ಪಡೆದವರು ) | ( ಮೊತ್ತ ) |
|---|---|---|
| ೧೮.೬.೧೯೦೬ | ಮಹಾಂತಶಾಸ್ತ್ರಿ | ೫೮೦/- |
| ೬.೮.೧೯೦೬ | ಎಲೆಕಟ್ಟು ಚಿಕ್ಕಮುನಿಯಪ್ಪ | ೨೧೦೦/- |
| ೧೫.೩.೧೯೦೭ | ಚಾಮರಾಜಪೇಟೆ ಸಿದ್ಧಪ್ಪ | ೧೦೦೦/- |
| ೧೮.೬.೧೯೦೭ | ಮೈಲನಹಳ್ಳಿ ಭದ್ರಯ್ಯ | ೫೦೦/- |
| ೧೩.೪.೧೯೦೮ | ನೆಲಮಂಗಲದ ಕರಿಬಸೆಟ್ಟಿ | ೨೦೦೦/- |
| ೭.೮.೧೯೦೮ | ತೂಬುಗೆರೆ ಬಿ. ನಂಜಪ್ಪ | ೮೭೦/- |
| ೨೪.೮.೧೯೦೮ | ಬಿಡದಿ ಪುಟ್ಟಗಂಗಯ್ಯ | ೬೫೦/- |
| ೧೩.೯.೧೯೦೮ | ಅರಳೆಪೇಟೆ ಶಿವಪ್ಪ | ೩೦೦೦/- |
| ೩೦.೧೦.೧೯೦೮ | ಎನ್. ಬಸೆಟ್ಟಪ್ಪ | ೨೦೦೦/- |
| ೨೨.೧೨.೧೯೦೮ | ಹುಸ್ಕೂರು ಗಂಗಪ್ಪ | ೫೦೦/- |

ಹೀಗೆ ೧೯೧೦ರ ವೇಳೆಗೆ ಬೇಲಿಮಠದಲ್ಲಿ ಒಟ್ಟು ೩೫,೦೦೦/- ರೂಗಳ ನಗದು ವ್ಯವಹಾರಗಳು ನಡೆದುದಾಗಿ ತಿಳಿದುಬರುತ್ತದೆ.[83] ಇದಕ್ಕೆ ಸಾಲಿಯಾನ ಶೇಕಡ ಹನ್ನೆರಡು ರೂ.ಗಳ ಬಡ್ಡಿ ವಿಧಿಸಲಾಗುತ್ತಿತ್ತು. ಮಠಗಳಿಂದ ಈ ರೀತಿಯ ಹಣಕಾಸಿನ ನೆರವನ್ನು ಪಡೆದ ಭಕ್ತರು ಸಕಾಲದಲ್ಲಿ ಸದುಪಯೋಗ ಮಾಡಿಕೊಂಡು ಮತ್ತೆ ಹಿಂದಿರುಗಿಸುವುದು ಮಾಮೂಲಾಗಿತ್ತು.

ಮೇಲ್ಕಂಡಂತೆ ಅನೇಕ ಬಗೆಯ ವ್ಯವಹಾರ ಕೇಂದ್ರಗಳಾಗಿ ಕಾರ್ಯನಿರ್ವಹಿಸತೊಡಗಿದ್ದ ಬೆಂಗಳೂರಿನ ಮಠಗಳು ಎಷ್ಟೋ ವೇಳೆ ಸಾಂಸಾರಿಕ ವ್ಯವಹಾರ (ವಿವಾದ)ಗಳಿಗೂ ಸಂಬಂಧಿಸಿದಂತೆ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದುದುಂಟು. ೧೯೩೮ರ ಮೇ ೨೫ ರಂದು 'ಬೇಲಿಮಠದ ಶಿವರುದ್ರಸ್ವಾಮಿಗಳು' ಒಂದು ಕೌಟುಂಬಿಕ ವಿವಾದವನ್ನು ಬಗೆಹರಿಸಿಕೊಟ್ಟಿದ್ದರು.[84] ಅದರ ಸಂಕ್ಷಿಪ್ತ ವಿವರ ಇಲ್ಲಿದೆ. 'ಮಾಗಡಿ ತಾಲ್ಲೂಕು ಸೋಲೂರು ಹೋಬಳಿ ರಂಗೇನಹಳ್ಳಿ ಗ್ರಾಮದ ಪಟೇಲ್ ಕಾಳಭೈರೇಗೌಡನ ಮಗ ವೀರಣ್ಣ(೪೦)ನು, ಕ್ಲೋಸ್‌ಪೇಟೆ (ರಾಮನಗರ) ತಾಲ್ಲೂಕು ಬಿಡದಿ ಗ್ರಾಮದ ತಮ್ಮಣ್ಣಪ್ಪ (೫೮)ನ ಮಗಳು ಗುರುಸಿದ್ಧಮ್ಮ (೩೫)ಳನ್ನು ಕಳೆದ ಹದಿನೈದು ವರ್ಷಗಳ ಹಿಂದೆ ಮದುವೆಯಾಗಿದ್ದ. ಅವರಿಬ್ಬರಿಗೂ ಮಕ್ಕಳಾಗದೇ ಹೋದಕಾರಣ, ಗುರುಸಿದ್ಧಮ್ಮನ ಅನುಮತಿ ಪ್ರಕಾರ ವೀರಣ್ಣನು ಈಗ್ಗೆ ಎರಡು ವರ್ಷಗಳ ಹಿಂದೆ ಕಂಬಾಳು (ಶಿವಗಂಗೆ ಪಕ್ಕ) ಗ್ರಾಮದ ಚಿಕ್ಕರುದ್ರಯ್ಯನ ಮಗಳಾದ ಮಲ್ಲಮ್ಮ(೨೦) ಎಂಬಾಕೆಯನ್ನು ಎರಡನೇ ಸಂಬಂಧ ಮಾಡಿಕೊಂಡಿದ್ದನು. ಮುಂದೆ ಇವರಿಬ್ಬರಿಗೂ ಪರಸ್ಪರ ಅಣಿಯದೆ ಗುರುಸಿದ್ಧಮ್ಮನು ತಾನು ಬೇರೆ ಇರುವುದಾಗಿ ಹಠ ಮಾಡಿದಾಗ ವಿವಾದವು ಮಠದವರೆಗೂ ಬಂದಿತು'.

ಆಗ ಮಠದ ಗುರುಗಳು ಉಭಯರಿಗೂ ಸೂಕ್ತ ತಿಳುವಳಿಕೆ ನೀಡಿ ಸದರಿ ಗುರುಸಿದ್ಧಮ್ಮನಿಗೆ ವೀರಣ್ಣನ ಮನೆಯಲ್ಲೇ ಪ್ರತ್ಯೇಕವಾಗಿ ಉಳಿದುಕೊಳ್ಳಲು ಸೂಕ್ತ ಏರ್ಪಾಡುಗಳನ್ನು ಸೂಚಿಸಿದ್ದರು. ಆ ಪ್ರಕಾರ- ''ವೀರಣ್ಣನ ಮನೆಯ ವಠಾರದಲ್ಲಿ ಮುಂಭಾಗದ ನಾಲ್ಕು ಅಂಕಣದ ಮನೆಯನ್ನು ಬಿಡಿಸಿಕೊಟ್ಟು ಪ್ರತಿ ವರ್ಷದ ಸುಗ್ಗಿಗೆ ಎರಡು ಖಂಡುಗದ ರಾಗಿ, ಎರಡು ಖಂಡುಗದ ಭತ್ತ ಹಾಗೂ ಮೇಲ್ಖರ್ಚಿಗಾಗಿ ಹತ್ತು ರೂಪಾಯಿಗಳಂತೆ, ಜೊತೆಗೆ ಪ್ರತಿ ಯುಗಾದಿಗೆ ಒಂದು ಜೊತೆ ಸೀರೆ ಹಾಗೂ ಒಂದು ಜೊತೆ ಕುಪ್ಪಸ ಇವಿಷ್ಟನ್ನು ವೀರಣ್ಣನು ಗುರುಸಿದ್ಧಮ್ಮನಿಗೆ ಜೀವನಾಂಶವಾಗಿ ಕೊಡುವಂತೆ'' ಕರಾರು ಬರೆಸಲಾಗಿತ್ತು.[85] ಹೀಗೆ ಸಾಂಸಾರಿಕ ವ್ಯವಹಾರಗಳಿಗೂ ಸಂಬಂಧಿಸಿದಂತೆ ಮಠಾಧಿಪತಿಗಳು ಭಕ್ತರಿಗೆ ಸಂದರ್ಭಾನುಸಾರ ಸೂಕ್ತ ಮಾರ್ಗದರ್ಶನ ನೀಡಿರುವ ಇಂತಹ ಹಲವಾರು ನಿದರ್ಶನಗಳಿವೆ. ಇದೇ ತೆರನಾಗಿ ಸಮಾಜದ ವಿಭಿನ್ನ ಆಯಾಮಗಳ ಹಿನ್ನೆಲೆಯಲ್ಲಿ ಬೆಂಗಳೂರಿನ ವೀರಶೈವಮಠಗಳು ಸಾಮಾಜಿಕ ವ್ಯವಹಾರಗಳ ಪ್ರಮುಖ ನೆಲೆಗಳಾಗಿ, ಹಲವಾರು ಸಮಾಜಸೇವಾ ಕಾರ್ಯಗಳನ್ನು ನಡೆಸುತ್ತಾ ಬಂದದ್ದು ಹೆಮ್ಮೆಯ ವಿಚಾರಗಳಾಗಿವೆ.

### ೬.೪. ಆರೋಗ್ಯ ಕೇಂದ್ರಗಳಾಗಿ

ಮಠಗಳು ತಮ್ಮ ಮತಾವಲಂಬಿ ಜನಸಮುದಾಯದ ಆರೋಗ್ಯ, ನೈರ್ಮಲ್ಯಗಳ ಕಡೆಗೂ ಗಮನ ಹರಿಸಿ ಸೂಕ್ತ ರೀತಿಯಿಂದ ಉಪಕರಿಸಿರುವುದುಂಟು. ಹಿಂದೆ ಪ್ಲೇಗಿನಂತಹ ಮಾರಕ ರೋಗಗಳು ಅಥವಾ ಮತ್ತಿತರ ಸಾಂಕ್ರಾಮಿಕ ರೋಗಗಳು ಕಾಣಿಸಿಕೊಂಡಾಗ ಸೂಕ್ತ ಚಿಕಿತ್ಸೋಪಾಯಗಳಿಲ್ಲದೆ ಸಾವು ನೋವುಗಳ ಸಂಖ್ಯೆ ಅಪರಿಮಿತವಾಗಿ ಕಾಡುತ್ತಿತ್ತು. ಬೆಂಗಳೂರು ಪಟ್ಟಣದಲ್ಲಿ ೧೮೬೩ರಲ್ಲಿ ಮೊಟ್ಟ ಮೊದಲಿಗೆ ಪ್ಲೇಗುರೋಗವು ಕಾಣಿಸಿಕೊಂಡಾಗ ೩೮೨ ಮಂದಿ ಬಲಿಯಾಗಿದ್ದರು.[86] ಮುಂದೆ ೧೮೯೭ರಲ್ಲಿ ಎರಡನೆಯ ಬಾರಿಗೆ ಮತ್ತೆ ಪ್ಲೇಗುರೋಗವು ಬಂದು, ಮೂರು ನಾಲ್ಕು ವರ್ಷಗಳ ಕಾಲ ಸತತವಾಗಿ ಬೆಂಗಳೂರಿನ ಜನತೆಯನ್ನು ಕಾಡಿತು. ಈ ಸಂದರ್ಭದಲ್ಲಿ ೧೮೯೧ರ ಜನಗಣತಿಯಂತೆ ಬೆಂಗಳೂರು ನಗರದ ಜನಸಂಖ್ಯೆಯು ೮೦,೨೮೫ ರಷ್ಟು ಇದ್ದದ್ದು. ೧೯೦೧ರ ವೇಳೆಗೆ ೭೦,೬೪೦ಕ್ಕೆ ಕುಸಿದಿತ್ತು.[87] ಅಂದರೆ ಆಗ ಪ್ಲೇಗುರೋಗದ ತೀವ್ರತೆ ಎಷ್ಟೊಂದು ಮಾರಕವಾಗಿತ್ತು ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಮಾನವನಿಗೆ ಎಷ್ಟೆಲ್ಲಾ ಹಣ, ಆಸ್ತಿ, ಅಂತಸ್ತು, ಒಡವೆ, ವಸ್ತ್ರ, ವಿದ್ಯೆ, ಬುದ್ಧಿ, ಏನೆಲ್ಲಾ ಸಂಪತ್ತುಗಳಿದ್ದರೂ, ಅವುಗಳ ಸದುಪಯೋಗ ಆಗಬೇಕಾಗಿದ್ದರೆ ಮೊದಲು ಅವನ ಆರೋಗ್ಯ ಚೆನ್ನಾಗಿರಬೇಕು. 'ಸಕಲ ಭಾಗ್ಯಗಳಲ್ಲಿ ಆರೋಗ್ಯಭಾಗ್ಯವೇ ಶ್ರೇಷ್ಠವಾದದ್ದು' ಎಂಬ ಮಾತು ಸಾರ್ವಕಾಲಿಕ ಸತ್ಯ. ಏಕೆಂದರೆ, ಆರೋಗ್ಯವೆಂಬುದು ಸಿಕ್ಕಿದೆಡೆಯಲ್ಲಿ ಹಣ ನೀಡಿ ಕೊಳ್ಳಬಹುದಾದ ವಸ್ತುವಲ್ಲ. ನವರಂಧ್ರಗಳಿಂದ ಒಡಗೂಡಿದ ಮಾನವನ ಈ ಸುಂದರ ಶರೀರದ ನಡುವೆ ಸಹಜವಾಗಿಯೇ ಸಂಸ್ಕರಿತವಾಗಬಲ್ಲ ಆರೋಗ್ಯದ ಗುಟ್ಟು ಎಲ್ಲಾ ಕಾಲದ ಜನತೆಗೂ ಒಗಟಾಗಿಯೇ ಉಳಿದಿದೆ. ಈ ಹೊತ್ತಿನ ಪ್ರಜ್ಞಾವಂತ ಜನಸಮುದಾಯದ ನಡುವೆ ಆರೋಗ್ಯದ ಬಗ್ಗೆ ಸ್ಪಷ್ಟವಾದ ಕಲ್ಪನೆಯಾದರೂ ಇದೆ. ಅದಕ್ಕಾಗಿ ಇಂದು ಏನೆಲ್ಲಾ ಆವಿಷ್ಕಾರಗಳಾಗಿದ್ದು ಆರೋಗ್ಯದ ಏರುಪೇರಿಗೆ ಅಗತ್ಯವಾದ ಅತ್ಯದ್ಭುತ ಸೌಲಭ್ಯಗಳಾದರೂ ಇವೆ. ಆದರೆ ಹಿಂದೆ ಅಪ್ರಜ್ಞಾವಂತ ಜನಸಮುದಾಯದ ನಡುವೆ ಆರೋಗ್ಯದ ರಕ್ಷಣೆಗೆ ವೈಜ್ಞಾನಿಕವಾದ ಸವಲತ್ತುಗಳು ಏನೇನೂ ಇಲ್ಲದ ಕಾಲದಲ್ಲಿ, ಮಠ-ಮಂದಿರಗಳು ಈ ನಿಟ್ಟಿನಲ್ಲಿ ಸಾಕಷ್ಟು ಪರಿಶ್ರಮವನ್ನು ವಹಿಸಿರುವುದು ಗಮನಾರ್ಹವಾಗಿದೆ. ಹಿಂದೆ ನಗರದ ಕೆಲವು ಮಠಾಧಿಪತಿಗಳು, ಮಾರಣಾಂತಿಕ ರೋಗಗಳು ತಲೆದೋರಿದಾಗ ಜನಸಾಮಾನ್ಯರು ವಹಿಸಬೇಕಾದ ಎಚ್ಚರಿಕೆ ಹಾಗೂ ಮುನ್ಸೂಚನೆಗಳನ್ನು ಕೊಟ್ಟು, ತಾವೇ ಸ್ವತಃ ಕಂಡುಕೊಂಡಿದ್ದ ಆಯುರ್ವೈದ್ಯೋಪಚಾರಗಳನ್ನು ಮಾಡುವ ಮೂಲಕ ಸಮಾಜದ ಆರೋಗ್ಯ ರಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಈ ವಿಚಾರವಾಗಿ ದೊರಕಿದ ಕೆಲವು ಮಾಹಿತಿಗಳನ್ನು ಕೆಳಕಂಡಂತೆ ಸಂಗ್ರಹಿಸಲಾಗಿದೆ.

೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಬೆಂಗಳೂರಿನ ಪ್ರಸಿದ್ಧ ಮಠಾಧಿಪತಿಗಳಾಗಿದ್ದ ಬೇಲಿಮಠದ ಕೆಂಪುನಂಜಸ್ವಾಮಿಗಳು (ಕ್ರಿ.ಶ.೧೮೧೮-೧೮೪೩) ಸ್ವತಃ ಆಯುರ್ವೇದ ನಿಪುಣರಾಗಿದ್ದು ಅನೇಕ ಔಷಧೋಪಚಾರಗಳನ್ನೂ ಹಾಗೂ ಯಂತ್ರ-ಮಂತ್ರಗಳನ್ನೂ ಮಾಡುತ್ತಿದ್ದುದಾಗಿ ತಿಳಿದುಬರುತ್ತದೆ.[88]

ಅವರ ಕಾಲದ ಔಷಧೋಪಚಾರಗಳ ವಿವರಣೆಯುಳ್ಳ ಮಾಹಿತಿಪತ್ರಗಳಲ್ಲಿ ಇರುವಂತೆ-'ಮೂಲವ್ಯಾಧಿ' ರೋಗಶಮನಕ್ಕಾಗಿ ಈ ರೀತಿಯ ಮದ್ದನ್ನು ಸೂಚಿಸಲಾಗಿದೆ. "ಚೆನ್ನಾಗಿ ಹದವಾದ ಎರಡು ಸೇರು ತೂಕದ ಕರ್ಜೂರವನ್ನು ತೆಗೆದುಕೊಂಡು, ಅದರ ಗರಟೆಯನ್ನು ಹೊರತೆಗೆದು ಚೆನ್ನಾಗಿ ಕುಟ್ಟಬೇಕು. ನಂತರ ಅದರ ಜೊತೆಗೆ ಎರಡು ಗಜನಿಂಬೆ ಹಣ್ಣಿನ ರಸವನ್ನೂ ಹಾಗೂ ಅರ್ಧಸೊಲಿಗೆ ಹಸುವಿನ ಗಟ್ಟಿ ತುಪ್ಪವನ್ನೂ ಮಿಶ್ರಣಮಾಡಿ ಮತ್ತೆ ಚೆನ್ನಾಗಿ ಕುಟ್ಟಬೇಕು. ಹೀಗೆ ಹದವಾದ ಕರ್ಜೂರದ ಮಿಶ್ರಣವನ್ನು ನಿಂಬೆಹಣ್ಣಿನ ಗಾತ್ರದ ಉಂಡೆಗಳನ್ನಾಗಿ ಮಾಡಿಕೊಂಡು, ಪ್ರತಿದಿನ ಬೆಳಿಗ್ಗೆ ಒಂದು ಉಂಡೆಯಂತೆ ೪೨ ದಿನಗಳ ಪರ್ಯಂತ ಸೇವಿಸಿದ್ದಾದರೆ 'ಮೂಲವ್ಯಾಧಿ'ರೋಗ ನಿವಾರಣೆಯಾಗುವುದಾಗಿ" ತಿಳಿಸಲಾಗಿದೆ.[89] ಹಾಗೆಯೇ ತಲೆಶೂಲೆ, ಉದರಬೇನೆ, ಎದೆನೋವು, ಆಮಶಂಕೆ, ಇತ್ಯಾದಿ ಅನೇಕ ರೋಗಗಳ ಉಪಶಮನಕ್ಕೆ ಬೇಕಾದ ದಿನಬಳಕೆಯ ಔಷಧೋಪಚಾರಗಳನ್ನು ಕೆಂಪುನಂಜೆಸ್ವಾಮಿಗಳು ಮಾಡುತ್ತಿದ್ದುದಾಗಿ ತಿಳಿದುಬರುತ್ತದೆ.

ಹಾಗೆಯೇ ಹಾವು, ಚೇಳು ಮುಂತಾದ ವಿಷಜಂತುಗಳು ಕಡಿದಾಗ ಮಂತ್ರವನ್ನೂ ಕೂಡ ಹಾಕುತ್ತಿದ್ದುದಾಗಿ ತಿಳಿದುಬರುತ್ತದೆ. 'ಹಾವಿನಮಂತ್ರ' 'ಚೇಳಿನಮಂತ್ರ' ಎಂಬ ಶಿರೋನಾಮೆಯ ಮಂತ್ರ ವಾಕ್ಯಗಳುಳ್ಳ ಪತ್ರಗಳೇ ಲಭ್ಯವಾಗಿವೆ.[90] ಇವುಗಳ ಲಿಪಿ ಕನ್ನಡದಲ್ಲೇ ಇದ್ದು ಭಾಷೆ ಮರಾಠಿಯಲ್ಲಿದೆ. "ಶ್ರೀ ಗುರುಬಸವ ಲಿಂಗಾಯ ನಮಃ" ಎಂದು ಪ್ರಾರಂಭವಾಗುವ ಈ ಮಂತ್ರ ವಾಕ್ಯಗಳ ಅಂತ್ಯದಲ್ಲಿ "ಶ್ರೀ ಪರಡಿ ವೈದ್ಯನಾಥ ಭೂಭೂ" ಎಂದು ಮುಕ್ತಾಯವಾಗಿದೆ. ಹಾಗೆಯೇ ೨೭ 'ಮಳೆಯ ನಕ್ಷತ್ರ'[91] ಗಳಲ್ಲಿ ಹಾಗೂ ೧೨ 'ಚಾಂದ್ರಮಾನ ಮಾಸ'[92] ಗಳಲ್ಲಿ ತಲೆದೋರಿದ ವಿಭಿನ್ನ ವ್ಯಾಧಿಗಳ ನಿರ್ಮೂಲನಕ್ಕಾಗಿ ಅನುಸರಿಸಬೇಕಾದ ವಿಧಿ-ವಿಧಾನಗಳನ್ನೂ ಮತ್ತು ಇದರ ಸಾಧಕ ಬಾಧಕಗಳನ್ನೂ ಕೂಡ ಅರಿತು ಸೂಕ್ತ ಸಲಹೆ ಸೂಚನೆಗಳನ್ನು ನೀಡುತ್ತಿದ್ದುದುಂಟು.[93] ಹೀಗೆ ಆ ಹೊತ್ತಿನ ಸಾಮಾಜಿಕ ಆರೋಗ್ಯ ಸಂರಕ್ಷಕರಾಗಿ ತಮಗೆ ಸಿದ್ಧಿಸಿದ್ಧ ಕೆಲವು ಉಪಶಮನ ವಿಧಾನಗಳನ್ನು ಬಳಸಿ ಜನಸಾಮಾನ್ಯರಿಗೆ ಸೂಕ್ತ ವೈದ್ಯೋಪಚಾರಗಳನ್ನು ಮಾಡುವುದು ಕೆಂಪುನಂಜೆಸ್ವಾಮಿಗಳ ದಿನನಿತ್ಯದ ಸೇವೆಯಾಗಿತ್ತು. ಮುಂದೆ ಇವರ ಶಿಷ್ಯರಾಗಿದ್ದ ಸಿದ್ಧಲಿಂಗಸ್ವಾಮಿಗಳೂ ಕೂಡ ತಮ್ಮ ಗುರುಗಳಿಂದ ಕಲಿತಿದ್ದ ವೈದ್ಯೋಪಚಾರಗಳನ್ನು ನಡೆಸಿಕೊಂಡು ಬಂದಿರುವುದಾಗಿ ತಿಳಿದು ಬರುತ್ತದೆ.[94]

ಬೆಂಗಳೂರು ಪಟ್ಟಣದಲ್ಲಿ ಮೊಟ್ಟಮೊದಲಿಗೆ ೧೮೯೮ರಲ್ಲಿ ಪ್ಲೇಗುರೋಗ ಕಾಣಿಸಿಕೊಂಡಿತ್ತು. ಸರ್ಪಭೂಷಣ ಮಠದ ಫಾಲಲೋಚನ ಸ್ವಾಮಿಗಳು ತಮ್ಮ ಅನೇಕ ಭಕ್ತರೊಂದಿಗೆ ಕ್ಲೋಸ್‌ಪೇಟೆ (ರಾಮ ನಗರ) ಬಳಿಯ ಬಿಡದಿ ಗ್ರಾಮದಲ್ಲೂ; ಬೇಲಿಮಠದ ಸಿದ್ಧಲಿಂಗಸ್ವಾಮಿಗಳು ತಮ್ಮ ಅನುಯಾಯಿಗಳೊಂದಿಗೆ ನೆಲಮಂಗಲದ ಬಳಿಯ ಮಲ್ಲರಬಾಣವಾಡಿಯಲ್ಲೂ; ಹಾಗೂ ನರಗುಂದದೇವರಮಠದ ಸಿದ್ಧಲಿಂಗದೇವರು ಮತ್ತವರ ಶಿಷ್ಯರೂ ಹೊಸಕೋಟೆ ಬಳಿಯ ಬಯಲುಮಠದಲ್ಲೂ ಕೆಲವು ದಿನ ವಾಸ್ತವ್ಯ ಹೂಡಿದ್ದುದಾಗಿ ತಿಳಿದುಬರುತ್ತದೆ.[95] ಆ ಸಂದರ್ಭದಲ್ಲಿ ತಮ್ಮ ಭಕ್ತರಿಗೆಲ್ಲಾ ಸ್ವಲ್ಪಕಾಲ ಮನೆ-ಮಠಗಳನ್ನು ತ್ಯಜಿಸಿ ಪಟ್ಟಣದಿಂದ ಹೊರಗೆ ಎಲ್ಲಾದರೂ ದೂರ ಇರುವಂತೆ ಸೂಚನೆಗಳನ್ನು ನೀಡಿದ್ದರು. ಮುಂದೆ ಪ್ಲೇಗಿನ ಗಾಳಿ ಕಡಿಮೆಯಾದಾಗ ನಗರದ ಒಳಭಾಗದ ಕೊಳಚೆಗುಂಡಿಗಳನ್ನೆಲ್ಲಾ ಮುಚ್ಚಿಸುವಂತೆ ಮುನಿಸಿಪಲ್ ಕಮಿಷನ್ ಸೂಚಿಸಿತ್ತು. ಆಗ ಮೇಲ್ಕಂಡ ಮಠಾಧೀಶರೇ ಮುಂದೆ ನಿಂತು ಪೇಟೆ ಶೆಟ್ಟಿ ಯಜಮಾನರುಗಳ ಸಹಕಾರದೊಂದಿಗೆ ಪಟ್ಟಣದ ಒಳಭಾಗದ ಕೊಳಚೆಗುಂಡಿಗಳನ್ನೆಲ್ಲಾ ಭರ್ತಿಮಾಡಿಸಿದುದಾಗಿ ತಿಳಿದುಬರುತ್ತದೆ.[96] ಇದೇ ಸಂದರ್ಭಕ್ಕೆ ಸರ್ಕಾರದವರೂ ಕೂಡ ಬೆಂಗಳೂರು ಪಟ್ಟಣದ ಕೋಟೆಗೆ ಹೊರಭಾಗದಲ್ಲಿ ಸುತ್ತಲೂ ಇದ್ದ ಕಂದಕಗಳನ್ನು ೧೮೯೯ರಲ್ಲಿ ಮುಚ್ಚಿಸಿ ಹಾಕಿದರು.[97]

ಪಟ್ಟಣವಾಸಿಗಳ ಆರೋಗ್ಯ ರಕ್ಷಣೆಗಾಗಿ ಬೆಂಗಳೂರು ಮುನಿಸಿಪಲ್ ಕಮಿಷನ್ನಿನವರು, ೧೮೯೭ರಲ್ಲಿ ಪಟ್ಟಣದ ಒಳಗಿನ ಎಲ್ಲಾ ಶ್ಮಶಾನಗಳನ್ನೂ ಮುಚ್ಚಿಸುವ ಒಂದು ವಿಶೇಷ ತೀರ್ಮಾನವನ್ನು ಕೈಗೊಂಡರು.[98] ಮುನಿಸಿಪಲ್ ಕಮಿಷನ್ನಿನ ಈ ನಿರ್ಧಾರವನ್ನು ಪಟ್ಟಣದೊಳಗಿನ ಎಲ್ಲಾ ಮಠಾಧಿಪತಿಗಳೂ ಅನುಮೋದಿಸುವಂತೆ ಕೋರಲಾಗಿತ್ತು. ಕಾರಣವೇನೆಂದರೆ ಇದುವರೆಗೂ ಬೆಂಗಳೂರಿನ ಒಳಗೆ,

ಪಟ್ಟಣಕ್ಕೆ ಹೊಂದಿಕೊಂಡಂತಿದ್ದ ಬಹಳಷ್ಟು ವೀರಶೈವ ಮಠಗಳು ಶ್ಮಶಾನ ಕೇಂದ್ರಗಳೇ ಆಗಿದ್ದವು.[99] ಆಗ ಸರ್ಪಭೂಷಣಮಠ, ದೇಶದಮಠ,ಶಂಕರದೇವರಮಠ, ನರಗುಂದದೇವರಮಠ, ಬೇಲಿಮಠ, ಇವೇ ಮುಂತಾದ ಮಠಗಳ ಆವರಣದಲ್ಲಿ ವೀರಶೈವ ಜನಾಂಗದವರ ಅಂತ್ಯಸಂಸ್ಕಾರ ನಡೆಯುವುದು ಬಹಳ ಹಿಂದಿನಿಂದಲೂ ನಡೆದುಬಂದಿತ್ತು. ಮೇಲ್ಕಂಡ ಮಠಾಧಿಪತಿಗಳೆಲ್ಲಾ ಪಟ್ಟಣದ ಜನತೆಯ ಆರೋಗ್ಯ ಸಂರಕ್ಷಣಾರ್ಥವಾಗಿ ತಮ್ಮ ಮಠಗಳ ಆವರಣದಲ್ಲಿದ್ದ ಶ್ಮಶಾನ ಕೇಂದ್ರಗಳನ್ನೆಲ್ಲಾ ಮುಚ್ಚಿಸಿ ಮುನಿಸಿಪಲ್ ಕಮಿಷನ್ನಿನ ನಿರ್ಧಾರವನ್ನು ಅನುಮೋದಿಸಿದ್ದರು.[100]

೧೯೪೭ರ ವೇಳೆಗೆ ಬೆಂಗಳೂರಿನಲ್ಲಿ ಎರಡನೆಯ ಬಾರಿಗೆ ಪ್ಲೇಗುರೋಗವು ಕಾಣಿಸಿಕೊಂಡಿತು. ಮುಂದಿನ ಮೂರು ವರ್ಷಗಳವರೆಗೆ ಈ ರೋಗವು ಎಷ್ಟೊಂದು ತೀವ್ರವಾಗಿ ಕಾಡಿತ್ತೆಂದರೆ, ಪಟ್ಟಣದ ಸಾವಿರಾರು ಮಂದಿ ಮನೆ-ಮಠಗಳನ್ನು ತೊರೆದು ದೂರದ ಊರು ಗಳಿಗೆ ಹೋಗಿ ಎಷ್ಟೋದಿನ ಅಲ್ಲೇ ಕಾಲಕಳೆಯು ವಂತಾಗಿತ್ತು.[101] ಹೀಗೆ ಸಾಮೂಹಿಕ ಜಾಡ್ಯಗಳು ತಲೆದೋರಿದಾಗ ಮುಂಜಾಗರೂಕತಾ ಕ್ರಮಗಳನ್ನು ಕೈಗೊಳ್ಳುತ್ತಿದ್ದ ಎಷ್ಟೋ ಜನ ಮಠಾಧೀಶರೇ ಈ ಸಂದರ್ಭದಲ್ಲಿ ಪ್ರಾಣ ತೆರುವಂತಾಯಿತು.[102]

ಸ್ವಾತಂತ್ರ್ಯಪೂರ್ವದಲ್ಲಿ ಆರೋಗ್ಯ ತಪಾಸಣೆಗೋಸ್ಕರ ನಾಡಿನ ದೂರದೂರದ ಗ್ರಾಮಾಂತರ ಭಾಗದ ಜನತೆಯು ಪಟ್ಟಣದ ಆಸ್ಪತ್ರೆಗಳಿಗೆ ಪ್ರತಿನಿತ್ಯ ಬರುತ್ತಿದ್ದರು. ಹೀಗೆ ನೂರಾರು ಸಂಖ್ಯೆಯಲ್ಲಿ ಬರುತ್ತಿದ್ದ ಜನರು ಕೆಲವು ವೇಳೆ ಅನೇಕ ದಿನಗಳವರೆಗೆ ಇಲ್ಲೇ ಉಳಿದುಕೊಳ್ಳಬೇಕಾಗು ತ್ತಿತ್ತು. ಇಂತಹ ಅನಾರೋಗ್ಯದ ಅಸಹಾಯಕ ಬಾಂಧವರಿಗಾಗಿ ಉಚಿತವಾಗಿ ಊಟ, ವಸತಿಗಳನ್ನು ಒದಗಿಸುವ ಸೇವಾ ಕ್ಷೇತ್ರಗಳಾಗಿ ನಗರದ ಮರಿಸ್ವಾಮಿಮಠ, ಕೊಳದಮಠ, ಗುರುವಣ್ಣದೇವರಮಠ, ಮಹಾಂತರಮಠ ಇವೇ ಮೊದಲಾದ ಮಠಗಳು ಗಮನಾರ್ಹ ಸೇವೆ ಸಲ್ಲಿಸಿವೆ. ಮರಿಸ್ವಾಮಿಮಠದಲ್ಲಿ (೧೯೩೮-೪೭ರ ವರೆಗೆ) ಎಂಟ್ಹತ್ತು ಕೊಠಡಿಗಳನ್ನು ಇಂತಹ ಜನರಿಗಾಗಿಯೇ ಮೀಸಲಿರಿಸಿದ್ದು[103]ದಾಗಿ ತಿಳಿದುಬರುತ್ತದೆ.

ಇದೇ ಸಂದರ್ಭದಲ್ಲಿ ಮುತ್ತಿನಕಂತೆಮಠದ ಶಿವಕುಮಾರಸ್ವಾಮಿಗಳು ಸ್ವತಃ ಆಯುರ್ವೇದ ಪಂಡಿತ ರಾಗಿದ್ದು, ''ಆರೋಗ್ಯದರ್ಪಣ'' ಎಂಬ ಅಮೂಲ್ಯ ಕೃತಿಯೊಂದನ್ನು ರಚಿಸಿದ್ದರು. ಜನಸಾಮಾನ್ಯರ ಆರೋಗ್ಯ ಸುಧಾರಣೆಯನ್ನೇ ಗುರಿಯಾಗಿರಿಸಿಕೊಂಡು ರಚಿತವಾಗಿದ್ದ ಈ ಕೃತಿಯಲ್ಲಿ ದಿನನಿತ್ಯ ಬಳಸುವ ಗೃಹೋಪಯೋಗಿ ವಸ್ತುಗಳಿಂದಲೇ ಅನೇಕ ರೋಗರುಜಿನಗಳನ್ನು ಹೇಗೆ ಶಮನ ಮಾಡಿಕೊಳ್ಳಬಹುದೆಂಬ ಸುಲಭೋಪಾಯಗಳಿವೆ. ಆಯುರ್ವೈದ್ಯ ಕ್ಷೇತ್ರದಲ್ಲೇ ಅತ್ಯುಪಯುಕ್ತವಾದ ಶಾಸ್ತ್ರೀಯ ಗ್ರಂಥವಿದಾಗಿದ್ದು ೧೯೪೩ರಿಂದ ೧೯೮೩ರ ಅವಧಿಯೊಳಗೆ ಒಟ್ಟು ಆರು ಮುದ್ರಣಗಳನ್ನು ಕಂಡಿದೆ.[104]

ಅಲಸೂರಿನ ಶಿವಾನುಭವಮಠದ ಶೆಟ್ಟಪ್ಪಸ್ವಾಮಿಗಳು ಸ್ವಾತಂತ್ರ್ಯಪೂರ್ವದಲ್ಲಿ ಬೆಂಗಳೂರಿನ ಪ್ರಮುಖ 'ಭೂತವೈದ್ಯ'ರಾಗಿದ್ದರು. ಇವರು ತಮ್ಮ ಮಠದಲ್ಲಿ ಪ್ರತಿ ಅಮಾವಾಸ್ಯೆ ಮತ್ತು ಹುಣ್ಣಿಮೆಗಳ ದಿವಸ ವಿಶೇಷ ಶಕ್ತಿ ಆವಾಹನೆಯುಳ್ಳವರಾಗಿ ಭೂತಪೀಡಿತ ಅಥವಾ ಗ್ರಹಪೀಡಿತ ರೋಗಿಗಳಿಗೆ ರೋಗನಿವಾರಣೆ ಮಾಡಿದ ನೂರಾರು ದೃಷ್ಟಾಂತಗಳಿವೆ.[105] ಯಂತ್ರ-ಮಂತ್ರ ನಿಪುಣರಾಗಿದ್ದ ಇವರು ಪ್ರತಿನಿತ್ಯ ನೂರಾರು ಮಕ್ಕಳಿಗೆ ಬಾಲಗ್ರಹ ನಿವಾರಣೆ ಮತ್ತಿತರ ಕಂಟಕಗಳಿಗೆ ಸೂಕ್ತ ಉಪಶಮನ ಮಾಡುತ್ತಿದ್ದರು.

ಹೀಗೆ ಬೆಂಗಳೂರಿನ ವೀರಶೈವಮಠಗಳು ಆಯುರ್ವೈದ್ಯ ಪ್ರವೀಣರಿಂದ, ಭೂತವೈದ್ಯಪಂಡಿತರಿಂದ, ಔಷಧೋಪಾಯಗಳ ಶಾಸ್ತ್ರಕಾರರಿಂದ ಹಾಗೂ ಸಾಮಾಜಿಕ ನೈರ್ಮಲ್ಯದ ಜಾಗೃತಕಾರರುಗಳಿಂದ ಒಡಗೂಡಿದ್ದು ಬಹಳ ಹಿಂದಿನಿಂದಲೂ ಪಟ್ಟಣದ ಪ್ರಮುಖ ಆರೋಗ್ಯ ಕೇಂದ್ರಗಳಾಗಿ ಜನಪರವಾದ ಅಮೂಲ್ಯ ಸೇವೆಗಳನ್ನು ಸಲ್ಲಿಸಿವೆ. ಆ ಹೊತ್ತಿನ ಸಾಮಾಜಿಕ ಅವಶ್ಯಕತೆಗೆ ಅನುಗುಣವಾಗಿ ಪ್ರತಿಯೊಬ್ಬರಿಗೂ ನಿಲುಕುವಂತಹ ರೀತಿಯ ಉಚಿತವೂ ಹಾಗೂ ಸರಳವೂ ಆದ ಅನುಸರಣೆಗಳಿಂದಾಗಿ ಅಂದಿನ ಮಠಗಳ ಆರೋಗ್ಯ ಸೇವಾಕಾರ್ಯಗಳು ಸರ್ವಜನಾಧರಣೀಯವೆನಿಸಿದ್ದವು.

### ೬.೫. ಕಲ್ಯಾಣ ಕೇಂದ್ರಗಳಾಗಿ

ಮಠಗಳ ಜನಪರವಾದ ಅನೇಕ ಸಮಾಜ ಸೇವಾಕಾರ್ಯಗಳಲ್ಲಿ ಕಲ್ಯಾಣ(ವಿವಾಹ)ಕಾರ್ಯವೂ

ಒಂದು. ಹಿಂದೆ ರಾಜಪ್ರಭುತ್ವದ ವ್ಯವಸ್ಥೆಯಲ್ಲೂ ಮಠ-ಮಂದಿರಗಳೇ ನಿಜವಾದ ಸಮಾಜಕಲ್ಯಾಣ ಕೇಂದ್ರಗಳಾಗಿದ್ದುದನ್ನು ಸಾಬೀತುಪಡಿಸಲು ಅವರು ನೀಡಿದ್ದ ಉದಾರ ದಾನಧರ್ಮಗಳೇ ಸಾಕ್ಷಿಯಾಗಿವೆ. ಮದುವೆ ಎಂಬುದು ವಾಸ್ತವವಾಗಿ ಮದುವೆಯಾಗುವ ಗಂಡು-ಹೆಣ್ಣಿನ ವೈಯಕ್ತಿಕವಾದ ವಿಷಯವೇ ಸರಿ. ಆದರೆ ಆ ಗಂಡು-ಹೆಣ್ಣುಗಳೂ ಕೂಡ ಸಮಾಜದ ಒಂದು ಅವಿಭಾಜ್ಯ ಅಂಗವೇ ಆದ್ದರಿಂದ, 'ಮದುವೆ'ಯೂ ಒಂದು ಸಾಮಾಜಿಕ ವ್ಯವಸ್ಥೆಯೇ ಆಗಿದೆ. ಇಂತಹ ಸಾಮಾಜಿಕ ಹಿನ್ನೆಲೆಯುಳ್ಳ ವಿವಾಹ (ಕಲ್ಯಾಣ) ಕಾರ್ಯಗಳಿಗೂ ಮಠಗಳು ಸೂಕ್ತ ರೀತಿಯಲ್ಲಿ ನೆರವಾಗುತ್ತಾ ಬಂದಿರುವುದು ಬಹಳ ಹಿಂದಿನಿಂದಲೂ ನಡೆದುಬಂದಿರುವ ಪರಿಪಾಠವಾಗಿದೆ. ಹೀಗೆ ಬೆಂಗಳೂರಿನ ವೀರಶೈವಮಠಗಳೂ ಕೂಡ ಭಕ್ತರಮನೆಯ ಮಂಗಳ ಕಾರ್ಯಗಳಿಗೆ ಕೇಂದ್ರಸ್ಥಳಗಳಾಗಿದ್ದುದಕ್ಕೆ ಸಾಕಷ್ಟು ಮಾಹಿತಿಗಳಿವೆ.

ಸಿಕ್ಕಿರುವ ಮಾಹಿತಿಗಳ ಪ್ರಕಾರ ಗೊಟ್ಟೂರಯ್ಯ (ಗೋದೂರಯ್ಯ)ನ ಮಠದ ಸಿದ್ಧಲಿಂಗದೇವರು ೧೮೬೭ರಲ್ಲಿ ಮೊಟ್ಟ ಮೊದಲಿಗೆ ಭಕ್ತರಮನೆಯ ಮಂಗಳಕಾರ್ಯಗಳಿಗೋಸ್ಕರವೇ ಛತ್ರವೊಂದನ್ನು ನಿರ್ಮಾಣ ಮಾಡಿಸಿದ್ದರು.[106] ಮುಂದೆ ಈ ಛತ್ರವನ್ನು 'ಉಯ್ಯಾಲೆಛತ್ರ'ವೆಂದು ಕರೆಯುತ್ತಿದ್ದುದಾಗಿ ತಿಳಿದುಬರುತ್ತದೆ. ೧೯೩೦ರ ವರೆಗೂ ಇಲ್ಲಿ ಮದುವೆ ಮುಂಜಿಗಳು ನಡೆಯುತ್ತಿದ್ದುದಾಗಿ ಹೇಳುವುದುಂಟು.[107]

ಕಳೆದ ಶತಮಾನದ ಉತ್ತರಾರ್ಧದ ವೇಳೆಗೆ ಸಾಮಾನ್ಯರ ಮನೆಯ ಕಲ್ಯಾಣ ಕಾರ್ಯಗಳಿಗೂ ಕರೆಯೋಲೆಯನ್ನು ಬರೆಯಿಸುವ ರೂಢಿ ಪ್ರಾರಂಭವಾಗಿತ್ತು. ಮೊದಮೊದಲು ಈ ಓಲೆಗಳು ಸಂಸ್ಕೃತದಲ್ಲೇ ರಚನೆಯಾಗುತ್ತಿದ್ದವು. ಆಗ ಬೆಂಗಳೂರಿನ ಗಂಜಾಂ ಮಠದ ನಂಜುಂಡಸ್ವಾಮಿಗಳು ೧೮೮೮ರಲ್ಲಿ ಮೊಟ್ಟ ಮೊದಲಿಗೆ ಕನ್ನಡದಲ್ಲಿ ಮಾದರಿ ಲಗ್ನಪತ್ರಿಕೆಯೊಂದನ್ನು ರಚಿಸಿ, ಸಮಾಜ ಬಾಂಧವರೆಲ್ಲಾ ಇದೇ ಮಾದರಿಯನ್ನು ಅನುಸರಿಸುವಂತೆ ಕರೆ ನೀಡಿದ್ದರು.[108] ಅದರ ಮಾದರಿ ಪ್ರತಿಯು ಮುಂದೆ ಸಂಸ್ಥಾನದ ಎಲ್ಲೆಡೆಗೂ ಪ್ರಚಾರವಾಗಿದ್ದುದಾಗಿ ತಿಳಿದುಬರುತ್ತದೆ.[109]

೧೮೭೬ರ ವೇಳೆಗೆ 'ಸರ್ಪಭೂಷಣಮಠ'ದಲ್ಲೂ ಭಕ್ತರ ಮನೆಯ ಕಲ್ಯಾಣ ಕಾರ್ಯಗಳು ನಡೆಯುತ್ತಿದ್ದುದಕ್ಕೆ ಸೂಚನೆಗಳಿವೆ. ಆಗ ಮಠದ ಗುರುಗಳಾಗಿದ್ದ ಗುರುಸ್ವಾಮಿಗಳವರೇ ಹೇಳಿಕೊಂಡಿರುವಂತೆ "ತಾವು ನೂತನವಾಗಿ ಬಡಾಯಿಸಿ ಕಟ್ಟಿಸಿದ ಮಠದ ಹಜಾರದೊಳಗೆ, ಪರದೇಶಿಗಳಿಗೆ ಊಟೋಪಚಾರಗಳನ್ನು ಹಾಗೂ ಭಕ್ತರ ಮನೆಯ ಕಲ್ಯಾಣ ಕಾರ್ಯಗಳನ್ನು ನಡೆಸುವುದಕ್ಕೆ ಅನುಕೂಲ ಮಾಡಿರುವುದಾಗಿ"[110] ತಿಳಿದುಬರುತ್ತದೆ. ೧೯೦೧ರಲ್ಲಿ ಈ ಮಠದಲ್ಲಿ ನಡೆಯುವ ವಿವಾಹಾದಿ ಮಂಗಳಕಾರ್ಯಗಳಿಗೆ ನೆರವಾಗಲೆಂದೇ ಮಾಮೂಲುಪೇಟೆಯ ಚನ್ನವೀರಶೆಟ್ಟರ ಮಗ ದಿಗಂಬರಶೆಟ್ರು ಒಂದು ಕೊಳಾಯಿಯನ್ನು ಹಾಕಿಸಿಕೊಟ್ಟಿದ್ದರು.[111] ಮಠದ ಆವರಣದ ಪಶ್ಚಿಮ ಬದಿಗೆ ಬಿಲ್ವವೃಕ್ಷದ ಹಿಂಭಾಗದಲ್ಲಿ ಇರುವ ಈ ಕೊಳಾಯಿಯನ್ನು ಇಂದಿಗೂ ನೋಡಬಹುದಾಗಿದೆ. ಕೊಳಾಯಿಗೆ ಹೊಂದಿಕೊಂಡಂತೆ ಇರುವ ಗಾರೆಯ ಕಂಭದ ಮೇಲೆ, "ಇ ಕೊಳಾಯಿ ಇ ಮಠದ। ಚಂನಬಸವಸ್ವಾಮಿಗಳ। ಹೆಳುವಿಕೆ ಮೇರಿಗೆ ಬೆಂ।ಮಾ।ಚ।ದಿಗಾಂಬ್ರಶೆಟ್ಟರ ಭಕ್ತಿ. ೧೫.೧.೧೯೦೧ನೆ ಯಿಸ್ವಿ।" ಎಂಬುದಾಗಿ ಬರೆಯಲ್ಪಟ್ಟಿದೆ.

೨೦ನೆಯ ಶತಮಾನದ ಆರಂಭದ ದಿನಗಳಲ್ಲಿ ಸರ್ಪಭೂಷಣಮಠದ ಆವರಣವು ಸುಂದರವಾದ ತೋಟವಿದ್ದಂತಿತ್ತು. ಗದ್ದುಗೆಯ ಮುಂಭಾಗಕ್ಕೆ ಒಂದು ಕಲ್ಯಾಣಿ ಇತ್ತು. ಪಕ್ಕದ ಓಂಕಾರೇಶ್ವರನ ಗುಡಿ ಹಾಗೂ ಬಸವೇಶ್ವರನ ಗುಡಿ ಇವುಗಳ ಜೊತೆಗೆ, ಇದ್ದುದರಲ್ಲಿ ವಿಸ್ತಾರವಾಗಿದ್ದ ಮಠದ ಹಜಾರ, ಇವೆಲ್ಲವೂ ಸೇರಿ ಮದುವೆ ಮುಂತಾದ ಮಂಗಳಕಾರ್ಯಗಳನ್ನು ಮಾಡಲು ಹೇಳಿಮಾಡಿಸಿದಂತಹ ಸ್ಥಳವಾಗಿತ್ತು.[112] ಮದುವೆ ಲಗ್ನದ ಮಾಸಗಳು ಬಂದಾಗ ಪ್ರತಿನಿತ್ಯ ಇಲ್ಲಿ ಒಂದಲ್ಲ ಒಂದು ಮದುವೆ, ಅಥವಾ ಕೆಲವು ವೇಳೆ ಶಿವಗಣಾರಾಧನೆ(ತಿಥಿ)ಗಳೂ ನಡೆಯುತ್ತಿದ್ದುದಾಗಿಯೂ ತಿಳಿದುಬರುತ್ತದೆ.[113] ಮುಂದೆ ೧೯೨೭ರ ನಂತರ ಸರ್ಪಭೂಷಣಮಠದ ಉಸ್ತುವಾರಿ ಮಠಾಧಿಪತಿಗಳಾಗಿದ್ದ ಬಸವಲಿಂಗ ಸ್ವಾಮಿಗಳ ಕಾಲದಲ್ಲೂ ಮಠದಲ್ಲಿ ನಡೆಯುವ ಮದುವೆ ಮುಂಜಿಗಳಿಗೆ ಅಗತ್ಯವಾದ ಸೌಲಭ್ಯಗಳನ್ನು ಕಲ್ಪಿಸಲಾಗಿತ್ತು. ಅಡಿಗೆ ಸಾಲನ್ನು ಪುನರ್

ನವೀಕರಿಸಿದ್ದಲ್ಲದೆ ಪಾತ್ರೆ ಸಾಮಾನುಗಳನ್ನೆಲ್ಲಾ ಸಜ್ಜುಗೊಳಿಸಲಾಗಿತ್ತು. ಒಂದು ಮದುವೆಗೆ ಆಗ ಮೂರು ರೂ.ಗಳಂತೆ ಮಠಕ್ಕೆ ಕಾಣಿಕೆ ಸಲ್ಲಿಸಬೇಕಾಗಿತ್ತು. ಈ ಕಾಣಿಕೆಯನ್ನು ಮಠದಲ್ಲಿ ನಡೆಯುತ್ತಿದ್ದ ಸಂಸ್ಕೃತ ಮತ್ತು ವೇದಪಾಠಶಾಲೆಗೆ ಬಳಸಿಕೊಳ್ಳಲಾಗುತ್ತಿತ್ತು. ೧೯೨೯-೩೦ರ ಸಾಲಿನಲ್ಲಿ ಒಂದು ವರ್ಷದ ಅವಧಿಯೊಳಗೆ ಇಲ್ಲಿ ಒಟ್ಟು ೧೪ ಮದುವೆ ಸಮಾರಂಭಗಳು ನಡೆದುದಾಗಿ ದಾಖಲಾಗಿದೆ.[114] ಹೀಗೆ ಸರ್ಪಭೂಷಣಮಠವು ಕಳೆದ ಶತಮಾನದ ಉತ್ತರಾರ್ಧದಿಂದಲೂ ನಗರದ ಪ್ರಮುಖ ಕಲ್ಯಾಣಕೇಂದ್ರವಾಗಿ ಕಾರ್ಯನಿರ್ವಹಿಸಿದ್ದು, ಕಳೆದ ದಶಕದ (೧೯೮೫ರ) ವರೆಗೂ ಇಲ್ಲಿ ಮದುವೆಗಳು ನಡೆಯುತ್ತಿದ್ದುದು ಎಲ್ಲರಿಗೂ ತಿಳಿದ ವಿಚಾರವೇ ಆಗಿದೆ.

ಇದೇ ರೀತಿ ನಗರದ ಮತ್ತೊಂದು ಪ್ರಮುಖ ಮಠವಾಗಿದ್ದ ಚಿಕ್ಕಪೇಟೆಯ ಮಹಾಂತರ ಮಠವೂ ಕೂಡ ಈ ಶತಮಾನದ ಆರಂಭದಿಂದಲೂ ಕಲ್ಯಾಣಕೇಂದ್ರವಾಗಿ ಕಾರ್ಯ ನಿರ್ವಹಿಸತೊಡಗಿತ್ತು.[115] ಮಠದ ಆಡಳಿತ ಮಂಡಳಿಯವರು ೧೯೨೫ರಲ್ಲಿ ಮಠಕ್ಕೆ ಪೂರ್ವ ಭಾಗದಲ್ಲಿದ್ದ ಗಾಡಿಖಾನೆ ಹಾಗೂ ಗಡಂಗುಗಳನ್ನು ಒಂದುಗೂಡಿಸಿ ವಿವಾಹಾದಿ ಶುಭಕಾರ್ಯಗಳಿಗೆ, ಅಡಿಗೆ ಮತ್ತು ಊಟದ ಕೊಠಡಿಗಳನ್ನಾಗಿ ಪರಿವರ್ತಿಸಿ ಮತ್ತಷ್ಟು ಅನುಕೂಲ ಒದಗಿಸಿಕೊಟ್ಟಿದ್ದರು.[116] ಮುಂದೆ ೧೯೩೪ರಿಂದ ಈ ಮಠದ ಅಧ್ಯಕ್ಷತೆಯನ್ನು ವಹಿಸಿಕೊಂಡ ಗಂಗಾಧರ ಶಿವಾಚಾರ್ಯರು ಬೆಂಗಳೂರಿನಲ್ಲೆ ಮೊಟ್ಟಮೊದಲಿಗೆ ಸಾಮೂಹಿಕ ವಿವಾಹಕಾರ್ಯಗಳನ್ನು ನಡೆಸಲಾರಂಭಿಸಿದರು. ೧೯೩೫ರ ಮೇ ೬ ರಂದು ಮೊದಲಿಗೆ ೫ ಜೋಡಿ ವಧು-ವರರಿಗೆ ಎಲ್ಲಾ ಖರ್ಚನ್ನೂ ಮಠದ ವತಿಯಿಂದಲೇ ಭರಿಸಿ ಸಾಮೂಹಿಕ ಮದುವೆ ಸಮಾರಂಭವನ್ನು ನಡೆಸಲಾಯಿತು.[117] ಈ ಸಮಾರಂಭಕ್ಕಾಗಿ ಅನೇಕ ದಾನಿಗಳು ತಮ್ಮ ಕೈಲಾದ ಧನ-ಧಾನ್ಯಗಳ ಉದಾರ ನೆರವನ್ನು ನೀಡಿದ್ದರು. ಇಲ್ಲಿಂದ ಮುಂದೆ ಅವರು ಮಠಾಧಿಪತ್ಯವನ್ನು ಹೊಂದಿರುವ ತನಕ(೧೯೪೬) ವೀರಶೈವ ಸಮಾಜದ ನಿರ್ಗತಿಕ ಕುಟುಂಬಗಳ ಜನರ ಕಲ್ಯಾಣಾರ್ಥವಾಗಿ ಆಗಾಗ ಇಂತಹ ಸಾಮೂಹಿಕ ವಿವಾಹ ಸಮಾರಂಭಗಳನ್ನು ನಡೆಸಿಕೊಂಡು ಬಂದಿದ್ದುದು ಶ್ಲಾಘನೀಯ ವಿಚಾರವಾಗಿದೆ.

ಅಲಸೂರಿನ ಹಾಲಿನಬೀದಿಯಲ್ಲಿ ಒಂದು ಹಳೆಯ ಕಲ್ಯಾಣಮಂಟಪವಿದೆ. ಇದು ಕಳೆದ ಶತಮಾನದಲ್ಲಿ ಒಂದು ಜಂಗಮಮಠವಾಗಿತ್ತು. ೨೦ನೆಯ ಶತಮಾನದ ವೇಳೆಗೆ ಮಠಾಧಿಪತಿಗಳಿಲ್ಲದೆ ಈ ಮಠವು ಹಲವಾರು ವರ್ಷಗಳವರೆಗೆ ಅನಾಥವಾಗಿಯೇ ಇತ್ತು. ಮುಂದೆ ೧೯೧೮ರ ವೇಳೆಗೆ ಸಮಾಜಬಾಂಧವರೆಲ್ಲಾ ಸೇರಿ ಪಾಳುಬಿದ್ದಿದ್ದ ಮಠದ ಜಾಗದಲ್ಲಿ ಕಲ್ಯಾಣಮಂಟಪ ವೊಂದನ್ನು ನಿರ್ಮಾಣಮಾಡಿದ್ದಾಗಿ ಅಲ್ಲಿನ ಶಿಲಾಫಲಕದಿಂದ ವ್ಯಕ್ತವಾಗುತ್ತದೆ.[118] ಅಂದಿನಿಂದಲೂ ಹಾಲಿನ ಬೀದಿಯ ಈ ಮಠವು ಕಲ್ಯಾಣಕೇಂದ್ರವಾಗಿಯೇ ಸೇವಾನಿರತವಾಗಿದೆ.

೧೯೩೦-೪೦ರ ದಶಕದಲ್ಲಿ ಗುಡುಮಯ್ಯನಪೇಟೆ (ಬಳ್ಳಾಪುರದಪೇಟೆ)ಯ ಕಂಬಿನಂಜಯ್ಯನಮಠ, ಗಾಣಿಗರ ಪೇಟೆಯ ದೇವೀರಮ್ಮನಮಠ, ಮಲ್ಲೇಶ್ವರದ ಸಚ್ಚಿದಾನಂದಸ್ವಾಮಿಮಠ, ಕಳಾಸಿಪಾಳ್ಯದ ಮರಿಸ್ವಾಮಿಮಠ, ಅರಳೆಪೇಟೆಯ ದೇಶದಮಠ, ಬೇಲಿಮಠ ಮತ್ತು ಗುರುವಣ್ಣದೇವರಮಠ ಇವೇ ಮೊದಲಾದ ಮಠಗಳೂ ಬೆಂಗಳೂರಿನ ವೀರಶೈವ ಸಮಾಜಬಾಂಧವರ ಪ್ರಮುಖ ಕಲ್ಯಾಣ (ಮಂಟಪ) ಕೇಂದ್ರಗಳಾಗಿ ಸೇವೆ ಸಲ್ಲಿಸಿದುದಕ್ಕೆ ಆಧಾರಗಳಿವೆ.[119]

ಸ್ವಾತಂತ್ರ್ಯಾನಂತರದಲ್ಲಿ ನಗರದ ನಿಜಗುಣ ಜಂಗಮಮಠ (ಬಸವನಗುಡಿ); ಗುರುವಣ್ಣದೇವರಮಠ (ಬಿನ್ನಿಸ್ಟನ್ ಗಾರ್ಡನ್); ಮಲ್ಲಿಕಾರ್ಜುನಸ್ವಾಮಿ ಗದ್ದುಗೆಮಠ (ಮಹಾನಗರಪಾಲಿಕಾ ಕಛೇರಿ ಹಿಂಭಾಗ); ಮಹಾಂತರಮಠ (ಚಿಕ್ಕಪೇಟೆ); ಶಿವನಹಳ್ಳಿ ಜಂಗಮ ಮಠ; ಅಲಸೂರಿನ ಶಿವಾನುಭವಮಠ ಇವೇ ಮೊದಲಾದ ಮಠಗಳೆಲ್ಲಾ ಕಾಯಂ ಆದ ಕಲ್ಯಾಣ ಕೇಂದ್ರಗಳನ್ನೇ ಸ್ಥಾಪಿಸಿರುವುದನ್ನು ನೋಡಬಹುದಾಗಿದೆ. ಹೀಗೆ ವಾಸ್ತವವಾಗಿ ನಗರದ ವೀರಶೈವಮಠಗಳು ಧಾರ್ಮಿಕ ಸಂಸ್ಥೆಗಳೇ ಆಗಿದ್ದು ವೀರಶೈವ ಧರ್ಮದ ದಶವಿಧಿಗಳಲ್ಲಿ ಒಂದಾದ 'ವಿವಾಹವಿಧಿ'ಗೆ ಅನುಗುಣವಾಗಿ, ಕಲ್ಯಾಣಕ್ಷೇತ್ರ(ಕೇಂದ್ರ)ಗಳಾಗಿ ಸ್ವಮಠ ಬಾಂಧವರ ಹಿತವನ್ನು ಕಾಪಾಡುವುದರೊಂದಿಗೆ, ಸಮಾಜಸೇವಾ ಕ್ಷೇತ್ರಗಳಾಗಿಯೂ ಸೇವಾ ನಿರತವಾಗಿದ್ದುದು ಗಮನಾರ್ಹ ಸಂಗತಿಯಾಗಿದೆ.

## ೬.೬. ಅಂತ್ಯಸಂಸ್ಕಾರದ ಕೇಂದ್ರ ( ರುದ್ರಭೂಮಿ ) ಗಳಾಗಿ

ವೀರಶೈವ ಮತಾನುಸಾರ 'ದಶವಿಧಿ'(ಕರ್ಮ)[120] ಗಳಲ್ಲಿ ಕೊನೆಯ ವಿಧಿಯೇ ಅಂತ್ಯೇಷ್ಟಿ ವಿಧಿ. ವೀರಶೈವರಲ್ಲಿ ಸಾವಾದರೆ ಮೃತ ವ್ಯಕ್ತಿಯನ್ನು 'ಲಿಂಗೈಕ್ಯ, ಶಿವೈಕ್ಯ ಇಲ್ಲವೇ ಕೈಲಾಸವಾಸಿ' ಎಂದೇ ಸಂಬೋಧಿಸುವುದು ರೂಢಿ. ಮೃತರ ದೇಹವನ್ನು ಚತುರ್ದಿಕ್ಕುಗಳಿಗೂ ಲಿಂಗಮುದ್ರಾಂಕಿತವಾಗುಳ್ಳ ಪವಿತ್ರಸ್ಥಳ (ರುದ್ರಭೂಮಿ)ಗಳಲ್ಲಿ ಮಾತ್ರ ಶವಸಂಸ್ಕಾರ ಮಾಡುವುದು ನಿಯಮವಾಗಿತ್ತು.[121] ಏಕೆಂದರೆ ಇವರು ಅಂಗದ ಮೇಲೆ ಲಿಂಗವನ್ನು ಧರಿಸುವ ಮೂಲಕ ಗುರುತ್ವದಲ್ಲಿ ಹುಟ್ಟುತ್ತಾರೆ. ಲಿಂಗಭಕ್ತಿ, ಇಷ್ಟಲಿಂಗದ ಪೂಜೆಗಳಿಂದ ಶಿವತತ್ವದಲ್ಲಿ ಬೆಳೆಯುತ್ತಾರೆ. ಬಳಿಕ ಗುರು-ಲಿಂಗ-ಜಂಗಮಗಳ ದಾಸೋಹಂ ಭಾವನೆಯಿಂದ ಪರತತ್ವ(ಲಿಂಗ)ದಲ್ಲೆ ಬೆರೆಯುತ್ತಾರೆ. ಹೀಗೆ ಪರತತ್ವದಲ್ಲಿ ಲೀನವಾಗುವುದೇ 'ಸಮಾಧಿ'.[122]

೧೮ ಮತ್ತು ೧೯ನೇಯ ಶತಮಾನಗಳಲ್ಲಿ ಬೆಂಗಳೂರಿನ ಬಹಳಷ್ಟು ವೀರಶೈವಮಠಗಳು (ಮಠದ ಆವರಣಗಳು) ಸ್ವಮತ ಬಾಂಧವರ ಅಂತ್ಯಸಂಸ್ಕಾರದ ಕೇಂದ್ರಗಳೇ ಆಗಿದ್ದವು.[123] ಹಿಂದೆ ಶಂಕರದೇವರಮಠ, ದೇಶದಮಠ, ನರಗುಂದದೇವರಮಠ, ದಿಗಂಬರಶೆಟ್ಟರಮಠ, ಬೇಲಿಮಠ, ಸರ್ಪಭೂಷಣಮಠ ಇವೇ ಮುಂತಾದ ಮಠಗಳ ಆವರಣದೊಳಗಿನ ರುದ್ರಭೂಮಿಗಳಲ್ಲಿ ಮಾತ್ರ ವೀರಶೈವರಲ್ಲಿ ಮೃತರಾದವರ ಅಂತ್ಯಸಂಸ್ಕಾರ ಮಾಡುವುದು ಮಾಮೂಲಾಗಿತ್ತು.[124] ಬೆಂಗಳೂರಿನ ಮೂರೂ ಪ್ರಮುಖ ಪೇಟೆಗಳಲ್ಲಿನ[125] ವೀರಶೈವ ಮತಬಾಂಧವರ ಮನೆಗಳಲ್ಲಿ ಯಾರಾದರೂ ಮೃತರಾದರೆ, ಮೃತರ ಮನೆಯ 'ಹವ್ಯ-ಕವ್ಯ'[126]ಗಳನ್ನು ತೀರಿಸುತ್ತಿದ್ದ ಮಠಾಧಿಪತಿಗಳ ಮಠದ ಆವರಣದಲ್ಲಿಯೇ ಅವರ ಅಂತ್ಯಸಂಸ್ಕಾರಗಳನ್ನೂ ನಡೆಸುವ ಪರಿಪಾಠ ಬಹಳ ಹಿಂದಿನಿಂದಲೂ ನಡೆದು ಬಂದಿತ್ತು.[127] ಉದಾಹರಣೆಗೆ ಸರ್ಪಭೂಷಣಮಠದ ಭಾಗವು ೧೮೩೦ರ ವೇಳೆಗೆ ಸ್ಥಳಬಣಜಿಗರ (ಲಿಂಗಾಯತ ಉಪಜಾತಿ) ಅಂತ್ಯ ಸಂಸ್ಕಾರದ ಕೇಂದ್ರವಾಗಿತ್ತು. ಆಗ ಈ ಮಠವನ್ನು 'ಕೆರೆ ನಂಜುಂಡಯ್ಯನಮಠ'ವೆಂದೇ ಕರೆಯಲಾಗುತ್ತಿತ್ತು.[128]

೧೮೩೧ರ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಆಡಳಿತದಲ್ಲಿದ್ದ ಮುಮ್ಮಡಿಕೃಷ್ಣರಾಜ ಒಡೆಯರನ್ನು ಬದಿಗೊತ್ತಿದ ಆಂಗ್ಲ ಸರ್ಕಾರವು ತಾನೇ ಆಡಳಿತ ನಿರ್ವಹಿಸತೊಡಗಿತ್ತು. ಈ ಸಂದರ್ಭದಲ್ಲಿ ಕಮಿಷನರುಗಳ ಆಡಳಿತಕ್ಕೆ ಒಳಪಟ್ಟ ಬೆಂಗಳೂರು ಮುಂದಿನ ೫೦ ವರ್ಷಗಳಲ್ಲಿ ಅದ್ಭುತವಾದ ಬೆಳವಣಿಗೆಯನ್ನು ಸಾಧಿಸಿತ್ತು. ಆಗ ನಗರದ ಸುವ್ಯವಸ್ಥಿತವಾದ ಬೆಳವಣಿಗೆಯ ದೃಷ್ಟಿಯಿಂದ ಬೆಂಗಳೂರಿನಲ್ಲಿ ಅನೇಕ ಮಾರ್ಪಾಟುಗಳಾಗಿದ್ದವು. ೧೮೬೭-೬೮ರ ವೇಳೆಗೆ ಬೆಂಗಳೂರು ಪಟ್ಟಣದ ಒಳಭಾಗದಲ್ಲಿದ್ದ ಎಲ್ಲಾ ಶ್ಮಶಾನಗಳನ್ನೂ ಮುಚ್ಚಿಸಲಾಯಿತು.[129] ತತ್ಪರಿಣಾಮವಾಗಿ ವೀರಶೈವ ಮಠಗಳ ಆವರಣದಲ್ಲಿದ್ದ ಅಂತ್ಯಸಂಸ್ಕಾರದ ಕೇಂದ್ರಗಳೆಲ್ಲಾ ಮುಚ್ಚಲ್ಪಟ್ಟವು. ಜೊತೆಗೆ ೧೮೭೮ರ ಹೊತ್ತಿಗೆ ಮೈಸೂರು ಬೆಂಗಳೂರು ರೈಲ್ವೆಲೈನು ಪ್ರಾರಂಭವಾಗಿ, ಬೆಂಗಳೂರಿನ ನೂತನ ರೈಲು ನಿಲ್ದಾಣಕ್ಕಾಗಿ, ಆ ಭಾಗದಲ್ಲಿದ್ದ ದಿಗಂಬರಶೆಟ್ಟರಮಠ, ನರಗುಂದ ದೇವರಮಠ, ಚೌಕಿಮಠಗಳ ಆಸ್ತಿ-ಪಾಸ್ತಿಗಳೆಲ್ಲಾ ರೈಲ್ವೆ ಇಲಾಖೆಗೆ ಸ್ವಾಧೀನವಾಗಿಬಿಟ್ಟವು.[130]

ಇಂತಹ ಅನಿವಾರ್ಯ ಪರಿಸ್ಥಿತಿಯಿಂದ ಉಂಟಾದ ತೊಂದರೆಗಳ ನಿವಾರಣೆಗಾಗಿ ಪಟ್ಟಣದ ಮೂರು ಪೇಟೆಗಳ ಶೆಟ್ಟಿ ಯಜಮಾನರುಗಳು ಹಾಗೂ ವೀರಶೈವ ಮತಬಾಂಧವರೆಲ್ಲಾ ಒಟ್ಟುಗೂಡಿ, ೧೮೭೯ರಲ್ಲಿ ಸರ್ಕಾರಕ್ಕೆ ಒಂದು ಮನವಿ ಸಲ್ಲಿಸಿದ್ದರು. ಅದರಲ್ಲಿ- ''ನಮ್ಮ ಮತಕ್ಕೆ ಸಂಬಂಧಪಟ್ಟು ಲಿಂಗಮುದ್ರೆ ಸ್ಥಾಪಿಸಲ್ಪಟ್ಟು ನಮ್ಮ ಪೇಟೆಗಳಿಗೆ ಸರಹದ್ದಿನಲ್ಲಿದ್ದ ಏಳೆಂಟು ಮಠಗಳು ಪೂರ್ವದಾರಭ್ಯ ನಮ್ಮ ಜನಗಳ ಶವಗಳನ್ನು ದಫನ್(ಸಂಸ್ಕಾರ) ಮಾಡಲು ನೆರವಾಗಿದ್ದವು. ಈಗ ಕೆಲವು ಮಠಗಳು ಮುನಿಸಿಪಲ್ ಸರಹದ್ದಿಗೂ, ಇನ್ನೂ ಕೆಲವು ಮೈಸೂರು ಸ್ಟೇಟ್ ರೈಲ್ವೆ ಕಾಂಪೌಂಡಿಗೂ ಸೇರಲ್ಪಟ್ಟವು. ಆದ್ದರಿಂದ ಇವುಗಳಲ್ಲಿ ಲಿಂಗವಂತರ ಶವಸಂಸ್ಕಾರ ಮಾಡಲು ಅಡ್ಡಿಯುಂಟಾಗಿದೆ. ಈಗ ಸದರಿ ಸಮಸ್ಯೆಯ ನಿವಾರಣೆಗಾಗಿ ಸರಕಾರದವರು ಆದಷ್ಟು ಶೀಘ್ರದಲ್ಲಿ ತಕ್ಕ ಏರ್ಪಾಟು ಮಾಡಿಸಿಕೊಡಬೇಕಾಗಿ ಕೋರಿಕೆ'' ಸಲ್ಲಿಸಿತ್ತು.[131]

ಅನಂತರ ಪಟ್ಟಣದ ಜನನಿಬಿಡ ಪ್ರದೇಶದಿಂದ ಸಾಕಷ್ಟು ಹೊರಭಾಗದಲ್ಲಿದ್ದು ಲಿಂಗಮುದ್ರಾಂಕಿತ

ಭಾಗಗಳಾಗಿದ್ದ ದೇಶದಮಠ ಮತ್ತು ದೊಡ್ಡಮಠದ ಇನಾಂತಿ ಜಮೀನು (ರಾಜಾಜಿನಗರದ ಕೇತಮಾರನಹಳ್ಳಿ ಭಾಗ)ಗಳಲ್ಲಿ,[132] ಕರಿಸಿದ್ದೇಶ್ವರಮಠದ ತೋಟದ (ರೇಸ್‌ಕೋರ್ಸ್‌ನಪಶ್ಚಿಮ) ಭಾಗದಲ್ಲಿ,[133] ಗುರುವಣ್ಣದೇವರಮಠದ ತೋಟದ (ಬಿನ್ನಿಸ್ಟನ್ ಗಾರ್ಡನ್) ಭಾಗದಲ್ಲಿ,[134] ಸುಂಕೇನಹಳ್ಳಿಯ ಮೇಲಿನ ಮತ್ತು ಕೆಳಗಿನಮಠಗಳ ಆವರಣಗಳಲ್ಲಿ[135] ಹಾಗೂ ಕೊಳದಮಠದ ಆವರಣಗಳಲ್ಲಿ [136] ವೀರಶೈವರ ಅಂತ್ಯಕ್ರಿಯಾ ವಿಧಿಗಳು ನಡೆಯಲಾರಂಭಿಸಿದ್ದವು. ಆಗಲೂ ಕೂಡ ಮಠಗಳಿಗೆ ಸೇರಿದ್ದ ತೋಟ, ಹೊಲ, ಗದ್ದೆಯ ಭಾಗಗಳಲ್ಲಿ ಚತುರ್ಮೂಲೆಗೂ ಲಿಂಗಮುದ್ರೆಯನ್ನು ಮಾಡಿಸಿದ್ದ ಪವಿತ್ರ ಭಾಗಗಳು ಮಾತ್ರ ವೀರಶೈವರ ಅಂತ್ಯಸಂಸ್ಕಾರದ ಕೇಂದ್ರಗಳಾಗಿದ್ದವು.

ನಗರದ 'ಬೇಲಿಮಠ'ವು ಬಹಳ ಹಿಂದಿನಿಂದಲೂ ವೀರಶೈವರ ಒಂದು ಪ್ರಮುಖ ಅಂತ್ಯಸಂಸ್ಕಾರದ ಕೇಂದ್ರವಾಗಿತ್ತು. ೧೮೮೦ರ ವೇಳೆಗೆ ಈ ಕೇಂದ್ರವು ನಿಷೇಧಿಸಲ್ಪಟ್ಟ ಮೇಲೆ ಬಹಳ ವರ್ಷಗಳ ಕಾಲ ಹಾಗೆ ಉಳಿದಿತ್ತು. ಮುಂದೆ ೧೮೯೮ರಲ್ಲಿ ಮಠದ ಹಿಂಭಾಗಕ್ಕಿದ್ದ ಸುಮಾರು ಮೂರು ಎಕರೆ ವಿಸ್ತೀರ್ಣದ ಈ ಖಾಲಿ ಜಮೀನನ್ನು ಬಿನ್ನಿ ಕಂಪೆನಿಯವರಿಗೆ ಬಾಡಿಗೆಗೆ ನೀಡಲಾಗಿತ್ತು. 'ಆಗ ಈ ಭಾಗದಲ್ಲಿ ೪೦೦ ರಿಂದ ೫೦೦ ಸಮಾಧಿಗಳಿದ್ದವು. ೩೦ ರಿಂದ ೪೦ ಬಿಲ್ವಪತ್ರೆ ವೃಕ್ಷಗಳಿದ್ದವು. ಸುತ್ತಲೂ ಪೌಳಿಯಾಕಾರದ ಗೋಡೆ ಇದ್ದು ನಾಲ್ಕು ದಿಕ್ಕಿಗೂ ಲಿಂಗಮುದ್ರೆಯ ಕಲ್ಲುಗಳು ಇದ್ದುದಾಗಿ' ತಿಳಿದುಬರುತ್ತದೆ.[137]

ಪಕ್ಕದ 'ಗುರುವಣ್ಣದೇವರಮಠ'ವೂ (ಬಿನ್ನಿಸ್ಟನ್ ಗಾರ್ಡನ್) ಕೂಡ ಪೇಟೆಮನೆಗಳವರ ಅಂತ್ಯಸಂಸ್ಕಾರ ಕ್ರಿಯೆಗೆ ಬಹಳ ಹಿಂದಿನಿಂದಲೂ ಪ್ರಮುಖವಾದ ಕೇಂದ್ರವಾಗಿತ್ತು. ಮುಂದೆ ೧೯೩೦ರ ಹೊತ್ತಿಗೆ ಮಠಾಧಿಪತ್ಯದ ವಿಚಾರವಾಗಿ ಪೇಟೆಮನೆಗಳವರಿಗೂ, ಮಠದ ಅಧಿಪತಿಗಳಾಗಿದ್ದ ಮಹಾಂತಸ್ವಾಮಿಗಳಿಗೂ ಉಂಟಾಗಿದ್ದ ವೈಮನಸ್ಸುಗಳೇ ಪ್ರಮುಖ ಕಾರಣವಾಗಿ, ಕ್ರಮೇಣ ಇಲ್ಲಿ ನಡೆಯುತ್ತಿದ್ದ ಅಂತ್ಯಸಂಸ್ಕಾರ ವಿಧಿಯು ಸ್ಥಗಿತಗೊಂಡಿತ್ತು.[138]

೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ನಗರದ ಸುಂಕೇನಹಳ್ಳಿಯಲ್ಲಿದ್ದ 'ಮೇಲಿನಮಠ' ಮತ್ತು 'ಕೆಳಗಿನ ಮಠ'ಗಳೆರಡೂ ಬೆಂಗಳೂರಿನ ಪ್ರಮುಖವಾದ ಅಂತ್ಯಸಂಸ್ಕಾರದ ಕೇಂದ್ರಗಳಾಗಿದ್ದವು. ೧೯೧೬ರಲ್ಲಿ ದೊಡ್ಡಪೇಟೆಯ ದೇಶದ ಸಿದ್ದಬಸಪ್ಪಶೆಟ್ಟಿಯವರಿಗೆ ಮುನಿಸಿಪಲ್ ಹೆಲ್ತ್ ಆಫೀಸಿನವರು ಒಂದು ನೋಟೀಸನ್ನು ಜಾರಿ ಮಾಡಿ, 'ಮಠದ ಆವರಣಗಳಲ್ಲಿರುವ ಕಲ್ಯಾಣಿಗಳನ್ನು ಅಚ್ಚುಕಟ್ಟು ಮಾಡಿಸಿ ಸುತ್ತಲೂ ಪೌಳಿಗೋಡೆ ಹಾಕಿಸುವಂತೆಯೂ ಹಾಗೂ ಸಮಾಧಿ ಮಾಡುವ ರುದ್ರಭೂಮಿಯ ಸ್ಥಳಗಳನ್ನು ಅಚ್ಚುಕಟ್ಟಾಗಿ ಇಟ್ಟುಕೊಳ್ಳುವಂತೆ'ಯೂ ಸೂಚನೆ ನೀಡಲಾಗಿತ್ತು.[139]

ಅಣ್ಣೆಪುರದ 'ಕೊಳದಮಠ'ವು ಈ ಶತಮಾನದಲ್ಲೇ ಬೆಂಗಳೂರಿನ ಬಹಳ ಪ್ರಮುಖವಾದ ಅಂತ್ಯಸಂಸ್ಕಾರ ಕೇಂದ್ರವಾಗಿತ್ತು. ಈ ಹೊತ್ತಿಗೂ ಕೊಳದಮಠವನ್ನು 'ರುದ್ರಭೂಮಿಮಠ'ವೆಂದೇ ಗುರುತಿಸುವುದು ಸ್ವಾಭಾವಿಕವಾಗಿದೆ. ಇಲ್ಲಿ ಗಂಜಾಂಮಠದ ನಂಜುಂಡಸ್ವಾಮಿ (೧೮೯೮)ಗಳ ಹಾಗೂ ಚಿದ್ಘನಶಿವಾಚಾರ್ಯ (೧೯೧೧)ರ, ನರಗುಂದದೇವರಮಠದ ಕರಿಬಸವಸ್ವಾಮಿ (೧೯೨೫)ಗಳ, ಶಂಕರದೇವರಮಠದ ಶಂಕರಸ್ವಾಮಿ (೧೯೪೧) ಗಳ, ಸರ್ಪಭೂಷಣಮಠದ ಮಹಾದೇವಸ್ವಾಮಿ (೧೯೬೧)ಗಳ, ಮುತ್ತಿನಕಂತೆಮಠದ ಶಿವಕುಮಾರಸ್ವಾಮಿ (೧೯೭೯)ಗಳ ಹಾಗೂ ಇನ್ನೂ ಮುಂತಾದ ಮಠಾಧೀಶರುಗಳ ಕ್ರಿಯಾಸಮಾಧಿಗಳಿವೆ. ಹಾಗೆ ಪಟ್ಟಣದ ಪ್ರಮುಖ ವ್ಯಕ್ತಿಗಳಾಗಿದ್ದ ದೊಡ್ಡಪೇಟೆಯ ದೇಶದ ಸಿದ್ದಬಸಪ್ಪಶೆಟ್ಟಿ, ದಿವಾನ್ ಬಹಾದುರ್ ಸರ್ ಕೆ.ಪಿ. ಪುಟ್ಟಣ್ಣಶೆಟ್ಟಿ ಮತ್ತು ಅವರ ಧರ್ಮಪತ್ನಿ, ಮಾಜಿಮಂತ್ರಿಗಳಾಗಿದ್ದ ಎಸ್. ಸಿದ್ಧಯ್ಯ, ಪಂ। ಕಲ್ಲಿನಾಥಶಾಸ್ತ್ರಿ (ಕವಿ ಸಿದ್ಧಯ್ಯ ಪುರಾಣಿಕರ ತಂದೆ) ಇವರೇ ಮೊದಲಾದ ಗಣ್ಯವ್ಯಕ್ತಿಗಳ ಅಂತ್ಯಕ್ರಿಯಾ ವಿಧಿಗಳು ಕೊಳದಮಠದ ಆವರಣದಲ್ಲಿಯೇ ನಡೆದಿವೆ.[140] ಹೀಗೆ ಈ ಶತಮಾನದುದ್ದಕ್ಕೂ ಮಂತ್ರಿಮಹೋದಯರೂ ಮಠಾಧೀಶರೂ ಹಾಗೂ ಅನೇಕ ವೀರಶೈವ ಮತ ಬಾಂಧವರ ಅಂತ್ಯಸಂಸ್ಕಾರದ ಕೇಂದ್ರವಿದಾಗಿದ್ದುದರಿಂದ ಕೊಳದಮಠವನ್ನು 'ರುದ್ರ ಭೂಮಿಯಮಠ'ವೆಂದು ಕರೆಯುವುದು ಸಹಜವಾಗಿಯೇ ಇದೆ.

## ಕೈಲಾಸ ರಥ

ಹಿಂದೆ ವೀರಶೈವರಲ್ಲಿ ಮೃತ ವ್ಯಕ್ತಿಗಳನ್ನು ರುದ್ರಭೂಮಿಗೆ ಸಾಗಿಸಲು ಒಂದು ಮರದ ವಾಹನ (ನಾಲ್ಕು ಚಕ್ರದಗಾಡಿ) ಇತ್ತು. ಇದನ್ನೇ 'ಕೈಲಾಸರಥ'ವೆಂದು ಕರೆಯಲಾಗುತ್ತಿತ್ತು. ಈ ರಥದ ಸುತ್ತ ಕೆಂಪು (ಕಾವಿ) ಬಾವುಟಗಳನ್ನು ತೂಗುಹಾಕಿ ಮಧ್ಯದಲ್ಲಿ ಒಂದು ಛತ್ರಿಯನ್ನಿರಿಸಿ ಅದರ ಮೇಲ್ತುದಿಗೆ ಕಳಸವೊಂದನ್ನು ತಲೆಕೆಳಕಾಗಿ ಮಾಡಿ ಇರಿಸಲಾಗಿರುತ್ತಿತ್ತು. ಸುತ್ತಲೂ ಹೂವಿನಿಂದ ಶೃಂಗರಿಸಲ್ಪಟ್ಟಿದ್ದ ರಥದ ಮೇಲೆ ಮೃತರನ್ನು ಆಸನಾರೂಢವಾಗಿ ಕುಳ್ಳಿರಿಸಲಾಗುತ್ತಿತ್ತು. ಒಂಟಿ ಎತ್ತಿನ ಮೂಲಕ ಸಾರಥಿಯಿಂದ ಮುನ್ನಡೆಯುತ್ತಿದ್ದ ಈ ರಥ ನೋಡಲು ಬಹಳ ವಿಶೇಷವಾದುದಾಗಿತ್ತು. ಮನೆಯಿಂದ ರುದ್ರಭೂಮಿಯವರೆಗೆ ಮೃತರನ್ನು ರಥದಲ್ಲಿ ಕೂರಿಸಿಕೊಂಡು, ವಿಶೇಷ ವಾದ್ಯಗಳೊಂದಿಗೆ ಮೆರವಣಿಗೆ ಮಾಡಿಕೊಂಡು ಹೋಗಲು ಇದು ನೆರವಾಗಿತ್ತು. ೧೯೬೦ರ ದಶಕದವರೆಗೂ ಅಸ್ತಿತ್ವದಲ್ಲಿದ್ದ ಈ ರಥವು ನಿಜಗುಣಜಂಗಮ ಮಠದ ಅಧೀನದಲ್ಲಿದ್ದುದಾಗಿ ತಿಳಿದು ಬರುತ್ತದೆ.[141]

ಹೀಗೆ ಬೆಂಗಳೂರಿನ ಬಹಳಷ್ಟು ವೀರಶೈವ ಮಠಗಳು ಕಳೆದ ೨೫೦ ವರ್ಷಗಳಷ್ಟು ಹಿಂದಿನಿಂದಲೂ ವೀರಶೈವ ಮತಬಾಂಧವರ ಅಂತ್ಯಸಂಸ್ಕಾರದ ಕೇಂದ್ರಗಳಾಗಿದ್ದು, ನಿರಂತರವಾಗಿ ಸಾಮಾಜಿಕ ಹಾಗೂ ಧಾರ್ಮಿಕ ಪರಿಷ್ಕರಣಾಸೇವೆಯನ್ನು ನಿರ್ವಹಿಸುತ್ತಾ ಬಂದಿದ್ದುದು ಪರಿಶೀಲನಾರ್ಹ ಸಂಗತಿಗಳಾಗಿವೆ.

---

## ಅಡಿಟಿಪ್ಪಣಿಗಳು

1. ಉದ್ಧೃತ : ಷಣ್ಮುಖಯ್ಯ ಅಕ್ಕೂರಮಠ. ಜಾಗತಿಕ ಪಂಥದಲ್ಲಿ ಸಮಾಜಕಾರ್ಯ. ಭಕ್ತಿಪಂಥದಲ್ಲಿ ಸಮಾಜ ಕಾರ್ಯದ ಬೇರುಗಳು. ಸಂ : ಡಾ। ಎಚ್. ಎಂ. ಮರುಳಸಿದ್ಧಯ್ಯ. ಪು. ೧೮.
2. ಮಠಗಳು: ಧಾರ್ಮಿಕ ಮತ್ತು ಶೈಕ್ಷಣಿಕ ಕೇಂದ್ರಗಳಾಗಿ ಎಂಬುವ ವಿಚಾರಗಳನ್ನು ಪ್ರತ್ಯೇಕ ಅಧ್ಯಾಯಗಳಲ್ಲೇ ಚರ್ಚಿಸಲಾಗಿದೆ.
3. ಕನ್ನಡ ನಿಘಂಟು. ಸಂ-೪. ಕನ್ನಡ ಸಾಹಿತ್ಯ ಪರಿಷತ್ತು ಪು. ೩೮೮೩.
4. "ಆಡಿದಡೇನು, ಹಾಡಿದಡೇನು, ಓದಿದಡೇನು ತ್ರಿವಿಧದಾಸೋಹವಿಲ್ಲದನ್ನಕ್ಕ? ಆಡದೆ ನವಿಲು? ಹಾಡದೆ ತಂತಿ? ಓದದೆ ಗಿಳಿ?" (ಸಮಗ್ರ ವಚನ ಸಂಪುಟ-೧. ವ. ೨೦೭. ಪು. ೫೨) "ಆಚಾರಗಳನ್ನು ಅಳವಡಿಸಿಕೊಂಡು, ಇಂದ್ರಿಯನಿಗ್ರಹ ಮಾಡಿ ಗುರುಸೇವೆಯನ್ನು ನಡೆಸಿ ತನುವನ್ನು ಸವೆಸಬೇಕು; ವ್ರತನೇಮಗಳಿಂದ ಮನಸ್ಸನ್ನು ಲಿಂಗದಲ್ಲಿ ಸ್ಥಿರೀಕರಿಸಿ ಮನವನ್ನು ಸವೆಸಬೇಕು; ಆಶೆರೋಷಗಳಿಲ್ಲದೆ ಆದರಣೆಯಿಂದ ಜಂಗಮಕ್ಕೆ ನೀಡಿ ಧನವನ್ನು ಕರಗಿಸಬೇಕು." (ಆದಯ್ಯನ ವಚನ.ವ. ೪೫೮. ಪು. ೧೭೯.)
5. ಡಾ। ಎಚ್.ಎಂ. ಮರುಳಸಿದ್ಧಯ್ಯ. 'ಕಾಯಕ-ದಾಸೋಹ'. ವಚನಕಾರರ ಪ್ರಮುಖ ಪರಿಕಲ್ಪನೆಗಳು. ಸಂ : ಷಣ್ಮುಖಯ್ಯ ಅಕ್ಕೂರಮಠ. ಪು. ೧೦೫.
6. ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು. ೬೮೬೧.
7. Epigraphia Carnatica. Vol. ix. Bangalore 2. (ಧರ್ಮಶಾಲಾಮಠವನ್ನು ಕುರಿತು ಹಿಂದೆ ಬೆಂಗಳೂರಿನ ಪ್ರಥಮ ವೀರಶೈವಮಠವಿದೆಂದು; 'ಮಠಗಳು : ಶೈಕ್ಷಣಿಕಸೇವೆ' ಎಂಬ ಅಧ್ಯಾಯದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.)
8. ಶ್ರೀ ಮನ್ಮಹಾರಾಜರ ವಂಶಾವಳಿ. ಭಾಗ-೧. ೧೯೧೬. ಪು. ೧೧೦.
9. 'ದಂಡಿನಪೇಟೆ'ಯು ೧೮ನೆಯ ಶತಮಾನದ ಬೆಂಗಳೂರು ಪಟ್ಟಣದಲ್ಲಿನ ಒಂದು ಪ್ರಮುಖ ಪೇಟೆಯಾಗಿತ್ತು. ಈಗಿನ ಅರಳೆಪೇಟೆ, ಸಿಟಿಮಾರುಕಟ್ಟೆ ಹಾಗೂ ಚಾಮರಾಜಪೇಟೆ ಇವುಗಳ ನಡುವಿನ ಭಾಗವೆ ಹಿಂದೆ ದಂಡಿನಪೇಟೆ ಎಂದು ಕರೆಸಿಕೊಳ್ಳುವ ಭಾಗವಾಗಿತ್ತು. (ಮುಜರಾಯಿ ಇಲಾಖಾ ದಾಖಲೆ. ಸಂ : ೫೨/೧೯೨೨-೨೩. ಪು. ೭೭)
10. ಇದು ಮೂಲದಾಖಲೆಯಲ್ಲ. ದೊಡ್ಡಮಠದ ಕೋರ್ಟ್ ವ್ಯವಹಾರಗಳಲ್ಲಿ ತಾಲ್ಲೂಕು ಅಮಲ್ದಾರರಿಗೆ ಸಲ್ಲಿಸಿರುವ ಮೂಲದ ಯಥಾನಕಲು. ಇದನ್ನು ಮುಜರಾಯಿ ಇಲಾಖಾ ದಾಖಲೆ ಸಂ: ೫೨/೧೯೨೨-೨೩. ಪು. ೭೭ರಲ್ಲಿ ಇರುವಂತೆ ಸಂಗ್ರಹಿಸಿಕೊಳ್ಳಲಾಗಿದೆ.
11. ಎಂ.ಜಿ. ನಂಜುಂಡಾರಾಧ್ಯ. ತ್ರಿವಿಧದಾಸೋಹಿ ಶ್ರೀ ಗೌಡರ ವೀರಭದ್ರಪ್ಪನವರು. ಪು. ೨೯, ೩೦, (೧೯೮೪. ಹುಬ್ಬಳ್ಳಿ)
12. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನಚರಿತ್ರೆ. ಪು. ೬. (೧೯೫೨. ದಾವಣಗೆರೆ)
13. Register of Muzrai Institutions in Bangalore Taluk. 1902. P. 180-185.
14. ಪರ್ವತಸ್ವಾಮಿಗಳು ತೋಟದದೇವರಿಗೆ ನೀಡಿದ್ದ ದಾನ ಶಾಸನಪತ್ರ. ಶಾಲಿವಾಹನ ಶಕ ೧೭೪೫ ಮಾಘಮಾಸ ಶುದ್ಧ ೭. ನರಗುಂದದೇವರಮಠ.
15. ಸ್ಥಳ-ಪರಸ್ಥಳದ ಅರಳೆ ವ್ಯಾಪಾರಸ್ಥರು ತೋಟದದೇವರಿಗೆ ಬರೆದುಕೊಟ್ಟ ದಾನಶಾಸನ ಪತ್ರ. ಶಾಲಿವಾಹನ ಶಕ ೧೭೪೯. ಮಾರ್ಗಶಿರ ಶುದ್ಧ ೧೧. ನರಗುಂದದೇವರಮಠ.

16. ಸಂಪಾದನ ಗುರುಪಾದಯ್ಯನವರಿಗೆ ಚನ್ನಪಟ್ಟಣದ ಪಾಳೆಯಗಾರನು ಬರೆದುಕೊಟ್ಟ ಭೂದಾನ ಶಾಸನ ಪತ್ರ. ಶಾಲಿವಾಹನ ಶಕ ೧೭೬೩. ಶ್ರಾವಣ ಶುದ್ಧ ೧೫ ನರಗುಂದದೇವರಮಠ.
17. ಫಾಲಲೋಚನಸ್ವಾಮಿಗಳಿಗೆ ಕ್ಲೋಸ್‌ಪೇಟೆಯ ಭಕ್ತರು ಬರೆದುಕೊಟ್ಟ ದಾನಶಾಸನ ಪತ್ರ. ಶಾಲಿವಾಹನ ಶಕ ೧೭೬೬. ಆಶ್ವೀಜ ಶುದ್ಧ ೭. ಸರ್ಪಭೂಷಣಮಠ.
18. ಖಂಡುಗ ಎಂಬುದು ದವಸ-ಧಾನ್ಯಗಳ ಅಳತೆಯ ಒಂದು ಪ್ರಮಾಣ. ಖಂಡುಗ ಒಂದಕ್ಕೆ ಕೆಲವೆಡೆ ಎರಡು ಪಲ್ಲವೆಂದೂ ಮತ್ತೆ ಕೆಲವೆಡೆ ಮೂರು ಪಲ್ಲವೆಂದೂ ಪರಿಗಣಿಸಲಾಗಿರುತ್ತದೆ. ಪಲ್ಲವೊಂದಕ್ಕೆ ನೂರು ಸೇರು.
19. ಸರ್ಪಭೂಷಣ ಮಠದ ದಾಖಲೆಯಲ್ಲಿ ದೇವೀರಮ್ಮ (೮೦)ನ ವಿವರಣೆ.
20. ಹೇಳಿಕೆ : ಪಂ। ಚನ್ನಪ್ಪ ಎರೇಸೀಮೆ (೭೬) ವಿಜಯನಗರ, ಬೆಂಗಳೂರು.
21. ''ದ'' ಎಂಬ ಮುದ್ರಾಂಕಿತವುಳ್ಳ ಭೂಸಾಗುವಳಿ ಪತ್ರ. ರಕ್ತಾಕ್ಷಿ ಸಂವತ್ಸರ ಆಶ್ವೀಜ ಶುದ್ಧ ೫.
22. ವೀರಯ್ಯನವರ ಕರಾರು ಪತ್ರ : ದಿ.: ೧೬.೨.೧೮೪೯: ವೀರಭದ್ರಯ್ಯನವರ ಕರಾರು ಪತ್ರ : ದಿ: ೧೭.೬.೧೮೭೪; ಸಂಗಯ್ಯನವರ ಕರಾರು ಪತ್ರ : ದಿ :೨೨.೧.೧೯೦೦. (ಇವಿಷ್ಟೂ ಪತ್ರಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ).
23. ದಾನಪತ್ರದ ರಿ.ರಿ.ನಂ : ೨೪೪೯/೧೯೪೩-೪೪. ವಾಲ್ಯುಂ-೬೬೮. ಪು. ೨೪೭-೨೪೯. ದಿ: ೨೬.೧.೧೯೪೪.
24. Muzrai File No. 291/1941. Sl.No:1-9. P-45.
25. Ibid. P. 46.
26. Muzrai File No: 340/1907. Sl.No: 1. P.2,3.
27. Muzrai File No: 98/1935. Sl.No: 1-8. P. 29.
28. Muzrai File No: 604/1916-17. Sl.No: 1-2 P. 26.
29. Muzrai File No: 76/1911-12. Sl.No: 1-3. P. 22.
30. ಡಾ। ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. (೧೯೬೬. ಮೈಸೂರು ವಿಶ್ವವಿದ್ಯಾಲಯ) ಪು. ೪
31. ಇಂಗ್ಲೀಷ್-ಕನ್ನಡ ನಿಘಂಟು. ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾಲಯ. ೧೯೭೭. ಪು. ೨೫೬.
32. ಉದ್ಧೃತ : ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಪು. ೫
33. ಡಾ। ಎಚ್. ತಿಪ್ಪೇರುದ್ರಸ್ವಾಮಿ. ಕರ್ಣಾಟಕ ಸಂಸ್ಕೃತಿ ಸಮೀಕ್ಷೆ. (೧೯೮೫) ಪು. ೧೨, ೧೩.
34. ಹೆಚ್ಚಿನ ಮಾಹಿತಿಗಾಗಿ : ಡಾ। ಎಂ. ಚಿದಾನಂದಮೂರ್ತಿ. ಪೂರ್ವೋಕ್ತ. ಪು. ೧೮೬, ೧೯೦, ೧೯೧.
35. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನಚರಿತ್ರೆ. (೧೯೫೨. ದಾವಣಗೆರೆ) ಪು. ೧೦.
36. ಸಿದ್ಧಯ್ಯ ಪುರಾಣಿಕ. ಶರಣ ಚರಿತಾಮೃತ. (೧೯೬೪) ಪು. ೬೭೧.
37. ಮೈಸೂರ್‌ಸ್ಟಾರ್ ಪತ್ರಿಕೆ. ದಿ: ೩.೬.೧೯೧೨. ಪು. ೬.
38. ಕಾರ್ತಿಕ ಮಾಸದ ವಿಶೇಷ ಸಮಾರಂಭದ ಆಹ್ವಾನಪತ್ರಿಕೆ. ಗಂಜಾಂಮಠ, ಬೆಂಗಳೂರು ದಿ: ೧೦.೧.೧೯೧೮.
39. ಮೈಸೂರ್‌ಸ್ಟಾರ್ ಪತ್ರಿಕೆ. ದಿ: ೧೮.೨.೧೯೨೩. ಸಂ-೩೬-೭. ಪು. ೫.
40. ಗಂಜಾಂಮಠದವಾರ್ಷಿಕ ಕಾರ್ಯಕ್ರಮಗಳ ಪಟ್ಟಿಯೊಂದರಿಂದ ಈ ವಿವರಗಳನ್ನು ಸಂಗ್ರಹಿಸಲಾಗಿದೆ. (೧೯೪೦-೪೧)
41. ಹೆಚ್ಚಿನ ವಿವರಗಳಿಗಾಗಿ : ಚ. ಸುಂದರೇಶನ್. ಅಭಿನವ ಅಲ್ಲಮ. ನಿಲವು. ಪು. ೫-೧೩.
42. ವೀರಶೈವಸಮಾಜ ಸೇವಾಸಂಘ. ವಾರ್ಷಿಕವರದಿ. ೧೯೪೩. ಪು. ೧೦.
43. ಪುರಾಣಿಕರ ಸನ್ಮಾನ ಸಮಾರಂಭದ ಕರಪತ್ರ. ದಿ: ೧.೧೦. ೧೯೪೦. ಸರ್ಪಭೂಷಣಮಠ.
44. ವಿಚಾರಗೋಷ್ಠಿಯ ಆಹ್ವಾನಪತ್ರಿಕೆ. ದಿ: ೨೯.೧.೧೯೪೧. ಸರ್ಪಭೂಷಣಮಠ.
45. ಸರ್ಪಭೂಷಣ ಮಠದಲ್ಲಿ ೧೯೪೧ರ ಸಾಲಿನಲ್ಲಿ ಮಹಾದೇವಸ್ವಾಮಿಗಳು ವ್ಯವಹರಿಸಿರುವ ಕೆಲವು ಕಾಗದಪತ್ರಗಳಿಂದ ಈ ಮಾಹಿತಿ ಸಂಗ್ರಹಿಸಲಾಗಿದೆ.
46. ಅದೇ.
47. ಜಿ.ಎಚ್. ವೀರಣ್ಣನವರು ಸರ್ಪಭೂಷಣಮಠದ ಚನ್ನಬಸವಸ್ವಾಮಿಗಳಿಗೆ ಬರೆದುಕೊಟ್ಟಿರುವ ಕರಾರುಪತ್ರ (ದಿ: ೧೯.೧.೧೯೨೪) ದಿಂದ ಈ ಮಾಹಿತಿಗಳನ್ನು ಆರಿಸಿಕೊಳ್ಳಲಾಗಿದೆ. (ಕರಾರುಪತ್ರದ ರಿ. ನಂ: 2419. Vol-570. P. 160-165. dt: 24.1.1924.)
48. ೧೯೨೩ ರಿಂದ ಬೆಂಗಳೂರಿನಲ್ಲಿ ಪ್ರಾರಂಭವಾಗಿದ್ದ ಗುಬ್ಬಿ ಕಂಪೆನಿಯ ಪೂರ್ಣ ಹೆಸರು "Gubbi Sree Channa Basaveswara Theatrical Co. (Branch)" ಎಂದಿತ್ತು. ಮೊದಲೇ ಕರಾರಾದಂತೆ ೧೯೪೩ರಲ್ಲಿ ವೀರಣ್ಣನವರು ಈ ನಾಟಕಮಂದಿರವನ್ನು ಮಠದವರಿಗೆ ಬಿಟ್ಟುಕೊಟ್ಟರು. ಮುಂದೆ ಇದು ''ಗೀತಾ ಚಿತ್ರಮಂದಿರ''ವಾಗಿ ೧೯೮೫ರವರೆಗೂ ಅಸ್ತಿತ್ವದಲ್ಲಿತ್ತು. ಇದೀಗ ''ತಲ್ಲಂ ಕಾಂಪ್ಲೆಕ್ಸ್'' ಎಂಬ ವ್ಯಾಪಾರಿ ಸಮುಚ್ಚಯವಾಗಿ ಸಂಪೂರ್ಣ ಖಾಸಗಿ ಸ್ವತ್ತಾಗಿ ಪರಿವರ್ತನೆಯಾಗಿದೆ.
49. ''ಶ್ರೀ ಮಹಾದೇವಿಯಕ್ಕನವರ ಸೇವಾಸಮಾಜ''ದ ಪ್ರಾರಂಭೋತ್ಸವದ ಆಹ್ವಾನಪತ್ರಿಕೆ. ದಿ: ೧೨.೬.೧೯೩೭. ಸರ್ಪಭೂಷಣಮಠ.
50. ಮಹಾದೇವಸ್ವಾಮಿಗಳು ಈ ಸಮಾಜದ ಗೌರವಾಧ್ಯಕ್ಷರಾಗಿದ್ದರು. ಜಿ.ಆರ್. ಹೊನ್ನಮ್ಮನವರು, ಕಾರ್ಯಾಧ್ಯಕ್ಷರಾಗಿದ್ದರು. ಎ.ಎಸ್.

ಗದ್ದಿಗೆಮ್ಮ ಮತ್ತು ಜಿ.ವಿ. ಗೌರಮ್ಮನವರುಗಳು ಕಾರ್ಯದರ್ಶಿಗಳಾಗಿದ್ದರು. ಎಂ. ಪಾರ್ವತಮ್ಮ, ಎಂ. ಲಕ್ಷ್ಮೀದೇವಿ, ಸಿ. ಸುಬ್ಬಮ್ಮ, ಟಿ.ಎಸ್. ಗೌರಮ್ಮ, ಪಿ.ಎಂ. ಪುಟ್ಟತಾಯಮ್ಮ, ಜಿ.ಸಿ. ಹೊನ್ನಮ್ಮ ಇವರುಗಳು ಸಮಾಜದ ಉಳಿದ ಸದಸ್ಯೆಯರಾಗಿದ್ದರು. ಜಿ.ಸಿ. ವೀರಪ್ಪ, ಗೊಲ್ಲಹಳ್ಳಿರುದ್ರಪ್ಪ, ಕೆ.ವೈ. ಮಲ್ಲಶೆಟ್ಟಪ್ಪ. ಎಂ.ಎಸ್. ಶಿವಪ್ಪ. ಕೆ. ಬಸಪ್ಪ ಇವರುಗಳು ಪುರುಷ ಸಹಾಯಕ ಸದಸ್ಯರುಗಳಾಗಿದ್ದರು. (ಅದೇ ಆಹ್ವಾನಪತ್ರಿಕೆ.)

51. ಅದೇ.

52. ಶಾಂತಾದೇವಿ ಮಾಳವಾಡ. ''ಸಮಾಜ ಸಾಹಿತ್ಯದ ಅವಿರತ ಸೇವಕ''. ಪ್ರಜಾವಾಣಿ ದಿನಪತ್ರಿಕೆ. ಸಾಪ್ತಾಹಿಕ ಪುರವಣಿ. ದಿ : ೨೭.೧೨.೧೯೯೨. ಪು. ೫.

53. ಅದೇ.

54. 'ಅನುಭವಮಂಟಪ'ದ ಪ್ರಾರಂಭೋತ್ಸವ ಆಹ್ವಾನಪತ್ರಿಕೆ. ಸರ್ಪಭೂಷಣಮಠ. ದಿ : ೨೧.೭.೧೯೫೮.

55. 'ಅನುಭವಮಂಟಪ'ದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾಗಿ ಮಹಾದೇವಸ್ವಾಮಿಗಳೇ ಇದ್ದರು. ನಿವೃತ್ತ ನ್ಯಾಯ ಮೂರ್ತಿಗಳಾಗಿದ್ದ ಟಿ.ಎನ್. ಮಲ್ಲಪ್ಪನವರು ಹಾಗೂ ಆಸ್ಥಾನವಿದ್ವಾನ್ ಬಿ. ಶಿವಮೂರ್ತಿಶಾಸ್ತ್ರಿಗಳು ಉಪಾಧ್ಯಕ್ಷರುಗಳಾಗಿದ್ದರು. ನಿವೃತ್ತ ಐ.ಎ.ಎಸ್. ಅಧಿಕಾರಿಗಳಾಗಿದ್ದ ಕೆ. ತಿಪ್ಪೇರುದ್ರಯ್ಯನವರು ಕೋಶಾಧ್ಯಕ್ಷರಾಗಿದ್ದರು. ಅಡ್ವೋಕೇಟ್ ಅನ್ನದಾನಯ್ಯ ಪುರಾಣಿಕರು ಗೌರವ ಕಾರ್ಯದರ್ಶಿಗಳಾಗಿಯೂ, ಪ್ರಾಧ್ಯಾಪಕಿ ಬಿ.ಜಿ. ಸುಶೀಲಮ್ಮನವರು ಮತ್ತು ಎ.ಆರ್. ಮೇನದಾಳಮಠ ಇವರು ಸಹ ಕಾರ್ಯದರ್ಶಿಗಳಾಗಿದ್ದರು. ಬೇಲಿ ಮಠದ ಸಿದ್ಧಲಿಂಗಸ್ವಾಮಿಗಳು, ನಿವೃತ್ತ ನ್ಯಾಯಮೂರ್ತಿಗಳಾಗಿದ್ದ ಜಿ. ಪರಮಶಿವಯ್ಯ, ಬ್ಯಾರಿಸ್ಟರ್ ಎಂ.ಆರ್. ಸರದಾರ್, ನಿವೃತ್ತ ಮುಖ್ಯ ಇಂಜಿನಿಯರ್ ಕೆ.ಎಸ್. ಗಂಗಾಧರ್, ಪ್ರಾಚಾರ್ಯರಾಗಿದ್ದ ಪಿ.ಶಿವಶಂಕರ್, ಡಾ। ಡಿ.ಆರ್. ನಂಜಪ್ಪ, ಸಬ್‌ಜಡ್ಜ್ ಎಚ್.ಆರ್. ಮಹಾದೇವಯ್ಯ, ನಿವೃತ್ತ ಎಕ್ಸಿಕ್ಯುಟಿವ್ ಇಂಜಿನಿಯರ್ ಎಚ್. ಪುಟ್ಟಸ್ವಾಮಿ, ಜಿ.ವಿ. ರುದ್ರಪ್ಪ, ಬಿ.ಎಸ್. ಶಂಕರಪ್ಪಶೆಟ್ಟಿ, ಬಿ.ವಿಶ್ವನಾಥಪ್ಪ, ಮಾ.ನ.ಶಿವಪ್ಪ ಇವರುಗಳು ಕಾರ್ಯಕಾರಿಸಮಿತಿಯ ಸದಸ್ಯರುಗಳಾಗಿದ್ದರು. (ಮೇಲಿನ ಆಹ್ವಾನಪತ್ರಿಕೆ.)

56. ಸರ್ಪಭೂಷಣಮಠದ 'ಅನುಭವಮಂಟಪ' ಕೇಂದ್ರಸಂಸ್ಥೆಯ ಉದ್ಘಾಟನಾ ಸಮಾರಂಭಕ್ಕೆ ಧಾರವಾಡ ಮುರುಘಾ ಮಠದ ಮೃತ್ಯುಂಜಯಸ್ವಾಮಿಗಳು, ಸುತ್ತೂರುಮಠದ ಶಿವರಾತ್ರೀಶ್ವರಸ್ವಾಮಿಗಳು ಮತ್ತು ಸಿದ್ಧಗಂಗಾಮಠದ ಶಿವಕುಮಾರಸ್ವಾಮಿಗಳು ಆಗಮಿಸಿದ್ದರು. (ಅದೇ.)

57. ಅನುಭವಮಂಟಪದ ಪ್ರಕಟಣೆ. ಬಸವಜಯಂತಿ ಕಾರ್ಯಕ್ರಮದ ಆಹ್ವಾನಪತ್ರಿಕೆ. ದಿ: ೨೯.೪.೧೯೬೦. ಸರ್ಪಭೂಷಣಮಠ.

58. ಆಗ ಮಠಾಧ್ಯಕ್ಷರಾಗಿದ್ದ ಪ್ರವಚನಾಚಾರ್ಯ ಮಲ್ಲಿಕಾರ್ಜುನಸ್ವಾಮಿಗಳೇ ವೇದಿಕೆಯ ಅಧ್ಯಕ್ಷರಾಗಿದ್ದರು. ಡಾ। ಎಂ. ಚಿದಾನಂದಮೂರ್ತಿ, ಡಾ। ಸಾ.ಶಿ. ಮರುಳಯ್ಯ, ಡಾ। ಎಸ್. ವಿದ್ಯಾಶಂಕರ, ಡಾ। ಎಚ್.ಎಂ. ಮರುಳಸಿದ್ಧಯ್ಯ, ಡಾ। ಸಿ. ಯು. ಮಂಜುನಾಥ್, ಗೊ.ರು. ಚನ್ನಬಸಪ್ಪ, ಎಸ್. ಶಿವಣ್ಣ , ಟಿ.ಆರ್. ಮಹಾದೇವಯ್ಯ, ಹೀ.ಚಿ.ಶಾಂತವೀರಯ್ಯ, ಜಿ.ವಿ.ಶಿವಸ್ವಾಮಿ, ಷಣ್ಮುಖಯ್ಯ ಅಕ್ಕೂರಮಠ ಹಾಗೂ ಬಿ.ಸಿ. ವೀರಪ್ಪ ಇವರುಗಳು ವೇದಿಕೆಯ ಸದಸ್ಯರುಗಳಾಗಿದ್ದರು. (ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ. ಸಂ : ಡಾ। ಸಿ. ಯು. ಮಂಜುನಾಥ್ ಮತ್ತು ಬಿ.ಸಿ. ವೀರಪ್ಪ. ೧೯೯೩. ಮುನ್ನುಡಿಗೆ ಮುನ್ನಾಪುಟ.)

59. ಡಾ। ಸಾ.ಶಿ. ಮರುಳಯ್ಯ. (ಸಂ) ಶೂನ್ಯಸಂಪಾದನೆ ಒಂದು ಅಧ್ಯಯನ. ಶೂನ್ಯಸಂಪಾದನೆ ಅದರ ಪ್ರಸ್ತುತತೆ. ಪು. ೧.

60. ಅದೇ. ಪು. ೨.

61. ಹೆಚ್ಚಿನ ವಿವರಗಳಿಗಾಗಿ ನೋಡಿ : ಅನ್ನದಾನೀಶ್ವರ ಮಹಾಸ್ವಾಮಿಗಳು. ಜಂಗಮಮಠದ ಸಾಂಸ್ಕೃತಿಕ ಕಾರ್ಯಕ್ರಮಗಳ ಪಕ್ಷಿನೋಟ. ನಿಜಗುಣ. ಸಂ : ಡಾ। ಎಚ್.ಎಂ. ಮರುಳಸಿದ್ಧಯ್ಯ. ಷಣ್ಮುಖಯ್ಯ ಅಕ್ಕೂರಮಠ. ಪು. ೩೧, ೩೨.

62. ಅದೇ. ಪು. ೩೨, ೩೩.

63. ಅದೇ. ಪು. ೩೩, ೩೪.

64. ಅದೇ. ಪು. ೩೫.

65. ಅದೇ. ಪು. ೩೭.

66. ದಿನಾಂಕ: ೧೫.೯.೧೯೮೧ರಂದು- ''ಗುರು ಲಿಂಗ ಜಂಗಮದ ಪರಿಕಲ್ಪನೆ''ಯನ್ನು ಕುರಿತು ಡಾ। ಎಚ್. ತಿಪ್ಪೇರುದ್ರಸ್ವಾಮಿಯವರೂ ದಿ: ೧೬.೯.೧೯೮೧ರಂದು- ''ಅಷ್ಟಾವರಣದ ಅಂತರಂಗ''ವನ್ನು ಕುರಿತು ಪ್ರೊ। ವಿ.ವಿ. ಸಂಗಮದ ಅವರೂ; ದಿ: ೧೭.೯.೧೯೮೧ರಂದು- ''ಪಂಚಾಚಾರಗಳ ಪರಿಪೂರ್ಣತೆ''ಯನ್ನು ಕುರಿತು ಸಿದ್ಧಣ್ಣಲಂಗೋಟಿಯವರೂ; ದಿ: ೧೮. ೯.೧೯೮೧ರಂದು- ''ಷಟ್‌ಸ್ಥಲಸೋಪಾನ''ಗಳನ್ನು ಕುರಿತು ಡಾ। ಸಾ.ಶಿ. ಮರುಳಯ್ಯನವರೂ; ದಿ: ೧೯.೯.೧೯೮೧ ರಂದು ''ವೀರಶೈವಧಾರ್ಮಿಕ ಸಂಸ್ಕಾರ''ಗಳನ್ನು ಕುರಿತು ಬೇಲಿಮಠದ ಶಿವರುದ್ರಸ್ವಾಮಿಗಳೂ; ದಿ: ೨೦.೯.೧೯೮೧ರಂದು - ''ವೀರಶೈವವಿವಾಹಪದ್ಧತಿ''ಯನ್ನು ಕುರಿತು ಪಂ । ಚನ್ನಪ್ಪ ಎರೇಸೀಮೆಯವರೂ; ದಿ: ೨೧.೯.೧೯೮೧ರಂದು-''ಸಮಾಜ ಮತ್ತು ಧರ್ಮ'' ಎಂಬ ವಿಷಯವನ್ನು ಕುರಿತು ಮಹಾದೇವ ಬಣಕಾರ ಅವರುಗಳು ವಿಶೇಷ ಉಪನ್ಯಾಸಗಳನ್ನು ನೀಡಿದ್ದರು. (ಅದೇ. ಪು. ೩೮)

67. ಅನ್ನದಾನೀಶ್ವರ ಮಹಾಸ್ವಾಮಿಗಳು. ಪೂರ್ವೋಕ್ತ. ಪು. ೩೯.

68. ಅದೇ. ಪು. ೪೦.
69. ಡಾ। ಎಂ. ಚಿದಾನಂದಮೂರ್ತಿ. ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೧೭೯, ೧೮೦.
70. ಪಿ.ವ್ಹಿ. ಆಚಾರ್ಯ. 'ಮಠಗಳು-ಅವು ಏನುಮಾಡಬಲ್ಲವು?' ಚಿತ್ರುಭೆ. ಸಂ : ಪ್ರೊ। ಹನ್ನೆರಡುಮಠ. (ಪ್ರ) ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಮಂಡಳ. ಹುಬ್ಬಳ್ಳಿ. ಪು. ೫೭೭.
71. ಅದೇ. ಪು. ೫೭೮.
72. ಫಾಲಲೋಚನ ಸ್ವಾಮಿಗಳಿಗೆ ಹತ್ತೂ ಕುಲಸ್ಥರು ಬರೆದುಕೊಟ್ಟ ಸಮಾಖ್ಯಪತ್ರ. ಶೊಭಕೃತು ಸಂವತ್ಸರ ಕಾರ್ತಿಕ ಶುದ್ಧ ೧. (ಕ್ರಿ.ಶ. ೧೮೪೨)ಪು. ೧.
73. ಅದೇ. ಪು. ೨.
74. ಅರ್ಜಿಯ ಯಥಾನಕಲನ್ನು ಬೇಲಿಮಠದಿಂದ ಸಂಗ್ರಹಿಸಲಾಗಿದೆ. ಅರ್ಜಿಸಲ್ಲಿಸಿದ್ದ ದಿನಾಂಕ : ೫.೧.೧೮೭೧.
75. ಚಿಕ್ಕಣ್ಣನು ಬರೆದುಕೊಂಡ ಅರ್ಜಿಗೆ ಹಿಂಭಾಗದಲ್ಲಿ ತಿಳುವಳಿಕೆ ಪತ್ರವನ್ನು ಬರೆದುಕಳುಹಿಸಲಾಗಿತ್ತು. (Endorse No : 796/80. d:30.1.1871. Conservator of Forest Office, Mysore)
76. ಮೈಸೂರು ಸೀಮೆಯ ದಿವಾನ್ ಬಹದ್ದೂರ್ ಕೆ. ಶೇಷಾದ್ರಿ ಐಯ್ಯರ್ ಅವರಿಗೆ ವೀರಶೈವ ಮಠಸ್ಥರು ಸಲ್ಲಿಸಿದ್ದ ಮನವಿ ಅರ್ಜಿ. (ಈ ಪತ್ರಿಕೆಯಲ್ಲಿ ಕಾಲಸೂಚನೆ ಇಲ್ಲ)
77. ಷಟ್ಕರ್ಮಗಳು : ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ.
78. ''ಪ್ರಸಿದ್ಧಪತ್ರಿಕಾ'' ಎಂಬ ಶಿರೋನಾಮೆಯುಳ್ಳ ವಿಶೇಷ ಪ್ರಕಟಣಾ ಪತ್ರಿಕೆ. (ಈ ಪ್ರತಿಯಲ್ಲೂ ಪ್ರಕಟವಾದ ದಿನಾಂಕವಿಲ್ಲ)
79. ಬೆಂಗಳೂರು ಮುನಿಸಿಪಲ್ ಕಮಿಷನ್ ಕಛೇರಿಯು ಪ್ರಕಟಿಸಿದ್ದ ಪಟ್ಟಣದ ದೊಡ್ಡಮನುಷ್ಯರುಗಳ ಪಟ್ಟಿ. ದಿನಾಂಕ : ೨೭.೬.೧೮೯೨.
80. ಬೆಂಗಳೂರಿನ ಮೂರುಪೇಟೆ ಶೆಟ್ಟಿ ಯಜಮಾನರುಗಳು ಬರೆಯಿಸಿದ ಮಹಜರುಪತ್ರ. ಪಾರ್ಥಿವನಾಮ (ಕ್ರಿ.ಶ. ೧೮೮೫) ಸಂವತ್ಸರ. ಫಾಲ್ಗುಣ ಬಹುಳ ೬.
81. ಮೇಲ್ಕಂಡ ಮಠಗಳಲ್ಲಿ ಹಣಕಾಸಿನ ವ್ಯವಹಾರಗಳು ನಡೆದುದಕ್ಕೆ ಸಾಕ್ಷಿಯಾಗಿ ನೂರಾರು ಛಾಪಾಕಾಗದಗಳು ಇರುವುದನ್ನು ನೋಡಬಹುದಾಗಿದೆ.
82. ಬೇಲಿಮಠದಲ್ಲಿ ನೂರು ಇನ್ನೂರು ರೂ.ಗಳ ಇಂತಹ ಅನೇಕ ಛಾಪಾಕಾಗದಗಳು ದೊರೆಯುತ್ತವೆ. ಇಲ್ಲಿ ೫೦೦ ರೂ.ಗಳಿಗೆ ಮೇಲ್ಪಟ್ಟ ಕೆಲವೊಂದು ವ್ಯವಹಾರಗಳನ್ನು ಮಾತ್ರ ಈ ಪಟ್ಟಿಯಲ್ಲಿ ಸೇರಿಸಲಾಗಿದೆ.
83. ಬೇಲಿಮಠದ ಮುಜರಾಯಿ ಮಿಸ್‌ಕೇಸ್ ನಂ : ೮೪೩/೧೯೦೮. ಬಿ. ಷೆಡ್ಯೂಲ್. ಪು. ೧-೫; ಹಾಗೂ ಕೆಲವು ಛಾಪಾ ಕಾಗದಗಳನ್ನು ಆಧರಿಸಿ ಈ ಮಾಹಿತಿಯನ್ನು ಸಂಗ್ರಹಿಸಲಾಗಿದೆ.
84. ಈ ವಿವಾದದ ಪೂರ್ಣಮಾಹಿತಿಯುಳ್ಳ ಕರಾರು ಪತ್ರವನ್ನು ಸಂಗ್ರಹಿಸಿಕೊಳ್ಳಲಾಗಿದೆ. ದಿ: ೨೫.೫.೧೯೩೮ರಲ್ಲಿ ಬರೆದಿರುವ ಈ ಕರಾರು ಪತ್ರಕ್ಕೆ ಎಂಟು ಜನರು ಸಾಕ್ಷಿರುಜು ಹಾಕಿರುತ್ತಾರೆ. ಬೇಲಿಮಠದಲ್ಲಿ ಇಂತಹ ಇನ್ನೂ ಹತ್ತಾರು ಕರಾರು ಪತ್ರಗಳು ದೊರೆಯುತ್ತವೆ.
85. ಅದೇ.
86. ಬಿ.ನ. ಸುಂದರರಾವ್: ಬೆಂಗಳೂರಿನ ಇತಿಹಾಸ. ಪು. ೩೬೧.
87. C. Hayavadana Rao. Mysore Gazetteer, Vol-v, 1930. P. 25.
88. 'ವ್ಯಾಧಿಗುಟ್ಟು' ಎಂಬ ಶಿರೋನಾಮೆಯುಳ್ಳ ಅನೇಕ ರೋಗ ನಿವಾರಣೆಗೆ ಉಪಯೋಗಿಸತಕ್ಕ ಔಷಧೋಪಚಾರಗಳ ವಿವರಣೆಯುಳ್ಳ ಹಲವಾರು ಬಿಡಿ ಬಿಡಿ ಪತ್ರಗಳು ಬೇಲಿಮಠದಲ್ಲಿ ಲಭ್ಯವಾಗಿವೆ. ಇವುಗಳೆಲ್ಲಾ ಬಹಳ ಹಳೆಯ ಪತ್ರಗಳಾಗಿದ್ದು ಮೋಡಿ ಲಿಪಿಯಲ್ಲಿ ಲಿಖಿತವಾಗಿವೆ. (ಕಾಲ : ವಿಕ್ರಮ ಮತ್ತು ವಿಷು ಸಂವತ್ಸರ ಕ್ರಿ.ಶ. ೧೮೨೦-೨೧)
89. ಇಷ್ಟೆಲ್ಲಾ ವಿವರಗಳುಳ್ಳ ಬಿಡಿಕಾಗದ ಪ್ರತಿಯು ನಗರದ ಬೇಲಿಮಠದಲ್ಲಿದೆ.
90. 'ಹಾವಿನಮಂತ್ರ', 'ಚೇಳಿನಮಂತ್ರ' ಇತ್ಯಾದಿ ಮೂಲಪ್ರತಿಗಳನ್ನೇ ಸಂಗ್ರಹಿಸಿಕೊಳ್ಳಲಾಗಿದೆ. (ಇವುಗಳ ಭಾಷೆ ಮರಾಠಿಯಲ್ಲಿದ್ದು ಲಿಪಿ ಮೋಡಿ ಕನ್ನಡ ಲಿಪಿಯಾಗಿರುತ್ತದೆ.)
91. ನಕ್ಷತ್ರಗಳು : ೧. ಅಶ್ವಿನಿ, ೨. ಭರಣಿ, ೩. ಕೃತ್ತಿಕಾ, ೪. ರೋಹಿಣಿ, ೫. ಮೃಗಶಿರಾ, ೬. ಆರಿದ್ರಾ, ೭. ಪುನರ್ವಸು, ೮. ಪುಷ್ಯ, ೯. ಆಶ್ಲೇಷಾ, ೧೦. ಮುಖಾ, ೧೧. ಪುಬ್ಬಾ, ೧೨. ಉತ್ತರಾ, ೧೩. ಹಸ್ತ, ೧೪. ಚಿತ್ತ, ೧೫. ಸ್ವಾತಿ, ೧೬. ವಿಶಾಖ, ೧೭. ಅನುರಾಧ, ೧೮. ಜ್ಯೇಷ್ಠ ೧೯. ಮೂಲ, ೨೦. ಪೂರ್ವಾಷಾಢ, ೨೧. ಉತ್ತರಾಷಾಢ, ೨೨. ಶ್ರವಣ, ೨೩. ಧನಿಷ್ಠ, ೨೪. ಶತಭಿಷ, ೨೫. ಪೂರ್ವಾಭಾದ್ರ. ೨೬. ಉತ್ತರಾಭಾದ್ರ, ೨೭. ರೇವತಿ.
92. ಚಾಂದ್ರಮಾನ ಮಾಸಗಳು : ೧. ಚೈತ್ರ, ೨. ವೈಶಾಖ, ೩. ಜ್ಯೇಷ್ಠ, ೪. ಆಷಾಢ, ೫. ಶ್ರಾವಣ, ೬. ಭಾದ್ರಪದ, ೭. ಆಶ್ವಯುಜ, ೮. ಕಾರ್ತಿಕ, ೯. ಮಾರ್ಗಶಿರ, ೧೦. ಪುಷ್ಯ, ೧೧. ಮಾಘ, ೧೨. ಫಾಲ್ಗುಣ.
93. ವ್ಯಾಧಿ ಫಲಾಫಲಗಳನ್ನು ವಿವರಿಸಿರುವ ಬಿಡಿಬಿಡಿ ಪತ್ರಗಳನ್ನು ಇಂದಿಗೂ ಬೇಲಿಮಠದಲ್ಲಿ ಸಂಗ್ರಹಿಸಿ ಇಟ್ಟಿರುವುದನ್ನು ನೋಡಬಹುದಾಗಿದೆ.
94. ನೆಲಮಂಗಲದ ಕಪ್ಪಣ್ಣಶೆಟ್ಟಿಯು ತನ್ನ ಆರೋಗ್ಯದ ಬಗೆಗೆ ಸಿದ್ಧಲಿಂಗಸ್ವಾಮಿಗಳಿಗೆ ಬರೆದಿರುವ ಪತ್ರ. (ಕಾಲ ಸೂಚನೆ ಇಲ್ಲ.)

95. ಬಿಡದಿಯ ಸೋಮಪ್ಪನು ಬೇಲಿಮಠದ ಸಿದ್ಧಲಿಂಗದೇವರಿಗೆ ಬರೆದಿರುವ ಪತ್ರ. ರಕ್ತಾಕ್ಷಿ ಸಂವತ್ಸರ (೧೮೬೪) ವೈಶಾಖ ಬಹುಳ ೩.
96. ಮುನಿಸಿಪಲ್ ಕಮಿಷನ್‌ಗೆ ಬೇಲಿಮಠದ ಸಿದ್ಧಲಿಂಗದೇವರು ಬರೆದಿರುವ ಪೇಟೆಯ ಅಚ್ಚುಕಟ್ಟು ವಿವರಣೆಯ ಪತ್ರ.(ಕಾಲಸೂಚನೆ ಇಲ್ಲ)
97. ಬ.ನ.ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೬೧.
98. ಅದೇ. ಪು. ೩೬೨.
99. ದೇಶದ ಕಳಸಪ್ಪಶೆಟ್ಟಿಯು ಬೆಂಗಳೂರು ತಾಲ್ಲೂಕು ಕಛೇರಿಗೆ ಬರೆದುಕೊಂಡ ಅರ್ಜಿ. ದಿ: ೧೬.೮.೧೮೮೦.
100. ಅದೇ ಅರ್ಜಿ.
101. ಪ್ಲೇಗಿನ ಸಮಾಚಾರಗಳನ್ನು ತಿಳಿಸುವ ಎಂಟ್ಹತ್ತು ಪತ್ರಗಳು ಗಂಜಾಂಮಠದಲ್ಲಿದ್ದು ನಾಡಿನ ಪ್ರಮುಖ ಪಟ್ಟಣಗಳಲ್ಲಿ ಪ್ಲೇಗಿನ ಗಲಾಟೆ ಹೇಗಿತ್ತು ಎಂಬುದನ್ನು ಅವುಗಳಲ್ಲಿ ಹೇಳಿದೆ. ಈ ಪತ್ರಗಳು ೧೮೯೮ರಿಂದ ೧೯೦೦ರ ಕಾಲಾವಧಿಗ ಸೇರಿದವುಗಳಾಗಿವ.
102. ಬೇಲಿಮಠದ ಸಿದ್ಧಲಿಂಗಸ್ವಾಮಿಗಳು, ಅವರ ಶಿಷ್ಯರಾಗಿದ್ದ ರುದ್ರಸ್ವಾಮಿಗಳು, ಗಂಜಾಂಮಠದ ನಂಜುಂಡಸ್ವಾಮಿಗಳು, ಮಹಾಂತರಮಠದ ವೀರಭದ್ರದೇವರು, ಸುಂಕೇನಹಳ್ಳಿ, ಕೆಳಗಿನಮಠದ ಮರುಳಯ್ಯನವರು, ಮೇಲಿನ ಮಠದ ಸಂಗಯ್ಯನವರು, ದೊಡ್ಡಮಠದ ಬಸವಲಿಂಗಯ್ಯನವರು ಇವರೇ ಮೊದಲಾದ ಮಠಾಧಿಪತಿಗಳು ಈ ಬಾರಿಯ (೧೮೯೮-೧೯೦೦) ಪ್ಲೇಗಿನ ಮಾರಿಗೆ ಸಿಕ್ಕಿ ಬಲಿಯಾಗಿದ್ದರು.
103. ಹೇಳಿಕೆ : ರೇವಮ್ಮ (೮೪) ಮರಿಸ್ವಾಮಿಮಠದ ನಿವಾಸಿ. ಬೆಂಗಳೂರು.
104. ಪಂ। ಶಿವಕುಮಾರಸ್ವಾಮಿಗಳವರು. 'ಆರೋಗ್ಯದರ್ಪಣ'. ಶಾರದಾಪ್ರಕಾಶನ. ಬೆಂಗಳೂರು. ೧೯೮೩. (ಕೃತಿ ಉಪಲಬ್ಧವಿದೆ)
105. ಹೇಳಿಕೆ : ಗಂಗಮ್ಮ (೬೫) ಶಿವಾನುಭವಮಠದ ನಿವಾಸಿ. ಅಲಸೂರು.
106. Muzrai File No : 21/1906. Sl. No : 1-4. P. 9.
107. ಹೇಳಿಕೆ : ವೈ.ಸಿ. ಬಸಪ್ಪ. (೮೨) ಗಾಂಧಿನಗರ. ಬೆಂಗಳೂರು.
108. 'ಪ್ರಸಿದ್ಧಪತ್ರಿಕಾ' ಎಂಬ ಶಿರೋನಾಮೆಯುಳ್ಳ ಕರಪತ್ರ. ಸರ್ವಧಾರಿ ಸಂವತ್ಸರ ಕ್ರಿ.ಶ. ೧೮೮೮ ಚೈತ್ರ ಬಹುಳ ೧೧.
109. ಮಾದರಿ ಲಗ್ನ ಪತ್ರಿಕಾ - ('ಪ್ರಸಿದ್ಧಪತ್ರಿಕಾ'ದಲ್ಲಿದ್ದಂತೆ.)

॥ ಶ್ರೀ ಗುರುಬಸವಲಿಂಗಾಯನಮಃ ॥

ವಿವಾಹ ಮಹೋತ್ಸವಾಹ್ವಾನ ಪತ್ರಿಕಾ

ಮ ।ರಾ ।ರಾ--------------------ಸ ।ಕೈ ॥

ಶರಣು ಶರಣಾರ್ಥಿ, ಉಭಯ ಕುಶಲೋಪರಿ ಸಾಂ ॥

ಈ------ನಾಮ ಸಂವತ್ಸರ ----- ಶುದ್ಧ-----------ವಾರ, ಸನ್-------ನೇ ಇಸವಿ-------ತಾ ॥----------ರಿಂದ----------ಘಂಟೆ-------ಒಳಗಾಗಿ ಸಲ್ಲುವ----------ಲಗ್ನದಲ್ಲಿ

| | |
|---|---|
| ---------------ಹಳ್ಳಿಯಲ್ಲಿರುವ | -----------------ಹಳ್ಳಿಯಲ್ಲಿರುವ |
| ಮ ।ರಾ ॥-----------ನವರ ಕುಮಾರ | ಮ ।ರಾ ॥-------------ನವರ ಕುಮಾರ್ತೆ |
| ಚಿ ।ರಾ ॥ ------------------ನಿಗೆ | ಚಿ ।ಸೌ ॥ ------------ಳನ್ನು ಕೊಟ್ಟು |

ಇವರ ಮುಹೂರ್ತ ಗುರುಹಿರಿಯರು ನಿಶ್ಚಯಿಸಿ ಇರುವುದರಿಂದ ಈ ಶುಭ ಪ್ರಸ್ತುತಕ್ಕೆ ತಾವು ಸಕುಟುಂಬ ಪರಿವಾರವಾಗಿ------ತಾಲ್ಲೂಕು---------ಗೆ ದಯಮಾಡಿ ವಧೂವರರಿಗೆ ಆಶೀರ್ವದಿಸಿ ಮನಸ್ಸು ಸಂತೋಷಪಡಿಸಬೇಕೆಂದು ಕೋರುವ,

ತಾರೀಖು :----------- ತಮ್ಮ ವಿಧೇಯರು
-------------

110. ಗುರುಸ್ವಾಮಿಗಳು ನಂದಿದುರ್ಗ ಡಿವಿಜನ್ ಕಮಿಷನರ್ ಸಾಹೇಬರಿಗೆ ಬರೆದುಕೊಂಡಿರುವ ಆಹವಾಲು ಪ್ರತಿ. ದಿನಾಂಕ : ೩೧..೧೨.೧೮೭೬.
111. ಹುಣಸಮಾರನಹಳ್ಳಿಯ ಪಟ್ಟದ ನಂಜೇದೇವರಿಗೆ, ಸರ್ಪಭೂಷಣಮಠದ ಚನ್ನಬಸವಸ್ವಾಮಿಗಳು ಬರೆದಿರುವ ಪತ್ರ. ದಿನಾಂಕ : ೧೩.೨.೧೯೦೧.
112. ಹೇಳಿಕೆ : ಚನ್ನಬಸಪ್ಪ (೮೬) ಗಮಕವಿದ್ವಾಂಸ. ಮಹಾಲಕ್ಷ್ಮಿಬಡಾವಣೆ. ಬೆಂಗಳೂರು.
113. ಅದೇ ಹೇಳಿಕೆ.
114. ಈ ಮಾಹಿತಿಗಳನ್ನು ಸರ್ಪಭೂಷಣಮಠದ ಬಸವಲಿಂಗಸ್ವಾಮಿಗಳು ಸ್ವತಃ ಬರೆದಿರುವ ಕೆಲವು ಬಿಡಿಬಿಡಿ ಕಾಗದ ಪತ್ರಗಳಿಂದ ಆಯ್ದುಕೊಳ್ಳಲಾಗಿದೆ. (೧೯೨೮-೩೨)
115. Muzrai File No: 76/1911. Sl.No : 1-3. P. 6.

116. ಮಹಾಂತರಮಠದ ಆಡಳಿತ ಮಂಡಳಿಯ ಪರವಾಗಿ ಯ॥ ಬಸಪ್ಪನ ಹೇಳಿಕೆಪತ್ರ : ಬೆಂಗಳೂರು ತಾಲ್ಲೂಕು ಕಛೇರಿಗೆ. ದಿ : ೨೧.೬.೧೯೨೫.
117. ಸಾಮೂಹಿಕ ವಿವಾಹ ಸಮಾರಂಭದ ಆಹ್ವಾನ ಪತ್ರಿಕೆ. ದಿ: ೬.೫.೧೯೩೫. ಮಹಾಂತರಮಠ. ಬೆಂಗಳೂರು.
118. ಶಿಲಾಫಲಕವು ಒಳಾಂಗಣದ ಗೋಡೆಯ ಮೇಲಿದೆ. ಅದರಲ್ಲಿ ''ವೀರಶೈವರಮಠ, ಹಾಲಿನಬೀದಿ ಕಲ್ಯಾಣ ಮಂಟಪ. ೧೯೧೮'' ಎಂದೇ ನಮೂದಿಸಲಾಗಿದೆ.
119. ನೋಡಿ : 'ವೀರಶೈವಸಮಾಜ ಸೇವಾಸಂಘ' ವಾರ್ಷಿಕವರದಿ. ೧೯೪೩. ಪು. ೨೫-೨೯.
120. ದಶವಿಧಿ (ಕರ್ಮ)ಗಳು : ೧. ಗರ್ಭಾಧಾನ, ೨. ಪುಂಸವನ, ೩. ಸೀಮಂತ, ೪. ಜಾತಕರ್ಮ, ೫. ನಾಮಕರಣ, ೬. ಅನ್ನಪ್ರಾಶನ, ೭. ಚೌಲ, ೮. ದೀಕ್ಷಾ, ೯, ವಿವಾಹ, ೧೦. ಅಂತ್ಯೇಷ್ಟಿ. (ಸನಾತನ ವೀರಶೈವ ಬ್ರಾಹ್ಮಣ ಧರ್ಮ. ಪಿ.ಆರ್. ಕರಿಬಸವಶಾಸ್ತ್ರಿ. ಮೈಸೂರು ೧೯೨೯. ಪು. ೫೦)
121. ಶಿವಾನಂದ ಗುಬ್ಬಣ್ಣವರ. ಲಿಂಗಾಯತ ಸಂಸ್ಕಾರಗಳು. ಪು. ೧೫೪.
122. 'ಸಮಾಧಿ'ಯು ಯೋಗದ ಎಂಟನೆಯ ಹಾಗೂ ಕಡೆಯ ಅವಸ್ಥೆ. ಇದು ಮನಸ್ಸನ್ನು ಪರಬ್ರಹ್ಮನಲ್ಲಿ ಐಕ್ಯಗೊಳಿಸುತ್ತದೆ. (ಕನ್ನಡ ನಿಘಂಟು. ಸಂ-೮. ಕನ್ನಡ ಸಾಹಿತ್ಯ ಪರಿಷತ್ತು. ಪು. ೮೩೫೧.) ವೀರಶೈವಧರ್ಮಾನುಸಾರ ಸಮಾಧಿಯಲ್ಲಿ ಪ್ರಮುಖವಾಗಿ ಜ್ಞಾನರೂಪದ ಸಮಾಧಿ, ಕ್ರಿಯಾರೂಪದ ಸಮಾಧಿ ಎಂದು ಎರಡು ಬಗೆಗಳಿವೆ. ಜ್ಞಾನರೂಪದ ಸಮಾಧಿಯು ಶಿವಯೋಗಿಗಳಿಗೆ ರಚಿಸುವಂತಹುದು. ಕ್ರಿಯಾರೂಪದ ಸಮಾಧಿಯು ಗೃಹಸ್ಥರಿಗೆ, ಮಠಸ್ಥರಿಗೆ ರಚಿಸುವಂತಹುದು. (ಶಿವಾನಂದ ಗುಬ್ಬಣ್ಣವರ. ಲಿಂಗಾಯತ ಸಂಸ್ಕಾರಗಳು. ಪು. ೧೫೯)
123. ಅರಳೆಪೇಟೆಯ ದೇಶದ ಕಳಸಪ್ಪಶೆಟ್ಟಿಯು ಸರ್ಕಾರಕ್ಕೆ ಬರೆದುಕೊಂಡ ಅರ್ಜಿ. ದಿ: ೧೬.೮. ೧೮೮೦. (ಬೇಲಿಮಠ)
124. ಅದೇ ಅರ್ಜಿ.
125. ಬೆಂಗಳೂರಿನ ಮೂರು ಪ್ರಮುಖ ಪೇಟೆಗಳು : ಅರಳೆಪೇಟೆ, ದೊಡ್ಡಪೇಟೆ, ಮಾಮೂಲುಪೇಟೆ. ೧೮೮೦ರ ವೇಳೆಗೆ ಅರಳೆಪೇಟೆಯೊಂದರೊಳಗೇ ೧೪ ಉಪಪೇಟೆಗಳು ಇದ್ದುದಾಗಿ ತಿಳಿದುಬರುತ್ತದೆ. (ಬೆಂಗಳೂರು ತಾಲ್ಲೂಕು ಕಛೇರಿ ದಾಖಲೆ. ಸಂ : ೧೨೧. ದಿ: ೨೫.೧೧.೧೯೦೮. ಬೇಲಿಮಠ.)
126. 'ಹವ್ಯ-ಕವ್ಯ' ಎಂದರೆ-ದೇವತೆಗಳಿಗೆ ಹೋಮದಲ್ಲಿ ಅರ್ಪಿಸುವ ಹವಿಸ್ಸು ಮತ್ತು ಪಿತೃಗಳಿಗೆ ಶ್ರಾದ್ಧಾದಿಗಳಲ್ಲಿ ಕೊಡುವ ಆಹುತಿ. (ಕನ್ನಡ ನಿಘಂಟು. ಸಂ-೮. ಕನ್ನಡ ಸಾಹಿತ್ಯ ಪರಿಷತ್ತು, ಪು. ೮೮೫೩.)
127. ಮೈಸೂರು ದೊರೆಗಳ ಸೀಮೆಯ ರಾಜ್ಯಭಾರದ ಚೀಫ್ ಕಮೀಷನರ್ ಸಾಹೇಬರ ಜನಾಬಿಗೆ ಬೆಂಗಳೂರು ಷಹರ್‌ಗೆ ಸೇರಿದ ಅರಳೆಪೇಟೆಯ ಒಳಿಕವಾದ ೧೪ ಪೇಟೆಗಳಲ್ಲಿ ವಾಸವಾಗಿರುವ ಲಿಂಗಾಯ್ತ ಜನಗಳು ಬರೆದುಕೊಂಡ ಅರ್ಜಿ. ದಿ: ೨೪.೧೧.೧೮೭೯. (ಬೇಲಿಮಠ)
128. So. No : 42/1891-92. dt: 31.8.1892. Assistant Commissioner Court. Bangalore.
129. ಬ.ನ. ಸುಂದರರಾವ್. ಬೆಂಗಳೂರಿನ ಇತಿಹಾಸ. ಪು. ೩೬೧.
130. ಅರಳೆಪೇಟೆ ದೇಶದ ಕಳಸಪ್ಪಶೆಟ್ಟಿಯು ಸರ್ಕಾರಕ್ಕೆ ಬರೆದುಕೊಂಡ ಮನವಿ. ದಿ: ೧೬.೮.೧೮೮೦.
131. ಮೈಸೂರು ದೊರೆಗಳ ಸೀಮೆಯ ರಾಜ್ಯಭಾರದ ಚೀಫ್ ಕಮೀಷನರ್ ಸಾಹೇಬರ ಜನಾಬಿಗೆ. (ಪೂರ್ವೋಕ್ತ)
132. Muzrai File No : 52/1922-23. Sl. No: 1-6. P. 23.
133. ಹೇಳಿಕೆ : ಸಿದ್ಧಲಿಂಗಸ್ವಾಮಿ (೯೨)ಗಳು ಹೊಳವನಹಳ್ಳಿಮಠ. ತುಮಕೂರು ಜಿಲ್ಲೆ.
134. Muzrai File No : 273/1927. Sl.No : 1-6. P. 11, 12.
135. ದೇಶದ ಸಿದ್ಧಬಸಪ್ಪಶೆಟ್ಟಿಯು ತಾಲ್ಲೂಕು ಅಮಲ್ದಾರ್ ಕಛೇರಿಗೆ ನೀಡಿರುವ ಹೇಳಿಕೆ ಪತ್ರ. ದಿ : ೧೪.೮.೧೯೧೬.
136. Muzrai Miss-case No : 65/1922-23. dt: 12.9.1925. P. 3.
137. Case No : 843. dt: 25.8.1908. Schedule A. P.1.2. Amildar Court, Bangalore.
138. Muzrai File No : 98/1935. Sl. No: 1-8. P. 22-23.
139. ದೇಶದ ಸಿದ್ಧಬಸಪ್ಪ ಶೆಟ್ಟಿಗೆ ಮುನಿಸಿಪಲ್ ಹೆಲ್ತ್ ಆಫೀಸಿನಿಂದ ಜಾರಿಯಾಗಿರುವ ನೋಟೀಸ್. ನಂ: ೧೬/೧೬. ದಿ:೨೭.೧೧.೧೯೧೬.
140. ಇವರುಗಳ ಸಮಾಧಿಗಳನ್ನು ಇಂದಿಗೂ ಕೋಳದಮಠದ ಆವರಣದಲ್ಲಿ ನೋಡಬಹುದಾಗಿದೆ.
141. ಹೇಳಿಕೆ : ಜಿ.ವಿ. ಶಿವಸ್ವಾಮಿ (೫೬) ಉಪನ್ಯಾಸಕರು. ಮಹಾನಗರಪಾಲಿಕೆ ಕಿರಿಯಕಾಲೇಜು, ಟಾಸ್ಕರ್ ಟೌನ್. ಬೆಂಗಳೂರು.

ಅಧ್ಯಾಯ - ಏಳು

# ಮಠಗಳು-ಧಾರ್ಮಿಕವಾಗಿ

## ಅಧ್ಯಾಯ - ಏಳು

# ೭. ಮಠಗಳು-ಧಾರ್ಮಿಕವಾಗಿ

ಮಾನವ ಸಂಸ್ಕೃತಿಯಲ್ಲಿ ಧರ್ಮಕ್ಕೆ ಮಹತ್ವದ ಸ್ಥಾನವಿದೆ. ಧರ್ಮವು ಯಾವುದೇ ಒಂದು ಜನಾಂಗದ ಆತ್ಮಸ್ವರೂಪವಿದ್ದಂತೆ. ಸಾಮಾನ್ಯವಾಗಿ ಧರ್ಮ ಎಂದರೆ ನೀತಿ-ನಿಯಮಗಳಿಂದ ಒಡಗೂಡಿದ ಸತ್ಕಾರ್ಯ ಎಂಬ ಅರ್ಥವಿದ್ದರೂ; ವಿಶೇಷವಾಗಿ ಆಧ್ಯಾತ್ಮ ಸಂಬಂಧವುಳ್ಳದ್ದು ಎಂದೇ ಅರ್ಥೈಸುವುದುಂಟು. ಇಲ್ಲಿ ಆಧ್ಯಾತ್ಮ ದೃಷ್ಟಿಯಿಂದ ಜೀವನವನ್ನು ನಡೆಸುವುದು ಧರ್ಮ ಎನಿಸಿಕೊಳ್ಳುತ್ತದೆ. ಧರ್ಮವು ವ್ಯಷ್ಟಿಯಿಂದ ಸಮಷ್ಟಿಯವರೆಗೆ ಪ್ರತಿಯೊಂದು ಹಂತದಲ್ಲೂ ಪ್ರಭಾವ ಬೀರುವಂತಹುದು. ಅದರಲ್ಲೂ ವ್ಯಕ್ತಿಯ ಆಂತರಿಕ ಹಾಗೂ ಬಾಹ್ಯ ಜೀವನದ ಮೇಲೆ ವಿಶೇಷವಾಗಿ ಬೆಳಕು ಚೆಲ್ಲುವಂತಹುದು.

ಭಾರತೀಯ ಸಂದರ್ಭದಲ್ಲಿ ವೈದಿಕ ಧರ್ಮವು ಬಹಳ ಪುರಾತನವಾದದ್ದು. ಕಾಲಕಾಲಕ್ಕೆ ಈ ಧರ್ಮದೊಳಗೆ ಉಂಟಾಗಿದ್ದ ಸಾರ್ವತ್ರಿಕ ಅಪಮೌಲ್ಯಗಳ ವೈರುಧ್ಯಗಳಿಂದಾಗಿ ಹಲವಾರು ವೈದಿಕೇತರ ಧರ್ಮಗಳ ಉದಯಕ್ಕೆ ನಾಂದಿಯಾಯಿತು. ಇಂತಹ ವೈದಿಕೇತರ ಪರಂಪರೆಯ ಹಿನ್ನೆಲೆಯಲ್ಲಿ ಉದಯವಾದ ಪ್ರಮುಖ ಧರ್ಮಗಳಲ್ಲೊಂದು ಕನ್ನಡ ನಾಡಿನ ವೀರಶೈವ ಧರ್ಮ. ಜೊತೆಗೆ ಅಂದಿನ ಎಲ್ಲಾ ಧರ್ಮಗಳವರೂ ಕೂಡ ತಮ್ಮ ಧಾರ್ಮಿಕ ಪ್ರತಿಪಾದನೆಗೆ ಹಾಗೂ ಪ್ರಚಾರಾರ್ಥವಾಗಿ, ತಮ್ಮದೇ ಆದ ಮಠ-ಮಂದಿರಗಳೆಂಬ ಧಾರ್ಮಿಕ ಕೇಂದ್ರಗಳ ನಿರ್ಮಾಣಕ್ಕೂ ಕಾರಣವಾಗಿದ್ದರು. ಈ ಹಿನ್ನೆಲೆಯಲ್ಲಿ ಹನ್ನೆರಡನೆಯ ಶತಮಾನದಿಂದ ಈಚೆಗೆ ಕಾರ್ಯಪ್ರವೃತ್ತವಾದ ವೀರಶೈವಮಠಗಳು, ಹದಿನೈದು ಮತ್ತು ಹದಿನಾರನೆಯ ಶತಮಾನದ ವೇಳೆಗೆ ನಾಡಿನಾದ್ಯಂತ ವ್ಯಾಪಕವಾದ ಮಟ್ಟದಲ್ಲಿ ತಮ್ಮ ಕಾರ್ಯಕ್ಷೇತ್ರಗಳನ್ನು ವಿಸ್ತರಿಸಿಕೊಂಡವು. ಇಪ್ಪತ್ತನೆಯ ಶತಮಾನದಲ್ಲೂ ಕೂಡ ನಾಡಿನ ಪ್ರಭಾವಿಧರ್ಮಗಳಲ್ಲಿ ಒಂದಾಗಿ ವೀರಶೈವಧರ್ಮವು ಉಳಿದಿದ್ದಲ್ಲಿ, ಈ ಧರ್ಮದ ಮಠ-ಮಂದಿರಗಳೇ ಮುಖ್ಯಕಾರಣವೆಂಬುದು ಸ್ತುತ್ಯರ್ಹ. ಹೀಗೆ ಬೆಂಗಳೂರಿನ ವೀರಶೈವಮಠಗಳೂ ಕೂಡ ಇಂತಹುದೇ ಹಿನ್ನೆಲೆಯುಳ್ಳವಾಗಿದ್ದವು ಎಂಬುದನ್ನು ಮುಂದೆ ನೋಡಬಹುದಾಗಿದೆ.

ವೀರಶೈವ ಸಮಾಜಬಾಂಧವರಲ್ಲಿ ಎಲ್ಲಾ ಧಾರ್ಮಿಕ ಆಚರಣೆಗಳೂ ಅಯ್ಯನವರ(ಗುರುಗಳ) ನೇತೃತ್ವದಲ್ಲಿ ನಡೆಯುವುದೇ ಸಂಪ್ರದಾಯ. ಇವರಲ್ಲಿ ಜನನ, ಮದುವೆ, ಮರಣಗಳ ಆದಿಯಾಗಿ ಪ್ರತಿಯೊಂದು ಸಂಸ್ಕಾರವೂ ಅನೇಕ ವಿಧಿ-ವಿಧಾನಗಳನ್ನು ಒಳಗೊಂಡಿದ್ದು, ವೈದಿಕ ಸಂಪ್ರದಾಯಗಳಿಗೆ ಪರ್ಯಾಯ ಸೂತ್ರವುಳ್ಳವಾಗಿವೆ. ವೀರಶೈವರ ಧಾರ್ಮಿಕ ಸಂಸ್ಕಾರಗಳಾದ ಲಿಂಗಧಾರಣೆ, ನಾಮಕರಣ, ಜಾವಳ, ದೀಕ್ಷಾಬೋಧೆ, ಮದುವೆ, ಮರಣ ಇವೇ ಮೊದಲಾದ ವಿಧಿಗಳನ್ನು ಪೂರೈಸಬೇಕಾದಾಗ ಗುರುಗಳು ಪ್ರಧಾನ ಪಾತ್ರವಹಿಸುತ್ತಾರೆ.[1] ಇಂತಹ ಧಾರ್ಮಿಕ ಅವಶ್ಯಕತೆಗಳ ಪೂರೈಕೆಗಾಗಿಯೇ ಬೆಂಗಳೂರಿನಲ್ಲಿ ಅನೇಕ ಮಠಗಳ ಉದಯವಾಗಿದ್ದುದಾಗಿ ಹೇಳುವುದುಂಟು.[2] ಹೀಗೆ ಧಾರ್ಮಿಕ ಆಚರಣೆಗಳಿಗೆ ಸಂಬಂಧಿಸಿದಂತೆ ಬೆಂಗಳೂರಿನ ಮಠಗಳು ನಡೆಸುತ್ತಿದ್ದ ಚಟುವಟಿಕೆಗಳನ್ನು ಕುರಿತು ಕೆಳಕಂಡಂತೆ ವಿವರಿಸಲಾಗಿದೆ.

### ೭.೧. ಸಾಮೂಹಿಕ ದೀಕ್ಷೆ

ದೀಕ್ಷೆಯು ಪವಿತ್ರ ಕಾರ್ಯಗಳಿಗಾಗಿ ಆರಂಭದಲ್ಲಿ ನಡೆಸುವ ಒಂದು ವಿಶೇಷ ಸಂಸ್ಕಾರ. ಇದೊಂದು ವ್ರತ ಅಥವಾ ನಿಯಮ. ಉಪದೇಶವನ್ನು ನೀಡುವಂತಹುದು.[3]

ವೀರಶೈವ ಪರಿಭಾಷೆಯಲ್ಲಿ ಹೇಳುವುದಾದರೆ 'ಗುರುವು ಶಿಷ್ಯನಿಗೆ ಅನುಗ್ರಹಿಸುವ ಮತಸಂಸ್ಕಾರ ವಿಶೇಷ'.[4] 'ಸಿದ್ಧಾಂತ ಶಿಖಾಮಣಿ'ಯಲ್ಲಿ ''ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ। ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ॥''[5] ಎಂದಿದೆ. ಅಂದರ 'ಮಹಾಲಿಂಗ ಸ್ವರೂಪದ ಶಿವಜ್ಞಾನವನ್ನಿತ್ತು, ದೇಹಿಯಲ್ಲಿರುವ ಮಲಪಾಶಬಂಧನಗಳನ್ನು ಬಿಡಿಸುವುದೇ ದೀಕ್ಷೆ' ಎನಿಸುತ್ತದೆ. ಲಕ್ಕಣ್ಣದಂಡೇಶನು ತನ್ನ 'ಶಿವತತ್ವಚಿಂತಾಮಣಿ'ಯಲ್ಲಿ-''ದೀಯತೇ ಎನೆಲಿಂಗಸಂಬಂಧ ತತ್‌ಕ್ಷಣಂ ಕ್ಷೀಯತೇ ಎನೆ ಮಲತ್ರಯ ಹರಣವದರಿಂದ ದೀಯತೇ ಕ್ಷೀಯತೇ ಎಂಬುಭಯ ಪದಯೋಗವೇ ದೀಕ್ಷೆ ಎಂದೆನಿಪುದು'', ಎಂದಿದ್ದಾನೆ.[6]

ವಿಶೇಷಾರ್ಥದಲ್ಲಿ ದೀಕ್ಷೆ ಎಂದರೆ ಒಂದು ಆಗಮಿಕ ವಿಧಿ; ಧಾರ್ಮಿಕಸಂಸ್ಕಾರ; ಅನುಗ್ರಹ; ಗುರುಕಾರುಣ್ಯ ಎಂಬ ಅರ್ಥಗಳಿವೆ.[7] ಗುರುವು ದೀಕ್ಷಾ ಕಾಲದಲ್ಲಿ ತನ್ನ ಯೋಗಬಲದಿಂದ ಶಿಷ್ಯನ ಚೈತನ್ಯವನ್ನು ಗಟ್ಟಿಗೊಳಿಸಿ ಹೊರಗೆ ಇಷ್ಟಲಿಂಗವೆಂದು ಸ್ಥೂಲಶರೀರಕ್ಕೂ, ಒಳಗೆ ಪ್ರಾಣಲಿಂಗವೆಂದು ಸೂಕ್ಷ್ಮಶರೀರಕ್ಕೂ, ಭಾವಲಿಂಗವೆಂದು ಕಾರಣಶರೀರಕ್ಕೂ ಜೋಡಿಸಿ ಅವುಗಳ ಅನುಸಂಧಾನ ಕ್ರಮವನ್ನು ತೋರಿಸಿಕೊಡುತ್ತಾನೆ.[8] ಆದ್ದರಿಂದ ಇಲ್ಲಿ ಗುರುವಿಗೆ ಮಹತ್ವದ ಸ್ಥಾನವಿದೆ. ದೀಕ್ಷೆಯಲ್ಲಿ ವೇದಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ ಎಂಬುದಾಗಿ ಮೂರು ಬಗೆಗಳಿವೆ.[9] ಮತ್ತೆ ದೀಕ್ಷೆಯನ್ನು ಕೊಡುವ ಗುರುವಿಗೂ ಹಾಗೂ ಪಡೆಯುವ ಶಿಷ್ಯನಿಗೂ ಕೆಲವು ನೀತಿನಿಬಂಧನೆಗಳಿವೆ.[10] ಜೊತೆಗೆ ವೀರಶೈವರಲ್ಲಿ 'ದೀಕ್ಷೆಯಾಗದೆ ಮೋಕ್ಷವಾಗದು' ಎಂಬ ಮಾತಿದೆ.[11] ದಶಕರ್ಮಗಳಲ್ಲಿ ಒಂದಾದ ದೀಕ್ಷೆಯು ಮೋಕ್ಷಕ್ಕೆ ಸಾಧನವೆಂಬುದು ಶಾಸ್ತ್ರಾಧಾರಿತ ನಂಬಿಕೆಯಾಗಿದೆ. ಸಾಮಾನ್ಯವಾಗಿ ಎಂಟುವರ್ಷ ತುಂಬುವುದರೊಳಗೆ ದೀಕ್ಷೆಯಾಗಬೇಕೆಂಬುದು ನಿಯಮ.[12] ವೈಶಾಖದಿಂದ ಫಾಲ್ಗುಣಮಾಸದವರೆಗೆ ಒಂದು ಶುಭ ಮುಹೂರ್ತ ದೊಳಗೆ ಈ ವಿಧಿಯನ್ನು ನೆರವೇರಿಸಲಾಗುತ್ತದೆ. ಲಿಂಗಧಾರಣಾ ದೀಕ್ಷೆಯು ಲಿಂಗ ಜಾತಿ ಭೇದವಿಲ್ಲದೆ ಹುಟ್ಟುವ ಪ್ರತಿಯೊಂದು ಗಂಡು ಹೆಣ್ಣಿಗೂ ಅನ್ವಯ ವಾಗುತ್ತದೆ.[13]

ಲಿಂಗದೀಕ್ಷಾ ವಿಧಾನವನ್ನು ಕುರಿತು ಸಂಗ್ರಹರೂಪದಲ್ಲಿ ಹೇಳುವುದಾದರೆ-''ಪಂಚಕಳಸ ಸ್ಥಾಪನೆ ಮಾಡಿ ಸುತ್ತಲೂ ನೂಲು (ತಂತು) ಸುತ್ತಬೇಕು. ನಾಲ್ಕೂ ದಿಕ್ಕಿನಲ್ಲಿ ಕಳಸವಿಡಬೇಕು. ಮಧ್ಯೆ ಒಂದು ಕಳಸವಿಡುವುದು. ಪಂಚಕಳಸಗಳಿಗೆ ವಸ್ತ್ರ ಧರಿಸಬೇಕು. ಪಂಚರತ್ನ, ಸುವರ್ಣಾದಿಗಳನ್ನು ಕಳಸಕ್ಕೆ ಹಾಕಬೇಕು. ತಳಿರುತೋರಣಗಳಿಂದ ಅವುಗಳನ್ನು ಶೃಂಗರಿಸಿ ಸುಜಲವನ್ನು ತುಂಬಿ, ಪುಷ್ಪ, ಭಸ್ಮ, ಗಂಧಾಕ್ಷತೆಗಳನ್ನು ಧರಿಸಬೇಕು. ಚೌಕಮಧ್ಯೆ ಶಿಷ್ಯನನ್ನು ಕುಳ್ಳಿರಿಸಬೇಕು. ಮಂಡಲದಲ್ಲಿ ಶಿಷ್ಯ ಕುಳಿತುಕೊಳ್ಳುವ ದಿಕ್ಕು ಅವನು ಯಾವ ವೇದದವನು ಎಂಬುದರ ಮೇಲೆ ಅವಲಂಬಿತ ವಾಗಿರುತ್ತದೆ. ಋಗ್ವೇದಿಯಾದರೆ ಪೂರ್ವಕ್ಕೆ, ಯಜುರ್ವೇದಿಯಾದರೆ ದಕ್ಷಿಣಕ್ಕೆ, ಸಾಮವೇದಿಯಾದರೆ ಪಶ್ಚಿಮಕ್ಕೆ ಮತ್ತು ಅಥರ್ವಣವೇದಿಯಾದರೆ ಉತ್ತರ ದಿಕ್ಕಿನಲ್ಲಿ ಮಂಡಿಸಿರಬೇಕು. ಶಿವಪಂಚಾಕ್ಷರಿಯೊಂದಿಗೆ ಕಲಶಪೂಜೆ ಆರಂಭವಾಗುತ್ತದೆ. ಕಲಶಕ್ಕೆ ವೈಭವಯುತ ಪೂಜೆಗೈಯಬೇಕು. ದರ್ಭಾಗ್ರದಿಂದ ಕಲಶೋದಕವನ್ನು ಮೂರು ಬಾರಿ ಅಭಿಷೇಕಮಾಡಿ ಕಲಶ ಯಥಾಸ್ಥಾನದಲ್ಲಿ ಇರಿಸಬೇಕು. ಶ್ರೀಗುರುವು ತನ್ನ ಹಸ್ತವನ್ನು ಶಿವನ ಕರವೆಂದು ಶಿಷ್ಯನ ತಲೆಯಮೇಲಿರಿಸಿ, ಶಿರವೇ ಶಿವನ ಸಿಂಹಾಸನವೆಂದು ಮನದಲ್ಲಿ ಶಿವನ ಧ್ಯಾನಿಸಿ ಭಾವಪೂಜೆ ಮಾಡಿ ಶಿರದೊಳಗೇ ಶಿವನಿಹನೆಂದು ಕಿವಿಯಲ್ಲಿ ರಹಸ್ಯಪಂಚಾಕ್ಷರಿ ಬೋಧೆ ಕೊಡುವುದು. ಶಿವಕಳೆಯನ್ನು ಲಿಂಗದಲ್ಲಿ ಸ್ಥಾಪಿಸಿ ಗುರುವು ಕರದ ಲಿಂಗವನ್ನು ಸ್ಮರಿಸಿ ಶಿಷ್ಯನಿಗೆ ಅರ್ಪಿಸುವುದು.''[14]

ಧರ್ಮಸಂರಕ್ಷಣಾರ್ಥವಾಗಿಯೇ ಸದಾ ಕಂಕಣಬದ್ಧವಾಗಿದ್ದ ಕೆಲವು ವೀರಶೈವಮಠಗಳಲ್ಲಿ ಲಿಂಗಧಾರಣಾ ದೀಕ್ಷಾವಿಧಿಯನ್ನು ಸಾಮೂಹಿಕವಾಗಿ ನೆರವೇರಿಸುವ ಸಂಪ್ರದಾಯವಿತ್ತು. ಬೆಂಗಳೂರಿನ ವೀರಶೈವಮಠಗಳಲ್ಲಿ ನಮಗೆ ದೊರೆಯುವ ಮೊಟ್ಟಮೊದಲ ನಿದರ್ಶನ ೧೮೪೨ರಲ್ಲಿ ಸರ್ಪಭೂಷಣಮಠದ ಪರವಾಗಿ ನಡೆದ ಸಾಮೂಹಿಕ ದೀಕ್ಷಾ ಕಾರ್ಯ. ಬೆಂಗಳೂರಿನ ಕೆಂಪುನೂಲು ನಂಜುಂಡಯ್ಯ ಮತ್ತು ಅವನ ಕುಲಬಾಂಧವರಾಗಿದ್ದ ಏಳುನೂರು ಮಂದಿಗೆ ಸರ್ಪಭೂಷಣಮಠದ ಫಾಲಲೋಚನಸ್ವಾಮಿಗಳು ಶಿವಗಂಗೆಯ ಮೇಲಿನ ಗವಿಮಠದ ರಾಚೋಟಿಸ್ವಾಮಿಗಳವರ ಮೂಲಕ,

ಸಾಮೂಹಿಕ ಲಿಂಗಧಾರಣಾ ದೀಕ್ಷೆಯನ್ನು ಮಾಡಿಸಿರುವುದಾಗಿ ಅಧಿಕೃತ ದಾಖಲೆಗಳಿವೆ.[15]

ಸಾಮೂಹಿಕ ದೀಕ್ಷಾಕಾರ್ಯಗಳನ್ನು ಬೆಂಗಳೂರಿನ ಹಲವಾರು ವೀರಶೈವಮಠಗಳು ಬಹಳ ಹಿಂದಿನಿಂದಲೂ ನಡೆಸಿಕೊಂಡುಬಂದಿವೆಯಾದರೂ ಅಧಿಕೃತವಾಗಿ ೧೯೧೦ ರಿಂದ ಈಚೆಗೆ ಇಂತಹ ಅನೇಕ ನಿದರ್ಶನಗಳು ದೊರೆಯುತ್ತವೆ. ೧೯೧೧ರಲ್ಲಿ ಅರಳೆಪೇಟೆಯ ಬೇಲಿಮಠದಲ್ಲೂ; ೧೯೧೨ರಲ್ಲಿ ದೊಡ್ಡಪೇಟೆಯ ಕರಿಸಿದ್ಧೇಶ್ವರಮಠದಲ್ಲೂ ಮತ್ತು ೧೯೧೪ರಲ್ಲಿ ಮನೆವಾರ್ತೆಪೇಟೆಯ ಶಂಕರದೇವರಮಠದಲ್ಲೂ ಇಂತಹ ಸಾಮೂಹಿಕ ದೀಕ್ಷಾಕಾರ್ಯಗಳನ್ನು ನೆರವೇರಿಸಲಾಗಿತ್ತು.[16] ಇಲ್ಲಿ ದೀಕ್ಷಾವಿಧಿಯನ್ನು ನೆರವೇರಿಸುವಾಗ ಪಟ್ಟದ (ಗುರುವರ್ಗದ) ಮಠಾಧ್ಯಕ್ಷರೊಬ್ಬರು ಇರಲೇಬೇಕಾಗಿತ್ತು. ದೀಕ್ಷಾರ್ಥಿಗಳು ಸೂಕ್ತ ಮಡಿ, ಕರಡಿಗೆ ಹಾಗೂ ತಮ್ಮ ಶಿವಲಿಂಗಗಳೊಂದಿಗೆ ಒಂದು ದಿನ ಮುಂಚಿತವಾಗಿ ದೀಕ್ಷಾಸ್ಥಳಕ್ಕೆ ಬರಬೇಕಾಗಿತ್ತು. ಶಿವದೀಕ್ಷಾಕಾರ್ಯವು ವಿರಕ್ತಮಠಗಳಲ್ಲೇ ನಡೆದರೂ, ದೀಕ್ಷಾವಿಧಿಯನ್ನು ಬೋಧಿಸುವವರು ಗುರುವರ್ಗದ (ಪಟ್ಟದ) ಗುರುಗಳೇ ಆಗಿರುತ್ತಿದ್ದುದು ಗಮನಾರ್ಹ. ಜೊತೆಗೆ ದೀಕ್ಷಾಮಹೋತ್ಸವದ ದಿನ ಆಯಾ ಮಠದ ಹಿರಿಯ ಗುರುಗಳ ಗದ್ದುಗೆಗಳಿಗೆ 'ರುದ್ರಾಭಿಷೇಕ',[17] 'ಸಹಸ್ರಬಿಲ್ವಾರ್ಚನೆ'[18] ಗಳನ್ನು ನೆರವೇರಿಸಲಾಗುತ್ತಿತ್ತು. ದೀಕ್ಷಾವಿಧಿಯು ಸಾಮಾನ್ಯವಾಗಿ ಪ್ರತಿವರ್ಷದ ವೈಶಾಖಮಾಸದಲ್ಲೇ ನಡೆಯುತ್ತಿತ್ತು. ಆ ದಿನ ಬೆಳಿಗ್ಗೆ ೬ ರಿಂದ ೮ ಗಂಟೆಯೊಳಗಿನ ಮಿಥುನಲಗ್ನದಲ್ಲಿ ಈ ವಿಧಿಯನ್ನು ಪೂರೈಸಲಾಗುತ್ತಿತ್ತು. ಅಂದು ಮಧ್ಯಾಹ್ನದ ವೇಳೆಗೆ 'ಗಣಾರಾಧನೆ'[19] ನಡೆಯುತ್ತಿತ್ತು.

ಚಿಕ್ಕಪೇಟೆಯ ಮಹಾಂತರಮಠವು ಬಹಳ ಹಿಂದಿನಿಂದಲೂ ಬೆಂಗಳೂರಿನ ವೀರಶೈವರ ಪ್ರಮುಖ ಧಾರ್ಮಿಕ ಕೇಂದ್ರವಾಗಿತ್ತು. ಅಧಿಕೃತವಾಗಿ ೧೯೨೨ ರಿಂದಲೂ ಇಲ್ಲಿ ಸಾಮೂಹಿಕ ಶಿವದೀಕ್ಷಾಕಾರ್ಯಗಳು ನಡೆಯುತ್ತಿದ್ದುದನ್ನು ಗುರುತಿಸಬಹುದಾಗಿದೆ.[20] ಮುಂದೆ ೧೯೩೪ರಲ್ಲಿ ಗಂಗಾಧರ ಶಿವಾಚಾರ್ಯರು ಮಹಾಂತರಮಠದ ಅಧಿಪತಿಗಳಾಗಿ ಬಂದಮೇಲೆ, ಇಲ್ಲಿ ಪ್ರತಿವರ್ಷವೂ ತಪ್ಪದೆ ಸಾಮೂಹಿಕ ಶಿವದೀಕ್ಷಾಕಾರ್ಯಗಳು ನಡೆಯತೊಡಗಿದವು.[21] ಇಂದಿಗೂ ಕೂಡ ಈ ಮಠದ ಆಶ್ರಯದಲ್ಲಿ ಪ್ರತಿ ವರ್ಷವೂ ತಪ್ಪದೇ ಶಿವದೀಕ್ಷಾಕಾರ್ಯವು ನಡೆದು ಬಂದಿರುವುದು ಒಂದು ವಿಶೇಷವಾಗಿದೆ. ಸಾಮಾನ್ಯವಾಗಿ ಸಂಕ್ರಾಂತಿ ಯಿಂದ ಯುಗಾದಿಯ ನಡುವೆ ಬೆಂಗಳೂರಿನ ಒಂದಲ್ಲ ಒಂದು ಮಠದಲ್ಲಿ ಸಾಮೂಹಿಕ ದೀಕ್ಷಾ ವಿಧಿಯು ನೆರವೇರುವುದು ಈ ಹೊತ್ತಿಗೂ ರೂಢಿಯಲ್ಲಿದೆ.

ಕೆಲವುವೇಳೆ ಅನುಕೂಲಸ್ಥ ಭಕ್ತರು ಮಠಗಳಲ್ಲಿ ನಡೆಯುತ್ತಿದ್ದ ಶಿವದೀಕ್ಷಾಕಾರ್ಯಗಳನ್ನು ತಮ್ಮ ಪಿತೃಪಿತಾಮಹರ ಸ್ಮರಣಾರ್ಥವಾಗಿ ನಡೆಸಿಕೊಡುತ್ತಿದ್ದುದೂ ಉಂಟು. ದಿನಾಂಕ: ೨೬.೧೧.೧೯೨೬ ರಲ್ಲಿ ಚಿಕ್ಕಪೇಟೆಯ ಶಾಂತವೀರಪ್ಪನವರ ವಿರೂಪಾಕ್ಷಪ್ಪನವರ ಬುಳ್ಳಪ್ಪ ಎಂಬುವರು ಮಹಾಂತರ ಮಠದಲ್ಲಿ ನಡೆದ ಸಾಮೂಹಿಕ ಲಿಂಗದೀಕ್ಷೆಯ ಧರ್ಮಸೇವೆಯನ್ನು ತಮ್ಮ ಸ್ವಂತ ಖರ್ಚಿನಿಂದ ನಡೆಸಿಕೊಟ್ಟಿದ್ದಲ್ಲದೆ, ಅಂದು ಮಧ್ಯಾಹ್ನ ಮಠದಲ್ಲಿ ಸಾಮೂಹಿಕ ಸಮಾರಾಧನೆಯನ್ನೂ ವ್ಯವಸ್ಥೆ ಗೊಳಿಸಿದ್ದರು.[22]

ಮತ್ತೆ ಕೆಲವು ಸಾರಿ ಬೆಂಗಳೂರಿನ ಮಠಗಳ ವತಿಯಿಂದಲೇ ಗ್ರಾಮಾಂತರ ಭಾಗಗಳಲ್ಲೂ ಇಂತಹ ಸಾಮೂಹಿಕ ದೀಕ್ಷಾಸೌಲಭ್ಯಗಳನ್ನು ಕಲ್ಪಿಸಿಕೊಡಲಾಗುತ್ತಿತ್ತು. ಬೇಲಿಮಠದ ಶಿವರುದ್ರಸ್ವಾಮಿಗಳು ೧೯೧೪ರಲ್ಲಿ ನೆಲಮಂಗಲ ತಾಲ್ಲೂಕು ಹುಸ್ಕೂರು ಗ್ರಾಮದಲ್ಲಿ[23] ತಮ್ಮ ಹಿರಿಯ ಗುರುಗಳ ಗದ್ದುಗೆಯ ಬಳಿಯೂ; ೧೯೨೮ರಲ್ಲಿ ಇದೇ ತಾಲ್ಲೂಕು ಮಲ್ಲರಬಾಣವಾಡಿಯ ಮಠದಲ್ಲೂ[24] ಇಂತಹ ಧಾರ್ಮಿಕ ಸೇವೆಯನ್ನು ವ್ಯವಸ್ಥೆಗೊಳಿಸಿದ್ದ ಕರಪತ್ರಗಳಿವೆ. ಗ್ರಾಮಾಂತರ ಭಾಗದ ವೀರಶೈವ ಮತೀಯರ ಅನುಕೂಲಕ್ಕಾಗಿಯೇ ಬೇಲಿಮಠದ ಶಿವರುದ್ರಸ್ವಾಮಿಗಳು (೧೯೦೦-೧೯೪೧)ತಮ್ಮ ಬೇರೆ ಬೇರೆ ಶಾಖಾಮಠಗಳಲ್ಲಿ ಪ್ರತಿವರ್ಷವೂ ಇಂತಹ ಶಿವದೀಕ್ಷಾ ಕಾರ್ಯಗಳನ್ನು ನೆರವೇರಿಸುತ್ತಿದ್ದುದಾಗಿ ತಿಳಿದುಬರುತ್ತದೆ.[25]

ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ವೀರಶೈವ ಮತದ ಆಚಾರ ವಿಚಾರಗಳಿಗೆ ಒಪ್ಪಿ ಶಿವದೀಕ್ಷೆಯನ್ನು ಬಯಸಿಬಂದ ಅನ್ಯಮತೀಯರಿಗೂ ಸಾಮೂಹಿಕ ದೀಕ್ಷಾಕಾರ್ಯಗಳನ್ನು ನೆರವೇರಿಸಲಾಗುತ್ತಿತ್ತು. ೧೯೩೯ರ

ನವೆಂಬರ್ ೨೩ ರಂದು ತುಮಕೂರಿನ ಸಿದ್ಧಗಂಗಾ ಕ್ಷೇತ್ರದಲ್ಲಿ ವೀರಶೈವೇತರ ಭಕ್ತರಿಗಾಗಿಯೇ ಇಂತಹ ಸಾಮೂಹಿಕ ದೀಕ್ಷಾವಿಧಿಯನ್ನು ಏರ್ಪಡಿಸಲಾಗಿತ್ತು.[26] ಆಗ ಮೈಸೂರು, ಬೆಂಗಳೂರು, ಕಾಚನಾಯ್ಕನಹಳ್ಳಿ, ಮೈಲನಹಳ್ಳಿ, ಕಾಚೋಹಳ್ಳಿ, ಕೊರಟಗೆರೆ, ಪಾಲನಹಳ್ಳಿ ಇನ್ನೂ ಮುಂತಾದ ಗ್ರಾಮಗಳಿಗೆ ಸೇರಿದ ಆಚಾರವಿಚಾರವಂತರೂ, ಶುದ್ಧಸಸ್ಯಾಹಾರಿಗಳೂ ಆಗಿದ್ದ ನೂರಾಮೂವತ್ತಮೂರು ಮಂದಿ ದೀಕ್ಷಾಪೇಕ್ಷಿಗಳಿಗೆ ವೀರಶೈವ ಧರ್ಮಾನುಸಾರ ಶಿವದೀಕ್ಷೆಯನ್ನು ಅನುಗ್ರಹಿಸಲಾಗಿತ್ತು.[27] ಈ ಸಂದರ್ಭದಲ್ಲಿ ಬೆಂಗಳೂರು ಹಾಗೂ ನೆಲಮಂಗಲ ತಾಲ್ಲೂಕು ಮೈಲನಹಳ್ಳಿ ಗ್ರಾಮಗಳಿಂದ ಬೇಲಿಮಠದ ಶಿವರುದ್ರಸ್ವಾಮಿಗಳು ತಮ್ಮ ಪರವಾಗಿ ಇಪ್ಪತ್ತಾರುಮಂದಿ ದೀಕ್ಷಾರ್ಥಿಗಳನ್ನು ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದರು.[28]

ಹೀಗೆ ಬೆಂಗಳೂರಿನ ವೀರಶೈವಮಠಗಳು ವೀರಶೈವರ ಪ್ರಮುಖ ಧಾರ್ಮಿಕ ಸಂಸ್ಕಾರಗಳಲ್ಲಿ ಒಂದಾದ ಶಿವದೀಕ್ಷಾವಿಧಿಯನ್ನು, ಸಾಮೂಹಿಕವಾಗಿ ಹಾಗೂ ಕೆಲವು ವೇಳೆ ಆಯಾ ಕುಟುಂಬಗಳ ಮಟ್ಟದಲ್ಲೂ ನಡೆಸುತ್ತಾ ಗ್ರಾಮ ಹಾಗೂ ಪಟ್ಟಣಗಳ ಆದಿಯಾಗಿ ಧಾರ್ಮಿಕ ಜಾಗೃತಿಯನ್ನು ಉಂಟುಮಾಡುತ್ತಿದ್ದುದು ಪರಂಪರಾನುಗತ ವಾಗಿ ರೂಢಿಯಲ್ಲಿತ್ತು. ಸ್ವಮತಬಾಂಧವರಿಗೆ ಕಡ್ಡಾಯವಾಗಿದ್ದ ಈ ವಿಧಿಯನ್ನು ಅಪೇಕ್ಷೆಪಟ್ಟ ವೀರಶೈವೇತರರಿಗೂ ಇಲ್ಲಿನ ಮಠಗಳು ಮುಕ್ತ ರೀತಿಯಲ್ಲಿ ಅವಕಾಶಮಾಡಿಕೊಡುತ್ತಿದ್ದುದೂ ಉಂಟು. ಚಿಕ್ಕಪೇಟೆಯ ಮಹಾಂತರಮಠದ ಗಂಗಾಧರಶಿವಾಚಾರ್ಯರು ತಮ್ಮ ಮಠಾಧಿಪತ್ಯದ ಅವಧಿ (೧೯೩೪-೧೯೪೭)ಯಲ್ಲಿ ಅನೇಕ ವೈಶ್ಯರು ಹಾಗೂ ಜೈನಮತಸ್ಥರಿಗೆ ಶಿವದೀಕ್ಷೆಯನ್ನು ಅನುಗ್ರಹಿಸಿದ್ದು ದಾಗಿ ಕೆಲವು ವಕ್ತೃಗಳಿಂದ ಮೌಖಿಕವಾಗಿ ತಿಳಿದುಬರುತ್ತದೆ.[29] ಇದೇ ರೀತಿ ಅಲಸೂರಿನ ಶಿವಾನುಭವ ಮಠದ ಶಿವಶಟ್ಟ್ಯಾರ್ಯರು ೧೯೪೦ರ ದಶಕದಲ್ಲಿ ಕೆಲವು ಮುಸ್ಲಿಮರೂ ಸೇರಿದಂತೆ ಅನೇಕ ಪರಮತೀಯರಿಗೆ ಶಿವದೀಕ್ಷೆಯನ್ನು ಕೊಟ್ಟುದಾಗಿ ತಿಳಿದುಬರುತ್ತದೆ.[30]

### ೭.೨. ಹಬ್ಬಗಳ ಆಚರಣೆ

ಸಂಸ್ಕೃತದ 'ಪರ್ವ'ಪದಕ್ಕೆ ತದ್ಭವ ಕನ್ನಡದಲ್ಲಿ 'ಹಬ್ಬ' (ಪರ್ಬ, ಪಬ್ಬ) ಎಂಬ ಪದವಿದೆ. ಸಂಕ್ರಮಣ (ಸಂಕ್ರಾಂತಿ=ದಾಟುವಿಕೆ; ಮುಂದುವರಿಯುವಿಕೆ), ಹುಣ್ಣಿಮೆ, ಮುಂತಾದ ಪುಣ್ಯಕಾಲ ಅಥವಾ ಪರ್ವಕಾಲ ಗಳನ್ನು ಹಬ್ಬಗಳೆಂದು ಕರೆಯುತ್ತಾರೆ. ಇದನ್ನೇ ಉತ್ಸವ, ಸಂತೋಷಕೂಟ, ಔತಣಕೂಟ, ಸಮಾರಾಧನೆ ಎಂದೂ ಗುರುತಿಸುವುದುಂಟು.[31]

ಸಾಮಾನ್ಯವಾಗಿ ಭಕ್ತರ ಮನೆಯಲ್ಲಿ ವಿಶೇಷವಾದ ಹಬ್ಬ-ಹರಿದಿನಗಳ ಆಚರಣೆ ನಡೆಯುವುದು ಸಹಜ. ಆದರೆ ವೀರಶೈವಮಠಗಳಲ್ಲೂ ಕೂಡ ಕೆಲವೊಂದು ವಿಶಿಷ್ಟವಾದ ಹಬ್ಬ ಉತ್ಸವಾದಿಗಳ ಆಚರಣೆ ನಡೆಯುವುದುಂಟು. ಬಹಳಷ್ಟು ವೀರಶೈವಮಠಗಳಲ್ಲಿ ನಡೆಯುವ ಹಬ್ಬ ಉತ್ಸವಾದಿಗಳಿಗೆ ಮೂಲಕಾರಣ ಆಯಾ ಮಠಗಳಲ್ಲಿರುವ ಗದ್ದುಗೆ (ಹಿರಿಯ ಗುರುಗಳ ಸಮಾಧಿ)ಗಳೂ ಪ್ರಧಾನವಾದ ಪಾತ್ರವಹಿಸುತ್ತವೆ. ಸಾಮಾನ್ಯವಾಗಿ ಗದ್ದುಗೆಗಳಿಲ್ಲದ ವೀರಶೈವಮಠಗಳೇ ಇಲ್ಲವೆನ್ನಬಹುದು. ಪ್ರತಿಯೊಂದು ಮಠದಲ್ಲೂ ಆ ಮಠದ ಮೂಲಗುರುಗಳ ಅಥವಾ ಇನ್ನಿತರ ಹಿರಿಯ ಗುರುಗಳ ಗದ್ದುಗೆಗಳು ಇದ್ದೇ ಇರುತ್ತವೆ.

ಗದ್ದುಗೆ ಎಂದರೆ ಕುಳಿತುಕೊಳ್ಳುವ ಪೀಠ, ಭದ್ರಾಸನ, ಸಿಂಹಾಸನ ಎಂಬ ಬೇರೆಬೇರೆ ಅರ್ಥಗಳುಂಟು. ಆದರೆ ವೀರಶೈವ ಪರಿಭಾಷೆಯಲ್ಲಿ ಹೇಳುವುದಾದರೆ ಜಂಗಮರ, ಮಠಾಧೀಶರ ಸಮಾಧಿ ಎಂದರ್ಥ.[32] ಈಗಲೂ ಕೂಡ ಬೆಂಗಳೂರಿನ ಬಹಳಷ್ಟು ಮಠಗಳಲ್ಲಿ ಆಯಾ ಮಠಗಳ ಮೂಲ ಕರ್ತೃಗಳ ಗದ್ದುಗೆಗಳಿರುವುದನ್ನು ನೋಡಬಹುದಾ ಗಿದೆ. ಮಹಾಂತರಮಠದ ವಿರೂಪಾಕ್ಷ ಸ್ವಾಮಿಗಳ ಗದ್ದುಗೆ, ಸರ್ಪಭೂಷಣಮಠದ ಸರ್ಪಭೂಷಣ ಶಿವಯೋಗಿಗಳ ಗದ್ದುಗೆ, ತಿಪ್ಪಶೆಟ್ಟಿಮಠದ ಗುರುಸಿದ್ಧ ಸ್ವಾಮಿಗಳ ಗದ್ದುಗೆ, ಬೇಲಿಮಠದ ಹೊಸಕೋಟೆಯ ಮಹಾಂತಸ್ವಾಮಿಗಳ ಗದ್ದುಗೆ ಇವೇ ಮೊದಲಾದ ಗದ್ದುಗೆಗಳು ಇಂದಿಗೂ ಪ್ರತಿನಿತ್ಯ ಆರಾಧನಾ ಕೇಂದ್ರ ಗಳಾಗಿಯೇ ಉಳಿದಿವೆ. ಈ ಗದ್ದುಗೆಗಳಿಗೋಸ್ಕರವೇ ಅವುಗಳ ಆರಾಧನೆಗಳಿಗೆ ಅನುಕೂಲವಾಗುವಂತೆ ಅನೇಕ ಭಕ್ತರು ವಿಶೇಷವಾದ ದಾನ-ಧರ್ಮಗಳನ್ನು ನೀಡಿರುವ ದೃಷ್ಟಾಂತಗಳಿವೆ. ಶಿವನಹಳ್ಳಿಯ ಜಂಗಮಮಠಕ್ಕೆ ಅರಳೆಪೇಟೆ ಮತ್ತು ದಂಡಿನಪೇಟೆಯ ಭಕ್ತರು ನೀಡಿರುವ ದಾನಶಾಸನ(೧೭೮೨)[33] ಮನೆವಾರ್ತೆಪೇಟೆಯ ಶಂಕರ ದೇವರ ಮಠಕ್ಕೆ ಅರಳೆಪೇಟೆಯ ಶಂಕರಣ್ಣನವರು

ನೀಡಿರುವ ಭೂದಾನ ಶಾಸನ (೧೮೫೬)[34]; ಮಾಮೂಲು ಪೇಟೆಯ ಗಂಜಾಂಮಠಕ್ಕೆ ಅಕ್ಕಯ್ಯಮ್ಮನವರು ಬರೆದುಕೊಟ್ಟಿರುವ ದಾನಶಾಸನ[35] (೧೮೨೯) ಇವೇ ಮೊದಲಾದವುಗಳಲ್ಲಿ ಮಠದ ಹಿರಿಯ ಗುರುಗಳ ಗದ್ದುಗೆಗಳಿಗೆ ನಿತ್ಯ ದೀಪಾರಾಧನೆ ಹಾಗೂ ಹಬ್ಬಹರಿ ದಿನಗಳಲ್ಲಿ ನಡೆಯುವ ವಿಶೇಷ ಉತ್ಸವ, ಗಣಾರಾಧನೆಗಳ ಪ್ರಯುಕ್ತವಾಗಿಯೇ ಮೇಲ್ಕಂಡ ದಾನಗಳನ್ನು ನೀಡಿರುವುದಾಗಿ ಪ್ರಸ್ತಾಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮಠಗಳಲ್ಲಿರುವ ಗದ್ದುಗೆಗಳು ಭಕ್ತರ ಆರಾಧನಾ ಕೇಂದ್ರಗಳಾಗಿದ್ದು, ವಿಶೇಷ ಸಮಾರಾಧನೆಗಳಿಗೆ ಉತ್ಸವಾದಿ ಆಚರಣೆಗಳಿಗೆ ಪ್ರಮುಖ ಕಾರಣಗಳಾಗಿವೆ.

ಕಾರ್ತಿಕ, ಶ್ರಾವಣ ಮತ್ತು ಧನುರ್ಮಾಸಗಳಲ್ಲಿ ಇಲ್ಲಿನ ಗದ್ದುಗೆಗಳಿಗೆ ಪ್ರತಿನಿತ್ಯ ಬೆಳಿಗ್ಗೆ ಮತ್ತು ಸಾಯಂಕಾಲ 'ರುದ್ರಾಭಿಷೇಕ'[36] ಹಾಗೂ 'ಸಹಸ್ರ ಬಿಲ್ವಾರ್ಚನೆ'[37]ಗಳನ್ನು ಏರ್ಪಡಿಸಲಾಗುತ್ತಿತ್ತು. ಪ್ರತಿದಿನ ಸಂಜೆ ಮಠಗಳ ಆವರಣದೊಳಗೆ 'ಶಿವಾನುಭವ'[38], 'ಶಿವಕಥೆ' ಮುಂತಾದ ಧಾರ್ಮಿಕ ಶ್ರವಣ ಹಾಗೂ ಉಪನ್ಯಾಸಗಳನ್ನು ನೆರವೇರಿಸಲಾಗುತ್ತಿತ್ತು. '೧೯೩೦-೪೦ರ ದಶಕಗಳಲ್ಲಿ ಬೆಂಗಳೂರಿನ ಸರ್ಪಭೂಷಣಮಠವು ಶ್ರಾವಣಮಾಸದಲ್ಲಿ ನಿತ್ಯ ಜ್ಞಾನದಾಸೋಹಕ್ಕೆ ಪ್ರಸಿದ್ಧಿಯಾಗಿದ್ದರೆ; ಮನೆವಾರ್ತೆಪೇಟೆಯ ಶಂಕರದೇವರಮಠವು ಅನ್ನದಾಸೋಹಕ್ಕೆ ಪ್ರಸಿದ್ಧ ಕೇಂದ್ರವಾಗಿತ್ತು'.[39] ನಗರದ ಪ್ರಮುಖ ಧಾರ್ಮಿಕ-ಸಾಂಸ್ಕೃತಿಕ ಕೇಂದ್ರಗಳೆಂದು ಪ್ರಸಿದ್ಧಿಯಾಗಿದ್ದ ಮಹಾಂತರಮಠ ಮತ್ತು ಸರ್ಪಭೂಷಣಮಠಗಳಲ್ಲಿ ನಡೆಯುತ್ತಿದ್ದ ಶ್ರಾವಣಮಾಸದ ವಿಶೇಷ ಸಾಂಸ್ಕೃತಿಕ ಆಚರಣೆಗಳು ಇಲ್ಲಿನ ಜನರಿಗೆ ಇಂದಿಗೂ ಅವಿಸ್ಮರಣೀಯ ಅನುಭವಗಳಾಗಿವೆ.

ಧನುರ್ಮಾಸದಲ್ಲಿ ನಗರದ ಮಠಗಳು ಭಕ್ತರಿಗೆ ವಿಶೇಷಪೂಜಾಸ್ಥಳಗಳಾಗಿ ಪರಿವರ್ತನೆಯಾಗುತ್ತಿದ್ದವು. ಎಷ್ಟೋಜನ ಭಕ್ತರು ಈ ಮಾಸದಲ್ಲಿ ಪ್ರತಿನಿತ್ಯವೂ ಬೆಳಗಿನಜಾವ ಮಠದಲ್ಲಿ ಹಾಜರಿದ್ದು, ಅಲ್ಲೇ ಸ್ನಾನವನ್ನು ಮುಗಿಸಿ ಮಠದ ಗುರುಗಳೊಂದಿಗೆ ಹಾಗೂ ಹಿರಿಯ ಗುರುಗಳ ಗದ್ದುಗೆಯ ಬಳಿ ಶಿವಪೂಜೆ ಮಾಡುವ ಪ್ರತೀತಿ ರೂಢಿಯಲ್ಲಿತ್ತು.[40] ಧನುರ್ಮಾಸವು ಬಂತೆಂದರೆ ಬೆಂಗಳೂರಿನ ಮಠಗಳಲ್ಲಿ ಬೆಳಗಿನಜಾವದ ಸಾಮೂಹಿಕ ಶಿವಪೂಜಾ ಆಚರಣೆಯು ಭಕ್ತರ ಧಾರ್ಮಿಕ ಭಾವನೆಗಳಿಗೆ ಮತ್ತಷ್ಟು ಇಂಬು ನೀಡುತ್ತಿತ್ತು.

ನಗರದ ಮಠಗಳಲ್ಲಿ ಭಕ್ತರು ಆಚರಿಸುವ ಸಂಕ್ರಾಂತಿ, ಶಿವರಾತ್ರಿ, ಯುಗಾದಿ, ದೀಪಾವಳಿ ಇವೇ ಮೊದಲಾದ ಎಲ್ಲಾ ಹಬ್ಬಗಳನ್ನೂ ಆಚರಿಸಲಾಗುತ್ತಿತ್ತು. ಯಥಾ ಪ್ರಕಾರ ಹಬ್ಬಗಳಲ್ಲಿ ಮಠದ ಗದ್ದುಗೆ ಹಾಗೂ ದೇವಾಲಯಗಳಿಗೆ ವಿಶೇಷ ಆರಾಧನೆಗಳು ನಡೆದು, ನಂತರ ಬಂದ ಭಕ್ತರಿಗೆಲ್ಲಾ ಹಬ್ಬದ ಸಮಾರಾಧನೆ ನಡೆಯುತ್ತಿತ್ತು. ಹಿಂದೆ ಶಂಕರದೇವರಮಠದಲ್ಲಿ ಪ್ರತಿವರ್ಷವೂ ಗೌರಿ-ಗಣೇಶ ಚತುರ್ಥಿಗಳಲ್ಲಿ ಗೌರಿದೇವಿಯನ್ನು ಪ್ರತಿಷ್ಠಾಪಿಸಲಾಗುತ್ತಿತ್ತು. ಅಂದು ಅನೇಕಜನ ಹೆಣ್ಣುಮಕ್ಕಳು ತಮ್ಮ ಮನೆಯ 'ಬಾಗಿಣ'[41] ಗಳನ್ನು ತಂದು ಮಠದಲ್ಲಿ ಕೂರಿಸಿದ್ದ ಗೌರಮ್ಮನ ಎದುರಿಗೆ ಇಟ್ಟು, ಪೂಜಾರ್ಪಣೆ ಮಾಡಿ, ತೆಗೆದುಕೊಂಡು ಹೋಗುವ ಪ್ರತೀತಿ ಇತ್ತು. ಅನ್ಯಮತೀಯರೂ ಸಹ ಇಂತಹ ಆಚರಣೆಯನ್ನು ಮಾಡುತ್ತಿದ್ದುದಾಗಿ ತಿಳಿದುಬರುತ್ತದೆ.[42]

ಚಿಕ್ಕಪೇಟೆಯ ಮಹಾಂತರಮಠದಲ್ಲಿ ಗಂಗಾಧರ ಶಿವಾಚಾರ್ಯರ ಕಾಲದಲ್ಲಿ (೧೯೩೪-೧೯೫೬) ನವರಾತ್ರಿ ಉತ್ಸವವನ್ನು ಬಹಳ ಅದ್ದೂರಿಯಾಗಿ ಆಚರಿಸಲಾಗುತ್ತಿತ್ತು. ಪ್ರತಿನಿತ್ಯ ಸಂಜೆ ಮಠದಲ್ಲಿ ವಿದ್ವತ್ ಸಭೆ, ಸಂಗೀತ ಗೋಷ್ಠಿಗಳನ್ನು ನಡೆಸಲಾಗುತ್ತಿತ್ತು. ಈ ಸಂದರ್ಭದಲ್ಲಿ ಪ್ರಮುಖವಾದ ಅನ್ಯಮತೀಯರ ಧಾರ್ಮಿಕ ಮುಖಂಡರುಗಳನ್ನು ಕರೆಸಿ ಸರ್ವಧರ್ಮಸಮನ್ವಯ ಸಭೆಗಳನ್ನೂ ನಡೆಸಲಾಗುತ್ತಿತ್ತು. ಪಂಚಾಕ್ಷರಿ ಗವಾಯಿಗಳು, ಮಲ್ಲಿಕಾರ್ಜುನ ಮನ್ಸೂರರು, ಬಾಳಪ್ಪ ಹುಕ್ಕೇರಿ ಇವರೇ ಮೊದಲಾದ ಖ್ಯಾತನಾಮರು ಮಠದಲ್ಲಿ ಸಂಗೀತಗೋಷ್ಠಿಗಳನ್ನು ನಡೆಸಿಕೊಡುತ್ತಿದ್ದರು. ಪ್ರತಿನಿತ್ಯ ಕಾರ್ಯಕ್ರಮದ ಕೊನೆಯಲ್ಲಿ ಗುರುಗಳ ಆಶೀರ್ವಚನ ವಿರುತ್ತಿತ್ತು. ವಿಜಯದಶಮಿಯ ದಿವಸದಂದು ಗುರುಗಳನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಮೆರವಣಿಗೆ ಹೋಗಲಾಗುತ್ತಿತ್ತು. ಹಿಂದೆ ಈಗಿನ ರೇಣುಕಾಚಾರ್ಯ ಕಾಲೇಜಿನ ಪ್ರದೇಶದಲ್ಲಿದ್ದ ಬನ್ನಿಮಂಟಪಕ್ಕೆ ಹೋಗಿ ಅಲ್ಲಿ ಬನ್ನಿವೃಕ್ಷದ ರೆಕ್ಕೆಯನ್ನು ಗುರುಗಳ ಹಸ್ತದಿಂದಲೇ ಛೇದಿಸಲಾಗುತ್ತಿತ್ತು. ಅಂದು ಮಠಕ್ಕೆ ಬಂದ ಭಕ್ತರಿಗೆಲ್ಲಾ ಬನ್ನಿವೃಕ್ಷದ ಪತ್ರೆಯನ್ನೇ ಆಶೀರ್ವಾದವಾಗಿ ಅನುಗ್ರಹಿಸಲಾಗುತ್ತಿತ್ತು. ಈ ರೀತಿ ಸಂಭ್ರಮದಿಂದ ಆಚರಿಸಲ್ಪಡುತ್ತಿದ್ದ ದಸರಾ ಮಹೋತ್ಸವದ ಸಂದರ್ಭದಲ್ಲಿ ಮಠದಲ್ಲಿ ಪ್ರತಿನಿತ್ಯ ಬಂದವರಿಗೆಲ್ಲಾ

ಸಮಾರಾಧನೆ ನಡೆಯುತ್ತಿದ್ದುದು ಮಾಮೂಲಾಗಿತ್ತು.[43] ಇಂತಹ ದಸರಾ ಮಹೋತ್ಸವದ ಆಚರಣೆಯು ಹತ್ತೊಂಬತ್ತನೆಯ ಶತಮಾನದಲ್ಲಿ ಬೆಂಗಳೂರಿನಲ್ಲಿ ಮರಿಸ್ವಾಮಿಮಠ, ಗೊಟ್ಟೂರಯ್ಯ (ಗೋದೂರಯ್ಯ) ನಮಠ ಮತ್ತು ಕರಿಸಿದ್ಧೇಶ್ವರ ಮಠಗಳಲ್ಲೂ ನಡೆಯು ತ್ತಿದ್ದುದಾಗಿ ಹಿರಿಯ ತಲೆಮಾರಿನ ಜನರು ಹೇಳುತ್ತಾರೆ.[44]

ಬೆಂಗಳೂರಿನ ಮಠಗಳಲ್ಲಿ ಯುಗಾದಿಯ ಹಬ್ಬದ ಸಂದರ್ಭದಲ್ಲೂ ವಿಶೇಷ ಆಚರಣೆಗಳನ್ನು ರೂಢಿಗೊಳಿಸಲಾಗಿತ್ತು. ಅಂದು ಮಧ್ಯಾಹ್ನದ ವೇಳೆಗೆ ಮಠಗಳಿಗೆ ಭಕ್ತರ ಮಹಾಪೂರವೇ ಹರಿದುಬರುತ್ತಿತ್ತು. ನೆರೆದ ಜನರಿಗೆ ಮೊಟ್ಟಮೊದಲಿಗೆ ಪಂಚಾಂಗ ಶ್ರವಣವು ನಡೆಯುತ್ತಿತ್ತು. ಆಯಾ ವರ್ಷದ ವ್ಯಾಪಾರ, ವ್ಯವಹಾರ, ವ್ಯವಸಾಯ, ಮುಂತಾದವುಗಳ ಫಲಾಫಲಗಳನ್ನು ಕುರಿತು ಪಂಡಿತರೊಬ್ಬರಿಂದ ವಿಶ್ಲೇಷಣೆ ನೀಡಲಾಗುತ್ತಿತ್ತು. ಈ ಪಂಚಾಂಗ ಶ್ರವಣವನ್ನು ಕೇಳುವುದಕ್ಕಾಗಿ ಗ್ರಾಮಾಂತರ ಭಾಗದ ರೈತಾಪಿ ಜನರೂ ಸೇರಿದಂತೆ, ಸಮಾಜದ ಎಲ್ಲಾ ಮತಬಾಂಧವರೂ ಪಾಲ್ಗೊಳ್ಳುತ್ತಿದ್ದರು.[45] ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಮಹಾಂತರಮಠ, ಕರಿಸಿದ್ಧೇಶ್ವರ ಮಠ ಮತ್ತು ಸರ್ಪಭೂಷಣಮಠಗಳಲ್ಲಿ ಪ್ರತಿವರ್ಷವೂ ಈ ಆಚರಣೆಯು ತಪ್ಪದೆ ನಡೆಯುತ್ತಿತ್ತು.

ಯುಗಾದಿಯ ಸಂದರ್ಭದಲ್ಲಿ ಸರ್ಪಭೂಷಣ ಮಠದಲ್ಲಿ ಶ್ರೀ ಸರ್ಪಭೂಷಣಶಿವಯೋಗಿಗಳ ಜಯಂತ್ಯುತ್ಸವವನ್ನೂ ಆಚರಿಸಲಾಗುತ್ತಿತ್ತು. ಅಂದು ಪಂಚಾಂಗ ಶ್ರವಣದ ಜೊತೆಗೆ ಪುರಾಣಶ್ರವಣ, ಪುಣ್ಯಕಥೆಗಳನ್ನೂ ಏರ್ಪಡಿಸಿ, ಬಂದ ಭಕ್ತರಿಗೆ ಅನ್ನದಾಸೋಹದ ಜೊತೆಗೆ ಧಾರ್ಮಿಕ ಜ್ಞಾನದಾಸೋಹ ವನ್ನೂ ಉಣಬಡಿಸಲಾಗುತ್ತಿತ್ತು. ಸದರಿ ಮಠದಲ್ಲಿ ಈ ಹೊತ್ತಿಗೂ ಆಚರಣೆಯಲ್ಲಿರುವ ಯುಗಾದಿ ಸಂಪ್ರದಾಯಗಳನ್ನು 'ಶಿವಯೋಗಿತ್ರಯರ ಜಯಂತ್ಯುತ್ಸವ' ಎಂಬುದಾಗಿ ಮೂರುದಿನಗಳ ಕಾಲ ಆಚರಿಸಲಾಗುತ್ತದೆ. ಸರ್ಪಭೂಷಣರ ಜೊತೆಗೆ ನಿಜಗುಣ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು ಅಥವಾ ಇತರೆ ಇಬ್ಬರು ಶಿವಶರಣರ ಜಯಂತಿಗಳನ್ನೂ ಇದೇ ಸಂದರ್ಭದಲ್ಲಿ ಆಚರಿಸಲಾಗುತ್ತದೆ. ಈ ಸಂದರ್ಭದಲ್ಲಿ ಸಂಬಂಧಪಟ್ಟ ಶರಣರ ಅನುಭಾವಿಕ ಜೀವನ ಮತ್ತು ಸಂದೇಶಗಳನ್ನು ಕುರಿತು ವಿದ್ವತ್ ಗೋಷ್ಠಿಗಳನ್ನು ನೆರವೇರಿಸಲಾಗುತ್ತದೆ. ರಾಜ್ಯದ ಉನ್ನತ ನ್ಯಾಯಾಲಯದ ನ್ಯಾಯಮೂರ್ತಿಗಳಾದಿಯಾಗಿ ಮಂತ್ರಿಮಹೋದಯರೂ, ಪ್ರತಿಷ್ಠಿತ ಮಠಾಧೀಶರೂ, ಖ್ಯಾತ ವಿದ್ವಾಂಸರೂ, ಹೆಸರಾಂತ ಕಲಾಕಾರರೂ ಈ ಸಮಾರಂಭಗಳಲ್ಲಿ ಪಾಲ್ಗೊಳ್ಳುತ್ತಿದ್ದುದು[46] ಒಂದು ವಿಶೇಷವಾಗಿತ್ತು.

ಹಿಂದೆ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಮಾಮೂಲುಪೇಟೆಯ ಗಂಜಾಂಮಠದ ಆಶ್ರಯದಲ್ಲಿ 'ಮಹದೇಶ್ವರನ ಪರೋವ' (ಪರ=ಹಬ್ಬ) ನಡೆಸಲಾಗು ತ್ತಿತ್ತು. ಪ್ರತಿವರ್ಷದ ಚೈತ್ರಮಾಸದ ಕೊನೆಯ ಸೋಮ ವಾರ ಆಚರಿಸಲಾಗುತ್ತಿದ್ದ ಈ ಹಬ್ಬಕ್ಕೆ ಬೆಂಗಳೂರಿನ ಮೂರುಪೇಟೆ (ದೊಡ್ಡಪೇಟೆ, ಅರಳೆಪೇಟೆ, ಮಾಮೂಲು ಪೇಟೆ)ಯ ಶೆಟ್ಟಿ ಯಜಮಾನರುಗಳು ಸೇರಿ ಎಲ್ಲಾ ಪೇಟೆಗಳ ಭಕ್ತರ ಮನೆಗಳಿಂದ ದವಸ-ಧಾನ್ಯಗಳನ್ನು ಸಂಗ್ರಹಿಸುತ್ತಿದ್ದರು. ಪೇಟೆ ಬೀದಿಯ ವರ್ತಕ ಮಂಡಳಿಯವರೆಲ್ಲಾ ಈ ಸಂದರ್ಭದಲ್ಲಿ ಉದಾರವಾದ ನೆರವು ನೀಡುತ್ತಿದ್ದರು. ಮಾಮೂಲುಪೇಟೆಯ ಮುಖ್ಯಬೀದಿಯಲ್ಲಿ ಸಾಲುಚಪ್ಪರಗಳನ್ನು ಹಾಕಿ ಮಹಾದಾಸೋಹಕ್ಕೆ ಸಿದ್ಧತೆಗಳನ್ನು ನಡೆಸಲಾಗುತ್ತಿತ್ತು. ಅಂದು ಮಹದೇಶ್ವರನ ಹೆಸರಿನಲ್ಲಿ ಪಟ್ಟಣದ ಎಲ್ಲಾ ಶಿವದೇವಾಲಯಗಳಿಗೂ ವಿಶೇಷವಾದ ಅರ್ಚನೆ ಮಾಡಲಾಗುತ್ತಿತ್ತು. ಮಠಾಧೀಶರೆಲ್ಲಾ ಒಟ್ಟಿಗೆ ಸೇರಿ ಗಂಜಾಂಮಠದಲ್ಲಿ ವಿಶೇಷ ಪೂಜೆ-ಪುರಸ್ಕಾರಗಳನ್ನು ಮುಗಿಸಿದ ಮೇಲೆ ಪೇಟೆಯ ಎಲ್ಲಾ ವರ್ಗದ ಜನರಿಗೂ ಸಾಮೂಹಿಕ ಸಮಾರಾಧನೆ ನಡೆಸಲಾಗುತ್ತಿತ್ತು. ಅಂದು ಬಹುತೇಕ ಭಕ್ತರು ತಮಗೆ ಸಮೀಪದ ಶಿವದೇಗುಲಗಳಿಗೆ ತೆರಳಿ ಪೂಜೆ ಸಲ್ಲಿಸುವುದು ವಾಡಿಕೆಯಾಗಿತ್ತು.[47]

ಬೆಂಗಳೂರಿನ ಕರಗವು ಬಹಳ ಪ್ರಸಿದ್ಧವಾದ ಜನಪದರ ಧಾರ್ಮಿಕ ಆಚರಣೆಯಾಗಿದೆ. ಪ್ರತಿವರ್ಷ ಚೈತ್ರಮಾಸದ ಪೂರ್ಣಹುಣ್ಣಿಮೆಯ ತದಿಗೆಯಂದು ನಡೆಯುವ ಧರ್ಮರಾಯನ ಕರಗ ಮಹೋತ್ಸವವು[48] ಬಹಳ ಜನಾಕರ್ಷಕವಾದ ಹಬ್ಬವಾಗಿದೆ. ಈ ಕರಗ ಉತ್ಸವಕ್ಕೂ ವೀರಶೈವ ಮಠಗಳಿಗೂ ನೇರವಾದ ಸಂಬಂಧವಿಲ್ಲ ವಾದರೂ ಭಾವನಾತ್ಮಕವಾಗಿ ಮಠಗಳು ಅಂದು ವಿಶೇಷ ರೀತಿಯಲ್ಲಿ ಕರಗದ ಆಚರಣೆಗೆ ಪೋಷಕವಾಗಿದ್ದವು. ಕರಗದ ಉತ್ಸವವು ದೊಡ್ಡಪೇಟೆಯ ಕರಿಸಿದ್ಧೇಶ್ವರಮಠ,

ಚಿಕ್ಕಪೇಟೆಯ ಮಹಾಂತರಮಠ, ಅರಳೆಪೇಟೆಯ ದೇಶದಮಠ, ಅಕ್ಕಿಪೇಟೆಯ ದೊಡ್ಡಮಠ ಹಾಗೂ ಮನೆವಾರ್ತೆಪೇಟೆಯ ಶಂಕರದೇವರಮಠಗಳ ಮುಂದೆಯೇ ಹಾದು ಹೋಗುತ್ತಿತ್ತು. ಆಗ ಮಠದ ಮುಂದೆ ಕರಗವು ಬಂದಾಗ ಆಯಾ ಮಠಗಳ ಪರವಾಗಿ ನೆರೆದ ನೂರಾರು ಮಂದಿ ಪ್ರೇಕ್ಷಕರಿಗೆ ಹೆಸರುಬೇಳೆ, ಪಾನಕ ಮುಂತಾದವುಗಳನ್ನು ಮೇಲ್ಕಂಡ ಮಠಗಳವರು ಹಂಚುವ ವ್ಯವಸ್ಥೆ ಮಾಡುತ್ತಿದ್ದರು. ಜೊತೆಗೆ ದೂರದ ಊರುಗಳಿಂದ ಕರಗ ನೋಡಲು ಬಂದ ಅನೇಕ ಜನರಿಗೆ ಕೆಲವು ಮಠಗಳು ಉಚಿತವಾಗಿ ಊಟ ಮತ್ತು ವಸತಿಯ ಸೌಲಭ್ಯಗಳನ್ನು ಕಲ್ಪಿಸುತ್ತಿದ್ದುದಾಗಿ ತಿಳಿದು ಬರುತ್ತದೆ.[49]

ಹೀಗೆ ಬೆಂಗಳೂರಿನ ವೀರಶೈವಮಠಗಳು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಅನೇಕ ಧಾರ್ಮಿಕ ಆಚರಣೆಗಳಲ್ಲಿ ಜನಮನ್ನಣೆಯನ್ನು ಗಳಿಸಿದ್ದುದು ಅವುಗಳ ಜನಸೇವಾ ಮನೋಭಾವನೆಗೆ ಹಿಡಿದ ಕನ್ನಡಿಯಂತಿದೆ.

### ೭.೩. ಉತ್ಸವಗಳು

ಉತ್ಸವಗಳೂ ಕೂಡ ಹಬ್ಬದ ಇನ್ನೊಂದು ರೂಪವಷ್ಟೆ. ತುಂಬು ಸಡಗರದಿಂದ ಹಬ್ಬಕ್ಕೆ ಸಂಬಂಧಪಟ್ಟ ದೇವರು ಅಥವಾ ಮೂರ್ತಿಗಳನ್ನು ಸಂಪೂರ್ಣ ಅಲಂಕಾರ ಮತ್ತು ತಾಳಮೇಳಗಳೊಂದಿಗೆ ಮೆರವಣಿಗೆ ನಡೆಸುವುದು ಉತ್ಸವ ಎನ್ನಿಸಿಕೊಳ್ಳುತ್ತದೆ. ಬೆಂಗಳೂರಿನಲ್ಲಿ ಹಿಂದೆ ಸಂತಬಸವೇಶ್ವರ ಹಾಗೂ ರೇಣುಕಮಹಾತ್ಮರ ಮೂರ್ತಿಗಳನ್ನೂ ಮತ್ತು ಕೆಲವು ಪೀಠಾಧೀಶರುಗಳನ್ನೂ ಸಹ ಉತ್ಸವ, ಮೂರ್ತಿಗಳನ್ನಾಗಿ ಇರಿಸಿಕೊಂಡು ಪೇಟೆಯ ಬೀದಿಗಳಲ್ಲಿ ಮೆರವಣಿಗೆ ಮಾಡಲಾಗುತ್ತಿತ್ತು. ಬೆಂಗಳೂರಿನ ವೀರಶೈವಮಠಗಳಿಗೆ ಸಂಬಂಧಿಸಿದಂತೆ ನಮಗೆ ದೊರೆಯುವ ಮೊಟ್ಟಮೊದಲ ನಿದರ್ಶನ ಈಗಿನ ಕಳಾಸಿಪಾಳ್ಯದ ಮರಿಸ್ವಾಮಿಮಠಕ್ಕೆ ಸಂಬಂಧಪಟ್ಟದ್ದು.

೧೮೦೮ರ ವೇಳೆಗೆ ಬೆಂಗಳೂರಿನ ಮರಿಸ್ವಾಮಿಗಳಿಗೆ ಮೈಸೂರು ಸಂಸ್ಥಾನದ ದಿವಾನ್‌ಪೂರ್ಣಯ್ಯನವರು ಇವರ ಧಾರ್ಮಿಕ ಉತ್ಸವಗಳಿಗಾಗಿ ಪ್ರಭುತ್ವದ ಪರವಾಗಿ ಕೆಲವು ವಿಶೇಷ ರೀತಿ-ರಿವಾಜುಗಳನ್ನು ಒಪ್ಪಿಸಿಕೊಟ್ಟಿದ್ದರು. ಆ ಪ್ರಕಾರ 'ಇವರು ತಮ್ಮ ಮೆರವಣಿಗೆಯಲ್ಲಿ ಆರುಮಂದಿ ಖಡ್ಗಧಾರಿ ಸಿಪಾಯಿಗಳು, ಜೋಡಿ ಕುದುರೆಸವಾರರು, ಮೇನೆ, ಬೆಳ್ಳಿಕೋಲುಗಳು, ಬಿಳಿಯಛತ್ರಿ, ಜೋಡಿಕಹಳೆ ಇವೇ ಮೊದಲಾದವುಗಳನ್ನು ಬಳಸಿಕೊಳ್ಳಲು ಪ್ರಭುತ್ವದವರೆ ಅನುಕೂಲ ಮಾಡಿಕೊಟ್ಟಿದ್ದರು'.[50] ಅಂದು ಮೈಸೂರಿನ ದೊರೆಗಳು ಧಾರ್ಮಿಕ ಸಂಸ್ಥಾನಾಧಿಪತಿಗಳಿಗೆ ಒದಗಿಸಿಕೊಟ್ಟಿದ್ದ ಎಲ್ಲಾ ಗೌರವಗಳೂ ಇವರಿಗೂ ಲಭ್ಯವಾಗಿದ್ದವು. ಮರಿಸ್ವಾಮಿಗಳ ಮೆರವಣಿಗೆಯು ಹೋದೆಡೆಯೆಲ್ಲಾ ಇವುಗಳನ್ನು ಬಳಸಿಕೊಳ್ಳುವ ಅಧಿಕಾರವಿತ್ತು. ಈ ಹಿನ್ನೆಲೆಯಲ್ಲಿ ೧೯ನೇ ಶತಮಾನದ ಪ್ರಾರಂಭದಿಂದಲೂ ಮಠಾಧೀಶರ ಧಾರ್ಮಿಕ ಮೆರವಣಿಗೆಗಳು (ಉತ್ಸವಗಳು) ಬೆಂಗಳೂರಿನಲ್ಲಿ ನಡೆಯುತ್ತಿದ್ದುದು ಸ್ಪಷ್ಟವಾದಂತಾಗಿದೆ.

ಮುಂದೆ ೧೮೧೭ರಲ್ಲಿ ಚಿತ್ರದುರ್ಗ ಸಂಸ್ಥಾನದ ನೈಘಂಟಿನ ಸಿದ್ಧಬಸವ ಮಹಾಸ್ವಾಮಿಗಳ (೧೮೦೦-೧೮೨೦) ಸವಾರಿಯು ಬೆಂಗಳೂರಿಗೆ ದಯಮಾಡಿಸಿತ್ತು. ಆಗ ಮುಮ್ಮಡಿ ಕೃಷ್ಣರಾಜ ಒಡೆಯರು ಹೊರಡಿಸಿದ್ದ ಅಪ್ಪಣೆಯ ಪ್ರಕಾರ-''ಆನೆ, ನಿಶಾನಿ ಆನೆ, ಬೆಳ್ಳಿನಗಾರಿ, ಬೆಳ್ಳಿಬಾಲೆ, ಬಾಜಾಬಜಂತ್ರಿಗಳು ಇವೇ ಮೊದಲಾದ ಇಸ್ತಕಪಾಲು (ರಾಜ ಮಹಾರಾಜರನ್ನು ಕಾಣಲು ಬಂದವರಿಗೆ ಕೊಡುವ ವಿಶೇಷ ಗೌರವ) ಕೊಟ್ಟು, ಸಕಲ ಬಿರುದಾವಳಿಗಳೊಂದಿಗೆ ಬರಮಾಡಿಕೊಳ್ಳಲಾಗಿತ್ತು. ಪ್ರಥಮ ದಿನದ ಧೂಳಿ ಪಾದಪೂಜೆಗೆ ಹನ್ನೊಂದು ತೋಪುಗಳ ಮರ್ಯಾದೆ ಸಲ್ಲಿಸಿ ಐದುನೂರು ವರಹಗಳ ಭಿಕ್ಷೆಯನ್ನು ಕೊಡಿಸಿದ್ದಲ್ಲದೆ ಅವರು ಪಟ್ಟಣದಲ್ಲಿ ಇರುವವರೆಗೆ ದಿನ ಒಂದಕ್ಕೆ ಒಂದು ಸಾವಿರ ಜನರ ಲವಾಜಮೆ (ಸಾಧನಸಾಮಗ್ರಿ)ಯನ್ನೂ ಗಣಾರಾಧನೆ ಬಗೆಗೆ ತಕ್ಕ ಏರ್ಪಾಡುಗಳನ್ನೂ ಮಾಡಲಾಗಿತ್ತು.''[51]

ಚಿತ್ರದುರ್ಗ ಜಗದ್ಗುರುಗಳಿಗೂ ಶೃಂಗೇರಿ ಜಗದ್ಗುರುಗಳಿಗೆ ಸಲ್ಲುತ್ತಿದ್ದ ಎಲ್ಲಾ ಬಿರುದುಬಾವಲಿಗಳೂ ಗೌರವಗಳೂ ಅನೂಚಾನವಾಗಿ ನಡೆದು ಬಂದಿದ್ದವು. ಇವೆಲ್ಲಾ ಮರ್ಯಾದೆಗಳನ್ನು ಇವರು ಭರತಖಂಡದ ಆಂಗ್ಲ ಪ್ರಭುತ್ವ ರಕ್ಷಿತ ಪ್ರದೇಶದಲ್ಲೂ ಹಾಗೂ ಇನ್ನುಳಿದ ಹಿಂದೂಸ್ಥಾನದ ಭಾಗಗಳಲ್ಲೂ ಬಳಸಿಕೊಳ್ಳಬಹುದಾಗಿತ್ತು. ಇದರ ಸದುಪಯೋಗಕ್ಕಾಗಿಯೇ ಇವರಿಗೆ ರಹದಾರಿಪತ್ರಗಳನ್ನೂ ಪ್ರಭುತ್ವದವರು ಕೊಡಮಾಡಿದ್ದರು.[52]

**೭.೩.೧. ಬೆಂಗಳೂರಿನ ಐತಿಹಾಸಿಕ ಮೆರವಣಿಗೆ**

೧೯೧೯ರ ಮೇ ೧೯ರಂದು ಚಿತ್ರದುರ್ಗ ಬೃಹನ್ಮಠದ ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು ಬೆಂಗಳೂರಿಗೆ ಭೇಟಿ ನೀಡಿದ್ದರು. ಆಗ ಪಟ್ಟಣದ ಮಹಾಜನತೆಯು ನಡೆಸಿದ ಇವರ ಅದ್ದೂರಿ ಮೆರವಣಿಗೆ (ಧಾರ್ಮಿಕ ಉತ್ಸವ)ಯು ಈ ಶತಮಾನದಲ್ಲೇ ಬೆಂಗಳೂರಿನಲ್ಲಿ ನಡೆದ ಅದ್ಭುತ ಮೆರವಣಿಗೆಯಾಗಿತ್ತು. ಈ ಐತಿಹಾಸಿಕ ಉತ್ಸವದ ವೈಭವಾತಿಶಯಗಳನ್ನು ಅಂದಿನ ಕೆಲವು ಪತ್ರಿಕೆಗಳು ವರದಿ ಮಾಡಿದ್ದವು. ಅಂತಹ ವರದಿಗಳನ್ನು ಆಧರಿಸಿ ಉತ್ಸವದ ಸಮಗ್ರಚಿತ್ರಣವನ್ನು ಕೆಳಕಂಡಂತೆ ಸಂಗ್ರಹಿಸಲಾಗಿದೆ.

'ಬೆಂಗಳೂರು ಪಟ್ಟಣದ ಮೂರುಪೇಟೆ ಶೆಟ್ಟಿ ಯಜಮಾನರುಗಳೂ, ಮಠಾಧೀಶರೂ, ಮತಬಾಂಧವರೂ ಹಾಗೂ ಇನ್ನಿತರ ಭಕ್ತರೆಲ್ಲಾ ಸೇರಿ ಒಮ್ಮನಸ್ಸಿನಿಂದ ಗುರುಸೇವಾಕಾರ್ಯದಲ್ಲಿ ಕಂಕಣಬದ್ಧರಾಗಿ ದುಡಿದರು. ಸಾಕಷ್ಟು ಧನ ಹಾಗೂ ದವಸ-ಧಾನ್ಯಗಳ ಸಂಗ್ರಹ ಮಾಡಿದ್ದರು. ಪರಸ್ಥಳದಿಂದ ಬರುವ ಜನಸ್ತೋಮದ ಊಟೋಪಚಾರಗಳಿಗಾಗಿ ೨೦೦ (ಇನ್ನೂರು)ಪಲ್ಲ ಅಕ್ಕಿಯನ್ನು ಸಂಗ್ರಹಿಸಿದ್ದರು. ಉಳಿದುಕೊಳ್ಳಲು ಅನೇಕ ಬಿಡಾರಗಳನ್ನು ಸಜ್ಜುಗೊಳಿಸಿದ್ದರು. ಆರು ಕಡೆ ಪ್ರತ್ಯೇಕ ಊಟದ ವ್ಯವಸ್ಥೆಗಳನ್ನು ಮಾಡಿದ್ದರು.

ಜಗದ್ಗುರುಗಳ ಬಿಡಾರಕ್ಕೆ ರಾ॥ಬ॥ ಧರ್ಮಪ್ರವರ್ತಕ ಗುಬ್ಬಿತೋಟದಪ್ಪನವರ ಛತ್ರದಲ್ಲಿ ಸೂಕ್ತ ಏರ್ಪಾಟಾಗಿತ್ತು. ಛತ್ರದ ಉತ್ತರ ಭಾಗಕ್ಕೆ (ಈಗಿನ ರೈಲು ನಿಲ್ದಾಣದ ಮುಂಭಾಗಕ್ಕೆ) ಇದ್ದ ವಿಶಾಲ ಬಯಲಿನಲ್ಲಿ ದರ್ಬಾರ್ (ಸಭೆ) ನಡೆಸಲು ವಿಶೇಷ ದೀಪಾಲಂಕಾರ ಗಳಿಂದ ಭಾರಿ ಚಪ್ಪರವನ್ನು ಸಜ್ಜುಗೊಳಿಸಲಾಗಿತ್ತು. ೧೯೧೯ರ ಮೇ ೧೮ ರಂದು ಜಗದ್ಗುರುಗಳ ಪುರಪ್ರವೇಶವೆಂದು ಮೊದಲೇ ನಿಶ್ಚಯಿಸಲಾಗಿತ್ತು. ಅದಕ್ಕಾಗಿ ಜಗದ್ಗುರುಗಳ ಸವಾರಿಯು ಮೇ ೫ ರಂದೇ ಚಿತ್ರದುರ್ಗದಿಂದ ಪ್ರಯಾಣ ಬೆಳೆಸಿತ್ತು. ಮೇ ೧೭ ರಂದು ಶನಿವಾರ ಮಧ್ಯಾಹ್ನ ನೆಲಮಂಗಲದಿಂದ ಹೊರಟ ಸವಾರಿಯು ಸಂಜೆ ೪ರ ವೇಳೆಗೆ ಪಟ್ಟಣದ ಹೊರಭಾಗಕ್ಕೆ ಬಂದು ಮುಟ್ಟಿತು. ಈ ವೇಳೆಗಾಗಲೇ ನಗರಕ್ಕೆ ಭಕ್ತ ಜನರು ತಂಡೋಪತಂಡವಾಗಿ ಬರಲಾರಂಭಿಸಿದ್ದರು. ಪೂಜ್ಯ ಶ್ರೀಗಳನ್ನು ನಗರದ ನಾಗರೀಕರ ಪರವಾಗಿ ದಿವಾನ್ ಬಹದ್ದೂರ್ ಸರ್.ಕೆ.ಪಿ. ಪುಟ್ಟಣ್ಣಶೆಟ್ಟರು ಮತ್ತು ಮುನ್ಸೀಫ್ ವೀರಬಸವಯ್ಯನವರು ಇವರೇ ಮೊದಲಾದ ಗಣ್ಯರು ಸ್ವಾಗತಿಸಿದರು.[53] ಮೇ ೧೮ರ ಬೆಳಿಗ್ಗೆಯಿಂದಲೇ ಆರಂಭವಾಗಬೇಕಾಗಿದ್ದ ಜಗದ್ಗುರುಗಳ ಉತ್ಸವವು ಕೆಲವು ತಾಂತ್ರಿಕ ಕಾರಣಗಳಿಂದಾಗಿ ಒಂದು ದಿನ ಮುಂದೂಡಲ್ಪಟ್ಟಿತು.[54] ನಂತರ ಸಂದಿಗ್ಧ ತೊಡಕು ಗಳನ್ನು ನಿವಾರಿಸಿಕೊಂಡು ೧೯೧೯ರ ಮೇ ೧೯ನೇ ಸೋಮವಾರ ಪುರದ ತುಂಬಾ ಉತ್ಸವವು ನಿರಾತಂಕವಾಗಿ ಜರುಗಿತು.

ಉತ್ಸವವು ಯಲಹಂಕ ಗೇಟಿನ ಪೋಲೀಸ್ ಠಾಣೆಯ ಬಳಿಯಿಂದ (ಈಗಿನ ಮೈಸೂರುಬ್ಯಾಂಕ್ ಚೌಕದಿಂದ) ಪ್ರಾರಂಭವಾಗಿ ದೊಡ್ಡಪೇಟೆಯ ಚೌಕ, ಚಿಕ್ಕಪೇಟೆ, ಅರಳೆಪೇಟೆಯ ಮಾರ್ಗವಾಗಿ ತೋಟದಪ್ಪನವರ ಛತ್ರದ ವರೆಗೂ ನಡೆಯುವಂತೆ ಮೊದಲೇ ಗೊತ್ತುಪಡಿಸಲಾಗಿತ್ತು. ಉತ್ಸವದ ಬೀದಿಯುದ್ದಕ್ಕೂ ಸಾರಣೆ-ಕಾರಣೆಗಳನ್ನು ಮಾಡಲಾಗಿತ್ತು. ಅಲ್ಲಿಗಲ್ಲಿಗೆ ದೊಡ್ಡದೊಡ್ಡ ಚಪ್ಪರಗಳನ್ನೂ, ಸ್ವಾಗತ ಕಮಾನುಗಳನ್ನೂ (ಸುಮಾರು ೨೦) ನಿರ್ಮಿಸಲಾಗಿತ್ತು. ಅವುಗಳ ಮೇಲೆ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರುಗಳ ಬಿರುದಾವಳಿಗಳ ಸ್ವಾಗತ ಕರೆಗಳಿದ್ದವು. ಎಲ್ಲೆಲ್ಲೂ ಬಾಳೆಯ ಮರಗಳ ಪಂಕ್ತಿ, ಮಂಗಳಮಯ ತಳಿರುತೋರಣಗಳ ನಡುವೆ ಶ್ರೀಗಳವರ ಅಲಂಕೃತ ಭಾವಚಿತ್ರಗಳು ಎದ್ದುಕಾಣುತ್ತಿದ್ದವು. ಅಂದಿನ ಬೆಂಗಳೂರು ನಗರದ ಭವ್ಯ ಅಲಂಕರಣದ ಚಿತ್ರ ಅಭೂತಪೂರ್ವವಾಗಿತ್ತು. ನಗರದ ಪೇಟೆಯ ಬೀದಿಬೀದಿಗಳೆಲ್ಲಾ ಜನಪ್ರವಾಹದಿಂದ ತುಂಬಿತ್ತು. ಮೈಸೂರು ಸಂಸ್ಥಾನದ ಎಲ್ಲಾ ಭಾಗಗಳಿಂದಲೂ ಭಕ್ತಜನರು ಆಗಮಿಸಿದ್ದರು. ನೆರೆಯ ಹೈದರಾಬಾದು, ಮದರಾಸು, ಮುಂಬೈ ಮುಂತಾದ ಪ್ರಾಂತ್ಯಗಳಿಂದಲೂ ಜನರು ಬಂದಿದ್ದರು. ಈ ಸಂದರ್ಭದಲ್ಲಿ ಬೆಂಗಳೂರಿಗೆ ಬೇರೆಬೇರೆ ಸ್ಥಳಗಳಿಂದ ವಿಶೇಷ ರೈಲುಗಳನ್ನೂ ವ್ಯವಸ್ಥೆಗೊಳಿಸಲಾಗಿತ್ತು. ಕಮ್ಮಿ ಎಂದರೂ ನಗರದ ೫೦,೦೦೦ ಜನಸಂಖ್ಯೆಯ ಜೊತೆಗೆ, ಹೊರಗಿನ ೫೦,೦೦೦

ಜನರು ಸೇರಿ ಒಂದು ಲಕ್ಷಕ್ಕೂ ಮೀರಿದ ಜನಸ್ತೋಮವು ಸೇರಿತ್ತು.

''ಉತ್ಸವದ ಮುಂಭಾಗದಲ್ಲಿ ಮೊದಲು ಶ್ರೀಮಠದ ಎರಡು ಒಂಟೆಗಳು; ಅವುಗಳ ಹಿಂದೆ ಕಲಾಬತ್ ಹೌದಾ (ಅಂಬಾರಿ) ಹೊರಿಸಿದ ಎರಡು ಆನೆಗಳು; ಅಲಂಕೃತವಾದ ಆರು ಪಿಡಿ (ಹೆಣ್ಣು)ಕುದುರೆಗಳು; ಅವುಗಳ ಹಿಂದೆ ಶಸ್ತ್ರಧಾರಿ ಕುದುರೆಸವಾರರು; ಡಂಕಾ (ಢಕ್ಕೆ)ದ ಕುದುರೆಗಳು; ಅವುಗಳ ಹಿಂದೆ ಖಡ್ಗಧಾರಿ ಭಟರು; ಅವರ ಹಿಂದೆ ಒಂದು ಬ್ಯಾಂಡಿನಸೆಟ್ಟು; ಅವರ ಹಿಂದೆ ಕರಡಿವಾದ್ಯಗಳ ಗತ್ತಿಗೆ ಸರಿಯಾಗಿ ಕುಣಿಯುವ ನಾಲ್ಕು ನಂದಿ ಧ್ವಜಗಳು; ಅವರ ಹಿಂದೆ ಬಂಗಾರ ಮತ್ತು ಬೆಳ್ಳಿಯ ನಾಗಸ್ವರಗಳನ್ನು ನುಡಿಸುವ ವಾದ್ಯಗಾರರ ಎರಡು ಗುಂಪುಗಳು; ಅವರ ಹಿಂದೆ ದೇಶದ ಮರ್ಯಾದಾರ್ಥವಾಗಿ ವಾರನಾರಿಯರ ಗುಂಪು; ಅವರ ಹಿಂದೆ ಮತ್ತೊಂದು ವಾದ್ಯವೃಂದ; ಅವರ ಹಿಂದೆ ಅಧಿಕಾರಿಗಳು ಮತ್ತು ದೊಡ್ಡ ಮನುಷ್ಯರುಗಳ ಗುಂಪು; ಅವರ ಹಿಂದೆ ಶ್ರೀಮಠದ ಮಾಯಿಮರಾಬತು, ಸೂರ್ಯವಾದ್ಯ, ಚಂದ್ರವಾದ್ಯ, ಉಡುಕುವಾದ್ಯ, ಶಂಖ, ಬೆಳ್ಳಿಕಟ್ಟಿಗೆ, ಹಸರುಕಟ್ಟಿಗೆ, ವೇಟುಪಾವಡ, ಉಡಾಸುಪಾವಡ ಮೊದಲಾದವುಗಳು; ಅವುಗಳ ಹಿಂದೆ ವೇದಪಾಠಕರ ವೈದಿಕರ ಗುಂಪು; ಪಟ್ಟ-ಚರಮೂರ್ತಿಗಳ ಸಂದೋಹವೂ, ನಂತರ ಪೂಜ್ಯಜಗದ್ಗುರು ಮಹಾಸನ್ನಿಧಿಯವರ ಅಡ್ಡ ಪಲ್ಲಕ್ಕಿಯೂ; ಅದರ ಉಭಯ ಪಾರ್ಶ್ವಗಳಿಗೆ ಶ್ವೇತಛತ್ರ ಚಾಮರಾದಿ ಮೂರ್ಛಾಲುಗಳೂ; ಇವರ ಹಿಂದೆ ಕಾವಲು ಭಟರ ಕುದುರೆಗಳೂ ಇದ್ದವು.'' ಈ ಸಾಲುಸಾರೋಟವು ಒಂದು ಮೈಲಿಗೂ ಜಾಸ್ತಿ ಉದ್ದವಾಗಿತ್ತು. ಬೆಳಿಗ್ಗೆ ೮.೩೦ಕ್ಕೆ ಪ್ರಾರಂಭವಾಗಿದ್ದ ಈ ಮೆರವಣಿಗೆಯು ಮಧ್ಯಾಹ್ನ ಒಂದು ಗಂಟೆಗೆ ಮುಕ್ತಾಯವಾಯಿತು. ದಾರಿಯುದ್ದಕ್ಕೂ ವೀರಶೈವ ಮತಬಾಂಧವರಿಗೆ ಮಾತ್ರವಲ್ಲದೆ ಮುಲ್ತಾನಿ ಮಾರ್ವಾಡಿಗಳಿಗೂ, ಇನ್ನಿತರ ವರ್ತಕ ಮಂಡಳಿಯವರಿಗೂ, ಸರ್ವರಿಗೂ ಉತ್ಸವದ ಸಡಗರ-ಸಂಭ್ರಮಗಳು ಸ್ವರ್ಗಸದೃಶ ಆನಂದವನ್ನು ಉಂಟುಮಾಡುತ್ತಿತ್ತು.

ದೊಡ್ಡಪೇಟೆಯ ಚೌಕ ಹಾಗೂ ಚಿಕ್ಕಪೇಟೆಯ ಚೌಕ ಇವೆರಡೂ ಕಡೆಗಳಲ್ಲಿ ಮುಸಲ್ಮಾನ ಪ್ರಮುಖರು ಜಗದ್ಗುರುಗಳಿಗೆ ಫಲ-ಪುಷ್ಪಗಳನ್ನು ಅರ್ಪಿಸಿ ವಿಜ್ಞಾಪನಾ ಪತ್ರಗಳನ್ನು ಅರ್ಪಿಸಿದ್ದರು.[55] ಆಗ ಶ್ರೀಗಳವರು ಉರ್ದುಭಾಷೆಯಲ್ಲೇ ಆ ಜನಗಳಿಗೆ ಆಶೀರ್ವಚನ ನೀಡಿದಾಗ ಅವರಿಗೆ ಅತಿಶಯವಾದ ಆನಂದ ಉಂಟಾಯಿತು.

ಹೀಗೆ ಮಹಾ ಉತ್ಸವವು ಬಿಡಾರವನ್ನು ಸೇರಿದ ಮೇಲೆ ಮಹಾಮಂಟಪದ ಎತ್ತರದ ವೇದಿಕೆಯ ಮೇಲಿರಿಸಿದ್ದ ಸುವರ್ಣಪೀಠದಲ್ಲಿ ಶ್ರೀಗಳು ಮಂಡಿಸಿದರು. ನಂತರ ನೆರೆದಿದ್ದ ಜನರನ್ನು ಉದ್ದೇಶಿಸಿ ಸಂಕ್ಷಿಪ್ತ ಆಶೀರ್ವಚನ ನೀಡಿದರು. ಮುಂದೆ ಉತ್ಸವದಲ್ಲಿ ಪಾಲ್ಗೊಂಡ ಸರ್ವರಿಗೂ ವೃಷ್ಟಾನ್ನ ಭೋಜನಗಳನ್ನು ನೆರವೇರಿಸಲಾಯಿತು.[56]

ಈ ಮಹೋತ್ಸವವನ್ನು ಸ್ವತಃ ವೀಕ್ಷಿಸಿದ್ದ ಆಗಿನ ಬೆಂಗಳೂರು ನಗರದ ಡೆಪ್ಯೂಟಿಕಮಿಷನರ್ ಆಗಿದ್ದ ಆರ್.ಕೆ. ಬ್ಯಾನರ್ಜಿಯವರು - "The Murgi Swami's Procession was conducted with great 'eclat' (with great) this morning. There were over 80,000 persons that took part in it. The streets were fully packed with sight-seers, so also the shops and the upstairs of houses. The Procession started at 8.50 a.m. at the Yalahanka gate, passed through Dodpet, Chickpet and Aralepet and closed at 1.30 p.m. at Thotadappa's Chatram, where the Swami is in residence.

the Municipal Council received him at the Yalahanka gate and some Mohamedans headed by Usman Khan and Nawab Abdul Kalami presented him with an address of welcome at the Dodpet Chowk.

Every thing passed off in an orderly fassion" ಎಂಬುದಾಗಿ ತಮ್ಮ ಮೇಲಧಿಕಾರಿಗಳಿಗೆ ವರದಿ ಮಾಡಿರುತ್ತಾರೆ.[57]

ಮುಂದೆ ಪ್ರತಿದಿನ ಸಾಯಂಕಾಲ ೭ ಗಂಟೆಗೆ ಮಹಾಮಂಟಪದಲ್ಲಿ ಜಗದ್ಗುರುಗಳ ಅಧ್ಯಕ್ಷತೆಯಲ್ಲಿ ಸಭೆ ಸೇರುತ್ತಿತ್ತು. ದಿನಾಂಕ:೨೦.೫.೧೯೧೯ರಿಂದ ದಿನಾಂಕ: ೩೦.೫.೧೯೧೯ರವರೆಗೆ ಪ್ರತಿನಿತ್ಯ ನಡೆದ ಈ ಸಭೆಯಲ್ಲಿ ವಿದ್ವಜ್ಜನರಿಂದ ಧಾರ್ಮಿಕ ಉಪನ್ಯಾಸಗಳನ್ನೂ, ಪ್ರಖ್ಯಾತ ಕಲಾಕಾರರಿಂದ ಸಂಗೀತ ಹಾಗೂ ವಾದ್ಯಗೋಷ್ಠಿಗಳನ್ನೂ ಏರ್ಪಡಿಸಲಾಗುತ್ತಿತ್ತು. ಮುಕ್ತಾಯದ ದಿನ ಜಗದ್ಗುರುಗಳು "ಆನಂದಬ್ರಹ್ಮ" ಎಂಬ ವಿಷಯವಾಗಿ ಪ್ರೌಢ ಉಪನ್ಯಾಸವನ್ನು ನೀಡಿದರು. ಅಂದಿನ ಸಭೆಗೆ ಮ॥ ಕರ್ಪೂರ ಶ್ರೀನಿವಾಸ ರಾಯರು, ರಾವ್ ಬಹಾದುರ್ ಆರ್. ನರಸಿಂಹಾಚಾರ್ಯರು, ಮುಜರಾಯಿ ಇಲಾಖಾ ಕಾರ್ಯದರ್ಶಿ ಮ॥ ಅರುವಾಮುದಯ್ಯಂಗಾರರು ಇನ್ನೂ ಮೊದಲಾದ ಗಣ್ಯರು, ವಿದ್ವಜ್ಜನರು, ಪುರಪ್ರಮುಖರೆಲ್ಲರೂ ಆಗಮಿಸಿದ್ದರು. ಸಭೆಯು ಎಂಟ್ಟತ್ತುಸಾವಿರ ಮಂದಿಯಿಂದ ತುಂಬಿತ್ತು.[58]

## ೭.೩.೨. ರಂಭಾಪುರಿ ಜಗದ್ಗುರುಗಳ ಉತ್ಸವ

೧೯೩೪ರಲ್ಲಿ ಬೆಂಗಳೂರು ನಗರದ ವೀರಶೈವಮಠಗಳ ಪರವಾಗಿ ಮತ್ತೊಂದು ಧಾರ್ಮಿಕ ಮಹೋತ್ಸವವು ಜರುಗಿತು. ಚಿಕ್ಕಪೇಟೆ ಮಹಾಂತರಮಠವು ಈ ಮಹೋತ್ಸವದ ಮೂಲಕಾರಣಸ್ಥಾನವಾಗಿತ್ತು. ಗುರುವರ್ಗದ ಪಂಚಪೀಠಗಳಲ್ಲಿ[59] ಒಂದಾದ ಬಾಳೆಹೊನ್ನೂರಿನ (ರಂಭಾಪುರಿಯ) ವೀರಸಿಂಹಾಸನದ ಜಗದ್ಗುರು ಶಿವಾನಂದರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಬೆಂಗಳೂರಿಗೆ ಆಗಮಿಸಿದ್ದರು. ಈ ಸಂದರ್ಭದ ಪೂರ್ಣ ಜವಾಬ್ದಾರಿಯನ್ನು ದಿವಾನ್ ಬಹದ್ದೂರ್ ಸರ್.ಕೆ.ಪಿ. ಪುಟ್ಟಣ್ಣಶೆಟ್ಟರು, ರಾಜಧರ್ಮಪ್ರವೀಣ ರಿ॥ ಚೀಫ್ ಜಸ್ಟೀಸ್ ಪಿ. ಮಹಾದೇವಯ್ಯನವರು ಇವರೇ ಮೊದಲಾದ ವೀರಶೈವಗಣ್ಯರು ವಹಿಸಿದ್ದರು.

ನಗರದಲ್ಲಿ ದಿನಾಂಕ:೨೭.೪.೧೯೩೪ ರಂದು[60] ಬೆಳಿಗ್ಗೆ ೮.೩೦ಕ್ಕೆ ಪ್ರಾರಂಭವಾದ ಜಗದ್ಗುರುಗಳ ಬೃಹತ್ ಮೆರವಣಿಗೆಯು ಕೆಂಪೇಗೌಡ ವೃತ್ತದಿಂದ ಹೊರಟು ಯಲಹಂಕ ಬಾಗಿಲಿನ ಮೂಲಕ ಅವೆನ್ಯೂರಸ್ತೆ, ದೊಡ್ಡಪೇಟೆ, ಚಿಕ್ಕಪೇಟೆ ಹಾಗೂ ಅರಳೆಪೇಟೆಯ ಚೌಕಗಳನ್ನು ದಾಟಿ ಮಧ್ಯಾಹ್ನ ೨ ಗಂಟೆಯ ವೇಳೆಗೆ ಗುಬ್ಬಿತೋಟದಪ್ಪನವರ ಛತ್ರವನ್ನು ಬಂದು ಮುಟ್ಟಿತು.[61] ಮೆರವಣಿಗೆಯು ಎರಡು ಮೈಲಿಗಳ ದೂರದವರೆಗೆ ಹಬ್ಬಿದ್ದಿತು.[62] ಅಂದು ಮೈಸೂರು ಸಂಸ್ಥಾನದ ಆದೇಶದಂತೆ ಈ ಮಹೋತ್ಸವದ ವ್ಯವಸ್ಥೆಗಾಗಿ ಒಂದುಸಾವಿರ ಮಂದಿ ಪೋಲೀಸ್ ಸಿಬ್ಬಂದಿಯನ್ನು ನಿಯೋಜಿಸಲಾಗಿತ್ತು. ನಗರದ ರೆಸಿಡೆಂಟರ ಆದಿಯಾಗಿ ಅನೇಕ ಸರ್ಕಾರಿ ಅಧಿಕಾರಿಗಳು ಉತ್ಸವದಲ್ಲಿ ಪಾಲ್ಗೊಂಡಿದ್ದರು. ಜನಸಮೂಹವು ಪ್ರವಾಹದೋಪಾದಿಯಲ್ಲಿ ಬಂದುಸೇರಿತ್ತು.[63]

ಜಗದ್ಗುರುಗಳ ಸಾನಿಧ್ಯದಲ್ಲಿ ಹತ್ತು ದಿನಗಳವರೆಗೆ ಶ್ರೇಷ್ಠಪಂಡಿತರು ಹಾಗೂ ಕಲಾವಿದರ ಸಮ್ಮೇಳನಗಳು ಜರುಗಿದವು. ಸರ್ವಧರ್ಮಗಳ ಭಾವೈಕ್ಯತೆಯ ಪ್ರಯುಕ್ತ ವಿಭಿನ್ನಮತೀಯ ವಿದ್ವಾಂಸರುಗಳಿಂದ 'ಶಾಸ್ತ್ರಾರ್ಥಚಿಂತನ ಗೋಷ್ಠಿ'ಯನ್ನು ನಡೆಸಲಾಯಿತು. ಅಂತಿಮ ದಿನದ ಗೋಷ್ಠಿಗೆ ದಿವಾನರಾಗಿದ್ದ ಸರ್. ಮಿರ್ಜಾ ಎಂ. ಇಸ್ಮಾಯಿಲ್ ಅವರೂ ಆಗಮಿಸಿದ್ದರು. ಜಗದ್ಗುರುಗಳ ಸಮಾರೋಪ ಉಪದೇಶವನ್ನು ಕೇಳಿದ ದಿವಾನರಿಗೆ ಅತೀವ ಆನಂದವುಂಟಾಗಿ ಗುರುಗಳಿಗೆ ಮುಕ್ತಮನಸ್ಸಿನ ಅಭಿನಂದನೆಗಳನ್ನು ಸಲ್ಲಿಸಿದರು. ಜೊತೆಗೆ ಸಂಸ್ಥಾನದ ಪರವಾಗಿ ನೆರೆದಿದ್ದ ವಿದ್ವಜ್ಜನರಿಗೆ ಶಾಲು ಹೊದಿಸಿ ಗೌರವಿಸಿದರು.[64] ಇದೇ ಸಂದರ್ಭದಲ್ಲಿ ಕೊನೆಯದಿನ ದಂಡುಪ್ರದೇಶದ ಭಕ್ತರ ಬೇಡಿಕೆಯಂತೆ ಆ ಭಾಗದಲ್ಲೂ ಜಗದ್ಗುರುಗಳ ಅಡ್ಡಪಲ್ಲಕ್ಕಿ ಉತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಲಾಗಿತ್ತು.[65]

## ೭.೪. ಜಯಂತಿಗಳು

ಬೆಂಗಳೂರಿನ ವೀರಶೈವಮಠಗಳ ಪರವಾಗಿ ಪ್ರತಿವರ್ಷವೂ ತಪ್ಪದೆ 'ಬಸವಜಯಂತಿ' ಮತ್ತು 'ರೇಣುಕ ಜಯಂತಿ'[66] ಮಹೋತ್ಸವಗಳೂ ಕೂಡ ಬಹಳ ಹಿಂದಿನಿಂದಲೂ ನಡೆದುಬಂದಿವೆ. ಧಾರ್ಮಿಕ ನಾಯಕರುಗಳ ಬಗೆಗೆ ಗೌರವಾದರಗಳನ್ನು ಸೂಚಿಸುವುದರ ಜೊತೆಗೆ, ಕಾಲಕಾಲಕ್ಕೆ ವೀರಶೈವ ಮತೀಯರಲ್ಲಿ ಧಾರ್ಮಿಕ ಜಾಗೃತಿಯನ್ನು ಉಂಟುಮಾಡುವುದಕ್ಕಾಗಿ ಇಂತಹ ಜಯಂತಿಗಳನ್ನು ನಡೆಸಲಾಗುತ್ತಿತ್ತು. ಕಳೆದ ಶತಮಾನದಿಂದಲೂ ಇಂತಹ ಆಚರಣೆಗಳಿದ್ದವು ಎಂದು ಹೇಳುತ್ತಾರಾದರೂ; ೧೯೨೦ರಿಂದ ಈಚೆಗೆ ಅಧಿಕೃತವಾದ ಮಾಹಿತಿಗಳು ದೊರೆಯುತ್ತವೆ.

೧೯೨೬ರ ಮೇ ೧೩ರಂದು ಚಿಕ್ಕಪೇಟೆಯ ಮಹಾಂತರ ಮಠದಲ್ಲಿ ಶ್ರೀ ಬಸವೇಶ್ವರರ ಜಯಂತ್ಯುತ್ಸವವನ್ನು ಆಚರಿಸಲಾಯಿತು. ಆಗ ಬೆಂಗಳೂರಿನ ಮಾಮೂಲು ಪೇಟೆಯ ಸಿದ್ಧಪ್ಪಶೆಟ್ಟರ ಗುರುಸಿದ್ಧಪ್ಪನವರು ಹಾಗೂ ದೊಡ್ಡಪೇಟೆಯ ಶೆಟ್ಟರು-ಯಜಮಾನರೆಲ್ಲಾ ಸೇರಿ ಮಹಾಂತರಮಠದಲ್ಲಿ ದ್ವಿತೀಯ ಶಂಭುವಾದ ಶ್ರೀ ಬಸವೇಶ್ವರರ ಜಯಂತಿಯನ್ನು ನೆರವೇರಿಸಿದ್ದರು. ಅಂದು ಬೆಳಿಗ್ಗೆ ಮಠದ ಆವರಣದ ಒಳಗೆ ಬಸವೇಶ್ವರಮೂರ್ತಿ (ಲೋಹದ ಪ್ರತಿಮೆ)ಯನ್ನು ಪ್ರತಿಷ್ಠಾಪಿಸಿ, ಎಂದಿನಂತೆ ರುದ್ರಾಭಿಷೇಕ, ಸಹಸ್ರ ಬಿಲ್ವಾರ್ಚನೆ, ಮಹಾಗಣಾರಾಧನೆಗಳನ್ನೂ ಪೂರೈಸಲಾಯಿತು. ಸಂಜೆಯ ವೇಳೆಗೆ ನಗರದ ಮೂರು ಪೇಟೆಗಳ ಪ್ರಮುಖ ಬೀದಿಗಳಲ್ಲಿ ಸಂಭ್ರಮದಿಂದ ಮೆರವಣಿಗೆ ಮಾಡಲಾಯಿತು. ಅಂದು ರಾತ್ರಿ ಮಠದಲ್ಲಿ ವೇ॥ ಶಿವಕಥಾಪಂಡಿತ ಶಿವಪ್ಪಶಾಸ್ತ್ರಿಗಳಿಂದ ಬಸವ ಭಜನೆಯನ್ನು ಏರ್ಪಡಿಸಲಾಗಿತ್ತು.[67]

ಇದೇ ಮಠದಲ್ಲಿ ಪ್ರತಿವರ್ಷದ ಮಾರ್ಚಿತಿಂಗಳಲ್ಲಿ 'ರೇಣುಕ ಜಯಂತಿ'ಯನ್ನೂ ಆಚರಿಸುವ ಪರಿಪಾಠವಿತ್ತು. ಒಮ್ಮೆ ೧೯೨೯ರ ಮಾರ್ಚಿ ೩ ರಂದು ರೇಣುಕಜಯಂತಿಯನ್ನು ಆಚರಿಸಿದಾಗ ಬಸವಜಯಂತಿಯಲ್ಲಿ ನಡೆಸಿದಂತೆಯೇ ಮೊದಲು ರೇಣುಕಮೂರ್ತಿಯನ್ನು ಮಠದೊಳಗೆ ಪ್ರತಿಷ್ಠಾಪಿಸಲಾಯಿತು. ಯಥಾಪ್ರಕಾರ ರುದ್ರಾಭಿಷೇಕ, ಬಿಲ್ವಾರ್ಚನೆಗಳು ನಡೆದಮೇಲೆ ಮಾಹೇಶ್ವರ ಅನ್ನಸಂತರ್ಪಣೆಗಳು ನಡೆದವು. ಸಂಜೆ ಉತ್ಸವ ಮೂರ್ತಿಯ ವೈಭವಯುತ ಮೆರವಣಿಗೆಯಾದ ಮೇಲೆ ಮಠದಲ್ಲಿ ದೊಡ್ಡಬಳ್ಳಾಪುರದ ಶಿವದೇವ ಶಾಸ್ತ್ರಿಗಳಿಂದ ಶಿವಕೀರ್ತನೆ ನಡೆಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಸರ್.ಕೆ.ಪಿ. ಪುಟ್ಟಣ್ಣಶೆಟ್ಟರು ಕೊನೆಗೆ ಸರ್ವರನ್ನೂ ಅಭಿನಂದಿಸಿದ್ದರು.[68] ಎಷ್ಟೋವೇಳೆ ಇವೆರಡೂ ಜಯಂತಿಗಳನ್ನು ಏಪ್ರಿಲ್ ಅಥವಾ ಮೇ ತಿಂಗಳುಗಳಲ್ಲಿ ಒಟ್ಟಿಗೇ ಆಚರಿಸುತ್ತಿದ್ದುದೂ ಉಂಟು. ಇಂತಹ ಜಯಂತಿಗಳು ಮಹಾಂತರ ಮಠದಲ್ಲಿ ಈ ಹೊತ್ತಿಗೂ ಕೂಡ ಆಚರಣೆಯಲ್ಲಿ ಉಳಿದುಕೊಂಡು ಬಂದಿವೆ.

ನಗರದ ಸರ್ಪಭೂಷಣಮಠದಲ್ಲಿ ನಡೆಯುತ್ತಿದ್ದ ಬಸವಜಯಂತಿಯ ವೈಶಿಷ್ಟ್ಯವೇ ಬೇರೊಂದು ರೀತಿಯದಾಗಿತ್ತು. ಇಲ್ಲಿ ಪ್ರತಿವರ್ಷವೂ ಬಸವಜಯಂತಿಯ ಸಂದರ್ಭದಲ್ಲಿ ಮೂರು ದಿವಸಗಳ ಕಾಲ ನಗರಸಂಕೀರ್ತನೆ (ಮೆರವಣಿಗೆ)ಯನ್ನು ಏರ್ಪಡಿಸಲಾಗುತ್ತಿತ್ತು. ಅಂದು ಬಹಳಷ್ಟು ಮಂದಿ ಶಾಲಾಮಕ್ಕಳನ್ನು ಕಲೆಹಾಕಿ ಮೆರವಣಿಗೆಯಲ್ಲಿ ಪಾಲ್ಗೊಳ್ಳುವಂತೆ ಮಾಡಲಾಗುತ್ತಿತ್ತು. ಮುಂಚೂಣಿಯಲ್ಲಿ ಬಸವಪಟವನ್ನು ಅಲಂಕರಿಸಿ ಹೊತ್ತೊಯ್ಯಲಾಗುತ್ತಿತ್ತು. ಪೇಟೆಯ ಬೀದಿಗಳಲ್ಲಿ ಮೆರವಣಿಗೆಯು ಸಾಗಿದಂತೆಲ್ಲಾ ಶಿಕ್ಷಕರೊಬ್ಬರು ಗಟ್ಟಿಯಾಗಿ ಬಸವೇಶ್ವರರ ವಚನಗಳನ್ನು ಹಾಗೂ ಬಸವನಾಮ ಕೀರ್ತನೆಗಳನ್ನು ಹೇಳಿಕೊಡುತ್ತಿದ್ದರು. ಮಕ್ಕಳು ಇದನ್ನು ಧ್ವನಿಎತ್ತರಿಸಿ ಹಾಡಿದಂತೆಲ್ಲಾ ಮನೆಮಂದಿಗಳೆಲ್ಲರೂ ಬಂದುನೋಡಿ, ಭಕ್ತಿಪರವಶರಾಗಿ ಆನಂದ ಪಡೆಯುತ್ತಿದ್ದರು. ಸ್ವತಃ ಮಠದ ಗುರುಗಳಾಗಿದ್ದ ಮಹಾದೇವಸ್ವಾಮಿಗಳೇ ಈ ಮೆರವಣಿಗೆಯ ಮುಂದಾಳತ್ವ ವಹಿಸುತ್ತಿದ್ದರು.[69] ಮಠದ ಪರವಾಗಿ ೧೯೩೮ರಿಂದ ೧೯೮೫ರವರೆಗೂ ನಿರಂತರವಾಗಿ ಪ್ರತಿವರ್ಷವೂ ತಪ್ಪದೆ ಈ ಬಗೆಯ ಬಸವ ಜಯಂತಿಯ ಆಚರಣೆಯು ನಡೆದುದಾಗಿ ತಿಳಿದುಬರುತ್ತದೆ.

ಬೆಂಗಳೂರಿನ ಗುರುವಣ್ಣದೇವರಮಠ, ನಿಜಗುಣಜಂಗಮಮಠ, ನರಗುಂದದೇವರಮಠ, ಕೊಳದಮಠ ಇವೇ ಮೊದಲಾದ ಮಠಗಳಲ್ಲಿ ಇಂದಿಗೂ ಬಸವಜಯಂತಿಯ ಆಚರಣೆಯು ರೂಢಿಯಲ್ಲಿದೆ. ಅಂದು ಸಂತಬಸವೇಶ್ವರರ ಸಂಸ್ಮರಣೆಯ ದಿನವನ್ನಾಗಿ ಆಚರಿಸಲಾಗುತ್ತದೆ. ವಿಶೇಷಪೂಜೆ-ಪುರಸ್ಕಾರಗಳ ಜೊತೆಗೆ ವಿದ್ವತ್‌ಗೋಷ್ಠಿ, ವಚನಗಾಯನ, ಇವೇ ಮೊದಲಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ.

### ೭.೫. ಧಾರ್ಮಿಕ ಪ್ರವಾಸ

ಹಿಂದೆ ಬೆಂಗಳೂರಿನ ಮಠಾಧಿಪತಿಗಳು ತಮ್ಮ ಭಕ್ತ ಸಮುದಾಯವಿರುವ ಕಡೆ ಸಂಚರಿಸಿ 'ಶಿವಕಾಣಿ' (ಧಾರ್ಮಿಕ ಕಾಣಿಕೆ, ಭಕ್ತಿ ಕಾಣಿಕೆ)ಯನ್ನು ಎತ್ತುವುದು ರೂಢಿಯಲ್ಲಿತ್ತು. ಸಾಮಾನ್ಯವಾಗಿ ತಮ್ಮ ಮಠಗಳಲ್ಲಿ ನಡೆಯುತ್ತಿದ್ದ ದೀಪಾರಾಧನೆ, ಗಣಾರಾಧನೆ ಹಾಗೂ ಶಿಷ್ಯಾರ್ಜನೆ ಇವೇ ಮೊದಲಾದ ಧರ್ಮಾರ್ಥ ಕಾರ್ಯಗಳಿಗಾಗಿ ಮಠಾಧಿಪತಿಗಳು ಸಂಚಾರಮಾಡಿ

ಧರ್ಮಭಿಕ್ಷೆಯನ್ನು ಎತ್ತುವ ಪ್ರತೀತಿ ಇತ್ತು. ಅಂದಿನ ಸಮಾಜಬಾಂಧವರೂ ಕೂಡ ಅಪಾರ ಧಾರ್ಮಿಕ ಭಕ್ತಿಯುಳ್ಳವರಾಗಿದ್ದು, ಇಂತಹ ಧರ್ಮಾರ್ಥ ಸೇವೆಗಳಿಗಾಗಿ ಸಾಕಷ್ಟು ಪ್ರೋತ್ಸಾಹವನ್ನು ನೀಡುವವರಾಗಿದ್ದರು.

ಬೆಂಗಳೂರಿನ ಸರ್ಪಭೂಷಣಮಠದ ಫಾಲಲೋಚನ ಸ್ವಾಮಿ (೧೮೪೯-೧೮೬೭)ಗಳು, ಹಾಗೂ ಅವರ ಶಿಷ್ಯರಾಗಿದ್ದ ಗುರುಸ್ವಾಮಿ (೧೮೬೮-೧೯೪೯)ಗಳು ಪೇಟೆಯ ಬೀದಿಗಳಲ್ಲಿ ಮತ್ತು ಸುಗ್ಗಿಯ ಕಾಲದಲ್ಲಿ ಗ್ರಾಮಾಂತರ ಭಾಗಗಳಲ್ಲಿ ಸಂಚರಿಸಿ 'ರಾಶಿಯು' (ಗುಡ್ಡೆಯ ಪಾಲು)ವನ್ನು ಸಂಗ್ರಹಿಸುತ್ತಿದ್ದರು.[70] ಹಾಗೆಯೇ ನರಗುಂದದೇವರಮಠದ ಸಿದ್ಧಲಿಂಗಸ್ವಾಮಿಗಳು ತಮ್ಮ ಮಠವು ಈಗಿನ ರೈಲ್ವೆ ನಿಲ್ದಾಣದ ಒಳಗೆ ಸೇರಿ (೧೮೭೫ರಲ್ಲಿ) ಹೋದಾಗ, ಮುಂದೆ ೧೮೮೦ರ ವೇಳೆಗೆ ಅರಳೆಪೇಟೆಯೊಳಗೆ ನೂತನ ಮಠವೊಂದನ್ನು ನಿರ್ಮಿಸಿಕೊಳ್ಳಬೇಕಾಯಿತು. ಆಗ ಸದರಿ ಮಠದ ನಿರ್ಮಾಣಕ್ಕಾಗಿ ಅಗತ್ಯವಾದ ಧನಸಂಗ್ರಹಣೆಗಾಗಿ ದೇಶದಮೇಲೆ ಸಂಚರಿಸಿ ಭಕ್ತರಿಂದ ಕಾಣಿಕೆ ಎತ್ತಿದ್ದುಂಟು.[71] ಇದೇ ರೀತಿ ಬೇಲಿಮಠದ ರುದ್ರಸ್ವಾಮಿಗಳು (೧೮೫೮-೧೯೪೯) ವಿಶೇಷವಾಗಿ ತಮ್ಮ ಭಕ್ತಾದಿಗಳಿದ್ದ ಗ್ರಾಮಗಳಲ್ಲಿ[72] ಸಂಚರಿಸಿ, ತಮ್ಮ ಮಠದಲ್ಲಿ ನಡೆಸುತ್ತಿದ್ದ ನಿತ್ಯದಾಸೋಹ ಹಾಗೂ ವಿದ್ಯಾರ್ಜನೆಗಳಿಗಾಗಿ ದವಸಧಾನ್ಯಗಳನ್ನು ಸಂಗ್ರಹಿಸುವ ಪರಿಪಾಠವಿತ್ತು.[73]

ಮಾಮೂಲುಪೇಟೆಯ ಗಂಜಾಂಮಠದ ನಂಜುಂಡ ಸ್ವಾಮಿಗಳು ೧೮೮೬ರ ಡಿಸೆಂಬರ್ ೧೫ ರಿಂದ ತಮ್ಮ ಮಠದ ಆಶ್ರಯದಲ್ಲಿ 'ಶ್ರೀ ಪ್ರಮಥಗಣ ಮನೋರಂಜನಿ ಪಾಠಶಾಲೆ'ಯನ್ನು ಪ್ರಾರಂಭಿಸಿದರು.[74] ಮುಂದೆ ಈ ಪಾಠಶಾಲೆಯ ಪುರೋಭಿವೃದ್ಧಿಗಾಗಿ ನಂಜುಂಡಸ್ವಾಮಿಗಳು ಹಾಗೂ ಇವರ ಶಿಷ್ಯರಾಗಿದ್ದ ಚಿದ್ಘನ ಶಿವಾಚಾರ್ಯರು ನಾಡಿನಾದ್ಯಂತ ಅನೇಕ ಪ್ರಾಂತ್ಯಗಳಲ್ಲಿ ಸಂಚಾರಮಾಡಿ ಭಕ್ತರಿಂದ ಉದಾರ ದೇಣಿಗೆ ಪಡೆದುದಾಗಿ ತಿಳಿದುಬರುತ್ತದೆ. ಹೀಗೆ ಸಂಗ್ರಹವಾದ ನಿಧಿಯಿಂದ ಸುಮಾರು ೮೫ ಅಂಕಣವುಳ್ಳ ನೂತನ ಮಠದ ಶಾಲಾಕಟ್ಟಡ ಹಾಗೂ ವಿದ್ಯಾರ್ಥಿಗಳ ವಸತಿಗೃಹಗಳನ್ನು ನಿರ್ಮಿಸಿಕೊಂಡ ವಿವರಗಳಿವೆ.[75]

ಹೀಗೆ ಮಠಗಳ ಧರ್ಮಾರ್ಥಸಾಧನೆಗಾಗಿ ಮಠಾಧಿಪತಿಗಳು ತಮ್ಮ ಭಕ್ತ ಸಮುದಾಯವಿದ್ದ ಕಡೆ ಆಗಾಗ 'ಸರ್ಕೀಟು'[76] (ಧಾರ್ಮಿಕ ಪ್ರವಾಸ) ಹೋಗಿ ಬರುವುದು ಮಾಮೂಲಾಗಿತ್ತು. ಇಂತಹ ಧಾರ್ಮಿಕ ಪ್ರವಾಸಗಳ ಸಂದರ್ಭದಲ್ಲಿ ಬೆಂಗಳೂರಿನ ಗಂಜಾಂಮಠದ ಚಿದ್ಘನಶಿವಾಚಾರ್ಯರು ನಡೆಸುತ್ತಿದ್ದ ಪೂರ್ವಸಿದ್ಧತೆಗಳು ಬಹಳ ಸ್ವಾರಸ್ಯಕರವಾಗಿವೆ. ಸಾಮಾನ್ಯವಾಗಿ ಪ್ರವಾಸಕಾಲದಲ್ಲಿ ಗುರುಗಳಿಗೆ ಸಹಾಯಕರಾಗಿ ೮ ರಿಂದ ೧೦ ಮಂದಿ ಶಿಷ್ಯರು (ಸೇವಕರು) ಹೋಗುತ್ತಿದ್ದರು. ಎರಡು ಅಥವಾ ಕೆಲವು ಬಾರಿ ಮೂರು ಚಕ್ಕಡಾಬಂಡಿಗಳು ಹೋಗುತ್ತಿದ್ದವು. ಜೊತೆಗೆ ಗುರುಗಳೊಂದಿಗೆ ಸನ್ನದ್ಧವಾಗುತ್ತಿದ್ದ ಸಾಮಾನು ಸರಂಜಾಮುಗಳ ಪಟ್ಟಿ[77] ಈ ರೀತಿ ಇದೆ...

**೭.೫.೧. ಚಕ್ಕಡಾಬಂಡಿಗೆ ಭರ್ತಿ ಮಾಡುತ್ತಿದ್ದ ಸಾಮಾನುಗಳು**

| | |
|---|---|
| ದೊಡ್ಡ ಜಾಜಿಕಾಯಿಪೆಟ್ಟಿಗೆ | -3 |
| ಕರಿ ಬೆತ್ತದಪೆಟ್ಟಿಗೆ | -3 |
| ತಪ್ಪಲೆ ತಂಬಿಗೆ ತುಂಬಿದಚೀಲ | -2 |
| ಬುಕ್ಕು ತುಂಬಿದ ತ್ಯಾಗದ ಪೆಟ್ಟಿಗೆ | -1 |
| ನಾರುಹಗ್ಗ ತುಂಬಿದ ಚೀಲ | -1 |
| ಬಟ್ಟೆಗಳ ಚೀಲ | -1 |
| ಕೈಚೀಲಗಳು | -5 |
| ಹಾಸಿಗೆ ಸುರುಳಿಗಳು | -8 |
| ವಸ್ತ್ರದ ತಂಡ್ಲೆ(ಗಂಟು) | -2 |
| ಫರದಾಖಾನೆ, ಡೇರಾಸೆಟ್ಟು | -2 |
| ಹಾಸುಗಂಬಳಿ ಸುರಳಿ | -1 |
| ರತ್ನಗಂಬಳಿ ಸುರಳಿ | -1 |
| ಬೊಂಬಾಯಿ ಚಿತ್ರಾಸನ | -1 |
| ಶಿವಾರ್ಚನಾ ದೊಡ್ಡಪೀಠದ ಹಟಿಕೆ | -1 |
| ನವಲಿಂಗ ದಂಡಾಗ್ರ | 1 |
| ನೀರಿನ ದೊಡ್ಡಹಂಡೆ | -1 |
| ಜಾಜಿಕಾಯಿ ಹಲಗೆಗಳು | -2 |
| ಸವಾರಿಕುಕ್ಕೆ | -2 |
| ಸಮ್ಮೇಳ ಜೋಡಿ | -1 |
| ಕೊಡೆ ಕಡ್ಡಿಗಳು | -6 |

ಯೋಗಪಟ್ಟಿ -1
ದಫೆದಾರನ ಲಟ್ಟಗಳು -4
ಹುರುಳಿಚೀಲ -1
ಹುರುಳಿ ಬೇಯಿಸುವ ಬಾಣಲೆ -1
ಪೆಟ್ಟಿಗೆ ಬಂಡಿಯ ಬಾಗಿಲು ಸಾಮಾನಗಳ ಸೆಟ್ಟು -1

**೭.೫.೨. ಪೆಟ್ಟಿಗೆ ಬಂಡಿಯಲ್ಲಿ ಭರ್ತಿಮಾಡುತ್ತಿದ್ದ ಸಾಮಾನುಗಳು**

ಜಾಜಿಕಾಯಿಪೆಟ್ಟಿಗೆ -1
(ಶಿವಪೂಜಾ ಮಂಟಪದ ಸಾಮಾನುಗಳಿರುವ)
ಡೇರಾ ಮೊಳೆಗಳು -4
ತೇಗದ ಕೈಪೆಟ್ಟಿಗೆ -2
ಕರಿ ಬೆತ್ತದ ಪೆಟ್ಟಿಗೆ -2
ಎಣ್ಣೆ ಶೀಶೆ -2
ಹೊಂಟಿ ಕುಪ್ಪಿದ(ಗುಳಿಗೆ)ಡಬ್ಬಿ -1
ದೊಡ್ಡ ದಿಂಬು -1
ಗಾಸಿ (ಆರಾಮಕುರ್ಚಿ) -1
ಜಮಖಾನಾ -1
ಚಿದ್ಘನಾರ್ಯರ ಲಟ್ಟಿ -1
ಪಪ್ಪಳಿಕಂಬಳಿ -1
ದೊಡ್ಡ ಹಿತ್ತಾಳೆ ಬೋಗುಣಿ -1
ದೊಡ್ಡ ಪೂಜಾ ಘಂಟೆಜೊತೆ -1
ಜಾಗಟೆ, ಗುಣಿಗುಜೊತೆ -1
ಮಡಿ ಕೊಳಾಧಾರದ ಚೀಲ -1
ಕೈತಂಬಿಗೆ -1
ಶಿವಾರ್ಚನಾ ದೊಡ್ಡ ತಂಬಿಗೆ -1
ದಫ್ತರದ (ದಾಖಲೆಗಳ)
ಜಾಜಿಕಾಯಿಪೆಟ್ಟಿಗೆ -1
ಕಾರ್ವೆ ದಫ್ತರ -1
ಸ್ಲೇಟು -1
ವ್ಯಾಸಪೀಠ -1
ಅರಬ್ಬಿ ಲಾಂದ್ರ -2
ದೊಡ್ಡಶಾಯಿ ಕುಡಿಕೆ -1

**೭.೫.೩. ಶಿವಾರ್ಚನಾ ಸಾಮಾನುಗಳು**

ಪುಷ್ಪದ ತಟ್ಟೆಗಳು -2
ಕ್ರಿಯಾದ ಬಟ್ಟಲು -1
ದೊಡ್ಡ ದೂಪಾರತಿ -1
ಹಿತ್ತಾಳೆ ಉದ್ಧರಣೆ -1
ಶಿವಾರ್ಚನಾ ತಲಕಾಡು ಘಂಟೆ ಜೊತೆ -1
ದರ್ಪಣ -2
ಗಂಧದ ಬಟ್ಟಲು -1
ಮೂಗಿನ ಏಕಾರ್ತಿ -1
ಹಿತ್ತಾಳೆ ಕರಕಮಲ -1
ತಾಮ್ರದ ನಾಗರ ಹೆಡೆ -1
ದೊಡ್ಡಮಾಗಡಿ ದೀಪಸ್ತಂಭ -2
ಸಣ್ಣ ಲೋವೆಗಿರಾದೆಗಳು -2
ದೊಡ್ಡಕಮಾನು ಪಟ್ಟಿ -1
ಸಣ್ಣಕಮಾನು ಪಟ್ಟಿ -2
ಶಿಖರದ ಕಮಾನುದಬ್ಬೆ -2
ಕಲಶಗಳು -5
ಮಡಿಹಾವಿಗೆ ಜೊತೆ -1
ಸಣ್ಣ ಕೈತಂಬಿಗೆ -1
ಅರ್ಘಕದ ಸಣ್ಣ ಬಟ್ಟಲುಗಳು -2
ರುದ್ರಾಭಿಷೇಕದ ದೊಡ್ಡತಂಬಿಗೆ -1
ಗೋಮುಖದ ಕಂಚು -1
ಸಾದಾ ಕಂಚು -1
ಹಿತ್ತಾಳೆ ಮಿಳ್ಳೆ -1
ತಾಮ್ರದ ಪಾತ್ರೆ -1
ಹಿತ್ತಾಳೆಯ ದೊಡ್ಡ ಬೋಗುಣಿ -1
ರಸದ ಗುಂಡು -1
ಡಾವಣಿ (ದಾವಣಿ) -1
ಮಂಟಪದ ಪೀಠದ ಹಲಗೆ -1
ಶಿವಪೂಜಾ ಪೀಠಗಳು -2
ಶಿಖರದ ಚಾಂನ್ನಿ (ಚಾಂದಣಿ=ಮೇಲ್ಕಟ್ಟು) -1
ರೇಶ್ಮೆ ಚಿತ್ರಾಸನ -1
ಆಸನದ ಉಡಾಸಿ ಪಾವಡ -1
ರುದ್ರಾಕ್ಷಿ ಪೆಟ್ಟಿ -1
ಜಪದಮಾಲೆ -2
ಉಗುರ ಮರೆಪರದೆ -1
ಕಿತ್ತಾನಾರು ಟೋಪಿಗಳು -2
ಚಾಮರದ ಹಸರು ರೇಶ್ಮೆಗೌಸುಗಳು -2
ಬೇರೆ ರುದ್ರಾಕ್ಷಿ ಮಾಲೆಗಳು -8

ಕಂಕಣ -2
ಪವಳಯುಕ್ತ -2
ತಾಮ್ರದ ಪ್ರಭಾವಳಿ -1
ಉಪಚಾರದ ದ್ರವ್ಯದ ಭರಣಿಗಳು -5
ಹಿತ್ತಾಳೆಯ ಆರ್ತಿ ಪೆಟ್ಟಿಗೆಯಲ್ಲಿ ಇರುವ ಏಕಾರ್ತಿ -1
ತ್ರಯಾರ್ತಿ -1
ಪಂಚಾರತಿ -1
ಸಪ್ತಾರತಿ -1
ಹಿತ್ತಾಳೆಯ ತಟ್ಟೆಗಳು -4
ಹಿತ್ತಾಳೆಯ ಬಾಳೆ ಹೂವು -1
ಹಿತ್ತಾಳೆ ದೊಡ್ಡಘಂಟೆ ಜೊತೆ -1
ಜಾಗಟೆ ಗುಣಿಗುಜೊತೆ -1
ಶಂಖ ಜೊತೆ -1
ಹಿತ್ತಾಳೆ ಸಮ್ಮೇಳ ಜೊತೆ -1
ಪೂಜಾ ಮಂಟಪದ ಕಂಬಗಳು -4
ದೊಡ್ಡ ಲೋವೆಗಿರಾದೆಗಳು
(ಇಳಿಜಾರಾದ ದಿಂಬುಗಳು) -2
ದೊಡ್ಡ ಕಂಠ ಮಡಿಗಳು -2
ದೊಡ್ಡ ಕೈತಂಬಿಗೆ -1
ಪರದೆ ಸಲಾಕಿಗಳು -5
ತಾಮ್ರದ ಪುಷ್ಪಕರಂಡಕ -1
ಡಮರುಗ -1
ಮೊಳೆ ಸ್ಕ್ರೂಗಳುಳ್ಳ ಕಾಲುಗಳು -4
ಕಿಂಕಾಪು ಪರದೆಗಳು -4
ಹಿಂಭಾಗದ ಲಿಂಗಮುದ್ರಾಂಕಿತ ಗೋಡೆಯ ಪರದೆ -1
ಗದ್ದುಗೆ ದಾವಳಿಗಳು -5
ಮಂಟಪದ ಕೊಳಾಯಿಗಳು -5
ಅನುಷ್ಠಾನದ ದೊಡ್ಡವಸ್ತು -1
ಭಸ್ಮದ ಪೆಟ್ಟಿ -2
ಲಿಂಗು ಧರಿಸುವ ರೇಶ್ಮೆ ವಸ್ತ್ರ -4
ಮರಿನಾ ಟೋಪಿಗಳು -2
ಕಾವಿಮಡಿ ಜೊತೆ -2
ರುದ್ರಾಕ್ಷಿ ಕಿರೀಟ -1
ಬೆಳ್ಳಿ ರುದ್ರಾಕ್ಷಿಗಳುಳ್ಳ ಕಿಂಕಾಪು ಟೋಪಿ -1
ಕೊರಳ ಭಾಪುರಿ -2

ಕರಕಮಲಾಲಂಕಾರಮಾಲೆ -2
ಗೋಮುಖ ಜಪಮಾಲಾ -1

**೭.೫.೪. ಬೆಳ್ಳಿ ಸಾಮಾನುಗಳು**

ಚಾಮರ ಜೊತೆ -1
ಕಾರಂಜಿ -1
ಕರಮಕಲ -1
ನಾಗಪೀಠ -1
ನಾಗರ ಹೆಡೆ -1
ಪ್ಯಾಲಾ -1
ಉದ್ಧರಣೆ -1
ಕರ್ಪೂರದ ತಟ್ಟೆ -1
ಗುಂಡಕರಡಿಗೆ -1
ಭರಣಿ -1
ಕ್ರಿಯಾದ ಬಟ್ಟಲು -1
ಬೆಳ್ಳಿ ಚಿಪ್ಪುಳ್ಳ ರುದ್ರಾಕ್ಷಿ ಮಾಲೆಗಳು -2

**೭.೫.೫. ಮಡಿವಸ್ತ್ರಗಳು**

ದೋತರ -2
ಮಲ್‌ಕಪನಿಗಳು -2
ಮಡಿ ರೇಶ್ಮೆ ಕಪನಿಗಳು -2
ಬನಾತಿನ (ಉಣ್ಣೆಯ)ಕಪನಿ -1
ಒಳಅಂಗಿಗಳು ಜೊತೆ -2
ಮರೀನಾ ಅಂಗಿಗಳು -2
ಹಳೆಯ ಮರೀನಾ ಅಂಗಿಗಳು -2
ಕೆಂಪು ವಸ್ತ್ರಗಳು -4

**೭.೫.೬. ಪಾತ್ರೆ ಸಾಮಾನುಗಳು**

ಹಿತ್ತಾಳೆ ದೊಡ್ಡ ಪರಾತುಗಳು -2
ಸ್ನಾನದ ದೊಡ್ಡ ಹಿತ್ತಾಳೆ ಕೊಳದಾಲಿ (ಕೊಳಗ) -1
ಹಿತ್ತಾಳೆ ಹೆಂಚು -1
ಹಿತ್ತಾಳೆ ಚಿಬ್ಲು -1
ತಾಮ್ರದ ನೀರಿನ ಹಂಡೆ -1
ಚಿಕ್ಕ ತಾಮ್ರದ ಕೊಳಗಗಳು -2
ಭೋಜನದ ಹಿತ್ತಾಳೆ ಬಟ್ಟಲುಗಳು -8
ಹಿತ್ತಾಳೆ ಕಪ್ಪರ (ಕಡಾಯ) -1
ತಾಮ್ರದ ಅನ್ನದ ತಪ್ಪಲೆ -1
ತಾಮ್ರದ ಬಿಂದಿಗೆ -1

| | |
|---|---|
| ಹಿತ್ತಾಳೆ ತಂಬಿಗೆಗಳು | -2 |
| ಹಿತ್ತಾಳೆ ಸೌಟು | -1 |
| ಚಿಕ್ಕ ಹಿತ್ತಾಳೆ ಪಾತ್ರೆಗಳು | -2 |
| ಹಿತ್ತಾಳೆ ಸಣ್ಣ ಜರುಕಲು | -1 |

**೭.೫.೭. ಕಬ್ಬಿಣದ ಸಾಮಾನುಗಳು**

| | |
|---|---|
| ದೊಡ್ಡ ಬಿಲ್ಲುಡಿಕೆಗಳು | -2 |
| ಸಣ್ಣರಟೆ ಬಿಲ್ಲುಡಿಕೆ | -1 |
| ಕುಡುಗೋಲು | -2 |
| ಪೆಟ್ಟಿಗೆ ಬಂಡಿಮೆಟ್ಟಿಲು | -2 |
| ಡೇರಾದ ಮೊಳೆಗಳು | -4 |
| ಸುತ್ತಿಗೆ | -1 |
| ಮೊರೆಬಿಲ್ಲೆ ಸರ 1ಕ್ಕೆ 12 ಬಿಲ್ಲೆ | |
| ಮನೆಗಾವು | -1 |
| ಚಿಲ್ಲರೆ ಸಾಮಾನಿನ ಕಬ್ಬಿಣದ ಪೆಟ್ಟಿಗೆ | -1 |
| ಕೊಡಲಿ | -1 |

**೭.೫.೮. ರಾಸುಗಳು**

| | |
|---|---|
| ಮಲಿಗೇನಹಳ್ಳಿ ಕುಲದ ದೊಡ್ಡ ಹೋರಿಗಳು | -1ಜೊತೆ |
| ಗುಡ್ಡದ ಬೆನಕನಹಳ್ಳಿ ಡಾಗಿನ ಹೋರಿಗಳು | -1ಜೊತೆ |
| ತೋರದ ಬಿಳಿ ಹೋರಿಗಳು | -1ಜೊತೆ |
| ಕೊಡಗಹಳ್ಳಿ ಪಾಟಿಗೌಡನ ಡಾಗಿನ ಕುದುರೆಗಳು | -1 ಜೊತೆ |
| ಕುದುರೆಮರಿ | -1 |

ಇಷ್ಟೆಲ್ಲಾ ವಿಚಾರಗಳೂ ಕಳೆದ ಶತಮಾನಾಂತ್ಯದಲ್ಲಿ (೧೮೯೪-೯೮) ಸ್ವತಃ ಸರ್ಕೀಟು (ಧಾರ್ಮಿಕ ಪ್ರವಾಸ) ಮಾಡುತ್ತಿದ್ದ ಗಂಜಾಂಮಠದ ಚಿದ್ಘನಶಿವಾಚಾರ್ಯರು ಬರೆದುಕೊಂಡಿರುವ ತಪಶೀಲು ಪಟ್ಟಿಯಲ್ಲಿ ದೊರೆಯುವುದರಿಂದ, ಆ ಕಾಲದಲ್ಲಿ ಮಠಾಧಿಪತಿಗಳು ತಮ್ಮ ಧಾರ್ಮಿಕ ಪ್ರವಾಸಗಳ ಸಂದರ್ಭದಲ್ಲಿ ಏನೆಲ್ಲಾ ಪರಿಕರಗಳನ್ನು ಒಯ್ಯುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ಅದೇ ವೇಳೆಯಲ್ಲಿ ಗ್ರಾಮಾಂತರ ಭಾಗದ ಭಕ್ತರಿಗೆ ಅವರ ಧಾರ್ಮಿಕ ಆಚರಣೆಗಳು, ರೀತಿ-ನೀತಿಗಳನ್ನು ಕುರಿತು ಜಾಗೃತಿಯನ್ನು ಉಂಟುಮಾಡುವುದೂ ಕೂಡ ಇವರ ಪ್ರವಾಸದ ಇನ್ನೊಂದು ಪ್ರಮುಖ ಉದ್ದೇಶವಾಗಿರುತ್ತಿತ್ತು. ಸಾಮಾನ್ಯವಾಗಿ ಇಂತಹ ಪ್ರವಾಸ ಕಾಲದಲ್ಲಿ ಭಕ್ತರು ಗುರುಗಳಿಗೆ ಉದಾರವಾಗಿ ದವಸ-ಧಾನ್ಯ, ನಗ-ನಾಣ್ಯಗಳನ್ನು ಕಾಣಿಕೆಯಾಗಿ ಅರ್ಪಿಸುವುದು ಸ್ವಾಭಾವಿಕವಾಗಿತ್ತು. ಎಷ್ಟೋವೇಳೆ ಗುರುಮಠಗಳಿಗೆ ಉಪಯುಕ್ತವಾಗಬಹುದಾದ ಜಾನುವಾರು, ಎತ್ತಿನಬಂಡಿ, ಮರಮುಟ್ಟು ಇವೇ ಮೊದಲಾದ ಪದಾರ್ಥಗಳನ್ನು ಕೂಡ ಕಾಣಿಕೆಯಾಗಿ ಅರ್ಪಿಸುತ್ತಿದ್ದುದೂ ಉಂಟು.[78] ಹೀಗೆ ಕಳೆದ ಶತಮಾನದಲ್ಲಿ ಬೆಂಗಳೂರಿನ ಸರ್ಪಭೂಷಣಮಠ, ಬೇಲಿಮಠ, ಗುರುವಣ್ಣದೇವರಮಠ, ನರಗುಂದ ದೇವರಮಠ, ದೇಶದಮಠ, ಕರಿಸಿದ್ಧೇಶ್ವರಮಠ ಇವೇ ಮುಂತಾದ ಮಠಾಧಿಪತಿಗಳು ತಮ್ಮ ಭಕ್ತವೃಂದವಿರುವ ಕಡೆ ವಿಶೇಷವಾಗಿ ಧಾರ್ಮಿಕ ಪ್ರವಾಸ ಮಾಡುತ್ತಿದ್ದುದು ರೂಢಿಯಲ್ಲಿತ್ತು.

**೭.೬. ಪವಾಡಗಳು**

ಸಾಮಾನ್ಯವಾಗಿ ಅತಿಮಾನುಷವಾದ ನಡವಳಿಕೆಗಳನ್ನು ಅಥವಾ ಘಟನಾವಳಿಗಳನ್ನು ಪವಾಡಗಳೆಂದು ಕರೆಯುವುದುಂಟು.[79] ಇವು ಸಾಮಾನ್ಯ ಮನುಷ್ಯರಿಂದ ಸಾಧ್ಯವಿಲ್ಲದ ಅದ್ಭುತ ಕಾರ್ಯಗಳಾಗಿರುತ್ತವೆ. ಧಾರ್ಮಿಕ ನಾಯಕರುಗಳ ವ್ಯಕ್ತಿತ್ವಕ್ಕೆ ಪವಾಡಗಳು ಭೂಷಣಪ್ರದವಾಗಿರುತ್ತವೆ. ಬೆಂಗಳೂರಿನ ಕೆಲವು ಮಠಾಧೀಶರು ಇಂತಹ ಪವಾಡಸದೃಶ ವ್ಯಕ್ತಿತ್ವ ಉಳ್ಳವರಾಗಿದ್ದರು ಎಂದು ಸಾರುವ ಅನೇಕ ದೃಷ್ಟಾಂತಗಳು ಇಂದು ನಮ್ಮ ಮುಂದಿವೆ. ಹೀಗೆ ಭಕ್ತರ ಧಾರ್ಮಿಕ ನಂಬಿಕೆಗಳಿಗೆ ಇಂಬು ಕೊಡುವ ಕೆಲವೊಂದು ಪವಾಡಗಳ ಸಂಗತಿಗಳನ್ನು ಮುಂದೆ ಪರಿಶೀಲಿಸಲಾಗಿದೆ.

ಸರ್ಪಭೂಷಣ ಮಠದ ಸ್ಥಾಪಕರಾಗಿದ್ದ ಸರ್ಪಭೂಷಣ ಶಿವಯೋಗಿಗಳು ಬೆಂಗಳೂರಿನ ಪ್ರಮುಖ ತತ್ತ್ವಜ್ಞಾನಿಗಳೂ, ತಪೋಧನರೂ ಆಗಿದ್ದಂತೆ, ಸುಪ್ರಸಿದ್ಧ ಪವಾಡ ಪುರುಷರೂ ಆಗಿದ್ದರು. ಇವರು ಕೇವಲ ೪೪ ವರ್ಷಗಳ ತಮ್ಮ ಸಂಕ್ಷಿಪ್ತ ಬದುಕಿನ ಉದ್ದಕ್ಕೂ ಅನೇಕ ಬಗೆಯ ಪವಾಡಗಳನ್ನು ಮೆರೆದುದಾಗಿ ತಿಳಿದುಬರುತ್ತದೆ. ಜೊತೆಗೆ ಇಲ್ಲಿ ಬರುವ ಸಂಗತಿಗಳೆಲ್ಲವೂ ಅವರ ಧಾರ್ಮಿಕ ಬದುಕಿಗೆ ಹೇಳಿ ಮಾಡಿಸಿದಂಥವೇ ಆಗಿರುವುದು ಗಮನಾರ್ಹ.

ಸರ್ಪಭೂಷಣರ ಮೂಲ ಹೆಸರು ಸಪ್ಪಣ್ಣ (ಸಪ್ಪಯ್ಯ). ಇವರು ಮೂರು ವರ್ಷದ ಹಸುಳೆಯಾಗಿದ್ದಾಗ ಒಮ್ಮೆ ತಮ್ಮ ತಂದೆ-ತಾಯಿ

(ಬಾಣಾವರದ ಮಲ್ಲಿಕಾರ್ಜುನಪ್ಪ, ಚನ್ನಮ್ಮ)ಗಳ ಜೊತೆ, ಗುರುಸಿದ್ಧಸ್ವಾಮಿಗಳ ದರ್ಶನಕ್ಕಾಗಿ ತಿಪ್ಪಶೆಟ್ಟಿ ಮಠಕ್ಕೆ ಹೋಗಿದ್ದರು. ಆಗ ಮಠದ ಮುಂಭಾಗದ ಕೈತೋಟದಲ್ಲಿ ಆಡ್ತಾಡುತ್ತಿದ್ದ ಬಾಲಕ ಸಪ್ಪಯ್ಯನ ಕೊರಳಿಗೆ ಸರ್ಪವೊಂದು ಸುತ್ತಿಕೊಂಡು ಹೆಡೆಯಾಡುತ್ತಿದ್ದು ದನ್ನು ಕಂಡ ಗುರುಗಳು ಆಶ್ಚರ್ಯಚಕಿತರಾಗಿ, ಈತ ಬರಿ ಸಪ್ಪಯ್ಯನಲ್ಲ, ನಿಜವಾಗಿಯೂ 'ಸರ್ಪಭೂಷಣ'ನೆಂದು ಉದ್ಗಾರ ತೆಗೆದರಂತೆ.[80] ಅಂದಿನಿಂದಲೇ ಇವರಿಗೆ ಸರ್ಪಭೂಷಣರೆಂಬ ಹೆಸರು ಬಂದುದಾಗಿ ಹೇಳಲಾಗುತ್ತದೆ.[81]

ಸರ್ಪಭೂಷಣರು ದೇಶಸಂಚಾರ ಹೋಗಿದ್ದ ಸಂದರ್ಭದಲ್ಲಿ ಅನೇಕ ಪವಾಡಗಳನ್ನು ಮೆರೆದುದಾಗಿ ಹೇಳುವುದುಂಟು. ಒಮ್ಮೆ ಸರ್ಪಭೂಷಣರು ಬಸವಣ್ಣ ನವರ ಭಕ್ತಿಯ ತವರುಮನೆ ಎನಿಸಿಕೊಂಡಿದ್ದ ಬಾಗಲ ಕೋಟೆಯ ಬಳಿ ಬರುತ್ತಿರುವಾಗ, ಮಾರ್ಗಮಧ್ಯದಲ್ಲಿ ಜಂಗಮನೊಬ್ಬ ಬಾವಿಯಲ್ಲಿ ಮೀಯುವಾಗ ತನ್ನ 'ಇಷ್ಟಲಿಂಗ'[82]ವನ್ನು ಕಳೆದುಕೊಂಡು ವ್ಯಥೆಪಡುತ್ತಿದ್ದನು. ಅಲ್ಲಿ ನೆರೆದಿದ್ದ ಜನರು ಕುತೂಹಲದಿಂದ ಈ ಗೊಂದಲ ದಲ್ಲಿ ಭಾಗಿಗಳಾಗಿದ್ದರು. ಆಗ ಅದೇ ಮಾರ್ಗದಲ್ಲಿ ಬಂದ ಶಿವಯೋಗಿಗಳು ಇದೇನೆಂದು ವಿಚಾರಿಸಿ, ''ಆಹಾ! ಲಿಂಗಹೋಯಿತು ಹೇಗೆ? ಜಂಗಮ ಉಳಿದ ಹೇಗೆ?'' ಎಂದು ಹೇಳಿ ಮುಂದೆ ಸಾಗಿದರು. ಅತ್ತ ಕೊಂಚ ಸಮಯದಲ್ಲೇ ಇಷ್ಟಲಿಂಗವನ್ನು ಹುಡುಕಿಕೊಳ್ಳುವಲ್ಲಿ ಸಫಲನಾದ ಜಂಗಮನಿಗೆ ಶಿವಯೋಗಿಗಳು ಆಡಿದ ಮಾತು ಸಹ್ಯವೆನಿಸಲಿಲ್ಲ. ಆಗ ಜಂಗಮನು ಸಮಯವನ್ನು ಸಾಧಿಸಿ ಒಂದುದಿನ ಶಿವಯೋಗಿಗಳೂ ಇಂತಹುದೇ ಪೇಚಿಗೆ ಸಿಲುಕುವಂತೆ ಮಾಡಿದ. ಅವರು ಆಲಯವೊಂದರಲ್ಲಿ ಮಲಗಿರುವಾಗ ಅವರ ಶರೀರದ ಮೇಲಿದ್ದ ಇಷ್ಟಲಿಂಗ ವನ್ನು ಕಪಟತನದಿಂದ ಪ್ರತ್ಯೇಕಿಸಿಬಿಟ್ಟ. ಆ ಕ್ಷಣವೇ ಅವರ ಪ್ರಾಣಪಕ್ಷಿಯೂ ಹಾರಿಹೋಯಿತು. ನಿಸ್ತೇಜವಾದ ಶಿವಯೋಗಿಗಳ ಶರೀರವನ್ನು ಕಂಡು ಗಾಬರಿಗೊಂಡ ಜಂಗಮ ತಕ್ಷಣ ಕ್ರಿಯಾಮೂರ್ತಿಗಳೊಬ್ಬರನ್ನು ಕರೆತಂದು ಪಾದೋದಕ ಪ್ರಸಾದಗಳಿಂದ ಅವರ ಇಷ್ಟಲಿಂಗವನ್ನು ಧಾರಣ ಮಾಡಿಸಿದಾಗ ಮತ್ತೆ ಚೈತನ್ಯಗೊಂಡರಂತೆ. ಆ ಕೂಡಲೇ ಜಂಗಮನು ಶಿವಯೋಗಿಗಳ ಪಾದಗಳಿಗೆ ಬಿದ್ದು ತನ್ನ ತಪ್ಪಿಗಾಗಿ ಕ್ಷಮೆಯಾಚಿಸಿದನಂತೆ.[83]

ಇನ್ನೊಮ್ಮೆ ಬಳ್ಳಾರಿಯಲ್ಲಿ ಇದ್ದಾಗ ಶಿವಯೋಗಿಗಳು ವಿಧವೆಯೊಬ್ಬಳ ಪ್ರಾರ್ಥನೆಗೆ ಓಗೊಟ್ಟು, ಕೆಲವು ದಿನಗಳ ಮಟ್ಟಿಗೆ ಆಕೆಯ ಮನೆಯಲ್ಲೇ ತಮ್ಮ ಅನುಷ್ಠಾನಾದಿ ಗಳನ್ನು ಮುಂದುವರೆಸಿದ್ದರು. ಆಗ ಸಂಶಯಗ್ರಸ್ತರಾದ ಕೆಲವು ಕುಹಕಿಗಳು ಶಿವಯೋಗಿಗಳು ವಿಧವೆಯೊಬ್ಬಳ ಮನೆಯಲ್ಲಿ ಉಳಿದುಕೊಂಡಿದ್ದರ ಔಚಿತ್ಯವನ್ನು ಕುರಿತು ಗೇಲಿ ಮಾಡತೊಡಗಿದ್ದರು. ಇದರಿಂದಾಗಿ ವಿಧವೆಯು ಬಹಳವಾಗಿ ಮನನೊಂದಳಂತೆ. ಪ್ರಸಂಗವನ್ನು ಗ್ರಹಿಸಿದ ಶಿವಯೋಗಿಗಳು ಖಿನ್ನವದನರಾಗಿ ಆ ಕ್ಷಣವೇ ಆಕೆಯ ಮನೆಯಿಂದ ಹೊರನಡೆದರಂತೆ. ಇತ್ತಕಡೆ ಕುಹಕಿಗಳ ಮನೆ ಮಂದಿಗೆಲ್ಲಾ ವಿಚಿತ್ರವಾದ ವಾಂತಿ-ಭೇದಿಯ ಬೇನೆಯು ಕಾಣಿಸಿಕೊಂಡು ಆ ಜನ ತಲ್ಲಣಿಸಿ ಹೋದರಂತೆ. ತಕ್ಷಣ ಪರಿಸ್ಥಿತಿಯನ್ನರಿತ ಅವರಿಗೆ ತಪ್ಪಿನ ಅರಿವಾಗಿ ಕೂಡಲೆ ಊರಾಚೆಗೆ ನಡೆದಿದ್ದ ಶಿವಯೋಗಿಗಳಿಗೆ ಶರಣಾಗಿ ತಮ್ಮ ಅಪರಾಧವನ್ನು ಮನ್ನಿಸುವಂತೆ ಬೇಡಿಕೊಂಡರಂತೆ. ಇತ್ತ ಶಿವಯೋಗಿಗಳು ಪ್ರಸನ್ನಚಿತ್ತರಾಗುತ್ತಿದ್ದಂತೆಯೇ ಆ ಜನರೆಲ್ಲಾ ಬೇನೆಯಿಂದ ಮುಕ್ತರಾದುದಾಗಿ ತಿಳಿದುಬರುತ್ತದೆ.[84]

ಶಿವಯೋಗಿಗಳು ಒಮ್ಮೆ ಮೈಸೂರು ಪ್ರಾಂತ್ಯದಲ್ಲಿ ಸಂಚಾರ ನಡೆಸಿದ್ದರು. ಆಗ ನಂಜನಗೂಡು ತಾಲ್ಲೂಕಿನ ದೇವನೂರಿಗೆ ಬಂದು ಅಲ್ಲಿ ಊರಾಚೆಗಿದ್ದ ಆಂಜನೇಯ ಸ್ವಾಮಿ ಗುಡಿಯ ಹಿಂಭಾಗದಲ್ಲಿದ್ದ ಪಾಳುಮಂಟಪದಲ್ಲಿ ವಿಶ್ರಮಿಸಿಕೊಂಡಿದ್ದರು. ಮಾರನೆಯದಿನ ಸೂರ್ಯೋದ ಯದ ವೇಳೆಗೆ ದೇವಾಲಯದ ಅರ್ಚಕರು ಬಂದು ಗುಡಿಯ ಒಳಹೊಕ್ಕಾಗ ಗರ್ಭಗುಡಿಯ ಪೂಜಾಮೂರ್ತಿಯು ಗುಡಿಯ ಹಿಂಭಾಗಕ್ಕೆ ತಿರುಗಿ ನಿಂತಿತ್ತು. ಈ ವಿಚಿತ್ರ ತಿರುವನ್ನು ಕಂಡು ಆಶ್ಚರ್ಯಚಕಿತರಾದ ಅರ್ಚಕರು ಕುತೂಹಲದಿಂದ ಗುಡಿಯ ಹಿಂಭಾಗಕ್ಕೆ ಬಂದು ನೋಡಿದರು. ಅಷ್ಟು ಹೊತ್ತಿಗಾಗಲೆ ಶಿವಯೋಗಿಗಳು ಅರುಣೋದಯದ ಶಿವಪೂಜೆಯನ್ನು ಮುಗಿಸಿ ಮುಂದಿನ ಸಂಚಾರಕ್ಕೆ ಸನ್ನದ್ಧರಾಗಿದ್ದರು. ಅರ್ಚಕರೊಡನೆ ಶಿವಯೋಗಿಗಳು ಗುಡಿಯ ಮುಂಭಾಗಕ್ಕೆ ಬಂದಾಗ ಆಂಜನೇಯಸ್ವಾಮಿಯ ವಿಗ್ರಹವು ಯಥಾಪ್ರಕಾರ ಗುಡಿಯ ಮುಂಭಾಗಕ್ಕೆ ತಿರುಗಿ ನಿಂತಿದ್ದಿತಂತೆ.[85] ಆಗ ಶಿವಯೋಗಿಗಳ ಆಧ್ಯಾತ್ಮದ ಎತ್ತರವನ್ನು ಅರಿತುಕೊಂಡ

ಅರ್ಚಕರು ಮಹಾನುಭಾವರ ದರ್ಶನ ತಮಗಾಯಿತು ಎಂದು ಸರ್ಪಭೂಷಣರ ಆಶೀರ್ವಾದವನ್ನು ಕೋರಿದರಂತೆ.

ಮತ್ತೊಮ್ಮೆ ಸರ್ಪಭೂಷಣರು ತಮ್ಮ ಶಿಷ್ಯಸಮೂಹ ದೊಂದಿಗೆ ಶ್ರೀಶೈಲ ಯಾತ್ರೆಗೆ ಹೋಗಿದ್ದರಂತೆ. ಆಗ ಶ್ರೀಗಿರಿಯ ಸಮೀಪ ಮಾರ್ಗಮಧ್ಯದಲ್ಲಿ ಸಂಜೆಗತ್ತಲಾಗಿ ಸಮೀಪವೆ ಇದ್ದ ಪಾಳುಮಂಟಪದಲ್ಲಿ ಉಳಿಯ ಬೇಕಾಯಿತು. ಶಿಷ್ಯಗಣವು ಬಹಳ ದೂರದವರೆಗೆ ನಡೆದಿದ್ದ ರಾದ ಕಾರಣ ಹಸಿವು ಬಾಯಾರಿಕೆಗಳಿಂದ ಪರಿತಪಿಸ ತೊಡಗಿದ್ದರು. ಶಿಷ್ಯರಿಗೆ ಚಿಂತಿಸದಿರಿ ಎಂದು ಹೇಳಿದ ಗುರುಗಳು ತುಂಬುಗತ್ತಲಿನಲ್ಲಿ ಸಮೀಪವೇ ಕಾಣುತ್ತಿದ್ದ ಮಿಣುಕು ದೀಪದ ಕುಟೀರವೊಂದಕ್ಕೆ ಕರೆದೊಯ್ದರು. ಅಲ್ಲಿದ್ದ ಇಳಿವಯಸ್ಸಿನ ವೃದ್ಧದಂಪತಿಗಳು ಈ ಗುರುಸಮೂಹವನ್ನು ಕಂಡು ತುಂಬಾ ಆದರದಿಂದ ಇವರಿಗೆಲ್ಲಾ ಪೂಜೆ ಪ್ರಸಾದಗಳಿಗೆ ಸೂಕ್ತ ಏರ್ಪಾಟು ಮಾಡಿ ಸಂತೃಪ್ತಿಗೊಳಿಸಿದರಂತೆ. ಮತ್ತೆ ತಾವಿದ್ದ ಪಾಳುಮಂಟಪಕ್ಕೆ ಬಂದು ರಾತ್ರಿ ವಿಶ್ರಮಿಸಿಕೊಂಡು ಬೆಳಗಾಗುತ್ತಲೇ ನೋಡಿದಾಗ, ಕಳೆದರಾತ್ರಿ ತಾವು ಪೂಜೆ ಪ್ರಸಾದಗಳನ್ನು ಸ್ವೀಕರಿಸಿದ ಕುಟೀರವೇ ಅಲ್ಲಿ ಇರಲಿಲ್ಲವಂತೆ.[86] ಕೌತುಕಗೊಂಡ ಶಿಷ್ಯಗಣದವರು ಇದೇನು ಸೋಜಿಗವೆಂದು ಗುರುಗಳಲ್ಲಿ ವಿಜ್ಞಾಪಿಸಿದಾಗ ಎಲ್ಲವೂ ಕ್ಷೇತ್ರನಾಥನ ಕೃಪೆ ಎಂದು ಮುಂದೆ ನಡೆದರಂತೆ.

ಶ್ರೀಶೈಲದಿಂದ ಮತ್ತೆ ಮರಳಿಬರುವಾಗ ಕುಗ್ರಾಮವೊಂದರಲ್ಲಿ ರೈತಾಪಿ ಜನಗಳು ಸರ್ಪಭೂಷಣರ ಬಳಿ ಬಂದು, ಒಂದು ವಿಚಿತ್ರವಾದ ಮನವಿಯನ್ನು ಸಲ್ಲಿಸಿದರಂತೆ. ಅಲ್ಲಿ ಊರಿನ ಹೊರಭಾಗದ ನೆಲದಲ್ಲಿ ಹೂತುಹೋಗಿದ್ದ ಶಿವಲಿಂಗವೊಂದು ಯಾವಾಗಲೂ ಭಯಾನಕವಾದ ಧ್ವನಿಯನ್ನು ಹುಟ್ಟಿಸುತ್ತಿದ್ದಿತಂತೆ. ಭಯಭೀತರಾಗಿದ್ದ ಆ ಭಾಗದ ಜನರೆಲ್ಲಾ ತಮ್ಮನ್ನು ಇದರಿಂದ ಪಾರುಮಾಡಬೇಕಾಗಿ ಬಿನ್ನವಿಸಿಕೊಂಡರು. ಸ್ವತಃ ಶಿವಯೋಗಿಗಳೇ ಮುಂದೆ ನಿಂತು ಆ ಜನಗಳಿಂದಲೇ ಶಿವಲಿಂಗವನ್ನು ಸ್ಥಳದಿಂದ ಬಿಡಿಸಿತಂದು ತಮ್ಮ ಮಠದಲ್ಲೇ ಇರಿಸಿಕೊಂಡರಂತೆ. ಅದೇ ಈಗಿನ ಸರ್ಪಭೂಷಣಮಠದ ಆವರಣದೊಳಗಿರುವ ಓಂಕಾರೇಶ್ವರ ಗುಡಿಯೊಳಗಿನ ಶಿವಲಿಂಗವೆಂದು ಹೇಳಲಾಗುತ್ತದೆ.[87]

ಇಷ್ಟೆಲ್ಲಾ ಪವಾಡಸದೃಶ ವ್ಯಕ್ತಿತ್ವವನ್ನು ಹೊಂದಿದ್ದ ಸರ್ಪಭೂಷಣ ಶಿವಯೋಗಿಗಳು, ತಮ್ಮ ಇಹಲೋಕದ ವ್ಯವಹಾರಗಳನ್ನು ಮುಗಿಸಿದಾಗಲೂ ಕೆಲವು ಪವಾಡ ಗಳನ್ನು ನಡೆಸಿದುದಾಗಿ ಹೇಳುವುದುಂಟು. ಶಿವಯೋಗಿಗಳು ಕೈಲಾಸವಾಸಿಗಳಾದಾಗ (೧೮೬೬ರಲ್ಲಿ) ತಮ್ಮ ಪರಮ ಮಿತ್ರರಾಗಿದ್ದ ಮರಳೆಗವಿಮಠದ ಹುಚ್ಚಪ್ಪಸ್ವಾಮಿಗಳಿಗೆ ದರ್ಶನನೀಡಿದ್ದರಂತೆ. ಬೆಂಗಳೂರಿಗೆ ೪೦ ಮೈಲಿಗಳ ಅಂತರದಲ್ಲಿದ್ದ ಹುಚ್ಚಪ್ಪಸ್ವಾಮಿಗಳು ಶಿವಪೂಜಾ ನಿರತರಾಗಿ ಇಷ್ಟಲಿಂಗವನ್ನು ನಿರೀಕ್ಷಿಸುತ್ತಿದ್ದಾಗ ಅದರೊಳಗೆ ಸರ್ಪಭೂಷಣರು ಕೈಲಾಸ ಮಾರ್ಗದಲ್ಲಿ ಸಾಗುತ್ತಿರುವ ಸೂಚನೆ ನೀಡಿದ್ದರಂತೆ.[88] ಆ ಕೂಡಲೇ ಅವರು ತಮ್ಮ ಭಕ್ತರೊಂದಿಗೆ ಬೆಂಗಳೂರಿಗೆ ಹೊರಟು ಬಂದು ಶಿವಯೋಗಿಗಳ ಅಂತ್ಯಕ್ರಿಯೆಯಲ್ಲಿ ಪಾಲ್ಗೊಂಡ ರಂತೆ. ಭಕ್ತರೆಲ್ಲಾ ಸೇರಿ ಮಠದ ಆವರಣದೊಳಗೇ ಇವರ ಕ್ರಿಯಾಸಮಾಧಿಗೆ ಸಿದ್ಧತೆ ನಡೆಸಿದ್ದಾಗ ಬ್ರಿಟಿಷ್ ಅಧಿಕಾರಿಯೊಬ್ಬ ಮಠದ ಆವರಣದೊಳಗೆ ಅಂತ್ಯಸಂಸ್ಕಾರ ನಡೆಸದಂತೆ ನಿರ್ಬಂಧಿಸಿದನಂತೆ. ಭಕ್ತರು ಈ ಕಾರ್ಯವು ಮಠದ ಆವರಣದೊಳಗೇ ನಡೆಯಬೇಕೆಂದು ಪಟ್ಟು ಹಿಡಿದಾಗ ಅಂದಿನ ರಾತ್ರಿ ಶಿವಯೋಗಿಗಳು ಅಧಿಕಾರಿಯ ಕನಸಿನಲ್ಲಿ ಕಾಣಿಸಿಕೊಂಡಿದ್ದರಂತೆ. ತತ್ಪರಿಣಾಮವಾಗಿ ಆ ಅಧಿಕಾರಿಯು ಮಾರನೆಯ ದಿನ ಮಠದ ಆವರಣಕ್ಕೆ ಬಂದು ಗುರುಗಳಿಗೆ ಅಂತಿಮ ನಮನಗಳನ್ನು ಸಲ್ಲಿಸಿ, ಸಮಾಧಿಕಾರ್ಯವು ಮಠದ ಆವರಣದಲ್ಲೇ ನಡೆಯುವಂತೆ ಸೂಚಿಸಿ ಹೋದನಂತೆ.[89]

ಕೊನೆಗೆ ಶಿವಯೋಗಿಗಳ ಕ್ರಿಯಾಸಮಾಧಿಗಾಗಿ ಸೂಕ್ತ ಏರ್ಪಾಟುಗಳು ನಡೆದವು. ಆ ಸಂದರ್ಭದಲ್ಲಿ ಅಂತ್ಯಕ್ರಿಯಾ ವಿಧಿಗಳನ್ನು ನೆರವೇರಿಸುತ್ತಿದ್ದ 'ಪಸುಗೆ ಮರಿ'[90] ಯು ನೆರೆದವರ ಕಣ್ಣುತಪ್ಪಿಸಿ ಶಿವಯೋಗಿಗಳ ಕೊರಳಲ್ಲಿದ್ದ ಬಂಗಾರದ ಕರಡಿಗೆಯನ್ನು ತೆಗೆದು ತನ್ನ ಸೊಂಟದಲ್ಲಿ ಸಿಕ್ಕಿಸಿಕೊಂಡನಂತೆ. ನಂತರ ಕರಡಿಗೆಯು ಏನಾಯಿತೆಂದು ಅಲ್ಲಿದ್ದವರು ವಿಚಾರ ಮಾಡತೊಡಗಿದಾಗ ಶಿವಯೋಗಿಗಳ ಪಾರ್ಥಿವಶರೀರವು ತಕ್ಷಣ ಕಣ್ತೆರೆದು ಪಸುಗೆಮರಿಯನ್ನೇ ದೃಷ್ಟಿಸಿತಂತೆ. ಆಗ ಭಯಭೀತನಾದ ಆತ ಗಡಗಡ ನಡುಗುತ್ತಾ ತನ್ನ ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ಬಂಗಾರದ ಕರಡಿಗೆಯನ್ನು ತೆಗೆದು ಒಪ್ಪಿಸಿದನಂತೆ.[91]

ಹೀಗೆ ಸರ್ಪಭೂಷಣ ಶಿವಯೋಗಿಗಳ ಜೀವನದುದ್ದಕ್ಕೂ ಅನೇಕ ತೆರನಾದ ಪವಾಡಗಳು ಅವರ ದಾರ್ಶನಿಕ ವ್ಯಕ್ತಿತ್ವಕ್ಕೆ ಒಪ್ಪುವ ರೀತಿ ಭೂಷಣಪ್ರದವಾಗಿವೆ. ಅವರು ಸತ್ತುಸಮಾಧಿಯಾದಮೇಲೂ ಅವರ ಪವಾಡಸದೃಶ ವ್ಯಕ್ತಿತ್ವ ಎಷ್ಟೊಂದು ಪ್ರಭಾವಪೂರ್ಣವಾಗಿದ್ದಿತೆಂಬುದಕ್ಕೆ ಮತ್ತೊಂದು ನಿದರ್ಶನವನ್ನು ಕೊಡಬಹುದಾಗಿದೆ.

ಸರ್ಪಭೂಷಣರ ಆದೇಶದಂತೆ ಅವರ ಶಿಷ್ಯರಾಗಿದ್ದ ಫಾಲಲೋಚನ ಶಿವಯೋಗಿಗಳು, ಮಠದ ಭಕ್ತರಾಗಿದ್ದ ಕೆಂಪುನೂಲು ನಂಜುಂಡಯ್ಯ ಮತ್ತು ಅವನ ಕುಲಸ್ಥರಾಗಿದ್ದ- ಏಳುನೂರು ಮಂದಿ ಭಕ್ತರಿಗೆ ಶಿವದೀಕ್ಷೆಯನ್ನು ಅನುಗ್ರಹಿಸಿದ್ದರು. ಹೀಗೆ ಕೆಳಸ್ತರದ ಜನರಿಗೆಲ್ಲಾ ಶಿವದೀಕ್ಷೆಯನ್ನು ಅನುಗ್ರಹಿಸುವುದು ಪೇಟೆ ಮನೆಗಳವರಿಗೆ ಸರಿದೋರಲಿಲ್ಲ. ಇದು ಧರ್ಮಬಾಹಿರವೆಂದೇ ಬಗೆದಿದ್ದ ಅವರು ಗುರುಗಳ ಬಗೆಗೆ ಕಹಿ ಮನೋಭಾವವನ್ನೇ ಬೆಳೆಸಿಕೊಂಡಿದ್ದರು. ಶಿವಯೋಗಿಗಳು ಶಿವಾಧೀನರಾದ ಎಷ್ಟೋ ದಿನಗಳವರೆಗೂ ಕೆಲವು ಮತಾಂಧ ಕುಹಕಿಗಳು ಫಾಲಲೋಚನರಿಗೆ ಸಲ್ಲದ ಉಪದ್ರವ ನೀಡುವುದು ಮಾಮೂಲಾಗಿತ್ತು. ಒಂದು ದಿನ ಅರಣೋದಯದ ವೇಳೆಗೆ ಫಾಲಲೋಚನರು ಮಠದ ಮುಂದಿನ ಕಲ್ಯಾಣಿಯಲ್ಲಿ ಸ್ನಾನಮಾಡಿ ಕೈತೋಟದಲ್ಲಿ ಹೂವು-ಪತ್ರೆಗಳನ್ನು ಸಂಗ್ರಹಿಸತೊಡಗಿದ್ದರಂತೆ. ಆ ವೇಳೆಗಾಗಲೇ ಮಠದ ಮೋಟುಗೋಡೆಯ ಮೇಲೆ ಬಂದು ಕುಳಿತಿದ್ದ ಐದಾರು ಮಂದಿ ಕುಚೋದ್ಯಮತಿಗಳು ಗುರುಗಳನ್ನು ಅಸಹ್ಯಕರ ಮಾತುಗಳಿಂದ ಚುಚ್ಚತೊಡಗಿದರು. ಇದರಿಂದ ಬಹಳವಾಗಿ ಮನನೊಂದ ಫಾಲಲೋಚನರು ಉಗ್ರಮನಸ್ಕರಾಗಿ ಸರ್ಪಭೂಷಣರ ಗದ್ದುಗೆಯ ಬಳಿ ಬಂದು ಒಂದೊಂದೇ ಹೂಗಳನ್ನು ತೆಗೆದು ಗದ್ದುಗೆಯ ಮೇಲೆ ಒಗೆಯತೊಡಗಿದರಂತೆ. ಇಲ್ಲಿ ಇವರು ಒಂದೊಂದೇ ಹೂಗಳನ್ನು ಒಗೆದಂತೆಲ್ಲಾ, ಅತ್ತ ಕುಹಕಿಗಳ ಮನೆಗಳಲ್ಲಿ ಹೆಂಗಸರು ಮಕ್ಕಳಾದಿಯಾಗಿ ಒಬ್ಬೊಬ್ಬರೇ ಮೂರ್ಛೆ ಬೀಳತೊಡಗಿದರಂತೆ. ಸ್ವಲ್ಪ ಹೊತ್ತಿಗೆ ಪರಿಸ್ಥಿತಿಯನ್ನು ಅರಿತ ಆ ಭಂಡರೆಲ್ಲಾ ದೀನರಾಗಿ ಬಂದು ಶಿವಯೋಗಿಗಳ ಗದ್ದುಗೆಗೆ ಎರಗಿ ತಮ್ಮ ಅಪರಾಧವನ್ನು ಮನ್ನಿಸುವಂತೆ ಪ್ರಾರ್ಥಿಸಿಕೊಂಡರಂತೆ. ಆಗ ಪ್ರಸನ್ನರಾದ ಫಾಲಲೋಚನರು ತಾವು ಗದ್ದುಗೆಗೆ ಒಗೆದಿದ್ದ ಹೂಗಳನ್ನೇ ಎತ್ತಿಕೊಟ್ಟು ಅವರನ್ನೆಲ್ಲಾ ಆಶೀರ್ವದಿಸಿ ಕಳುಹಿಸಿದಾಗ, ಇತ್ತಮೂರ್ಛಿತರಾಗಿ ಬಿದ್ದಿದ ಹೆಂಗಸರು, ಮಕ್ಕಳೆಲ್ಲಾ ಮತ್ತೆ ತಮ್ಮ ಸಹಜಸ್ಥಿತಿಗೆ ಮರಳಿದುದಾಗಿ[92] ಹೇಳಲಾಗುತ್ತದೆ.

ಬೆಂಗಳೂರಿನ ಮಠಾಧಿಪತಿಗಳ ಪರವಾಗಿ ಸರ್ಪಭೂಷಣ ಶಿವಯೋಗಿಗಳ ರೀತಿಯಲ್ಲೇ ಕೆಲವೊಂದು ಪವಾಡಗಳನ್ನು ಮೆರೆದ ಮತ್ತೊಬ್ಬರು ಕಳಾಸಿಪಾಳ್ಯದ ಮರಿಸ್ವಾಮಿಮಠದ ಕರ್ತೃಗಳಾದ ಮರಿಸ್ವಾಮಿಗಳು. ಇವರೂ ಕೂಡ ಸರ್ಪಭೂಷಣರಂತೆಯೇ ಬಾಲ್ಯದಿಂದ ಅಂತ್ಯದವರೆಗೆ ಅನೇಕ ಪವಾಡಗಳನ್ನು ಮೆರೆದ ಮಹಿಮಾಶಾಲಿಗಳೆಂದು ಹೇಳಲಾಗುತ್ತದೆ. ಅದರಲ್ಲಿ ಕೆಲವೊಂದು ಸಂಗತಿಗಳನ್ನು ಮಾತ್ರ ಇಲ್ಲಿ ಪರಿಶೀಲಿಸಲಾಗಿದೆ. ಮರಿಸ್ವಾಮಿಗಳಿಗೆ ಮಕ್ಕಳೆಂದರೆ ಬಹಳ ಅಕ್ಕರೆ. ಅವರು ಅಂಗಡಿಯೊಂದರಲ್ಲಿ ದುಡ್ಡಿಗೆ ಆರುಸೇರು ಪುರಿ ತೆಗೆದುಕೊಂಡು, ಊರೂರಿಗೂ ಹಂಚಿ, ನೂರಾರು ಮಕ್ಕಳಿಗೆ ಅದನ್ನು ಕೊಟ್ಟಾದ ಮೇಲೂ ಜೋಳಿಗೆಯಲ್ಲಿನ ಪುರಿ ಅಷ್ಟೇ ಪ್ರಮಾಣದಲ್ಲಿ ಇರುತ್ತಿದ್ದುವಂತೆ. ಆದ್ದರಿಂದಲೇ ಇವರನ್ನು 'ಬುರುಗಲು ಅಯ್ಯ' ಎಂಬುದಾಗಿ ಕರೆಯಲಾಗುತ್ತಿತ್ತು.[93] ಎಂದು ಹೇಳುವುದುಂಟು.

ಒಮ್ಮೆ ಮರಿಸ್ವಾಮಿಗಳು ಕೆಂಗೇರಿಯ (ಮೈಸೂರು ರಸ್ತೆ) ಬಳಿ ಹಳ್ಳವೊಂದಕ್ಕೆ ಅಣೆಕಟ್ಟೆಯನ್ನು ಕಟ್ಟಿಸಿದ್ದರಂತೆ. ಅದನ್ನು ನಿರ್ಮಿಸುವಾಗ ನೂರಾರು ಜನರು ಅದಕ್ಕಾಗಿ ಶ್ರಮವಹಿಸಿದ್ದರಂತೆ. ಅವರಲ್ಲಿ ಮಕ್ಕಳು, ಮುದುಕರ ಆದಿಯಾಗಿ ಎಲ್ಲಾ ವಯೋಮಾನ ಜನರೂ ಇದ್ದರಂತೆ. ಪ್ರತಿದಿನವೂ ಅವರ ಕೂಲಿಗಳನ್ನು ಕೊಡುವಾಗ ಮರಿಸ್ವಾಮಿಗಳು ನಿಮ್ಮನಿಮ್ಮಮುಂದೆ ಒಂದೊಂದು ಮರಳಿನ ಕುಪ್ಪೆಗಳನ್ನು ಮಾಡಿಕೊಳ್ಳಿರಿ, ಅದರಲ್ಲಿ ನಿಮ್ಮ ಕೂಲಿ ಹಣವು ಸಂದಾಯವಾಗುವುದೆಂದು ಹೇಳುತ್ತಿದ್ದರಂತೆ. ಅದೇ ಪ್ರಕಾರ ವಯೋಮಾನ ಹಾಗೂ ಶ್ರಮಕ್ಕೆ ಅನುಗುಣವಾಗಿ ಅವರವರ ಕೂಲಿ ಹಣವು ಆ ಮರಳ ಕುಪ್ಪೆಗಳಲ್ಲಿ ದೊರೆಯುತ್ತಿದ್ದಿತಂತೆ. ಆ ಜನಗಳು 'ಏನು ಸ್ವಾಮಿ! ಅವನಿಗಾದರೆ ಅಷ್ಟು ಹಣ ನನಗೇ ತೀರಾ ಕಡಿಮೆ' ಎಂದು ಪ್ರಶ್ನಿಸಿದಾಗ, ಮರಿಸ್ವಾಮಿಗಳು 'ನಾನೇನು ಮಾಡಲಪ್ಪ, ಮಾಡಿದವರಿಗೆ ಮಾಡಿದಷ್ಟು ನೀಡಿದವರಿಗೆ ನೀಡಿದಷ್ಟು, ಇದನ್ನೆಲ್ಲಾ ಕಂಬಳಿಸ್ವಾಮಿ ಗಂಗಾಧರೇಶ್ವರ ಮಾಡಿದನೆಂದು' ಹೇಳುತ್ತಿದ್ದರಂತೆ.[94]

ಇದೇ ತೆರನಾಗಿ ಅಸಾಮಾನ್ಯ ಪವಾಡ ಪುರುಷರೆನಿಸಿಕೊಂಡಿದ್ದ ಮರಿಸ್ವಾಮಿಗಳು ತಾವು ಶಿವೈಕ್ಯರಾದ ಕಾಲಕ್ಕೆ (೧೮೪೩ರಲ್ಲಿ) ಇವರ ಭೌತಿಕ ಶರೀರವು ಬೆಂಗಳೂರು, ಭೈರವಪುರ ಮತ್ತು ಬಳ್ಳಾರಿ ಈ ಮೂರು ಸ್ಥಳಗಳಲ್ಲೂ ಏಕಕಾಲದಲ್ಲಿ ಪ್ರಾಣವನ್ನು ತೊರೆದುದಾಗಿ ಹೇಳುವುದುಂಟು.[95]

ಮರಿಸ್ವಾಮಿಗಳ ಶಿಷ್ಯರಾಗಿದ್ದ ಕಂಬಳಿಸ್ವಾಮಿ (ಇವರ ನಿಜವಾದ ಹೆಸರು ಗುರುಸ್ವಾಮಿಗಳು. ಇವರನ್ನೇ ಬೂದಿಸ್ವಾಮಿಗಳೆಂದು ಕರೆಯುವುದುಂಟು)ಗಳೂ ಕೂಡ ಬೆಂಗಳೂರಿನಲ್ಲಿ ಹಲವಾರು ಅದ್ಭುತ ಪವಾಡಗಳನ್ನು ನಡೆಸಿದ ನಿದರ್ಶನಗಳಿವೆ. ಇವರು ಪ್ರತಿನಿತ್ಯ ಪ್ರಾತಃಕಾಲದ ವೇಳೆಗೆ ಹಿಂದೆ ವಿಸ್ತಾರವಾಗಿದ್ದ ಜಕ್ಕರಾಯನಕೆರೆಯಲ್ಲಿ[96] ಮಿಂದು ಮಡಿಯುಟ್ಟು, ಕೆರೆಯ ನೀರಿನಮೇಲೆ ತಮ್ಮ ಕರಿಯ ಕಂಬಳಿಯನ್ನು ಹಾಸಿ, ಅದರ ಮೇಲೆ ಪದ್ಮಾಸನಾ ರೂಢರಾಗಿ ಕುಳಿತು, ಗಂಟೆಗಟ್ಟಲೆ ಯೋಗಮಗ್ನ ರಾಗಿರುವುದು ಸದಾ ಅವರ ಹವ್ಯಾಸವಾಗಿದ್ದಿತಂತೆ.[97] ಅದಕ್ಕಾಗಿಯೇ ಇವರಿಗೆ ಕಂಬಳಿಸ್ವಾಮಿಗಳೆಂಬ ಹೆಸರು ಬಂದುದಾಗಿ ತಿಳಿದುಬರುತ್ತದೆ.

ಕಂಬಳಿಸ್ವಾಮಿಗಳು ಮೊದಲು ಜಕ್ಕರಾಯನಕೆರೆಯ ದಂಡೆಯಲ್ಲಿ ಇದ್ದಾಗ ಯಾರೋ ದೂರದಿಂದ ಹಲವಾರು ಮಂದಿ ಭಕ್ತರು ಅವರ ದರ್ಶನಕ್ಕಾಗಿ ಬಂದಿದ್ದರಂತೆ. ಗುರುಗಳು ತಮ್ಮ ಕುಟೀರದೊಳಗೆ ಸಂಜೆಯ ಶಿವಯೋಗವನ್ನು ಮುಗಿಸಿ ಈಚೆಗೆ ಬರುವವೇಳೆಗೆ ಚೆನ್ನಾಗಿಯೇ ಕತ್ತಲು ಆವರಿಸಿದ್ದಿತಂತೆ. ಗುರುಗಳು ಹೊರಬರುತ್ತಿದ್ದಂತೆ ಆ ಭಕ್ತರೆಲ್ಲಾ ಅವರ ಕಾಲಿಗೆ ಎರಗಿದಾಗ, ಗುರುಗಳು ಆಶೀರ್ವಾದಮಾಡಿ ಬಂದವರಿಗೆಲ್ಲಾ ವಿಭೂತಿಯ ಪುಡಿಯನ್ನು ಅನುಗ್ರಹಿಸಿದರಂತೆ. ಭಕ್ತರ ಅಂಗೈಯಲ್ಲಿದ್ದ ಆ ವಿಭೂತಿಯು ಕಗ್ಗತ್ತಲಲ್ಲೂ ಕೂಡ ಪ್ರಕಾಶಮಾನವಾಗಿ ಹೊಳೆಯತೊಡಗಿ ಅಂಗಳವೆಲ್ಲಾ ಬೆಳಗುವಂತೆ ಆಯಿತಂತೆ. ಈ ಕಾರಣಕ್ಕಾಗಿಯೇ ಇವರನ್ನು ಬೂದಿಸ್ವಾಮಿಗಳೆಂದೂ ಕರೆಯುವುದು ರೂಢಿಗೆ ಬಂದುದಾಗಿ ಹೇಳುವುದುಂಟು.[98]

ಇದೇ ರೀತಿ ನಗರಪರಿಮಿತಿಯಲ್ಲೇ ಇರುವ ವಿಭೂತಿಪುರದ ವೀರಸಿಂಹಾಸನದ ಬಹಳ ಹಿಂದಿನ ಗುರುಗಳೊಬ್ಬರು ಕಾಯಕಯೋಗಿಗಳೂ, ಪವಾಡ ಪುರುಷರೂ ಆಗಿದ್ದುದಾಗಿ ತಿಳಿದುಬರುತ್ತದೆ. ಅವರು ಒಂದುದಿನ ತಮ್ಮ ಪರಿವಾರದೊಂದಿಗೆ ಎಂದಿನಂತೆ ವಿಭೂತಿ ಕಾಯಕನಿರತರಾಗಿ, ನೂರಾರು ಭಸ್ಮದ ಗಟ್ಟಿಗಳನ್ನು ಅಚ್ಚುಗೊಳಿಸಿ ಮಠದ ಮುಂಭಾಗದಲ್ಲಿ ಬಿಸಿಲಿಗೆ ಜೋಡಿಸಿದ್ದರಂತೆ. ಹೊತ್ತೇರಿದ ಮೇಲೆ ಕಾಯಕವನ್ನು ಮುಗಿಸಿ ಮಠದೊಳಗೆ ಬಂದು ಪೂಜೆ ಪ್ರಸಾದಾದಿಗಳನ್ನು ಮುಗಿಸುವ ವೇಳೆಗೆ ಬಹಳ ಹೊತ್ತಾಗಿ, ಅನಿರೀಕ್ಷಿತವಾದ ಭಾರಿಮಳೆಯೂ ಬಂದುಬಿಟ್ಟಿತು. ಮಠದಿಂದ ಹೊರಗೆ ಬರಲಾಗದಷ್ಟು ಮಳೆಬೀಳುವುದನ್ನು ಕಂಡ ಭಕ್ತರು ಗುರುಗಳ ಬಳಿಗೆಹೋಗಿ ಬೆಳಗಿನಿಂದ ಅಚ್ಚುಗೊಳಿಸಿದ್ದ ಭಸ್ಮದ ಗಟ್ಟಿಗಳೆಲ್ಲಾ ನೀರಾಗಿ ಹೋದುವೆಂದು ನಿವೇದಿಸಿಕೊಂಡರಂತೆ. ಅಷ್ಟರಲ್ಲಿ ಮಳೆಯು ನಿಂತುದನ್ನು ಕಂಡ ಗುರುಗಳು ಭಕ್ತರಿಗೆ 'ಗುರುಸಿದ್ಧೇಶನ ಕೃಪೆಯಾಗಿ ಗಟ್ಟಿಗಳೆಲ್ಲಾ ತೊಳೆದಂತಾಗಿವೆಯಷ್ಟೆ ತನ್ನರಿ ಹೋಗಿ' ಎಂದರಂತೆ. ಹೋಗಿ ನೋಡಿದರೆ ನೂರಾರು ಗಟ್ಟಿಗಳು ತೊಳೆದ ಪುತ್ಥಳಿಯಂತೆ ಹೊಳೆಯತೊಡಗಿದ್ದುದನ್ನು ಕಂಡು ಭಕ್ತರಿಗೆ ಆಶ್ಚರ್ಯವಾಯಿತಂತೆ.[99]

ಹಾಗೆಯೇ ಬೆಂಗಳೂರಿನ ಕರಗಕ್ಕೆ ಸಂಬಂಧಪಟ್ಟಂತೆ ಒಂದು ಪವಾಡವು ಬಹಳ ಸ್ವಾರಸ್ಯಕರವಾಗಿದೆ. ಹಿಂದೆ ಒಮ್ಮೆ ಮೆರವಣಿಗೆ ಹೊರಟಿದ್ದ ಕರಗವು ಅರಳೆಪೇಟೆಯ ಮಸ್ತಾನ್ ಸಾಹೇಬರ ದರ್ಗಾದಲ್ಲಿ ಪೂಜೆಪಡೆದು ಮುಂದೆ ಅಕ್ಕಿಪೇಟೆಯ ಮುಖ್ಯರಸ್ತೆಯಲ್ಲಿ ಹೊರಟಿತ್ತಂತೆ. ಇಲ್ಲಿ ದೊಡ್ಡಮಠದ ಬಾಗಿಲಿಗೆ ಬರುವ ವೇಳೆಗೆ ಸರಿಯಾಗಿ ಅರ್ಚಕನು ತಲೆಯಮೇಲೆ ಹೊತ್ತಿದ್ದ ಕರಗವು ಮಠದ ಮುಂದಿನ ತೆಂಗಿನಮರವನ್ನು ಏರಿ ಕುಳಿತುಬಿಟ್ಟಿತಂತೆ. ಆಗ ಏನೋ ಪ್ರಮಾದವಾಯಿತು ಎಂದು ಆಲೋಚಿಸಿದ ಮುಖಂಡರೊಬ್ಬರು ತಕ್ಷಣ ಮಠದೊಳಗಿದ್ದ ಬಸವಲಿಂಗ ಸ್ವಾಮಿಗಳ ಬಳಿ ಹೋಗಿ ನಡೆದ ಸಂಗತಿಯನ್ನೆಲ್ಲಾ ಬಿನ್ನವಿಸಿಕೊಂಡರಂತೆ. ಕೃಪೆಮಾಡಿದ ಗುರುಗಳು ಹೊರಬಂದು ತಮ್ಮ ಕೈಯಲ್ಲಿದ್ದ ಬಿಲ್ವಪತ್ರೆಯನ್ನು ಕರಗದ ಮೇಲೆ ಎಸೆದರಂತೆ. ಆಗ ತೆಂಗಿನಮರದ ಮೇಲಿದ್ದ ಕರಗವು ಮತ್ತೆ ಅರ್ಚಕನ ತಲೆಯಮೇಲೆ ಬಂದು ಕುಳಿತು, ಯಥಾಪ್ರಕಾರ ಮೆರವಣಿಗೆಯು ಮುಂದು ವರೆಯಿತಂತೆ.[100]

ಹೀಗೆ ಬೆಂಗಳೂರಿನ ಸರ್ಪಭೂಷಣಮಠದ ಸರ್ಪಭೂಷಣ ಶಿವಯೋಗಿಗಳೂ, ಮರಿಸ್ವಾಮಿಮಠದ ಮರಿಸ್ವಾಮಿಗಳು, ದೊಡ್ಡಮಠದ ಬಸವಲಿಂಗ ಸ್ವಾಮಿಗಳೂ, ವಿಭೂತಿಪುರಮಠದ ಸಿದ್ಧಬಸವ ಸ್ವಾಮಿಗಳೂ, ಬೂದಿಸ್ವಾಮಿಮಠದ ಗುರುಸ್ವಾಮಿಗಳೂ ಇವರೇ ಮೊದಲಾದ ಮಠಾಧಿಪತಿಗಳು ಭಕ್ತರ ಧಾರ್ಮಿಕ ಭಾವನೆಗಳಿಗೆ ಇಂಬುಕೊಡುವ ಅನೇಕ ಪವಾಡಗಳನ್ನು ನಡೆಸಿದ್ದುದಾಗಿ ತಿಳಿದುಬರುತ್ತದೆ. ಈ ರೀತಿಯಾಗಿ ಬೆಂಗಳೂರಿನ ವೀರಶೈವಮಠಗಳು ಧಾರ್ಮಿಕವಾಗಿ ಹಲವಾರು ನಿಟ್ಟನಲ್ಲಿ, ಭಕ್ತರ ಭಾವನೆಗಳಿಗೆ ಒತ್ತಾಸೆಯಾಗಿ ನಿಂತು, ತಮ್ಮದೇ ಆದ ವಿಶೇಷ ಸಂಪ್ರದಾಯಗಳನ್ನೂ, ರೀತಿ-ನೀತಿಗಳನ್ನೂ ಇಂದಿಗೂ ಉಳಿಸಿಕೊಂಡು ಬಂದಿರುವುದು ಸ್ತುತ್ಯರ್ಹ ಸಂಗತಿಗಳಾಗಿವೆ.

---

## ಅಡಿಟಿಪ್ಪಣಿಗಳು

1. ಹೆಚ್ಚಿನ ವಿವರಗಳಿಗಾಗಿ : ಶಿವಾನಂದ ಗುಬ್ಬಣ್ಣವರ. ಲಿಂಗಾಯತ ಸಂಸ್ಕಾರಗಳು. ಧಾರವಾಡ. ೧೯೮೪. ಪು.೨೦-೨೩.

2. ಹೇಳಿಕೆ : ಪಂ॥ ಚನ್ನಪ್ಪ ಎರೇಸೀಮೆಯವರು (೭೬ ವರ್ಷ. ವಿಜಯನಗರ, ಬೆಂಗಳೂರು) ಹೇಳುವಂತೆ 'ಹಿಂದೆ, ಕಳೆದ ಮೂರುನಾಲ್ಕು ಶತಮಾನಗಳಷ್ಟು ಹಿಂದಿನಿಂದಲೂ ಬೆಂಗಳೂರು ಪಟ್ಟಣವು ವ್ಯಾಪಾರ ವ್ಯವಹಾರಗಳಿಂದಾಗಿ ಅಭಿವೃದ್ಧಿಗೊಂಡಂತೆಲ್ಲಾ, ನಾಡಿನ ವಿವಿಧ ಭಾಗಗಳಿಂದ ಅನೇಕ ವೀರಶೈವ ಬಣಂಜುಗಳು (ವೀರಶೈವ ವರ್ತಕರು) ಇಲ್ಲಿ ಬಂದು ನೆಲಸತೊಡಗಿದ್ದರು. ಇವರು ಕಟ್ಟಾ ಮತಾವಲಂಬಿಗಳಾಗಿದ್ದು ಪ್ರತಿನಿತ್ಯ ಜಂಗಮರೊಬ್ಬರಿಂದ ಪಾದೋದಕ ಪ್ರಸಾದಗಳನ್ನು ಸ್ವೀಕರಿಸಿಯೇ ತಮ್ಮ ಮುಂದಿನ ಕಾರ್ಯಕಲಾಪಗಳಲ್ಲಿ ತೊಡಗುವ ಶಿಷ್ಟಾಚಾರವುಳ್ಳವರಾಗಿದ್ದರು. ತಮ್ಮ ಧಾರ್ಮಿಕ ಹವ್ಯ-ಕವ್ಯ (ದೇವಋಣ, ಪಿತೃಋಣ)ಗಳ ತೀರುವಳಿಗಾಗಿ ಅಯ್ಯನವರು (ಗುರುಗಳು) ಇರಲೇ ಬೇಕಾಗಿತ್ತು. ಈ ಕಾರಣಕ್ಕಾಗಿಯೇ ಅವರು ತಮ್ಮ ಮನೆತನಗಳಿಗೆ ಸೇರಿದ ಗುರುವರ್ಗದವರಿಗೂ ಆಶ್ರಿತರಾಗಿ ಬೆಂಗಳೂರಿನಲ್ಲಿ ಅನೇಕ ವೀರಶೈವಮಠಗಳ ನಿರ್ಮಾಣಕ್ಕೆ ಕಾರಣಕರ್ತರಾಗಿದ್ದರು.

3. ಕನ್ನಡ ನಿಘಂಟು. ಸಂ-೪. ಕನ್ನಡ ಸಾಹಿತ್ಯ ಪರಿಷತ್ತು. ೧೯೭೯. ಪು. ೩೯೩೬.

4. ಅದೇ. ಪು. ೩೯೩೮.

5. ರೇಣುಕ ಗೀತೆ. ಸಂ : ಡಾ। ಜ.ಚ.ನಿ. ೧೯೮೭. ೬/೨೮೩. ಪು. ೧೯೬.

6. ಶಿವತತ್ವಚಿಂತಾಮಣಿ. ಲಕ್ಕಣ್ಣದಂಡೇಶ. ಸಂ : ಎಸ್. ಬಸಪ್ಪ. ೫೨-೮. [ಚೆನ್ನಬಸವಣ್ಣ ಕೂಡ ತನ್ನೊಂದು ವಚನದಲ್ಲಿ "--- ಶಿವಕಳಾತ್ಮಕಂಗೆ ಪೂರ್ವದ ಜಡ ಶೈವ ಮಾರ್ಗವ ಬಿಡಿಸಿ ನಿಜ ವೀರಶೈವ ದೀಕ್ಷೆಯನ್ನಿತ್ತು ಹಸ್ತಮಸ್ತಕವ ಸಂಯೋಗವ ಮಾಡಿ (ಲಿಂಗವ) ಕರಸ್ಥಲಕ್ಕೆ ತಂದು---," (ಚೆನ್ನಬಸವಣ್ಣನ ವಚನಗಳು. ೭೧೬. ಸಂ: ಆರ್.ಸಿ. ಹಿರೇಮಠ. ಕರ್ನಾಟಕ ವಿಶ್ವವಿದ್ಯಾಲಯ . ಧಾರವಾಡ ೧೯೬೧) ಎಂಬುದಾಗಿ ದೀಕ್ಷೆಯನ್ನು ಕುರಿತು ಪ್ರಸ್ತಾಪಿಸಿದ್ದಾನೆ]

7. ದೀಕ್ಷಾವಿಧಾನಕ್ಕೆ ಉಪನಯನವೆಂದೂ ಮತ್ತೊಂದು ಹೆಸರುಂಟು. ಭವಿತನದಿಂದ ಭಕ್ತತ್ವಕ್ಕೆ ಬರಿಸುವ ಒಂದು ಸಂಸ್ಕಾರ. ದೈಹಿಕ ದೋಷವನ್ನು ಕಳೆದು ಶುದ್ಧವಿಸಿ ಅಂಗವನ್ನಾಗಿಸುವ ಕ್ರಿಯೆ. ಜೀವಭಾವವನ್ನು ತೊಲಗಿಸಿ ಲಿಂಗವನ್ನಾಗಿಸುವ ವಿಧಾನ. ಪ್ರಾಕೃತತೆಯಿಂದ ಅಪ್ರಾಕೃತತೆಗೆ ರೂಪಾಂತರಿಸುವ ಪ್ರಕ್ರಿಯೆ. ಮಾಂಸಪಿಂಡವನ್ನು ಮಂತ್ರ ಪಿಂಡವನ್ನಾಗಿಸುವ ಮಾಂತ್ರಿಕ ಕ್ರಿಯೆ. ಪ್ರಾಣವಿಕಾರವನ್ನಳಿಸಿ ಪ್ರಣವಾಕಾರವನ್ನಾಗಿಸುವ ಪ್ರವಿಧಿ. ಭಾವವನ್ನು ಶುದ್ಧವಿಸಿ ಭ್ರಾಂತಿಯನ್ನು ಬಿಡಿಸಿ ಭಾವೋತ್ಕರ್ಷತೆಯನ್ನುಂಟುಮಾಡಿ ಭಾವುಕರನ್ನಾಗಿಸುವ ಭೂಮಕ್ರಿಯೆ. ದೃಷ್ಟಿಗೆ ದೂರದರ್ಶಿತ್ವವನ್ನು ತರುವ ದೀಪ್ತ ಸಂಸ್ಕಾರ. ತ್ರಿವಿಧಾಂಗಗಳನ್ನು ಪರಿಷ್ಕರಿಸಿ ಅಂತಶ್ಚೇತನವನ್ನು ಆವಿಷ್ಕರಿಸುವ ಅಭಿಜಾತವ್ರತ, ಅನನ್ಯ ಪ್ರತಿಭೆ. ಶಿವಾತ್ಮ ವಿದ್ಯಾಗುರುದೇವನ ಚಿತ್ಕಳಾ ಕಾರುಣ್ಯ. (ಡಾ। ಜ.ಚ.ನಿ. ದೀಕ್ಷೆ. ಸಿದ್ಧಗಂಗಾಶ್ರೀ. ಸಂ : ಚನ್ನಪ್ಪ ಎರೇಸೀಮೆ, ಟಿ.ಆರ್. ಮಹಾದೇವಯ್ಯ. ೧೯೮೧. ಪು. ೬೦೬.)

   'ದಾ' ಮತ್ತು 'ಕ್ಷೀ' ಎಂಬ ಧಾತುಗಳು ಸೇರಿ 'ದೀಕ್ಷಾ' ಪದವಾಗಿದೆ. ಇದಕ್ಕೆ ಪರಿವಿಡಿದುಕೊಡು; ನಾಶಮಾಡು ಎಂಬ ಅರ್ಥಗಳಿವೆ. 'ದಾ' ಎಂಬುದುಜ್ಞಾನ ದಾತೃತ್ವವನ್ನೂ, 'ಕ್ಷೀ' ಎಂಬುದು ಅಜ್ಞಾನ ಪ್ರಕ್ರಿಯೆಗಳೆಂಬ ಪಾಶ ಬಂಧನ ತ್ಯಾಜ್ಯತ್ವವನ್ನೂ ಬೋಧಿಸುತ್ತವೆ. (ಅದೇ. ಪು. ೬೦೭)

   "ದೀಯತೇ ಜ್ಞಾನ ಸಂಬಂಧಃ ಕ್ಷೀಯತೇ ಚ ಮಲತ್ರಯಂ।
   ದೀಯತೇ ಕ್ಷೀಯತೇ ಯಸ್ಮಾತ್ಸಾ ದೀಕ್ಷೇತೀ ನಿಗದ್ಯತೇ॥"

   ಎಂಬ ಶಿವಾನುಭವ ಸೂತ್ರಾನುಸಾರವಾಗಿ ಜೀವಗತವಾದ ಮಲತ್ರಯಗಳನ್ನು ಕಳೆದು ಲಿಂಗತ್ರಯವನ್ನು ಕೊಡುವ ಶಿವನಶಕ್ತಿ ವಿಶೇಷವೇ ದೀಕ್ಷೆ ಎನಿಸುವುದು. "ಅನಯೋಃ ಶಾಸನೇ ಸಿದ್ಧಾದೀಕ್ಷಾ ಕ್ಷಪಣ ದಾನಯೋಃ" ಎಂದು ಮಾತಂಗ ಪಾರಮೇಶ್ವರ ವಾಕ್ಯವಾದರೂ ಆತ್ಮಗತವಾದ ಪಶುತ್ವವನ್ನು ಕೆಡಿಸುವ ಶಿವತ್ವವನ್ನು ಕೊಡುವ ಎರಡು ಕಾರ್ಯಗಳಲ್ಲಿ ಶಿವನಿಗೆ ಕರಣರೂಪದಿಂದ

ಸಿದ್ಧವಾಗಿರುವ ಅನುಗ್ರಹಾತ್ಮಕ ವ್ಯಾಪಾರದಿಂದ ಕೂಡಿರುವ ಕ್ರಿಯಾಶಕ್ತಿಯೇ ದೀಕ್ಷೆ ಎಂದು ಪ್ರತಿಪಾದಿಸುತ್ತಿದ್ದಿತು. (ಕಲಿಗಣನಾಥಶಾಸ್ತ್ರಿ. ಷಟ್‌ಸ್ಥಲಗಳ ಸಿದ್ಧಾಂತ. ವೀರಶೈವತತ್ತ್ವ ಪ್ರಕಾಶ. ಸಂ : ಶಿ.ಶಿ. ಬಸವನಾಳ. ಧಾರವಾಡ. ೧೯೭೫. ಪು. ೨೧೪)

8. ಡಾ। ಎಸ್.ಸಿ. ನಂದಿಮಠ. ಯೋಗವೂ ವೀರಶೈವವೂ. ವೀರಶೈವತತ್ತ್ವ ಪ್ರಕಾಶ. ಸಂ : ಶಿ.ಶಿ. ಬಸವನಾಳ. ಪು. ೩೨೪.

9. ಶ್ರೀ ಗುರು ತನ್ನ ಹಸ್ತವ ಶಿಷ್ಯನ ಮಸ್ತಕದಲ್ಲಿ ಸಂಯೋಗವ ಮಾಡಿದುದು ವೇದಾದೀಕ್ಷೆ : ಶ್ರೀಗುರು ಪ್ರಣವ ಪಂಚಾಕ್ಷರಿಯ ಮಂತ್ರವನ್ನು ಕರ್ಣದಲ್ಲಿ ಉಪದೇಶಿಸಿದ್ದು ಮಂತ್ರದೀಕ್ಷೆ; ಆ ಮಂತ್ರ ಸ್ವರೂಪವನ್ನೇ ಇಷ್ಟಲಿಂಗ ಸ್ವರೂಪವ ಮಾಡಿ ಕರಸ್ಥಲದಲ್ಲಿ ಸಂಬಂಧಿಸಿದುದು ಕ್ರಿಯಾದೀಕ್ಷೆ. ವೇದಾದೀಕ್ಷೆಯಿಂದ ಕಾರಣತನುವಿನ ಪೂರ್ವಾಶ್ರಮವಳಿದು ಭಾವಲಿಂಗ ಸಂಬಂಧವಾಯ್ತು. ಮಂತ್ರದೀಕ್ಷೆಯಿಂದ ಸೂಕ್ಷ್ಮತನುವಿನ ಪೂರ್ವಾಶ್ರಮವಳಿದು ಇಷ್ಟಲಿಂಗ ಸಂಬಂಧವಾಯ್ತು. ಕ್ರಿಯಾದೀಕ್ಷೆಯಿಂದ ಸ್ಥೂಲತನುವಿನ ಪೂರ್ವಾಶ್ರಮವಳಿದು ಪ್ರಾಣಲಿಂಗ ಸಂಬಂಧವಾಯ್ತು. (ವಚನ ಪರಿಭಾಷಾಕೋಶ. ಸಮಗ್ರ ವಚನ ಸಂಪುಟ-೧೫. ೧೯೯೩. ಪು. ೧೦೧)

10. ''ಗುರುವು ಸಕಲ ಆಗಮುಗಳನ್ನೂ ತಿಳಿದವನಾಗಿದ್ದು ತನ್ನನ್ನು ತಾನರಿದು ಸರ್ವಾಚಾರ ಸಂಪನ್ನನಾಗಿರಬೇಕು. ಗುರುವು ಶಿಷ್ಯನನ್ನು ಸ್ವೀಕರಿಸುವಾಗ ಬ್ರಾಹ್ಮಣನನ್ನು ಮೂರುವರ್ಷವೂ, ಕ್ಷತ್ರಿಯನನ್ನು ಆರುವರ್ಷವೂ, ವೈಶ್ಯನನ್ನು ಒಂಬತ್ತು ವರ್ಷವೂ, ಶೂದ್ರನನ್ನು ಹನ್ನೆರಡುವರ್ಷವೂ, ನೋಡಿ ಪರೀಕ್ಷಿಸಿ ಅರ್ಹನೆಂದು ಕಂಡುಬಂದ ಮೇಲೆ ದೀಕ್ಷೆ ನೀಡಬೇಕು'' ಎಂಬುದಾಗಿ ಚೆನ್ನಬಸವಣ್ಣ ಹೇಳಿದ್ದಾನೆ. (ವಚನ ಪರಿಭಾಷಾಕೋಶ. ಸಮಗ್ರ ವಚನ ಸಂಪುಟ-೧೫. ಪು. ೧೦೧, ೧೦೨)

11. ವೀರಶೈವ ಧರ್ಮಸಿಂಧು. ಪು. ೨೩.

12. ಎಂಟುವರ್ಷಕ್ಕೆ ಮಾಡುವುದು ಉತ್ತಮ, ಹದಿನಾರುವರ್ಷಕ್ಕೆ ಮಾಡುವುದು ಗೌಣ ಹಾಗೂ ಹದಿನಾರರಿಂದ ನಂತರದ ವರ್ಷಗಳಲ್ಲಿ ಮಾಡುವುದು ಅಧಮವೆಂದು ಭಾವಿಸಲಾಗುತ್ತದೆ. (ಶಿವಾನಂದ ಗುಬ್ಬಣ್ಣವರ. ಲಿಂಗಾಯತ ಸಂಸ್ಕಾರಗಳು. ೧೯೮೪. ಪು. ೬೪)

13. ಆದರೆ ಅಯ್ಯಾಚಾರ ದೀಕ್ಷೆಯು ಅಯ್ಯನವರ ಗಂಡುಮಕ್ಕಳಿಗೆ ಮಾತ್ರ ಅನ್ವಯಿಸುವಂತಹುದು. ಏಕೆಂದರೆ ಲಿಂಗಧಾರಣಾ ದೀಕ್ಷೆಯು ಸಂಸಾರಿಗಳಾದವರಿಗೆ ಅನ್ವಯವಾದರೆ; ಅಯ್ಯಾಚಾರ ದೀಕ್ಷೆಯು ವಿರಕ್ತರಿಗೆ, ಮುಂದಿನ ಮಠಾಧಿಪತಿಗಳಾಗತಕ್ಕವರಿಗೆ ಅನ್ವಯವಾಗುವಂತಹುದು. ಅಯ್ಯಾಚಾರ ಹೊಂದುವವರಿಗೆ ಕೃಷ್ಣಪಕ್ಷದಲ್ಲೂ, ಗೃಹಸ್ಥರಾಗುವವರಿಗೆ ಶುಕ್ಲಪಕ್ಷದಲ್ಲೂ ಈ ವಿಧಿಯನ್ನು ನೆರವೇರಿಸಲಾಗುತ್ತದೆ. ಅಯ್ಯಾಚಾರದೀಕ್ಷೆಯು ಸಗೋತ್ರದಲ್ಲಿ ಮಾತ್ರ ನಡೆಯುವಂತಹದ್ದಾದರೆ; ಲಿಂಗಧಾರಣಾದೀಕ್ಷೆಯು ಭಿನ್ನ ಗೋತ್ರಗಳವರಲ್ಲೂ ನಡೆಯುತ್ತದಾದರೂ, ಸಂಬಂಧಿಸಿದ ಮಂತ್ರವನ್ನು ಉಪದೇಶಿಸುವುದು ಒಪ್ಪಿತವಾಗುತ್ತದೆ. (ಶಿವಾನಂದ ಗುಬ್ಬಣ್ಣವರ. ಲಿಂಗಾಯತ ಸಂಸ್ಕಾರಗಳು. ೧೯೮೪. ಪು. ೬೪, ೬೫)

14. ಉದ್ಧೃತ : ಡಾ। ಸತ್ಯನಾರಾಯಣಭಟ್ಟ. ಲಿಂಗ ಮತ್ತು ಕಂತೆ. ೧೯೯೪. ಪು. ४३, ४४.

15. ಸರ್ಪಭೂಷಣಮಠದ ದಾಖಲೆ. So. No: 42/1891-92. dt: 31.8.1892. Assistant Commissioner Court. Bangalore. P. 4.

[ಇದೇ ಸಂಗತಿಯನ್ನು ಮಲ್ಲಾಬಾದಿ ವೀರಭದ್ರಪ್ಪನವರು-೧೮೪೯ರ ವೇಳೆಗೆ ಬೆಂಗಳೂರಿನ ನೇಯ್ಗೆ ಕಾಯಕದ ಕೆಂಪುನೂಲು ನಂಜುಂಡಯ್ಯ ಮತ್ತೆ ಅವನ ೭೦೦ ಮಂದಿ ಕುಲಸ್ಥರಿಗೆ ಫಾಲಲೋಚನಸ್ವಾಮಿಗಳು ತಮ್ಮ ಗುರುಗಳಾಗಿದ್ದ ಸರ್ಪಭೂಷಣ ಶಿವಯೋಗಿಗಳ ಆದೇಶದಂತೆ ಕಂಚುಗಲ್ಲು ಬಂಡೇಮಠ (ಮಾಗಡಿ ತಾಲ್ಲೂಕು)ದಲ್ಲಿ ಸಾಮೂಹಿಕ ಲಿಂಗದೀಕ್ಷೆ ಮಾಡಿಸಿದುದಾಗಿ ಸೂಚಿಸಿದ್ದಾರೆ. (ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನಚರಿತ್ರೆ. ಪು. ೩೭, ೩೮) ಈ ಸಂಗತಿಯನ್ನು ಇಲ್ಲಿ ಸಾಮೂಹಿಕ ಮತಾಂತರವೆಂಬ ಅರ್ಥದಲ್ಲಿ ಪರಿಭಾವಿಸಲಾಗಿದೆ. ಆದರೆ ಮೇಲ್ಕಂಡ ದಾಖಲೆಗಳ ಪ್ರಕಾರ ಈ ಕೆಂಪುನೂಲು ನಂಜುಂಡಯ್ಯನ ಪೂರ್ವಿಕರು ಹಿಂದೆ ಲಿಂಗಧಾರಿ ವೀರಶೈವರೇ ಆಗಿದ್ದು, ಕಾಲಮಧ್ಯದಲ್ಲಿ ಕಾರಣಾಂತರದಿಂದ ಲಿಂಗವನ್ನು ತ್ಯಜಿಸಿದ್ದುದಾಗಿಯೂ; ಮತ್ತೆ ಕುಲಗುರುಗಳ ಆದೇಶ ಹಾಗೂ ಹತ್ತೂ ಕುಲಸ್ಥರ ಸಮಕ್ಷಮದಲ್ಲಿ ಪುನಃ ಲಿಂಗಧಾರಿಗಳಾಗಿ ಸಮಾಖ್ಯರಾಗಿ ಉಳಿದ ಕುಲಸ್ಥರೊಂದಿಗೆ ವಿಲೀನವಾದುದಾಗಿಯೂ (ಸರ್ಪಭೂಷಣಮಠದ ಫಾಲಲೋಚನಸ್ವಾಮಿಗಳ ಕಾಲದ ಸಮಾಖ್ಯಪತ್ರ: ಶೋಭಕೃತು ಸಂವತ್ಸರ ಕಾರ್ತಿಕ ಶುದ್ಧ ೧) ತಿಳಿದು ಬರುತ್ತದೆ.)

16. ಶಿವದೀಕ್ಷಾ ಮಹೋತ್ಸವ ಆಹ್ವಾನಪತ್ರಿಕೆಗಳು :

1. ಬೇಲಿಮಠದ ಪ್ರಕಟಣೆ. ದಿನಾಂಕ : ೨೫.೫.೧೯೧೧.

2. ಕರಿಸಿದ್ಧೇಶ್ವರ ಮಠದ ಪ್ರಕಟಣೆ. ದಿನಾಂಕ : ೨೩.೫.೧೯೧೨.

3. ಶಂಕರದೇವರಮಠದ ಪ್ರಕಟಣೆ. ದಿನಾಂಕ : ೨೮.೫.೧೯೧೪.

(ಕರಿಸಿದ್ಧೇಶ್ವರಮಠದ ಸಿದ್ಧವೀರಸ್ವಾಮಿಗಳು ದಿನಾಂಕ: ೨೩.೫.೧೯೧೪ರಲ್ಲಿ ಹೊರಡಿಸಿದ್ದ ಪ್ರಕಟಣೆಯಲ್ಲಿ ''ಬೆಂಗಳೂರಿನ ಲಿಂಗಾಯತ ಮತಸ್ಥರು ತಮ್ಮ ಮನೆಮಕ್ಕಳಿಗೆ ಎಂಟುವರ್ಷಕ್ಕೂ ಮೇಲ್ಪಟ್ಟವರಿಗೆ ಶಿವದೀಕ್ಷೆಯನ್ನು ಮಾಡಿಸಿಕೊಳ್ಳಲು ಮಠವು ಸೂಕ್ತ ಏರ್ಪಾಟು ಮಾಡಿತ್ತು. ಆ ವಟುಗಳು ಒಂದು ದಿನ ಮುಂಚಿತವಾಗಿ ಮಠಕ್ಕೆ ಬಂದು ಸೇರುವಂತೆ ಸೂಚಿಸಲಾಗಿತ್ತು. ವಿಭೂತಿಪುರದ ವೀರಸಿಂಹಾಸನಮಠದ ಪಟ್ಟದ ಸಿದ್ಧವೃಷಭರಾಜಸ್ವಾಮಿಗಳು ವಟುಗಳಿಗೆ ಶಿವದೀಕ್ಷೆಯ ಅನುಗ್ರಹ ನೀಡಿದ್ದರು'' ಎಂಬುದಾಗಿ ತಿಳಿದುಬರುತ್ತದೆ.)

17. 'ರುದ್ರಾಭಿಷೇಕ': ರುದ್ರಮಂತ್ರವನ್ನು ಪಠಿಸುತ್ತಾ ಶಿವಲಿಂಗಕ್ಕೆ ಮಾಡುವ ಅಭಿಷೇಕ.

18. 'ಸಹಸ್ರ ಬಿಲ್ವಾರ್ಚನೆ': ಸಹಸ್ರಬಾರಿ ಶಿವಮಂತ್ರವನ್ನು ಜಪಿಸುತ್ತಾ, ಪ್ರತಿಯೊಂದು ಮಂತ್ರವನ್ನು ಹೇಳುವಾಗಲೂ ಶಿವಲಿಂಗಕ್ಕೆ ಬಿಲ್ವಪತ್ರೆಗಳನ್ನು ಸಮರ್ಪಿಸುವುದು.

19. 'ಗಣಾರಾಧನೆ' : ಜಂಗಮರ ತೃಪ್ತಿಗಾಗಿ ಮಾಡುವ ಭೋಜನ ಸಮಾರಂಭ. (ಕನ್ನಡ ನಿಘಂಟು. ಸಂ-೨. ಪು. ೨೪೦೫) ಈ ಸಂದರ್ಭದಲ್ಲಿ ಗುರುಶಿಷ್ಯರಾದಿಯಾಗಿ ಬಂದವರಿಗೆಲ್ಲಾ ದಾಸೋಹದ ವ್ಯವಸ್ಥೆ ಮಾಡಲಾಗುತ್ತಿತ್ತು.

20. ಮಹಾಂತರಮಠದ ಆಡಳಿತಮಂಡಳಿಯವರು ಹೊರಡಿಸಿದ್ದ ಶಿವದೀಕ್ಷಾಮಹೋತ್ಸವ ಆಹ್ವಾನಪತ್ರಿಕೆ. ದಿನಾಂಕ : ೨೬.೪.೧೯೨೨

21. ಹೇಳಿಕೆ : ಮಹಾಂತರಮಠದ ಹಳೆಯ ವಿದ್ಯಾರ್ಥಿ. ಪಟ್ಟದ ಪರ್ವತರಾಜ ಶಿವಾಚಾರ್ಯಸ್ವಾಮಿಗಳು (೬೪) ಮಠಾಧ್ಯಕ್ಷರು. ಹುಣಸಮಾರನಹಳ್ಳಿ. ಬೆಂಗಳೂರು ಉತ್ತರ ತಾಲ್ಲೂಕು.

22. ಬುಳ್ಳಪ್ಪನವರು ಹೊರಡಿಸಿದ್ದ ಸಾಮೂಹಿಕ ಲಿಂಗದೀಕ್ಷಾ ಕರಪತ್ರ. ದಿನಾಂಕ : ೨೬.೧೧.೧೯೨೬. ಮಹಾಂತರಮಠ.

23. 'ಶ್ರೀ ತೋಂಟದಾರ್ಯಪ್ರಸೀದ' ಎಂಬ ಶಿರೋನಾಮೆಯ ಕರಪತ್ರ. ಬೇಲಿಮಠ. ದಿನಾಂಕ: ೨೧.೫.೧೯೧೪.

24. 'ಶಿವದೀಕ್ಷಾಮಹೋತ್ಸವ ಪತ್ರಿಕಾ'. ಬೇಲಿಮಠ. ದಿನಾಂಕ : ೨೮.೫.೧೯೨೮.

25. ಹೇಳಿಕೆ : ಚನ್ನವೀರಸ್ವಾಮಿ. ಜಿ. (೬೬) ನಿವೃತ್ತ ವಿದ್ಯಾಧಿಕಾರಿ. ಹನುಮಂತನಗರ. ಬೆಂಗಳೂರು.

26. ವೀರಶೈವಸಮಾಜ ಸೇವಾಸಂಘ. ವಾರ್ಷಿಕವರದಿ. ೧೯೩೯-೪೨. ಬೆಂಗಳೂರು. ೧೯೪೩. ಪು. ೧೨.

27. ಅದೇ ಪುಟ.

28. ಬೇಲಿಮಠದ ಶಿವರುದ್ರದೇವರಿಗೆ ಮೈಲನಹಳ್ಳಿಯ ಸದಾಶಿವಯ್ಯನು ಬರೆದಿರುವ ಪತ್ರ (ದಿನಾಂಕ: ೧೪.೧೧.೧೯೩೯) ದಲ್ಲಿ ಈ ಸಂಖ್ಯೆ ತಿಳಿದುಬರುತ್ತದೆ.

29. ಹೇಳಿಕೆ : ಜಿ.ವಿ. ಶಿವಸ್ವಾಮಿ(೫೬) ಉಪನ್ಯಾಸಕರು. ಮಹಾನಗರಪಾಲಿಕೆ ಕಿರಿಯಕಾಲೇಜು. ಟಾಸ್ಕರ್‌ಟೌನ್. ಬೆಂಗಳೂರು.

30. ಹೇಳಿಕೆ : ಗಂಗಮ್ಮ (೬೫) ಶಿವಾನುಭವಮಠದ ನಿವಾಸಿ. ಅಲಸೂರು.

31. ಕನ್ನಡ ನಿಘಂಟು. ಸಂ-೫. ಕನ್ನಡ ಸಾಹಿತ್ಯ ಪರಿಷತ್ತು. ೧೯೮೮. ಪು. ೫೩೯೦.

32. ಕನ್ನಡ ನಿಘಂಟು. ಸಂ-೨. ಕನ್ನಡ ಸಾಹಿತ್ಯ ಪರಿಷತ್ತು. ೧೯೭೬. ಪು. ೨೪೩೯.

33. ಮುಜರಾಯಿ ಇಲಾಖಾ ದಾಖಲೆ ಸಂಖ್ಯೆ : ೫೨/೧೯೨೨-೨೩. ಪು. ೭೭.

34. ಶಂಕರಣ್ಣನವರು ಶಂಕರದೇವರಮಠಕ್ಕೆ ನೀಡಿರುವ ಭೂದಾನ ಶಾಸನಪತ್ರ : ರಿ.ರಿ.ನಂ: ೨೪೬೯/೧೯೪೩-೪೪. ವಾಲ್ಯುಂ - ೬೬೮. ಪು. ೨೪೭-೨೪೯. ದಿನಾಂಕ : ೨೬.೧.೧೯೪೪.

35. ಅಕ್ಕಯ್ಯಮ್ಮನವರು ಗಂಜಾಂಮಠಕ್ಕೆ ಬರೆದು ಕೊಟ್ಟಿರುವ ದಾನ ಶಾಸನಪತ್ರ. ರಿ. ನಂ: ೩೪೩೩ ವಾಲ್ಯುಂ ೧೪೬. ಪು. ೨೮೬-೨೯೧. ದಿನಾಂಕ : ೨೮.೬.೧೯೨೯

36. 'ರುದ್ರಾಭಿಷೇಕ'ದ ಸಂದರ್ಭದಲ್ಲಿ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಎಳನೀರು, ನಿಂಬೆ, ಬಾಳೆ, ಕಬ್ಬು, ಬೇಲ, ದ್ರಾಕ್ಷಿ ಕರ್ಜೂರ, ಉರ್ವಾರುಕ (ಸೌತೆ), ಪರಮಾನ್ನ, ಗಂಧ, ಅಕ್ಷತೆ, ಪಚ್ಚಕರ್ಪೂರ, ಕುಂಕುಮ ಕೇಸರಿ ಇತ್ಯಾದಿ ಹದಿನೆಂಟು ಬಗೆಯ ಪದಾರ್ಥಗಳಿಂದ ವಿಶೇಷ ಅಭಿಷೇಕ ನಡೆಸಲಾಗುತ್ತದೆ.

37. 'ಸಹಸ್ರಬಿಲ್ವಾರ್ಚನೆ' : ಪೂರ್ವೋಕ್ತ.

38. 'ಶಿವಾನುಭವ' : ಶಿವಸಂಬಂಧವಾದ ಆತ್ಮಜ್ಞಾನ. ಶಿವತತ್ವಜ್ಞಾನ. (ಕನ್ನಡ ನಿಘಂಟು. ಸಂ-೮. ಪು. ೮೧೩೧)

39. ಹೇಳಿಕೆ : ಜಿ.ವಿ. ಶಿವಸ್ವಾಮಿ. (೫೬) ಉಪನ್ಯಾಸಕರು. ಮಹಾನಗರಪಾಲಿಕೆ ಕಿರಿಯಕಾಲೇಜು. ಟಾಸ್ಕರ್‌ಟೌನ್. ಬೆಂಗಳೂರು.

40. ಅದೇ.

41. ಬಾಗಿನ (ಬಾಗಿಣ) ಎಂದರೆ ಮದುವೆ, ಹಬ್ಬ, ವ್ರತ ಮುಂತಾದ ಶುಭ ಪ್ರಸಂಗಗಳಲ್ಲಿ ಮುತ್ತೈದೆ ಮೊದಲಾದವರಿಗೆ ಕೊಡುವ ಕಾಣಿಕೆ. (ಕನ್ನಡ ನಿಘಂಟು. ಸಂ-೬. ಕನ್ನಡ ಸಾಹಿತ್ಯ ಪರಿಷತ್ತು. ೧೯೯೦. ಪು. ೬೩೮೧)

42. ಹೇಳಿಕೆ : ರುದ್ರಾಣಮ್ಮ (೭೩) ಮಾಗಡಿ ರಸ್ತೆ. ಬೆಂಗಳೂರು.

43. ಹೇಳಿಕೆ : ಜಿ.ವಿ.ಶಿವಸ್ವಾಮಿ (೫೬) ಉಪನ್ಯಾಸಕರು. ಮಹಾನಗರಪಾಲಿಕೆ ಕಿರಿಯಕಾಲೇಜು. ಟಾಸ್ಕರ್‌ಟೌನ್. ಬೆಂಗಳೂರು.

44. ಹೇಳಿಕೆ : ಗಮಕವಿದ್ವಾನ್ ಚನ್ನಬಸಪ್ಪ (೮೬) ಮಹಾಲಕ್ಷ್ಮಿ ಬಡಾವಣೆ. ಬೆಂಗಳೂರು

45. ಅದೇ.

46. ಸರ್ಪಭೂಷಣ ಮಠದ ಯುಗಾದಿ ಕಾರ್ಯಕ್ರಮ ಹಾಗೂ ಶ್ರಾವಣಮಾಸದ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದ ಮಹನೀಯರುಗಳ ಪಟ್ಟಿ.

ನಿವೃತ್ತ ನ್ಯಾಯಮೂರ್ತಿಗಳಾದ ಇ.ಎಸ್.ವೆಂಕಟರಾಮಯ್ಯ, ಡಿ.ಎಂ. ಚಂದ್ರಶೇಖರ್, ನಿಟ್ಟೂರು ಶ್ರೀನಿವಾಸರಾವ್, ವಿ.ಎಸ್. ಮಳಿಮಠ, ಎಂ.ರಾಮಾಜೋಯಿಸ್, ಉಪರಾಷ್ಟ್ರಪತಿಗಳಾಗಿದ್ದ ಡಾ। ಬಿ.ಡಿ.ಜತ್ತಿ, ನಾಡಿನ ಪ್ರತಿಷ್ಠಿತ ಮಠಾಧೀಶರಾದ ಚಿತ್ರದುರ್ಗದ ಮಲ್ಲಿಕಾರ್ಜುನ ಮುರುಘ ರಾಜೇಂದ್ರ ಸ್ವಾಮಿಗಳು, ತೋಂಟದ ಸಿದ್ಧಲಿಂಗ ಸ್ವಾಮಿಗಳು, ಸಿದ್ಧಗಂಗಾಕ್ಷೇತ್ರದ ಶಿವಕುಮಾರಸ್ವಾಮಿಗಳು, ಆದಿಚುಂಚನಗಿರಿಯ ಬಾಲಗಂಗಾಧರನಾಥಸ್ವಾಮಿಗಳು, ಸುತ್ತೂರು ಶಿವರಾತ್ರಿದೇಶಿಕೇಂದ್ರ ಸ್ವಾಮಿಗಳು, ಕಲಬುರ್ಗಿಯ ಶರಣಬಸಪ್ಪ ಅಪ್ಪ ಇನ್ನೂ ಮುಂತಾದವರು; ಖ್ಯಾತ ವಿದ್ವಾಂಸರೂ ಸಮಾಜತಜ್ಞರುಗಳಾದ ಡಾ। ಸಿದ್ಧಯ್ಯ ಪುರಾಣಿಕ, ಡಾ। ಎಂ.ಸಿ. ಮೋದಿ, ಡಾ। ಜಿ.ಎಸ್. ದೀಕ್ಷಿತ್, ಡಾ। ಎಲ್. ಬಸವರಾಜು, ದೇ. ಜವರೇಗೌಡ, ಜಿ.ನಾರಾಯಣ, ಡಾ। ಜಿ.ಎಸ್. ಶಿವರುದ್ರಪ್ಪ, ಡಾ। ಎಂ. ಚಿದಾನಂದಮೂರ್ತಿ, ಡಾ। ಎಂ.ಎಂ. ಕಲ್ಬುರ್ಗಿ, ಡಾ। ಪಾ.ಶ. ಶ್ರೀನಿವಾಸ, ಡಾ। ಕೆ.ಎಚ್. ಚಲುವರಾಜು, ಡಾ। ಸೂರ್ಯನಾಥ ಕಾಮತ್, ಡಾ। ಎಸ್. ವಿದ್ಯಾಶಂಕರ್, ಡಾ। ಎಚ್.ಎಂ. ಮರುಳಸಿದ್ಧಯ್ಯ, ಡಾ। ಎಸ್.ಎಂ. ವೃಷಭೇಂದ್ರಸ್ವಾಮಿ, ಪ್ರೊ। ಅ.ರಾ. ಮಿತ್ರ, ಪ್ರೊ। ಎಂ.ಎಚ್. ಕೃಷ್ಣಯ್ಯ, ಪ್ರೊ। ಎನ್. ಬಸವಾರಾಧ್ಯ, ಪಂ। ಚನ್ನಪ್ಪ ಎರೇಸೀಮೆ, ಮಹಾದೇವ ಬಣಕಾರ, ಡಾ। ಪಂಚಾಕ್ಷರಿ ಹಿರೇಮಠ, ಡಾ। ಎಂ.ಎ. ಜಯಚಂದ್ರ, ಡಾ।ಪಿ.ವಿ. ನಾರಾಯಣ, ಡಾ। ಸಿದ್ಧಲಿಂಗಯ್ಯ, ಡಾ। ಮಂಗಳಾ ಪ್ರಿಯದರ್ಶಿನಿ, ಶ್ರೀಮತಿ. ಜಗದಾಂಬ ಮಲ್ಲೇದೇವರು, ಡಾ। ವಿಜಯ, ಡಾ। ಮ.ನ. ಜವರಯ್ಯ, ಡಾ। ಕೆ.ಪಿ. ಭಟ್, ಗೊ.ರು. ಚನ್ನಬಸಪ್ಪ, ಪ್ರೊ। ಜಿ.ಎಸ್. ಸಿದ್ಧಲಿಂಗಯ್ಯ, ಡಾ। ಎಚ್. ತಿಪ್ಪೇರುದ್ರಸ್ವಾಮಿ, ಪ್ರೊ। ಶಾಂತಗಸ, ಡಾ। ಸಿ.ಯು. ಮಂಜುನಾಥ್, ಅಬ್ದುಲ್ ಬಷೀರ್, ಸಿ.ಕೆ. ಜಗದೀಶ್, ಯತೀಶ್ವರ ಸಿ.ಚ. ಇನ್ನೂ ಮುಂತಾದವರು; ಸಂಗೀತ ವಿದ್ವಾಂಸರುಗಳಾದ - ಸ್ವರಮಾಂತ್ರಿಕ ಶಿವರಾಜಗವಾಯಿ, ಆರ್.ಎಸ್. ಮರಿದೇವರ ಮಠ, ಶ್ರೀಮತಿ ಲೋಕಮಾತಾ ಶೇಷಾದ್ರಿ, ಇವರೇ ಮೊದಲಾದವರು (೧೯೯೦ ರಿಂದ ೧೯೯೫ರ ವರೆಗೆ ಸರ್ಪಭೂಷಣಮಠದಲ್ಲಿ ನಡೆದ ಬೇರೆ ಬೇರೆ ಕಾರ್ಯಕ್ರಮಗಳ ಆಮಂತ್ರಣ ಪತ್ರಿಕೆಗಳನ್ನು ಆಧರಿಸಿ ಈ ಪಟ್ಟಿಯನ್ನು ತಯಾರಿಸಲಾಗಿದೆ.)

47. ಹೇಳಿಕೆ : ಚಿದ್ಘನಸ್ವಾಮಿಗಳು (೪೭) ಮಠಾಧಿಪತಿ. ಗಂಜಾಂಮಠ. ಮಾಮೂಲುಪೇಟೆ. ಬೆಂಗಳೂರು.

48. ಕರಗವು ಒಂದು ಬಗೆಯ ಜನಪದ ಧಾರ್ಮಿಕ ನೃತ್ಯ. ಇದು ತಮಿಳುನಾಡಿನಲ್ಲಿ ವಿಶೇಷವಾಗಿ ಆಚರಣೆಯಲ್ಲಿದೆ. ಬೆಂಗಳೂರು ನಗರದ ಧರ್ಮರಾಯಸ್ವಾಮಿ ದೇವಸ್ಥಾನದಲ್ಲಿ ಚೈತ್ರಶುದ್ಧ ಸಪ್ತಮಿಯ ರಾತ್ರಿ ಧ್ವಜಾರೋಹಣ, ದ್ವಾದಶಿಯ ರಾತ್ರಿ ದೀಪಾರತಿ, ತ್ರಯೋದಶಿಯ ರಾತ್ರಿ ಹಸಿಕರಗದ ದೇವತಾರಾಧನೆ, ಹುಣ್ಣಿಮೆಯರಾತ್ರಿ ಕರಗ ಮಹೋತ್ಸವ ರಥೋತ್ಸವಗಳು, ಚೈತ್ರಬಹುಳ ಪಾಡ್ಯದ ರಾತ್ರಿ ಪುರಾಣ ನಿರೂಪಣೆ, ಬಿದಿಗೆಯ ಸಾಯಂಕಾಲ ವಸಂತೋತ್ಸವ ಮತ್ತು ರಾತ್ರಿ ಧ್ವಜಾವತರಣ-ಇವು ಕರಗ ಮಹೋತ್ಸವದ ಒಂಬತ್ತು ದಿನಗಳ ಕಾರ್ಯಕ್ರಮಗಳು. ತ್ರಯೋದಶಿಯ ರಾತ್ರಿ ವಿಶೇಷವಾಗಿ ಅಲಂಕೃತರಾದ ಸುಮಾರು ಇನ್ನೂರು ಐವತ್ತು ಬಿಚ್ಚುಗತ್ತಿಯ ವೀರಕುಮಾರರ ಜಯಘೋಷದೊಡನೆ ಕರಗದ ಮೆರವಣಿಗೆಯು ಸಾಗುತ್ತದೆ. ಅರ್ಚಕನು ಮೆರವಣಿಗೆಯ ಹಸಿಯ ಕರಗವನ್ನು ಹೊತ್ತು ಒಯ್ಯುತ್ತಾನೆ. ಹುಣ್ಣಿಮೆಯ ರಾತ್ರಿ ಸುಮಾರು ಹನ್ನೆರಡು ಘಂಟೆಗೆ ಕರಗದ ಮೆರವಣಿಗೆಯು ದೇವಾಲಯದಿಂದ ಹೊರಟು ಪಟ್ಟಣದ ಪ್ರಮುಖ ಬೀದಿಗಳಲ್ಲಿ ಸಾಗಿ ಬೆಳಗಾಗುವುದರೊಳಗೆ ಪುನಃ ದೇವಾಲಯದೊಳಗೆ ಬಂದು ಸೇರುತ್ತದೆ. ಕೊನೆಗೆ ಧ್ವಜಾವತರಣದ ದಿನ ಕರಗವನ್ನು ಜಲದಲ್ಲಿ ವಿಸರ್ಜಿಸಲಾಗುತ್ತದೆ. (ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ೧೯೭೯. ಪು. ೨೬೦.)

49. ಹೇಳಿಕೆ : ಜಿ.ವಿ. ಶಿವಸ್ವಾಮಿ (೫೬) ಉಪನ್ಯಾಸಕರು. ಮಹಾನಗರಪಾಲಿಕೆ ಕಿರಿಯಕಾಲೇಜು. ಟಾಸ್ಕರ್‌ಟೌನ್. ಬೆಂಗಳೂರು.

50. ಶ್ರೀ ಮರಿಸ್ವಾಮಿಗಳ ಜೀವಿತ ಚರಿತ್ರೆ. ಬಸವರಾಜಶಾಸ್ತ್ರಿ. ೧೯೧೪. ಪು. ೨೪, ೨೫.

51. ಮೈಸೂರ್ ಸ್ಟಾರ್. ಸಂಚಿಕೆ-೨೧, ಸಂಪುಟ-೩೨. ಪು. ೪. ದಿ : ೨೫.೫.೧೯೧೯.

52. ೧೮೭೯ರಲ್ಲಿ ಮೈಸೂರು ಸಂಸ್ಥಾನದ ಚೀಫ್‌ಕಮಿಷನರರು ಚಿತ್ರದುರ್ಗ ಸಂಸ್ಥಾನದ ಮುರುಗಿ ಮಠಾಧಿಪತಿಗಳ ಹೆಸರಿಗೆ ಹೊರಡಿಸಿರುವ ರಹದಾರಿ ಪತ್ರದಲ್ಲಿನ ಮುಖ್ಯಾಂಶಗಳು ಈ ರೀತಿ ಇವೆ...

''ಮೈಸೂರು ಸೀಮೆ ಗಡಿಗಳ ಅಮೀಲ್ ಕಿಲ್ಲೇದಾರ್ ಠಾಣಾದಾರ್ ವಗೈರೆಯವರಿಗೆ ಬರಸಿ ಕಳುಹಿಸಿದ ನಿರೂಪ- ಅದಾಗಿ ಚಿತ್ರದುರ್ಗದಲ್ಲಿರುವ ಶ್ರೀಮನ್ ಮಹಾರಾಜ ನಿರಂಜನ ಮುರಿಗಾ ರಾಜೇಂದ್ರ ಸ್ವಾಮಿಗಳವರು ಮೈಸೂರು ಸೀಮೆಯಲ್ಲಿ ಶಿಷ್ಯಾರ್ಜನೆ ಉದ್ದಿಶ್ಯ ಸಂಚಾರ ಮಾಡುವುದರಿಂದ ಅಮರಹಾ ಇರತಕ್ಕ ಸಲ್ಲ ತಂತು ವಿವರ-೧೫೦ ಅಯ್ಯಗಳು. ೨೦೦ ಶೂದ್ರ ಜವಾನರು ವಗೈರೆ, ೪ ಆನೆ, ೮ ಒಂಟೆ, ೮೦ ಕುದುರೆಗಳು, ೧ ಅಡ್ಡ ಪಲ್ಲಕ್ಕಿ, ೧ ಸಾದಾಪಲ್ಲಕ್ಕಿ, ೧ ಮ್ಯಾನ, ೧ ಮಕರತೋರಣ (ಮೀನು, ಮೊಸಳೆ ಮುಂತಾದ ಆಕೃತಿಗಳುಳ್ಳಮೆರವಣಿಗೆಯಲ್ಲಿ ಹಿಡಿಯುವ ತೋರಣ), ೧ ನಂದಿಧ್ವಜ, ೨ ಶ್ವೇತಛತ್ರ, ೨ ಪಂಚದೀವಟಿಕೆ, ೨ ಮೋರ್ಚಾಲು, (ಮೋರ್ಛಾಲ್=ದೇವರು, ದೊರೆಗಳು ಮತ್ತು ಪೂಜ್ಯರಾದವರ ಬಳಿ ಗೌರವದ ಚಿಹ್ನೆಯಾಗಿ ಹಿಡಿಯುವ ನವಿಲು ಗರಿಗಳಿಂದ ಮಾಡಿದ ಚಾಮರ) ೨ ವೆಟ್ ಪಾವಡ (ಬಿಳಿತೋರಣ), ೨ ಕುದುರೆ ಮೇಲಿನ ಡಂಕ (ಢಕ್ಕೆ), ೨ ಕಾವಿನಿಶಾನಿ (ಕಾವಿಬಾವುಟ), ೨ ಮಾಯಿಮರಾಬತು (?), ೨ ಚಂದ್ರವಾದ್ಯ, ೨ ಉಡುಕುವಾದ್ಯ, ೨ ಚಾಮರ, ೨ ಬಿಚ್ಚುಪರಂಗು, ೨ ರವುಡು, ೨ ತಲೆಗೆ ಕಟ್ಟಿ ಬಾರಿಸುವ ವಾದ್ಯ, ೨ ತಲೆಗೆ ಕಟ್ಟಿ ಬಾರಿಸುವ ಸೂರ್ಯವಾದ್ಯ, ೨ ಹಸಿರು, ಕೆಂಪು, ಹಳದಿ, ಹಫ್ತಾಗಿರಿ, ೨ ಚಂದ್ರಗಾವಿ ಉಡಾಸು, ೨ ಹಗಲು

ದೀವಟಿಗೆ, ೨ ಜಾಗಟೆ, ೨ ಶಂಖ, ೨ ಕಾವಿಜಾಂಡ್ಯ, ೨ ಪಟಾಪಟಿ ಜಾಂಡ್ಯ, ೫೦ ಬೆಳ್ಳಿಕಟ್ಟಿಗೆ, ೫೦ ಹಸರುಕಟ್ಟಿಗೆ, ೨೦ ಬಂದೂಕುಗಳು, ೪೧ ಹತ್ಯಾರುಗಳು, ೩೦ ಚಕ್ಕಡಾಬಂಡಿಗಳು, ೪೦ ಬಿಲ್ಲೆಡವಾಲಿಗಳು.'' (ಮೈಸೂರ್ ಸ್ಟಾರ್. ೧೯೧೯ಮೇ ೨೫. ಸಂಚಿಕೆ-೨೧. ಸಂಪುಟ -೩೨. ಪು. ೨.)

53. ಈ ಸಂದರ್ಭದಲ್ಲಿ ನಾಡಿನ ಪ್ರಮುಖ ಮಠಗಳಾದ ಶಿವಗಂಗಾಮಠ, ವ್ಯಾಸರಾಯಮಠ, ವಾನಮಾಮಲೆಮಠ, ಆಹೋಬಲಮಠ ಇವೇ ಮೊದಲಾದ ಮಠಗಳ ಅಧಿಪತಿಗಳಿಗೆ ಸಲ್ಲುತ್ತಿದ್ದ ಮಾರ್ಯಾದೆಗಳೆಲ್ಲವೂ ಚಿತ್ರದುರ್ಗದ ಜಗದ್ಗುರುಗಳಿಗೂ ಸಲ್ಲತಕ್ಕದ್ದೆಂದೂ; ಮೊದಲ ದಿನದ ಭಿಕ್ಷೆಯಾಗಿ ೭೫ ರೂಗಳನ್ನೂ, ಉತ್ಸವ ಕಾಲದಲ್ಲಿ ೬ ಸಿಲೇದಾರ್ ಕುದುರೆಗಳ ಮಿಲಿಟರಿ ಮರ್ಯಾದೆ, ಬ್ಯಾಂಡು ಮತ್ತು ಮಾಮೂಲು ಇಸ್ತಕಪಾಲು ಸಹ ಕೊಟ್ಟು ಪಟ್ಟಣಕ್ಕೆ ಸ್ವಾಗತ ಮಾಡಿಸಲ್ಪಡುವಂತೆ ಮಹಾರಾಜ ಸರ್ಕಾರದ ಅಪ್ಪಣೆಯಾಗಿತ್ತು. (Order No : 3705 -11. Muz. 646-19-10 Bangalore. 27th May 1919).

54. ಕೆಲವು ತ್ರಿಮತಸ್ಥ (ದ್ವೈತ, ಅದ್ವೈತ, ವಿಶಿಷ್ಟಾದ್ವೈತ) ಅಧಿಕಾರಿಗಳ ಕುಯುಕ್ತಿಯಿಂದಾಗಿ ಮೇ ೧೮ರ (೧೯೧೯) ಜಗದ್ಗುರುಗಳ ಉತ್ಸವವು ನಿರ್ಬಂಧಿಸಲ್ಪಟ್ಟಿತ್ತು ಎಂಬುದಾಗಿ ಕಾರಣ ಸೂಚಿಸಲಾಗಿದೆ. (ಮೈಸೂರ್ ಸ್ಟಾರ್. ೧೯೧೯ ಮೇ ೨೫. ಸಂಚಿಕೆ-೨೧. ಸಂಪುಟ-೩೨. ಪು. ೩.)

55. ಶ್ರೀ ಮಜ್ಜಗದ್ಗುರು ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಗಳು ಬೆಂಗಳೂರು ಪುರಪ್ರವೇಶ ಮಾಡಿದಾಗ (ದಿ : ೧೯.೫.೧೯೧೯) ಇಲ್ಲಿನ ಮಹಮ್ಮದೀಯ ಮಹಾಜನರ ಪಕ್ಷದಿಂದ ಒಪ್ಪಿಸಲ್ಪಟ್ಟ ವಿಜ್ಞಾಪನಾ ಪತ್ರದ ತಾತ್ಪರ್ಯ-

''ಈ ಭರತ ಖಂಡದಲ್ಲಿ ಚಕ್ರವರ್ತಿಗಳಾಗಿದ್ದ ಷಾಹ ಆಲಂಘೀರ್ (ಔರಂಗಜೇಬ)ರವರು ನಿಮ್ಮ ಪೀಠದವರನ್ನು ತಮ್ಮ ಗುರುವೆಂದು ಭಾವಿಸಿ 'ಶಿಕ್ಕಾಶಿಲೆ' (ಮುದ್ರೆ, ಮೊಹರು)ಗಳನ್ನು ಗೌರವಾರ್ಥವಾಗಿ ಒಪ್ಪಿಸಿರುತ್ತಾರೆ. ಹೈದರಾಬಾದ್ ನವಾಬರಾದ ನಿಜಾಮರು ನಿಮ್ಮ ಪೀಠಕ್ಕೆ ಶೂನ್ಯಛತ್ರವನ್ನು ಮರ್ಯಾದಾರ್ಥವಾಗಿ ಅರ್ಪಿಸಿರುತ್ತಾರೆ. ಹೀಗೆ ಪುರಾತನ ಕಾಲದಿಂದಲೂ ಅನೇಕ ರಾಜಮಹಾರಾಜರುಗಳ ಗೌರವವು ನಿಮ್ಮ ಪೀಠಕ್ಕೆ ಸಲ್ಲುತ್ತಾ ಬಂದಿರುವುದು ಮಾತ್ರವಲ್ಲದೆ ಬಿಜಾಪುರದ ನವಾಬರುಗಳ ಆಸ್ಥಾನದಲ್ಲೂ ತಮ್ಮ ಮರ್ಯಾದೆಯು ಅಸಾಧಾರಣ ರೀತಿಯಿಂದ ನಡೆಯುತ್ತಿದ್ದಿತು. ಈಗಿನ ಆಂಗ್ಲ ಪ್ರಭುತ್ವದವರೂ ಕೂಡ ತಮ್ಮನ್ನು ಸಂಬೋಧಿಸುವ ಕಾಲದಲ್ಲಿ ರಿಕಾರ್ಡುಗಳೊಳಗೆ ವಿಶೇಷ ಮರ್ಯಾದಾ ವಚನಗಳನ್ನೇ ಉಪಯೋಗಿಸುತ್ತಿದ್ದಾರೆ. ನಮ್ಮ ಮೈಸೂರು ಸರ್ಕಾರದಲ್ಲೂ ಸದಾ ತಮಗೆ ಗುರುಪೀಠದ ಮರ್ಯಾದೆ ಉಚಿತವಾಗಿಯೇ ನಡೆಯುತ್ತಿದೆ.''

-ಇತಿ ಷೇಕ್ ಹೈದರ್ ಮತ್ತಿತರ ಪುರ ನಿವಾಸಿಗಳು. (ಮೈಸೂರ್ ಸ್ಟಾರ್, ೧೯೧೯ ಜೂನ್ ೮. ಸಂ-೨೩. ಸಂ-೩೨. ಪು. ೨.)

ಇದೇ ಬಗೆಯ ಬಿನ್ನವತ್ತಳೆಯನ್ನು ಹಾಸನದ ಮಹಮ್ಮದೀಯ ಮಂಡಳಿಯವರು, ದಿನಾಂಕ:೧೪.೨.೧೯೨೯ರಂದು ಶ್ರವಣಬೆಳ್ಗೊಳದ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಸ್ವಾಮಿಗಳವರಿಗೂ ಒಪ್ಪಿಸಿದ್ದುದು ಕಂಡುಬರುತ್ತದೆ. (ಶ್ರವಣಬೆಳ್ಗೊಳ ಶ್ರೀಗಳವರ ಭಾಷಣ ಸಂಗ್ರಹ. ಸಂ - ಎರ್ತೂರು ಶಾಂತಿರಾಜಶಾಸ್ತ್ರಿಗಳು. ಪು. ೧೫೫.೧೫೬)

56. ಮೈಸೂರ್ ಸ್ಟಾರ್. ೧೯೧೯ ಮೇ ೨೫. ಸಂಚಿಕೆ-೨೧. ಸಂ-೩೨. ಪು. ೩, ೪.

57. Muzrai File No: 646/1919. Sl.No: 11. P. 3. Dt : 19th May 1919.

58. ಮೈಸೂರ್ ಸ್ಟಾರ್. ೧೯೧೯ ಜೂನ್ ೮. ಸಂ-೨೩. ಸಂ-೩೨. ಪು. ೩.

59. ಕಾಶಿ, ಕೇದಾರ, ಶ್ರೀಶೈಲ, ಉಜ್ಜಯಿನಿ ಮತ್ತು ಬಾಳೆಹೊನ್ನೂರು ಇವು ಐದು ಪೀಠಗಳೂ ಗುರುವರ್ಗದ ಪಂಚ ಪೀಠಗಳು.

60. 'ಶ್ರೀ ಜಗದ್ಗುರು ಶಿವಾನಂದ ವಿಜಯ'ದಲ್ಲಿ ಬೆಂಗಳೂರಿನಲ್ಲಿ ಬಾಳೆಹೊನ್ನೂರಿನ ಜಗದ್ಗುರುಗಳ ಮಹೋತ್ಸವವು ನಡೆದುದು ೧೯೩೪ರ ಮೇ ತಿಂಗಳಲ್ಲಿ ಎಂದು ನಮೂದಿಸಲಾಗಿದೆ. (ಶ್ರೀ ಗಂಗಾಧರ ಶಿವಾಚಾರ್ಯರು. ಶ್ರೀ ಜಗದ್ಗುರು ಶಿವಾನಂದವಿಜಯ. ಮೈಸೂರು. ೧೯೪೯. ಪು. ೨೯)

61. Muzrai File No : 229/1933-34. Sl. No : 3. P. 2, 3.

62. 'ಈ ಮೆರವಣಿಗೆಯಲ್ಲಿ ೨ ಆನೆಗಳು, ೧೧ ಕುದುರೆಗಳು, ೧೩ ಜನ ಬಾರ್ ಸಿಪಾಯಿಗಳು, ಅವರ ಮೇಲ್ಪಟ್ಟ ಅಧಿಕಾರಿಗಳು, ೧೮ ಜನ ಬ್ಯಾಂಡಿನವರು, ೧೨ ಜನ ಸಾದಾ ಕಟ್ಟಿಗೆಯವರು, ೧೩ ಜನ ಬೆಳ್ಳಿ ಕಟ್ಟಿಗೆಯವರು, ೧೨ ಜನ ಹಸರು ಕಟ್ಟಿಗೆಯವರು, ಇಬ್ಬರು ಹಗಲು ದೀವಟಿಗೆಯವರು, ಛತ್ರಿ, ಚಾಮರ, ಮ್ಯಾನ ಇತ್ಯಾದಿ ರಾಜಮರ್ಯಾದೆಗಳು ಇದ್ದವು.' (ಶ್ರೀ ಗಂಗಾಧರ ಶಿವಾಚಾರ್ಯರು. ಪೂರ್ವೋಕ್ತ. ಪು. ೩೧, ೩೨)

63. ಶ್ರೀಗಂಗಾಧರ ಶಿವಾಚಾರ್ಯರು. ಶ್ರೀ ಜಗದ್ಗುರು ಶಿವಾನಂದವಿಜಯ. ೧೯೪೯. ಪು. ೨೯.

64. ಅದೇ ಪುಟ.

65. ಅದೇ. ಪುಟ ೩೦.

66. 'ರೇಣುಕ' : ಸಾಂಪ್ರದಾಯಕ ಹೇಳಿಕೆಯ ಪ್ರಕಾರ ವೀರಶೈವ ಧರ್ಮದ ಆದಿಜಗದ್ಗುರುಗಳಾದ ರೇಣುಕಾಚಾರ್ಯರೇ ಈ ರೇಣುಕರು. ರಾಮಾಯಣದ ಕಾಲದಲ್ಲಿ ಅಗಸ್ತ್ಯಮುನಿಗೆ ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಬೋಧಿಸಿದರೆಂದು ಹೇಳಲಾಗುತ್ತದೆ. ಆದರೆ ಹಲವಾರು ವಿದ್ವಾಂಸರು, ಪಂಚಾ(ಪೀಠ) ಚಾರ್ಯರಲ್ಲಿ ಒಬ್ಬರಾದ ರೇವಣಸಿದ್ಧರೇ ರೇಣುಕಾಚಾರ್ಯರೆಂದೂ; ಇವರು ಹನ್ನೆರಡನೇ ಶತಮಾನದ ಬಸವೇಶ್ವರನಿಗೆ ಹಿರಿಯ ಸಮಕಾಲೀನರೆಂದೂ; ಹೀಗಾಗಿ ರೇಣುಕ, ರೇವಣ ಅಭಿನ್ನರೆಂದೂ ಅಭಿಪ್ರಾಯಪಟ್ಟಿದ್ದಾರೆ.

[ಹೆಚ್ಚಿನ ವಿವರಗಳಿಗಾಗಿ : ಡಾ। ಎಸ್.ಸಿ. ನಂದಿಮಠ, ವೀರಶೈವಧರ್ಮದ ಕೈಪಿಡಿ. (ಅನು : ಪ್ರೇಮಾದೇವಿ ಮಳಿಮಠ) ಪು. ೧೧; ಡಾ। ಎಂ. ಚಿದಾನಂದಮೂರ್ತಿ. ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮ ತೆರೆ. (ಸಂಪ್ರಬಂಧದ ಪ್ರತಿ. ಪು. ೯೬); ಡಾ। ಎಂ.ಎಂ. ಕಲ್ಬುರ್ಗಿ. ಶಾಸನಗಳಲ್ಲಿ ಶಿವಶರಣರು. ಪು. ೪೬.]

67. ಮೈಸೂರ್ ಸ್ಟಾರ್ ಪತ್ರಿಕಾ ವರದಿ. ೧೯೨೬ ರ ಮೇ ೨೨. ಸಂ-೨೧. ಸಂ-೩೯. ಪು. ೪.

68. ಅದೇ ಪತ್ರಿಕೆಯ ವರದಿ. ೧೯೨೯ ಏಪ್ರಿಲ್ ೬. ಸಂ-೧೪. ಸಂ-೪೨. ಪು. ೬.

69. ವೀರಶೈವ ಸಮಾಜದ ಸೇವಾಸಂಘ. ವಾರ್ಷಿಕ ವರದಿ. ೧೯೩೯-೧೯೪೨. ಪು. ೧೦, ೨೩.

70. ದೇವೀರಮ್ಮನ ಹೇಳಿಕೆ : Judicial Assistant Commissioner Court, Bangalore. So. No : 42/1891. Dt: 31.8.1892. P. 4.

71. ನರಗುಂದದೇವರಮಠದ ಸಿದ್ಧಲಿಂಗಸ್ವಾಮಿಗಳ ಕಾಲದ (೧೮೭೮-೮೧ ರ) ಕೆಲವು ಕಾಗದ ಪತ್ರಗಳಿಂದ ಈ ವಿಚಾರವು ತಿಳಿದು ಬರುತ್ತದೆ.

72. ನೆಲಮಂಗಲ ತಾಲ್ಲೂಕಿನ ಬೈಯ್ಯಂಡಹಳ್ಳಿ, ಕದರನಹಳ್ಳಿ, ಹಾರೋಕೇತನಹಳ್ಳಿ, ಹುಸ್ಕೂರು, ಗೊಲ್ಲಹಳ್ಳಿ, ಮೈಲನಹಳ್ಳಿ, ಮಾಚೆನಾಯ್ಕನಹಳ್ಳಿ, ಸೋಲೂರು, ಗುಡೇಮಾರನಹಳ್ಳಿ, ಮಲ್ಲರಬಾಣವಾಡಿ, ನೆಲಮಂಗಲ ಇವೇ ಮುಂತಾದ ಸ್ಥಳಗಳಲ್ಲಿ ಸಂಚರಿಸಿ ದವಸಧಾನ್ಯಗಳನ್ನು ಸಂಗ್ರಹಿಸಿದ ವಿವರಗಳಿವೆ. (ಹಾರೋಕೇತನಹಳ್ಳಿಯ ಚಿಕ್ಕವೀರಪ್ಪನು ರುದ್ರಸ್ವಾಮಿಗಳಿಗೆ ದಿ:೧೬.೯.೧೮೮೪ರಲ್ಲಿ ಬರೆದಿರುವ ಪತ್ರ. ಬೇಲಿಮಠ.)

73. ಮೈಲನಹಳ್ಳಿಯ ಕಿರಾಣಿ ಲಿಂಗಣ್ಣನು ಬೇಲಿಮಠದ ರುದ್ರಸ್ವಾಮಿಗಳಿಗೆ ದಿನಾಂಕ:೨೩.೪.೧೮೮೬ರಲ್ಲಿ ಬರೆದಿರುವ ಪತ್ರ.

74. ನಂಜುಂಡಸ್ವಾಮಿಗಳು. ಸದ್ವಿದ್ಯಾನ್ನದಾನ ಪ್ರಾಭವ ಪ್ರಕಾಶಿಕಾ. ಬೆಂಗಳೂರು. ೧೮೯೩. ಪು. ೩೦.

75. ಈ ಸಂದರ್ಭದಲ್ಲಿ ಚಿದ್ಘನಶಿವಾಚಾರ್ಯರು ದಾವಣಗೆರೆ, ಹರಿಹರ, ಶಿವಮೊಗ್ಗ, ಭದ್ರಾವತಿ, ಚಿಕ್ಕಮಗಳೂರು, ಸಕಲೇಶಪುರ ಇವೇ ಮೊದಲಾದ ಪ್ರಾಂತ್ಯಗಳಲ್ಲಿ ಸಂಚರಿಸಿ ೧೮೯೪ರ ಮಾರ್ಚಿಯಿಂದ ೧೮೯೬ರ ಜುಲೈ ಅವಧಿಯ ಒಳಗೆ ಒಟ್ಟು ೨೩೫೦-೦೦ ರೂಪಾಯಿಗಳ ದೇಣಿಗೆಯನ್ನು ಸಂಗ್ರಹಿಸಿದ್ದುದಕ್ಕೆ ದಾಖಲೆಗಳಿವೆ. (ಚಿದ್ಘನ ಶಿವಾಚಾರ್ಯರು ೧೯೦೬ರ ಆಗಸ್ಟ್ ೧೧ ರಂದು ಬೆಂಗಳೂರು ಅಮಲ್ದಾರರ ತಾಲ್ಲೂಕು ಕೋರ್ಟಿಗೆ ಸಲ್ಲಿಸಿರುವ ಮೂರು ಪುಟಗಳ ವಿವರಣಾ ಪಟ್ಟಿಯೊಂದರಿಂದ ಈ ಮಾಹಿತಿಗಳು ಲಭ್ಯವಾಗಿವೆ.)

76. 'ಸರ್ಕೀಟು' ಎಂಬ ಪದವು ಆಂಗ್ಲಭಾಷೆಯ 'Circuit' ಎಂಬ ಪದದ ತದ್ಭವ ರೂಪವಾಗಿದೆ. ಹಿಂದೆ ಕ್ರೈಸ್ತ ಮೆಥಾಡಿಸ್ಟ್ (ಧಾರ್ಮಿಕ ವಿಧಿ ವಿಧಾನಗಳ ನಿರ್ದೇಶನ ಮಾಡುವವರು)ರುಗಳು ಅಥವಾ ಚರ್ಚಿನ ಚರಉಪದೇಶಿಗಳು ಸಂಚರಿಸುವ ಪ್ರಾಂತ್ಯವನ್ನು 'Circuit' ಎಂಬುದಾಗಿ ಗುರುತಿಸಲಾಗುತ್ತಿತ್ತು. (ಇಂಗ್ಲೀಷ್-ಕನ್ನಡ ನಿಘಂಟು. ಮೈಸೂರು ವಿಶ್ವವಿದ್ಯಾಲಯ .೧೯೭೭. ಪು. ೧೮೨.) ಇಲ್ಲಿ 'ಸರ್ಕೀಟು' ಎಂಬ ಪದವನ್ನು ಮಠಾಧಿಪತಿಗಳ ಧಾರ್ಮಿಕ ಪ್ರವಾಸ ಎಂಬ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ.

77. ವಿಜಯಸಂವತ್ಸರದ (ಕ್ರಿ.ಶ.೧೮೯೩ರಲ್ಲಿ) ಮಾಘ ಶುದ್ಧ ೧೧ ರಂದು ಗಂಜಾಂಮಠದ ಚಿದ್ಘನಶಿವಾಚಾರ್ಯರು ಸರ್ಕೀಟಿಗೆ ಹೊರಟಾಗ ಅವರೊಂದಿಗೆ ಇದ್ದ ಸಾಮಾನು ಸರಂಜಾಮುಗಳ ಪಟ್ಟಿಯಲ್ಲಿ ಇದಿಷ್ಟೂ ವಿವರಗಳಿವೆ. ಸ್ವತಃ ಚಿದ್ಘನಶಿವಾಚಾರ್ಯರೇ ಈ ಪಟ್ಟಿಯನ್ನು ರಚಿಸಿದ್ದಾರೆ. (ಗಂಜಾಂಮಠ) ಈ ಸಂದರ್ಭದಲ್ಲಿ ರುದ್ರಯ್ಯ, ಮಹಾದೇವಯ್ಯ, ನಂಜಪ್ಪ, ದೀಕ್ಷಿತ, ಆರ್ಯ, ಬಸಣ್ಣ, ಗುರುಪಾದಯ್ಯ, ಮತ್ತು ಗಂಗಾಧರಯ್ಯ ಎಂಬ ಎಂಟು ಜನ ಸೇವಕರು ಚಿದ್ಘನಶಿವಾಚಾರ್ಯರ ಜೊತೆಗೆ ಸರ್ಕೀಟು ಹೊರಟಿದ್ದುದಾಗಿ ತಿಳಿದುಬರುತ್ತದೆ.

78. ೧೮೯೩ರಲ್ಲಿ ಬೆಂಗಳೂರಿನ ಗಂಜಾಂಮಠದ ನಂಜುಂಡಸ್ವಾಮಿಗಳಿಗೆ ಗುಡ್ಡೇನಹಳ್ಳಿಯ ಕೇರಪ್ಪಗೌಡ ಎಂಬುವರು ತೇಗದ ಮರದ ಪೆಟ್ಟಿಗೆ ಗಾಡಿಯೊಂದನ್ನೂ ಮತ್ತು ಕಂಭಸಾಗರದ ಬಸಪ್ಪ ಎಂಬುವರು ಒಂದು ಜೊತೆ ಬಿಳಿ ಹೋರಿಗಳನ್ನೂ ಕಾಣಿಕೆಯಾಗಿ ಅರ್ಪಿಸಿದ್ದ ನಿದರ್ಶನಗಳಿವೆ. (ಗಂಜಾಂಮಠದ ನಂಜುಂಡಸ್ವಾಮಿಗಳಿಗೆ ಇವರ ಶಿಷ್ಯ ಚಿದ್ಘನಶಿವಾಚಾರ್ಯರು ಬರೆದಿರುವ ಪತ್ರ. ದಿನಾಂಕ : ೧೮.೬.೧೮೯೩.)

79. ಕನ್ನಡ ನಿಘಂಟು. ಸಂ-೫. ಕನ್ನಡ ಸಾಹಿತ್ಯ ಪರಿಷತ್ತು. ೧೯೮೮. ಪು. ೫೪೨೨.

80. ಸಿದ್ಧಯ್ಯಪುರಾಣಿಕ. ಶರಣಚರಿತಾಮೃತ. ೧೯೬೪. ಪು. ೬೭೭.

81. ಇದೇ ಸಂಗತಿಯನ್ನು ಮೊದಲು ಬಿ. ಶಿವಮೂರ್ತಿಶಾಸ್ತ್ರಿಗಳು ರಚಿಸಿದ್ದ ಶಬ್ದಚಿತ್ರದಲ್ಲಿ ದಿನಾಂಕ : ೨.೬.೧೯೬೩ ರಂದು ಬೆಂಗಳೂರು

ಆಕಾಶವಾಣಿಯಿಂದ ಬಿತ್ತರಿಸಲಾಗಿತ್ತು. (ಬಿ. ಶಿವಮೂರ್ತಿಶಾಸ್ತ್ರಿ. ವೀರಶೈವ ಸಾಹಿತ್ಯ ಮತ್ತು ಇತಿಹಾಸ. ಭಾಗ-೪. ೧೯೭೮. ಪು. ೧೬೯.)

82. ವೀರಶೈವರಲ್ಲಿ ಇಷ್ಟಲಿಂಗದ ಪ್ರಾಧಾನ್ಯತೆ ಬಹಳ ಮಹತ್ವದ್ದು. ದೀಕ್ಷಾ ಸಂದರ್ಭದಲ್ಲಿ ಗುರುವಿನಿಂದ ಅನುಗ್ರಹೀತವಾದ ಇಷ್ಟಲಿಂಗವನ್ನು ಶರೀರದ ಮೇಲೆ ಧರಿಸಲ್ಪಟ್ಟ ಶರಣನು ಮರುಹುಟ್ಟನ್ನು ಪಡೆದವನಾಗುತ್ತಾನೆ. ಜೀವನ ಪರ್ಯಂತವೂ ಇದು ಶಿವ-ಜೀವರ ಅವಿನಾಭಾವ ಸಂಬಂಧದ ಕುರುಹಾಗಿ ಉಳಿದುಬರುತ್ತದೆ. ಇಂತಹ ಇಷ್ಟಲಿಂಗದ ಮೇಲಿನ ವೀರನಿಷ್ಠೆಯು ವೀರಶೈವಧರ್ಮದ ಪಾವಿತ್ರತೆಯ ಸಂಕೇತವಾಗಿದೆ.

83. ಈ ಸಂಗತಿಯನ್ನು ಗಂಗಾಧರ ಮಡಿವಾಳೇಶ್ವರ ತುರಮರಿಯವರ ವಿದ್ಯಾಗುರುಗಳಾಗಿದ್ದ ಮುರಿಗೆಪ್ಪ ಸ್ವಾಮಿಗಳು ಕಣ್ಣಾರೆ ಕಂಡಿದ್ದಾಗಿ ಹೇಳಲಾಗಿದೆ. (ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರಿನ ಶ್ರೀ ಸರ್ಪಭೂಷಣಶಿವಯೋಗಿಗಳ ಜೀವನಚರಿತ್ರೆ. ೧೯೫೨. ಪು. ೧೫, ೧೬.)

84. ತ.ಸು. ಶಾಮರಾಯ. ಶಿವಶರಣ ಕಥಾರತ್ನಕೋಶ. ಪು. ೪೮೨.

85. ಹೇಳಿಕೆ : ಬಾಣಾವರದ ಗೌರಮ್ಮದಯಾನಂದ್ (೫೮) ಶೇಷಾದ್ರಿಪುರ. ಬೆಂಗಳೂರು.

86. ಅದೇ.

87. ಹೇಳಿಕೆ : ಕಾಂತಿಕಾಯಕದ ಶಿವಲಿಂಗಯ್ಯ (೭೬) ಸರ್ಪಭೂಷಣಮಠದ ನಿವಾಸಿ. ಬೆಂಗಳೂರು.

88. ಮಲ್ಲಾಬಾದಿ ವೀರಭದ್ರಪ್ಪ. ಪೂರ್ವೋಕ್ತ. ಪು. ಅದೇ.

89. ಹೇಳಿಕೆ : ಕಾಂತಿಕಾಯಕದ ಶಿವಲಿಂಗಯ್ಯ. ಪೂರ್ವೋಕ್ತ.

90. ವೀರಶೈವರಲ್ಲಿ ಅಂತ್ಯಸಂಸ್ಕಾರ ವಿಧಿಗಳನ್ನು ಪೂರೈಸುವಾತನನ್ನು 'ಪಸುಗೆಮರಿ' ಎಂದು ಹೇಳಲಾಗುತ್ತದೆ. (ಹೇಳಿಕೆ : ಕಾಂತಿ ಕಾಯಕದ ಶಿವಲಿಂಗಯ್ಯ.)

91. ಹೇಳಿಕೆ : ಗೌರಮ್ಮ (೭೧) ನವರು. ಮಾಮೂಲುಪೇಟೆ. ಮಠದ ಭಕ್ತರು. ಬೆಂಗಳೂರು.

92. ಹೇಳಿಕೆ : ಕೆ.ಪಿ. ಶಿವಲಿಂಗಯ್ಯ (೬೮) ನಿವೃತ್ತ ಪ್ರಾಚಾರ್ಯರು. ವಿಜಯನಗರ. ಬೆಂಗಳೂರು.

93. ಬಸವರಾಜಶಾಸ್ತ್ರಿ. ಶ್ರೀಮರಿಸ್ವಾಮಿಗಳ ಜೀವಿತಚರಿತ್ರೆ. ಬಳ್ಳಾರಿ.೧೯೧೪. ಪು. ೧೫ (ಇದೇ ಸಂಗತಿಯನ್ನು ತ.ಸು. ಶಾಮರಾಯರ ಶಿವಶರಣ ಕಥಾರತ್ನಕೋಶದ ಪು. ೩೧೮ದಲ್ಲೂ ಪ್ರಸ್ತಾಪಿಸಲಾಗಿದೆ)

94. ಬಸವರಾಜಶಾಸ್ತ್ರಿ. ಪೂರ್ವೋಕ್ತ. ಪು. ೧೫, ೧೬.

95. ಮರಿಸ್ವಾಮಿ (ಕಳಾಸಿಪಾಳ್ಯ)ಗಳು ತಮ್ಮ ಎಪ್ಪತ್ತೆರಡನೆಯ ವಯಸ್ಸಿನಲ್ಲಿ ಅಂದರೆ ಶೋಭಕೃತು ಸಂವತ್ಸರ ಆಷಾಢ, ಶುದ್ಧ ೩. ಶುಕ್ರವಾರದಂದು ಬೆಳಿಗ್ಗೆ ೮ ಗಂಟೆಗೆ ಪ್ರಾಣ ತೊರೆದುದಾಗಿ ತಿಳಿದುಬರುತ್ತದೆ. (ಅದೇ. ಪು. ೧೫೦)

96. ಬೆಂಗಳೂರಿನ ಜಕ್ಕರಾಯನಕೆರೆಯು ಹಿಂದೆ, ಈಗಿನ ಶೇಷಾದ್ರಿಪುರ ಹಾಗೂ ಓಕುಳಿಪುರಗಳ ನಡುವಿನ ಮೈದಾನದ ಭಾಗದಲ್ಲಿತ್ತು. ಆಟದ ಮೈದಾನವಾಗಿರುವ ಈ ಭಾಗವನ್ನು ಇಂದಿಗೂ ಜಕ್ಕರಾಯನಕೆರೆ ಆಟದ ಮೈದಾನವೆಂದೇ ಗುರುತಿಸಲಾಗುತ್ತದೆ.

97. ಹೇಳಿಕೆ : ಶಿವಯೋಗಿ ಬಸವಲಿಂಗಸ್ವಾಮಿ (೫೫) ಮಠಾಧಿಪತಿ. ಬೂದಿಸ್ವಾಮಿಮಠ. ಚಾಮರಾಜಪೇಟೆ. ಬೆಂಗಳೂರು.

98. ಅದೇ.

99. ಹೇಳಿಕೆ : ಸುವರ್ಣಲಿಂಗ ಶಿವಾಚಾರ್ಯರು (೬೨) ವಿಭೂತಿಪುರದ ಮಠಾಧಿಪತಿಗಳು. ಬೆಂಗಳೂರು.

100. ಹೇಳಿಕೆ : ಗೌರಮ್ಮ (೮೫) ದೊಡ್ಡಮಠದ ಚನ್ನವೀರಸ್ವಾಮಿಗಳ ಅಕ್ಕ. ಜಯನಗರ. ಬೆಂಗಳೂರು.

ಅಧ್ಯಾಯ - ಎಂಟು

# ಮಠಗಳು-ಸಾಹಿತ್ಯಕವಾಗಿ

---

೮.೧. ಸರ್ಪಭೂಷಣ ಶಿವಯೋಗಿಗಳ ಕೃತಿಗಳು

೮.೨. ಮಹಾಂತದೇಶಿಕರ ಕೃತಿಗಳು

೮.೩. ಗುರುವಣ್ಣದೇವರ ಮಠದ ನಂಜುಂಡಸ್ವಾಮಿಗಳ ಕೃತಿಗಳು

೮.೪. ಇತರೆ ಮಠಾಧೀಶರ ಸಾಹಿತ್ಯ ಸೇವೆ

೮.೫. ಸಾಹಿತ್ಯ ಪ್ರಸಾರ ಮತ್ತು ಪ್ರಕಟಣೆ

# ಅಧ್ಯಾಯ - ಎಂಟು

# ೮. ಮಠಗಳು-ಸಾಹಿತ್ಯಕವಾಗಿ

ಯಾವುದೇ ಒಂದು ಜನಾಂಗದ ಸುಸಂಸ್ಕೃತ ಬದುಕಿನ ಬಗೆಗೆ ಒಂದು ಸ್ಪಷ್ಟವಾದ ಚಿತ್ರಣವನ್ನು ನೀಡುವಂತಹುದು ಸಾಹಿತ್ಯ. ಇದು ಮಾನವ ಬದುಕಿಗೆ ಸಂಬಂಧಪಟ್ಟ ಭಾವನೆಗಳು, ಅನುಭವಗಳು ಹಾಗೂ ಆಶೋತ್ತರಗಳನ್ನು ಮುಂದಿನ ತಲೆಮಾರುಗಳಿಗೆ ಕೊಂಡೊಯ್ಯುವಂತಹುದು. ಮೇಲಾಗಿ ಅದಮ್ಯವಾದ ಕುತೂಹಲಗಳನ್ನು ವಿಚಾರವಂತರ ಮನಸ್ಸಿನಲ್ಲಿ ಬಿತ್ತಿಬೆಳೆಯುವಂತಹುದು. ಹೀಗಾಗಿ ಸಾಹಿತ್ಯ ಭಾವಪ್ರಧಾನವಾಗುಳ್ಳ ಹೃದಯ ಸಂವೇದನೆಗೆ ಸಂಬಂಧಪಟ್ಟದ್ದು. ನಿಶ್ಚಿತವಾದ ವಿಷಯವನ್ನಾಧರಿಸಿ ವೈಜ್ಞಾನಿಕವೂ, ಶಾಸ್ತ್ರೀಯವೂ ಆದ ಬರವಣಿಗೆಯನ್ನು ಒಳಗೊಂಡಿದ್ದು, ಉಪಯುಕ್ತ ಮಾಹಿತಿಗಳನ್ನು ಅನುಗ್ರಹಿಸುವಂಥದ್ದು.[1]

ಕನ್ನಡ ಸಾಹಿತ್ಯ ಪ್ರವಾಹವು ಕಳೆದ ಒಂದು ಸಾವಿರ ವರ್ಷಗಳಷ್ಟು ಹಿಂದಿನಿಂದಲೂ ನಾನಾ ಮುಖವಾಗಿ ಹರಿದು ಬಂದಿದೆ. ಇಲ್ಲಿ ಪರಂಪರಾನುಗತವಾಗಿ ಜೈನ, ವೈಷ್ಣವ ಹಾಗೂ ವೀರಶೈವ ಕವಿಗಳು ತಮ್ಮದೇ ಆದ ವಿಶಿಷ್ಟ ಸಾಹಿತ್ಯಕ ಕೊಡುಗೆಯನ್ನು ನೀಡಿರುವುದು ಎದ್ದು ಕಾಣುವ ಸಂಗತಿಯಾಗಿದೆ. ಅದರಲ್ಲೂ ವೀರಶೈವ ಕವಿಗಳ ಪಾಲು ಅದ್ವಿತೀಯವಾದದ್ದು.[2] ಈ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಾಡಿನ ವೀರಶೈವ ಮಠಗಳ ಕೊಡುಗೆ ಅಪಾರವಾದುದು. ಏಕೆಂದರೆ ಪರಂಪರೆಯಿಂದ ನಡೆದು ಬಂದಿದ್ದ ರಾಜಾಶ್ರಯವನ್ನು ಧಿಕ್ಕರಿಸಿ ನಿಂತ ವೀರಶೈವ ಕವಿಗಳಿಗೆ ಹಾಗೂ ವೀರಶೈವ ಸಾಹಿತ್ಯಕ್ಕೆ ಬೆಂಬಲವಾಗಿದ್ದ ಸಂಸ್ಥೆಗಳೇ ವೀರಶೈವ ಮಠಗಳು.[3] ಪ್ರಾಚೀನ ಕಾಲದಿಂದಲೂ ಈ ಮಠಗಳು ಶಿಕ್ಷಣಕ್ಕೆ ಎಷ್ಟೊಂದು ಮಹತ್ವವನ್ನು ನೀಡಿದ್ದವೋ ಅಷ್ಟೇ ಮಹತ್ವವನ್ನು ವೀರಶೈವ ಸಾಹಿತ್ಯ ರಚನೆ, ಅಧ್ಯಯನ ಹಾಗೂ ಅಧ್ಯಾಪನೆಗಳಿಗೂ ಮೀಸಲಾಗಿ ಇರಿಸುತ್ತಿದ್ದುದು ಕಂಡುಬರುತ್ತದೆ.

ಕರ್ನಾಟಕದಲ್ಲಿರುವ ಅನೇಕ ಮಠಗಳ ಪರಿಚಯವನ್ನು ಅವುಗಳ ಪೀಠ ಪರಂಪರೆ ಹಾಗೂ ಮಠಾಧೀಶರ ಸಾಧನೆಗಳನ್ನು ಕುರಿತು ಮೊದಲು ಪರಿಚಯ ಮಾಡಿಕೊಟ್ಟ ಕೀರ್ತಿ ವೀರಶೈವ ಪುರಾಣಕಾರರಿಗೆ ಸಲ್ಲತಕ್ಕದ್ದು. ವೀರಶೈವ ಧರ್ಮ ಸಂವರ್ಧನೆಯ ಕಾರ್ಯದಲ್ಲಿ ಮಠಗಳ ಪಾತ್ರ ಹಿರಿದು. ಕಲ್ಯಾಣದ ಕ್ರಾಂತಿಯ ನಂತರ ನಿಷ್ಕ್ರಿಯಗೊಂಡ ವೀರಶೈವ ಸಾಹಿತ್ಯಕ ಚಟುವಟಿಕೆಗಳು ಮತ್ತೆ ಪುನಶ್ಚೇತನಗೊಂಡಿದ್ದು ವಿಜಯನಗರದ ಪ್ರೌಢದೇವರಾಯನ ಕಾಲ (ಕ್ರಿ.ಶ. ೧೪೨೯-೪೬)ಕ್ಕೆ. ಆಗ ನಾಡಿನ ಮೂಲೆ ಮೂಲೆಗಳಲ್ಲೂ ಅಪಾರ ಸಂಖ್ಯೆಯ ವೀರಶೈವಮಠಗಳು ಉದಯವಾದವು. ಅಲ್ಲಿ ವೀರಶೈವ ಧರ್ಮದ ಪ್ರಚಾರ ಹಾಗೂ ಪ್ರಸಾರ ಕಾರ್ಯಗಳು ಸುವ್ಯವಸ್ಥಿತವಾಗಿ ನಡೆಯಬೇಕೆಂಬ ಮೂಲೋದ್ದೇಶಕ್ಕಾಗಿ ಅಸಂಖ್ಯಾತ ಯತಿಗಳ ಪಡೆಯೇ ಸಿದ್ಧವಾಗಿತ್ತು. ತತ್ಫಲವಾಗಿ ಪ್ರಾರಂಭವಾಗಿದ್ದ ಅಂದಿನ ಅನೇಕ ಗುರು-ವಿರಕ್ತ ಮಠಗಳು ವೀರಶೈವ ಧರ್ಮ ಹಾಗೂ ಸಾಹಿತ್ಯ ಸಂವರ್ಧನೆಗಾಗಿ ಅಪರಿಮಿತ ಸೇವೆ ಸಲ್ಲಿಸುವಂತಾಯಿತು.[4]

ಮುಂದೆ ತೋಂಟದ ಸಿದ್ಧಲಿಂಗ ಯತಿಗಳ ಕಾಲ (ಕ್ರಿ.ಶ. ೧೫೩೦)ದಲ್ಲೂ ಅವರ ಅಸಂಖ್ಯಾತ ಶಿಷ್ಯಗಣದವರಿಂದ ವೀರಶೈವ ಧರ್ಮ-ಸಾಹಿತ್ಯ ಸಂವರ್ಧನೆಗಾಗಿ ವ್ಯವಸ್ಥಿತವಾದ ಯೋಜನೆಗಳೇ ರೂಪುಗೊಂಡಿದ್ದವು. ಅಂದಿನ ವೀರಶೈವ ಮಠಾಧೀಶರಲ್ಲಿ ಅನೇಕ ಮಂದಿ ವೀರಶೈವ ಸೃಜನ, ಟೀಕೆ, ಸಂಪಾದನೆ ಇವೇ ಮೊದಲಾದ ಕ್ಷೇತ್ರಗಳಲ್ಲಿ ಮೌಲಿಕವಾದ ಕಾಣಿಕೆಯನ್ನು

ಸಲ್ಲಿಸಿದ್ದಾರೆ. ತೋಂಟದ ಸಿದ್ಧಲಿಂಗೇಶ್ವರರು ಹಾಗೂ ಷಣ್ಮುಖ ಶಿವಯೋಗಿಗಳು ಆ ಕಾಲದ ಶ್ರೇಷ್ಠ ವಚನಕಾರರಾಗಿದ್ದರು. 'ಶೂನ್ಯ ಸಂಪಾದನೆ'ಯಂತಹ ವೈಶಿಷ್ಟ್ಯಪೂರ್ಣ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ ಶಿವಗಣ ಪ್ರಸಾದಿ ಮಹಾದೇವಯ್ಯ (ಸು. ಕ್ರಿ.ಶ. ೧೪೦೦), ಹಲಗೆಯ ದೇವ (ಸು. ಕ್ರಿ.ಶ. ೧೫೦೦), ಗುಮ್ಮಳಾಪುರದ ಸಿದ್ಧಲಿಂಗಯತಿ (ಕ್ರಿ.ಶ. ೧೫೮೩) ಹಾಗೂ ಗೂಳೂರು ಸಿದ್ಧವೀರಣ್ಣೊಡೆಯ (ಕ್ರಿ.ಶ. ೧೫೯೦) ಇವರೆಲ್ಲರೂ ವೀರಶೈವ ಮಠಾಧಿಪತಿಗಳೇ ಆಗಿದ್ದುದು ಹೆಮ್ಮೆಯ ವಿಚಾರಗಳಾಗಿವೆ. ಇದೇ ರೀತಿ ಕಲ್ಲುಮಠದ ಪ್ರಭುದೇವ, ಸ್ವತಂತ್ರ ಸಿದ್ಧಲಿಂಗ, ಘನಮಠಾರ್ಯ, ನಿಜಗುಣ ಶಿವಯೋಗಿ ಇವರೇ ಮೊದಲಾದ ನೂರಾರು ಹೆಸರುಗಳು ಈ ಸಾಲಿನಲ್ಲಿ ಬರುತ್ತವೆ.

ಇಂತಹುದೇ ಪರಂಪರೆಯನ್ನು ಅನುಸರಿಸಿ[5] ಬಂದಿದ್ದ ಬೆಂಗಳೂರಿನ ವೀರಶೈವ ಮಠಾಧಿಪತಿಗಳಲ್ಲಿ ಪ್ರಮುಖವಾಗಿ ಸರ್ಪಭೂಷಣ ಶಿವಯೋಗಿಗಳು, ಮಹಾಂತದೇಶಿಕರು, ನಂಜುಂಡಸ್ವಾಮಿಗಳು ಇವರೇ ಮೊದಲಾದವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಈ ನಿಟ್ಟಿನಲ್ಲಿ ಬೆಂಗಳೂರಿನ ವೀರಶೈವ ಮಠಗಳ ವತಿಯಿಂದ ನಡೆದಿರಬಹುದಾದ ಸಾಹಿತ್ಯಕ ಚಟುವಟಿಕೆಗಳನ್ನು ಕುರಿತು ಮುಂದೆ ಪರಿಶೀಲಿಸಲಾಗಿದೆ.

### ೮.೧. ಸರ್ಪಭೂಷಣ ಶಿವಯೋಗಿಗಳ ಕೃತಿಗಳು (೧೭೯೫-೧೮೩೯)

ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಬೆಂಗಳೂರು ಪ್ರಾಂತ್ಯದ 'ಶಿವಜ್ಞಾನಿ'ಗಳೆಂದೇ ಪ್ರಸಿದ್ಧರಾಗಿದ್ದ ಸರ್ಪಭೂಷಣಮಠದ ಸರ್ಪಭೂಷಣ ಶಿವಯೋಗಿ[6] (ಸಪ್ಪಣ್ಣಸ್ವಾಮಿ[7]) ಗಳು ಆಧ್ಯಾತ್ಮ ಕ್ಷೇತ್ರದಲ್ಲಿ ಗಳಿಸಿದ್ದ ಸಾಧನೆ ಅವಿಸ್ಮರಣೀಯವಾದದ್ದು. ದಾರ್ಶನಿಕ ಜಗತ್ತಿನ 'ಕೈವಲ್ಯ'[8]ಕಾರರ ಸಾಲಿನಲ್ಲಿ ನಿಜಗುಣಶಿವಯೋಗಿಗಳ ನಂತರ ಗುರುತಿಸಲ್ಪಡುವ[9] ಇವರು ಉಭಯ ಭಾಷಾ (ಕನ್ನಡ-ಸಂಸ್ಕೃತ) ಪರಿಣಿತರೂ ಕವಿತಾಚತುರರೂ ಹಾಗೂ ಶ್ರೇಷ್ಠ ವಾಗ್ಗೇಯಕಾರರೂ[10] ಆಗಿದ್ದು; ಕನ್ನಡದಲ್ಲಿ 'ಕೈವಲ್ಯಕಲ್ಪವಲ್ಲರಿ' ಎಂಬ ದೇಸೀಯ ಹಾಡುಗಬ್ಬವನ್ನೂ ಹಾಗೂ ಸಂಸ್ಕೃತದಲ್ಲಿ ವಿವಿಧ ಛಂದೋಪ್ರಕಾರಗಳಿಂದ ಒಡಗೂಡಿದ 'ಜ್ಞಾನಶತಕಂ' ಎಂಬ ಸಿದ್ಧಾಂತ ಗ್ರಂಥವನ್ನೂ ಮತ್ತು 'ಭುಜಂಗಮಾಲಾ ಶಿವಸಂಕೀರ್ತನಮ್' ಎಂಬ ಸ್ತೋತ್ರ ಕಾವ್ಯವನ್ನೂ ರಚಿಸಿದ್ದಾರೆ.

### ೧.೧. ಕೈವಲ್ಯಕಲ್ಪವಲ್ಲರಿ

ಸರ್ಪಭೂಷಣರ 'ಕೈವಲ್ಯಕಲ್ಪವಲ್ಲರಿ'ಯನ್ನು 'ಸ್ವರವಚನಗಳ ಗುಚ್ಛ'ವೆಂದೇ ಕರೆಯಲಾಗುತ್ತದೆ.[11] ೧೮೮೭ರಲ್ಲಿ ಪ್ರಕಟವಾಗಿರುವ (ಮೂರನೇ ಮುದ್ರಣ) ಕೈವಲ್ಯಕಲ್ಪವಲ್ಲರಿಯ ಮುಖಪುಟದಲ್ಲಿ "ಕೈವಲ್ಯ ಕಲ್ಪವಲ್ಲರೀ ವಚನಂಗಳು" ಎಂದೇ ನಮೂದಾಗಿದೆ. ಈ ಕೃತಿಯು ನಿಜಗುಣಶಿವಯೋಗಿಗಳ 'ಕೈವಲ್ಯಪದ್ಧತಿ'ಯನ್ನು ಅನುಸರಿಸಿ ರಚಿತವಾಗಿರುವ 'ತತ್ವಪದ[12]'ಗಳ ಸಂಗ್ರಹವಾಗಿದೆ. ಇದರಲ್ಲಿ ಒಟ್ಟು ೧೭೭ ಪದ್ಯಗಳಿದ್ದು, ಇವು ಶಿವಕಾರುಣ್ಯ ಪ್ರಾರ್ಥನಾಸ್ಥಲ, ಜೀವ ಸಂಬೋಧನ ಸ್ಥಲ, ನೀತಿ ಕ್ರಿಯಾಚರ್ಯಸ್ಥಲ, ಯೋಗ ಪ್ರತಿಪಾದನ ಸ್ಥಲ ಹಾಗೂ ಜ್ಞಾನ ಪ್ರತಿಪಾದನಸ್ಥಲ ಎಂಬುದಾಗಿ ಐದು ಸ್ಥಲಗಳಲ್ಲಿ ವರ್ಗೀಕೃತವಾಗಿದೆ.[13] ಇಲ್ಲಿನ ಪ್ರತಿಯೊಂದು ಪದ್ಯವೂ ಕೂಡ ವಿಭಿನ್ನ ಛಂದೋ ಪ್ರಕಾರಗಳಲ್ಲಿ ರಚಿತವಾಗಿದ್ದು, ಹಾಡುವ ಧಾಟಿಗೆ ಅನುಗುಣವಾಗಿ ವಿವಿಧ ಬಗೆಯ ರಾಗ-ತಾಳ ಹಾಗೂ ಲಯಬದ್ಧತೆಗೆ ಅನುಸರಿಸಿ ಕಟ್ಟಿದ ಸಂಗೀತಪ್ರಧಾನವಾದ ರಚನೆಗಳಾಗಿವೆ. ಸಾಮಾನ್ಯವಾಗಿ ಮೂರರಿಂದ ಒಂಬತ್ತು ಪದ್ಯಖಂಡಗಳನ್ನು ಒಳಗೊಂಡಿರುವ ಇಲ್ಲಿನ ಪದಗಳಿಗೆ ಪಲ್ಲವಿ ಕಡ್ಡಾಯವಾಗಿದೆ. ಪದ್ಯಖಂಡಗಳಲ್ಲಿ ನಾಲ್ಕರಿಂದ ಎಂಟು ಚರಣಗಳಿರುತ್ತವೆ. ಚೌಪದಿಗಳೇ ಪ್ರಧಾನವಾಗಿ ರುವ ಈ ಕೃತಿಯಲ್ಲಿ ಒಟ್ಟು ೨೬ ಷಟ್ಪದಿ ಪದ್ಯಗಳಿವೆ[14].

ಕೈವಲ್ಯ ಕಲ್ಪವಲ್ಲರಿಯಲ್ಲಿರುವ ೧೭೭ ಪದ್ಯಗಳಿಗೆ ೬೩ ವಿಭಿನ್ನ ರಾಗಗಳನ್ನು ಅಳವಡಿಸಲಾಗಿದೆ. ಅದರಲ್ಲಿ ೩೮ ರಾಗಗಳು ಒಂದಕ್ಕಿಂತ ಹೆಚ್ಚಿನ ಪದ್ಯಗಳಲ್ಲಿ ಬಳಕೆಯಾಗಿವೆ. ಶಂಕರಾಭರಣ, ಸಾಳಂಗ, ಕಾಂಬೋಧಿ ಹಾಗೂ ಕಲ್ಯಾಣಿ ಈ ರಾಗಗಳು ತಲಾ ಒಂಬತ್ತು ಪದ್ಯಗಳಲ್ಲಿ ಬಳಕೆಯಾಗಿದ್ದರೆ; ಅಠಾಣ, ಬೇಗಡೆ, ವಸಂತ, ಸಾವೇರಿ ಇವೇ ಮೊದಲಾದ ೨೫ ರಾಗಗಳು ಕೇವಲ ಒಂದೊಂದೇ ಪದ್ಯಗಳಲ್ಲಿ ಬಳಕೆಯಾಗಿವೆ. ಇಲ್ಲಿನ ಪ್ರತಿಯೊಂದು ಪದ್ಯದ ಅಂತ್ಯದಲ್ಲೂ "ಗುರುಸಿದ್ಧ" ಎಂಬ ಅಂಕಿತವೂ ತಪ್ಪದೆ ಬಳಕೆಯಾಗಿದೆ. ಜೊತೆಗೆ

ಪ್ರತಿಯೊಂದು ಸ್ಥಲದ ಅಂತ್ಯದಲ್ಲೂ "ಇತಿ ಶ್ರೀಮದವಿರಳಾನಂದ ಬಂಧುರ ಸಮಸ್ತ ತತ್ವ ತಾತ್ವಿಕ ರಹಸ್ಯೋಪದೇಶಕರಣ ಚಾತುರೀಧುರೀಣ ನಿರಾಭಾರಿ ಗುರುಕುಲ ಕೇತನಾಯಮಾನ ಗುರುಸಿದ್ಧಯತಿವರೇಣ್ಯ ಚರಣಾರವಿಂದ ಮಕರಂದ ಮತ್ತ ಮಧುಕರ ಸ್ವರೂಪ ಶ್ರೀ ಸರ್ಪಭೂಷಣ ಶಿವಯೋಗಿ ವಿರಚಿತಮಪ್ಪಕೈವಲ್ಯ ಕಲ್ಪವಲ್ಲರೀ ಎಂಬ ಆಧ್ಯಾತ್ಮ ಸುಖಬೋದ ಪ್ರಕರಣ..." ಎಂದು ಹೇಳಿರುವ ಗದ್ಯದ ನುಡಿಕಟ್ಟುಗಳಿವೆ.

ಕೃತಿಯ ಪ್ರಥಮಸ್ಥಲವಾದ ಶಿವಕಾರುಣ್ಯ ಪ್ರಾರ್ಥನಾ ಸ್ಥಲದಲ್ಲಿ ೨೬ ಪದ್ಯಗಳಿವೆ. ಪರಶಿವನನ್ನು ಸ್ತುತಿಸುವ ಪದ್ಯಗಳೇ ಪ್ರಧಾನವಾಗುಳ್ಳ ಇಲ್ಲಿ, ಶಿವಕೃಪೆಗೆ ಕಾರಣ ವಾದ ಗುರುಸ್ತುತಿಯೊಂದಿಗೆ ಮೊದಲಪದ್ಯ ಆರಂಭವಾಗಿದೆ.

"ಶ್ರೀ ಗುರುವರೇಣ್ಯ ಭವದಂಘ್ರಿ ಪಂಕೇರುಹ...
......ಸುಕೃತದ ಸರಣಿಗೆನ್ನನು ತಿರುಗಿಸಿದ
.....ವಿರತಿ ಸಂಪದವ ಕರುಣಿಸಿದ
...ಸದುಗತಿಯ ಅಪೇಕ್ಷೆಯನೆನ್ನ ಮನದಿ ಮೊಳೆಯಿಸಿದ
...ಸಂಶಯವ ಹರಿಸಿ ಸಹಜಾನುಭದಿರವ ನೊದವಿಸಿದ
...ಘನಮುಕ್ತಿಯೆಂದೆಂಬ ಭಾವೆಯೊಡವೆರಸಿ
ನಿಜಸುಖವಿತ್ತು
ಗುರುಸಿದ್ಧ ದೇವನೆನಿಸುವ ನಿರಾಭಾರಿ ಗುರುತಿಲಕ" [15]

ಎಂಬುದಾಗಿ ತಮ್ಮ ದೀಕ್ಷಾಗುರುವೂ ಶಿಕ್ಷಾ ಗುರುವೂ ಆಗಿದ್ದ ಗುರುಸಿದ್ಧಯತಿವರರನ್ನು ಭಕ್ತಿಪೂರ್ವಕವಾಗಿ ಸ್ಮರಣೆ ಮಾಡಿದ್ದಾರೆ. ಮುಂದೆ ವೀರಶೈವ ಸಂಪ್ರದಾಯಾನುಸಾರ ಬಸವಾದಿ ಪ್ರಮಥರ ಸ್ತುತಿಯನ್ನೂ ಮಾಡಲಾಗಿದೆ.[16] ಇಲ್ಲಿ ಬಸವ, ಚೆನ್ನಬಸವ, ಅಲ್ಲಮ ಪ್ರಭು, ಮಡಿವಾಳ ಮಾಚಿದೇವ ಇವರೇ ಮೊದಲಾದ ಶಿವಶರಣರ ಜೊತೆಗೆ; ಚಂಡೇಶ, ಬಳ್ಳೇಶ, ಮಲ್ಲಾರ್ಯ, ಪೆದ್ದಿದೇವ, ಸಿರಿಯಾಳ, ಹಲಾಯುಧ ಇವರೇ ಮೊದಲಾದ ಪುರಾತನರನ್ನೂ ಕೂಡ ಸ್ಮರಣೆ ಮಾಡಲಾಗಿದೆ. ಜೊತೆಗೆ ವೀರಶೈವವು 'ಶಕ್ತಿವಿಶಿಷ್ಟಾದ್ವೈತ[17]' ವಾದುದರಿಂದ ಶಕ್ತಿ ಸ್ವರೂಪಿಣಿಯಾದ ಪಾರ್ವತಿಯನ್ನು ಸ್ತುತಿಸುವ ಕೆಲವು ಪದ್ಯಗಳೂ [18] ಇಲ್ಲಿವೆ.

ದ್ವಿತೀಯ ಸ್ಥಲವಾದ ಜೀವಸಂಬೋಧನ ಸ್ಥಲದಲ್ಲಿ ೨೧ ಪದ್ಯಗಳಿವೆ. ಇಲ್ಲಿ ಸಂಸಾರವು ಮಿಥ್ಯೆ ಎಂದೂ, ಹೆಣ್ಣು-ಹೊನ್ನು-ಮಣ್ಣುಗಳು ನಿಸ್ಸಾರವೆಂದೂ ಈ ಶರೀರವು ನಶ್ವರವೆಂದೂ ವರ್ಣಿತವಾದ ಪದ್ಯಗಳಿವೆ. ಮಾನವರಲ್ಲಿ ಇರತಕ್ಕ ಅಭಾವ ವೈರಾಗ್ಯಕ್ಕಿಂತ ನಿಜವಾದ ವಿರಕ್ತಿಯು ಉಂಟಾಗುವುದರ ಕಡೆಗೇ ಇಲ್ಲಿ ಹೆಚ್ಚಿನ ಮಹತ್ವ ನೀಡಲಾಗಿದೆ. ಇದೇ ಸ್ಥಲದಲ್ಲಿ ಹೆಣ್ಣನ್ನು ಕೇವಲವಾಗಿ ಪರಿಗಣಿಸಿರುವ, "ಹೆಣ್ಣಿಗಿಚ್ಛೈಸುವರೇ ಮೂಢಾ..[19]" ಹಾಗೂ "ಧರೆಯೊಳೀ ಹೆಣ್ಣು ರಾಕ್ಷಸಿಯಲ್ಲದಿನ್ನುಂಟೆ!...[20]" ಎಂಬ ಇವೆರಡೂ ಪದ್ಯಗಳೂ ವಿದ್ವತ್ ವಲಯದಲ್ಲಿ ಸಾಕಷ್ಟು ಚರ್ಚೆಗೆ ಗುರಿಯಾಗಿವೆ.[21]

ತೃತೀಯ ಸ್ಥಲವಾದ ನೀತಿ ಕ್ರಿಯಾಚರ್ಯ ಸ್ಥಲದಲ್ಲಿ ೨೫ ಪದ್ಯಗಳಿವೆ. ಇಲ್ಲಿ 'ಮುಮುಕ್ಷು'[22] ವಾದವನಿಗೆ ಇರಬೇಕಾದ 'ತ್ರಿಕರಣ'[23] ಶುದ್ಧಿ, ಸಂಸಾರ ನಿರಸನ, ಸನ್ಮಾರ್ಗ ಪ್ರವರ್ತನೆಗಳಿಗೆ ಅಗತ್ಯವಾದ ನಡೆನುಡಿ ಇವೇ ಮೊದಲಾದವುಗಳನ್ನು ಕುರಿತು ಪ್ರತಿಪಾದನೆಗಳಿವೆ. ಮೋಕ್ಷಾಪೇಕ್ಷಿಯಾದವನಿಗೆ ಈ ಸಾಂಸಾರಿಕ ಸುಖ-ದುಃಖಗಳೆಲ್ಲಾ ಒಂದೇ ತೆರನಾದವು. ಧರ್ಮಕರ್ಮಗಳೂ ಕೂಡ ಹೇಗೆ ಅವನ ಸಾಧನೆಗೆ ನಿಜಸ್ವರೂಪವನ್ನು ತಂದುಕೊಡುತ್ತವೆಂಬ ಅರಿವನ್ನು ಈ ಸ್ಥಲದ ಪದ್ಯಗಳಲ್ಲಿ ತುಂಬಿಕೊಡಲಾಗಿದೆ.

ಚತುರ್ಥ ಸ್ಥಲವಾದ ಯೋಗ ಪ್ರತಿಪಾದನ ಸ್ಥಲದಲ್ಲಿ ೨೯ ಪದ್ಯಗಳಿವೆ. ಇಲ್ಲಿ ಯೋಗದ ರಹಸ್ಯ ಹಾಗೂ ಅವುಗಳ ಪ್ರಭೇದಗಳಾದ ಮಂತ್ರಯೋಗ, ಹಠಯೋಗ, ಲಯಯೋಗ ಮತ್ತು ರಾಜಯೋಗ[24]ಗಳ ವೈಲಕ್ಷಣ್ಯ ಗಳನ್ನು ಹೇಳಿ ಅಂತಿಮವಾಗಿ ಶಿವಯೋಗದ ದರ್ಶನವನ್ನೂ ಕುರಿತು ವಿವರಿಸಲಾಗಿದೆ. ವೀರಶೈವದಲ್ಲಿ ಇಷ್ಟ,ಪ್ರಾಣ, ಭಾವಲಿಂಗಗಳ ಮೂಲಕವಾಗಿ ಸಾಧಿಸುವ ಕ್ರಮಗಳನ್ನು ವಿವರಿಸುತ್ತಾ; ಇಷ್ಟಲಿಂಗದ ಮುಖಾಂತರವಾಗಿಯೇ ಧ್ಯಾನಧಾರಣವನ್ನು ಸಾಧಿಸಿ ಸಮಾಧಿಗತರಾಗುವುದು ಸುಲಭಸಾಧ್ಯವೆಂಬುದನ್ನು ಇಲ್ಲಿ ಸಾಬೀತು ಪಡಿಸಲಾಗಿದೆ.

ಕೊನೆಯದಾಗಿ ಪಂಚಮಸ್ಥಲವಾದ ಜ್ಞಾನಪ್ರತಿ ಪಾದನಸ್ಥಲದಲ್ಲಿ ೭೬ ಪದ್ಯಗಳಿದ್ದು ಇವು 'ವೇದಾಂತ'[25] ವಿಚಾರಗಳಿಗೆ ಕೇಂದ್ರೀಕೃತವಾಗಿವೆ. ಇಲ್ಲಿ ನಿಜವಾದ ಜ್ಞಾನವೇ ವೇದಾಂತಜ್ಞಾನವೆಂದೂ ಅಂತಹ ಜ್ಞಾನಸಂಪಾದನೆಗೂ ಅರ್ಹತೆಗಳು ಇರಬೇಕೆಂಬ ಸೂಚನೆಗಳಿವೆ. ವೇದಾಂತ ಕ್ಷೇತ್ರದ ಪಾರಿಭಾಷಿಕ

ಶಬ್ದಗಳೆನಿಸಿದ ಅದ್ವೈತ, ಮಾಯೆ, ಬ್ರಹ್ಮಮುಕ್ತಿ, ಕರ್ಮ, ಜ್ಞಾನ ಇವೇ ಮೊದಲಾದ ಪದಗಳಿಗೆ ಸಹಜವಾದ ಅರ್ಥಗಳನ್ನು ಇಲ್ಲಿನ ಪದ್ಯಗಳಲ್ಲಿ ವಿಸ್ತರಿಸಲಾಗಿದೆ. ಅಸಾಧಾರಣ ಜ್ಞಾನ ಸಂಪನ್ನನಾದ ಶಿವಯೋಗಿ ಯಾದವನಿಗೆ, ಸಂಸಾರದೊಳಗಿದ್ದೂ ಮೋಹವಾವರಿಸದ ರೀತಿಯ ಅನುಭಾವ ಸಂಪತ್ತಿಯನ್ನು ಇಲ್ಲಿ ಸರಳವಾಗಿ ವಿವರಿಸಲಾಗಿದೆ.

ಈ ಗ್ರಂಥದಲ್ಲಿ ಬಹಳಷ್ಟು ಪದ್ಯಗಳು ಭಕ್ತಜನರ ಭಕ್ತಿಗೌರವಾದರಗಳಿಗೆ ಪಾತ್ರವಾಗಿದ್ದು ನಾಡಿನಾದ್ಯಂತ ಸಾಕಷ್ಟು ಜನಜನಿತವಾಗಿವೆ. ''ಬಿಡುಬಾಹ್ಯದೊಳು ಡಂಬವ...[26]''; ''ಕಾಯಕಾಂತಾರವ ಹೊಕ್ಕು.[27]''....; ''ತನುವೆಂಬ ಗರಡಿಯೊಳ್...[28]''; ''ತೇರುಸಾಗಿತಮ್ಮ ನೋಡಿರೆ...[29]''; ''ಅನುಭಾವದಡುಗೆಯ ಮಾಡಿ...[30]'' ಇವೇ ಮೊದಲಾದ ಪದ್ಯಗಳು ಭಾವುಕ ಜನರ ಹೃನ್ಮನಗಳನ್ನು ಗೆದ್ದು ಬಾಯಿಪಾಠಗಳಾಗಿಬಿಟ್ಟಿವೆ.[31] ಶಿವಭಕ್ತರಾದವರು ಸಾಮಾನ್ಯವಾಗಿ ಶಿವಪೂಜಾಕಾಲದಲ್ಲಿ ಹಾಡಿಕೊಳ್ಳುವ ''ಲಿಂಗಪೂಜೆಯ ಮಾಡಿರೊ ನಿಮ್ಮೊಳು ಪ್ರಾಣಲಿಂಗಪೂಜೆಯ ಮಾಡಿರೋ....[32]'', ಎಂಬ ಈ ಪದ್ಯವಂತೂ ಪ್ರತಿಯೊಬ್ಬ ವೀರಶೈವನ ಅಂತರಂಗದ ಅನುಭವವಾಣಿಯೋ ಎಂಬಷ್ಟರಮಟ್ಟಿಗೆ ಚಿರಪರಿಚಿತ ವಾಗಿಬಿಟ್ಟಿದೆ.

ಹೀಗೆ ಸಂಗೀತ-ಸಾಹಿತ್ಯಗಳೆರಡರಲ್ಲೂ ನಿಷ್ಣಾತರಾಗಿದ್ದ ಸರ್ಪಭೂಷಣರ, 'ಕೈವಲ್ಯಕಲ್ಪವಲ್ಲರಿ' ಗ್ರಂಥದಲ್ಲಿ, ವೀರಶೈವ ದರ್ಶನದಲ್ಲಿ ಭಕ್ತಿ, ಕರ್ಮ, ಜ್ಞಾನಗಳಿಗೆ ಎಡೆಯುಂಟೆಂದು ಸಾಬೀತಾಗುತ್ತದೆ. ಮೇಲಾಗಿ ಶಿವಾನುಭವಕ್ಕೆ ಲಿಂಗಾನುಸಂಧಾನದಿಂದ ಸಾಧಿಸಬಹುದಾದ ಶಿವಯೋಗವೇ ಪರಮ ಧ್ಯೇಯವೆಂದು ತಿಳಿದುಬರುತ್ತದೆ. ಇಷ್ಟಾದಾಗ್ಯೂ ಸಂಗೀತಾತ್ಮಕವಾಗಿ ರಚಿತವಾದ ಧಾರ್ಮಿಕ ಸಾಹಿತ್ಯ ಕೃತಿ ಇದಾದರೂ, ಇದರೊಳಗಿರಬೇಕಾದ ಮೇಲ್ಮಟ್ಟದ ಸಾಹಿತ್ಯಕ ಲಕ್ಷಣಗಳಿಗೆ ಯಾವ ಚ್ಯುತಿಯೂ ಬಂದಿಲ್ಲವೆಂಬುದು ವಿದ್ವತ್ ವಲಯದ ಒಟ್ಟಾರೆ ಅಭಿಪ್ರಾಯವಾಗಿದೆ.[33] ಈ ನಿಟ್ಟಿನಲ್ಲಿ ರಂ.ಶ್ರೀ. ಮುಗಳಿಯವರು ''ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿಗಳ ತರುವಾಯ ಸರ್ಪಭೂಷಣರು ಅದೇ ಬಗೆಯ ಉದಾತ್ತ ಮನೋಧರ್ಮ ಮತ್ತು ಅನುಭಾವವುಳ್ಳ ಹಾಡುಗಾರರಾಗಿದ್ದರು.... ಮುಂದೆ ಈ ತಾತ್ವಿಕ ಮನೋಧರ್ಮ ಮತ್ತು ಭಕ್ತಿಗೀತೆಗಳ ಪರಂಪರೆಯನ್ನು ಘನಮಠಾರ್ಯ, ಬಾಲಲೀಲಾ ಮಹಾಂತಶಿವಯೋಗಿ, ಮೈಲಾರ ಬಸವಲಿಂಗ ಇವರೇ ಮುಂತಾದವರು ಮುನ್ನಡೆಸಿಕೊಂಡು ಬಂದುದಾಗಿ'' ಗುರುತಿಸಿರುವುದು ಯಥಾರ್ಥವಾಗಿದೆ.[34]

ಕೈವಲ್ಯಕಲ್ಪವಲ್ಲರಿಯ ಪ್ರಥಮ ಮುದ್ರಿತ ಆವೃತ್ತಿಯು ೧೮೭೮ರ ವೇಳೆಗಾಗಲೇ ಪ್ರಕಟವಾಗಿತ್ತು.[35] ಮುಂದೆ ೧೮೮೨ರ ವೇಳೆಗೆ ಈ ಕೃತಿಯು ಮೂರನೇ ಮುದ್ರಣವನ್ನು ಕಂಡಿದ್ದು, ಆಗ ೨೦೦೦ ಪ್ರತಿಗಳನ್ನು ಅಚ್ಚು ಹಾಕಿಸಲಾಗಿತ್ತು.[36] ತೀರಾ ಇತ್ತೀಚಿನ ಪರಿಷ್ಕೃತ ಆವೃತ್ತಿಯು ಎಸ್. ಶಿವಣ್ಣನವರ ಸಂಪಾದಕತ್ವದಲ್ಲಿ ೧೯೯೫ರಲ್ಲಿ ಶ್ರೀಸರ್ಪಭೂಷಣ ಶಿವಯೋಗೀಶ್ವರ ಮಠದ ಟ್ರಸ್ಟ್‌ನಿಂದ ಪ್ರಕಟವಾಗಿದೆ.[37] ಈ ಮಧ್ಯೆ ೧೯೨೧ರ ಹೊತ್ತಿಗೆ ಕೈವಲ್ಯ ಕಲ್ಪವಲ್ಲರಿಯ ಸಟೀಕಾ ತಾತ್ಪರ್ಯವನ್ನು ಒಳಗೊಂಡ ಕೃತಿಯು ಪ್ರಕಟವಾಗಿತ್ತು.[38]

### ೧.೨. ಜ್ಞಾನಶತಕಂ

ಸರ್ಪಭೂಷಣ ಶಿವಯೋಗಿಗಳವರ ಮತ್ತೊಂದು ಅಮೂಲ್ಯ ಕೃತಿ 'ಜ್ಞಾನಶತಕಂ.' ಇದೊಂದು ಸಂಸ್ಕೃತ ಸಾಹಿತ್ಯಕೃತಿಯಾಗಿದ್ದು ೧೨ ಅಧ್ಯಾಯಗಳನ್ನು ಒಳಗೊಂಡಿದೆ. ಇಲ್ಲೂ ಕೂಡ ವಿವಿಧ ಛಂದೋ ಪ್ರಕಾರಗಳಿಂದ ಒಡಗೂಡಿರುವ ೧೨೧ ಪದ್ಯಗಳಿವೆ. ಗ್ರಂಥದ ಆರಂಭ ಪದ್ಯದಲ್ಲೇ...

> ''ಗುರುಸಿದ್ಧ ಗುರುಮಿದಾನೀಂ॥
> ಕಲೆಯೇನಮುದುದಯ ವಿಂಧ್ಯ ಘುಟಯೋನಿಮ್॥
> ವೃತಕೃತ ಕರಣಗ್ರಾನಿಂ।
> ಚಳುಕಿತ ವೇದಾಂತ ನಿಮ್ನ ಗಾಜಾನಿಮ್''[39] ॥೧॥

ಎಂಬುದಾಗಿ ಶಿವಯೋಗಿಗಳು ತಮ್ಮ ಗುರುಗಳಾಗಿದ್ದ ಗುರುಸಿದ್ಧಯತಿವರರನ್ನು ಹೆಮ್ಮೆಯಿಂದ ಸ್ಮರಿಸಿದ್ದಾರೆ. ಈ ಗ್ರಂಥದ ಹನ್ನೆರಡು ಅಧ್ಯಾಯಗಳಲ್ಲಿ ಅನುಕ್ರಮವಾಗಿ ಅಧಿಕಾರಿನಿರ್ಣಯ, ಜಗದಧ್ಯಾರೋಪ-ಅಪವಾದ, ಜೀವೇಶ್ವರ ವಿಚಾರ, ಮಹಾವಾಕ್ಯ ವಿಚಾರ, ಮೋಕ್ಷ ಸಾಧನ ವಿಚಾರ, ಜ್ಞಾನೋಪಾಸನಾಸಮುಚ್ಚಯ ನಿರಾಕರಣ, ಆತ್ಮನು ಸ್ವತಃ ಪ್ರಮಾಣನು, ಸರ್ವವೂ ಬ್ರಹ್ಮಮಯ, ಜೀವಿಗಳಲ್ಲಿ ಜ್ಞಾನಿಯೇ ಶ್ರೇಷ್ಠ, ಜೀವನ್ಮುಕ್ತ ನಿಜಸ್ಥಿತಿಯ ವರ್ಣನೆ, ಜ್ಞಾನಿಯ ಪ್ರಾರಬ್ಧ

ವಿಚಾರ, ಜ್ಞಾನಿಯ ದೇಹತ್ಯಾಗದಲ್ಲಿ ವಿಧಿರಾಹಿತ್ಯ ಇವೆಲ್ಲಾ ವಿಚಾರಗಳನ್ನೂ ವಿಶದವಾಗಿ ಪ್ರತಿಪಾದಿಸಲಾಗಿದೆ.

'ಜ್ಞಾನಶತಕ'ವು ಪ್ರಸ್ಥಾನತ್ರಯ[40] (ಶ್ರುತಿ-ಸ್ಮೃತಿ-ನ್ಯಾಯ)ಗಳನ್ನು ಆಧರಿಸಿ ರಚಿತವಾದ ವಿಶಿಷ್ಟ ಗ್ರಂಥ. ಇಲ್ಲಿ ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮತ್ತು ದ್ವೈತ ಸಿದ್ಧಾಂತಗಳ ಪರಾಮರ್ಶೆ ನಡೆಸಲಾಗಿದೆ. ಅದರಲ್ಲೂ ''ಮುಕ್ತಿಗೆ ಜ್ಞಾನವೇ ಪ್ರಮುಖ ಸಾಧನವೆಂಬ ಅದ್ವೈತದ ನಿಲುವು ಇಲ್ಲಿ ಎದ್ದು ಕಾಣುವುದರಿಂದ ಇದಕ್ಕೆ 'ಜ್ಞಾನಶತಕ'ವೆಂಬ ಹೆಸರು ಅನ್ವರ್ಥವಾಗಿದೆ'', ಎಂಬುದಾಗಿ ಗ್ರಂಥ'ದ ಸಂಪಾದಕರಾದ ಎಂ.ಜಿ. ನಂಜುಂಡಾರಾಧ್ಯರು ಸೂಚಿಸಿದ್ದಾರೆ.[41] ಗ್ರಂಥ'ದ ಪ್ರಕಾಶಕರಾದ ಶಿವಕುಮಾರಸ್ವಾಮಿಗಳು-''ಜ್ಞಾನಶತಕಂ ಗ್ರಂಥವು ಶತಕಸಾಹಿತ್ಯದ ಮುಖ್ಯೋದ್ದೇಶಗಳಾದ ಭಕ್ತಿ-ಜ್ಞಾನ-ವೈರಾಗ್ಯ ಪ್ರಧಾನವಾಗುಳ್ಳ ಗ್ರಂಥ'ವಲ್ಲ. ಇದೊಂದು ವಿಶಿಷ್ಟ ಮಾದರಿಯ ವೈವಿಧ್ಯಮಯ ತತ್ತ್ವಗ್ರಂಥ. ಪ್ರಸ್ಥಾನತ್ರಯವೆಂದು ಕರೆಸಿಕೊಳ್ಳಲ್ಪಡುವ ಬ್ರಹ್ಮಸೂತ್ರ-ಗೀತೆ-ಉಪನಿಷತ್ತುಗಳ ಭಾಷ್ಯವಾಗದಿದ್ದರೂ ಇದು ಶಿವಯೋಗಿಗಳೇ ಸೂಚಿಸಿರುವಂತೆ ಪ್ರಸ್ಥಾನತ್ರಯ ಭಾಷ್ಯಗಳ ಸಮಗ್ರ ಸಾರವಾಗಿದ್ದು, ೧೨೧ ವಿವಿಧ ಜಾತಿಯ ಸಂಸ್ಕೃತ ವೃತ್ತಗಳಲ್ಲಿ ಅಡಗಿದೆ ಎಂಬುದು ಗಮನಿಸಬೇಕಾದ ಅಂಶ. ಕರಿಯನ್ನು ಕನ್ನಡಿಯಲ್ಲಿ ಅಡಗಿಸಿದಂತೆ ಶಿವಯೋಗಿಗಳು ಈ ಗ್ರಂಥ'ದಲ್ಲಿ ಪ್ರಸ್ಥಾನತ್ರಯಗಳ ಸಾರವನ್ನು ಕ್ರೋಢೀಕರಿಸಿದ್ದಾರೆಂಬುದು ಗ್ರಂಥಾಭ್ಯಾಸದಿಂದ ತಿಳಿದುಬರುವ ಸಾರಾಂಶವಾಗಿದೆ'' ಎಂದಿದ್ದಾರೆ.[42] ಒಟ್ಟಾರೆ ಈ ಕೃತಿಯನ್ನು ಕುರಿತು ವಿ.ಎಸ್. ರಾಮಚಂದ್ರಶಾಸ್ತ್ರಿಯವರು- ''ಮಹಾತ್ಮರಾದವರು ತಾವು ಯಾವ ಸಂಪ್ರದಾಯಕ್ಕೆ ಸೇರಿದವರಾಗಿದ್ದರೂ ಕೇವಲ ಸಂಪ್ರದಾಯ ಶರಣರಾಗಿರದೆ ತಮ್ಮ ಶ್ರುತಿ-ಯುಕ್ತಿ-ಅನುಭಾವಗಳಿಂದ ಅವರ ಮನಸ್ಸು ಒಪ್ಪುವ ತತ್ತ್ವಗಳನ್ನು ಪ್ರತಿಪಾದಿಸುವುದು ಮಹಾತ್ಮರುಗಳ ಒಂದು ವಿಶೇಷ. ಇದೇ ರೀತಿ ಸರ್ಪಭೂಷಣ ಶಿವಯೋಗಿಗಳು ಸಂಪ್ರದಾಯತಃ ವೀರಶೈವಾನುಯಾಯಿಗಳಾಗಿದ್ದರೂ ಕೂಡ ನಿಜಗುಣ ಬ್ರಹ್ಮಾದ್ವೈತವನ್ನು ಆ ಸಂಪ್ರದಾಯಾನುವರ್ತಿಗಳಂತೆ ಈಷದಪಿ ಪ್ರಕ್ರಿಯಾ ವಿರೋಧವಿಲ್ಲದೆ ತಮ್ಮ ೧೨೧ ಶ್ಲೋಕಗಳಲ್ಲಿ ಅದನ್ನು ಪ್ರತಿಪಾದಿಸಿರುವುದು ಅವರಿಗೆ ಅದ್ವೈತದಲ್ಲಿದ್ದ ತಾತ್ಪರ್ಯವನ್ನು ಸೂಚಿಸುತ್ತದೆ,'' ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ.[43] ಈ ಹಿನ್ನೆಲೆಯಲ್ಲಿ ಜ್ಞಾನಶತಕವೂ ಕೂಡ ಸಂಸ್ಕೃತ ಸಾಹಿತ್ಯ ವಲಯದಲ್ಲಿ ಸರ್ಪಭೂಷರಿಗೆ ಒಳ್ಳೆಯ ಮಾನ್ಯತೆಯನ್ನು ತಂದುಕೊಟ್ಟಿತ್ತೆಂದು ಸುಲಭವಾಗಿ ಗ್ರಹಿಸಬಹುದಾಗಿದೆ. ಇದುವರೆಗೆ ಈ ಕೃತಿಯು ಕನ್ನಡದಲ್ಲಿ ಸಟೀಕಾ ತಾತ್ಪರ್ಯ ಹಾಗೂ ಅನುವಾದಗಳೊಂದಿಗೆ ಮೂರು ಪ್ರತ್ಯೇಕ ಆವೃತ್ತಿಗಳಲ್ಲಿ ಪ್ರಕಟವಾಗಿರುತ್ತದೆ.[44]

### ೧.೩. ಭುಜಂಗಮಾಲಾ ಶಿವಸಂಕೀರ್ತನಮ್

ಸರ್ಪಭೂಷಣ ಶಿವಯೋಗಿಗಳ ಮೂರನೆಯ ಕೃತಿಕುಸುಮವೇ 'ಭುಜಂಗಮಾಲಾಶಿವಸಂಕೀರ್ತನಮ್.' ಇದೊಂದು ಸಂಸ್ಕೃತ ಸ್ತೋತ್ರಕಾವ್ಯವಾಗಿದ್ದು ಇದರಲ್ಲಿ 'ಪಂಚಚಾಮರವೃತ್ತ'ದಲ್ಲಿ [45] ರಚಿತವಾದ ೩೧ ಪದ್ಯಗಳಿವೆ. ಈ ಕಿರುಕೃತಿಯನ್ನು ಮೊಟ್ಟಮೊದಲಿಗೆ ಸಂಪಾದಿಸಿಕೊಟ್ಟವರು ಎಂ.ಎಸ್. ಬಸವರಾಜಯ್ಯನವರು.[46] 'ಭುಜಂಗಮಾಲಾ ಶಿವಸಂಕೀರ್ತನಮ್' ಎಂಬ ಈ ಕೃತಿಯನ್ನು ಸರ್ಪಭೂಷಣರು ಇಷ್ಟಲಿಂಗಾನುಸಂಧಾನದ ಸಮಯದಲ್ಲಿ ಹಾಡಿಕೊಂಡಿದ್ದಿರಬೇಕು. ಅಲ್ಲದೆ ಇದು ಅವರ ಚೊಚ್ಚಲಕೃತಿಯೂ ಆಗಿದ್ದಿರಬೇಕು. ಇದೊಂದು ಶಿವಸ್ತೋತ್ರವಾಗಿದ್ದು ನಾದಲೋಲತೆಯಿಂದ ಕೂಡಿ ಭಕ್ತಿಯಿಂದ ಹಾಡಿಕೊಳ್ಳಲು ಅನುಕೂಲಕರವಾಗಿದೆ ಎನ್ನುವುದುಂಟು.[47] ಕೃತಿಯ ಸಂಪಾದಕರೇ ಸೂಚಿಸಿರುವಂತೆ-''ಇಲ್ಲಿ ಸರ್ಪಭೂಷಣ ಶಿವಯೋಗಿಗಳು ತಮ್ಮ ದಾರ್ಶನಿಕ ನಿಲುವನ್ನು ಪ್ರಸ್ಫುಟವಾಗಿ ಸೂತ್ರಪ್ರಾಯವಾಗಿ ಮಂಡಿಸಿ ಶಿವನ ಹೆಚ್ಚಳವನ್ನು ಸಾರಿ ಜಗತ್ತಿನ ಸರ್ವ ಜೀವರಾಶಿಗಳಿಗೂ ಎಚ್ಚರವಿತ್ತು 'ಶಿವ ಏಕೋಧ್ಯೆಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ' ಎಂಬಂತೆ ಪರಮ ಧ್ಯೇಯವನ್ನು ಸೂಚಿಸಿ ಆ ಮಹಾಧ್ಯೇಯಕ್ಕೆ 'ತಮ್ಮೀಶ್ವರಂ ಭಜಾಮ್ಯಹಮ್' ಎಂಬುದಾಗಿ ತಾವೂ ಮಣಿದು ಮಾರ್ಗದರ್ಶನ ನೀಡಿದ್ದಾರೆ.''[48]

ಈ ಮೂರು ಕೃತಿಗಳ ಜೊತೆಗೆ ಸರ್ಪಭೂಷಣರು ''ವೇದಾಂತ ಶಿಖಾರತ್ನಪ್ರಕಾಶಿಕೆ'' ಎಂಬ ಶೀರ್ಷಿಕೆಯಲ್ಲಿ ಕೆಲವು ಪ್ರತ್ಯೇಕ ವಚನಗಳನ್ನೂ ರಚಿಸಿದ್ದಾರೆಂದು

ಬಿ.ಶಿವಮೂರ್ತಿಶಾಸ್ತ್ರಿಗಳು ಗುರುತಿಸಿ, ಆರು ವಚನಗಳನ್ನು ಒಂದೆಡೆ ಸಂಗ್ರಹಿಸಿಕೊಟ್ಟಿದ್ದಾರೆ.[49] ಇವು ಅವರ ದೇಶಸಂಚಾರದ ಕಾಲದಲ್ಲಿ ಕೂಡಲಸಂಗಮ ಕ್ಷೇತ್ರದಲ್ಲಿದ್ದಾಗ ರಚಿಸಿದವಿದ್ದಿರಬೇಕು ಎಂಬುದಾಗಿ ಹೇಳಲಾಗುತ್ತದೆ. ಇನ್ನೊಂದು ಮುಖ್ಯ ವಿಚಾರವೇನೆಂದರೆ ೧೮೭೮ ರಿಂದ ೧೯೨೬ರ ವರೆಗೆ ಪ್ರಕಟವಾಗಿರುವ 'ಕೈವಲ್ಯಕಲ್ಪವಲ್ಲರಿ'ಯ ಎಲ್ಲಾ ಆವೃತ್ತಿಗಳಲ್ಲೂ 'ಮಹಿಮ್ನಾದಿ ಪಂಚಸ್ತವಗಳು' ಎಂಬ ಸಂಸ್ಕೃತದ ಐದು ಶಿವಸ್ತುತಿಗಳೂ ಸೇರಿಕೊಂಡಿವೆ. ಇವುಗಳ ಮುಖಪುಟದ ಮೇಲೆ ''... ಸಪ್ಪಣ್ಣಸ್ವಾಮಿಗಳಿಂದ ವಿರಚಿತಮಾದ ಕೈವಲ್ಯಕಲ್ಪವಲ್ಲರಿ ವಚನಂಗಳು ಮತ್ತು ಮಹಿಮ್ನಾದಿ ಪಂಚಸ್ತವಗಳೂ'' ಎಂದೇ ನಮೂದಿಸಲಾಗಿದೆ.[50] ಇವನ್ನು ಗಮನಿಸಿದಾಗ ಸರ್ಪಭೂಷಣರು 'ಮಹಿಮ್ನಾದಿ ಪಂಚಸ್ತವ'ಗಳನ್ನು ತಾವೇ ಸ್ವತಃ ಸಂಗ್ರಹಿಸಿಕೊಟ್ಟ ವಾಗಿದ್ದು, ಇದೇ ಕಾರಣಕ್ಕಾಗಿ ಅವುಗಳನ್ನು ಕೈವಲ್ಯಕಲ್ಪವಲ್ಲರಿಯ ಜೊತೆಗೆ ಪ್ರಕಟಿಸಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಈ ಪಂಚಸ್ತವಗಳಲ್ಲಿ ಮೊದಲನೆಯದು 'ಪುಷ್ಪದಂತವಿರಚಿತ ಮಹಿಮ್ನಃ ಸ್ತೋತ್ರಂ'. ಇದರಲ್ಲಿ ೪೦ ಶ್ಲೋಕಗಳಿವೆ. ಎರಡನೆಯದು 'ಮಲ್ಹಣ ವಿರಚಿತ ಮಹಾದೇವ ಸ್ತುತಿ'ಯಲ್ಲಿ ೪೫ ಶ್ಲೋಕಗಳಿವೆ. ಮೂರನೆಯ 'ಉಪಮನ್ಯು ಕೃತ ಶಿವಸ್ತುತಿ'ಯಲ್ಲಿ ೧೮ ಶ್ಲೋಕಗಳಿವೆ. ನಾಲ್ಕನೆಯ 'ಅಗಸ್ತ್ಯಕೃತ ಶಿವಸ್ತುತಿ'ಯಲ್ಲಿ ೧೨ ಶ್ಲೋಕಗಳಿದ್ದು, ಕೊನೆಯದಾದ 'ಶಿವಸ್ತುತಿ'ಯಲ್ಲಿ ಕೇವಲ ೮ ಶ್ಲೋಕಗಳಿವೆ. ಇವೆಲ್ಲವೂ ಶಿವಮಹಿಮೆಯನ್ನು ಕುರಿತು ಸ್ತುತಿಸುವ ಶ್ಲೋಕಗಳೇ ಆಗಿರುತ್ತವೆ.

**ಶಿಷ್ಯಪರಂಪರೆ**

ಸರ್ಪಭೂಷಣಶಿವಯೋಗಿಗಳು ಸ್ವಭಾವತಃ ಶಿವಜ್ಞಾನಿಗಳೂ, ಕವಿತಾಚತುರರೂ ಹಾಗೂ ಉಭಯ ಭಾಷಾ ಪ್ರವೀಣರೂ ಆಗಿದ್ದಂತೆ ಅನೇಕ ವಿದ್ವಾಂಸರು, ವಿರಕ್ತರುಗಳಿಗೆ ಕವಿಕುಲಗುರುಗಳೂ ಆಗಿದ್ದರು. ನಿಜಗುಣಶಿವಯೋಗಿಗಳ ಅನುಭವಸಾರಕ್ಕೆ ವ್ಯಾಖ್ಯಾನವನ್ನು ಬರೆದ (೧೮೭೮) ವೃಷಭಲಿಂಗ ಶಿವಯೋಗಿಯೂ;[51] ವಿರೂಪಾಕ್ಷಪಂಡಿತನ ಚೆನ್ನಬಸವಪುರಾಣದ ಹಸ್ತಪ್ರತಿ (೧೮೪೭)ಕಾರ ಸಾಲಿ ಮುರುಗಯ್ಯ;[52] ಷಡಕ್ಷರ ಕವಿಯ ಶಬರಶಂಕರವಿಲಾಸದ ಪ್ರತಿಪದ ಟೀಕಾಕಾರ (೧೯೧೪) ನೆರೆಗಲ್ಲು ಸೋಮಣ್ಣ;[53] ಗಯೆ ಚರಿತ್ರೆಯ ನಾಟಕದ ಕರ್ತೃ ಗುಬ್ಬಿಗುರುಸಿದ್ಧಪ್ಪ;[54] ಬೀಳಗಿಯ ಹಿರಿಯಮಠದ ಪಟ್ಟಾಧ್ಯಕ್ಷರಾದ ಕರವೀರಪ್ಪಸ್ವಾಮಿಗಳೂ[55] ಇವರೇ ಮೊದಲಾದವರು ಸರ್ಪಭೂಷಣರ ಶಿಷ್ಯರಾಗಿದ್ದುದಾಗಿ ತಿಳಿದುಬರುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಸರ್ಪಭೂಷಣ ಶಿವಯೋಗಿಗಳು ಶಿವಯೋಗಿಗಳ ಶಿವಯೋಗಿಗಳಾಗಿ, ವಾಗ್ಗೇಯ ಶ್ರುತಿ ಶಿರೋಮಣಿಗಳಾಗಿ, ಸಾಹಿತ್ಯ ವಿಶಾರದರಾಗಿ, ನಂಬಿದ ಭಕ್ತಜನ ಪರಿವಾರಕ್ಕೆ ಇಂಬಿತ್ತ ಮಹಾನ್ ದರ್ಶನಕಾರರಾಗಿ ಅವರ ಹೃನ್ಮನಗಳಲ್ಲಿ ಚಿರಸ್ಥಾಯಿಯಾಗಿ ನೆಲೆ ನಿಂತಿದ್ದಾರೆ. ಕನ್ನಡ-ಸಂಸ್ಕೃತ ಗಳೆರಡರಲ್ಲೂ ಕವಿವರೇಣ್ಯರೆನಿಸಿದ್ದ ಇವರು ನಡೆಸಿದ ಧಾರ್ಮಿಕ ಜಾಗೃತಿ ಇಂದಿಗೂ ಅನುಕರಣೀಯ. ಸಹಜ ವಾದ ವಿರಕ್ತಿ, ಅಗಾಧವಾದ ಜ್ಞಾನ, ಹುಟ್ಟಿನಿಂದಲೇ ಮೈವೆತ್ತು ಬಂದಿದ್ದ ವೈರಾಗ್ಯ ಹಾಗೂ ಬೆಳೆದಂತೆಲ್ಲಾ ಗಳಿಸುತ್ತಾ ಹೋದ ಅಪಾರ ಲೋಕಾನುಭವ ಇವೆಲ್ಲಾ ಸದ್ಗುಣಗಳೂ ಇವರಲ್ಲಿ ಮುಪ್ಪುರಿಗೊಂಡಿದ್ದವು. ಸಿದ್ಧಿಪುರುಷರಾಗಿ ತಾವು ಬೆಳೆದಂತೆಲ್ಲಾ ಸಮಾಜವನ್ನೂ ಉದ್ಧರಿಸಿದರು.[56] ಹೀಗೆ ನಾಡಿನ ಸಾಂಸ್ಕೃತಿಕ ಲೋಕದಲ್ಲಿ ಸರ್ಪಭೂಷಣ ಶಿವಯೋಗಿಗಳ ಹೆಸರು ಧ್ರುವತಾರೆಯಾಗಿ ಮಿನುಗುವಂತಾಗಿದೆ. ಅದೇ ರೀತಿ ಇತಿಹಾಸ ಪ್ರಸಿದ್ಧವಾದ ಬೆಂಗಳೂರಿಗೂ ಇವರಿಂದಾಗಿ ಕೀರ್ತಿ ಗೌರವಗಳು ಸಂದಂತಾಗಿವೆ.[57]

**೮.೨. ಮಹಾಂತದೇಶಿಕರ ಕೃತಿಗಳು ( ೧೮೭೪-೧೯೨೦ )**

ಇಂದಿನ ಬೆಂಗಳೂರು ಮಹಾನಗರದ ಗಾಂಧಿನಗರ (ಹಿಂದೆ ಹನುಮಂತಪುರವಾಗಿತ್ತು)ದಲ್ಲಿರುವ ತಿಪ್ಪಶೆಟ್ಟಿ ಮಠದ ಪೀಠಪರಂಪರೆಯ ಮೂರನೆಯ ಗುರುಗಳೇ ಮಹಾಂತದೇಶಿಕ (೧೮೭೪-೧೯೨೦)ರು. ಇವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಉದ್ದಾಮ ಪಂಡಿತರಾಗಿದ್ದು ಕನ್ನಡದಲ್ಲಿ ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿಕೊಟ್ಟಿದ್ದಾರೆ. ಕರ್ನಾಟಕ ಕವಿಚರಿತೆಯಲ್ಲಿ ಇವರನ್ನು ''ಈತನು ೧೯ನೆಯ ಶತಮಾನದ ಅಂತ್ಯಭಾಗದಲ್ಲಿದ್ದ ಪ್ರಮುಖ ವೀರಶೈವ ಕವಿಯು,

ಗುರುಸಿದ್ಧಸ್ವಾಮಿಯ ಕರಸಂಜಾತನಾಗಿದ್ದ ಈತನು ರಾಜೇಶ್ವರ ಶತಕ, ರೇಣುಕಾರ್ಯ ಸ್ತೋತ್ರ, ಸಿರಿಯಾಳ ಚರಿತ್ರೆ, ಸತ್ಯಹರಿಶ್ಚಂದ್ರ ಮಹಾರಾಯನ ಚರಿತ್ರೆ.... ಇವೇ ಮೊದಲಾದ ಕೃತಿಗಳನ್ನು ರಚಿಸಿರುವುದಾಗಿ,'' ಗುರುತಿಸಲಾಗಿದೆ.[58] ಮಹಾಂತ ದೇಶಿಕರ ಸಮಗ್ರ ಸಾಹಿತ್ಯ ಚಟುವಟಿಕೆಗಳನ್ನು ಕುರಿತು ಮೊಟ್ಟಮೊದಲಿಗೆ (೧೯೪೯ರಲ್ಲಿ) ಪರಿಚಯ (ಸಂಕ್ಷಿಪ್ತ) ಮಾಡಿಕೊಟ್ಟವರು ಕನಕಪುರದ ಬಿ. ನಂಜುಂಡಪ್ಪನವರು.[59] ಅವರ ಪ್ರಕಾರ ಮಹಾಂತದೇಶಿಕರು ಒಟ್ಟು ೨೭ ಸ್ವತಂತ್ರ ಕೃತಿಗಳನ್ನೂ ಹಾಗೂ ೯ ಸಂಪಾದಿತ ಕೃತಿಗಳನ್ನೂ[60] ರಚಿಸಿಕೊಟ್ಟು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಮಹಾಂತದೇಶಿಕರ ಸಾಹಿತ್ಯ ಸೇವೆಯು ೧೮೮೦ರ ವೇಳೆಗಾಗಲೇ ಪ್ರಾರಂಭವಾಗಿದ್ದುದಕ್ಕೆ ಸೂಚನೆಗಳಿವೆ.[61] ಪರಿಚಯದ ದೃಷ್ಟಿಯಿಂದ ಇವರ ಸ್ವತಂತ್ರ ಕೃತಿಗಳನ್ನು ಪ್ರಮುಖವಾಗಿ ಯಕ್ಷಗಾನ ಕೃತಿಗಳು ಹಾಗೂ ಇತರೆ ಕೃತಿಗಳು ಎಂಬುದಾಗಿಯೂ ಮತ್ತು ಇವರ ಸಂಪಾದಿತ ಕೃತಿಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸಿಕೊಳ್ಳಲಾಗಿದೆ.

### ೩.೧. ಯಕ್ಷಗಾನ ಕೃತಿಗಳು

ಶಿಷ್ಟ ಸಾಹಿತ್ಯದಿಂದ ಭಿನ್ನವಾದ ಯಕ್ಷಗಾನ ಪ್ರಕಾರವು ಜನಪದ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಕಾರವಾಗಿದೆ. ಸಾಮಾನ್ಯವಾಗಿ 'ಒಂದುಬಗೆಯ ಜಾನಪದ ನೃತ್ಯನಾಟಕವನ್ನು ಯಕ್ಷಗಾನವೆಂದು' ಕರೆಯುವುದುಂಟು.[62] ಇಲ್ಲಿ ವೇಷ-ಭೂಷಣಗಳು, ತಾಳಮದ್ದಳೆಗಳು ಹಾಗೂ ದೇಶೀಯವಾದ ಗಾಯನ ಪದ್ಧತಿಗಳು ಪ್ರಧಾನವಾದ ಪಾತ್ರವಹಿಸುತ್ತವೆ. ಗ್ರಾಮಾಂತರ ಭಾಗದ ಜನತೆ ತಮ್ಮ ದಿನನಿತ್ಯದ ಕೆಲಸಕಾರ್ಯಗಳ ಬಿಡುವಿನ ವೇಳೆಯಲ್ಲಿ ಕೆಲವು ಪುರಾಣಪ್ರಸಿದ್ಧವಾದ ಸನ್ನಿವೇಶಗಳನ್ನು ಆಧರಿಸಿ, ವಿಭಿನ್ನ ರಾಗಗಳಲ್ಲಿ ಸಂಯೋಜಿಸಿದ ಕಾವ್ಯಗಳನ್ನು ಕಟ್ಟಿ ಅವುಗಳನ್ನು ಅತ್ಯಂತ ಭಾವುಕತೆಯಿಂದ ಹಾಡುತ್ತಿದ್ದುದುಂಟು. ಇಲ್ಲಿ ದೈವಭಕ್ತಿ, ನೀತಿ ಹಾಗೂ ಕಲಾ ನೈಪುಣ್ಯತೆಗಳು ಪ್ರಧಾನವಾಗಿದ್ದು ಜನಸಾಮಾನ್ಯರ ಸಾಂಸ್ಕೃತಿಕ ಬದುಕಿಗೆ ಪ್ರೇರಣೆ ನೀಡಲಾಗುತ್ತಿತ್ತು. ಹೀಗೆ ಸಾಮಾನ್ಯ ಜನರ ಮನಸ್ಸನ್ನು ಹಿಗ್ಗಿಸಬಲ್ಲ ಕನ್ನಡ ಛಂದೋನೈಪುಣ್ಯವುಳ್ಳ ಇಂತಹ ಯಕ್ಷಗಾನ ಕೃತಿಗಳನ್ನು 'ಪಾಮರರ ಚಂಪೂ' ಕೃತಿಗಳೆಂದೇ ಕರೆಯಲಾಗುತ್ತಿತ್ತು.[63]

ಮಹಾಂತದೇಶಿಕರ ಯಕ್ಷಗಾನ ಶೈಲಿಯ ಕೃತಿಗಳಲ್ಲೂ ಇಂಥವೇ ಲಕ್ಷಣಗಳನ್ನು ಗುರುತಿಸಬಹುದಾಗಿದೆ. ಇವರ ಕಾವ್ಯಗಳಲ್ಲಿ ದ್ವಿಪದಿ, ತ್ರಿಪದಿ. (ತ್ರಿಪುಡೆ), ಜಂಪೆ, ಅಟತಾಳ, ಏಕತಾಳ, ಸೀಸಪದ್ಯ, ಸಾಂಗತ್ಯ, ಕಂದ, ಷಟ್ಪದಿ (ಭಾಮಿನಿ, ವಾರ್ಧಕ), ವೃತ್ತ ಹಾಗೂ ರಗಳೆ ಇವೇ ಮೊದಲಾದ ಛಂದೋಪ್ರಕಾರಗಳನ್ನು ಯಥೇಚ್ಛವಾಗಿ ಪ್ರಯೋಗಿಸಲಾಗಿದೆ. ಜೊತೆಗೆ ಸಂದರ್ಭಾನುಸಾರವಾಗಿ ಅಲ್ಲಲ್ಲಿ ಗದ್ಯರೂಪದ ವಚನಭಾಗಗಳೂ ಸೇರಿ ಇವು ಶುದ್ಧ ಚಂಪೂ ಕಾವ್ಯಗಳಾಗಿಯೇ ಪರಿಣಮಿಸಿಬಿಟ್ಟಿವೆ. ಮಹಾಂತ ದೇಶಿಕರು ಇದೇ ಮಾದರಿಯ ಒಂಬತ್ತು ಯಕ್ಷಗಾನ ಕೃತಿಗಳನ್ನು ರಚಿಸಿದ್ದಾರೆ. ಅವುಗಳ ಸಂಕ್ಷಿಪ್ತ ಪರಿಚಯವನ್ನು ಮುಂದೆ ಕೊಡಲಾಗಿದೆ.

'ಶಿವಶರಣವಿಲಾಸ'ವು ಮಹಾಂತದೇಶಿಕರ ಹೆಸರಾಂತ ಯಕ್ಷಗಾನ ಕಾವ್ಯವಾಗಿದೆ.[64] ಈ ಗ್ರಂಥದಲ್ಲಿ ಒಟ್ಟು ೨೫ ಸಂಧಿಗಳಿದ್ದು, ವಿವಿಧ ಛಂದೋಪ್ರಕಾರದ ೫೫೨೨ ಪದ್ಯಗಳಿವೆ. ಜೊತೆಗೆ ಗದ್ಯರೂಪದ ೬೭೭ ವಚನ ಭಾಗಗಳಿವೆ. ಇಂತಹ ಬೃಹತ್ ಗಾತ್ರದ ಈ ಕಾವ್ಯವು ೧೯೦೯ರಲ್ಲಿ ಪ್ರಥಮ ಮುದ್ರಣವನ್ನು ಕಂಡಿದೆ.[65] ಇದರಲ್ಲಿರುವ ೪೪ ಶಿವಶರಣರ ಕಥಾಪ್ರಸಂಗಗಳಲ್ಲಿ ಮೊದಲು ಬರುವ ಸಮುದ್ರಮಥನ (ವಿಷಧರಲೀಲೆ), ಭಿಕ್ಷಾಟನಲೀಲೆ, ದಕ್ಷಬ್ರಹ್ಮನ ಕಥೆ, ವ್ಯಾಧನ ಕಥೆ, ಕರವೀರಭೂಪಾಲನ ಕಥೆ ಇವು ಐದೂ ಪ್ರಸಂಗಗಳು ಪೌರಾಣಿಕ ಸನ್ನಿವೇಶದ ಹಿನ್ನೆಲೆಯುಳ್ಳವಾಗಿವೆ. ಉಳಿದ ೩೯ ಪ್ರಸಂಗಗಳಲ್ಲಿ ೨೨ ಕಥೆಗಳು ಬಸವಾದಿ ಶಿವಶರಣರನ್ನು ಕುರಿತವಾದರೆ ಮಿಕ್ಕ ೧೭ ಕಥೆಗಳು ಅರವತ್ತುಮೂರು ಪುರಾತನರುಗಳಲ್ಲಿ ಆಯ್ದ ಕೆಲವು ಪ್ರಸಂಗಗಳಿಗೆ ಸಂಬಂಧಪಟ್ಟವಾಗಿವೆ.

ಕೃತಿಯ ಪ್ರಾರಂಭದ ಮಂಗಳಾಚರಣೆಯ ಘಟ್ಟದಲ್ಲಿ ಇಷ್ಟದೇವತಾ ಪ್ರಾರ್ಥನೆಯ ಜೊತೆಗೆ ತಮ್ಮ ಗುರುಗಳನ್ನು ಕುರಿತು-

''ಸದ್ಗುಣ ಷಟ್ಪ್ರಣವಾಕೃತ
ಚಿದ್ಗಿರಿ ಮಧ್ಯಪ್ರಕಾಶಿತಾಲಯವಾಸ
ಉದ್ಗಾರ್ಥಫಲವ ಕೊಡುಕೊಡು
ಮದ್ಗುರು ಗುರುಸಿದ್ಧದೇವ ಸುಮತಿಯನೆನಗಂ[66]''

ಎಂಬುದಾಗಿ ಭಿನ್ನವಿಸಿಕೊಂಡಿದ್ದಾರೆ. ಇನ್ನು ಕೃತಿಯ

ಬಗೆಗೆ ಕವಿಯೇ ಹೇಳಿಕೊಂಡಿರುವಂತೆ 'ಸಂಸ್ಕೃತ ಭಾಷೆಯಲ್ಲಿ ಗುಹನು ಅಗಸ್ತ್ಯ ಋಷಿಗೆ ಹೇಳಿದ ನಂದೀಶ್ವರ ಪುರಾಣಾಂತರ್ಗತವಾದ ಶರಣ ಚರಿತ್ರೆಯನ್ನು ಕನ್ನಡ ನುಡಿಯಲ್ಲಿ ವಿಶಿಷ್ಟವಾದ ಯಕ್ಷಗಾನದ ದೇಶೀಯ ಛಂದಸ್ಸಿನಲ್ಲಿ ವಿವರಿಸಲಾಗಿದೆ'.[67] ಒಟ್ಟಾರೆ ಈ ಕಾವ್ಯವು ಯಕ್ಷಗಾನದ ಶೈಲಿಯಲ್ಲಿದ್ದರೂ ಬಂಧುರವಾದ ಲಕ್ಷಣವುಳ್ಳದ್ದಾಗಿದ್ದು ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಕವಿಗಿರುವ ಶಬ್ದವ್ಯುತ್ಪತ್ತಿ, ಛಂದಸ್ಸು, ಅಲಂಕಾರ, ವ್ಯಾಕರಣ, ಶಾಸ್ತ್ರಪಾಂಡಿತ್ಯ ಮತ್ತು ಸರಳವಾದ ಹಾಗೂ ಸುಮಧುರವಾದ ಕವಿತಾಸಾಮರ್ಥ್ಯಗಳನ್ನು ಎತ್ತಿ ಸಾರುವ ಮೂಲಕ ಕವಿಯ ಕವಿತ್ವದ ಮೇಲ್ಮೆಯನ್ನು ಪ್ರತಿಬಿಂಬಿಸುತ್ತದೆ.

'ಹರಿಶ್ಚಂದ್ರ ಮಹಾರಾಯನಚರಿತ್ರೆ'ಯು ಮಹಾಂತ ದೇಶಿಕರ ಮತ್ತೊಂದು ಜನಪ್ರಿಯ ಯಕ್ಷಗಾನ ಕಾವ್ಯವಾಗಿದೆ. ಒಟ್ಟು ಹದಿಮೂರು ಸಂಧಿಗಳಲ್ಲಿ ಆವೃತ್ತವಾಗಿರುವ ಈ ಕಾವ್ಯದಲ್ಲಿ ೩೧೭೬ ಪದ್ಯಗಳಿವೆ.[68] ೧೮೮೪ರಲ್ಲಿ ಪ್ರಥಮ ಮುದ್ರಣವನ್ನು ಕಂಡಿರುವ ಈ ಕೃತಿಯು ೧೯೦೮ರ ವೇಳೆಗೆ ನಾಲ್ಕು ಬಾರಿ ಪುನರ್ ಮುದ್ರಣಗಳನ್ನು ಕಂಡಿತ್ತು.[69] ಇಷ್ಟೇ ಜನಪ್ರಿಯವಾದ ಇವರ ಇನ್ನೊಂದು ಕೃತಿ 'ನಳಮಹಾರಾಯನ ಚರಿತ್ರೆ'. ಇದು ೧೮೯೩ರಲ್ಲಿ ಪ್ರಕಟಗೊಂಡಿದ್ದು ೪೦೮ ಪುಟಗಳ ಬೃಹತ್ ಕಾವ್ಯವಿದಾಗಿ ತಿಳಿದುಬರುತ್ತದೆ.[70]

ಇವರ 'ಚೋರಬಸವೇಶ್ವರ ಚರಿತ್ರೆ'ಯು ಉಪಲಬ್ಧವಾಗಿದ್ದು ಭಾಗಶಃ ಹರಿದು ಹಾಳಾಗಿದೆ. ೧೮೮೬ರಲ್ಲಿ ಪ್ರಥಮ ಮುದ್ರಣವನ್ನು ಕಂಡಿರುವ ಈ ಕೃತಿಯಲ್ಲಿ ಕವಿಯೇ ಹೇಳಿಕೊಂಡಿರುವಂತೆ-

''ಸಾರಸಂಸ್ಕೃತಭಾಷೆಯೊಳಗೆಯಿರ್ದುದನು।
ಪೂರತೋಷದಿ ಸಕಲ ಸುಗುಣ ಜನರಿಂಗೆ॥
ಬೆಡಗಿನಿಂದಲಿ ತಿಳಿವ ತೆರದಿ ಕನ್ನಡದ।
ನುಡಿಯೊಳೀ ಚರಿತೆಯನು ಯಕ್ಷಗಾನದೊಳೂ[71]॥''

ಎಂಬುದಾಗಿ ಮೂಡಿಬಂದಿದೆ. ಮುಖಪುಟವಿಲ್ಲದ ಈ ಕೃತಿಯು ೧೫೫ ಪುಟಗಳಷ್ಟಿದ್ದು, ಇದರಲ್ಲಿರುವ ಮೂರೂ ಸಂಧಿ,ಗಳಲ್ಲಿ (ಲಭ್ಯವಿರುವಷ್ಟು ಭಾಗದಲ್ಲಿ) ಒಟ್ಟು ವಿವಿಧ ಛಂದೋಪ್ರಕಾರಗಳಿಗೆ ಸೇರಿದ ೫೬೫ ಪದ್ಯಗಳಿವೆ. ಮಹಾಂತ ದೇಶಿಕರು ಈ ಕೃತಿಯ ಆರಂಭದಲ್ಲಿ ತಮ್ಮ ಸದ್ಗುರುವನ್ನು ಕುರಿತು-

''ಪರಶಿವಭಕ್ತ ಸದಾರ್ಚಿತ।
ಚರಣಾಂಬುಜ ಶಿಷ್ಯ ಪಾಲತತ್ವವಿನೋದಾ॥
ಗುರುಸಿದ್ಧೇಶ ಮಹಾಮತೆ।
ಕರುಣದಿ ನೀ ಸಲಹು ನಿನ್ನ ಭಕ್ತರನೆಲ್ಲಂ॥''[72]

ಎಂಬುದಾಗಿ ಸ್ತೋತ್ರ ಮಾಡಿದ್ದಾರೆ. ಕಾವ್ಯದ ಉದ್ದಕ್ಕೂ ಬಸವೇಶ್ವರರ ಪವಾಡ ಸದೃಶ ವ್ಯಕ್ತಿತ್ವವನ್ನು ವೈಭವಯುತವಾಗಿ ಬಣ್ಣಿಸಲಾಗಿದೆ.

'ಇಕ್ಕದ ಮಾರಯ್ಯನ ಚರಿತ್ರೆ'ಯು ೧೮೯೭ರಲ್ಲಿ ರಚನೆಯಾಗಿದ್ದು, ಇದರ ಮೂಲ ಹಸ್ತ (ಕಾಗದದ) ಪ್ರತಿಯೇ ಲಭ್ಯವಾಗಿದೆ.[73] ಪ್ರಾರ್ಥನಾಭಾಗದಲ್ಲಿ ಕವಿಯು ತನ್ನ ಗುರುವನ್ನು ಸ್ಮರಿಸುತ್ತಾ...

''ಶಿರಿಯಲಂಕ್ಕಾರಾತಿಶಯವೈ
ಖರಿಯೊಳೊಪ್ಪುವ ಬೆಂಗಳೂರೊಳು
ಮೆರೆಯುತಿಹ ಘನತಿಪ್ಪಶೆಟ್ಟಿ ಮಠೇಶ ಗುರುಸಿದ್ಧಾ।
ಗುರುವರೇಣ್ಯನ ದಿವ್ಯತರ ತಾ
ಮರಸ ಭವಚರಮೂರ್ತಿ ಘನಚರ
ವರಮಹಾಂತಾರ್ಯನಿದ ಪೇಳಿಹನೆಕ್ಷಗಾನದೊಳೂ॥''[74]

ಎಂಬುದಾಗಿ ಹೇಳಿಕೊಂಡಿದ್ದಾರೆ. ಈ ಯಕ್ಷಗಾನ ಕೃತಿಯಲ್ಲಿ ಮೂರು ಸಂಧಿಗಳಿದ್ದು ವಿವಿಧ ಛಂದೋವೈವಿಧ್ಯದ ೨೯೫ ಪದ್ಯಗಳಿವೆ. ಇಲ್ಲಿ ಇಕ್ಕದ ಮಾರಯ್ಯಗಳ ಜೀವನ ವೃತ್ತಾಂತದ ಸುತ್ತಾ ಕಾವ್ಯವನ್ನು ವಿಸ್ತರಿಸಲಾಗಿದೆ.

'ಮಹಾಂತದೇಶಿಕೇಂದ್ರವಿಲಾಸ'ವು ೧೯೩೨ರಲ್ಲಿ ಪ್ರಥಮ ಬಾರಿಗೆ ಮುದ್ರಣವಾಗಿದೆ. ಇದೇ ಕೃತಿಯನ್ನು ೧೯೭೭ರಲ್ಲಿ ಜಿ.ಜಿ. ಮಂಜುನಾಥನ್ ಅವರು ಸಂಪಾದಿಸಿ ಕೊಟ್ಟಿದ್ದಾರೆ.[75] ಈ ಕೃತಿಯಲ್ಲಿ ಐದು ಸಂಧಿಗಳಿದ್ದು ಒಟ್ಟು ೩೯೪ ಪದ್ಯಗಳಿವೆ. ಜೊತೆಗೆ ಅಲ್ಲಲ್ಲಿ ೨೬ ವಚನಭಾಗಗಳಿವೆ. ಕಾವ್ಯದ ಉದ್ದಕ್ಕೂ ಕುಂತೂರು ಮಹಾಂತಸ್ವಾಮಿಗಳ ವೈರಾಗ್ಯಪೂರ್ಣ ಜೀವನ ವೃತ್ತಾಂತವನ್ನು ಪ್ರತಿಬಿಂಬಿಸಲಾಗಿದೆ. ಪ್ರಾರಂಭದಲ್ಲಿ ಕೃತಿಕಾರರು ತಮ್ಮ ಗುರುಗಳನ್ನು ಕುರಿತು-

''ವರಲೀಲಾಖ್ಯದ ಮುರುಘಾ
ಗುರುಕರಜಾತ ಪ್ರಸನ್ನಮೂರ್ತಿ ಶ್ರೀಮಾನ್
ಗುರುಸಿದ್ದೇಶ ಮಮಪ್ರಭೊ
ಕರುಣಿಸು ಮನ್ಮತಿಗೆ ಮಂಗಳವನತಿಶಯದೊಳ್[76]''

ಎಂಬುದಾಗಿ ಸದ್ಗುರುವಿನ ಪ್ರಾರ್ಥನೆ ಮಾಡಿದ್ದಾರೆ. ಇಲ್ಲಿ ತಮ್ಮ ಸದ್ಗುರುವನ್ನು 'ವರಲೀಲಾಖ್ಯದ ಮುರುಘಾ ಗುರುಕರಜಾತಾ' ಎಂದು ಕರೆದಿರುವುದು ವಿಶೇಷವಾಗಿ ಗುರುತಿಸತಕ್ಕ ಅಂಶವಾಗಿದೆ. ಕಾವ್ಯದ ಕೊನೆಯಲ್ಲಿ-

> ''ಧರೆಯೊಳು ಪ್ರಖ್ಯಾತಿಯಹ ಬೆಂಗಳೂರೊಳಿಹ
> ವರತಿಪ್ಪಶೆಟ್ಟಿ ಮಠವಾಸ ಗುರುಸಿದ್ಧಗುರು
> ಕರಕಮಲಸಂಜಾತ ಚರಮೂರ್ತಿ ಘನ
> ಮಹಾಂತಾರ್ಯನುಲ್ಲಾಸದಿಂದ।
> ಒರೆದುದಿಲ್ಲಿಗಿದ್ಯೆದು ಸಂಧಿಗೀ ಸತ್ಕಥೆಯು
> ಪರಿಪೂರ್ತಿಯಾಯಿತಿದನೋದಿ ಕೇಳ್ದವರಿಗುಮೆ
> ಯರಸನೊಲಿದಕ್ಕರೊಳು ಮನದಭೀಷ್ಟೆಯನಿತ್ತು ಕೈಬಿಡದೆ
> ಪೊರೆವನಿಳೆಯೊಳ್[77]''

ಎಂದು ಕವಿಯ ಅಭಿಮಾನದ ಮಾತುಗಳೊಂದಿಗೆ ಮುಕ್ತಾಯಗೊಂಡಿದೆ.

ಮಹಾಂತದೇಶಿಕರ ಯಕ್ಷಗಾನ ಕಾವ್ಯಗಳಲ್ಲಿ ಇನ್ನುಳಿದ 'ಶನಿಮಹಾತ್ಮೆ'ಯು ೧೮೮೮ರಲ್ಲೂ, 'ಧರ್ಮ ಚರಿತ್ರೆ'ಯು ೧೮೯೦ರಲ್ಲೂ ಮತ್ತು 'ಸಿರಿಯಾಳ ಚರಿತ್ರೆ'ಯು ೧೮೯೫ರಲ್ಲೂ ಪ್ರಕಟವಾಗಿರುವುದಾಗಿ ತಿಳಿದುಬರುತ್ತದೆ.[78] ಒಟ್ಟಾರೆ ಇವರ ಒಂಬತ್ತು ಯಕ್ಷಗಾನ ಕೃತಿಗಳಲ್ಲಿ 'ಶಿವಶರಣವಿಲಾಸ' ಒಂದನ್ನು ಬಿಟ್ಟು ಉಳಿದ ಎಲ್ಲವೂ ಏಕವ್ಯಕ್ತಿ ಕೇಂದ್ರೀಕೃತ ಕಾವ್ಯಗಳೇ ಆಗಿವೆ. ಇಲ್ಲಿನ ಕಥಾಗುಚ್ಛಗಳೆಲ್ಲಾ ಪೌರಾಣಿಕ ಹಾಗೂ ಚಾರಿತ್ರಿಕ ಹಿನ್ನೆಲೆಯುಳ್ಳವಾಗಿದ್ದು, ದೃಶ್ಯ ಹಾಗೂ ಶ್ರವ್ಯ ಮಾಧ್ಯಮಗಳೆರಡಕ್ಕೂ ಹೇಳಿ ಮಾಡಿಸಿದಂತವಾಗಿವೆ. ಅದರಲ್ಲೂ ಇವರ 'ಹರಿಶ್ಚಂದ್ರಮಹಾರಾಯನಚರಿತ್ರೆ' ಹಾಗೂ 'ನಳಮಹಾರಾಯನಚರಿತ್ರೆ'ಗಳು ಅತಿ ಹೆಚ್ಚು ಜನಪ್ರಿಯವಾದ ಯಕ್ಷಗಾನ ಕಾವ್ಯಗಳಾಗಿದ್ದು, ಇವು ಈ ಶತಮಾನದ ಪೂರ್ವಾರ್ಧದಲ್ಲಿ ಅಸಂಖ್ಯಾತ ಬಾರಿ ದೃಶ್ಯಕಾವ್ಯಗಳಾಗಿ ಪ್ರಯೋಗಿಸಲ್ಪಟ್ಟುವೆಂದು ಹೇಳಲಾಗುತ್ತದೆ.[79] ಈ ಹಿನ್ನೆಲೆಯಲ್ಲಿ ಮಹಾಂತ ದೇಶಿಕರು ಯಕ್ಷಗಾನ ಕಾವ್ಯ ರಚನೆಯಲ್ಲಿ ಸಿದ್ಧಹಸ್ತರಾಗಿದ್ದರೆಂಬುದು ಸ್ಪಷ್ಟವಾಗುತ್ತದೆ.

### ೨.೨. ಇತರೆ ಸ್ವತಂತ್ರ ಕೃತಿಗಳು

ಮಹಾಂತ ದೇಶಿಕರು ಹಲವಾರು ಶತಕ ಹಾಗೂ ಸ್ತೋತ್ರ ಕಾವ್ಯಗಳನ್ನೂ ಮತ್ತು ಕೆಲವು ಪೂಜಾವಿಧಿ ಹಾಗೂ ಖಡ್ಗ ಕಾವ್ಯಗಳನ್ನೂ ರಚನೆ ಮಾಡಿದ್ದಾರೆ. ಅವುಗಳ ಸಂಕ್ಷಿಪ್ತ ಪರಿಚಯವನ್ನು ಮುಂದೆ ನೋಡಬಹುದಾಗಿದೆ.

ಇವರ 'ನಂಜುಂಡೇಶ್ವರ ಶತಕ'ವು ಒಂದು ಸ್ತೋತ್ರ ಕಾವ್ಯವಾಗಿದ್ದು ಇದರಲ್ಲಿ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ೧೦೯ ಪದ್ಯಗಳಿವೆ. ಈ ಕೃತಿಯು ಪ್ರಥಮಬಾರಿಗೆ ೧೮೮೮ರಲ್ಲಿ ಬೆಂಗಳೂರಿನ ವಿಚಾರ ದರ್ಪಣ ಮುದ್ರಾಕ್ಷರ ಶಾಲೆಯಿಂದ ಪ್ರಕಟವಾಗಿದೆ. ಇದರ ಮುಖಪುಟದ ಮೇಲೆ ''...ನಂಜುಂಡೇಶ್ವರ ಸ್ತೋತ್ರ ಶತಕವು ಶ್ರೀ ಮತ್ಪರಮೇಶ್ವರ ಚರಣಾರವಿಂದ ಭಜನಾಸಕ್ತ ಬೆಂಗಳೂರು ತಿಪ್ಪಶೆಟ್ಟಿ ಮಠಾಧಿವಾಸ ಗುರುಸಿದ್ಧಸ್ವಾಮಿ ಕರಕಂಜೋದ್ಭವ ಚರಮೂರ್ತಿಗಳಾದ ಮಹಾಂತದೇಶಿಕೇಂದ್ರರಿಂದ ವಿರಚಿಸಲ್ಪಟ್ಟು...[80]'' ಎಂಬುದಾಗಿ ಉದ್ಧೃತವಾಗಿದೆ. ಈ ಕಾವ್ಯದುದ್ದಕ್ಕೂ ನಂಜುಂಡೇಶ್ವರನನ್ನು ಕುರಿತ ಸ್ತೋತ್ರ ಭಾಗದ ಪದ್ಯಗಳಲ್ಲಿ ''...ಗರಳಪುರೀಶ ನಂಜುಂಡೇಶ ಜಗದೀಶಾ'' ಎಂಬ ಅಂತ್ಯೋಕ್ತಿ ತಪ್ಪದೆ ಬಂದಿರುತ್ತದೆ. ಕಾವ್ಯಾಂತ್ಯದಲ್ಲಿ...

> ''ಧರೆಯ ಮಧ್ಯದೊಳುತ್ತಮತ್ವದಿ
> ಮೆರೆಯುತಿಹ ವರ ಬೆಂಗಳೂರೊಳು
> ಸರಸದಿಂದಿಹ ತಿಪ್ಪಶೆಟ್ಟಿ ಮಠೇಶ ಗುರುಸಿದ್ಧಾ।
> ಗುರುವರೇಣ್ಯನ ದಿವ್ಯ ಕರತಾಮ
> ರಸಭವಚರಮೂರ್ತಿ ಘನಚರ
> ವರಮಹಾಂತಾರ್ಯನಿದ ರಚಿಸಿದ ಬಹಳ
> ಖ್ಯಾತಿಯೊಳೂ'' ॥[81]

ಹೀಗೆ ಕೃತಿಕಾರರೇ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.

'ರಾಜೇಶ್ವರಶತಕ'ವು ೧೮೯೦ರಲ್ಲಿ ರಚನೆಯಾಗಿದ್ದು,[82] ಇದರಲ್ಲಿ ಭಾಮಿನಿ ಷಟ್ಪದಿಯಲ್ಲಿ ರಚಿತವಾದ ೧೦೫ ಪದ್ಯಗಳಿವೆ.[83] ಇಲ್ಲೂ ಕೂಡ ಕಾವ್ಯ ಭಾಗದ ಪದ್ಯಗಳಲ್ಲಿ ''...ರಾಜಾಪುರೀಶ ಮಹೇಶ ರಾಜೇಶಾ'' ಎಂಬ ಅಂತ್ಯೋಕ್ತಿಯು ತಪ್ಪದೆ ಉಕ್ತವಾಗಿದೆ. ಕಾವ್ಯಾರಂಭದಲ್ಲಿ ಕವಿಯು ಅನುಕ್ರಮವಾಗಿ ಅಲ್ಲಮಪ್ರಭು, ಬಸವಣ್ಣ, ರೇವಣಸಿದ್ಧರನ್ನು ಭಕ್ತಿಪೂರ್ವಕವಾಗಿ ಸ್ಮರಿಸಿದ್ದಾರೆ. ನಂತರ ತಮ್ಮ ಗುರುಗಳಾಗಿದ್ದ ಗುರುಸಿದ್ಧಸ್ವಾಮಿಗಳನ್ನು ಕುರಿತು ವಿನಯದಿಂದ ಸ್ತುತಿಸುತ್ತಾ, ಈ ಕಾವ್ಯವನ್ನು ಪಠಿಸುವ ಜನರಿಗೆ ದೊರಕುವ ಸುಕೃತವನ್ನು ಕುರಿತು

ವಿವರಿಸಿದ್ದಾರೆ.[84] ಕಾವ್ಯಾಂತ್ಯದಲ್ಲಿ ''ಬಸವಪಾವನ ಬಸವ ಸದ್ಗುರು... ಬಸವಸಂಗನ ಬಸವ ರೇವಣಸಿದ್ಧ ಬಸವೇಶಾ[85]'' ಎಂದು ಹೇಳುವ ಮೂಲಕ ವೀರಶೈವಧರ್ಮದ ಮೂಲ ಪುರುಷರೆನ್ನಿಸಿಕೊಂಡಿರುವ ಬಸವ, ರೇವಣಸಿದ್ಧರಿಬ್ಬರನ್ನೂ ಕೃತಿಕಾರರು ಸಮನ್ವಯ ದೃಷ್ಟಿಯಿಂದ ಕೊಂಡಾಡಿರುವುದು ವ್ಯಕ್ತವಾಗುತ್ತದೆ.

''ವೇಣುಗೋಪಾಲಶತಕ''ವೂ ಕೂಡ ಇದೇ ಮಾದರಿಯಲ್ಲೇ ರಚಿತವಾಗಿದ್ದು ಭಾಮಿನಿ ಷಟ್ಪದಿಯ ಛಂದಸ್ಸಿನ ೧೧೩ ಪದ್ಯಗಳಿವೆ.[86] ಪ್ರಾರಂಭದಿಂದಲೂ ಇಲ್ಲಿನ ಪ್ರತಿಪದ್ಯಗಳ ಅಂತ್ಯದಲ್ಲಿ ''ವೈಕುಂಠಪುರವರ ವೇಣುಗೋಪಾಲಾ'' ಎಂಬ ವೇಣುಗೋಪಾಲನ ಸ್ತೋತ್ರದ ಉಕ್ತಿಯು ನಿರಂತರವಾಗಿ ಬಳಕೆಯಾಗಿದೆ. ಕಾವ್ಯಾಂತ್ಯದಲ್ಲಿ ತಮ್ಮ ಗುರುಗಳನ್ನು ಸ್ಮರಣೆ ಮಾಡಿರುವುದು[87] ಇಲ್ಲಿನ ವಿಶೇಷ. ಇನ್ನೊಂದು ಮುಖ್ಯವಿಚಾರವೆಂದರೆ ಒಬ್ಬ ಶಿವಕವಿಯೂ, ವೀರಶೈವ ಮಠಾಧಿಪತಿಯೂ ಆಗಿದ್ದ ಮಹಾಂತದೇಶಿಕರು ವೈಷ್ಣವ ಪಂಥದ ವೇಣುಗೋಪಾಲನ ಸ್ತೋತ್ರವನ್ನು ರಚಿಸಿದ್ದುದು, ಅವರಿಗೆ ಪರಮತೀಯರಲ್ಲಿದ್ದ ಗೌರವಾದರಣೆಗೆ ಹಿಡಿದ ಕನ್ನಡಿಯಂತಿದೆ.

ಮಹಾಂತದೇಶಿಕರ 'ಶ್ರೀಮದ್ಬಸವೇಶ್ವರ ಭಕ್ತಿಸಾರವೂ' ಕೂಡ ಭಾಮಿನಿ ಷಟ್ಪದಿಯಲ್ಲೇ ರಚಿತವಾಗಿರುವ ೧೧೩ ಪದ್ಯಗಳನ್ನು ಕೊನೆಗೊಂದು ಸಂಸ್ಕೃತ ವೃತ್ತವನ್ನೂ ಒಳಗೊಂಡಿದೆ. ಈ ಕೃತಿಯೂ ಪ್ರಥಮ ಬಾರಿಗೆ ೧೮೮೮ ರಲ್ಲಿ ಬೆಂಗಳೂರಿನ ವಿಚಾರದರ್ಪಣ ಮುದ್ರಾಕ್ಷರ ಶಾಲೆಯಿಂದ ಪ್ರಕಟವಾಗಿದೆ.[88] ಶ್ರೀಮದ್ಬಸವೇಶ್ವರರ ಸ್ತೋತ್ರ ಕಾವ್ಯವಾದ ಈ ಕೃತಿಯ ಪ್ರತಿಪದ್ಯಗಳಲ್ಲೂ ''....ಬಸವೇಶ ರಕ್ಷಿಸು'' ಎಂಬ ಅಂತ್ಯೋಕ್ತಿ ಬಳಕೆಯಾಗಿದೆ. ಕಾವ್ಯಾರಂಭದಲ್ಲೇ ''ಶ್ರೀಗುರುವೆ... ಈಗೆನಗೆ ಸನ್ಮತಿಯನೀಯುತ ಬೇಗದೊಳಗೀ ಭಕ್ತಿಸಾರವ ಸಾಗಿಸನುರಾಗದೊಳು...[89]'' ಎಂಬ ನಿವೇದನೆಯಿದೆ. ಕಾವ್ಯಾಂತ್ಯದೊಳಗೂ ಕೂಡ ತಮ್ಮ ಗುರುಗಳ ಸ್ಮರಣೆ ಮಾಡಿದ್ದಾರೆ.[90]

ಮೇಲ್ಕಂಡ ಕಾವ್ಯಗಳ ಮಾದರಿಯಲ್ಲೇ ಭಾಮಿನಿಷಟ್ಪದಿಯ ಛಂದಸ್ಸಿನಲ್ಲೇ ೧೮೯೦ರ ವೇಳೆಗಾಗಲೇ ಮಹಾಂತ ದೇಶಿಕರು 'ಆಂಜನೇಯ ಭಕ್ತಿಸಾರ', 'ವಿಠಲಪಾಂಡುರಂಗ ಸ್ತೋತ್ರ', 'ಸಾಂಬಮೂರ್ತಿ ಸ್ತೋತ್ರ', 'ಹರಿಹರಸ್ತೋತ್ರ', 'ಗಂಗಾಧರ ಸ್ತೋತ್ರ', 'ಗದ್ದುಗೆ ಮಠಳ ಸಿದ್ಧೇಶ್ವರ ಸ್ತೋತ್ರ', 'ನವಗ್ರಹಶತಕ' ಇವೇ ಮೊದಲಾದ ಕಾವ್ಯಗಳನ್ನು ರಚಿಸಿದ್ದುದಾಗಿ ತಿಳಿದು ಬರುತ್ತದೆ.[91] ೧೮೯೫ರಲ್ಲಿ ಇವರ 'ರೇವಣಸಿದ್ಧೇಶ್ವರ ಭಕ್ತಿಸಾರ'ವು ಪ್ರಕಟವಾಗಿದ್ದು, ಇದೂ ಕೂಡ ಭಾಮಿನಿ ಷಟ್ಪದಿಯಲ್ಲೇ ರಚಿತವಾಗಿ ೧೧೩ಪದ್ಯಗಳನ್ನೂ ಮೇಲೊಂದು ಸಂಸ್ಕೃತ ವೃತ್ತವನ್ನೂ ಒಳಗೊಂಡಿದೆ.[92]

ಇನ್ನುಳಿದ ಕೆಲವು ಕಾವ್ಯಗಳು ಬೇರೆಯದೇ ಆದ ಛಂದೋಪ್ರಕಾರಗಳಲ್ಲಿ ರಚಿತವಾಗಿದೆ. ಅವುಗಳಲ್ಲಿ 'ಅಂಬಾಸ್ತೋತ್ರ'ವು ಲಲಿತಪದ ವೃತ್ತದಲ್ಲಿದ್ದು, ೨೩ ಪದ್ಯಗಳನ್ನು ಒಳಗೊಂಡಿದ್ದರೆ; 'ರೇಣುಕಾರ್ಯಸ್ತೋತ್ರ'ವು ಸುಗಂಧಿತ ವೃತ್ತ ಹಾಗೂ ಕಂದರೂಪದ ೨೭ ಪದ್ಯಗಳಿಂದ ಒಡಗೂಡಿದೆ. 'ವಿನಾಯಕ ಚೌಪದ'ವು ಚೌಪದಿಯಲ್ಲಿ ರಚಿತವಾಗಿರುವ ಇವರ ಏಕೈಕ ಕೃತಿಯಾಗಿದ್ದು, ಇವೆಲ್ಲಾ ಕೃತಿಗಳೂ ೧೮೯೫ರ ಸುಮಾರಿಗೆ ಪ್ರಕಟವಾಗಿರುತ್ತವೆ.[93] ಇವರ 'ಲಿಂಗಧಾರಣವಿಧಿ' ಹಾಗೂ 'ನವಗ್ರಹ ಪೂಜಾವಿಧಾನ' (ಟೀಕೆಯೊಡನೆ)ಗಳೂ ಇದೇ ವೇಳೆಗೆ ಪ್ರಕಟವಾಗಿವೆ. 'ನವಗ್ರಹ ಪೂಜಾವಿಧಾನ'ದ ಕೃತಿಯಲ್ಲಿ ಪೂಜಾ ವಿವರ (ಸಿದ್ಧತೆ)ಗಳ ಜೊತೆಗೆ, 'ಧ್ಯಾನಾವಾಹನಾದ್ಯರ್ಚನಾ' ಭಾಗವೂ; ಕೊನೆಯಲ್ಲಿ 'ಶನೈಶ್ಚರ ಸ್ತೋತ್ರಾಷ್ಟಕ' ಭಾಗವನ್ನು ಕೊಡಲಾಗಿದೆ.[94] ವೀರಭದ್ರ ದೇವರನ್ನು ಕುರಿತ 'ಖಡ್ಗಗಳು' ಹಾಗೂ ರೇಣುಕರನ್ನು ಕುರಿತ 'ರೇಣುಕರ ಖಡ್ಗವು' ಇವೆರಡೂ ಜಾನಪದ ಮಾದರಿಯ ವಿಶಿಷ್ಟ ಗದ್ಯ ಶೈಲಿಯ ಕೃತಿಗಳಾಗಿದ್ದು ೧೯೩೭ರ ವೇಳೆಗೆ ಪ್ರಕಟ ವಾಗಿರುತ್ತವೆ.[95]

**೨.೩. ಸಂಪಾದಿತ ಕೃತಿಗಳು**

ಮಹಾಂತದೇಶಿಕರು ಸ್ವತಃ ಕವಿತಾಚತುರರಾಗಿದ್ದು ೨೭ ಕೃತಿಗಳ ರಚನೆ ಮಾಡಿದ್ದುದರ ಜೊತೆಗೆ ವೀರಶೈವ ದಾರ್ಶನಿಕ ವಿಚಾರಗಳಿಗೆ ಸಂಬಂಧಪಟ್ಟಂತೆ ಒಂಬತ್ತು ಕೃತಿಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಇವರು ''ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯ, ಘಟಚಕ್ರ,

ಏಕಾದಶ ಪ್ರಸಾದ ವಿಚಾರವಾಕ್ಯ, ಮಿಶ್ರಷಟ್‌ಸ್ಥಲ ವಚನ, ಪಂಚಬ್ರಹ್ಮ-ನಾರಾಯಣೋಪನಿಷತ್'' ಎಂಬ ಚೆನ್ನಬಸವಣ್ಣನವರ ಈ ಸಂಕಲನ ಕೃತಿಯನ್ನು ಪ್ರಥಮ ಬಾರಿಗೆ ೧೮೮೮ರಲ್ಲಿ ಪರಿಷ್ಕರಿಸಿಕೊಟ್ಟಿದ್ದಾರೆ.[96] ಇದರ ಎರಡನೆಯ ಆವೃತ್ತಿಯ ಮುಖಪುಟದ ಮೇಲೆ ''...ಶ್ರೀಮತ್ಪರಮ ಶಿವಾನುಭವ ತತ್ವವಿಚಾರಸಾರ ಸೂತ್ರಾರ್ಥ ಷಡಧ್ವಾತೀತಾ ಪರೋಕ್ಷ ಸಮ್ಯಜ್ಞಾನ ಸಾಧನಾನು ಸಂಧಾನಯುಕ್ತ-ಶ್ರೀ ಮದ್ವೀರಶೈವ ಸಿದ್ಧಾಂತ ಪ್ರಸಿದ್ಧಗುರು ಪರಂಪರಾಭಿಮತ ಸ್ಥಾಪಿತ, ನಿರಾಭಾರಿ ದೇಶಿಕೋತ್ತಮ ಶ್ರೀಮಚ್ಚೆಂನಬಸವೇಶ್ವರ ಪ್ರಣೀತಮಾದ-ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯ, ಘಟಚಕ್ರ, ಏಕಾದಶ ಪ್ರಸಾದ ವಿಚಾರವಾಕ್ಯ, ಮಿಶ್ರ ಷಟ್‌ಸ್ಥಲವಚನ, ಪಂಚಬ್ರಹ್ಮನಾರಾಯಣೋಪನಿಷತ್ ಇವುಗಳನ್ನು - ಬೆಂಗಳೂರು ತಿಪ್ಪಶೆಟ್ಟಿ ಮಠದ ಚರಮೂರ್ತಿಗಳು ಗುರುಸಿದ್ಧಸ್ವಾಮಿಗಳ ಕರಕಮಲ ಸಂಜಾತರಾದ ಮಹಾಂತದೇಶಿಕೇಂದ್ರರವರಿಂದ ಪರಿಷ್ಕರಿಸಲ್ಪಟ್ಟು''ದಾಗಿ ತಿಳಿದುಬರುತ್ತದೆ.[97]

ಮುಂದೆ ಇವರ ಮತ್ತೊಂದು ಮಹತ್ವದ ಸಂಪಾದಿತ ಕೃತಿ ಕೋಳೂರು ಶಂಕರ ಕವಿಯ 'ಚೋರಬಸವೇಶ್ವರ ಚರಿತ್ರೆ'ಯು ೧೮೮೭ರಲ್ಲಿ ಪ್ರಕಟವಾಗಿದೆ.[98] ಇಷ್ಟೇ ಮಹತ್ವದ ಇನ್ನೊಂದು ಕೃತಿ ''ಅನುಭವಮುದ್ರೆಯು.'' ಇದು ೧೮೯೦ರಲ್ಲಿ ಬೆಂಗಳೂರಿನ ವಿಚಾರದರ್ಪಣ ಮುದ್ರಾಕ್ಷರಶಾಲೆಯಿಂದ ಪ್ರಥಮ ಮುದ್ರಣವನ್ನು ಕಂಡಿದೆ.[99] ಇದರ ಮುಖ ಪುಟದಲ್ಲಿ ''...ಶಾಂತಮಲ್ಲೇಶ್ವರಸ್ವಾಮಿಗಳಿಂದ ವಿರಚಿಸಲ್ಪಟ್ಟ 'ಅನುಭವಮುದ್ರೆಯು ಎಂಬ ಶಿವಾನುಭವಶಾಸ್ತ್ರವು' ಇವರ ವಂಶೀಭೂತರಾದ ಶ್ರೀಮತ್ಪರಮೇಶ್ವರ ಚರಣಾಂಭೋಜಭಜನಾಸಕ್ತ ಬೆಂಗಳೂರು ತಿಪ್ಪಶೆಟ್ಟಿ ಮಠಾಧಿವಾಸ ಗುರುಸಿದ್ಧಸ್ವಾಮಿ ಕರಕಮಲೋದ್ಭವ ಚರಮೂರ್ತಿಗಳು ಮಹಾಂತದೇಶಿಕೇಂದ್ರರಿಂದ ಪರಿಶೋಧಿಸಲ್ಪಟ್ಟಿದ್ದು...'' ಎಂಬ ವಿಚಾರಗಳಿವೆ. ಸಾಂಗತ್ಯ ಛಂದಸ್ಸಿನಲ್ಲಿ ರಚಿತವಾಗಿರುವ ಈ ಗ್ರಂಥದಲ್ಲಿ ಒಟ್ಟು ೩೨ ಸ್ಥಲಗಳಿದ್ದು ೧೮೯೦ ಪದ್ಯಗಳಿವೆ. ಕೃತಿಗೆ ಆರಂಭದಲ್ಲಿ ಮಹಾದೇವಸ್ತುತಿಯನ್ನು ಮಾಡಿ, ನಂತರ - ''... ಬೆಂಗಳೂರೊಳಗಿರುತಿರ್ಪ ವರತಿಪ್ಪಶೆಟ್ಟಿಮಠವಾಸ ಗುರುಸಿದ್ಧ ಗುರು ಕರಪದ್ಮಜ ಚರಮೂರ್ತಿ ನಿರುಪಮ ಲಿಂಗಾರ್ಚಕ ಮಹಾಂತಾರ್ಯನು ಸರಸದೊಳಿಂತೀಪದಗಳ ಪರಿಶೋಧಿಸಿ ತಿದ್ದಿ ಪ್ರಚುರವಗೊಳಿಸೀಹ ಸ್ಮರಹರ ಭಕ್ತರೆಲ್ಲರು ಹರುಷದೊಳೋದಿದರರ್ಥವ ತಿಳಿಯಾಲು ಪೊರೆವನು ಶಶಿಧರನಿದಕೇಳಿ''[100] ಎಂಬ ಗುರುಸ್ತುತಿಯುಳ್ಳ ಹೆಮ್ಮೆಯ ಮಾತುಗಳಿವೆ. ಗ್ರಂಥದ ಪ್ರಾರಂಭದ ಸ್ಥಲ ಹಾಗೂ ಅಂತ್ಯದ ಸ್ಥಲಗಳ ಕೊನೆಯಲ್ಲಿ - ''ಇತಿ ಶ್ರೀಮತ್ಸಚ್ಚಿದಾನಂದ ನಿತ್ಯ ಪರಿಪೂರ್ಣ ಲಕ್ಷಣಾಲಕ್ಷಿತ ಸ್ವಯಂ ಪ್ರಕಾಶ ಪರಬ್ರಹ್ಮ ಸ್ವರೂಪರಪ್ಪ ಸದ್ಗುರುಸ್ವಾಮಿ ಪ್ರಭುದೇವರು ತಮ್ಮ ನಿಜಶಿಷ್ಯರಪ್ಪ ಪ್ರಭುದೇವರಿಗೆ ನಿರೂಪಿಸಿದನುಭವ ಮುದ್ರೆಯೊಳು[101]...'' ಎಂಬ ಪ್ರಯೋಗವಿದ್ದು, ಇವು ಮೂಲ ಕೃತಿಕಾರರ ನೇರಮಾತುಗಳಾಗಿವೆ.

ಮಹಾಂತದೇಶಿಕರು ಪಾಲ್ಕುರಿಕೆ ಸೋಮನಾಥನ 'ಬಸವಲಿಂಗ ರಗಳೆ'ಯನ್ನು ೧೮೯೦ರಲ್ಲಿ ಪ್ರಥಮಬಾರಿಗೆ ಪರಿಷ್ಕರಿಸಿಕೊಟ್ಟಿದ್ದಾರೆ.[102] ರಗಳೆಯ ಛಂದಸ್ಸಿನಲ್ಲಿರುವ ಈ ಕಿರುಕೃತಿಯಲ್ಲಿ ಒಟ್ಟು ೧೧೫ ಪದ್ಯಗಳಿದ್ದು ಇವುಗಳಲ್ಲಿ ಏಳು ಕಂದಪದ್ಯಗಳೂ ಸೇರಿವೆ. ಪರಿಷ್ಕರಣಕಾರರೇ ಸೂಚಿಸಿರುವಂತೆ-

''ನೂರೆಂಟು ಪೆಸರೊಳೊಪ್ಪುವ
ಧಾರುಣಿಯೊಳು ಬಸವಲಿಂಗ ತಾರಕವಿದನುಂ।
ಆರಾದರು ಜಪಗೈಯಲು
ಶೇರುವದವರಿಷ್ಟಸಿದ್ಧಿ ಶಿವಬಸವೇಶಾ ॥[103]''

ಎಂದಿದೆ. ಇದೊಂದು ಬಸವೇಶ್ವರನನ್ನು ಕುರಿತ ಸ್ತೋತ್ರ ಕಾವ್ಯವೇ ಆಗಿರುತ್ತದೆ. ಮುಂದೆ ೧೯೩೪ರಲ್ಲಿ ಪುನರ್ಮುದ್ರಣ ಕಂಡಿರುವ ಈ ಕೃತಿಯಲ್ಲಿ ಬಸವಲಿಂಗ ರಗಳೆಯ ಜೊತೆಗೆ 'ಶಿವಲಿಂಗತ್ರಿವಿಧಿ' ಮತ್ತು 'ಲಿಂಗಾಷ್ಟಕಂ' ಇವೂ ಸೇರಿ ಸಂಕಲಿತ ಮುದ್ರಣವಾಗಿದೆ.[104] ಇಲ್ಲಿರುವ 'ಶಿವಲಿಂಗತ್ರಿವಿಧಿ'ಯಲ್ಲಿ ೫೪ ತ್ರಿಪದಿಗಳಿವೆ. 'ಲಿಂಗಾಷ್ಟಕ'ವಂತೂ ಈ ಹೊತ್ತಿಗೂ ಕೂಡ ಬಹುಜನಪ್ರಿಯುವಾದ ಶಿವಲಿಂಗವನ್ನು ಕುರಿತ ಭಕ್ತಿ ಸ್ತೋತ್ರವಾಗಿದೆ.

ಇದೇ ರೀತಿ ಶಂಕರದೇವರ 'ಷಡಕ್ಷರೀ ರಗಳೆ'ಯನ್ನೂ; ಷಣ್ಮುಖಸ್ವಾಮಿಯ 'ನಿರಾಳಗುರು ಸ್ತೋತ್ರ' (ಭಾಮಿನಿಷಟ್ಪದಿ. ೨೫ ಪದ್ಯ) ವನ್ನೂ; ಮಳೆಯ ಮಲ್ಲೇಶನ ಅಂಕಿತದ 'ಗಣಾಷ್ಟಕ'

(ವೃತ್ತಛಂದಸ್ಸಿನ)ವನ್ನೂ ಹಾಗೂ ಕುಂತೂರು ಮಹಾಂತಸ್ವಾಮಿಗಳ ಸದ್ಗುರು ಶಾಂತಮಲ್ಲೇಶ್ವರಾಂಕಿತದ 'ಶಿವಾನುಭವಶಾಸ್ತ್ರ' (ವಚನಗ್ರಂಥ) ಇವುಗಳೆಲ್ಲವನ್ನೂ ಮಹಾಂತದೇಶಿಕರು ೧೮೮೫ರ ಸುಮಾರಿಗೆ ಸಂಪಾದಿಸಿಕೊಟ್ಟಿದ್ದಾಗಿ ತಿಳಿದುಬರುತ್ತದೆ.[105] ಇವರ ಮತ್ತೊಂದು ಮಹತ್ವದ ಸಂಪಾದಿತ ಕೃತಿ ಸ್ವಾದಿಸದಾಶಿವರಾಜನ 'ಪಂಚಶತನೀತಿ'. ೧೮೯೮ರಲ್ಲಿ ಪ್ರಕಟವಾಗಿರುವ ಈ ಕೃತಿಯ ಮುಖಪುಟದಲ್ಲಿ "...ಶ್ರೀ ಮದ್ರಾಜಾಧಿರಾಜ ಶ್ರೀಮನ್ನಾಳುವ ಮಹಾಪ್ರಭು ಸೋಂದಾಸದ್ಧರ್ಮ ಸಿಂಹಾಸನಾಧೀಶ್ವರ ಸವಾಯಿವೀರ ಸದಾಶಿವರಾಜೇಂದ್ರವಡೆಯರ್ ಬಹದೂರವರು ಲೋಕೋಪಕಾರಾರ್ಥವಾಗಿ ತಮ್ಮ ಪೂರ್ವಿಕರಾದ ಸದಾಶಿವರಾಜರು ರಚಿಸಿದ 'ಪಂಚಶತನೀತಿ'ಯೆಂಬೀ ಗ್ರಂಥವು ಬೆಂಗಳೂರು ತಿಪ್ಪಶೆಟ್ಟಿ ಮಠಾಧಿಪ ಗುರುಸಿದ್ಧಸ್ವಾಮಿ ಕರಕಮಲೋದ್ಭವ ಚರಮೂರ್ತಿ ಮಹಾಂತದೇಶಿಕೇಂದ್ರರಿಂದ ಪರಿಶೋಧಿಸಲ್ಪಟ್ಟಿತು"...[106] ಎಂಬ ಮಾತುಗಳಿವೆ. ಈ ಕಾವ್ಯವು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದ್ದು ಕೆಲವು ಕಂದಪದ್ಯಗಳನ್ನೂ ಒಳಗೊಂಡಿದೆ. ಒಟ್ಟಾರೆ ಮಹಾಂತದೇಶಿಕರು ಸಂಪಾದಿಸಿ ಪ್ರಕಟಿಸಿರುವ ಎಲ್ಲಾ ಗ್ರಂಥಗಳ ಒಳ ತಿರುಳೂ, ವೀರಶೈವಧರ್ಮದ ಸೂಕ್ಷ್ಮವಾದ ಧಾರ್ಮಿಕ ಆಚರಣೆಗಳಿಗೆ ಸಂಬಂಧಪಟ್ಟವೇ ಆಗಿವೆ.

ಮಹಾಂತ ದೇಶಿಕರು ಸಂಸ್ಕೃತಭಾಷಾ ಪ್ರವೀಣರಾಗಿದ್ದಂತೆ; ಕನ್ನಡ ದೇಶೀಯ ಪದ್ಧತಿಯಲ್ಲಿ ಪರಿಪೂರ್ಣ ಕವಿಗಳೂ ಆಗಿದ್ದುದು ನಾಡಿನ ಸಾಂಸ್ಕೃತಿಕ ಬದುಕಿಗೆ ವಿಶೇಷ ಕೊಡುಗೆಯನ್ನು ನೀಡಲು ಸಾಧ್ಯವಾಗಿತ್ತು. ಅವರಿಗಿದ್ದ ಉಭಯ ಭಾಷಾ ಪ್ರೌಢಿಮೆ, ಶಬ್ದಚಮತ್ಕಾರ, ಛಂದಸ್ಸು, ಅಲಂಕಾರ, ವ್ಯಾಕರಣಗಳ ಬಗೆಗಿನ ಅಗಾಧ ಪರಿಶ್ರಮ ಇವು ಯಾವುದೇ ಉದ್ದಾಮಕವಿಗಳಿಗೂ ಸರಿಸಾಟಿಯಾದುದಾಗಿತ್ತು. ಕೇವಲ ಶಾಸ್ತ್ರಪ್ರವೀಣರೂ ಮಾತ್ರವಾಗಿರದೆ, ಸರಳ ಹಾಗೂ ಸುಮಧುರ ಕವಿತಾಚತುರರೂ ಆಗಿದ್ದರೆಂಬುದು ಅವರ ಕಾವ್ಯಗಳಲ್ಲಿ ಎದ್ದುಕಾಣುವ ಸಂಗತಿಯಾಗಿದೆ. ಹೀಗೆ ವೀರಶೈವ ತತ್ವಸಾಹಿತ್ಯದಲ್ಲಿ ದಾರ್ಶನಿಕ ಲೋಕದ ಹರಿಕಾರರಾಗಿದ್ದ ಮಹಾಂತ ದೇಶಿಕರಿಗೆ, ಹಲವಾರು ಮಂದಿ ಉದ್ದಾಮಪಂಡಿತರೂ ಹಾಗೂ ಮಠಾಧೀಶರುಗಳೂ ಶಿಷ್ಯರಾಗಿದ್ದುದಾಗಿ ತಿಳಿದು ಬರುತ್ತದೆ. ಅವರುಗಳಲ್ಲಿ ಕನಕಪುರ ದೇಗುಲಮಠದ ಇಮ್ಮಡಿ ನಿರ್ವಾಣಸ್ವಾಮಿಗಳು, ರಾಮನಗರ ತಾಲ್ಲೂಕಿನ ರೇವಣಸಿದ್ದೇಶ್ವರ ಕ್ಷೇತ್ರದ ಪಟ್ಟದ ಚೆನ್ನಬಸವರಾಜಸ್ವಾಮಿಗಳು, ಮರುಳಾರಾಧ್ಯ ಸಂಪ್ರದಾಯದ ಬೆಂಗಳೂರಿನ ಸಿದ್ದಯ್ಯನವರು, ದೊಡ್ಡಬಳ್ಳಾಪುರದ ಶಿವಕಥಾಪ್ರವೀಣ ಶಿವದೇವ ಶಾಸ್ತ್ರಿಗಳು ಇವರೇ ಮೊದಲಾದವರು ಪ್ರಮುಖ ರಾಗಿದ್ದಾರೆ.[107] ಒಟ್ಟಾರೆ ಬೆಂಗಳೂರಿನ ವೀರಶೈವ ಮಠಗಳ ಪರವಾಗಿ ಸರ್ಪಭೂಷಣ ಶಿವಯೋಗಿಗಳವರದು ನಾಡಿನ ಶ್ರೇಷ್ಠ ವಾಗ್ಗೇಯಕಾರರ ಸಾಲಿನಲ್ಲಿ ಎದ್ದು ಕಾಣುವ ವ್ಯಕ್ತಿತ್ವವಾದರೆ; ಮಹಾಂತ ದೇಶಿಕರದು ಶ್ರೇಷ್ಠಯಕ್ಷಗಾನ ಕೃತಿಕಾರರ ಹಾಗೂ ಸ್ತೋತ್ರಕಾವ್ಯ ರಚನಾಕಾರರ ಸಾಲಿನಲ್ಲಿ ಉತ್ತಮ ಗತಿಯುಳ್ಳವರಾಗಿ ಗೋಚರಿಸುತ್ತಾರೆ.

### ೮.೩. ಗುರುವಣ್ಣದೇವರ ಮಠದ ನಂಜುಂಡಸ್ವಾಮಿಗಳ ಕೃತಿಗಳು (೧೮೮೮-೧೯೭೦)

ನಗರದ ಗುರುವಣ್ಣದೇವರಮಠದ ಗುರು ಪರಂಪರೆಯಲ್ಲಿ ಐದನೆಯ ಗುರುಗಳಾಗಿದ್ದ ನಂಜುಂಡಸ್ವಾಮಿಗಳು, ಈ ಶತಮಾನದ ಆದಿಭಾಗದಲ್ಲಿ ಬೆಂಗಳೂರಿನಲ್ಲಿದ್ದ ಪ್ರಮುಖ ವಿದ್ವಾಂಸರುಗಳಲ್ಲಿ ಒಬ್ಬರಾಗಿದ್ದರು. ಇವರೂ ಕೂಡ ಸರ್ಪಭೂಷಣರು ಹಾಗೂ ಮಹಾಂತದೇಶಿಕರಂತೆಯೇ ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಉತ್ತಮ ಪಾಂಡಿತ್ಯವುಳ್ಳವರಾಗಿದ್ದು, ಅಂದಿನ ವೀರಶೈವ ಧಾರ್ಮಿಕ ಸಾಹಿತ್ಯದ ಕ್ಷೇತ್ರಕ್ಕೆ ತಮ್ಮದೇ ಆದ ವಿನೂತನ ಪರಿಷ್ಕರಣ ಸೇವೆಯನ್ನು ಸಲ್ಲಿಸಿ ಗಮನಾರ್ಹರಾಗಿದ್ದಾರೆ. ಇವರು ಸಂಪಾದಿಸಿಕೊಟ್ಟ ಗ್ರಂಥಗಳು ೧. ವೀರಶೈವ ದಶಕರ್ಮ ವಿಧಿ, ೨. ಶಿವಸ್ತುತಿಮಣಿಮಾಲಾ, ೩. ಸಟೀಕಾ ರಾಜಶೇಖರವಿಳಾಸ, ೪. ಸಟೀಕಾ ಗರ್ಭಾಧಾನವಿಧಿ, ೫. ಸಟೀಕಾಪಾದಪೂಜಾವಿಧಿ, ೬. ಸಟೀಕಾ ವೀರಶೈವ ಅಂತ್ಯೇಷ್ಟಿವಿಧಿ, ೭. ಸಟೀಕಾ ನೂತನ ಗೃಹಪ್ರವೇಶವಿಧಿ, ೮. ಸಟೀಕಾ ಶಿವಪೂಜಾವಿಧಿ. ೯. ಶಿವಾನುಭವಶಾಸ್ತ್ರ, ೧೦. ಸಟೀಕಾ ವೀರಶೈವ ಕೌಸ್ತುಭ, ೧೧. ಸಟೀಕಾ ವೀರ ಮಾಹೇಶ್ವರ ವಿಜಯ. ೧೯೦೨ ರಿಂದ ೧೯೧೮ರ

ಅವಧಿಯೊಳಗೆ ಪರಿಷ್ಕೃತವಾದ ಈ ಕೃತಿಗಳೆಲ್ಲಾ ಸಂಪಾದಿತ ಕೃತಿಗಳೇ ಆಗಿದ್ದು ಸಟೀಕಿನೊಂದಿಗೆ ಮೂಡಿಬಂದಿವೆ.[108] ಇವುಗಳಲ್ಲಿ ರಾಜಶೇಖರವಿಳಾಸ ಹಾಗೂ ಶಿವಾನುಭವ ಶಾಸ್ತ್ರ ಇವೆರಡು ಕೃತಿಗಳು ಮಾತ್ರ ಕನ್ನಡ ಗ್ರಂಥಗಳಾಗಿದ್ದು, ಉಳಿದ ಒಂಬತ್ತು ಗ್ರಂಥಗಳು ಸಂಸ್ಕೃತ ಭಾಷಾ ಗ್ರಂಥಗಳಾಗಿವೆ. ಇವುಗಳಲ್ಲಿ ಕೆಲವು ಗ್ರಂಥಗಳನ್ನು ಬಿ.ಯಂ. ಮಹಾಂತಶಾಸ್ತ್ರಿಗಳ ಸಹಭಾಗಿತ್ವ ದೊಂದಿಗೆ ಕನ್ನಡ ಸಟೀಕಿನೊಂದಿಗೆ ಸಂಪಾದಿಸಿ ಕೊಟ್ಟಿದ್ದಾರೆ.[109]

ಲಭ್ಯವಿರುವ ಕೃತಿಗಳಲ್ಲಿ ನಂಜುಂಡಸ್ವಾಮಿಗಳ 'ಶಿವಸ್ತುತಿಮಣಿಮಾಲಾ' ಗ್ರಂಥವು ೧೯೦೫ರಲ್ಲಿ ಮುದ್ರಣವಾಗಿದ್ದು, ಬೆಂಗಳೂರಿನ ವಾಗೀಶ್ವರೀ ಮುದ್ರಾಕ್ಷರ ಶಾಲೆಯಿಂದ ಪ್ರಕಟವಾಗಿದೆ.[110] ಇದರ ಮುಖಪುಟದಲ್ಲಿ "ಶ್ರೀಮನ್ನಿಖಿಲ ನಿಗಮಾಗಮ ಪುರಾಣ ಪ್ರಥಿತ ಷಟ್‌ಸ್ಥಲ ಸ್ಥಾಪನಾಚಾರ್ಯವರ್ಯ ಪ್ರಭುದೇವ ಪರಂಪರಾಗತ ಬೆಂಗಳೂರು ಗುರುವಣ್ಣದೇವರ ಮಠಾಧ್ಯಕ್ಷ ಮಹಾಂತದೇಶಿಕೇಂದ್ರ ಕರಸಂಜಾತ ನಂಜುಂಡಸ್ವಾಮಿಯಿಂದ 'ಶಿವಸ್ತುತಿ ಮಣಿಮಾಲಾ' ಎಂಬ ಗ್ರಂಥವು ಸಂಗ್ರಹಿಸಿ ಪರಿಶೋಧಿಸಲ್ಪಟ್ಟು''ದಾಗಿ ವಿವರಗಳಿವೆ. ೧೬೦ ಪುಟಗಳಷ್ಟು ವಿಸ್ತೃತವಾಗಿರುವ ಈ ಗ್ರಂಥದ ಮೊದಲ ಭಾಗದಲ್ಲಿ ಸಂಸ್ಕೃತದಲ್ಲಿ ರಚಿತ ವಾಗಿರುವ ೬೪ ವಿಭಿನ್ನ ಶಿವಸ್ತುತಿಗಳಿವೆ. 'ಭೃಂಗಿರಿಟಿಸ್ತೋತ್ರ'ದಿಂದ ಆರಂಭವಾಗಿ 'ಕಾಳಿದಾಸಕೃತ ಅಂಬಾಸ್ತೋತ್ರ'ದ ವರೆಗೆ ವಿವಿಧ ಛಂದೋಪ್ರಕಾರಗಳಲ್ಲಿ ರಚಿತವಾಗಿರುವ ಈ ಶಿವಸ್ತುತಿಗಳಿಗೆ ಕನ್ನಡದ ಟೀಕು ಇರುವುದಿಲ್ಲ. ಗ್ರಂಥದ ಎರಡನೆಯ ಭಾಗದಲ್ಲಿ ಮಹಾದೇವನನ್ನು ಕುರಿತು ಸ್ತುತಿಸುವ ೩೬ ಕನ್ನಡದ 'ಮಂಗಳಾರತಿ ಪದ'ಗಳಿದ್ದು, ಇವು ರಾಗ ತಾಳಗಳಿಗೆ ಅನುಗುಣವಾಗಿದ್ದು ಪಲ್ಲವಿ ಅನುಪಲ್ಲವಿಗಳನ್ನು ಒಳಗೊಂಡು ರಚಿತವಾಗಿವೆ. ಒಟ್ಟಾರೆ ಈ ಕೃತಿಯು ಪರಮೇಶ್ವರನನ್ನು ಕುರಿತ ಸರಣೀಕೃತ ಸ್ತೋತ್ರ ಹಾಗೂ ಮಂಗಳಾರತಿ ಪದಗಳನ್ನು ಒಳಗೊಂಡಿರುವ ಕಾರಣ ಈ ಸಂಕಲಿತ ಕೃತಿಗೆ, 'ಶಿವಸ್ತುತಿ ಮಣಿಮಾಲ' ಎಂಬ ಹೆಸರಿಟ್ಟಿರುವುದು ಅನ್ವರ್ಥವಾಗಿಯೇ ಇದೆ.

ಇವರ 'ರಾಜಶೇಖರ ವಿಳಾಸವು' ೧೯೦೭ರಲ್ಲಿ ಪ್ರಕಟವಾಗಿದ್ದು, ಇದು ಷಡಕ್ಷರ ಕವಿಯ ರಾಜಶೇಖರವಿಳಾಸದ ಹದಿಮೂರು ಮತ್ತು ಹದಿನಾಲ್ಕನೆಯ ಆಶ್ವಾಸಗಳಿಗೆ ಪ್ರತಿಪದ ಅರ್ಥ ಹಾಗೂ ಭಾವಾರ್ಥಗಳನ್ನು ಒಳಗೊಂಡಿದೆ.[111] ಕಾವ್ಯಾರಂಭಕ್ಕೆ ಮುನ್ನ ಇದೇ ಕಾವ್ಯದ ಹನ್ನೆರಡು ಮತ್ತು ಹದಿಮೂರನೆ ಆಶ್ವಾಸಗಳಿಗೂ ಸಟೀಕಾ ತಾತ್ಪರ್ಯವನ್ನು ಬರೆಯುವುದಾಗಿ ಪರಿಷ್ಕರಣಕಾರರೇ ಸೂಚಿಸಿದ್ದಾರಾದರೂ ಆ ಗ್ರಂಥ ಪ್ರಕಟವಾದ ಬಗೆಗೆ ಮಾಹಿತಿಗಳಿಲ್ಲ. ಇವರ ಇನ್ನೊಂದು ಸಂಪಾದಿತ ಕೃತಿ 'ಪಾದಪೂಜಾವಿಧಿಯಃ'ವು ೧೯೧೪ರಲ್ಲಿ ಪ್ರಕಟವಾಗಿದ್ದು[112] ಈ ಕೃತಿಯನ್ನು ನಂಜುಂಡ ಸ್ವಾಮಿಗಳು, ಬಿ.ಯಂ. ಮಹಾಂತಶಾಸ್ತ್ರಿಗಳ ಸಹಯೋಗದೊಂದಿಗೆ ಪರಿಷ್ಕರಿಸಿಕೊಟ್ಟಿದ್ದಾರೆ. ೪೬ ಪುಟಗಳಷ್ಟಿರುವ ಈ ಸಂಸ್ಕೃತಶಾಸ್ತ್ರ ಕೃತಿಗೆ ಪ್ರತಿಪುಟದಲ್ಲೂ ಕನ್ನಡದ ಟೀಕನ್ನೂ ಬರೆಯಲಾಗಿದೆ. ಕೃತಿಯಲ್ಲಿ ಪ್ರಮುಖವಾಗಿ ಷೋಡಶೋಪಚಾರ, ದೇವೋಪಚಾರ, ರಾಜೋಪಚಾರ ಇವುಗಳ ಕ್ರಮಾಗತ ಸಪ್ರಮಾಣ ವಿಚಾರಗಳನ್ನು ಪರಿಚಯಿಸಲಾಗಿದೆ.

ನಂಜುಂಡಸ್ವಾಮಿಗಳು ಮತ್ತು ಬಿ.ಯಂ. ಮಹಾಂತಶಾಸ್ತ್ರಿಗಳು ಇಬ್ಬರೂ ಕೂಡಿ ಪರಿಷ್ಕರಿಸಿರುವ "ಸಟೀಕಾ ಗರ್ಭಾಧಾನಾದಿ ವಿಧಿಯಃ" ಎಂಬ ಮತ್ತೊಂದು ಸಂಸ್ಕೃತ ಗ್ರಂಥವು ೧೯೧೮ರ ವೇಳೆಗೆ ಎರಡನೆಯ ಮುದ್ರಣವನ್ನು ಕಂಡಿದೆ.[113] ಗ್ರಂಥದ ಮುಖಪುಟದಲ್ಲಿ ಕೆಳದಿ ಸಂಸ್ಥಾನದ ಭೂಪಾಲ ಬಸವ ನೃಪಾಲನ ಆಸ್ಥಾನದ ಮೌನಪ್ಪನೆಂಬ ವಿದ್ವಾಂಸನು ರಚಿಸಿದ್ದ 'ವೀರಶೈವಾಚಾರಕೌಸ್ತುಭ'ದೊಳಗಣ 'ಸಟೀಕಾಗರ್ಭಾಧಾನಾವಿಧಿಯಃ'ವನ್ನು ಎಂಬುದಾಗಿ ಮೂಲಕೃತಿಕಾರನ ಪ್ರಸ್ತಾಪವಾಗಿದೆ. ವೀರಶೈವ ಮತಾನುಸಾರ 'ದಶಕರ್ಮ'ಗಳ ಪೈಕಿ ವಿವಾಹ ದೀಕ್ಷಾವಿಧಿಗಳನ್ನು ಬಿಟ್ಟು ಉಳಿದ ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಉಪನಿಷ್ಕ್ರಮಣ, ಚೌಲ ಈ ಎಂಟೂ ವಿಧಿಗಳನ್ನೂ; ವಾತುಲಾಗಮೋಕ್ತ ಪುತ್ರ ಸ್ವೀಕಾರವಿಧಿ, ನವಗ್ರಹವಿಧಿ, ನವಗ್ರಹದಾನ, ಮೃತ್ಯುಂಜಯದಾನ, ದಶದಾನ ಇವುಗಳ ಮಂತ್ರಗಳನ್ನೂ; ಜೊತೆಗೆ ಕೆಲವು ಆಶೀರ್ವಾದ ಮಂತ್ರಗಳನ್ನೂ ಇಲ್ಲಿ ಕೊಡಲಾಗಿದೆ. ಕೃತಿಯ ಉದ್ದಕ್ಕೂ ಸಂಸ್ಕೃತದ ಶಾಸ್ತ್ರ ಭಾಗಕ್ಕೆ ಸಂಕ್ಷಿಪ್ತ ಕನ್ನಡ ಟೀಕೆಯನ್ನು ಅಳವಡಿಸಲಾಗಿದೆ.

ನಂಜುಂಡಸ್ವಾಮಿಗಳ ಇನ್ನುಳಿದ ಕೃತಿಗಳು ಲಭ್ಯವಾಗಿಲ್ಲವಾದರೂ-ಇವರ 'ಸಟೀಕಾ ದಶಕರ್ಮವಿಧಿ'ಯಲ್ಲಿ ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಿಷ್ಕ್ರಮಣ, ಪುತ್ರಸ್ವೀಕಾರ, ನವಗ್ರಹಪೂಜಾ, ದಶದಾನಮಂತ್ರ, ಆಶೀರ್ವಾದ ಮಂತ್ರಗಳು ಸೇರಿರುವುದಾಗಿಯೂ; 'ಸಟೀಕಾ ನೂತನ ಗೃಹಪ್ರವೇಶವಿಧಿ'ಯಲ್ಲಿ ನೂತನ ಗೃಹಪ್ರವೇಶ, ಪಟ್ಟಾಧಿಕಾರ, ಲಿಂಗಧಾರಣೆ ಈ ಮೂರು ವಿಧಿಗಳನ್ನು ವಿವರಿಸಿರುವುದಾಗಿಯೂ; 'ಸಟೀಕಾ ವೀರಶೈವ ಅಂತ್ಯೇಷ್ಟಿ ವಿಧಿ'ಯಲ್ಲಿ ಸಮಾಧಿ ತೆಗೆಯುವ ಲಕ್ಷಣವು, ಸಮಾಧಿಗೆ ಪ್ರಣವಸಹಿತ ತಗಡು ಸಂಬಂಧ ಮಾಡುವ ಕ್ರಮ, ಪ್ರಾಣೋತ್ಕ್ರಮಣ ಕಾಲದಲ್ಲಿ ನಡೆಸುವ ರೀತಿಯು, ಮೃತಪಟ್ಟ ಮೇಲೆ ಹತ್ತು ದಿವಸಗಳವರೆಗೆ ನಡೆಸುವ ವಿಧಿ-ವಿಧಾನಗಳನ್ನು ಒಳಗೊಂಡಿರುವುದಾಗಿಯೂ; 'ಶಿವಾನುಭವಶಾಸ್ತ್ರ'ವು ಶ್ರೀ ಚನ್ನಬಸವದೇವರಿಂದ ಮುಮುಕ್ಷುಗಳಿಗೆ ಸುಲಭವಾಗಿ ಲಿಂಗಾಂಗಸಾಮರಸ್ಯ ಜ್ಞಾನವು ಹುಟ್ಟುವ ಹಾಗೆ ಕನ್ನಡ ವಚನ ರೂಪವಾಗಿ ರಚಿಸಲ್ಪಟ್ಟಿರುವುದಾಗಿ ತಿಳಿದುಬರುತ್ತದೆ.[114] ಇವರ 'ಶಿವಪೂಜಾವಿಧಿ', 'ವೀರಶೈವ ಕೌಸ್ತುಭ', 'ಸಟೀಕ ವೀರ ಮಾಹೇಶ್ವರ ವಿಜಯ' ಈ ಕೃತಿಗಳೂ ಕೂಡ ೧೯೧೦ರ ವೇಳೆಗೆ ಪ್ರಕಟವಾಗಿದ್ದುದಾಗಿ ತಿಳಿದುಬರುತ್ತದೆ.[115]

ಒಟ್ಟಾರೆ ನಂಜುಂಡಸ್ವಾಮಿಗಳು ಪರಿಷ್ಕರಿಸಿಕೊಟ್ಟಿರುವ ಹನ್ನೊಂದು ಗ್ರಂಥಗಳಲ್ಲಿ 'ರಾಜಶೇಖರವಿಳಾಸವು' ಹಾಗೂ 'ವೀರಮಾಹೇಶ್ವರವಿಜಯವು' ಇವೆರಡೂ ಕೃತಿಗಳೂ ವೀರಶೈವ ಸಾಹಿತ್ಯದ ಪೌರಾಣಿಕ ಸನ್ನಿವೇಶಗಳಿಗೆ ಸಂಬಂಧಿಸಿದ ಸಟೀಕ ಗ್ರಂಥಗಳಾದರೆ; ಉಳಿದುವೆಲ್ಲಾ ಕೃತಿಗಳೂ ವೀರಶೈವ ಧರ್ಮದ ಆಚರಣೆಗೆ ಸಂಬಂಧಿಸಿದ ಧಾರ್ಮಿಕವಿಧಿ-ವಿಧಾನಗಳನ್ನು ಒಳಗೊಂಡ ತತ್ವ ಸಾಹಿತ್ಯದ ಸಟೀಕ ಗ್ರಂಥಗಳಾಗಿವೆ. ಈ ಶತಮಾನದ ಆರಂಭದ ದಿನಗಳಲ್ಲಿ ವೀರಶೈವ ಧಾರ್ಮಿಕ ಸಾಹಿತ್ಯದ ಶ್ರೇಷ್ಠ ಪರಿಷ್ಕರಣಕಾರರೆಂದೇ ಗುರುತಿಸಲ್ಪಟ್ಟಿದ್ದ ನಂಜುಂಡಸ್ವಾಮಿಗಳ ಅಗಾಧವಾದ ಸಂಸ್ಕೃತ ಸಾಹಿತ್ಯದ ಜ್ಞಾನ ಹಾಗೂ ಅಷ್ಟೇ ಪ್ರಖರವಾಗಿದ್ದ ಕನ್ನಡದ ಪ್ರಜ್ಞೆ ಇವೆರಡರ ಸಮ್ಮಿಶ್ರ ಪ್ರೌಢಿಮೆಯು ಅವರ ಸಂಪಾದಿತ ಕೃತಿಗಳಲ್ಲಿ ಎದ್ದು ಕಾಣುತ್ತದೆ.

### ೮.೪. ಇತರೆ ಮಠಾಧೀಶರ ಸಾಹಿತ್ಯ ಸೇವೆ

ಬೆಂಗಳೂರಿನ ವೀರಶೈವ ಮಠಗಳಿಗೆ ಸಂಬಂಧಿಸಿದಂತೆ ಇನ್ನೂ ಹಲವಾರು ಮಠಾಧೀಶರುಗಳು ತಮ್ಮದೇ ಆದ ವಿಶಿಷ್ಟರೀತಿಯ ಸಾಹಿತ್ಯಸೇವೆ ಮಾಡಿರುವುದನ್ನು ಗುರುತಿಸಬಹುದಾಗಿದೆ. ಅವರುಗಳಲ್ಲಿ ಪ್ರಮುಖವಾಗಿ -

#### ೧) ಮುದ್ದುವೀರಸ್ವಾಮಿಗಳು

'ಬೆಂಗಳೂರಿನ ಮುದ್ದುವೀರಸ್ವಾಮಿ'[116]ಗಳೆಂದೇ ಪ್ರಸಿದ್ಧರಾಗಿದ್ದ[117] ಇವರನ್ನು ಕವಿಚರಿತ್ರಕಾರರು- 'ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಈತನ ಗ್ರಂಥ'ದ ಒಂದು ಪ್ರತಿಯು ೧೭೪೪ರಲ್ಲಿ ಬರೆದಿರುವುದಾಗಿ ತಿಳಿಯುವುದರಿಂದ ಇವನು ಆ ಕಾಲಕ್ಕೆ ಹಿಂದೆ ಸುಮಾರು ಕ್ರಿ.ಶ. ೧೭೦೦ರಲ್ಲಿ ಇದ್ದಿರಬಹುದೆಂದು ಊಹಿಸಬಹುದು. ಈತನ ವಚನಗಳಲ್ಲಿ ''ಶಾಂಭವಿ'' ಎಂಬ ಅಂಕಿತವಿದೆ'[118] ಎಂಬ ಇತ್ಯಾದಿ ಮಾಹಿತಿಗಳನ್ನು ಒದಗಿಸಿಕೊಟ್ಟಿದ್ದಾರೆ. ಆದರೆ ಇತ್ತೀಚಿನ ಶೋಧಗಳ ಪ್ರಕಾರ - 'ಮುದ್ದುವೀರಸ್ವಾಮಿಗಳಿಗೆ ಮುದ್ವೀರಯೋಗಿ, ಮುದ್ವೀರಾಖ್ಯ, ಮದ್ವೀರೇಶ, ಮುದ್ವೀರ ದೇಶಿಕೋತ್ತಮ ಇವೇ ಮೊದಲಾದ ಹೆಸರುಗಳು ಇದ್ದುದಾಗಿಯೂ; ಮೊದಲು ಬೆಂಗಳೂರಿನವರೇ ಆಗಿದ್ದ ಇವರು ಮುಂದೆ ಹಾಗಲವಾಡಿಗೆ ಹೋಗಿ ಅಲ್ಲಿ ಇಮ್ಮಡಿ ಮುದಿಯಪ್ಪನಾಯಕನ ರಾಜಗುರುವಾಗಿ ಆತನಿಗೆ ತತ್ವಜ್ಞಾನೋಪದೇಶ ಮಾಡಿದುದಾಗಿಯೂ; ತೋಂಟದ ಸಿದ್ಧಲಿಂಗೇಶ್ವರ ಪರಂಪರೆಗೆ ಸೇರಿದ ಇವರ ಕಾಲವನ್ನು ೧೭೦೦ ರಿಂದ ೧೭೭೦ ಎಂಬುದಾಗಿಯೂ ಗುರುತಿಸಲಾಗಿದೆ.[119]

ಮುದ್ವೀರಸ್ವಾಮಿಗಳು ಕನ್ನಡದಲ್ಲಿ ವಚನ, ಸ್ವರವಚನ ಹಾಗೂ 'ಶಿವತತ್ತ್ವ ಸುಜ್ಞಾನ ಪ್ರದೀಪಿಕೆ' ಎಂಬ ಶಾಸ್ತ್ರ ಗ್ರಂಥವನ್ನೂ ಬರೆದಿರುವುದಾಗಿ ತಿಳಿದುಬರುತ್ತದೆ.[120] ಸಿಕ್ಕಿರುವ ಇವರ ಏಕೈಕ ವಚನವನ್ನು ಸಮಗ್ರ ವಚನ ಸಂಪುಟ (೧೩)ದಲ್ಲಿ ಸಂಗ್ರಹಿಸಿಕೊಡಲಾಗಿದೆ.[121] 'ಮುದ್ದುವೀರಪ್ರಿಯ ಸಂಗಮೇಶ್ವರ' ಎಂಬ ಅಂಕಿತವುಳ್ಳ ಈ ವಚನದಲ್ಲಿ ಶಾಂಭವಿಯೋಗದ ಸ್ವರೂಪವನ್ನು ತಿಳಿಸಿಕೊಡುವುದೇ ಇದರ ಮುಖ್ಯ ಉದ್ದೇಶವಾಗಿದೆ. ಆದ್ದರಿಂದ ಈ ವಚನವನ್ನು ಇಲ್ಲಿ 'ಶಾಂಭವೀನಿರ್ಣಯದ

ವಚನ'ವೆಂದೇ ಗುರುತಿಸಲಾಗಿದೆ. ಮುದ್ವೀರಸ್ವಾಮಿಗಳ ೧೧೮ ಸ್ವರವಚನಗಳನ್ನು ಒಂದೆಡೆ ಪ್ರಥಮ ಬಾರಿಗೆ ಸಂಗ್ರಹಿಸಿ ಕೊಟ್ಟವರು ವೀರಣ್ಣ ರಾಜೂರ ಅವರು.[122] 'ಗುರುಸಂಗ' ಎಂಬ ಅಂಕಿತವುಳ್ಳ ಈ ಸ್ವರವಚನಗಳಲ್ಲಿ ಲೋಕದ ವಿಡಂಬನೆಯೊಂದಿಗೆ ತತ್ತ್ವಬೋಧನೆ ಹಾಗೂ ಶಿವಯೋಗ ಸಿದ್ಧಿಗಳನ್ನು ಒಟ್ಟಿಗೆ ಪ್ರತಿಪಾದಿಸಲಾಗಿದೆ. ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಹಾಗೂ ಶಿವಯೋಗ ಇವೇ ಮೊದಲಾದ ವೀರಶೈವ ಸೈದ್ಧಾಂತಿಕ ತತ್ತ್ವಗಳ ಬಗೆಗೆ ಇಲ್ಲಿ ವಿಶ್ಲೇಷಣೆಗಳಿವೆ. ಬೆಡಗಿನ ನುಡಿಗಟ್ಟುಗಳಿಂದ ಒಡಗೂಡಿರುವ ಈ ಸ್ವರವಚನಗಳಿಗೆ ರಾಗದ ಸೂಚನೆಯಿದ್ದು ಇವು ಸ್ತೋತ್ರ, ಜೋಗುಳ, ಸುವ್ವಿ, ಪರಾಕು, ಮಂಗಳಾರತಿ ಇವೇ ಮೊದಲಾದ ಪದ್ಯ ಪ್ರಕಾರಗಳಲ್ಲಿ ಮೂಡಿಬಂದಿವೆ.

ಇವರ ಏಕೈಕ ಕೃತಿಕುಸುಮವಾದ 'ಶಿವತತ್ತ್ವಸುಜ್ಞಾನ ಪ್ರದೀಪಿಕೆ'ಯ ಹೆಸರನ್ನು ಮಹಾಂತಯತಿವರನ ಶಿಷ್ಯನಾಗಿದ್ದ ಚನ್ನವೀರನ 'ಮುದ್ವೀರತಾರಾವಳಿ'ಯಲ್ಲಿ ಪ್ರಸ್ತಾಪಿಸಲಾಗಿದೆ.[123] ಮೇಲ್ಕಂಡ ಗ್ರಂಥದಲ್ಲಿ ಒಟ್ಟು ನಾಲ್ಕು ಅಧ್ಯಾಯಗಳಿದ್ದು ವಾರ್ಧಕಷಟ್ಪದಿಯಲ್ಲಿ ರಚಿತವಾಗಿರುವ ೫೦೦ ಪದ್ಯಗಳಿವೆ. ನಡುನಡುವೆ ಈ ಪದ್ಯಗಳ ಉಕ್ತಿಗೆ ಪೋಷಕವಾಗಿ ಸಂಸ್ಕೃತದ ೪೪೫ ಸಾಕ್ಷಿ ಶ್ಲೋಕಗಳಿವೆ. ಇಲ್ಲಿನ ನಾಲ್ಕೂ ಅಧ್ಯಾಯಗಳನ್ನು ಅನುಕ್ರಮವಾಗಿ ಜ್ಞಾನಪಾದ, ಕ್ರಿಯಾಪಾದ, ಚರ್ಯಾಪಾದ ಹಾಗೂ ಯೋಗಪಾದಗಳೆಂದು ವಿಂಗಡಿಸಿಕೊಳ್ಳಲಾಗಿದೆ. ಪ್ರಥಮ ಪಾದದಲ್ಲಿ ತತ್ತ್ವದ ಸ್ವರೂಪವನ್ನು ಕುರಿತಾದ ವಿಚಾರಗಳಿದ್ದರೆ, ಮುಂದಿನ ಮೂರು ಪಾದಗಳಲ್ಲಿ ಸಮಯ ವಿಚಾರ, ಷಟ್‌ಸ್ಥಲ ಬ್ರಹ್ಮೋಪದೇಶ ಹಾಗೂ ಲಿಂಗಾಂಗ ಸಾಮರಸ್ಯಗಳನ್ನು ಕುರಿತಾದ ವಿಚಾರಗಳ ಮಂಡನೆ ಮಾಡಲಾಗಿದೆ. ಕೃತಿಯ ಆರಂಭದ ಹಾಗೂ ಅಂತ್ಯದ ಪದ್ಯಗಳಲ್ಲಿ ''ಗುರುಸಂಗಮೇಶ್ವರ'' ಎಂಬ ತಮ್ಮ ಇಷ್ಟದೈವವನ್ನು ಕುರಿತಾದ ಅಂಕಿತವನ್ನು ಬಳಸಲಾಗಿದೆ.[124] ಗ್ರಂಥಕರ್ತರೇ ಹೇಳಿಕೊಂಡಿರುವಂತೆ ''ಸೋಸಲೆ ರೇವಣಾರಾಧ್ಯನು ಸಂಸ್ಕೃತದಲ್ಲಿ ರಚಿಸಿದ್ದ 'ಷಟ್‌ಸ್ಥಲ ಬ್ರಹ್ಮದೀಪಿಕೆ' ಎಂಬ ಗ್ರಂಥ'ದ ಕನ್ನಡ ಸಾರಸಂಗ್ರಹರೂಪವೇ 'ಶಿವತತ್ತ್ವಸುಜ್ಞಾನಪ್ರದೀಪಿಕೆ' ಎಂಬ ವಿಚಾರವು ಸ್ಪಷ್ಟವಾಗಿದೆ.[125] ಕೃತಿಯ ಉದ್ದಕ್ಕೂ ತತ್ತ್ವ ಪ್ರತಿಪಾದನೆಗೆ ಅನುಗುಣವಾಗಿ ವೇದ, ಆಗಮ, ಉಪನಿಷತ್ತುಗಳ ಶ್ಲೋಕದ ತುಣುಕುಗಳನ್ನು ಉದಾಹರಿಸುತ್ತಾ, ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಸರಳ ಷಟ್ಪದಿ ಶೈಲಿಯಲ್ಲಿ ವಿಸ್ತರಿಸಿರುವ ಕ್ರಮ ಆಸ್ವಾದಯೋಗ್ಯವಾಗಿದೆ. ಈ ಹಿನ್ನೆಲೆಯಲ್ಲಿ ವೀರಶೈವ ತತ್ತ್ವಪ್ರತಿಪಾದನೆಯೇ ಪ್ರಧಾನವಾಗುಳ್ಳ ಕೃತಿಗಳ ಸಾಲಿನಲ್ಲಿ ಮುದ್ವೀರಸ್ವಾಮಿಗಳ 'ಶಿವತತ್ತ್ವಸುಜ್ಞಾನ ಪ್ರದೀಪಿಕೆ'ಗೆ ಮಹತ್ವದ ಸ್ಥಾನವಿದೆ. ಒಟ್ಟಾರೆ ಇವರ ಸಮಗ್ರ ಸಾಹಿತ್ಯ ಕೃಷಿಯನ್ನು ಅವಲೋಕಿಸಿದಾಗ ಮುದ್ವೀರಸ್ವಾಮಿಗಳು ವೇದಾಗಮಾಂತರ್ಗತ ಸಕಲ ತತ್ತ್ವಶಾಸ್ತ್ರ ಸಿದ್ಧಾಂತ ಪ್ರವೀಣರೂ; ಸಕಲ ಪುರಾತನರು ಹಾಗೂ ಪ್ರಮಥರು (ವಚನಕಾರರು)ಗಳ ಧರ್ಮ ಜಿಜ್ಞಾಸೆಗಳನ್ನು ಅರಿತವರೂ; ವೀರಶೈವದ ಸಾರ ಸ್ವರೂಪವಾದ ಷಟ್‌ಸ್ಥಲ ಸಿದ್ಧಾಂತವನ್ನು ಅರಗಿಸಿಕೊಂಡು ಷಟ್‌ಸ್ಥಲ ಸ್ಥಾಪನಾಚಾರ್ಯರೆಂಬ ಬಿರುದನ್ನು ಹೊತ್ತ ಮಹಾನುಭಾವಿ ಶಿವಯೋಗಿಯೂ ಆಗಿದ್ದರೆಂದರೆ ಉತ್ಪ್ರೇಕ್ಷೆಯಾಗಲಾರದು.

### ೨. ಬೇಲಿಮಠದ ಮರಿಸಿದ್ಧಲಿಂಗರು

ಇವರನ್ನು ಬೇಲಿಮಠದ ದಾಖಲೆಗಳಲ್ಲಿ ಬಸವಲಿಂಗಸ್ವಾಮಿಗಳೆಂದು ಸಂಬೋಧಿಸಲಾಗಿದೆ. ಇವರ ಕಾಲ ೧೭೬೦-೧೮೨೫. ಸದರಿ ಮಠದಲ್ಲಿ ಅವರೇ ನಿರ್ಮಿಸಿರುವ ಶಾಸನ (೧೭೬೧)ದ ಪ್ರಕಾರ, ಹೊಸಕೋಟೆಯ ಮಹಾಂತಸ್ವಾಮಿಗಳ ಪರಮಾಪ್ತ ಶಿಷ್ಯರೆಂಬುದು ವ್ಯಕ್ತವಾಗುತ್ತದೆ.[126] ತಮ್ಮ 'ಮಹಂತಿನತಾರಾವಳಿ'ಯಲ್ಲೂ ಕೂಡ ಈ ಗುರು-ಶಿಷ್ಯರಿಬ್ಬರ ಬಾಂಧವ್ಯ ಎದ್ದು ಕಾಣುತ್ತದೆ.[127] ನಗರದ ಕೆಂಪಿನಸಮಯದ ಬೇಲಿಮಠದ ಗುರುಪರಂಪರೆಯಲ್ಲಿ ಮುಖ್ಯ ಚರಂತಿಗೆಯವರಾಗಿ ನೇಮಕವಾದಮೇಲೆ 'ಬಸವಲಿಂಗಸ್ವಾಮಿ'ಗಳೆಂಬ ಅಭಿಧಾನವನ್ನು ಪಡೆದ ಮರಿಸಿದ್ಧಲಿಂಗರು ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಇವರ 'ಮಾಲಾಟೀಕೆ'ಯಲ್ಲಿ ತಮ್ಮ ಗುರುಗಳನ್ನು -

> ''ವರ ಹೊಸಕೋಟೆಯ ಮಹಂತೇ
> ಶ್ವರನನುಭವದೊಳಗೆ ಪೇಳ್ದ ಶಬ್ದಸಮೂಹನ
> ಪರಿವಿಡಿಗಳಿಂದ ಸೇರಿಸಿ
> ಬರೆದೆ ಮರಿಸಿದ್ಧಲಿಂಗದೇಶಿಕದೇವಂ''[128]

ಎಂಬುದಾಗಿಯೂ; ಹಾಗೆಯೇ ಇವರ 'ಏಕೋತ್ತರ ಶತಸ್ಥಲ ವ್ಯಾಖ್ಯಾನ'ದಲ್ಲಿ...

"ಶಿವಾನುಭಾವಿಗಳಾದ ಹೊಸಕೋಟೆಯ
ಮಹಾಂತಸ್ವಾಮಿಯವರ ವಂಶೋದ್ಭವ
ರಾದ ಮರಿಸಿದ್ಧಲಿಂಗಯ್ಯನವರು
ಬರೆಸಿದ ಸ್ಥಲದ ವ್ಯಾಖ್ಯಾನದ ಯಥಾಪ್ರತಿಯು"[129]

ಎಂಬುದಾಗಿ ತುಂಬು ಗೌರವದಿಂದ ಸ್ಮರಿಸಿದ್ದಾರೆ.

ಕವಿಚರಿತ್ರಕಾರರು ಉಲ್ಲೇಖ ಮಾಡಿರುವ ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿ (ಕಾಲ ಕ್ರಿ.ಶ. ೧೭೦೦) ಯೇ [130] ಈ ಮರಿಸಿದ್ಧಲಿಂಗ ದೇಶಿಕನಿರಬೇಕೆಂದು ಎಸ್. ಶಿವಣ್ಣನವರು ಅಭಿಪ್ರಾಯ ಪಟ್ಟಿದ್ದಾರೆ. ಜೊತೆಗೆ 'ಅಷ್ಟಾವರಣ ಪ್ರಶಸ್ತಿ' ಹಾಗೂ 'ಭಾವಚಿಂತಾರತ್ನಟೀಕೆ' ಎಂಬ ಇನ್ನೆರಡು ಕೃತಿಗಳನ್ನೂ ಇವರ ಹೆಸರಿನಲ್ಲಿಯೇ ಉಲ್ಲೇಖಿಸಿರುತ್ತಾರೆ.[131] ಈ ಹಿನ್ನೆಲೆಯಲ್ಲಿ ಬೆಂಗಳೂರಿನ ಬೇಲಿಮಠದ ಮರಿಸಿದ್ಧಲಿಂಗದೇಶಿಕರು 'ಮಹಂತಿನತಾರಾವಳಿ', 'ಮಾಲಾಟೀಕೆ', 'ಏಕೋತ್ತರ ಶತಸ್ಥಲ ವ್ಯಾಖ್ಯಾನ', 'ಅಷ್ಟಾವರಣ ಪ್ರಶಸ್ತಿ', 'ಭಾವಚಿಂತಾರತ್ನಟೀಕೆ' ಇವೇ ಮೊದಲಾದ ಕೃತಿಗಳನ್ನು ರಚಿಸಿರುವುದಾಗಿ [132] ತಿಳಿದುಬರುತ್ತದೆ. ಲಭ್ಯವಿರುವ ಇವರ 'ಮಹಂತಿನತಾರಾವಳಿ'ಯಲ್ಲಿ[133] ಪ್ರಾರಂಭದಲ್ಲಿ ಎರಡು ಸಾಲಿನ ಪಲ್ಲವಿಯಿದ್ದು ಇಡೀ ಕಾವ್ಯ ಐದು ಖಂಡಿಕೆಗಳಲ್ಲಿ ವರ್ಣಿತವಾಗಿದೆ. ಕೊನೆಯಲ್ಲಿ ಇರುವ ಕಂದಪದ್ಯದಲ್ಲಿ ತಾರಾವಳಿಯ ಕರ್ತೃವಿನ ಹೆಸರಿದ್ದು, ಈ ಗುರುಮಹಂತಿನ ಬಿರುದಾವಳಿಯನ್ನು ಬರೆದು ಓದುವವರಿಗೆ ಮೋಕ್ಷ ಪ್ರಾಪ್ತವಾಗುವುದೆಂಬ ಸೂಚನೆಗಳಿವೆ.

### ೩. ಬೆಂಗಳೂರಿನ ಸಣ್ಣಬರಹದ ಗುರುಬಸವರಾಜ ದೇವರು

ಇವರು[134] "ಮನ್ಮಥ ಸಂವತ್ಸರದ ಫಾಲ್ಗುಣ ಶುದ್ಧ ೫ ಶುಕ್ರವಾರ ೨ನೆಯ ಜಾವದಲ್ಲಿ ಬೆಂಗಳೂರು ಮಹಾಂತದೇವರ ಕುಮಾರರು ಚನ್ನಬಸವಪ್ಪ ದೇವರು, ಅವರ ಕುಮಾರರು ಹುಚ್ಚಪ್ಪದೇವರು ಬರೆದ 'ಅಷ್ಟಾವರಣ ಸ್ತೋತ್ರ'ದ ಸಂಸ್ಕೃತ ಕೃತಿಯನ್ನು ಸಂಗ್ರಹಿಸಿರುವುದಾಗಿ ತಿಳಿದುಬರುತ್ತದೆ.[135]

### ೪. ಕೊಳದಮಠದ ಸಿದ್ಧಲಿಂಗದೇವರು

ಬೆಂಗಳೂರಿನ ಪುರಾತನ ಮಠಗಳಲ್ಲಿ ಒಂದಾದ ಕೊಳದಮಠದ ಸಂಸ್ಥಾನದ ಅಧಿಪತಿಗಳಾಗಿದ್ದ ಸಿದ್ಧಲಿಂಗದೇವರು ಎಂಬುವವರು 'ಕರಣಹಸಿಗೆ' ಎಂಬ ತತ್ತ್ವಶಾಸ್ತ್ರ ಗ್ರಂಥವೊಂದನ್ನು ಬರೆದಿದ್ದಾರೆ. ೧೮೮೫ರಲ್ಲಿ ರಚಿತವಾಗಿರುವ ಈ ಕೃತಿಯನ್ನು ಕುರಿತು – "ಶ್ರೀ ಸೀಲಸಂಪಾದನ ಸಮಯದ ಬೆಂಗಳೂರು ಶ್ರೀ ಸಂಸ್ಥಾನ ಕೊಳದಮಠದ ಅಧಿಕಾರಿಗಳಾದ ಶ್ರೀ ಶಿವಲಿಂಗ ದೇಶಿಕೇಂದ್ರರವರ ಕರಕಮಲ ಸಮುದ್ಭೂತರಾದಂತ್ತ ಸಿದ್ದಲಿಂಗದೇವರು ಯಿ 'ಕರಣಹಸಿಗೆ' ಎಂಬ ಗ್ರಂಥವನ್ನು ಬರೆದು ಸಮಾಪ್ತಿಯಾದ" ವಿವರಗಳು[136] ಹಸ್ತಪ್ರತಿ ಪುಷ್ಪಿಕೆಯೊಂದರಿಂದ ದೊರೆಯುತ್ತವೆ. ಇಲ್ಲಿ ಉಕ್ತವಾಗಿರುವ ಕೊಳದಮಠದ ಗುರುಪರಂಪರೆಯ ಈ ಗುರುಶಿಷ್ಯರಿಬ್ಬರೂ ವಿದ್ವಾಂಸರುಗಳೇ ಆಗಿದ್ದು ಸಾಕಷ್ಟು ಸಾಹಿತ್ಯಕ ಚಟುವಟಿಕೆಗಳನ್ನು ನಡೆಯಿಸಿರುವ ಸಾಧ್ಯತೆಯುಂಟು.[137]

### ೫. ಗಂಜಾಂಮಠದ ನಂಜುಂಡಸ್ವಾಮಿಗಳು

ಕಳೆದ ಶತಮಾನಾಂತ್ಯದಲ್ಲಿ ಬೆಂಗಳೂರಿನಲ್ಲಿದ್ದ ಪ್ರಮುಖ ವಿದ್ವಾಂಸರಲ್ಲಿ ಮಾಮೂಲುಪೇಟೆಯ ಗಂಜಾಂ(ಜಂಗಮ) ಮಠದ ಅಧಿಪತಿಗಳಾಗಿದ್ದ ನಂಜುಂಡಸ್ವಾಮಿ (೧೮೭೫-೧೯೪೮)ಗಳೂ ಒಬ್ಬರು. ಇವರು ರಚಿಸಿದ್ದ ಏಕೈಕ ಕೃತಿ "ಸದ್ವಿದ್ಯಾನ್ನದಾನ ಪ್ರಾಭವ ಪ್ರಕಾಶಿಕಾ" ಎಂಬ ಗ್ರಂಥವು ೧೯೪೩ರಲ್ಲಿ ಬೆಂಗಳೂರಿನ ಬೂ। ಸ್ವಾಮಿನಾಥಯ್ಯನವರ ಸತ್ಸಂಪ್ರದಾಯ ಕಳಾನಿಧಿ ಮುದ್ರಾಕ್ಷರ ಶಾಲೆಯಲ್ಲಿ ಪ್ರಕಟವಾಗಿದೆ. ಇದರ ಮುಖಪುಟದಲ್ಲಿ "....ಕಲ್ಯಾಣನಗರ ಪ್ರಾಚೀನ (ಬೆಂಗಳೂರು ಮಾಮೂಲ್‌ಪೇಟೆ) ವೀಥ್ಯಂತರ್ಗತ ಮಠೆ ವಿದ್ಯೋತಮಾನ ಶ್ರೀ ಶಿವಯೋಗಿ ನಂಜುಂಡಸ್ವಾಮಿಭಿಃ ವಿರಚಿತಾ...", ಎಂಬ ಇತ್ಯಾದಿ ವಿವರಗಳಿವೆ. ಕೇವಲ ಮೂವತ್ತು ಪುಟಗಳಷ್ಟಿರುವ ಈ ಕಿರುಕೃತಿಯು ಬಸವೇಶ್ವರನನ್ನು ಕುರಿತ ಸಂಸ್ಕೃತ ಶ್ಲೋಕ (ಕನ್ನಡ ಟೀಕೂ ಇದೆ)ದಿಂದ[138] ಆರಂಭವಾಗಿದೆ. ಮುಂದೆ ಹತ್ತೊಂಬತ್ತನೆಯ ಶತಮಾನಾಂತ್ಯದ ವೇಳೆಗೆ ವೀರಶೈವ ಸಮಾಜದವರಲ್ಲಿ ಉಂಟಾಗಿದ್ದ ಧಾರ್ಮಿಕ ದುರ್ದೆಶೆಯನ್ನು ಪ್ರಸ್ತಾಪಿಸಲಾಗಿದೆ. ನಂತರ ತಮಗೆ

ಇದೇ ಮಾಮೂಲುಪೇಟೆಯ ಚನ್ನವೀರಶೆಟ್ರು ಮತ್ತು ಇವರ ಮಗ ದಿಗಂಬರಶೆಟ್ರು ಶಿವಾರ್ಪಿತವಾಗಿ ದಾನ ಮಾಡಿದ್ದ ಜಂಗಮ ಮಠದಲ್ಲಿ, ತಾವು ದಿನಾಂಕ : ೧೫.೧೨.೧೮೮೬ರಲ್ಲಿ 'ಶ್ರೀ ಪ್ರಮಥಗಣ ಮನೋರಂಜಿನಿ ಸಂಸ್ಕೃತ ಪಾಠಶಾಲೆ'ಯನ್ನು ಪ್ರಾರಂಭಿಸಿದ ವಿವರಗಳಿವೆ.[139] ಸದರಿ ಶಾಲಾನಿರ್ವಹಣಾರ್ಥವಾಗಿ ಸಮಾಜ ಬಾಂಧವರು ಉದಾರ ನೆರವು ನೀಡಬೇಕಾಗಿಯೂ ಇಂತಹ ಸತ್ಕಾರ್ಯಗಳಿಗೆ ನೆರವಾಗುವ ಜನತೆಗೆ ಶ್ರುತಿ, ಸ್ಮೃತಿ, ಪುರಾಣಾಂತರ್ಗತವಾಗಿ ದೊರೆಯಬಹುದಾದ ಸದ್ಗತಿಗಳನ್ನು ಕುರಿತು ವಿವರಿಸಲಾಗಿದೆ. ಇಲ್ಲಿ ಬರುವ ಪ್ರತಿಯೊಂದು ಸಂಸ್ಕೃತ ಶ್ಲೋಕಗಳಿಗೂ ಕನ್ನಡದ ಟೀಕನ್ನು ಕೊಡಲಾಗಿದೆ.

**೬. ಮುತ್ತಿನಕಂತೆಮಠದ ಪಂಡಿತ ಶಿವಕುಮಾರ ಸ್ವಾಮಿಗಳು**

ನಗರದ ಮುತ್ತಿನಕಂತೆ ಮಠದ ಆಯುರ್ವೈದ್ಯ ಪಂಡಿತರೆಂದೇ ಹೆಸರಾಗಿದ್ದ ಪಂಡಿತ ಶಿವಕುಮಾರ ಸ್ವಾಮಿಗಳು (೧೯೩೫-೧೯೭೯) ಪ್ರಾಚೀನ ಭಾರತೀಯ ವೈದ್ಯಪದ್ಧತಿಯ ನಿಷ್ಣಾತ ವಿದ್ವಾಂಸರಾಗಿದ್ದರು.[140] ಕಾಶಿಯಲ್ಲಿ ಉನ್ನತ ವ್ಯಾಸಂಗವನ್ನು ಪಡೆದು ಬಂದಿದ್ದ ಇವರು ಬರೆದಿರುವ ''ಆರೋಗ್ಯದರ್ಪಣ''ವೆಂಬ ಉದ್ಗ್ರಂಥವು ಆಯುರ್ವೇದ ಕ್ಷೇತ್ರದಲ್ಲೆ ಅಪೂರ್ವ ಗ್ರಂಥ'ವಾಗಿದ್ದು, ಇದು ೧೯೪೩ ರಿಂದ ೧೯೮೩ರ ಅವಧಿಯೊಳಗೆ ಆರು ಮರುಮುದ್ರಣಗಳನ್ನು ಕಂಡಿದೆ.[141] ಕೃತಿಯ ಆರಂಭದಲ್ಲಿರುವ ವಿಸ್ತಾರವಾದ ಪೀಠಿಕಾಭಾಗ (೪೪ ಪುಟ)ದಲ್ಲಿ ಆಯುರ್ವೇದೋತ್ಪತ್ತಿ, ಆಯುರ್ವೇದ ಗ್ರಂಥಗಳು, ಆಯುರ್ವೇದದ ಉನ್ನತಿ ಅವನತಿಗಳು ಇವೇ ಮೊದಲಾದ ವಿಷಯಗಳನ್ನು ಕುರಿತು ಪಾಂಡಿತ್ಯ ಪೂರ್ಣ ಚರ್ಚೆ ಮಾಡಿದ್ದಾರೆ. ಜೊತೆಗೆ ಪ್ರಪಂಚಮಟ್ಟದಲ್ಲಿ ಸಾವಿರಾರು ವರ್ಷಗಳಿಂದ ಈ ವೈದ್ಯ ಪದ್ಧತಿಯು ಬೆಳೆದುಬಂದ ಕುತೂಹಲಕರ ವಿವರಗಳ ಜೊತೆಗೆ ಈ ಕ್ಷೇತ್ರಕ್ಕೆ ಭಾರತೀಯರ ಕೊಡುಗೆಗಳನ್ನು ಕುರಿತು ವಿವರವಾಗಿ ಪರಿಚಯಿಸಿದ್ದಾರೆ.

ಒಟ್ಟು ೬೬೪ ಪುಟಗಳಷ್ಟು ವಿಸ್ತಾರವಾಗಿರುವ ಈ ಗ್ರಂಥವು ಸ್ವಸ್ಥವೃತ್ತ, ಆಹಾರದ ವಸ್ತುಗಳು, ವನಸ್ಪತಿಗಳು, ಸದ್ವೃತ್ತಶತಕ (ಸದಾಚರಣೆ) ಎಂಬ ನಾಲ್ಕು ಪ್ರಧಾನ ಅಧ್ಯಾಯಗಳಿಂದ ಕೂಡಿದ್ದು, ಕೊನೆಯಲ್ಲಿ ಪರಿಶಿಷ್ಟ ಹಾಗೂ ಅನುಬಂಧಗಳನ್ನು ಒಳಗೊಂಡಿದೆ. ಪ್ರಥಮ ಅಧ್ಯಾಯದಲ್ಲಿ ಮನುಷ್ಯನ ಆರೋಗ್ಯಪೂರ್ಣ ಬದುಕಿನ ದೈನಂದಿನ ಪರಿಕ್ರಮಗಳನ್ನು ಕುರಿತು ಹೇಳಲಾಗಿದೆ. ಇಲ್ಲಿ ಪ್ರಾತಃಕಾಲ, ಶೌಚವಿಧಿ, ದಂತಶೋಧನೆ, ವ್ಯಾಯಾಮ, ತೈಲಾಭ್ಯಂಗ, ಅಭ್ಯಂಗನಿಷೇಧ, ಸ್ನಾನ, ದೇವತಾರ್ಚನೆ, ಆಹಾರ, ಆಹಾರದ ನಿಯಮಗಳು, ನೀರು, ಶುದ್ಧವಾಯು, ನಿದ್ರೆ, ಉಷಃಪಾನ ಇವೆಲ್ಲವುಗಳ ಬಗೆಗೆ ಸೂಕ್ತ ಮಾರ್ಗದರ್ಶನ ನೀಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಆಹಾರ ಧಾನ್ಯಗಳು, ಸೊಪ್ಪು, ತರಕಾರಿ, ಹಣ್ಣು, ಹೈನು ಉತ್ಪನ್ನಗಳು, ಜೇನುತುಪ್ಪ ಇವೇ ಮೊದಲಾದ ಜೀವವರ್ಧಕ ಅಂಶಗಳನ್ನು ಕುರಿತು ವಿಸ್ತಾರವಾದ ವಿವರಣೆಗಳಿವೆ. ಮೂರನೆಯ ಅಧ್ಯಾಯದಲ್ಲಿ ವನಸ್ಪತಿ ಪದಾರ್ಥ'ಗಳು ಮಾನವರಿಗೆ ಹೇಗೆ ಆರೋಗ್ಯವರ್ಧಕ ಸಾಧನಗಳಾಗಬಹುದೆಂಬ ವಿವರಗಳಿವೆ. ನಾಲ್ಕನೆಯ ಅಧ್ಯಾಯದಲ್ಲಿ ಚರಕಸಂಹಿತೆಯ ಸೂತ್ರಾನುಸಾರ 'ಇಂದ್ರಿಯೋಪಕ್ರಮಣೀಯ'ವೆಂಬ ಅಧ್ಯಾಯವನ್ನು ಅನುಸರಿಸಿ ಆಯುರಾರೋಗ್ಯವನ್ನು ಬಯಸುವವರು ಅರಿತು ಆಚರಿಸಬೇಕಾದ ಶತ (೧೦೦) ನೀತಿಗಳನ್ನು ಒಂದೆಡೆ ಸಂಗ್ರಹಿಸಿ ಕೊಡಲಾಗಿದೆ. ಕೊನೆಯಲ್ಲಿ ವಿಭಿನ್ನ ಆಹಾರ ಪದಾರ್ಥಗಳಲ್ಲಿ ಇರುವ ಪೋಷಕಾಂಶಗಳ ಕೋಷ್ಟಕವನ್ನೂ ಕೊಡಲಾಗಿದೆ.

ಒಟ್ಟಾರೆ ಆರೋಗ್ಯಪೂರ್ಣ ಸಮೃದ್ಧ ಜೀವನ ನಿರ್ವಹಣೆಗೆ ಮಾನವ ತನ್ನ ಪರಿಸರದಲ್ಲೇ ಸುಲಭವಾಗಿ ಲಭ್ಯವಾಗುವ ಸರಳ ಮಾರ್ಗೋಪಾಯಗಳನ್ನು ವಿಸ್ತರಿಸಿರುವ ಈ ಬಹೂಪಯೋಗಿ ಆಯುರ್ವೈದ್ಯ ಗ್ರಂಥಕ್ಕೆ, ರಾಜ್ಯ ಸರ್ಕಾರವು ೧೯೪೩-೪೪, ೧೯೬೦-೬೧, ಹಾಗೂ ೧೯೬೨-೬೩ನೇ ಸಾಲಿನಲ್ಲಿ ಪ್ರಕಟಣಾ ಕೃಪೆಗಾಗಿ ಧನಸಹಾಯವನ್ನು ನೀಡಿ ಗೌರವಿಸಿದೆ.[142]

ಶಿವಕುಮಾರಸ್ವಾಮಿಗಳು 'ಆರೋಗ್ಯದರ್ಪಣ'ದ ಜೊತೆಗೆ 'ಶ್ರೀರಾಜ್ಯಾಭಿಷೇಕನಂದನಂ' ಮತ್ತು 'ಶ್ರೀಮನ್ನಾಲ್ಮಡಿ ಕೃಷ್ಣರಾಜ ಒಡೆಯರ್ ಮಹಾಪ್ರಭು ಪುಣ್ಯಸ್ಮೃತಿ' ಎಂಬ ಇನ್ನೆರಡು ಕೃತಿಗಳನ್ನೂ ಬರೆದಿದ್ದುದ್ದಾಗಿ ತಿಳಿದುಬರುತ್ತದೆ.[143]

### ೭. ಮಹಾಂತರಮಠದ ಗಂಗಾಧರ ಶಿವಾಚಾರ್ಯರು

ಚಿಕ್ಕಪೇಟೆಯ ಮಹಾಂತರಮಠದ ಗಂಗಾಧರ ಶಿವಾಚಾರ್ಯರು ತಮ್ಮ ಮಠಾಧಿಪತ್ಯದ ಅವಧಿ (೧೯೩೪-೧೯೪೭)ಯಲ್ಲಿ ಅನೇಕ ಕಿರುಹೊತ್ತಗೆಗಳನ್ನು ರಚಿಸಿ ಹೊರತಂದಿದ್ದುದಾಗಿ ತಿಳಿದುಬರುತ್ತದೆ. ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಉದ್ದಾಮ ಪಂಡಿತರಾಗಿದ್ದ ಇವರು 'ಶಿವಪೂಜಾವಿಧಿ', 'ವಿಭೂತಿ', 'ನಿಂದಕರು', 'ನಿತ್ಯಸುಖದಾಯಕರು', 'ಶಿವಾನುಭವ ಸುಧಾಕರ', 'ಸ್ತ್ರೀನೀತಿ' 'ತ್ರಿದಳ', 'ಗೋರಕ್ಷಗರ್ವಹರಣ' (ನಾಟಕ), 'ಪಂಚಾಚಾರ್ಯ ಸ್ತೋತ್ರ ರತ್ನಾವಳಿ' ಇವೇ ಮೊದಲಾದ ಕೃತಿಗಳನ್ನು ಬರೆದು ಪ್ರಕಟಿಸಿರುತ್ತಾರೆ.[144] ಇವೆಲ್ಲವೂ ಆಯಾ ವಸ್ತು, ವಿಷಯಗಳಿಗೆ ಅನುಗುಣವಾಗಿ ಉಪದೇಶಾತ್ಮಕ ನೀತಿ ನಿಯಮಗಳುಳ್ಳ ಸರಳ ಸಂಕ್ಷಿಪ್ತ ವಿವರಗಳ ಪುಟ್ಟ ಪುಸ್ತಕ (ಕೈ ಹೊತ್ತಗೆ) ಗಳಾಗಿರುತ್ತವೆ.

### ೮. ಸರ್ಪಭೂಷಣಮಠದ ಮಹಾದೇವಸ್ವಾಮಿಗಳು

ಸರ್ಪಭೂಷಣಮಠದ ಗುರುಪರಂಪರೆಯಲ್ಲಿ ಬರುವ [145] ಮಹಾದೇವಸ್ವಾಮಿಗಳೂ ಕೂಡ ಉತ್ತಮ ವಿದ್ವಾಂಸರಾಗಿದ್ದರು. ಇವರು ಕಾಶಿ ಕ್ಷೇತ್ರದಲ್ಲಿ ಹನ್ನೆರಡು ವರ್ಷಗಳ ಕಾಲ ಉನ್ನತ ವ್ಯಾಸಂಗವನ್ನು ನಡೆಸಿ, ವೇದಾಂತ ಶಾಸ್ತ್ರ ಸಾಹಿತ್ಯದಲ್ಲಿ ಪಾರಂಗತರಾಗಿ ಕನ್ನಡ ಮತ್ತು ಸಂಸ್ಕೃತಗಳೆರಡರಲ್ಲೂ ನೈಪುಣ್ಯಗಳಿಸಿದ್ದರು. ಪ್ರವಚನ ಕಲಾಪ್ರವೀಣರಾಗಿದ್ದ ಮಹಾದೇವಸ್ವಾಮಿಗಳು ತಮ್ಮ ಮಠಾಧಿಪತ್ಯದ ಅವಧಿ (೧೯೩೨-೧೯೬೧)ಯಲ್ಲಿ ಆಚಾರ್ಯ ಬಿ.ಎಂ.ಶ್ರೀ, ಡಿ.ವಿ.ಜಿ, ಬಿ. ಪುಟ್ಟಸ್ವಾಮಯ್ಯ, ಅ.ನ.ಕೃ, ಫ.ಗು.ಹಳಕಟ್ಟಿ, ಶಿ.ಶಿ ಬಸವನಾಳ, ಬಿ. ಶಿವಮೂರ್ತಿಶಾಸ್ತ್ರಿ ಇವರೇ ಮೊದಲಾದ ವಿದ್ವಜ್ಜನ ರೊಂದಿಗೆ ಸೌಹಾರ್ದಯುತ ಸಂಪರ್ಕವುಳ್ಳವರಾಗಿದ್ದರು.[146] ಬೆಂಗಳೂರಿನ ನಾಗರೀಕರಿಗೆ ಪ್ರಥಮ ಬಾರಿಗೆ ಶಿವಾನುಭವ ಪ್ರವಚನಮಾಲೆಯನ್ನು ಪ್ರಾರಂಭಿಸಿದ ಕೀರ್ತಿ ಇವರದು. 'ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆ'ಯ ಸ್ಥಾಪಕರಾಗಿದ್ದ ಇವರು ಸ್ವತಃ ಸಾಹಿತ್ಯಾರಾಧಕರಾಗಿ ವೀರಶೈವದರ್ಶನ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಅನೇಕ ಬಿಡಿಬಿಡಿ ಲೇಖನಗಳನ್ನು ರಚಿಸಿದ್ದಾರೆ. ಚ. ಸುಂದರೇಶನ್ ಅವರು ಇವರ ಹದಿನೈದು ವಿದ್ವತ್‌ಪೂರ್ಣ ಲೇಖನಗಳನ್ನೂ ಹಾಗೂ ಹದಿನಾಲ್ಕು ಭಾಷಣಗಳನ್ನೂ ಒಂದೆಡೆ ಸಂಗ್ರಹಿಸಿ ಕೊಟ್ಟಿದ್ದಾರೆ.[147]

ಮಹಾದೇವಸ್ವಾಮಿಗಳಿಗೆ ವಚನಸಾಹಿತ್ಯದ ಬಗೆಗೆ ಅಪಾರ ಅಭಿಮಾನವಿತ್ತು. ನಾಡಿನ ಶ್ರೀಸಾಮಾನ್ಯನ ಜಗುಲಿಯಿಂದ ನಾಡದೇವಿಯ ಗದ್ದುಗೆಯಾಗಿದ್ದ ಕನ್ನಡ ಸಾಹಿತ್ಯಪರಿಷತ್ತಿನವರೆಗೆ ಎಲ್ಲೆಡೆ ವಚನ ವಾಙ್ಮಯದ ಜಾಗೃತಿಯನ್ನು ಉಂಟುಮಾಡಿದ ಕೀರ್ತಿ ಇವರದು. ಪ್ರತಿನಿತ್ಯ ತಮ್ಮ ಮಠದಲ್ಲಿ ಶಿವಾನುಭವ ಪ್ರವಚನ ನಡೆಸುವಾಗ ಸಕಲ ಪುರಾತನರು, ಬಸವಾದಿ ಪ್ರಮಥರು, ನಿಜಗುಣರ ಪರಂಪರೆಯ ವಾಗ್ಗೇಯ ಕೃತಿಕಾರರು, ಗುಬ್ಬಿ ಮಲ್ಲಣಾರ್ಯ ಮುಂತಾದ ವೀರಶೈವ ಪುರಾಣಕಾರರು ಇವರೇ ಮೊದಲಾದವರನ್ನು ಕುರಿತು ವಿದ್ವತ್‌ಪೂರ್ಣ ಪ್ರವಚನಮಾಲೆಗಳನ್ನು ಏರ್ಪಡಿಸುತ್ತಿದ್ದರು. ಮಹಾದೇವಸ್ವಾಮಿಗಳವರ ಇಂತಹ ಘನವಾದ ಸಾಧನೆಯನ್ನು ಗ್ರಹಿಸಿದ್ದ ಫ.ಗು. ಹಳಕಟ್ಟಿಯವರು ''ಈ ಮಹನೀಯರು ವಚನ ವಾಙ್ಮಯ ಪ್ರಚಾರಕ್ಕೋಸ್ಕರ ನಡೆಸುತ್ತಿರುವ ಪ್ರಯತ್ನಗಳು ಅಗಾಧವಾದುವು, ಅಪರಿಮಿತವಾದುವು''[148] ಎಂಬುದಾಗಿ ತುಂಬು ಹೃದಯದಿಂದ ಶ್ಲಾಘಿಸಿದ್ದಾರೆ. ಒಟ್ಟಾರೆ ಬೆಂಗಳೂರಿನ ವೀರಶೈವಮಠಗಳ ಪರವಾಗಿ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ವಲಯದಲ್ಲಿ ಸರ್ಪಭೂಷಣ ಮಠದ ಮಹಾದೇವಸ್ವಾಮಿಗಳ ಹೆಸರು[149] ಯಾವತ್ತೂ ಅವಿಸ್ಮರಣೀಯವಾದದ್ದು. ಈ ಹಿನ್ನೆಲೆಯಲ್ಲಿ ಅವರಿಗೆ ಸಂದಿದ್ದ 'ಅಭಿನವ ಅಲ್ಲಮ' ಹಾಗೂ 'ಧರ್ಮಭೂಷಣ' ಎಂಬ ಗೌರವಾನ್ವಿತ ಬಿರುದುಗಳು[150] ಸಲ್ಲತಕ್ಕವೇ ಆಗಿವೆ.

### ೯. ಸರ್ಪಭೂಷಣಮಠದ ಶಿವಕುಮಾರಸ್ವಾಮಿಗಳು

ಮಹಾದೇವಸ್ವಾಮಿಗಳ ನಂತರ ಸರ್ಪಭೂಷಣ ಮಠದ ಅಧಿಕಾರವನ್ನು ವಹಿಸಿಕೊಂಡ ಶಿವಕುಮಾರ ಸ್ವಾಮಿಗಳು (೧೯೬೩-೧೯೮೫) ಕೂಡ ಮಠದ ಪರಂಪರೆಗೆ ಅನುಗುಣವಾಗಿ ಉನ್ನತ ಮಟ್ಟದ ವಿದ್ವಾಂಸರೇ ಆಗಿದ್ದರು. ಇವರೂ ಸಹ ಕಾಶಿ ಕ್ಷೇತ್ರದಲ್ಲಿ ಹದಿನಾರು ವರ್ಷ (೧೯೪೪-೧೯೬೦) ಕಾಲ ಉನ್ನತ ಅಧ್ಯಯನವನ್ನು ನಡೆಯಿಸಿ 'ವೇದಾಂತಾಚಾರ್ಯ' ಎಂಬ ಪದವಿಯನ್ನು

ಗಳಿಸಿದ್ದರು.[151] ಇವರು ಪ್ರಭುದೇವರ ವಚನಗಳನ್ನು ಹಿಂದಿಗೆ ತರ್ಜುಮೆ ಮಾಡಿ ಉತ್ತರಪ್ರದೇಶ ಸರ್ಕಾರದಿಂದ ಸನ್ಮಾನಿತರಾಗಿದ್ದಾರೆ.[152] ಹಾಗೆಯೇ ಬಿಹಾರದ ರಾಷ್ಟ್ರಭಾಷಾ ಪರಿಷತ್ (ಪಾಟ್ನಾ)ನವರು ಮಹೋಪಾಧ್ಯಾಯ ಗೋಪಿನಾಥ ಕವಿರಾಜ ಇವರ ಸಂಪೂರ್ಣ ಲೇಖನಗಳನ್ನೆಲ್ಲಾ ಸಂಗ್ರಹಿಸಿ 'ಭಾರತೀಯ ಸಂಸ್ಕೃತಿ ಔರ್ ಸಾಧನಾ' ಎಂಬ ಹೆಸರಿನ ಎರಡು ಬೃಹತ್ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಶಿವಕುಮಾರಸ್ವಾಮಿಗಳು ಅವುಗಳಿಂದ ಆಯ್ದು ಇಪ್ಪತ್ತು ಲೇಖನಗಳನ್ನು ಕನ್ನಡಕ್ಕೆ ಅನುವಾದಿಸಿ ಅವುಗಳಲ್ಲಿ ಏಳು ಲೇಖನಗಳನ್ನು ಮಾತ್ರ 'ಭಾರತೀಯ ಸಂಸ್ಕೃತಿ' (ಭಾಗ-೧) ಎಂಬ ಹೆಸರಿನ ಗ್ರಂಥವನ್ನು ಹೊರತಂದಿದ್ದಾರೆ.[153] ಹೀಗೆ ಇವರು ಕನ್ನಡ ಮತ್ತು ಹಿಂದಿ ಭಾಷಾಂತರ ವಿಭಾಗದಲ್ಲಿ ಗಮನಾರ್ಹ ಸೇವೆ ಸಲ್ಲಿಸಿದ್ದಾರೆ. ಈ ಅನುವಾದಿತ ಕೃತಿಯು ೧೯೮೩ರಲ್ಲಿ 'ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆ'ಯ ಹನ್ನೆರಡನೆಯ ಕೃತಿಕುಸುಮವಾಗಿ ಹೊರಬಂದಿದೆ.

ಬಹುಶ್ರುತ ವಿದ್ವಾಂಸರಾಗಿದ್ದ ಶಿವಕುಮಾರ ಸ್ವಾಮಿಗಳು[154] ೧೯೬೩ರ ಡಿಸೆಂಬರ್ ೧೪ ರಂದು ಧರ್ಮಸ್ಥಳ ಕ್ಷೇತ್ರದಲ್ಲಿ ಜರುಗಿದ ೩೧ನೆಯ ಅಖಿಲ ಭಾರತ ಸರ್ವಧರ್ಮ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದುದು ಅವರ ಬಹುಭಾಷಾ ಪಾಂಡಿತ್ಯ ಹಾಗೂ ಅಗಾಧ ಧರ್ಮ ಜಿಜ್ಞಾಸೆಗಳಿಗೆ ಸಂದ ಗೌರವವಾಗಿತ್ತು. ಈ ಸಂದರ್ಭದಲ್ಲಿ ಅವರಿಗೆ ಅಂದಿನ ಧರ್ಮಸ್ಥಳದ ಕ್ಷೇತ್ರಾಧ್ಯಕ್ಷರಾಗಿದ್ದ ಡಿ. ರತ್ನವರ್ಮ ಹೆಗ್ಗಡೆಯವರಿಂದ ''ವಿದ್ಯಾವಾರಿಧಿ'' ಎಂಬ ವಿಶೇಷ ಬಿರುದು ಪ್ರಾಪ್ತವಾಗಿತ್ತು.[155]

ಹೀಗೆ ಬೆಂಗಳೂರಿನ ವೀರಶೈವಮಠಗಳ ಪರವಾಗಿ ಇಲ್ಲಿನ ಮಠಾಧಿಪತಿಗಳು ತಮ್ಮ ಧಾರ್ಮಿಕ ಚೌಕಟ್ಟಿನ ಪರಿಧಿಯೊಳಗೂ, ತಮ್ಮದೇ ಆದ ವಿಶಿಷ್ಟ ರೀತಿಯ ಸಾಹಿತ್ಯ ಕೃಷಿಯನ್ನು ನಡೆಸಿದ್ದುದು ಹೆಮ್ಮೆಯ ವಿಚಾರವಾಗಿದೆ. ಈ ನಿಟ್ಟಿನಲ್ಲಿ ಇಲ್ಲಿನ ಎಷ್ಟೋ ಮಂದಿ ಅಜ್ಞಾತ ಕವಿಗಳೂ ಹಾಗೂ ಅವರ ಕೃತಿಗಳೂ ಬೆಳಕಿಗೆ ಬಾರದೆ ಅಜ್ಞಾತವಾಗಿಯೇ ಉಳಿದುಹೋಗಿವೆ ಎಂಬ ಮಾತನ್ನು ಅಲ್ಲಗಳೆಯಲಾಗದು.[156]

### ೮.೫. ಸಾಹಿತ್ಯಪ್ರಸಾರ ಮತ್ತು ಪ್ರಕಟಣೆ

ವೀರಶೈವಮಠಗಳು ಸಾಹಿತ್ಯಕ ಹಾಗೂ ಸಾಹಿತ್ಯೇತರ ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಧಾರ್ಮಿಕ ಪ್ರಚಾರ ಕೇಂದ್ರಗಳಾಗಿದ್ದುದು ನೆನ್ನೆಮೊನ್ನೆಯ ವಿಚಾರವೇನಲ್ಲ. ಎಲ್ಲಾ ಧರ್ಮೀಯರಲ್ಲೂ ಇಂತಹ ಪರಿಪಾಠ ಪ್ರಾಚೀನ ಕಾಲದಿಂದಲೂ ನಡೆದು ಬಂದಿರುವಂತಹುದು. ಈ ಹಿನ್ನೆಲೆಯಲ್ಲಿ ಬೆಂಗಳೂರಿನ ವೀರಶೈವ ಮಠಗಳ ಹಲವಾರು ಮಠಾಧೀಶರು ಬಹುಶ್ರುತ ವಿದ್ವಾಂಸರುಗಳಿದ್ದು ತಾವೇ ಸ್ವತಃ ಸಾಹಿತ್ಯರಚನೆ ಮಾಡಿರುವುದನ್ನು ಈಗಾಗಲೇ ಗಮನಿಸಿದ್ದೇವೆ. ಇದರ ಜೊತೆಗೆ ಇಲ್ಲಿನ ಕೆಲವು ಮಠಗಳು ಸಾಹಿತ್ಯಪ್ರಸಾರ ಹಾಗೂ ಪ್ರಕಟಣಾ ಕೇಂದ್ರಗಳಾಗಿಯೂ ಗಮನಾರ್ಹ ಸೇವೆ ಸಲ್ಲಿಸಿವೆ. ಅದರಲ್ಲೂ ಬೆಂಗಳೂರಿನ ಸರ್ಪಭೂಷಣಮಠ, ಮಹಾಂತರಮಠ, ನಿಜಗುಣಜಂಗಮ ಮಠ, ಗಂಜಾಂಮಠ, ಗುರುವಣ್ಣದೇವರಮಠ, ಇವೇ ಮೊದಲಾದ ಪ್ರಮುಖ ಮಠಗಳಲ್ಲಿ ಇದುವರೆಗೆ ನಡೆದಿರಬಹುದಾದ ವಿಚಾರ ಸಂಕಿರಣ, ಉಪನ್ಯಾಸಮಾಲೆ, ಪುರಾಣಪ್ರವಚನ, ಹರಿಕಥಾಶ್ರವಣ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಸಾಹಿತ್ಯ(ಧಾರ್ಮಿಕ) ಪ್ರಸಾರ ಕಾರ್ಯ ನಡೆಸುತ್ತಾ ಬಂದಿರುವುದನ್ನು ಹಿಂದಿನ ಅಧ್ಯಾಯ (೬-೭) ಗಳಲ್ಲಿ ಪರಿಶೀಲಿಸಿಯಾಗಿದೆ. ಇದೀಗ ಇಲ್ಲಿನ ಕೆಲವು ಮಠಗಳವರು ನಿರಂತರವಾಗಿ ನಡೆಸುತ್ತಾ ಬಂದಿರುವ ಸಾಹಿತ್ಯ ಪ್ರಕಟಣೆಗಳನ್ನು ಕುರಿತು ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ.

ಸಾಹಿತ್ಯ ಪ್ರಸಾರ ಹಾಗೂ ಪ್ರಕಟಣೆಯ ದೃಷ್ಟಿಯಿಂದ ಮೊದಲು ಪರಿಗಣಿಸಬೇಕಾದ ಮಠ ನಗರದ ಅರಳೆಪೇಟೆಯ 'ದೇಶದಮಠ'. ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಈ ಮಠದ ಗುರುಗಳಾಗಿದ್ದ ಮುರಿಗೆದೇವರು (೧೮೪೫-೬೮) ಚಿತ್ರದುರ್ಗ ಸಂಸ್ಥಾನ ಮಠದ ಪರವಾಗಿ ಸ್ಥಳೀಯ ಭಕ್ತರ ಆಚಾರ ವಿಚಾರಗಳಿಗೆ ಕರ್ತರಾಗಿದ್ದರು.[157] ಇವರ ನಂತರ ಮಠಾಧಿಪತ್ಯ ವಹಿಸಿಕೊಂಡಿದ್ದ ಸಿದ್ಧಲಿಂಗದೇವರು ಕಾಶಿಗೆ ಹೋಗಿ ಉನ್ನತ ವ್ಯಾಸಂಗವನ್ನು ಮಾಡಿಬಂದ[158] ಘನ ವಿದ್ವಾಂಸರಾಗಿದ್ದರು.[159] ಇಂತಹ ಹಿನ್ನೆಲೆಯುಳ್ಳ ದೇಶದ ಮಠದ ಪರವಾಗಿ ಚೆನ್ನಶೆಟ್ಟಿ ಎಂಬುವರು ೧೮೮೩ರಲ್ಲಿ 'ಕೂಡಲ ಸಂಗಮಾವಧೂತ'ರ ''ಶಿಖಾರತ್ನಪ್ರಕಾಶವು'' ಎಂಬ ವಚನ

ಸಂಗ್ರಹ ಭಾಗವನ್ನು ಪ್ರಕಟಪಡಿಸಿರುತ್ತಾರೆ.[160] ಈ ಸಂಗ್ರಹದಲ್ಲಿ ಮೂವತ್ತೈದು ವಚನಗಳಿದ್ದು "ಅಪ್ರಮಾಣ ಕೂಡಲಸಂಗಮದೇವ" ಎಂಬ ಅಂಕಿತ ಉಳ್ಳವಾಗಿವೆ. ಮುಂದೆ ೧೮೮೫ರಲ್ಲಿ ಇದೇ ಮಠದ ಮತಿಯಿಂದ "ನಿಃಕಲರವಚನವು" ಎಂಬ ಮತ್ತೊಂದು ಗ್ರಂಥವು ಪ್ರಕಟವಾಗಿದೆ.[161] ಇದರ ಮುಖಪುಟದಲ್ಲಿ "...ನಿಷ್ಕಳಂಕ ಚಿದಾನಂದಯೋಗಿ ವಿರಚಿತಮಾದ ನಿಃಕಲರವಚನವು ಮ.ರಾ.ರಾ. ಅರಳೆಪೇಟೆ ದೇಶದಚನ್ನಶೆಟ್ಟರಿಂದ ಹೊಂದಿ ಪಂಡಿತರಿಂದ ಪರಿಷ್ಕರಿಸಲ್ಪಟ್ಟುದಾಗಿ...", ಎಂಬ ಇತ್ಯಾದಿ ವಿವರಗಳಿವೆ. ಈ ಗ್ರಂಥದಲ್ಲಿ ಒಟ್ಟು ೪೨ ಸ್ಥಲಗಳಿದ್ದು ೫೨೫ ವಚನಗಳಿವೆ. "ನಿಃಕಲನೆ" ಎಂಬುದು ಇಲ್ಲಿನ ವಚನಗಳ ಅಂಕಿತವಾಗಿದೆ.

ಬೆಂಗಳೂರಿನ 'ಸರ್ಪಭೂಷಣಮಠ'ವು ವೀರಶೈವ ಸಾಹಿತ್ಯ ಪ್ರಸಾರ ಹಾಗೂ ಪ್ರಕಟಣಾ ಕ್ಷೇತ್ರದಲ್ಲಿ ಅದ್ಭುತವಾದ ಸಾಧನೆಯನ್ನು ತೋರಿದೆ. ಸಮಾಜಬಾಂಧವರಿಗೆ ಅಗತ್ಯವಾದ ಸಾಹಿತ್ಯ ಪ್ರಸಾರ ಹಾಗೂ ಪ್ರಕಟಣೆಯ ದೃಷ್ಟಿಯಿಂದಲೇ ೧೯೩೫ರ ವೇಳೆಗೆ ಮಠದ ಗುರುಗಳಾಗಿದ್ದ ಮಹಾದೇವಸ್ವಾಮಿಗಳು "ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆ" ಯೊಂದನ್ನು ಪ್ರಾರಂಭಿಸಿದ್ದರು.[162] ಈ ಗ್ರಂಥಮಾಲೆ ಯಿಂದ ಇದುವರೆಗೆ ಇಪ್ಪತ್ತನಾಲ್ಕು ಕೃತಿಗಳು ಪ್ರಕಾಶಗೊಂಡಿವೆ.[163] ಗ್ರಂಥಮಾಲೆಯ ಪ್ರಾರಂಭೋತ್ಸವದ ಅಂಗವಾಗಿ ೧೯೩೫ರ ಏಪ್ರಿಲ್ ೧೦ ರಂದು ಟಿ.ಎನ್. ಮಹಾದೇವಯ್ಯನವರ 'ಶ್ರೀ ಮಹಾದೇವಿಯಕ್ಕನವರ ಜೀವನಚರಿತ್ರೆ'ಯು ನಾಂದಿ ಕೃತಿ ಕುಸುಮವಾಗಿ ಹೊರಬಂದಿತು. ನಂತರದ ಪ್ರಮುಖ ಕೃತಿ ೧೯೪೮ರಲ್ಲಿ ಪ್ರಕಟವಾದ ಸರ್ಪಭೂಷಣ ಶಿವಯೋಗಿಗಳವರ 'ಕೈವಲ್ಯಕಲ್ಪವಲ್ಲರಿ'ಯೆ. ಪ್ರೊ। ಶಿ.ಶಿ. ಬಸವನಾಳ ಅವರ ವಿದ್ವತ್ ಪೂರ್ಣ ಪ್ರಸ್ತಾವನೆಯೊಂದಿಗೆ ಪರಿಷ್ಕೃತಗೊಂಡ ಈ ಗ್ರಂಥದೊಳಗೆ ಮಲ್ಲಾಬಾದಿ ವೀರಭದ್ರಪ್ಪನವರು ರಚಿಸಿರುವ ಶಿವಯೋಗಿಗಳವರ ಜೀವನ ಚರಿತ್ರೆಯನ್ನೂ ಸೇರಿಸಲ್ಪಟ್ಟಿದೆ.[164] ಮುಂದೆ ೧೯೭೨ರಲ್ಲಿ ಚ. ಸುಂದರೇಶನ್ ಅವರು ಸಂಪಾದಿಸಿಕೊಟ್ಟ 'ಅಭಿನವಅಲ್ಲಮ' ಎಂಬ ಕೃತಿಯು ಪ್ರಕಟವಾಯಿತು. ಈ ಕೃತಿಯಲ್ಲಿ ಪ್ರವಚನಪ್ರವೀಣರೆಂದೇ ಹೆಸರಾಗಿದ್ದ ಮಹಾದೇವಸ್ವಾಮಿಗಳು ಸ್ವತಃ ರಚಿಸಿದ್ದ ೧೫ ಲೇಖನಗಳನ್ನೂ ಹಾಗೂ ಅವರ ೧೪ ಭಾಷಣಗಳನ್ನೂ ಒಂದೆಡೆ ಸಂಗ್ರಹಿಸಿಕೊಡಲಾಗಿದೆ.[165] ಮೇಲ್ಕಂಡ ಇವೆರಡೂ ಗ್ರಂಥಗಳೂ ಮಠದ ಚಾರಿತ್ರಿಕ ದೃಷ್ಟಿಯಿಂದ ಮಹತ್ವದ ಕೃತಿಗಳಾಗಿವೆ.

೧೯೭೮ರಲ್ಲಿ ಎಂ.ಜಿ. ನಂಜುಂಡಾರಾಧ್ಯರು 'ಸರ್ಪಭೂಷಣ ಶಿವಯೋಗಿಗಳವರ ಜ್ಞಾನಶತಕ'ವೆಂಬ ಸಂಸ್ಕೃತ ಗ್ರಂಥವನ್ನು ವಿಸ್ತಾರವಾದ ಮುನ್ನುಡಿ ಹಾಗೂ ಕನ್ನಡ ಭಾವಾರ್ಥದೊಂದಿಗೆ ಸಂಪಾದಿಸಿಕೊಟ್ಟ ಕೃತಿಯನ್ನು ಪ್ರಕಟಿಸಲಾಯಿತು.[166] ಮರುವರ್ಷವೇ ಎಸ್.ಉಮಾಪತಿ ಯವರು ಸಂಪಾದಿಸಿಕೊಟ್ಟ 'ವಿರತಮಹಾಲಿಂಗದೇವನ ಅಭವಕಂದ' ಮತ್ತು 'ಶಂಕರದೇವರ ಇಷ್ಟಲಿಂಗಚಾರಿತ್ರ'ವು ಪ್ರಕಟವಾಯಿತು. ಅಭವಕಂದದಲ್ಲಿ ೧೫೧ ಕಂದಪದ್ಯಗಳಿದ್ದರೆ; ಇಷ್ಟಲಿಂಗಚಾರಿತ್ರದಲ್ಲಿ ವಾರ್ಧಕ ಷಟ್ಪದಿಯಲ್ಲಿ ರಚಿತವಾದ ೪೭ ಪದ್ಯಗಳಿವೆ. ಮುಂದೆ ಇದೇ ಗ್ರಂಥಮಾಲೆಯಿಂದ ೧೯೮೩ರಲ್ಲಿ ವೇದಾಂತಾಚಾರ್ಯರೆಂದೇ ಕರೆಯಲ್ಪಡುತ್ತಿದ್ದ ಇದೇ ಮಠದ ಶಿವಕುಮಾರಸ್ವಾಮಿಗಳು ಹಿಂದಿಯಿಂದ ಕನ್ನಡಕ್ಕೆ ಅನುವಾದಿಸಿಕೊಟ್ಟ 'ಭಾರತೀಯ ಸಂಸ್ಕೃತಿ' (ಭಾಗ-1) ಎಂಬ ಅಮೂಲ್ಯ ಕೃತಿಯು ಪ್ರಕಟವಾಯಿತು.[167] ೧೯೮೪ರಲ್ಲಿ ಎಸ್. ಶಿವಣ್ಣನವರು ಸಂಪಾದಿಸಿಕೊಟ್ಟ 'ಶಂಕರದೇವ ಕೃತ ಶಂಕರದೇವರ ಕಂದಗಳು' ಎಂಬ ಅಜ್ಞಾತ ಕೃತಿಯೊಂದು ಬಿಡುಗಡೆಯಾಯಿತು. ಈ ಕೃತಿಯಲ್ಲಿ ೭೧೫ ಕಂದಪದ್ಯಗಳಿವೆ. ಮುಂದೆ ೧೯೮೭ರಲ್ಲಿ 'ಸರ್ಪಭೂಷಣ ಶಿವಯೋಗಿಗಳ ಭುಜಂಗಮಾಲಾ ಶಿವಸಂಕೀರ್ತನಮ್' ಎಂಬ ಮತ್ತೊಂದು ಅಜ್ಞಾತ ಕೃತಿಯೂ ಬಿಡುಗಡೆಯಾಯಿತು. ಎಂ.ಎಸ್. ಬಸವರಾಜಯ್ಯನವರು ಸಂಪಾದಿಸಿಕೊಟ್ಟಿರುವ ಈ ಕಿರು ಹೊತ್ತಗೆಯಲ್ಲಿ ಪಂಚಚಾಮರವೃತ್ತದಲ್ಲಿ ರಚಿತವಾದ ಸಂಸ್ಕೃತದ ೩೧ ಪದ್ಯಗಳಿದ್ದು ಕನ್ನಡ ಭಾವಾನುವಾದವನ್ನೂ ಒಳಗೊಂಡಿವೆ. ಈ ಮಧ್ಯೆ 'ಆಡುಮುಟ್ಟಿದಸೊಪ್ಪು', 'ಶ್ರೀ ಸರ್ಪಭೂಷಣ ಶಿವಯೋಗಿಗಳು', (ನಾಟಕ), 'ವಚನವೈಭವ', 'ವಚನ ಚಳುವಳಿ' 'ಬಳ್ಳಿಗಾವಿ', 'ಶ್ರೀ ಸರ್ಪಭೂಷಣ ಶಿವಯೋಗಿಗಳ ಸುಪ್ರಭಾತ', 'ಅಕ್ಕಮಹಾದೇವಿ ಸುಪ್ರಭಾತ', 'ಶ್ರೀ ಬಸವಾಷ್ಟೋತ್ತರ ಶತನಾಮಾವಳಿ', 'ಶ್ರೀ ಸರ್ಪಭೂಷಣ ಶಿವಯೋಗೀಶ್ವರಮಠ' (ಚಾರಿತ್ರಿಕ

ಹಿನ್ನೆಲೆ), 'ಮೂವತ್ತು ವಚನಗಳು' ಇವೇ ಮೊದಲಾದ ಕೃತಿಗಳು ಮೇಲ್ಕಂಡ ಗ್ರಂಥಮಾಲೆಯಿಂದ ಹೊರ ಬಂದಿವೆ.[168]

ಮುಂದೆ ೧೯೯೧ ರಿಂದ ಈ ಗ್ರಂಥಮಾಲೆಯಿಂದ ಪ್ರಕಟವಾದ ಕೃತಿಗಳು ವಚನಸಾಹಿತ್ಯವನ್ನು ಆಧರಿಸಿ ರಚಿತವಾದ ವಿಶಿಷ್ಟ ಸಾಹಿತ್ಯ ಕೃತಿಗಳಾಗಿದ್ದು ನಾಡಿನಾದ್ಯಂತ ವಿದ್ವಜ್ಜನರ ಗಮನ ಸೆಳೆದಿವೆ. ೧೯೯೦ರಿಂದ ಮಠದಲ್ಲಿ ಪ್ರತಿವರ್ಷವೂ ಶ್ರಾವಣ ಮಾಸದಲ್ಲಿ ನಡೆಯುತ್ತಿದ್ದ ವಿಶೇಷ ಉಪನ್ಯಾಸ ಮಾಲೆಗಳನ್ನು ಪ್ರತ್ಯೇಕ ಕೃತಿರೂಪದಲ್ಲಿ ಹೊರತರುವ ಯೋಜನೆ ಆರಂಭವಾಯಿತು.[169] ಸಾಹಿತ್ಯ ಪ್ರಸಾರ ಹಾಗೂ ಪ್ರಕಟಣೆಗಳೆರಡನ್ನೂ ಉದ್ದೇಶವಾಗಿರಿಸಿಕೊಂಡಿದ್ದ ಈ ಯೋಜನೆಯಿಂದ ನಗರದ ಜನತೆಗೆ ಮಾತ್ರವಲ್ಲದೆ ನಾಡಿನ ಜನತೆಗೂ ಉಪಯೋಗವಾಗುವಂತಾಯಿತು. ಪ್ರಸ್ತುತ ಯೋಜನೆಯನ್ವಯ ೧೯೯೧ರಲ್ಲಿ ಟಿ.ಆರ್. ಮಹಾದೇವಯ್ಯನವರು ಸಂಪಾದಿಸಿಕೊಟ್ಟ 'ಉಪನ್ಯಾಸ ಸಂಚಯ'ವೂ; ೧೯೯೨ರಲ್ಲಿ ಗೊ.ರು. ಚನ್ನಬಸಪ್ಪನವರು ಸಂಪಾದಿಸಿಕೊಟ್ಟ 'ವಚನಚಿಂತನ'ವೂ; ೧೯೯೩ರಲ್ಲಿ ಡಾ| ಸಿ.ಯು. ಮಂಜುನಾಥ್ ಹಾಗೂ ಬಿ.ಸಿ. ವೀರಪ್ಪ ಇವರುಗಳು ಸಂಪಾದಿಸಿಕೊಟ್ಟ 'ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ'ಯೂ; ೧೯೯೪ರಲ್ಲಿ ಷಣ್ಮುಖಯ್ಯ ಅಕ್ಕೂರಮಠ ಅವರು ಸಂಪಾದಿಸಿಕೊಟ್ಟ 'ವಚನಕಾರರ ಪ್ರಮುಖ ಪರಿಕಲ್ಪನೆಗಳು' ಎಂಬ ಅಮೂಲ್ಯ ಕೃತಿಗಳು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆಯಿಂದ ಪ್ರಕಟವಾದವು.[170] ಇವುಗಳಲ್ಲಿ ವಚನಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಮೂವತ್ತು ವಿವಿಧ ಲೇಖಕರ ವಿಭಿನ್ನ ವಿಷಯಾಧಾರಿತ ಲೇಖನಗಳು ಒಳಗೊಂಡಿವೆ. ಇದೇ ರೀತಿ ೧೯೯೩ರ ಯುಗಾದಿ ಪ್ರಯುಕ್ತ ಮಠದಲ್ಲಿ ಜರುಗಿದ ಮೂರು ದಿನಗಳ "ಶಿವಯೋಗಿತ್ರಯರ ಜಯಂತ್ಯುತ್ಸವ"ದ ಅಂಗವಾಗಿ "ಹದಿನಾಡು ವೀರಶೈವ ಅರಸುಮನೆತನ" ಎಂಬ ವಿಷಯವನ್ನು ಆಧರಿಸಿ ವಿಚಾರ ಸಂಕಿರಣವೊಂದನ್ನು ನೆರವೇರಿಸಲಾಗಿತ್ತು. ಆಗ ಜರುಗಿದ ಹನ್ನೊಂದು ಉಪನ್ಯಾಸಗಳನ್ನು ಒಂದೆಡೆ ಕೃತಿರೂಪದಲ್ಲಿ ಸಂಗ್ರಹಿಸಿ ಕೊಟ್ಟವರು ಡಾ| ಎಸ್. ವಿದ್ಯಾಶಂಕರ ಅವರು. ಮಾರನೆಯ ವರ್ಷದ ಯುಗಾದಿ ವಿಶೇಷವಾಗಿ "ಭಕ್ತಿಪಂಥದಲ್ಲಿ ಸಮಾಜಕಾರ್ಯದ ಬೇರುಗಳು" ಎಂಬ ವಿಚಾರಸಂಕಿರಣವನ್ನು ಏರ್ಪಡಿಸಲಾಗಿತ್ತು. ಈ ವಿಷಯವಾಗಿ ನಡೆದ ಹನ್ನೆರಡು ಲೇಖನಗಳನ್ನು ಒಂದೆಡೆ ಸಂಪಾದಿಸಿಕೊಟ್ಟವರು ಡಾ| ಎಚ್.ಎಂ. ಮರುಳಸಿದ್ಧಯ್ಯನವರು. ಇವೆರಡೂ ಕೃತಿಗಳು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆಯಿಂದಲೇ ಪ್ರಕಟವಾಗಿರುತ್ತವೆ.[171]

ಮೇಲ್ಕಂಡ ಕೃತಿಗಳ ಜೊತೆಗೆ ಸರ್ಪಭೂಷಣಮಠದ ಆಡಳಿತವರ್ಗವು[172] ಕೆಲವು ಉಪಯುಕ್ತ ಕೃತಿಗಳನ್ನು ಹೊರತಂದಿದೆ. ಅವುಗಳಲ್ಲಿ ಮೊದಲನೆಯದು 'ಕೈವಲ್ಯಕಲ್ಪವಲ್ಲರಿ'. ಇದು ೧೯೪೮ರಲ್ಲಿ ಶಿ.ಶಿ. ಬಸವನಾಳರು ಸಂಪಾದಿಸಿಕೊಟ್ಟಿದ್ದ ಯಥಾಪ್ರತಿಯೇ ಆಗಿದೆ. ಇತ್ತೀಚೆಗೆ ೧೯೯೫ರಲ್ಲಿ ಮಠದ ಆಡಳಿತ ವರ್ಗದ ಪರವಾಗಿ ಶ್ರೀ ಸರ್ಪಭೂಷಣ ಶಿವಯೋಗಿಗಳ ದ್ವಿತೀಯ ಶತಮಾನೋತ್ಸವವನ್ನು ಆಚರಿಸಲಾಯಿತು.[173] ಆ ಸಂದರ್ಭದಲ್ಲಿ 'ಕೈವಲ್ಯ'ವೆಂಬ ಸ್ಮರಣ ಸಂಪುಟವನ್ನು 'ಸರ್ಪಭೂಷಣಶ್ರೀ' ಎಂಬ ಸ್ಮರಣ ಸಂಚಿಕೆಯನ್ನೂ ಬಿಡುಗಡೆ ಮಾಡಲಾಯಿತು. ವೀರಶೈವ ದರ್ಶನಕಾರರುಗಳನ್ನು ಕುರಿತ ೪೦ ವಿಭಿನ್ನ ಲೇಖನಗಳ ಮಾಲೆಯುಳ್ಳ "ಕೈವಲ್ಯ"ವೆಂಬ ಬೃಹತ್ ಗ್ರಂಥವನ್ನು ಪ್ರೊ| ಜಿ.ಎಸ್. ಸಿದ್ಧಲಿಂಗಯ್ಯ, ಪ್ರೊ| ಆರ್. ರಾಚಪ್ಪ, ಡಾ| ಎಸ್. ವಿದ್ಯಾಶಂಕರ, ಟಿ.ಆರ್. ಮಹಾದೇವಯ್ಯನವರುಗಳು ಸಂಪಾದಿಸಿಕೊಟ್ಟಿದ್ದಾರೆ. 'ಸರ್ಪಭೂಷಣಶ್ರೀ' ಎಂಬ ಸ್ಮರಣ ಸಂಚಿಕೆಯನ್ನು ಜಿ.ವಿ. ಶಿವಸ್ವಾಮಿ ಮತ್ತು ಎಚ್.ಎಸ್. ಸಿದ್ಧಗಂಗಪ್ಪನವರು ಸಂಪಾದಿಸಿಕೊಟ್ಟಿದ್ದು ಇದರಲ್ಲಿ ೧೯ ಉಪಯುಕ್ತ ಲೇಖನಗಳಿವೆ. ಇದೇ ಸಂದರ್ಭದಲ್ಲಿ ಬಿಡುಗಡೆಯಾದ 'ಕೈವಲ್ಯಕಲ್ಪವಲ್ಲರಿ' ಸಂಗ್ರಹವನ್ನು ಎಸ್. ಶಿವಣ್ಣನವರು ಸಂಪಾದಿಸಿ ಕೊಟ್ಟಿದ್ದಾರೆ. 'ವಿರತಿಯಸಿರಿ ಶ್ರೀ ಸಪ್ಪಣ್ಣನವರು' (ಶ್ರೀ ಸರ್ಪಭೂಷಣ ಶಿವಯೋಗಿಗಳ ಜೀವನ ಹಾಗೂ ಸಾಧನೆ) ಎಂಬ ಕೃತಿಯನ್ನು ಪ್ರೊ| ಜಿ.ಎಸ್. ಸಿದ್ಧಲಿಂಗಯ್ಯನವರು ರಚಿಸಿಕೊಟ್ಟಿದ್ದಾರೆ.[174]

ಹೀಗೆ ಸರ್ಪಭೂಷಣಮಠದ ಪರವಾಗಿ ಸಾಹಿತ್ಯ ಪ್ರಸಾರ ಹಾಗೂ ಪ್ರಕಟಣೆಯ ದೃಷ್ಟಿಯಿಂದ ಅಮೂಲ್ಯವಾದ ಕೃತಿಶ್ರೇಣಿಯೇ ಹೊರಬಂದಿದೆ. ಇಲ್ಲಿನ ಬಹುತೇಕ ಕೃತಿಗಳು ತತ್ತ್ವಸಾಹಿತ್ಯ ಹಾಗೂ ವಿಚಾರಸಾಹಿತ್ಯಕ್ಕೆ ಹೆಚ್ಚಿನ ಒತ್ತು ನೀಡಿದ ಕೃತಿಗಳೇ

ಆದಾಗ್ಯೂ, ಇವುಗಳಲ್ಲಿ ವಚನವಾಙ್ಮಯದ ಪ್ರಭಾವ ಎದ್ದು ಕಾಣುತ್ತದೆ. ಒಟ್ಟಾರೆ ನಗರದ ಹಾಗೂ ನಾಡಿನ ಜನತೆಗೆ ಶ್ರೀಮಠದ ಸಾಹಿತ್ಯಕ-ಸಾಂಸ್ಕೃತಿಕ ಕೊಡುಗೆ ಅವಿಸ್ಮರಣೀಯವಾದದ್ದು.

ಇದೇ ರೀತಿ ನಗರದ 'ಬೇಲಿಮಠ'ವೂ ಕೂಡ ವೀರಶೈವ ಸಾಹಿತ್ಯ ಪ್ರಸಾರ ಹಾಗೂ ಪ್ರಕಟಣೆಯ ದೃಷ್ಟಿಯಿಂದ ಕೆಲವು ಮಹತ್ವದ ಗ್ರಂಥಗಳನ್ನು ಹೊರತಂದಿದೆ. ಕಳೆದ ಶತಮಾನಾಂತ್ಯದಿಂದಲೂ ಈ ಮಠದ ಆಶ್ರಯದಲ್ಲಿ ಸಂಸ್ಕೃತ ಹಾಗೂ ವೇದ ಪಾಠಶಾಲೆಯು ನಿರಂತರವಾಗಿ ನಡೆದು ಬಂದಿತ್ತು. ಇದೇ ಹಿನ್ನೆಲೆಯಲ್ಲಿ ಸಮಾಜದ ಧಾರ್ಮಿಕ ಅವಶ್ಯಕತೆಗಳಿಗೆ ಅನುಗುಣವಾಗಿ ಶ್ರೀಮಠವು ೧೯೩೦ ರಿಂದ ಈಚೆಗೆ ಕೆಲವು ಅಮೂಲ್ಯ ಕೃತಿಗಳನ್ನು ಹೊರತಂದಿತು. ಆಗ ಸಂಸ್ಕೃತದಲ್ಲಿ ದೃವೀಕೃತಗೊಂಡಿದ್ದ ವೀರಶೈವ ಧರ್ಮ ಗ್ರಂಥಗಳಲ್ಲಿ ಆಯ್ದ ಕೆಲವನ್ನು ಕನ್ನಡ ವ್ಯಾಖ್ಯಾನದೊಂದಿಗೆ ಸಂಗ್ರಹಿಸಿಕೊಟ್ಟ ಕೀರ್ತಿ ಸಿರಸಿ ಗುರುಶಾಂತಶಾಸ್ತ್ರಿಗಳದಾದರೆ; ಅವುಗಳನ್ನು ಪ್ರಕಾಶಪಡಿಸಿದ ಕೀರ್ತಿ ಬೆಂಗಳೂರಿನ ಬೇಲಿಮಠದ ಸಿದ್ಧಲಿಂಗಸ್ವಾಮಿ (ಇಮ್ಮಡಿ)ಗಳಿಗೆ ಸಲ್ಲುತ್ತದೆ. ಅವುಗಳಲ್ಲಿ ಮೊದಲ ಕೃತಿಯೇ 'ಕನ್ನಡ ಲಿಂಗಧಾರಣ ಚಂದ್ರಿಕೆ'. ಇದು ೧೯೩೧ರಲ್ಲಿ ಪ್ರಕಟವಾಯಿತು. ನಂತರ ಇವರ 'ಶಿವಲಿಂಗಾರ್ಚನ ಪ್ರಯೋಗ'ವು ೧೯೩೨ರಲ್ಲಿ ಪ್ರಕಟವಾಯಿತು. ಇವೆರಡೂ ಶುದ್ಧ ಶಾಸ್ತ್ರಗ್ರಂಥಗಳೇ ಆಗಿದ್ದು, ಅಲ್ಲಲ್ಲಿ ಕನ್ನಡದ ವ್ಯಾಖ್ಯಾನ ಹಾಗೂ ಸೂಚನೆಗಳನ್ನು ಒಳಗೊಂಡಿವೆ.

ಮುಂದೆ ಇದೇ ಸಿದ್ಧಲಿಂಗಸ್ವಾಮಿಗಳ ಒತ್ತಾಸೆಯ ಮೇರೆಗೆ ಸಿರಸಿ ಗುರುಶಾಂತಶಾಸ್ತ್ರಿಗಳೇ ರಚಿಸಿಕೊಟ್ಟ 'ಕನ್ನಡ ವೀರಶೈವಾನಂದ ಚಂದ್ರಿಕೆ' ಎಂಬ ಬೃಹತ್ ಗ್ರಂಥವು ೧೯೬೦ರಲ್ಲಿ ಪ್ರಕಟವಾಯಿತು. 'ಕೆಳದಿಯ ಭೂಪಾಲ ಬೂದಿಬಸವಪ್ಪನಾಯಕನ (ಕಾಲ ೧೭೪೦-೧೭೫೫) ಆಸ್ಥಾನ ಕವಿಗಳಾಗಿದ್ದು ಉಭಯ ಭಾಷಾ (ಕನ್ನಡ-ಸಂಸ್ಕೃತ) ವಿಶಾರದರೂ, ವೇದಾಗಮ ಪಾರಂಗತರೂ ಆಗಿದ್ದ ಮರಿತೋಂಟದಾರ್ಯರಿಂದ ಸಂಸ್ಕೃತದಲ್ಲಿ ವಿರಚಿತವಾಗಿದ್ದ ''ವೀರಶೈವಾನಂದ ಚಂದ್ರಿಕಾ'' ಎಂಬ ಗ್ರಂಥದ ಕ್ರಿಯಾಕಾಂಡ, ವಾದಕಾಂಡ ಹಾಗೂ ಕಥಾಕಾಂಡ ಎಂಬ ಮೂರು ಭಾಗಗಳಲ್ಲಿ ಪ್ರಮುಖವಾದ ವಾದಕಾಂಡದ ಕನ್ನಡ ಅನುವಾದವೇ ಈ ಮಹತ್ವದ ಉದ್ಗ್ರಂಥ.[175] ಒಟ್ಟು ೨೪ ಪ್ರಕರಣಗಳನ್ನು ಒಳಗೊಂಡಿರುವ ೮೧೫ ಪುಟಗಳ ಈ ಬೃಹತ್ ಗ್ರಂಥವು, ಪ್ರತಿಯೊಂದು ಪ್ರಕರಣಕ್ಕೂ ವಿಸ್ತೃತವಾದ ವ್ಯಾಖ್ಯಾನಗಳನ್ನು ಒಳಗೊಂಡಿದೆ.

ಇದೇ ಬೇಲಿಮಠದ ಪರವಾಗಿ ಸಿರಸಿ ಗುರುಶಾಂತಶಾಸ್ತ್ರಿಗಳೇ ರಚಿಸಿಕೊಟ್ಟಿದ್ದ 'ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ' (ಕನ್ನಡವ್ಯಾಖ್ಯಾನ ಸಹಿತ) ಹಾಗೂ 'ಆತ್ಮವಿಚಾರ ಪತ್ರಿಕಾಕರ್ತರಿಗೆ ಎಚ್ಚರಿಕೆ' ಎಂಬ ಮತ್ತೆರಡು ಕಿರು ಹೊತ್ತಗೆಗಳನ್ನೂ ಸಿದ್ಧಲಿಂಗಸ್ವಾಮಿಗಳು ಪ್ರಕಟಿಸಿದ್ದುದಾಗಿ ತಿಳಿದು ಬರುತ್ತದೆ.[176]

ಬೆಂಗಳೂರಿನ ಚಿಕ್ಕಪೇಟೆಯ 'ಮಹಾಂತರಮಠ'ವೂ ಸಹ ಪ್ರಕಟಣಾ ಪ್ರಪಂಚಕ್ಕೆ ತನ್ನದೇ ಆದ ವಿಶಿಷ್ಟ ರೀತಿಯ ಸೇವೆಯನ್ನು ಸಲ್ಲಿಸಿದೆ. ಈ ಮಠದ ಪರವಾಗಿ ನಮಗೆ ದೊರಕುವ ಮೊಟ್ಟಮೊದಲ ಪ್ರಕಟಣಾ ಕೃತಿ 'ಸಿದ್ಧಾಂತ ಶಿಖೋಪನಿಷತ್' ೧೯೨೯ರಲ್ಲಿ ಮುದ್ರಣವಾಗಿದೆ. ಇದನ್ನು ಮಹಾಂತರಮಠದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಸಂಸ್ಕೃತ ಪಾಠಶಾಲಾ ಅಧ್ಯಾಪಕರಾಗಿದ್ದ ಕೆ.ಯಂ. ವಿಶ್ವನಾಥಶಾಸ್ತ್ರಿ ಪರಿಷ್ಕರಿಸಿಕೊಟ್ಟಿದ್ದಾರೆ.[177] ಇದೇ ಮಠದಲ್ಲಿ ೧೯೨೪ರ ಮಾರ್ಚ್ ೪ ರಂದು ಜರುಗಿದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಜಯಂತಿ ಮಹೋತ್ಸವದಲ್ಲಿ ಅಧ್ಯಕ್ಷತೆ ವಹಿಸಿದ್ದ ರಾಜಸಭಾಭೂಷಣ ದಿವಾನ್ ಬಹಾದುರ್ ಸರ್.ಕೆ.ಪಿ.ಪುಟ್ಟಣ್ಣಶೆಟ್ಟರಿಂದ ಸ್ಥಾಪಿಸಲ್ಪಟ್ಟ 'ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಕೃಪಾಪೋಷಿತ ವೀರಶೈವ ಧರ್ಮಗ್ರಂಥ ಭಂಡಾರ'ದ ವತಿಯಿಂದ ಈ ಕೃತಿಯು ಪ್ರಚಾರಕ್ಕೆ ಬಂದುದಾಗಿ ವಿವರಗಳಿವೆ.[178] ಗ್ರಂಥ'ದ ಮೂಲ ಪಾಠವು ಸಂಸ್ಕೃತ ಹಾಗೂ ಕನ್ನಡಗಳೆರಡರಲ್ಲೂ ಪ್ರಕಟವಾಗಿದ್ದು ಆರಂಭದಲ್ಲಿ ಪರಿಷ್ಕರಣಕಾರರ ವಿಸ್ತೃತ ಪ್ರಸ್ತಾವನೆಯನ್ನು ಒಳಗೊಂಡಿದೆ.

ನಂತರ ಇದೇ ಮಠದ ಪರವಾಗಿ ಟಿ.ಜಿ.ಸಿದ್ಧಪ್ಪಾರಾಧ್ಯರು ಸಂಪಾದಿಸಿಕೊಟ್ಟಿರುವ ಶಿವಯೋಗಿ ಶಿವಾಚಾರ್ಯ ವಿರಚಿತ 'ರೇಣುಕಗೀತೆ'ಯ ಸಂಗ್ರಹವು ೧೯೭೨ರಲ್ಲಿ ಪ್ರಕಟವಾದುದಾಗಿ ತಿಳಿದು ಬರುತ್ತದೆ.[179] ಮುಂದೆ ೧೯೮೭ರಲ್ಲಿ 'ರೇಣುಕಗೀತೆ' ಎಂಬ ಶಿರೋನಾಮೆಯುಳ್ಳ ಇದೇ ಗ್ರಂಥವನ್ನು ಕನ್ನಡ

ಭಾವಾರ್ಥದೊಂದಿಗೆ ಡಾ। ಜ.ಚ.ನಿ. ಅವರು ಸಂಪಾದಿಸಿ ಕೊಟ್ಟಿದ್ದಾರೆ. ಮಹಾಂತರ ಮಠದ ಆಡಳಿತ ವರ್ಗದವರು ಪ್ರಕಟಿಸಿರುವ ಈ ಗ್ರಂಥ'ದಲ್ಲಿ ಒಟ್ಟು ೨೧ ಪರಿಚ್ಛೇದಗಳಿದ್ದು ೧೩೮೨ ಸಂಸ್ಕೃತ ಶ್ಲೋಕಗಳಿವೆ.[180]

ಪ್ರಕಟಣಾ ಕ್ಷೇತ್ರದಲ್ಲಿ ಬೆಂಗಳೂರಿನ ವೀರಶೈವ ಮಠಗಳ ಪರವಾಗಿ ಹೆಸರಿಸಬಹುದಾದ ಇನ್ನೊಂದು ಮಠ ಗವಿಪುರದ 'ನಿಜಗುಣ ಜಂಗಮಮಠ'. ಈ ಮಠದ ನಿಜಗುಣಮಹಾಸ್ವಾಮಿಗಳು ಹಲವಾರು ಸಾಹಿತಿಗಳ ಪ್ರಮುಖ ಸಾಹಿತ್ಯಕೃತಿಗಳ ಪ್ರಕಟಣೆಗಾಗಿ ಉದಾರ ಧನಸಹಾಯ ನೀಡಿದ್ದಾರೆ.[181] ಇತ್ತೀಚೆಗೆ ಇದೇ ನಿಜಗುಣ ಮಹಾಸ್ವಾಮಿಗಳಿಗೆ ಅವರ ಅಭಿಮಾನಿಗಳೂ ಹಾಗೂ ಭಕ್ತ ವೃಂದದವರೆಲ್ಲಾ ಸೇರಿ ದಿನಾಂಕ : ೪.೩. ೧೯೯೬ರಲ್ಲಿ ಅಮೃತ ಮಹೋತ್ಸವವನ್ನು ನೆರವೇರಿಸಿದ್ದರು. ಈ ಸಂದರ್ಭದಲ್ಲಿ ಮಠದ ಪರವಾಗಿ "ನಿಜಗುಣ" ಎಂಬ ಬೃಹತ್ ಗೌರವ ಸಂಪುಟ ಒಂದನ್ನು ಹೊರತರಲಾಯಿತು. ಇದರಲ್ಲಿ ನಾಡಿನ ಪ್ರಖ್ಯಾತ ವಿದ್ವಾಂಸರುಗಳು ಬರೆದಿರುವ ವೀರಶೈವ ಸಾಹಿತ್ಯ ಹಾಗೂ ಪ್ರಸ್ತುತ ಮಠದ ಪರಿಚಯವೂ ಸೇರಿದಂತೆ ೪೬ ವಿಭಿನ್ನ ಲೇಖನಗಳಿವೆ. ಹೃದಯಸಂಪದ, ಧರ್ಮಸಂಪದ ಹಾಗೂ ವೀರಶೈವ ಸಂಪದ ಎಂಬುದಾಗಿ ಮೂರು ವಿಭಾಗಗಳಲ್ಲಿ ವರ್ಗೀಕೃತವಾಗಿರುವ ಈ ಸಂಗ್ರಹ ಗ್ರಂಥವನ್ನು ಡಾ। ಎಚ್.ಎಂ. ಮರುಳಸಿದ್ಧಯ್ಯ ಹಾಗೂ ಷಣ್ಮುಖಯ್ಯ ಅಕ್ಕೂರಮಠ ಇವರುಗಳು ಸಂಪಾದಿಸಿಕೊಟ್ಟಿದ್ದಾರೆ.

ನಗರದ ಮಠಗಳ ಪರವಾಗಿ ಬಹಳ ಹಿಂದಿನಿಂದಲೂ ಮಠಾಧಿಪತಿಗಳಾಗಿದ್ದ ಅನೇಕ ಜನ ವಿದ್ವಾಂಸರು ಸ್ವತಃ ಗ್ರಂಥ'ಕರ್ತರಾಗಿದ್ದುದಲ್ಲದೆ, ಕೆಲವರು ವೀರಶೈವ ಸಾಹಿತ್ಯದ ಅಮೂಲ್ಯ ಕೃತಿಗಳಿಗೆ ಪ್ರತಿಹಸ್ತಪ್ರತಿಗಳನ್ನೂ ತಯಾರಿಸುತ್ತಿದ್ದ ಲಿಪಿಕಾರರಾಗಿದ್ದುದಾಗಿ ಹೇಳುವುದುಂಟು.[182] ಹೀಗೆ ಸಾಹಿತ್ಯ ಪ್ರಸಾರ ಹಾಗೂ ಪ್ರಕಟಣೆಯ ದೃಷ್ಟಿಯಿಂದ ಇಲ್ಲಿನ ಬಹಳಷ್ಟು ಮಠಗಳು ಗ್ರಂಥರಚನೆಯ ಜೊತೆಗೆ ಗ್ರಂಥ ಪರಿಷ್ಕರಣೆ, ಪ್ರಕಟಣೆ ಹಾಗೂ ಪ್ರವಚನ, ಉಪನ್ಯಾಸ, ವಿಚಾರ ಸಂಕಿರಣ ಇವೇ ಮೊದಲಾದ ಸಾಂಸ್ಕೃತಿಕ ಸಾಹಿತ್ಯಕ ಚಟುವಟಿಕೆಗಳ ಮೂಲಕ ಶ್ಲಾಘನೀಯವಾದ ಸೇವೆಯನ್ನು ಸಲ್ಲಿಸಿವೆ.

---

**ಅಡಿಟಿಪ್ಪಣಿಗಳು**

1. ಕನ್ನಡ ನಿಘಂಟು. ಸಂ-೮. ಕನ್ನಡ ಸಾಹಿತ್ಯ ಪರಿಷತ್ತು. ಪು. ೮೫೧೦.
2. 'ಕರ್ನಾಟಕ ಕವಿಚರಿತೆಯ ಮೂರೂ ಸಂಪುಟಗಳಲ್ಲಿ, ಕವಿಚರಿತ್ರೆಯ ಅನುಕ್ತ ಕೃತಿ ಸೂಚಿಯಲ್ಲಿ ಅಪಾರ ಸಂಖ್ಯೆಯ ಅಪ್ರಕಟಿತ ಹಸ್ತಪ್ರತಿ, ತಾಳೆಗರಿಗಳಲ್ಲಿ ಉಪಲಬ್ಧವಿರುವ ಎಲ್ಲಾ ಸಾಹಿತ್ಯ ರಾಶಿಯನ್ನು ಸಂಪೂರ್ಣವಾಗಿ ಪರಿಗಣಿಸಿದ್ದೇ ಆದರೆ, ಜೈನ ಹಾಗೂ ಬ್ರಾಹ್ಮಣ ವಾಙ್ಮಯಗಳ ಪಾಲು ಕಾಲುಭಾಗವಾದರೆ ಉಳಿದ ಮುಕ್ಕಾಲುಪಾಲು ವೀರಶೈವ ಸಾಹಿತ್ಯವೇ ಆಗಿದೆ.'. (ಡಾ। ವಿ.ಶಿವಾನಂದ. ವೀರಶೈವ ಸಾಹಿತ್ಯ. ನಿಜಗುಣ. ಸಂ: ಡಾ। ಎಚ್.ಎಂ. ಮರುಳಸಿದ್ಧಯ್ಯ, ಷಣ್ಮುಖಯ್ಯ ಅಕ್ಕೂರಮಠ. ಪು. ೩೯೮)
3. ಡಾ। ಸಂಗಮೇಶ ಸವದತ್ತಿಮಠ. ವೀರಶೈವ ಮಠಗಳ ಕೊಡುಗೆ-ವಿಶ್ವಪ್ರಭೆ. ಸಂ-೩. ಸಂ : ಪ್ರೊ। ಜಿ.ಎಚ್. ಹನ್ನೆರಡು ಮಠ. ಪು. ೫೨೨.
4. ಡಾ। ಎಸ್. ವಿದ್ಯಾಶಂಕರ. ಕನ್ನಡ ಸಾಹಿತ್ಯಕ್ಕೆ ವೀರಶೈವ ಪುರಾಣಗಳ ಕೊಡುಗೆ. ವೀರಶೈವ ಸಾಹಿತ್ಯ ಸಮೀಕ್ಷೆ. ಸಂ: ಸದಾನಂದ ಕನವಳ್ಳಿ ಮತ್ತು ಚನ್ನಪ್ಪಕೆರಿಮನಿ. ಪು. ೫೪೫, ೫೪೬.
5. ಇಂದಿನ ಆಧುನಿಕ ಕಾಲದ ವೀರಶೈವ ಮಠಗಳು ಸಾಹಿತ್ಯ ಕ್ಷೇತ್ರದಲ್ಲಿ ಹೇಗೆ ಕಾರ್ಯ ನಿರ್ವಹಿಸಬಲ್ಲವು ಎಂಬುದಕ್ಕೆ ಪರ್ಯಾಯವಾಗಿ ಧಾರವಾಡದ ಮುರುಘಾಮಠ, ಹುಬ್ಬಳ್ಳಿಯ ಮೂರುಸಾವಿರಮಠ, ಡಂಬಳದ ತೋಂಟದಾರ್ಯಮಠ, ಮುಂಡರಗಿಯ ಅನ್ನದಾನೀಶ್ವರಮಠ, ತುಮಕೂರಿನ ಸಿದ್ಧಗಂಗಾಮಠ, ಚಿತ್ರದುರ್ಗದ ಬೃಹನ್ಮಠ, ಮೈಸೂರಿನ ಸುತ್ತೂರುಮಠ, ಬೆಂಗಳೂರಿನ ಸರ್ಪಭೂಷಣಮಠ ಇವೇ ಮೊದಲಾದ ಮಠಗಳು ಉತ್ತಮ ನಿದರ್ಶನಗಳಾಗಿವೆ.
6. ಆರ್. ನರಸಿಂಹಾಚಾರ್ ಅವರು ಸರ್ಪಭೂಷಣರ ಕಾಲವನ್ನು ಸು. ೧೭೦೦ ಎಂದು ಗುರುತಿಸಿದ್ದಾರೆ. (ಕರ್ನಾಟಕ ಕವಿಚರಿತೆ. ಭಾಗ - ೨. ಪು. ೫೬೦).
7. ೧೯೨೧ರಲ್ಲಿ ಬಳ್ಳಾರಿಯ ಕರ್ನಾಟಕ ಬುಕ್ ಡಿಪೋ ಪ್ರೆಸ್‌ನ ಎಸ್.ಕೆ. ಕೃಷ್ಣಸ್ವಾಮಿಶೆಟ್ಟಿಯವರಿಂದ ಪ್ರಕಟವಾಗಿರುವ 'ಕೈವಲ್ಯ ಕಲ್ಪವಲ್ಲರಿ' ಕೃತಿಯ ಮುಖಪುಟದಲ್ಲಿ "ಕಲ್ಯಾಣನಗರ ಪ್ರಾಂತ್ಯದೊಳು ಪುಟ್ಟಿ, ಮಹಾ ಶಿವಯೋಗಿಯೆನಿಸಿಕೊಂಡು, ಅನಿತರ ಸಾಧಾರಣವಾದ ಯಶಸ್ಸನ್ನು ಸಂಪಾದಿಸಿದ್ದ 'ಸಪ್ಪಣ್ಣಸ್ವಾಮಿ' ಎಂಬ ಲೋಕ ರೂಢನಾಮದಿಂದ ಶೋಭಿಸುವ ಸರ್ಪಭೂಷಣನೆಂಬ ಶಿವಯೋಗಿಯಿಂದ ವಿರಚಿತವಾದ ಕೈವಲ್ಯಕಲ್ಪವಲ್ಲರೀಯು ಮುಮುಕ್ಷು ಜನೋಪಯೋಗಿ ಗ್ರಂಥವು" ಎಂಬುದಾಗಿ ನಮೂದಿಸಲಾಗಿದೆ.

8. 'ಕೈವಲ್ಯ' ಎಂದರೆ ಅನುಭಾವಿಯು ತಲುಪುವ ಅತ್ಯಂತಿಕ ನೆಲೆ, ಮೋಕ್ಷ ಎಂದರ್ಥ. ಜೈನ ಪರಿಭಾಷೆಯಲ್ಲಿ ಇದನ್ನು 'ಕೇವಲಜ್ಞಾನ'ವೆಂದು ಪರಿಗಣಿಸಲಾಗುತ್ತದೆ. (ಜಿ.ಎಸ್. ಶಿವರುದ್ರಪ್ಪ. ಸರ್ಪಭೂಷಣ ಶಿವಯೋಗಿ. ಪು. ೧೨.)
9. ಸರ್ಪಭೂಷಣ ಶಿವಯೋಗಿಗಳ ಹಿಂದೆ ಹಾಗೂ ಮುಂದೆ ಮುಪ್ಪಿನ ಷಡಕ್ಷರಿ, ಚಿದಾನಂದ ಅವಧೂತರು, ಮೈಲಾರದ ಬಸವಲಿಂಗಶರಣರು, ಘನಮಠದ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು, ಕಡಕೋಳು ಮಡಿವಾಳಪ್ಪನವರು, ಕೊಡಲೂರೇಶ, ಸಿಂಬರಗಿ ಮಹಾರಾಜ, ಶಂಕರಾನಂದ, ಶಿಶುನಾಳ ಷರೀಫ್ ಇವರೇ ಮುಂತಾದ ಅನೇಕ ತತ್ವಪದಕಾರರುಗಳು ಆಗಿ ಹೋಗಿದ್ದಾರೆ.
10. ಸಂಗೀತಕೃತಿಗಳನ್ನು ರಚಿಸುವವರನ್ನು ವಾಗ್ಗೇಯಕಾರರೆಂದು ಗುರುತಿಸಲಾಗುತ್ತದೆ. (ಕನ್ನಡ ನಿಘಂಟು. ಸಂ-೮. ಕನ್ನಡ ಸಾಹಿತ್ಯ ಪರಿಷತ್ತು. ಪು. ೭೮೨೭).
11. ಶಿ.ಶಿ. ಬಸವನಾಳ. (ಸಂ ) ಕೈವಲ್ಯಕಲ್ಪವಲ್ಲರಿ. ಮುನ್ನುಡಿ. ಪು. xiii.
12. 'ತತ್ವಪದ' : 'ಅಂತರಂಗದ ಅರಿವಿನ ಮೂಲಭೂತ ತತ್ವಗಳನ್ನು ಕುರಿತು ರಚಿತವಾದ ಪದಗಳನ್ನು ತತ್ವಪದಗಳೆಂದು ಕರೆಯಲಾಗುತ್ತದೆ. (ಡಾ: ಎಚ್. ತಿಪ್ಪೇರುದ್ರಸ್ವಾಮಿ. ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪು. ೩೭೯)
13. ನಿಜಗುಣ ಶಿವಯೋಗಿಗಳ 'ಕೈವಲ್ಯಪದ್ಧತಿ'ಗೂ ಹಾಗೂ ಸರ್ಪಭೂಷಣ ಶಿವಯೋಗಿಗಳ 'ಕೈವಲ್ಯಕಲ್ಪವಲ್ಲರಿ'ಗೂ ಇರುವ ಸಾಮ್ಯತೆ.

| ಸಮಾನ ಪರಿವಿಡಿ | ಕೈವಲ್ಯಪದ್ಧತಿಯಲ್ಲಿನ ಪದ್ಯಗಳ ಸಂಖ್ಯೆ | ಕೈವಲ್ಯಕಲ್ಪವಲ್ಲರಿಯಲ್ಲಿನ ಪದ್ಯಗಳ ಸಂಖ್ಯೆ |
|---|---|---|
| ಶಿವಕಾರುಣ್ಯಪ್ರಾರ್ಥನಾಸ್ಥಲ | ೨೮ | ೨೬ |
| ಜೀವಸಂಬೋಧನಸ್ಥಲ | ೨೨ | ೨೧ |
| ನೀತಿಕ್ರಿಯಾಚರ್ಯಸ್ಥಲ | ೨೬ | ೨೫ |
| ಯೋಗಪ್ರತಿಪಾದನ ಸ್ಥಲ | ೩೯ | ೨೯ |
| ಜ್ಞಾನಪ್ರತಿಪಾದನ ಸ್ಥಲ | ೫೯ | ೭೬ |
| ಒಟ್ಟು | ೧೭೪ | ೧೭೭ |

14. ಇಪ್ಪತ್ತಾರು ಷಟ್ಪದಿ ಪದ್ಯಗಳಲ್ಲಿ-ಭೋಗಷಟ್ಪದಿ-೨, ಭಾಮಿನಿ ಷಟ್ಪದಿ-೧, ಪರಿವರ್ಧಿನಿ ಷಟ್ಪದಿ-೬, ವಾರ್ಧಕ ಷಟ್ಪದಿ -೧೭ ಪದ್ಯಗಳಿವೆ.
15. ಕೈವಲ್ಯಕಲ್ಪವಲ್ಲರಿ. ಸಂ: ಶಿ.ಶಿ. ಬಸವನಾಳ. (೧೯೪೮) ಸ್ಥಲ ೧. ಪದ್ಯ ೧.
16. ಅದೇ. ಸ್ಥಲ ೧. ಪದ್ಯ ೪.
17. 'ಶಕ್ತಿ ವಿಶಿಷ್ಟಾದ್ವೈತ' : ಜೀವಾತ್ಮ ಪರಮಾತ್ಮರ ಸಾಮರಸ್ಯವನ್ನು ಪ್ರತಿಪಾದಿಸುವ ಸಿದ್ಧಾಂತ. ''ಪರಾಶಕ್ತಿಯು ವಿಶಿಷ್ಟ ಪರಮಾತ್ಮನಲ್ಲಿ ಮಾಯಾಶಕ್ತಿಯು ವಿಶಿಷ್ಟ ಜೀವಾತ್ಮನಲ್ಲಿ ಸಮರಸವಾಗಿ ಬೆರೆಯುವುದಕ್ಕೆ ಶಕ್ತಿ ವಿಶಿಷ್ಟಾದ್ವೈತವೆಂದು ಹೆಸರು''. ಜೀವಾತ್ಮ ಮತ್ತು ಪರಮಾತ್ಮ (ಅಂಗ-ಲಿಂಗ)ರು ಒಂದುಗೂಡುವುದೇ (ಸಾಮರಸ್ಯವು) ಶಕ್ತಿ ವಿಶಿಷ್ಟಾದ್ವೈತ ಪದದ ವಿಶಿಷ್ಟಾರ್ಥವು. (ಕನ್ನಡ ನಿಘಂಟು. ಸಂ - ೮. ಕನ್ನಡಸಾಹಿತ್ಯಪರಿಷತ್ತು. ಪು. ೮೦೭೯.)
18. ಕೈವಲ್ಯಕಲ್ಪವಲ್ಲರಿ. ಪೂರ್ವೋಕ್ತ. ಸ್ಥಲ ೧. ಪದ್ಯ ೧೧, ೧೨, ೨೪.
19. ಅದೇ. ಸ್ಥಲ ೨. ಪದ್ಯ ೯.
20. ಅದೇ. ಸ್ಥಲ. ಪದ್ಯ ೧೦.
21. ನೋಡಿ: ಡಾ। ಜಿ.ಎಸ್. ಶಿವರುದ್ರಪ್ಪ. ಸರ್ಪಭೂಷಣಶಿವಯೋಗಿ. ಪು. ೩೦-೩೨ ಮತ್ತು ಜಿ.ಎಸ್. ಸಿದ್ಧಲಿಂಗಯ್ಯ. ಸರ್ಪಭೂಷಣಶಿವಯೋಗಿಗಳು. 'ಕೈವಲ್ಯ'. (ಶ್ರೀ ಸರ್ಪಭೂಷಣ ಶಿವಯೋಗಿಗಳ ದ್ವಿ ಶತಮಾನೋತ್ಸವ ಸ್ಮರಣ ಸಂಪುಟ) ಪುಟ. ೪೨.
22. 'ಮುಮುಕ್ಷು: ಐಹಿಕ ವ್ಯವಹಾರಗಳಿಂದ ದೂರವಾಗಲು ಬಯಸುವವ; ಮೋಕ್ಷಾಪೇಕ್ಷೆಯಿಂದ ಕೂಡಿರುವವ; ಮುಕ್ತಿಯನ್ನು ಬಯಸುವವ. (ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು. ೭೨೭೨)
23. 'ತ್ರಿಕರಣ' : ಕಾಯ, ವಾಕ್ಕು, ಮನಸ್ಸು.
24. ಸಾಮಾನ್ಯವಾಗಿ ಯೋಗವನ್ನು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ್ಯ, ಸಮಾಧಿ ಎಂಬುದಾಗಿ ''ಅಷ್ಟಾಂಗ ವಿಧಯೋಗ''ವೆಂದು ಗುರುತಿಸುವುದುಂಟು. ಈ ಸಾಧನೆಗಳಲ್ಲಿ ಮೊದಲಿನ ಐದಕ್ಕೆ ಹೆಚ್ಚಾಗಿ ಮಹತ್ವ ಕೊಡುವುದು ಹಠಯೋಗವೆಂದೂ; ಮುಂದಿನ ಎರಡಕ್ಕೆ ಹೆಚ್ಚಿನ ಮಹತ್ವ ಕೊಡುವುದು ಮಂತ್ರ ಹಾಗೂ ಲಯ ಯೋಗವೆಂದೂ; ಕೊನೆಯದಾದ ಸಮಾಧಿ ಯೋಗವೇ ಸಾಧನೆಗೆ ತಕ್ಕ ಸಿದ್ಧಿಯನ್ನು ಒಳಗೊಂಡ ಪೂರ್ಣ ಪ್ರಾಶಸ್ತ್ಯವನ್ನು ಪಡೆದ ರಾಜಯೋಗವೆಂದೂ ಹೇಳುವುದುಂಟು. (ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರು ಶ್ರೀ ಸರ್ಪಭೂಷಣಶಿವಯೋಗಿಗಳ ಜೀವನ ಚರಿತ್ರೆ. ಅನುಬಂಧ. ಪು. ೫೩, ೫೪.)
25. ವೇದಾಂತ : ವೇದದ ಕಡೆಯ ಭಾಗ; ಉಪನಿಷತ್ತು; ಷಡ್ದರ್ಶನಗಳಲ್ಲಿ ಕಡೆಯದು. ಆಧ್ಯಾತ್ಮ ಅಥವಾ ತತ್ವ ಜಿಜ್ಞಾಸೆಗಳಿಗೆ ಸಂಬಂಧಿಸಿದ್ದು. (ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು. ೮೦೧೯)
26. ಕೈವಲ್ಯಕಲ್ಪವಲ್ಲರಿ. ಸಂ: ಶಿ.ಶಿ. ಬಸವನಾಳ. (ಪ್ರ) ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠ. ಬೆಂಗಳೂರು. ೧೯೪೮. ಸ್ಥಲ ೩. ಪದ್ಯ ೭.
27. ಅದೇ ಸ್ಥಲ. ಪದ್ಯ ೧೮.

28. ಅದೇ. ಸ್ಥಲ ೪. ಪದ್ಯ ೧೫.
29. ಅದೇ ಸ್ಥಲ. ಪದ್ಯ ೨೦.
30. ಅದೇ. ಸ್ಥಲ ೫. ಪದ್ಯ ೨೨.
31. ಬೆಂಗಳೂರು ಮತ್ತು ಸುತ್ತಮುತ್ತಲ ಪ್ರಾಂತ್ಯದಲ್ಲಿ ಇಂದಿಗೂ ಕೂಡ ಹಳೆಯ ತಲೆಮಾರಿನ ಅನೇಕ ಮಂದಿ ಭಕ್ತರು ಸರ್ಪಭೂಷಣ ಶಿವಯೋಗಿಗಳ ಹಲವಾರು ಪದ್ಯಗಳನ್ನು ಕಂಠಸ್ಥವಾಗಿ ಹಾಡುತ್ತಾರೆ.
32. ಕೈವಲ್ಯ ಕಲ್ಪವಲ್ಲರಿ. ಪೂರ್ವೋಕ್ತ. ಸ್ಥಲ ೪. ಪದ್ಯ ೨೪.
33. ಸರ್ಪಭೂಷಣರ ಕೈವಲ್ಯಕಲ್ಪವಲ್ಲರಿಯನ್ನು ಕುರಿತು ಇದುವರೆಗೆ ಹಲವಾರು ವಿದ್ವತ್‌ಪೂರ್ಣ ಕೃತಿಗಳೂ ಹಾಗೂ ವಿಮರ್ಶಾತ್ಮಕ ಲೇಖನಗಳು ಹೊರಬಂದಿವೆ. ಹೆಚ್ಚಿನ ವಿವರಗಳಿಗಾಗಿ ಅವುಗಳನ್ನು ಅವಲೋಕಿಸಬಹುದು ಅವುಗಳೆಂದರೆ :
    1. ಶಿ.ಶಿ.ಬಸವನಾಳ. (ಸಂ) ಕೈವಲ್ಯಕಲ್ಪವಲ್ಲರಿ. ಪ್ರಸ್ತಾವನೆಯ ಭಾಗ. (ಪ್ರ : ಶ್ರೀಸರ್ಪಭೂಷಣ ಶಿವಯೋಗೀಶ್ವರಮಠ. ಬೆಂಗಳೂರು. ೧೯೪೮).
    2. ಮಲ್ಲಾಬಾದಿ ವೀರಭದ್ರಪ್ಪ. ಬೆಂಗಳೂರು ಶ್ರೀ ಸರ್ಪಭೂಷಣಶಿವಯೋಗಿಗಳ ಜೀವನ ಚರಿತ್ರೆ. (ಪ್ರ: ಪಂಪಾಸಾಹಿತ್ಯ ಪ್ರಕಟಣಾಲಯ. ದಾವಣಗೆರೆ. ೧೯೫೭). ಅನುಬಂಧ. ಪು. ೪೯-೫೮.
    3. ಆರ್. ಸಿ. ಹಿರೇಮಠ. ಕೈವಲ್ಯಕಲ್ಪವಲ್ಲರಿ ಸಂಗ್ರಹ. ಪ್ರಸ್ತಾವನೆ (ಪ್ರ: ಶ್ರೀಮೃತ್ಯುಂಜಯಸ್ವಾಮಿಗಳು. ವಿರಕ್ತಮಠ. ಮಮದಾಪುರ. ೧೯೫೪.)
    4. ಡಾ। ಎಚ್. ತಿಪ್ಪೇರುದ್ರಸ್ವಾಮಿ. ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಡಿ.ವಿ.ಕೆ. ಪ್ರಕಾಶನ. ಮೈಸೂರು-೧೯೮೫. ಪು. ೩೯೦. ೩೯೬.
    5. ಜಿ.ವಿ.ಜಯಾರಾಜಶೇಖರ್. ಸಂಗೀತಕ್ಕೆ ಸರ್ಪಭೂಷಣ ಶಿವಯೋಗಿ, ಬಾಲಲೀಲಾ ಮಹಾಂತಶಿವಯೋಗಿಗಳ ಕೊಡುಗೆ. ಬಸವಪಥ. ಸಂಪುಟ-೧೧. ಸಂಚಿಕೆ-೩. ಜೂನ್. ೧೯೮೯. ಪು. ೫೮-೬೨.
    6. ಸಿ.ಎಂ. ಮರಿಸ್ವಾಮಿ. ಕೈವಲ್ಯಕಾರರು ತೋರಿದ ದಾರಿ. ಶರಣಸಾಹಿತ್ಯ. ಸಂಪುಟ-೩೨. ಸಂಚಿಕೆ-೨. ಏಪ್ರಿಲ್/ ಮೇ. ೧೯೭೬. ಪು. ೨೬-೩೧.
    7. ಬಿ.ಶಿವಮೂರ್ತಿಶಾಸ್ತ್ರಿ. ಶ್ರೀ ಸರ್ಪಭೂಷಣ ಶಿವಯೋಗಿಗಳು.ವೀರಶೈವ ಮಹಾಪುರುಷರು. ೧೯೫೩. ಪು. ೨೯-೩೦.
    8. ಕೆ.ಪಿ. ಶಿವಲಿಂಗಯ್ಯ. ಶ್ರೀ ಸರ್ಪಭೂಷಣ ಶಿವಯೋಗಿಗಳು. ಬಸವಪಥ. ಸಂಪುಟ-೧೨. ಸಂಚಿಕೆ-೪. ಜುಲೈ ೧೯೯೦. ಪು. ೩೯-೪೪.
    9. ಜಿ.ಎಸ್.ಶಿವರುದ್ರಪ್ಪ. ಸರ್ಪಭೂಷಣ ಶಿವಯೋಗಿ. (ಪ್ರ)ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು. ೧೯೯೫. ಪು. ೨೦-೩೬.
    10. ಜಿ.ಎಸ್. ಸಿದ್ಧಲಿಂಗಯ್ಯ. ಸರ್ಪಭೂಷಣ ಶಿವಯೋಗಿಗಳು. ಕೈವಲ್ಯ (ಶ್ರೀ ಸರ್ಪಭೂಷಣ ಶಿವಯೋಗೀಶ್ವರ ದ್ವಿಶತಮಾನೋತ್ಸವ ಸ್ಮರಣ ಸಂಪುಟ : ೧೯೯೫) ಪು. ೧೬-೪೪.
    11. ಜಿ.ಎಸ್. ಸಿದ್ಧಲಿಂಗಯ್ಯ. ವಿರತಿಯಸಿರಿ ಶ್ರೀ ಸಪ್ಪಣ್ಣನವರು. (ಪ್ರ : ಸರ್ಪಭೂಷಣಮಠದ ಟ್ರಸ್ಟ್. ಬೆಂಗಳೂರು. ೧೯೯೫) ಸಾಹಿತ್ಯ ವಿಭಾಗ.
    12. ಷಣ್ಮುಖಯ್ಯ ಅಕ್ಕೂರಮಠ. ಸರ್ಪಭೂಷಣ ಶಿವಯೋಗಿ. (ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು. ೧೯೯೬) ಪ್ರಸ್ತಾವನೆ. ಪು. xii-xvi ಮತ್ತು ಅನುಬಂಧ. ಪು. ೬೦-೮೧.
34. ರಂ.ಶ್ರೀ. ಮುಗಳಿ. ಕನ್ನಡ ಸಾಹಿತ್ಯ ಚರಿತ್ರೆ. ಪು. ೩೨೭.
35. ನಗರದ ಗಂಜಾಂಮಠದಲ್ಲಿ ದೊರೆತ ಪ್ರತಿಯೊಂದರಲ್ಲಿ ಮುಖಪುಟವೆಲ್ಲಾ ಹರಿದಿದ್ದು ಕೆಳಭಾಗದಲ್ಲಿ, 'ಬೆಂಗಳೂರು ೧೮೭೮' ಎಂದು ನಮೂದಾಗಿದೆ.
36. ಬೆಂಗಳೂರಿನ ವಿಚಾರದರ್ಪಣ ಮುದ್ರಾಕ್ಷರ ಶಾಲೆಯಿಂದ ಪ್ರಕಟವಾಗಿದ್ದ (೧೮೮೨) ಈ ಕೃತಿಯು ನಗರದ ಬೇಲಿಮಠದಲ್ಲಿ ಲಭ್ಯವಾಯಿತು.
37. ಸರ್ಪಭೂಷಣ ಶಿವಯೋಗಿಗಳವರ ಕೈವಲ್ಯಕಲ್ಪವಲ್ಲರಿಯು ೧೮೭೮ರಿಂದ ೧೯೫೫ರವರೆಗೆ ಒಟ್ಟು ೧೮ ಆವೃತ್ತಿಗಳಲ್ಲಿ ಪ್ರಕಟವಾಗಿರುವುದಾಗಿ ಗಮಕ ವಿದ್ವಾನ್ ಚನ್ನಬಸಪ್ಪ (೮೬) ನವರು (ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು) ಹೇಳುತ್ತಾರೆ.
38. ಕೈವಲ್ಯ ಕಲ್ಪವಲ್ಲರಿಯ ಸಟೀಕಾ ತಾತ್ಪರ್ಯದೊಂದಿಗೆ ಪ್ರಕಟವಾದ ಕೃತಿಗಳು-(ಲಭ್ಯವಾದವು.)
    1. ಸಪ್ಪಣ್ಣಸ್ವಾಮಿಗಳ ಸಟೀಕಾ ಕೈವಲ್ಯಕಲ್ಪವಲ್ಲರೀ. ಸಂ: ಬೆಂಗಳೂರಿನ ದೊಡ್ಡಬೆಲೆ ನಾರಾಯಣಶಾಸ್ತ್ರಿಯಿಂದ. (ಪ್ರ) ಕರ್ನಾಟಕ ಬುಕ್‌ಡಿಪೋಪ್ರೆಸ್. ಪ್ರೊಪ್ರೈಟರ್. ಎಸ್.ಕೆ. ಕೃಷ್ಣಯ್ಯ ಶೆಟ್ಟಿ. ಬಳ್ಳಾರಿ. ೧೯೨೧.
    2. ಸಪ್ಪಣ್ಣಸ್ವಾಮಿಗಳ ಕೈವಲ್ಯಕಲ್ಪವಲ್ಲರಿ. (ಸಟೀಕಾ ತಾತ್ಪರ್ಯ ಸಹಿತ) ಬ್ರಂ ॥ ಶ್ರೀ ॥ ತ್ರಿವಿಕ್ರಮಾನಂದ ಸರಸ್ವತಿಸ್ವಾಮಿ. ೧೯೫೭.
    3. ಕೈವಲ್ಯಕಲ್ಪವಲ್ಲರಿ. (ಭಾವಾರ್ಥ ಬೋಧಿನಿ ಟೀಕಾಸಹಿತ) ಸಂ : ಪಂಡಿತ ವೈ. ನಾಗೇಶಶಾಸ್ತ್ರಿ. (ಪ್ರ) ಶ್ರೀ. ನಿ.ಪ್ರ. ಮಹಾಂತ ಸ್ವಾಮಿಗಳು, ಶ್ರೀ ಗುರು ಮೃತ್ಯುಂಜಯ ಸ್ವಾಮಿಗಳು. ಮುರುಘಾಮಠ. ಧಾರವಾಡ. ೧೯೬೨.

4. ಮಹಾ ಶಿವಯೋಗಿ ಶ್ರೀ ಸಪ್ಪಣ್ಣಾರ್ಯರ ಕೈವಲ್ಯಕಲ್ಪವಲ್ಲರಿ. (ಟೀಕಾತಾತ್ಪರ್ಯಸಹಿತ). ಲೇಖಕ : ಎಚ್.ಟಿ. ಮಹಾಂತೇಶಶಾಸ್ತ್ರಿ. (ಪ್ರ) ಪಿ.ಸಿ. ಶಾಬಾದಿಮಠ ಬುಕ್‌ಡಿಪೋ. ಗದಗ. ೧೯೭೬.

39. ಜ್ಞಾನಶತಕಂ. ಸಂ : ಎಂ.ಜಿ. ನಂಜುಂಡಾರಾಧ್ಯ. (ಪ್ರ) ಶ್ರೀಸರ್ಪಭೂಷಣ ಶಿವಯೋಗೀಶ್ವರಮಠ. ಬೆಂಗಳೂರು. ೧೯೭೮. ಮಂಗಳಾಚರಣಂ. ಪದ್ಯ ೧.

40. ಶ್ರುತಿ, ಸ್ಮೃತಿ, ಮತ್ತು ನ್ಯಾಯ ಇವುಗಳನ್ನು ಪ್ರಸ್ಥಾನತ್ರಯಗಳೆಂದು ಕರೆಯಲಾಗುತ್ತದೆ. ಇಲ್ಲಿ ವೇದ ಉಪನಿಷತ್ತುಗಳು ಶ್ರುತಿಪ್ರಸ್ಥಾನಕ್ಕೂ, ಮನ್ವಾದಿ ಸ್ಮೃತಿಗಳು ಮತ್ತು ಇತಿಹಾಸ ಪುರಾಣಾದಿಗಳು ಸ್ಮೃತಿ ಪ್ರಸ್ಥಾನಕ್ಕೂ, ಬಾದರಾಯಣ ವಿರಚಿತ ಬ್ರಹ್ಮಸೂತ್ರಗಳು ನ್ಯಾಯ ಪ್ರಸ್ಥಾನಕ್ಕೂ ಸೇರುತ್ತವೆ. (ಎಂ.ಜಿ. ನಂಜುಂಡಾರಾಧ್ಯ. ಜ್ಞಾನಶತಕಂ. ಜ್ಞಾನಶತಕಸಾರ. ಪು. ೧)

41. ಅದೇ. ಪು. ೨.

42. ಅದೇ ಪ್ರಕಾಶಕರ ಹಾರೈಕೆ. ಪು. vi.

43. ಅದೇ. ಮುನ್ನುಡಿ. ಪು. iv.

44. ಸರ್ಪಭೂಷಣರ ಜ್ಞಾನಶತಕವು ಸುರಪುರದ ತ್ರಿವಿಕ್ರಮಾನಂದ ಸರಸ್ವತಿಸ್ವಾಮಿ (ಕೈವಲ್ಯಕಲ್ಪವಲ್ಲರಿಗೆ ಟೀಕೆ ಬರೆದವರು) ಯವರ ಪುತ್ರ ಶಂಕರಾನಂದಸ್ವಾಮಿಸಗರ ಇವರಿಂದ ಕನ್ನಡ ಟೀಕೆ ತಾತ್ಪರ್ಯಗಳೊಂದಿಗೆ ೧೯೫೭ ರಲ್ಲಿ ಬರೆದು ಮುದ್ರಿತ (೧೮೧ ಪುಟಗಳಲ್ಲಿ) ವಾಗಿದೆ. ನಂತರ ಅನಂತಪುರ ಜಿಲ್ಲಾ ರಾಯದುರ್ಗದ ಸುಖಾಶ್ರಯ ಪ್ರಬೋಧಾ ಕಾರ್ಯಾಲಯ ಸ್ಥಾಪಕರಾದ ಸಕ್ರಪ್ಪಸ್ವಾಮಿಗಳು ಇದೇ ಜ್ಞಾನಶತಕಕ್ಕೆ ಕನ್ನಡದಲ್ಲಿ ಟೀಕಾ-ತಾತ್ಪರ್ಯ-ವಿಶೇಷಾರ್ಥಗಳನ್ನೂ ಬರೆದಿರುವುದಲ್ಲದೆ ಕನ್ನಡ ಪದ್ಯಾನುವಾದವನ್ನೂ ಬರೆದು ಸೂತ್ರ ಪ್ರಾಯವಾದ ಗ್ರಂಥ (೨೮೮ ಪುಟಗಳಲ್ಲಿ)ವನ್ನು ೧೯೫೮ರಲ್ಲಿ ಪ್ರಕಟಿಸಿದ್ದಾರೆ. [ಎಂ.ಎಸ್. ಬಸವರಾಜಯ್ಯ (ಸಂ) ಭುಜಂಗಮಾಲಾ ಶಿವಸಂಕೀರ್ತನಮ್. ಪ್ರಸ್ತಾವನೆ. ಪು. vi] ಇದೇ ಮಾದರಿಯ ಗ್ರಂಥ (೨೨೫ ಪುಟಗಳಲ್ಲಿ)ವನ್ನು ಎಂ.ಜಿ. ನಂಜುಂಡಾರಾಧ್ಯರು ಸಿದ್ಧಗೊಳಿಸಿದ್ದು, ಬೆಂಗಳೂರಿನ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠವು ಅದನ್ನು ೧೯೭೮ರಲ್ಲಿ ಪ್ರಕಟಮಾಡಿದೆ.

45. 'ಪಂಚಚಾಮರವೃತ್ತ'ವು ಸಂಸ್ಕೃತದಲ್ಲಿ ಅದರ ನಾದಲೋಲತೆಗಾಗಿ ತುಂಬಾ ಪ್ರಸಿದ್ಧಿಯಾಗಿದೆ. ರಾವಣನಿಂದ ರಚಿತವಾದುದೆಂದು ಹೇಳಲಾಗುವ 'ಶಿವತಾಂಡವ ಸ್ತೋತ್ರ'ವೂ ಇದೇ ಛಂದಸ್ಸಿನಲ್ಲಿರುವುದಾಗಿ ಹೇಳುವುದುಂಟು. (ಜಿ.ಎಸ್. ಸಿದ್ಧಲಿಂಗಯ್ಯ. ಸರ್ಪಭೂಷಣ ಶಿವಯೋಗಿಗಳು. ಕೈವಲ್ಯ. ಶ್ರೀ ಸರ್ಪಭೂಷಣಶಿವಯೋಗಿಗಳ ದ್ವಿಶತಮಾನೋತ್ಸವ ಸ್ಮರಣ ಸಂಪುಟ. ಪು. ೧೫.)

46. ಎಂ.ಎಸ್. ಬಸವರಾಜಯ್ಯ (ಸಂ) ಸರ್ಪಭೂಷಣ ಶಿವಯೋಗಿ ವಿರಚಿತಂ ಭುಜಂಗಮಾಲಾ ಶಿವಸಂಕೀರ್ತನಮ್. (ಕನ್ನಡ ಭಾವಾನುವಾದ ಸಹಿತ). (ಪ್ರ) ಶ್ರೀಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆ. ಬೆಂಗಳೂರು. ೧೯೮೭.

47. ಜಿ.ಎಸ್. ಸಿದ್ಧಲಿಂಗಯ್ಯ, ಪೂರ್ವೋಕ್ತ. ಪು. ೧೬.

48. ಎಂ.ಎಸ್. ಬಸವರಾಜಯ್ಯ, ಪೂರ್ವೋಕ್ತ. ಪ್ರಸ್ತಾವನೆ. ಪು. xvi, xvii

49. ಬಿ. ಶಿವಮೂರ್ತಿಶಾಸ್ತ್ರಿ. (ಸಂ) ಶರಣಸಾಹಿತ್ಯ. ಸಂಪುಟ-೩೨. ಸಂಚಿಕೆ-೧+೨. ಮೇ. ೧೯೬೯. ಪು. ೧-೭.

50. ಈ ಕೃತಿಗಳನ್ನು ಸಂಗ್ರಹಿಸಿ ಇಡಲಾಗಿದೆ.

51. ಅನುಭವಸಾರ ವ್ಯಾಖ್ಯಾನದ ಹಸ್ತಪ್ರತಿಯಲ್ಲಿ - ''ಸರಸಜನಮಾನಿತೋರು ಗುರುಕುಲಕೇತನಾಯಮಾನ ಶ್ರೀ ಸರ್ಪಭೂಷಣ ಗುರುವರೇಣ್ಯ ಚರಣಾರವಿಂದ ಮತ್ತ ಮಧುಕರ ಸ್ವರೂಪ ಶ್ರೀ ವೃಷಭಲಿಂಗ ಶಿವಯೋಗಿ ವಿರಚಿತಮಪ್ಪನುಭವಸಾರ ವ್ಯಾಖ್ಯಾನ.....'' ಎಂದಿದೆ. [ಎಂ.ಎಸ್. ಬಸವರಾಜಯ್ಯ. (ಸಂ) ಭುಜಂಗಮಾಲಾ ಶಿವಸಂಕೀರ್ತನಮ್. ಪ್ರಸ್ತಾವನೆ. ಪು. iii]

52. ಚನ್ನಬಸವಪುರಾಣದ ಹಸ್ತಪ್ರತಿಯೊಂದರಲ್ಲಿ (ಶಾಲಿವಾಹನಶಕ ೧೭೬೯. ಪ್ಲವಂಗನಾಮ ಸಂವತ್ಸರ ಕಾರ್ತಿಕ ಶು. ೧೨ ದ್ವಾದಶಿ ಬ್ರುಗುವಾರ (ಭೃಗುವಾರ : ಶುಕ್ರವಾರ) - ''ಸರ್ಪಭೂಷಣ ಶಿವಯೋಗಿಗಳ ಕರಕಮಲ ಸಂಜಾತ ನರಗುಂದ ಸಾಲಿ ಮುರುಗಯ್ಯ.....'' ಎಂಬ ಮಾತುಗಳಿವೆ. [ಕಾಗದದ ಹಸ್ತಪ್ರತಿ ನಂ : ೧೨೮೩. (೧-೩೫೪) ಕನ್ನಡ ಅಧ್ಯಯನ ಸಂಸ್ಥೆ. ಧಾರವಾಡ. ಕೆ.ಆರ್.ಎ.೧೧ನೇ ವಾಲ್ಯುಂ. ೮ನೇ ನಂಬರ್] ಕೃಪೆ : ಎಸ್. ಶಿವಣ್ಣನವರು. ಹಸ್ತಪ್ರತಿ ವಿಭಾಗ. ಬೆಂಗಳೂರು ವಿಶ್ವವಿದ್ಯಾಲಯ.

53. ಎಂ.ಎಸ್. ಬಸವರಾಜಯ್ಯ. ಪೂರ್ವೋಕ್ತ. ಪು. iii, iv.

54. ಗುಬ್ಬಿಗುರುಸಿದ್ಧಪ್ಪನ ಗಯೆಚರಿತ್ರ ನಾಟಕದಲ್ಲಿ- ''ಸಪ್ಪಣ್ಣದೇಶಿಕೇಂದ್ರರ ತಪ್ಪದೆ ಮುದದಿ ಭಜಿಸುವ ಚನ್ನಾರ್ಯರ ಮನಮುಪ್ಪಯೆ ಗಯೆ ಚರಿತ್ರೆ ನಾಟಕದೊಳ್ ತಪ್ಪುಗಳೆಲ್ಲವ ಪರಿಶೋಧಿಸಿ ಓದುವಾತರದಿ ಪೇಳ್ದಿಹ ಶಿದ್ಧನೀಕೃತಿಯ'' ಎಂದಿದೆ. (ಈ ಪಟ್ಟಿಕೆಯ ಕೃಪೆ : ಎಸ್. ಶಿವಣ್ಣನವರು. ಹಸ್ತಪ್ರತಿ ವಿಭಾಗ. ಬೆಂಗಳೂರು ವಿಶ್ವವಿದ್ಯಾಲಯ.)

55. 'ಇವರು ೧೮೨೦ರ ವೇಳೆಗೆ ಬೆಂಗಳೂರಿನ ಸರ್ಪಭೂಷಣ ಶಿವಯೋಗಿಗಳಿಂದ ಅನುಗ್ರಹ ಪಡೆದಿದ್ದುದಾಗಿ' ಸೂಚಿಸುವ ಪಟ್ಟಿಕೆಯೊಂದನ್ನು ಎಸ್. ಶಿವಣ್ಣನವರು (ಪೂರ್ವೋಕ್ತ) ಕೃಪೆ ಮಾಡಿರುತ್ತಾರೆ.

56. ಸಿದ್ಧಿಪುರುಷರೆನಿಸಿದ್ದ ಸರ್ಪಭೂಷಣ ಶಿವಯೋಗಿಗಳ ಇತಿವೃತ್ತಾಂತಗಳನ್ನು ಬಿಂಬಿಸುವ ಏಕಾಂಕ ಸಂಗೀತ ನಾಟಕ (ಶ್ರೀ ಸರ್ಪಭೂಷಣಶಿವಯೋಗಿ)ವೊಂದನ್ನು ಆರ್.ಕೆ. ಹಾನಗಲ್ಲ ಅವರು ಬರೆದು ಪ್ರಕಟಿಸಿದ್ದಾರೆ. (ವೀರಮಾತ ಪತ್ರಿಕೆ. ಸಂಪುಟ-೧೩, ಸಂಚಿಕೆ-೩. ೧೯೭೪. ಪು. ೨೨-೨೭).

57. ಸಪ್ಪಣ್ಣಾರ್ಯರ ಅಭಿಮಾನಿಗಳಾಗಿದ್ದ ಅಂಕಲಗಿ ಅಡಿವೆಪ್ಪಸ್ವಾಮಿ ಮಠದ ಮಹಾಲಿಂಗಮೂರ್ತಿಸ್ವಾಮಿಗಳು ೧೯೧೫ರ ಆಗಸ್ಟ್ ೧೩

ರಂದು ಬೆಂಗಳೂರಿಗೆ ಬಂದಿದ್ದಾಗ ಅಪ್ಪಣೆ ಕೊಡಿಸಿದ್ದುದು-''ದೇಶದೊಳಗೆ ಬಹಳ ಲೇಸಕಾಣಿಸ್ತೇತೆ, ಕಾಸಕಡಕ್‌ಪೂರ ಬೆಂಗಳೂರು, ಪೂರ ಬೆಂಗಳೂರಗೆ ಆರುಕಾಸ ನೋಡೇನ್ರಿ, ತಿರುಗಿ ಊರಿಗೆ ಬರೂವಾಗ ತೂರಿಹಾಡಿದರೆ! ಸಪ್ಪಣ್ಣಸ್ವಾಮಿಗಳ ಬಲಹದ್ರಿ ಬೆಂಗಳೂರಿಗೆ!'' [ಸಂಗ್ರಹ : ಬಾಣಾವರದ ಹುಚ್ಚಪ್ಪನವರ ದಿನಚರಿಪುಸ್ತಕ. ಕೃಪೆ : ಬಾಣಾವರದ ಗೌರಮ್ಮ (೫೮) ಶೇಷಾದ್ರಿಪುರ. ಬೆಂಗಳೂರು]

58. ಆರ್. ನರಸಿಂಹಾಚಾರ್. ಕರ್ನಾಟಕ ಕವಿ ಚರಿತೆ. ಸಂ-೩. ಪು. ೨೨೨ ['ವೀರಶೈವ ಸಾಹಿತ್ಯ ಸಮೀಕ್ಷೆ'ಯಲ್ಲಿ (ಸಂ: ಸದಾನಂದ ಕನವಳ್ಳಿ ಮತ್ತು ಚೆನ್ನಪ್ಪ ಕೆರಿಮನಿ. 'ಹತ್ತೊಂಬತ್ತನೆಯ ಶತಮಾನ' : ಎಸ್.ಎಸ್. ಭೂಸನೂರ ಮಠ ಮತ್ತು ವೀರಣ್ಣ ರಾಜೂರ. ಪು. ೪೩೧) ಮಹಾಂತದೇಶಿಕರನ್ನು ಕುರಿತು ''ಇವರ ಸ್ಥಳ ಬೆಂಗಳೂರು. ಗುರು, ತಿಪ್ಪಶೆಟ್ಟಿ ಮಠದ ಗುರುಸಿದ್ಧಸ್ವಾಮಿಗಳು. ಕನ್ನಡ-ಸಂಸ್ಕೃತ ಜ್ಞಾನ ಸಂಪನ್ನರಾಗಿದ್ದ ಇವರು ೧೬ ಕೃತಿಗಳನ್ನು ರಚಿಸಿದ್ದಾರೆ....'', ಎಂಬುದಾಗಿ ಗುರುತಿಸಲಾಗಿದೆ.]

59. ಬಿ. ನಂಜುಂಡಪ್ಪ. (ಸಂ) ಮಹಾಂತದೇಶಿಕರ ಶಿವಶರಣ ವಿಲಾಸ. (ಯಕ್ಷಗಾನಕಾವ್ಯ) ಪೀಠಿಕೆ. ಪು. ix-xii.

60. ಮಹಾಂತದೇಶಿಕರ ಸ್ವತಂತ್ರ ಕೃತಿಗಳಲ್ಲಿ ಯಕ್ಷಗಾನ ಕಾವ್ಯಗಳು : ೧. ಶಿವಶರಣವಿಲಾಸ, ೨. ಮಹಾಂತ ದೇಶಿಕೇಂದ್ರ ವಿಲಾಸ, ೩. ಧರ್ಮಚರಿತ್ರೆ, ೪. ಚೋರಬಸವೇಶ್ವರ ಚರಿತ್ರೆ, ೫. ಇಕ್ಕದ ಮಾರಯ್ಯನ ಚರಿತ್ರೆ, ೬. ಹರಿಶ್ಚಂದ್ರಮಹಾರಾಯನ ಚರಿತ್ರೆ ೭. ನಳಮಹಾರಾಯನ ಚರಿತ್ರೆ, ೮. ಸಿರಿಯಾಳ ಚರಿತ್ರೆ, ೯. ಶನಿ ಮಹಾತ್ಮೆ.

ಇತರೆ ಕೃತಿಗಳು : ೧. ಅಂಬಾಸ್ತೋತ್ರ, ೨. ನವಗ್ರಹಸ್ತೋತ್ರ, ೩. ಹರಿಹರ ಸ್ತೋತ್ರ, ೪. ಸಾಂಬಮೂರ್ತಿ ಸ್ತೋತ್ರ, ೫. ಗದ್ದುಗೆ ಮರುಳಸಿದ್ಧೇಶ್ವರ ಸ್ತೋತ್ರ, ೬. ವಿಠಲಪಾಂಡುರಂಗ ಸ್ತೋತ್ರ, ೭. ನಂಜುಂಡೇಶ್ವರ ಸ್ತೋತ್ರ ಶತಕವು, ೮. ರಾಜೇಶ್ವರ ಶತಕ, ೯. ವೇಣುಗೋಪಾಲಶತಕ, ೧೦. ಆಂಜನೇಯ ಭಕ್ತಿಸಾರ, ೧೧. ಬಸವೇಶ್ವರಭಕ್ತಿಸಾರವು, ೧೨. ರೇವಣಸಿದ್ಧೇಶ್ವರ ಭಕ್ತಿಸಾರವು. ೧೩. ಗಂಗಾಧರಸ್ತೋತ್ರ, ೧೪. ನವಗ್ರಹ ಪೂಜಾವಿಧಾನ, ೧೫. ಲಿಂಗಧಾರಣಾ ವಿಧಿ, ೧೬. ವಿನಾಯಕ ಚೌಪದ, ೧೭. ರೇಣುಕರ ಖಡ್ಗವು, ೧೮. ಖಡ್ಗಗಳು.

ಸಂಪಾದಿತ ಕೃತಿಗಳು : ೧. ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯ, ಘಟಚಕ್ರ, ಏಕಾದಶ ಪ್ರಸಾದವಿಚಾರ ವಾಕ್ಯ, ಮಿಶ್ರಷಟ್‌ಸ್ಥಲ ವಚನ, ಪಂಚಬ್ರಹ್ಮ ನಾರಾಯಣೋಪನಿಷತ್, ೨. ಕೋಳೂರು ಶಂಕರಕವಿಯ ಚೋರ ಬಸವಚರಿತ್ರೆ. ೩. ಶಾಂತಮಲ್ಲಸ್ವಾಮಿಗಳ ಅನುಭವಮುದ್ರೆ, ೪. ಶಂಕರದೇವರ ಷಡಕ್ಷರೀ ರಗಳೆ, ೫. ಸ್ವಾದಿ ಸದಾಶಿವರಾಜನ ಪಂಚಶತನೀತಿ, ೬. ಪಾಲ್ಕುರಿಕೆ ಸೋಮನಾಥನ ಬಸವಲಿಂಗರಗಳೆಯು, ಶಿವಲಿಂಗ ತ್ರಿವಿಧಿ ಮತ್ತು ಲಿಂಗಾಷ್ಟಕಂ, ೭. ಸದ್ಗುರು ಶಾಂತಮಲ್ಲೇಶ್ವರಾಂಕಿತದ ಶಿವಾನುಭವ ಶಾಸ್ತ್ರವು, ೮. ಮಳೆಯ ಮಲ್ಲೇಶನ ಅಂಕಿತದ ಗಣಾಷ್ಟಕ, ೯. ಷಣ್ಮುಖಸ್ವಾಮಿಯ ನಿರಾಳ ಗುರುಸ್ತೋತ್ರ.

61. ಕನ್ನಡ ಹಸ್ತಪ್ರತಿ ಸೂಚಿ. viii. ಪು. ೩೨೩. ಕೆ.ಬಿ. ೬೬೦ [ಬಿ. ನಂಜುಂಡಪ್ಪನವರು - ಮಹಾಂತ ದೇಶಿಕರ ಸಾಹಿತ್ಯ ಸೇವೆಯು ೧೮೮೪ ರಿಂದ ಪ್ರಾರಂಭವಾದುದಾಗಿ (ಶಿವಶರಣವಿಲಾಸ. ಪೀಠಿಕೆ ಪು. ix) ಸೂಚಿಸಿದ್ದಾರೆ].

62. ಕನ್ನಡ ನಿಘಂಟು. ಸಂ-೭. ಕನ್ನಡ ಸಾಹಿತ್ಯ ಪರಿಷತ್ತು. ಪು ೭೫೦೨.

63. ಶ್ರೀ ಶರಣಕಿಂಕರ. ಶ್ರೀ ಮಹಾಂತದೇಶಿಕರ ದೇವರ ದಾಸಿಮಾರ್ಯ. ದೇವರ ದಾಸಿಮಾರ್ಯ ಪ್ರಶಸ್ತಿ. ಭಾಗ ೧-೨ (ಸ್ಮಾರಕೋತ್ಸವ ಗ್ರಂಥ. ನಿಡುಮಾಮಿಡಿ ನಿವಾಸ. ಬೆಂಗಳೂರು) ಪು. ೩೬೦.

64. ಯಕ್ಷಗಾನ ಮಾರ್ಗವನ್ನು ಅನುಸರಿಸಿ ಬರೆದ ವೀರಶೈವ ಕೃತಿಗಳಲ್ಲಿ ಮುಖ್ಯವಾದವು ದ್ಯಾಮಪುರದ ಚನ್ನಪ್ಪ ಕವಿಯ 'ಶರಣಲೀಲಾಮೃತ' ಮತ್ತು ಬೆಂಗಳೂರಿನ ಮಹಾಂತದೇಶಿಕರ 'ಶಿವಶರಣವಿಲಾಸ' ಇವೆರಡೂ ಬಹುಜನಪ್ರಿಯ ಕೃತಿಗಳಾಗಿವೆ. (ಶ್ರೀಶರಣಕಿಂಕರ.ಅದೇ ಪುಟ.)

65. ಬಿ. ನಂಜುಂಡಪ್ಪ (ಸಂ) ಮಹಾಂತದೇಶಿಕರ ಶಿವಶರಣವಿಲಾಸ. ಪೀಠಿಕೆ ಪು. xi. (ಬಿ. ನಂಜುಂಡಪ್ಪನವರು ಪರಿಷ್ಕರಿಸಿ ಕೊಟ್ಟಿರುವ ಈ ಯಕ್ಷಗಾನ ಕೃತಿಯನ್ನು ಶ್ರೀ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ ಇವರು ೧೯೮೯ರಲ್ಲಿ ಪ್ರಕಟಪಡಿಸಿರುತ್ತಾರೆ. ಕೃತಿಯ ಪ್ರಮಾಣವು ೯೩೦ ಪುಟಗಳಷ್ಟಿದೆ.)

66. ಮಹಾಂತದೇಶಿಕರ ಶಿವಶರಣವಿಲಾಸ. ಸಂ: ಬಿ. ನಂಜುಂಡಪ್ಪ. ಪೀಠಿಕಾಸಂಧಿ. ಪದ್ಯ ೫. ಪು. ೨.

67. ಅದೇ. ಪೀಠಿಕೆ. ಪು. xiv.

68. ಹರಿಶ್ಚಂದ್ರಮಹಾರಾಯನ ಚರಿತ್ರೆಯ ಹಳೆಯದಾದ ಕೃತಿಯೊಂದು ಲಭ್ಯವಾಗಿದೆ. ಇದರ ಮುಂಭಾಗದ ೧೭ ಪುಟಗಳೂ ಹಾಗೂ ಕೊನೆಯ ಕೆಲವು (೨೬೦ರ ನಂತರ) ಪುಟಗಳೂ ಹರಿದು ಹೋಗಿದ್ದು, ಮುಖಪುಟದ ವಿವರಗಳಾಗಲಿ, ಪ್ರಾರ್ಥನಾಭಾಗದ ವಿವರಗಳಾಗಲೀ ಲಭ್ಯವಾಗಿಲ್ಲ.

69. ಎಸ್. ಶಿವಣ್ಣ. (ಸಂ) ಮಹಾಂತದೇಶಿಕರ ಬಸವೇಶ್ವರ ಭಕ್ತಿಸಾರವು. (ಅನುಬಂಧಸಹಿತ) ಮೊದಲಮಾತು. ಪು. ೧.

70. ಈಗ ಈ ಕೃತಿಯು ಅಲಭ್ಯವಾಗಿದ್ದು ಮೇಲ್ಕಂಡ ವಿವರಗಳನ್ನು ಬಿ. ನಂಜುಂಡಪ್ಪನವರ ಮಹಾಂತದೇಶಿಕರ ಶಿವ ಶರಣವಿಲಾಸ (ಪೀಠಿಕೆ. ಪು. X)ದಲ್ಲಿ ನೋಡಬಹುದಾಗಿದೆ.

71. ೧೮೫೬ ರಲ್ಲಿ ಪ್ರಕಟವಾಗಿರುವ 'ಚೋರಬಸವೇಶ್ವರ ಚರಿತ್ರೆ'. ಪು. ೧೫೪. ಪದ್ಯ ೧೨, ೧೩ (ಇದರಲ್ಲಿ ಮುಖಪುಟ ಹಾಗೂ ಕೊನೆಯ ಕೆಲವು ಪುಟಗಳು ಹರಿದುಹೋಗಿವೆ.)

72. ಅದೇ. ಪು. ೨. ಪದ್ಯ (ಕಂದ) ೨.

73. ಈ ಕಾಗದದ ಪ್ರತಿಯನ್ನು ಕೃಪೆ ಮಾಡಿದವರು ಎಸ್. ಶಿವಣ್ಣನವರು, (ಹಸ್ತಪ್ರತಿ ವಿಭಾಗ. ಕನ್ನಡ ಅಧ್ಯಯನ ಕೇಂದ್ರ. ಬೆಂಗಳೂರು)

ಹಸ್ತಪ್ರತಿಯ ಪ್ರಾರಂಭದಲ್ಲಿ - ''ಹೇವಳಂಬಿ ನಾಮ ಸಂವತ್ಸರದ ಚೈತ್ರ ಬಹುಳ ೮ ಭಾನುವಾರದಲ್ಲು ಯಿಕ್ಕದ ಮಾರಯ್ಯನ ಕಥೆ ಬರೆಯುವುದಕ್ಕೆ ಶುಭಮಸ್ತು'' ಎಂದಿದೆ.

74. ಅದೇ ಹಸ್ತಪ್ರತಿ. ಪು. ೩. ಪದ್ಯ (ಭಾಮಿನಿ ಷಟ್ಪದಿ)೩.

75. ಈ ಕೃತಿಯನ್ನು ಶ್ರೀ ಅಡವಿಮಠ ಪಡುಗೂರು, ಗುಂಡ್ಲುಪೇಟೆ ತಾಲ್ಲೂಕು (೧೯೮೭) ಇವರು ಪ್ರಕಟಪಡಿಸಿದ್ದಾರೆ.

76. ಶ್ರೀ ಮಹಾಂತದೇಶಿಕೇಂದ್ರ ವಿರಚಿತ ಅಡವಿಮಠ ಸಂಸ್ಥಾನದ ಮಹಾಂತದೇಶಿಕೇಂದ್ರ ವಿಲಾಸ. ಸಂ: ಜಿ.ಜಿ. ಮಂಜುನಾಥನ್. ಸಂಧಿ. ೧. ಪದ್ಯ (ಕಂದ) ೨. ಪುಟ ೩.

77. ಅದೇ. ಸಂಧಿ ೫. ಪದ್ಯ ೨. ಪು. ೮೪.

78. ಈಗ ಈ ಕೃತಿಗಳು ಅಲಭ್ಯವಾಗಿದ್ದು ಮೇಲ್ಕಂಡ ವಿವರಗಳನ್ನು ಬಿ.ನಂಜುಂಡಪ್ಪನವರ ಸಂಪಾದಕತ್ವದ ''ಶಿವ ಶರಣವಿಲಾಸ''ದ ಪೀಠಿಕಾ ಭಾಗ (ಪು. ix-xi)ದಿಂದ ಆಯ್ದುಕೊಳ್ಳಲಾಗಿದೆ.

79. ಬಿ. ನಂಜುಂಡಪ್ಪ. ಅದೇ. ಪು. xii.

80. ಮಹಾಂತದೇಶಿಕರ ನಂಜುಂಡೇಶ್ವರ ಸ್ತೋತ್ರ ಶತಕವು. ಪ್ರಥಮ ಮುದ್ರಣ ೧೮೮೮. ಬೆಂಗಳೂರು ವಿಚಾರ ದರ್ಪಣ ಮುದ್ರಾಕ್ಷರಶಾಲೆ. (ಈ ಕೃತಿಯು ಲಭ್ಯವಾಗಿದೆ. ಕೃಪೆ : ಗಂಜಾಂಮಠದ ಚಿದ್ಘನಸ್ವಾಮಿಗಳು. ಮಾಮುಲು ಪೇಟೆ. ಬೆಂಗಳೂರು.)

81. ಅದೇ. ಪದ್ಯ ೧೦೮. ಪು. ೧೨.

82. ಎಸ್. ಶಿವಣ್ಣ (ಸಂ.) ಮಹಾಂತದೇಶಿಕರ. ಬಸವೇಶ್ವರ ಭಕ್ತಿಸಾರವು. ಮೊದಲ ಮಾತು. ಪು. ೨.

83. ಮಹಾಂತದೇಶಿಕರ ರಾಜೇಶ್ವರ ಶತಕದ ಕೈಬರಹದ ಪ್ರತಿಯನ್ನು ಎಸ್. ಶಿವಣ್ಣನವರು (ಹಸ್ತಪ್ರತಿ ವಿಭಾಗ. ಕನ್ನಡ ಅಧ್ಯಯನ ಕೇಂದ್ರ. ಬೆಂಗಳೂರು ವಿಶ್ವವಿದ್ಯಾಲಯ) ಕೃಪೆಮಾಡಿರುತ್ತಾರೆ.

84. ಮಹಾಂತದೇಶಿಕರ ರಾಜೇಶ್ವರ ಶತಕವು. ಕೈಬರಹದ ಪ್ರತಿ. ಪದ್ಯ ೧-೫.

85. ಅದೇ. ಪದ್ಯ ೧೦೫.

86. ಮಹಾಂತದೇಶಿಕರ ವೇಣುಗೋಪಾಲ ಶತಕದ ಕೈಬರಹದ ಪ್ರತಿಯನ್ನು ಎಸ್. ಶಿವಣ್ಣನವರು (ಪೂರ್ವೋಕ್ತ) ಕೃಪೆ ಮಾಡಿರುತ್ತಾರೆ.

87. ಅದೇ ಪ್ರತಿ. ಪದ್ಯ ೧೧೧.

88. 'ಶ್ರೀ ಮದ್ಬಸವೇಶ್ವರ ಭಕ್ತಿಸಾರ'ದ ಮುಖಪುಟದಲ್ಲಿ - ''ಶ್ರೀಕಂಠೇಶ್ವರಾಯ ನಮಃ - ಶ್ರೀಮತ್ಸಕಲಭುವನ ಬ್ರಹ್ಮಾಂಡಕರಂಡ ರಕ್ಷಣದಕ್ಷ- ಶ್ರೀಮದ್ಗುರುವರೇಣ್ಯ ಚರಣಾರವಿಂದ - ಪೂಜಾಸಕ್ತರಾದ, ಶಿವಭಕ್ತರಿಗತ್ಯಂತೋಪಯುಕ್ತವಾಗಿರುವಂತೆ - ಶ್ರೀ ಮದ್ಬಸವೇಶ್ವರ ಭಕ್ತಿಸಾರವು-ಶ್ರೀಮತ್ಪರಮೇಶ್ವರ ಪದಾಂಭೋಜನಾಸಕ್ತ ಬೆಂಗಳೂರು ತಿಪ್ಪಶೆಟ್ಟಿ ಮಠಾಧಿವಾಸ ಗುರುಸಿದ್ಧಸ್ವಾಮಿ ಕರಾಬ್ಜೋದ್ಭವ ಚರಮೂರ್ತಿಗಳಾದ ಮಹಾಂತ ದೇಶಿಕೇಂದ್ರರಿಂದ ವಿರಚಿಸಲ್ಪಟ್ಟು---''ಎಂಬುದಾಗಿ ಮುದ್ರಿತವಾಗಿದೆ. ೧೮೮೮ರಲ್ಲಿ ಪ್ರಥಮ ಮುದ್ರಣವನ್ನು ಕಂಡ ಈ ಕೃತಿಯು ಮುಂದೆ ೧೯೬೪ ಹಾಗೂ ೧೯೭೮ರಲ್ಲಿ ಮರುಮುದ್ರಣಗಳನ್ನು ಕಂಡಿದ್ದು ಅವುಗಳ ಪ್ರತಿಯು ನಗರದ ಗಂಜಾಂಮಠದಲ್ಲಿ ಇವೆ. ಇದೇ ಕೃತಿಯನ್ನು ೧೯೯೪ರಲ್ಲಿ ಎಸ್. ಶಿವಣ್ಣನವರು ಸಂಪಾದಿಸಿಕೊಟ್ಟಿದ್ದು ಶ್ರೀ ಜಗದ್ಗುರು ಮುರುಘರಾಜೇಂದ್ರ ಗ್ರಂಥಮಾಲೆಯಿಂದ (ಚಿತ್ರದುರ್ಗ) ಪ್ರಕಟವಾಗಿದೆ.

89. ಶಿವಣ್ಣ. ಎಸ್. (ಸಂ) ಮಹಾಂತದೇಶಿಕರ ಬಸವೇಶ್ವರ ಭಕ್ತಿಸಾರವು. ಪದ್ಯ ೧. ಪು. ೧.

90. ಅದೇ. ಪದ್ಯ ೧೧೧. ಪು. ೨೫.

91. ಬಿ. ನಂಜುಂಡಪ್ಪ. (ಸಂ) ಮಹಾಂತದೇಶಿಕರ ಶಿವಶರಣವಿಲಾಸ. ಪೀಠಿಕೆ. ಪು. ix - xi ಮತ್ತು ಮಹಾಂತ ದೇಶಿಕರ ಬಸವಲಿಂಗರಗಳೆಯು. ವಿಚಾರದರ್ಪಣ ಮುದ್ರಾಕ್ಷರ ಶಾಲೆ. ಬೆಂಗಳೂರು ೧೯೬೦. (ಮುಖಪುಟದ ಹಿಂಭಾಗದ ಪ್ರಸಿದ್ಧಪತ್ರಿಕೆಯಲ್ಲಿ ಇರುವ ಪಟ್ಟಿಯಂತೆ.)

92. ಬಿ. ನಂಜುಂಡಪ್ಪ. ಅದೇ. ಪು.x.

93. ಅದೇ. ಪು.. ix. x.

94. ಮಹಾಂತದೇಶಿಕರ 'ನವಗ್ರಹ ಪೂಜಾವಿಧಾನವು' ಕೃತಿಯು ಉಪಲಬ್ಧವಿದ್ದು ಇದು ಬೆಂಗಳೂರಿನ ವಿಚಾರ ದರ್ಪಣ ಮುದ್ರಾಕ್ಷರಶಾಲೆಯಿಂದ ೧೯೬೪ರಲ್ಲಿ ಸಟೀಕಿನೊಂದಿಗೆ ಪ್ರಕಟವಾಗಿರುತ್ತದೆ. ( ಈ ಕೃತಿಯನ್ನು ನಗರದ ಮಾಮೂಲುಪೇಟೆ ಗಂಜಾಂಮಠದ ಚಿದ್ಘನಸ್ವಾಮಿಗಳು ಕೃಪೆ ಮಾಡಿರುತ್ತಾರೆ)

95. ಬಿ. ನಂಜುಂಡಪ್ಪ. ಪೂರ್ವೋಕ್ತ. ಪು. xi.

96. ಅದೇ.

97. ಈ ಆವೃತ್ತಿಯು (ಕರಣಹಸಿಗೆ,....ಇತ್ಯಾದಿ) ಬಿ. ಸೋಮಸುಂದರಶೆಟ್ಟಿ ಎಂಬುವರ ಒಡೆತನದಲ್ಲಿ ೧೮೮೯ರಲ್ಲಿ ಮದರಾಸಿನ ಶಾರದಾ ಮುದ್ರಣಾಲಯದಿಂದ ಎರಡನೆಯ ಬಾರಿಗೆ ಪ್ರಕಟವಾಗಿರುತ್ತದೆ. ( ಈ ಕೃತಿಯನ್ನು ನಗರದ ಗುರುವಣ್ಣದೇವರ ಮಠದ ಮಲ್ಲಿಕಾರ್ಜುನ ಸ್ವಾಮಿಗಳು ಕೃಪೆ ಮಾಡಿರುತ್ತಾರೆ) ಮುಂದೆ ಇದೇ ಕೃತಿಯು ೧೯೬೪ರಲ್ಲಿ ಬಿ. ಸೋಮಸುಂದರಶೆಟ್ಟಿ ಅಂಡ್ ಸನ್ಸ್. ಶಾರದಾ ಬುಕ್ ಡಿಪೋ ಏಜೆಂಟ್ ಇವರ ಒಡೆತನದಲ್ಲಿ, ಬೆಂಗಳೂರು ಶಿಟಿ ಶ್ರೀ ನಂದೀಶ ಭಾರತೀ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮೂರನೆಯ ಮುದ್ರಣವಾಗಿ ಪ್ರಕಟವಾಗಿರುತ್ತದೆ. ( ಈ ಕೃತಿಯನ್ನು ಕೃಪೆ ಮಾಡಿದವರು ನಗರದ ಬೇಲಿಮಠದ ಶಿವರುದ್ರಸ್ವಾಮಿಗಳು)

98. ಬಿ. ನಂಜುಂಡಪ್ಪ. ಪೂರ್ವೋಕ್ತ. ಪು. xi (ಈ ಕೃತಿಯ ಲಭ್ಯವಾಗಿಲ್ಲ)
99. 'ಅನುಭವಮುದ್ರೆಯು' ಎಂಬ ಈ ಕೃತಿಯನ್ನು ನಗರದ ಬೇಲಿಮಠದ ಶಿವರುದ್ರಸ್ವಾಮಿಗಳು ಕೃಪೆ ಮಾಡಿರುತ್ತಾರೆ.
100. ಮಹಾಂತದೇಶಿಕೇಂದ್ರರಿಂದ ಪರಿಶೋಧಿಸಲ್ಪಟ್ಟ ಶಾಂತಮಲ್ಲೇಶ್ವರ ಸ್ವಾಮಿಗಳ ಅನುಭವಮುದ್ರೆಯು. (೧೮೯೦) ಮಂಗಳಾರ್ಚನೆ. ಪದ. ೩-೫. ಪು. ೧.
101. ಅದೇ. ಸ್ಥಲ ೧. ಪು. ೫ ಮತ್ತು ಸ್ಥಲ ೩೨. ಪು. ೧೦೮.
102. ಬಸವಲಿಂಗರಗಳೆಯ ಮುಖಪುಟದ ಮೇಲೆ "....ಶ್ರೀಮತ್ಸಮಸ್ತ ವೀರಶೈವಮತಸ್ಥರಿಗೆ ಶಿವಲಿಂಗ ಪೂಜಾನುಷ್ಠಾನ ಕಾಲದಲ್ಲಿ ನಿತ್ಯಾವಶ್ಯಕದಿಂ ಪಾರಾಯಣ ಮಾಡುವುದಕ್ಕೆ ಯೋಗ್ಯವಾಗಿರುವಂತೆ 'ಬಸವಲಿಂಗರಗಳೆಯು' .........ಬೆಂಗಳೂರು ತಿಪ್ಪಶೆಟ್ಟಿ ಮಠಾಧಿವಾಸ ಗುರುಸಿದ್ಧಸ್ವಾಮಿ ಕರಕಂಜೋದ್ಭವ ಚರಮೂರ್ತಿ ಮಹಾಂತ ದೇಶಿಕೇಂದ್ರರಿಂದ ಪರಿಷ್ಕರಿಸಲ್ಪಟ್ಟು.....ಬೆಂಗಳೂರು ವಿಚಾರದರ್ಪಣ ಮುದ್ರಾಕ್ಷರ ಶಾಲೆಯಲ್ಲಿ (೧೮೯೦) ಮುದ್ರಿಸಲ್ಪಟ್ಟಿತು" ಎಂಬ ವಿವರಗಳಿವೆ. ಇದೇ ಕೃತಿಯು ೧೯೧೦ರಲ್ಲಿ ಬೆಂಗಳೂರು ಅರಳೆಪೇಟೆಯ ಎಸ್.ಜಿ. ಎನ್. ಪ್ರೆಸ್‌ನಿಂದ ದ್ವಿತೀಯ ಮುದ್ರಣವನ್ನು ಕಂಡಿದೆ. (ಈ ಕೃತಿಗಳನ್ನು ಕೃಪೆಮಾಡಿದವರು ನಗರದ ಮಾಮೂಲು ಪೇಟೆಯ ಗಂಜಾಂಮಠದ ಚಿದ್ಘನಸ್ವಾಮಿಗಳು)
103. ಮಹಾಂತ ದೇಶಿಕರು ಪರಿಷ್ಕರಿಸಿದ ಬಸವಲಿಂಗರಗಳೆಯು. (೧೮೯೦) ಪದ್ಯ ೧೧೪. ಪು. ೧೧.
104. ಮಹಾಂತದೇಶಿಕರಿಂದ ಪರಿಷ್ಕರಿಸಲ್ಪಟ್ಟ 'ಬಸವಲಿಂಗರಗಳೆಯು ಮತ್ತು ಶಿವಲಿಂಗ ತ್ರಿವಿಧಿ ಮತ್ತು ಲಿಂಗಾಷ್ಟಕಂ'. ಈ ಕಿರುಕೃತಿಯು ೧೯೩೪ರ ವೇಳೆಗೆ ದ್ವಿತೀಯ ಮುದ್ರಣವನ್ನು ಕಂಡಿದ್ದು ಬೆಂಗಳೂರಿನ ಶ್ರೀ ನಂದೀಶ ಭಾರತೀ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾಗಿದೆ. (ಕೃತಿಯ ಕೃಪೆ : ಗಂಜಾಂಮಠದ ಚಿದ್ಘನಸ್ವಾಮಿಗಳು)
105. ಬಿ. ನಂಜುಂಡಪ್ಪ. ಪೂರ್ವೋಕ್ತ. ಪು. xi, xii.
106. 'ಪಂಚಶತನೀತಿ'ಯು ಬೆಂಗಳೂರಿನ ಶ್ರೀಗೌರೀ ನಿಲಯ ಮುದ್ರಾಕ್ಷರ ಶಾಲೆಯಲ್ಲಿ ೧೮೯೮ರಲ್ಲಿ ಪ್ರಕಟವಾಗಿರುತ್ತದೆ. (ಕೃಪೆ : ಎಸ್. ಶಿವಣ್ಣ)
107. ಬಿ. ನಂಜುಂಡಪ್ಪ. ಪೂರ್ವೋಕ್ತ. ಪು. ix.
108. ಈ ಮೇಲ್ಕಂಡ ವಿವರಗಳನ್ನು ಗುರುವಣ್ಣದೇವರ ಮಠದ ನಂಜುಂಡಸ್ವಾಮಿಗಳು ಮತ್ತು ಬಿ.ಯಂ. ಮಹಾಂತ ಶಾಸ್ತ್ರಿಗಳು ಇಬ್ಬರೂ ಕೂಡಿ ಸಂಪಾದಿಸಿರುವ 'ಸಟೀಕಾಪಾದಪೂಜಾವಿಧಿ' (೧೯೧೪. ಪು. ೪೪) ಮತ್ತು 'ಸಟೀಕಾಗರ್ಭಾಧಾನವಿಧಿ' (೧೯೧೮. ಮುಖಪುಟದ ಹಿಂಬದಿ)ಗಳಿಂದ ಆಯ್ದುಕೊಳ್ಳಲಾಗಿದೆ.
109. ಇವರ ಹನ್ನೊಂದು ಸಂಪಾದಿತ ಕೃತಿಗಳಲ್ಲಿ ನಾಲ್ಕು ಕೃತಿಗಳು ಮಾತ್ರ ಲಭ್ಯವಿದ್ದು ಉಳಿದವುಗಳ ಬಗೆಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.
110. ಈ ಕೃತಿಯನ್ನು ಕೃಪೆ ಮಾಡಿದವರು ಬೇಲಿಮಠದ ಶಿವರುದ್ರಸ್ವಾಮಿಗಳು.
111. ನಂಜುಂಡಸ್ವಾಮಿಗಳ ಸಂಪಾದಿತ ಕೃತಿ 'ರಾಜಶೇಖರವಿಳಾಸವು' ಕೃತಿಯ ಮುಖಪುಟದ ಮೇಲೆ "....ವೀರಶೈವಮತಸ್ಥಾಪನಾಚಾರ್ಯವರ್ಯ ರೇಣುಕಗೋತ್ರೋತ್ಪನ್ನೋಭಯ ಕವಿತಾವಿಶಾರದ ಶ್ರೀ ಷಡಕ್ಷರದೇವ ವಿರಚಿತ ರಾಜಶೇಖರ ವಿಳಾಸವು ಇದರ ತ್ರಯೋದಶ ಹಾಗೂ ಚತುರ್ದಶ ಆಶ್ವಾಸಗಳೆರಡಕ್ಕೂ ಅರ್ಥವೂ ತಾತ್ಪರ್ಯವೂ ಸಹ...ಬೆಂಗಳೂರಿನ...... ನಂಜುಂಡಸ್ವಾಮಿಗಳಿಂದ ರಚಿಸಲ್ಪಟ್ಟಿತು..." ಎಂಬ ಮಾತುಗಳಿವೆ. ಈ ಕೃತಿಯು ಬೆಂಗಳೂರಿನ ಕ್ಯಾಕ್ಸ್‌ಟನ್ ಪ್ರೆಸ್ಸಿನಲ್ಲಿಯೂ ಮತ್ತು ವಿಚಾರದರ್ಪಣ ಮುದ್ರಾಕ್ಷರ ಶಾಲೆಯಲ್ಲಿಯೂ ೧೯೦೭ರಲ್ಲಿ ಪ್ರಕಟವಾಗಿರುತ್ತದೆ. ( ಈ ಕೃತಿಯನ್ನು ನಗರದ ಗುರುವಣ್ಣದೇವರ ಮಠದ ಮಲ್ಲಿಕಾರ್ಜುನಸ್ವಾಮಿಗಳು ಕೃಪೆ ಮಾಡಿದ್ದಾರೆ.)
112. 'ಪಾದಪೂಜಾವಿಧಿಯ:' ವು ೧೯೧೪ರಲ್ಲಿ ಬೆಂಗಳೂರಿನ "ಐರಿಷ್" ಮುದ್ರಾಕ್ಷರ ಶಾಲೆಯಿಂದ ಪ್ರಕಟವಾಗಿರುತ್ತದೆ. (ಕೃತಿ ಕೃಪೆ : ಗಂಜಾಂಮಠದ ಚಿದ್ಘನಸ್ವಾಮಿಗಳು) ಈ ಕೃತಿಯ ಪರಿಷ್ಕರಣಕಾರರ (ನಂಜುಂಡಸ್ವಾಮಿಗಳು. ಬಿ.ಯಂ. ಮಹಾಂತಶಾಸ್ತ್ರಿಗಳು) ಸೂಚನೆಯ ಪ್ರಕಾರ (ಕೃತಿಗೆ ಆರಂಭದ ಅವತಾರಿಕೆ. ಪು. ೨) - "ಪಾದಪೂಜಾ ವಿಧಿಯು ಎಲ್ಲಿಯೂ ಪ್ರಚಾರದಲ್ಲಿ ಇಲ್ಲದಿರುವ ಕಾರಣ ಪಾದಪೂಜೆಯನ್ನು ಮಾಡತಕ್ಕವರಿಗೆ ಸರಿಯಾದ ಕ್ರಮಗಳು ತಿಳಿಯದೆ ಮನಸ್ಸಿಗೆ ಬಂದಂತೆ ಮಾಡುತ್ತಾರೆ. ಆದ ಕಾರಣ ಇದರ ನಿವಾರಣೆಯ ಸದುದ್ದೇಶದಿಂದ ಅನೇಕ ಗ್ರಂಥಗಳನ್ನು ಪರಿಶೋಧಿಸಿ ಪರಿಷ್ಕರಿಸಿ ಕನ್ನಡ ಟೀಕಾ ಸಹಿತವಾಗಿ ಈ ಕೃತಿಯನ್ನು ಹೊರತರಲಾಗಿದೆ.
113. ಸಟೀಕಾ ಗರ್ಭಾಧಾನವಿಧಿಯ ಎರಡನೆಯ ಆವೃತ್ತಿಯು ೧೯೧೮ರಲ್ಲಿ ಬೆಂಗಳೂರಿನ "ಐರಿಷ್" ಮುದ್ರಾಕ್ಷರ ಶಾಲೆಯಲ್ಲಿ ಪ್ರಕಟವಾಗಿದ್ದು ಎರಡು ಸಾವಿರ ಪ್ರತಿಗಳನ್ನು ಛಾಪಿಸಲಾಗಿದೆ. ಇದರ ಮೊದಲ ಆವೃತ್ತಿಯು ಪ್ರಕಟವಾದುದರ ಬಗೆಗೆ ಮಾಹಿತಿಗಳು ಲಭ್ಯವಾಗಿಲ್ಲ. (ಈ ಕೃತಿಯ ಕೃಪೆ : ಗಂಜಾಂಮಠದ ಚಿದ್ಘನಸ್ವಾಮಿಗಳು)
114. 'ಸಟೀಕಾ ಗರ್ಭಾಧಾನಾವಿಧಿಯ:' ಸಂ: ನಂಜುಂಡಸ್ವಾಮಿಗಳು ಮತ್ತು ಬಿ.ಯಂ. ಮಹಾಂತಶಾಸ್ತ್ರಿಗಳು. (೧೯೧೮. ಬೆಂಗಳೂರು) ಮುಖಪುಟದ ಹಿಂಭಾಗದ ಪುಟದಲ್ಲಿದ್ದ ವಿವರಗಳು.
115. 'ಪಾದಪೂಜಾವಿಧಿ:' ಪೂರ್ವೋಕ್ತ. ಪು. ೪೪.
116. ಮುದ್ದುವೀರ (ಮುದ್ವೀರ) ಸ್ವಾಮಿಗಳು ಬೆಂಗಳೂರಿನ ಯಾವ ಮಠಕ್ಕೆ ಸೇರಿದವರು ಅಥವಾ ಯಾವ ಮಠದಲ್ಲಿ ಇದ್ದರೆಂಬುದು ಸ್ಪಷ್ಟವಾಗಿಲ್ಲ.
117. ಡಾ। ವೀರಣ್ಣರಾಜೂರ ಅವರು ತಮ್ಮ ಸ್ವರವಚನಗಳ ಸಂಪುಟದ ಮುನ್ನುಡಿಯಲ್ಲಿ 'ಮುದ್ವೀರತಾರಾವಳಿ' (ವೀರಶೈವತಾರಾವಳಿ ಸಂಪುಟ.

ಪು. ೧೯೩-೨೦೦) ಯನ್ನು ಉಲ್ಲೇಖಿಸಿ ಇವರು ಕೆಲವು ವರ್ಷಗಳ ಕಾಲ ಬೆಂಗಳೂರಿನಲ್ಲಿ ಅನುಷ್ಠಾನ ಮಾಡಿದುದರಿಂದ ಇವರಿಗೆ ಬೆಂಗಳೂರು ಮುದ್ವೀರಸ್ವಾಮಿಗಳು ಎಂಬ ಹೆಸರಾದುದಾಗಿ ಸೂಚಿಸಿದ್ದಾರೆ. ಮುಂದೆ ಇವರು ೧೭೨೦ರ ವೇಳೆಗೆ ಹಾಗಲವಾಡಿ ಸಂಸ್ಥಾನದ ಅಧಿಪತಿಯಾಗಿದ್ದ ಮುದಿಯಪ್ಪ ನಾಯಕನ ರಾಜಗುರುಗಳಾಗಿದ್ದರು. [ಡಾ। ಬಿ. ನಂಜುಂಡಸ್ವಾಮಿ. ಹಾಗಲವಾಡಿ ಮುದ್ವೀರಸ್ವಾಮಿ. ಕೆ.ಪ.೨. (ಶ್ರೀಸರ್ಪಭೂಷಣ ಶಿವಯೋಗಿಗಳ ದ್ವಿತೀಯ ಶತಮಾನೋತ್ಸವದ ಸ್ಮರಣಸಂಪುಟ) ಪು. ೩೨೨.]

118. ಆರ್. ನರಸಿಂಹಾಚಾರ್. ಕರ್ನಾಟಕ ಕವಿಚರಿತೆ. ಸಂ-೨. ಪು. ೪೯೭. (೧೯೭೩.)

119. ಡಾ। ವೀರಣ್ಣರಾಜೂರ. (ಸಂ) ಸಮಗ್ರ ವಚನ ಸಂಪುಟ-೧೩. (ಸಂಕೀರ್ಣವಚನಸಂಪುಟ ೮) ಪ್ರಸ್ತಾವನೆ. ಪು. xxxix, xxxx.

120. ಇವುಗಳ ಜೊತೆಗೆ ಮುದ್ವೀರಸ್ವಾಮಿಗಳು ಸಂಸ್ಕೃತದಲ್ಲೂ ಕೆಲವು ಸ್ವರವಚನಗಳನ್ನು ರಚಿಸಿದುದಾಗಿ ಹೇಳುವುದುಂಟು. (ಡಾ। ಬಿ. ನಂಜುಂಡಸ್ವಾಮಿ. ಪೂರ್ವೋಕ್ತ. ಅದೇ ಪುಟ)

121. ಸಂಕೀರ್ಣ ವಚನ ಸಂಪುಟ -೮. ಪು. ೪೯೯-೫೦೧.

122. ಮುದ್ವೀರಸ್ವಾಮಿಗಳ ಸ್ವರವಚನಗಳು. ಸಂ: ಡಾ। ವೀರಣ್ಣರಾಜೂರ. (ಪ್ರ) ವೀರಶೈವ ಅಧ್ಯಯನ ಸಂಸ್ಥೆ. ತೋಂಟದಾರ್ಯ ಮಠ. ಗದಗ. ೧೯೮೬.

123. ''.......................ನುತಿಸಲತಿ.
ತಿಲಕ ಸಂತೋಷಿಸಿ ನಿಂದನುದರದಿ
ಕುಲದೀಪಸಂಭವಿಸಿ ಬಾಳಲಿಯೆಂದು
ನಲಿದು ಶೇಷವನುಣಿಸಿ ದುರ್ಮದ ಗುಣ
ಗಳನೆಲ್ಲವನು ಬಿಡಿಸಿ ಬೋಧಿಸಿದ ನಿ-
ರ್ಮಲ ಶಿವತತ್ವವನು ''ಸುಜ್ಞಾನದೀಪಿಕೆ''ಯೆನಿಸಿ॥''
(ವೀರಶೈವ ತಾರಾವಳಿ ಸಂಪುಟ. ಸಂ : ವೀರಣ್ಣರಾಜೂರ. ಪು. ೧೯೭-೧೯೮).
[ಈ ಸಂದರ್ಭದಲ್ಲಿ ಒಂದು ವಿಶೇಷ ಚರ್ಚೆಯನ್ನು ಮಾಡಲು ಅವಕಾಶವಿದೆ. ಮೇಲ್ಕಂಡ 'ಮುದ್ವೀರತಾರಾವಳಿ'ಯ ಕರ್ತೃ ಅದರಲ್ಲೇ ಸೂಚಿತವಾಗಿರುವಂತೆ ಶ್ರೀಗುರು ಮಹಂತ (ಮಹಂತೇಶ) ಯತಿವರರ ಶಿಷ್ಯ ಚೆನ್ನವೀರ ಎಂಬ ಮಾತಿದೆ (ವೀರಶೈವ ತಾರಾವಳಿ ಸಂಪುಟ ಪು. ೨೦೦] ಈ ಮಾತಿಗೆ ಪೂರಕವಾಗಿ ಬೆಂಗಳೂರಿನ ಬೇಲಿಮಠದ ಗುರುಪರಂಪರೆಯಲ್ಲಿ ಮೂಲಗುರುಗಳಾದ ಹೊಸಕೋಟೆಯ' ಮಹಾಂತಸ್ವಾಮಿಗಳು, ಸಂಗನಬಸವಸ್ವಾಮಿಗಳು, ಬಸವಲಿಂಗಸ್ವಾಮಿಗಳು, (ಇವರೇ ಮರಿಸಿದ್ಧಲಿಂಗರು) ಚೆನ್ನವೀರಸ್ವಾಮಿಗಳು, ಕೆಂಪನಂಜೆಸ್ವಾಮಿಗಳು ಮುಂತಾದವರು ಬರುತ್ತಾರೆ. ಬೇಲಿಮಠದ ಮರಿಸಿದ್ಧಲಿಂಗ (ಬಸವಲಿಂಗ) ಸ್ವಾಮಿಗಳು, ಅಲ್ಲಿನ ಶಾಸನದಲ್ಲೇ (೧೭೬೧) ಉಕ್ತವಾಗಿರುವಂತೆ ಹೊಸಕೋಟೆಯ ಮಹಾಂತ ಸ್ವಾಮಿಗಳ ಶಿಷ್ಯರಾಗಿದ್ದು ಇವರು ತಮ್ಮ ಗುರುಗಳನ್ನು ಕುರಿತಾದ 'ಮಹಂತಿನತಾರಾವಳಿ'ಯನ್ನು ಬರೆದಿದ್ದಾರೆ. (ವೀರಶೈವತಾರಾವಳಿ ಸಂಪುಟ. ಪು. ೧೯೨) ಬೇಲಿಮಠದ ಗುರು ಪರಂಪರೆಯ ಪ್ರಕಾರ- ಇಲ್ಲಿ ಬರುವ 'ಮುದ್ವೀರತಾರಾವಳಿಯ ಕರ್ತೃ' ಚೆನ್ನವೀರ (ಸ್ವಾಮಿಯೂ) ಮತ್ತು 'ಮಹಂತಿನ ತಾರಾವಳಿಯ ಕರ್ತೃ' ಮರಿಸಿದ್ಧಲಿಂಗ (ಬಸವಲಿಂಗಸ್ವಾಮಿಯೂ) ಇಬ್ಬರೂ ಸರಿಸುಮಾರು ಸಮಕಾಲೀನರೇ ಆಗಿರುತ್ತಾರೆ. (ಹೆಚ್ಚಿನ ವಿವರಗಳಿಗಾಗಿ ನೋಡಿ : ಇದೇ ಕೃತಿಯ ಅಧ್ಯಾಯ-೪. ಬೇಲಿಮಠದ ಐತಿಹಾಸಿಕ ಪರಂಪರೆ) ಜೊತೆಗೆ ಒಂದೇ ಮಠದ ಗುರುಪರಂಪರೆಗೆ ಸೇರಿದವರಾಗಿದ್ದು ಇಬ್ಬರೂ ಮಹಾಂತಸ್ವಾಮಿಗಳವರ ಶಿಷ್ಯರೇ ಆಗಿದ್ದಾರೆ ಎಂಬುದು ಗಮನಾರ್ಹ. ಮೇಲಾಗಿ 'ಮುದ್ವೀರಾತ್ಮಕ ಚೆನ್ನವೀರ' ಎಂಬ ಅಂಕಿತವುಳ್ಳ ಸ್ವರವಚನಗಳ ಕರ್ತೃ ಇದೇ ಬೇಲಿಮಠದ ಚೆನ್ನವೀರಸ್ವಾಮಿಗಳೇ ಇರಬಹುದೆಂದು ಸುಲಭವಾಗಿ ಊಹಿಸಬಹುದಾಗಿದೆ. (ಈ ಹಿನ್ನೆಲೆಯಲ್ಲಿ ಮುದ್ವೀರಸ್ವಾಮಿಗಳು ಬೇಲಿಮಠಕ್ಕೆ ಸಂಬಂಧಪಟ್ಟವರಿರಬಹುದೇ? ಎಂದು ಪರಿಶೀಲಿಸಬೇಕಾಗಿದೆ) ಇದೇ ಗುರುಪರಂಪರೆಯಲ್ಲಿ ಇವರಿಬ್ಬರಿಗೂ ಹಿರಿಯರಾಗಿ ಬರುವ ಸಂಗನಬಸವಸ್ವಾಮಿಗಳೇ 'ಚಿದೈಶ್ವರ್ಯ ಚಿದಾಭರಣ'ದಲ್ಲಿ ಉಕ್ತವಾಗಿರುವ 'ಬಸವಲಿಂಗ' ಎಂಬ ಅಂಕಿತದ ವಚನಕಾರ 'ಸಂಗನಬಸವೇಶ್ವರ'ರಿರಬೇಕೆಂದು ಊಹಿಸಬಹುದಾಗಿದೆ. ಒಟ್ಟಾರೆ ಇಲ್ಲಿ ಪ್ರಸ್ತಾಪಿಸಲ್ಪಟ್ಟ ಮೂವರೂ ಕೂಡ ಹೊಸಕೋಟೆಯ ಮಹಾಂತಸ್ವಾಮಿಗಳ ಶಿಷ್ಯರೇ ಆಗಿದ್ದು ಬೆಂಗಳೂರಿನ ಬೇಲಿಮಠದ ಗುರುಪರಂಪರೆಯಲ್ಲಿ ಬರುವವರೇ ಆಗಿರಬೇಕೆಂದು ಹೇಳಲು ಅವಕಾಶವಿದೆ.]

124. ಮುದ್ವೀರಸ್ವಾಮಿಗಳ ಸ್ವರವಚನಗಳು. ಸಂ: ಡಾ। ವೀರಣ್ಣರಾಜೂರ. ೧/೧ ಮತ್ತು ೪/೧೭೦

125. ಅದೇ. ೧/೮.

126. ಹೆಚ್ಚಿನ ವಿವರಗಳಿಗಾಗಿ : ಡಿ.ವಿ. ಪರಮಶಿವಮೂರ್ತಿ. ಶಾಸನ ಸಂಶೋಧನೆ. ಬೇಲಿಮಠದ ಶಾಸನ. ಪು. ೧.೪.

127. ''ಧರೆಯೊಳಗೆ ಗುರುಮಹಂತಿನ
ಬಿರುದಾವಳಿ ಮಹಿಮೆಯೆನಿಪ ತಾರಾವಳಿಯ।
ಶರಣರು ಬರೆದೋದೆ ಮೋಕ್ಷವು
ದೊರೆವುದು ಮರಿಸಿದ್ಧಲಿಂಗದೇಶಿಕ ರಚಿತಂ॥'' (ವೀರಶೈವ ತಾರಾವಳಿ ಸಂಪುಟ. ಪು. ೧೮೬)

128. ಉದ್ಧೃತ : ಡಿ.ವಿ. ಪರಮಶಿವಮೂರ್ತಿ. ಪೂರ್ವೋಕ್ತ. ಪು. ೧ (ಜಿ.ಎಂ. ಉಮಾಪತಿಶಾಸ್ತ್ರಿ. ಮರಿಸಿದ್ಧಲಿಂಗನ ಮಾಲಾಟೀಕೆ. ಆತ್ಮೋಲ್ಲೇಖ ೧೦೭-೧೧೩)

129. ಉದ್ಧೃತ : ಅದೇ. [ಡಾ। ಬಿ.ಆರ್. ಹಿರೇಮಠ. ಹಸ್ತಪ್ರತಿ ಲಿಪಿಕಾರರು. (ಏಕೋತ್ತರ ಶತಸ್ಥಲದ ಉಲ್ಲೇಖ) ಸಾಧನೆ. ೧೨.೨. ೧೯೮೩ ಪು. ೪೮.]
130. ಆರ್. ನರಸಿಂಹಾಚಾರ್. ಕರ್ನಾಟಕ ಕವಿಚರಿತೆ. ಸಂ-೨. ಪು. ೪೯೮.
131. ಎಸ್. ಶಿವಣ್ಣ. ಕನ್ನಡ ಸಾಹಿತ್ಯ ಚರಿತ್ರೆ. ಸಂ-೪. ಅನುಬಂಧ. ಪು. ೪೭೬.
132. ಇವುಗಳ ಜೊತೆಗೆ ಮರಿಸಿದ್ಧಲಿಂಗನ ಹೆಸರಿಗಿರುವ 'ಮಿಶ್ರಿದ ಶಬ್ದಸಮೂಹ'ವೆಂಬ ಕೃತಿಯನ್ನು ಧಾರವಾಡದ ವಚನ ವಾಙ್ಮಯ ಭಂಡಾರ (ಓಲೆ. ೪೮೯. ಗರಿ-೩ ಹಿಂಭಾಗ, ೮ ಹಿಂಭಾಗ)ದಲ್ಲೂ; ಹಾಗೆಯೇ ಮರಿಸಿದ್ಧಲಿಂಗೇಶ್ವರಾಚಾರ್ಯನ 'ಅಷ್ಟಾವರಣ ಪ್ರಶಸ್ತಿ' ಎಂಬ ಕೃತಿಯನ್ನು ಮೈಸೂರಿನ ಹಸ್ತಪ್ರತಿ ಭಂಡಾರ (ಓಲೆ ನಂ. ಕೆ. ೯೯೭/೧ ನಂ. ೧೪೦೦. ಗರಿ. ೧೨೬-೧೪೨) ದಲ್ಲೂ ನೋಡಬಹುದಾಗಿದೆ. (ಈ ಪಟ್ಟಿಕೆಗಳ ಕೃಪೆ : ಎಸ್. ಶಿವಣ್ಣನವರು. ಹಸ್ತಪ್ರತಿ ವಿಭಾಗ. ಕನ್ನಡ ಅಧ್ಯಯನ ಕೇಂದ್ರ. ಬೆಂಗಳೂರು ವಿಶ್ವವಿದ್ಯಾಲಯ)
133. ವೀರಶೈವ ತಾರಾವಳಿ ಸಂಪುಟ. ಸಂ:ವೀರಣ್ಣರಾಜೂರ. ಪು. ೧೮೭-೧೯೨.
134. ಇವರೂ ಕೂಡ ಒಬ್ಬ ಮಠಾಧಿಪತಿಗಳೇ ಇರುವಂತಿದೆ. ಆದರೆ ಇವರು ಬೆಂಗಳೂರಿನ ಯಾವ ಮಠಕ್ಕೆ ಸೇರಿದವರೆಂದು ತಿಳಿದು ಬರುವುದಿಲ್ಲ.
135. ವೀರಶೈವ ಹಸ್ತಪ್ರತಿಗಳ ಪುಷ್ಪಿಕೆಗಳು. ಸಂ : ಎಸ್. ಶಿವಣ್ಣ. ಕ್ರ.ಸಂ: ೪೩೯. ಪು. ೪೯.
136. ಅದೇ. ಕ್ರ.ಸಂ: ೨೦೦೦. ಪು. ೨೬೧ (ಈ ಕೃತಿಯಲ್ಲಿ 'ಸೀಲ ಸಂಪಾದನಾಸಮಯ' ಎಂಬಮಾತನ್ನು 'ಸೀಲ ಸಂಪ್ರದಾಯ ಸಮಯ' ಎಂಬುದಾಗಿ ಗ್ರಹಿಸಲಾಗಿದೆ.)
137. ಕೋಳದಮಠದ ಈಗಿನ ಗುರುಗಳಾಗಿರುವ ಶಾಂತವೀರಸ್ವಾಮಿಗಳು ಸ್ವತಃ ಸಂಸ್ಕೃತ ವಿದ್ವಾಂಸರಾಗಿದ್ದು. 'ಆತ್ಮಶ್ರೀ', 'ಜ್ಞಾನಪ್ರಭಾ', 'ಸ್ವಾಮಿರಾಮತೀರ್ಥ' ಮುಂತಾದ ಕೃತಿಗಳನ್ನು ರಚಿಸಿರುವುದಾಗಿ (ಅವರದೇ ಹೇಳಿಕೆಯಿಂದ) ತಿಳಿದು ಬರುತ್ತದೆ.
138. ನಂಜುಂಡಸ್ವಾಮಿಗಳು (ಗಂಜಾಂಮಠ) ಸದ್ವಿದ್ಯಾನ್ನದಾನಪ್ರಾಭವ ಪ್ರಕಾಶಿಕಾ. ೧೮೯೨. ಪು. ೧. [ಇಲ್ಲಿರುವ ಕನ್ನಡದ ಟೀಕು ಹೀಗಿದೆ- ''ಅಪಾರ ಕರುಣಾಸಮುದ್ರನಾದ ಯಾವಾತನು ಭೂಮಿಯಲ್ಲಿ ಬಿಜ್ಜಳನ ಮಾಯೆಯನ್ನು ತನ್ನ ಮಹಿಮೆಯ ಬಲದಿಂದ ಅತ್ಯಂತವಾಗಿ ಮೂಲೋತ್ಪಾಟನವಂ ಮಾಡಿದನೋ ಸಕಲ ವೀರಶೈವ ಮತವೆಂಬ ಭೂಮಿಗೆ ಕಲ್ಪವೃಕ್ಷಪ್ರಾಯನಾದನೋ ಮತ್ತು ಯೋಗಿಗಳಿಗೆ ಬ್ರಹ್ಮ ವಿದ್ಯಾಚಾರ್ಯನಾದಂಥವನೋ ಅಂಥ ಬಸವೇಶ್ವರನನ್ನು ಕುರಿತು ಅನೇಕ ಸಾರಿ ನಮಸ್ಕರಿಸುತ್ತೇನೆ.]
139. ಅದೇ. ಪು. ೩ ಮತ್ತು ೩೦.
140. ಆದಕಾರಣ ಪಂ॥ ಶಿವಕುಮಾರಸ್ವಾಮಿಗಳಿಗೆ ''ಆಯುರ್ವೇದಾಚಾರ್ಯ, ವೈದ್ಯಮಾರ್ತಾಂಡ, ಬಿಷಗ್ರತ್ನ, ಸಾಹಿತ್ಯವಾರಿಧಿ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ'' ಇವೇ ಮೊದಲಾದ ಬಿರುದುಗಳಿದ್ದುದಾಗಿ ತಿಳಿದುಬರುತ್ತದೆ. (ಪಂ ॥ ಶಿವಕುಮಾರಸ್ವಾಮಿಗಳ ಆರೋಗ್ಯದರ್ಪಣದ ಮುಖಪುಟ. ೧೯೮೩)
141. ಇದೇ ಕೃತಿಯ ಮುಖಪುಟದ ಹಿಂಬದಿಗೆ ಇರುವ ವಿಚಾರಗಳು.
142. ಪಂ॥ ಶಿವಕುಮಾರಸ್ವಾಮಿಗಳ ಆರೋಗ್ಯದರ್ಪಣ ಗ್ರಂಥದ ಪೀಠಿಕಾಭಾಗಕ್ಕೆ ಮುನ್ನ ಪುಟ ೬ರಲ್ಲಿ ಈ ವಿವರಗಳಿವೆ.
143. ಶರಣಸಾಹಿತ್ಯ. ಸಂ: ಬಿ.ಶಿವಮೂರ್ತಿಶಾಸ್ತ್ರಿ. ಸಂಪುಟ-೩. ಸಂಚಿಕೆ-೮. ೧೯೪೦. ಪು. ೯೮-೯೯.
144. ಜಿ.ವಿ. ಶಿವಸ್ವಾಮಿ. ಶ್ರೀಮಹಂತರಮಠದ ಪರಂಪರೆ, ಶಿಕ್ಷಣ ಮತ್ತು ಸಮಾಜಸೇವೆ. ರಂಭಾಪುರಿಬೆಳಗು ಸಂ : ಪ್ರೊ॥ ಆರ್. ರಾಚಪ್ಪ. ಸಂಪುಟ-೩. ಸಂಚಿಕೆ-೧. ಫೆಬ್ರವರಿ. ೧೯೯೪. ಪು. ೪೦.
145. ಸರ್ಪಭೂಷಣ ಮಠದ ಗುರುಪರಂಪರೆಯಲ್ಲಿ ಬರುವ ಬಸವಲಿಂಗಯ್ಯ (ಬಸವಲಿಂಗಸ್ವಾಮಿಗಳು) ನವರು ೧೯೩೦ರ ದಶಕದಲ್ಲಿ ಬೆಂಗಳೂರಿನಲ್ಲಿ ಒಬ್ಬ ಪ್ರಮುಖ ವಿದ್ವಾಂಸರಾಗಿದ್ದು, ಅವರು ಆಗ ಗುಬ್ಬಿ ಕಂಪೆನಿಯವರಿಗೆ ರಾಜಶೇಖರವಿಳಾಸ, ಭಕ್ತಸಿರಿಯಾಳ, ಗಿರಿಜಾಕಲ್ಯಾಣ ಇವೇ ಮೊದಲಾದ ಪುರಾಣಾಂತರ್ಗತವಾದ ಕಥೆಗಳನ್ನು ನಾಟಕದ ಮಟ್ಟುಗಳನ್ನಾಗಿ ಬರೆದು ಕೊಡುತ್ತಿದ್ದುದಾಗಿ ತಿಳಿದು ಬರುತ್ತದೆ. (ಹೇಳಿಕೆ : ಗೊ.ರು. ಚನ್ನಬಸಪ್ಪ (೬೪) ಅಧ್ಯಕ್ಷರು. ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತು. ಬೆಂಗಳೂರು.)
146. ಹೆಚ್ಚಿನ ವಿವರಗಳಿಗಾಗಿ ನೋಡಿ : ಚ. ಸುಂದರೇಶನ್ ಅವರ 'ಅಭಿನವ ಅಲ್ಲಮ'. ನಿಲವು ಭಾಗ. ಪು. ೧-೨೧.
147. ಅದೇ ಕೃತಿ. ಲೇಖನ ಸಾಹಿತ್ಯ ಭಾಗ ಮತ್ತು ಪ್ರವಚನ ಸಾಹಿತ್ಯಭಾಗ. ಪು. ೧-೧೭೪.
148. ಶಿವಾನುಭವ ಪತ್ರಿಕೆ. ಜನವರಿ ೧೯೩೫. ಪು. ೯.
149. ಡಾ। ಎಚ್.ಎಂ. ಸದಾಶಿವಯ್ಯನವರು ತಮ್ಮ 'A Comparitive Study of Two Virasaiva Monasteries' ಎಂಬ ಮಹಾಪ್ರಬಂಧ(ಪು. ೧೫೩)ದಲ್ಲಿ -"Sarpabhushana Math (Bangalore) is under Abhinava Allama Mahadevaswami. He is a well-known Sanskrit Scholar and one of the living authorities of Virasaivism. He delevers discourses through out the country. He is invited to several places by the devotees to deliver lectures on virasaivism......." ಎಂದಿದ್ದಾರೆ.
150. ಮಲ್ಲಾಬಾದಿ ವೀರಭದ್ರಪ್ಪ. ಶಿವಯೋಗಿಗಳ ಜೀವನಚರಿತ್ರೆ. ಕೈವಲ್ಯಕಲ್ಪವಲ್ಲರಿ. ಸಂ : ಶಿ. ಶಿ. ಬಸವನಾಳ. (೧೯೪೮. ಬೆಂಗಳೂರು) ಪು. liv.

151. ಎಂ.ಜಿ. ನಂಜುಂಡಾರಾಧ್ಯ. (ಸಂ) ಸರ್ಪಭೂಷಣ ಶಿವಯೋಗಿಗಳ ಜ್ಞಾನಶತಕ. ಶಿವಯೋಗಿಗಳ ಸಂಕ್ಷಿಪ್ತ ಪರಿಚಯ. ಪು. xiii.

152. ಶಿವಕುಮಾರ ಸ್ವಾಮಿಗಳು ಅನುವಾದಿಸಿದ ಪ್ರಭುದೇವರ ವಚನಗಳ ಹಿಂದಿ ಅವತರಣಿಕೆಯು, ವಾರಣಾಸಿಯ ಮಹಾಪಂಡಿತರಾದ ಗೋಪಿನಾಥ ಕವಿರಾಜರ ಮುನ್ನುಡಿಯೊಂದಿಗೆ ಅಲ್ಲಿನ ಸುಪ್ರಸಿದ್ಧ ಪ್ರಕಟಣಾ ಸಂಸ್ಥೆಯಾದ ಹಿಂದೀ ನಾಗರೀ ಪ್ರಚಾರಿಣೀ ಸಭಾದಿಂದ ೧೯೪೩ರಲ್ಲಿ ಪ್ರಕಟವಾಗಿರುತ್ತದೆ. [ಭಾರತೀಯ ಸಂಸ್ಕೃತಿ. (ಭಾಗ-೧) ಮೂಲ: ಮಹೋಪಾಧ್ಯಾಯ ಗೋಪಿನಾಥಕವಿರಾಜ. ವಾರಣಾಸಿ. ಅನು : ವೇದಾಂತಾಚಾರ್ಯ ಶ್ರೀ ಶಿವಕುಮಾರಸ್ವಾಮಿಗಳು. ಬೆಂಗಳೂರು. ಅನುವಾದಕರ ನುಡಿ. ಪು. ೧, ೨]

153. ಅದೇ.

154. ಶಿವಕುಮಾರಸ್ವಾಮಿಗಳಿಗೆ ಕನ್ನಡ, ಸಂಸ್ಕೃತ, ಹಿಂದಿ ಹಾಗೂ ಇಂಗ್ಲೀಷ್ ಈ ನಾಲ್ಕು ಭಾಷೆಗಳಲ್ಲಿ ಪರಿಶ್ರಮವಿದ್ದುದರಿಂದ ಇವರನ್ನು ಚತುರ್ಭಾಷಾ ಪ್ರವೀಣರೆಂದೂ ಕರೆಯಲಾಗುತ್ತಿತ್ತು. (ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು. ಸಂ: ಎಚ್. ದೇವೀರಪ್ಪ, ಚನ್ನಪ್ಪ ಎರೇಸೀಮೆ. ಪು. ೧೩೦)

155. ಈ ವಿವರಗಳನ್ನು ಶಿವಕುಮಾರಸ್ವಾಮಿಗಳಿಗೆ ದಿನಾಂಕ :೧೪.೧೨.೧೯೬೩ರಲ್ಲಿ ಧರ್ಮಸ್ಥಳ ಕ್ಷೇತ್ರದಲ್ಲಿ ಅರ್ಪಿಸಿರುವ 'ಬಿನ್ನವತ್ತಳೆ'ಯಿಂದ ಸಂಗ್ರಹಿಸಲಾಗಿದೆ.

156. ಏಕೆಂದರೆ- ೧೯೬೦ ಮತ್ತು ೧೯೭೦ರ ದಶಕಗಳಲ್ಲಿ ನಗರದ ಅಂದಿನ ಪ್ರಮುಖ ವಿದ್ವಾಂಸರುಗಳೆನಿಸಿಕೊಂಡಿದ್ದ ಬಿ. ಶಿವಮೂರ್ತಿಶಾಸ್ತ್ರೀ, ಜಿ.ಸಿ. ವೀರಪ್ಪ, ಸಿರಸಿ ಗುರುಶಾಂತಶಾಸ್ತ್ರೀ ಇವರೇ ಮೊದಲಾದವರು ಇಲ್ಲಿನ ಹಲವಾರು ಮಠಗಳಲ್ಲಿ ಸಂಗ್ರಹಿಸಲಾಗಿದ್ದ ಅಪಾರ ಪ್ರಮಾಣದ ಕಾಗದದ ಹಸ್ತಪ್ರತಿಗಳು ಹಾಗೂ ಓಲೆಗರಿ ಪ್ರತಿಗಳ ಕಟ್ಟುಗಳನ್ನು ಪರಿಶೀಲನೆಗಾಗಿ ಕೊಂಡೊಯ್ದುದಾಗಿಯೂ; ಮುಂದೆ ಅವುಗಳು ಬೆಳಕು ಕಾಣದೆ ಅಜ್ಞಾತವಾಗಿಯೇ ಉಳಿದು (ಏನಾದುವೆಂಬ ಸುಳಿವಿಲ್ಲ) ಹೋದುದಾಗಿಯೂ ಇಲ್ಲಿನ ಬೇಲಿಮಠದ ಶಿವರುದ್ರಸ್ವಾಮಿಗಳು, ಗಂಜಾಂ ಮಠದ ಚಿದ್ಘನಸ್ವಾಮಿಗಳು, ಗುರುವಣ್ಣದೇವರ ಮಠದ ಮಲ್ಲಿಕಾರ್ಜುನಸ್ವಾಮಿಗಳು ಇವರೇ ಮೊದಲಾದವರು ವಿಷಾದದ ಸೂಚನೆ ನೀಡುತ್ತಾರೆ.

157. ಪಿ.ಎಂ. ಗಿರಿರಾಜು. ಚರಮೂರ್ತಿ ಗುರುಸಿದ್ಧಸ್ವಾಮಿಗಳ ಕೆಲವು ಐತಿಹಾಸಿಕ ಘಟನೆಗಳು. ಕೈವಲ್ಯ. ಸಂ:ಜಿ.ವಿ. ಶಿವಸ್ವಾಮಿ, ಎಚ್.ಎಸ್. ಸಿದ್ಧಗಂಗಪ್ಪ. ಪು. ೬೬.

158. ಶಂಕೇಶ್ವರದ ಭೂಸಪ್ಪಣ್ಣ ವಂಟಮುತ್ತಿಯವರು ದೇಶದ ಮಠದ ನಂಜುಂಡದೇವರಿಗೆ ಬರೆದಿರುವ ಪತ್ರ. ಚಿತ್ರಭಾನು ಸಂವತ್ಸರ (ಸನ್. ೧೮೮೨. ಮಾರ್ಗಶಿರ ಶುದ್ಧ ೨)

159. ಈ ಹಿನ್ನೆಲೆಯಲ್ಲಿ ದೇಶದ ಮಠದ ಗುರುಪರಂಪರೆಯಲ್ಲಿ ಬಂದು ಹೋಗಿರುವ ಅನೇಕ ಮಠಾಧೀಶರು ಘನ ವಿದ್ವಾಂಸರುಗಳೇ ಆಗಿದ್ದು ಮಾಹಿತಿಗಳ ಕೊರತೆಯಿಂದಾಗಿ ಅವರೆಲ್ಲಾ ಅಜ್ಞಾತವಾಗಿಯೇ ಉಳಿದಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

160. ಕೂಡಲ ಸಂಗಮಾವಧೂತರ ಶಿಖಾರತ್ನಪ್ರಕಾಶವು ೧೮೮೩ರಲ್ಲಿ ಮದರಾಸಿನ ಶಾರದಾ ಮುದ್ರಾಕ್ಷರಶಾಲೆಯಿಂದ ಪ್ರಕಟವಾಗಿದೆ. ಇದರ ಮುಖಪುಟದಲ್ಲಿ "...ಕೂಡಲ ಸಂಗಮಾವಧೂತರಿಂದ ರಚಿತಮಾದ ಶಿಖಾರತ್ನ ಪ್ರಕಾಶವು ಮ.ರಾ.ರಾ. ಅರಳೆಪೇಟೆ ದೇಶದಮಠದ ಚೆನ್ನಶೆಟ್ಟರಿಂದ...." ಎಂಬ ಇತ್ಯಾದಿ ವಿವರಗಳಿವೆ. (ಕೃತಿಯ ಕೃಪೆ : ಎಸ್. ಶಿವಣ್ಣ. ಹಸ್ತಪ್ರತಿಕಾರರು. ಕನ್ನಡ ಅಧ್ಯಯನ ಕೇಂದ್ರ. ಬೆಂಗಳೂರು ವಿಶ್ವವಿದ್ಯಾಲಯ)

161. ನಿಷ್ಕಳಂಕ ಚಿದಾನಂದ ಯೋಗಿಯ ನಿಃಕಲರವಚನವು ಎಂಬ ಈ ಕೃತಿಯ ಹಕ್ಕನ್ನು ಬಳ್ಳಾರಿಯ ಕವುಲ್ ಬಜಾರಿನ ಚಿತ್ತೂರು ಅಪ್ಪಾಸ್ವಾಮಿ ಮೊದಲಿಯಾರರು ಪಡೆದು ೧೮೮೫ರಲ್ಲಿ ಬಳ್ಳಾರಿಯ ಉಮಾಮಹೇಶ್ವರ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಿದ್ದಾರೆ. (ಕೃತಿಯ ಕೃಪೆ : ಎಸ್. ಶಿವಣ್ಣ, ಪೂರ್ವೋಕ್ತ.)

162. ಮಹಾದೇವಸ್ವಾಮಿಗಳು. ಮುನ್ನುಡಿ. ಶ್ರೀ ಮಹಾದೇವಿಯಕ್ಕನವರ ಜೀವನ ಚರಿತ್ರೆ. ಟಿ.ಎನ್. ಮಹಾದೇವಯ್ಯ. ೧೯೩೫.

163. ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆಯಿಂದ ಪ್ರಕಟವಾದ ಕೃತಿಗಳು :
    1. ಶ್ರೀ ಮಹಾದೇವಿಯಕ್ಕನವರ ಜೀವನಚರಿತ್ರೆ. ಟಿ.ಎನ್. ಮಹಾದೇವಯ್ಯ. ೧೯೩೫.
    2. ಶ್ರೀ ಸರ್ಪಭೂಷಣ ಶಿವಯೋಗಿಗಳ ಕೈವಲ್ಯ ಕಲ್ಪವಲ್ಲರಿ. ಸಂ: ಶಿ.ಶಿ. ಬಸವನಾಳ. ೧೯೪೮.
    3. ಅಭಿನವ ಅಲ್ಲಮ. ಸಂ: ಚ. ಸುಂದರೇಶನ್. ೧೯೭೨.
    4. ತತ್ತ್ವಜ್ಞಾನಿ ಸರ್ಪಭೂಷಣ ಶಿವಯೋಗಿ. ಬಿ.ಎಸ್.ಸ್ವಾಮಿ. ೧೯೭೪.
    5. ಶ್ರೀ ಅಕ್ಕಮಹಾದೇವಿ ಸುಪ್ರಭಾತಂ. ಗುರುದೇವಿತಾಯಿ ಹಿರೇಮಠ. ೧೯೭೫.
    6. ಶ್ರೀ ಸರ್ಪಭೂಷಣಶಿವಯೋಗಿಗಳ ಜ್ಞಾನಶತಕಂ. ಸಂ: ಎಂ.ಜಿ. ನಂಜುಂಡಾರಾಧ್ಯ. ೧೯೭೮.
    7. ಅಭವಕಂದ ಮತ್ತು ಇಷ್ಟಲಿಂಗ ಚಾರಿತ್ರ್ಯ. ಸಂ : ಎಸ್. ಉಮಾಪತಿ. ೧೯೭೯.
    8. ಭಾರತೀಯ ಸಂಸ್ಕೃತಿ. (ಭಾಗ-೧) ಅನು : ಶ್ರೀ ಶಿವಕುಮಾರಸ್ವಾಮಿಗಳು. ೧೯೮೩.
    9. ಶಂಕರದೇವರ ಕಂದಗಳು. ಸಂ: ಎಸ್. ಶಿವಣ್ಣ. ೧೯೮೪.
    10. ಆಡುಮುಟ್ಟದ ಸೊಪ್ಪು. ಬಿ.ಎಸ್. ಸ್ವಾಮಿ. ೧೯೮೪.
    11. ಶ್ರೀ ಬಸವಾಷ್ಟೋತ್ತರ ಶತನಾಮಾವಳಿ. ಶ್ರೀ ಶಿವಕುಮಾರಸ್ವಾಮಿಗಳು. ೧೯೮೫.

12. ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠ. (ಚಾರಿತ್ರಿಕ ಹಿನ್ನೆಲೆ) ಭಕ್ತ ಮಂಡಳಿ. ೧೯೮೬.
13. ಶ್ರೀ ಸರ್ಪಭೂಷಣ ಶಿವಯೋಗಿಗಳ ಭುಜಂಗಮಾಲಾ ಶಿವಸಂಕೀರ್ತನಮ್. ಸಂ: ಎಂ.ಎಸ್. ಬಸವರಾಜಯ್ಯ. ೧೯೮೭.
14. ಶ್ರೀ ಸರ್ಪಭೂಷಣ ಶಿವಯೋಗಿಗಳ ಸುಪ್ರಭಾತ.
15. ವಚನ ಚಳುವಳಿ. ಡಾ। ಪಿ.ವಿ. ನಾರಾಯಣ.
16. ವಚನವೈಭವ.
17. ಬಳ್ಳಿಗಾವಿ.
18. ಉಪನ್ಯಾಸ ಸಂಚಯ. ಸಂ : ಟಿ.ಆರ್. ಮಹಾದೇವಯ್ಯ. ೧೯೯೧.
19. ಮೂವತ್ತು ವಚನಗಳು (ಸಂಗ್ರಹ) ೧೯೯೧.
20. ವಚನ ಚಿಂತನ. ಸಂ : ಗೊ.ರು. ಚನ್ನಬಸಪ್ಪ. ೧೯೯೨.
21. ವಚನಕಾರರು: ವ್ಯಕ್ತಿ ಹಾಗೂ ಅಭಿವ್ಯಕ್ತಿ. ಸಂ : ಡಾ। ಸಿ.ಯು.ಮಂಜುನಾಥ್ ಮತ್ತು ಬಿ.ಸಿ.ವೀರಪ್ಪ. ೧೯೯೩.
22. ಹದಿನಾಡು ವೀರಶೈವ ಅರಸು ಮನೆತನ. ಸಂ : ಡಾ। ಎಸ್.ವಿದ್ಯಾಶಂಕರ. ೧೯೯೩.
23. ವಚನಕಾರರ ಪ್ರಮುಖ ಪರಿಕಲ್ಪನೆಗಳು. ಸಂ : ಷಣ್ಮುಖಯ್ಯ ಅಕ್ಕೂರಮಠ. ೧೯೯೪.
24. ಭಕ್ತಿ ಪಂಥದಲ್ಲಿ ಸಮಾಜಕಾರ್ಯದ ಬೇರುಗಳು. ಸಂ : ಡಾ। ಎಚ್.ಎಂ. ಮರುಳಸಿದ್ಧಯ್ಯ. ೧೯೯೪.

164. ಕೈವಲ್ಯಕಲ್ಪವಲ್ಲರಿ ಕೃತಿಯ ಕೃಪೆ : ಬಾಣಾವರದ ಗೌರಮ್ಮನವರು. ಶೇಷಾದ್ರಿಪುರ. ಬೆಂಗಳೂರು.

165. ಹೆಚ್ಚಿನ ವಿವರಗಳಿಗಾಗಿ : ಚ. ಸುಂದರೇಶನ್ (ಸಂ) ಅಭಿನವ ಅಲ್ಲಮ (ಮಹಾದೇವಸ್ವಾಮಿಗಳವರ ಲೇಖನ ಸಾಹಿತ್ಯ ಮತ್ತು ಭಾಷಣ ಸಾಹಿತ್ಯ)

166. ಈ ಕೃತಿಯನ್ನು ಕುರಿತು ವಿಸ್ತೃತವಾದ ಚರ್ಚೆಯನ್ನು ಇದೇ ಅಧ್ಯಾಯದಲ್ಲಿ ಹಿಂದೆಯೇ (ಸರ್ಪಭೂಷಣರ ಕೃತಿಗಳು) ಮಾಡಲಾಗಿರುತ್ತದೆ.

167. ಈ ಕೃತಿಯನ್ನು ಕುರಿತ ಹೆಚ್ಚಿನ ವಿವರಗಳು ಹಿಂದೆ ಇದೇ ಅಧ್ಯಾಯದ ಇತರೆ ಕೃತಿಗಳು (೯)ರಲ್ಲಿ ಬಂದಿವೆ.

168. ಟಿ.ಆರ್. ಮಹಾದೇವಯ್ಯ. (ಸಂ) 'ಉಪನ್ಯಾಸ ಸಂಚಯ'. ಕೃತಿಯ ಬೆನ್ನುಪುಟ. ೧೯೯೧.

169. ೧೯೯೦ರಿಂದ ಸರ್ಪಭೂಷಣಮಠದ ಪ್ರವಚನಾಚಾರ್ಯ ಮಲ್ಲಿಕಾರ್ಜುನಸ್ವಾಮಿಗಳ ನೇತೃತ್ವದಲ್ಲಿ 'ಶ್ರೀಸರ್ಪಭೂಷಣ ಶಿವಯೋಗೀಶ್ವರ ಸಾಂಸ್ಕೃತಿಕ ವೇದಿಕೆ'ಯನ್ನು ರೂಪಿಸಲಾಗಿತ್ತು. ಡಾ। ಎಂ. ಚಿದಾನಂದಮೂರ್ತಿ, ಗೊ.ರು. ಚನ್ನಬಸಪ್ಪ, ಡಾ। ಸಾ.ಶಿ. ಮರುಳಯ್ಯ, ಡಾ। ಎಸ್. ವಿದ್ಯಾಶಂಕರ, ಇವರೇ ಮೊದಲಾದ ಗಣ್ಯ ಸಾಹಿತಿಗಳು ಈ ವೇದಿಕೆಯಲ್ಲಿದ್ದರು. ಮಠದಲ್ಲಿ ನಡೆಯುತ್ತಿದ್ದ ಶ್ರಾವಣಮಾಸದ ಹಾಗೂ ಯುಗಾದಿ ಸಂದರ್ಭದ ಎಲ್ಲಾ ವಿಶೇಷ ಕಾರ್ಯಕ್ರಮಗಳೂ ಈ ವೇದಿಕೆಯಿಂದಲೇ ರೂಪುಗೊಳ್ಳುತ್ತಿದ್ದವು. ಶ್ರಾವಣ ಮಾಸದಲ್ಲಿ ಪ್ರತಿದಿನ ಒಬ್ಬೊಬ್ಬ ನಾಡಿನ ಹೆಸರಾಂತ ವಿದ್ವಾಂಸರುಗಳನ್ನು ಕರೆಸಿ ಅವರಿಂದ ವಿಶೇಷ ಉಪನ್ಯಾಸ ನಡೆಸಲಾಗುತ್ತಿತ್ತು. ಹೀಗೆ ೩೦ ಮಂದಿ ವಿದ್ವಾಂಸರುಗಳ ೩೦ ವಿದ್ವತ್ ಪೂರ್ಣ ಉಪನ್ಯಾಸದ ಲೇಖನಗಳನ್ನು ಒಳಗೊಂಡ ಸಂಕಲನ ಕೃತಿಯನ್ನು ಮುಂದಿನ ಯುಗಾದಿ ಸಂದರ್ಭದಲ್ಲಿ ಬಿಡುಗಡೆ ಮಾಡುವ ಪರಿಪಾಠವಿರುತ್ತಿತ್ತು. ಈ ಕೃತಿಯು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲೆಯಿಂದಲೇ ಪ್ರಕಟವಾಗುತ್ತಿತ್ತು. ಕಳೆದ ನಾಲ್ಕೈದು ವರ್ಷಗಳ (೧೯೯೦-೯೫) ಕಾಲ ನಗರದ ಜನತೆಗೆ ವಿನೂತನ ಸಾಂಸ್ಕೃತಿಕ ರಸದೌತಣವನ್ನು ಉಣಬಡಿಸಿದ್ದ ಈ ವೇದಿಕೆಯು, ಮಠದೊಳಗೆ ಈ ಮಧ್ಯೆ ಎದ್ದ ವಿವಾದಗಳಿಂದಾಗಿ ಸ್ಥಗಿತಗೊಂಡಿತು.

170. ಸರ್ಪಭೂಷಣಮಠದ ಈ ವಿನೂತನ ಪ್ರಕಟಣೆಗಳನ್ನು ಕುರಿತು ಡಾ। ಎಸ್. ವಿದ್ಯಾಶಂಕರ ಅವರು ತಾವು ಸಂಪಾದಿಸಿಕೊಟ್ಟಿರುವ 'ಹದಿನಾಡು ವೀರಶೈವ ಅರಸುಮನೆತನ' ಎಂಬ ಕೃತಿಯ ಮುನ್ನುಡಿಯಲ್ಲಿ – ''ಶ್ರೀಸರ್ಪಭೂಷಣ ಶಿವಯೋಗೀಶ್ವರ ಮಠದ ಪ್ರವಚನಾಚಾರ್ಯ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ವೀರಶೈವ ಧರ್ಮ ಸಾಹಿತ್ಯ ಸಂಸ್ಕೃತಿಗಳನ್ನು ಕುರಿತು ನಾಡಿನ ಖ್ಯಾತ ವಿದ್ವಾಂಸರುಗಳಿಂದ ಉಪನ್ಯಾಸಗಳನ್ನು ನಿರಂತರವಾಗಿ ನಡೆಸುತ್ತಾ ಬಂದಿರುವರು. ಇಲ್ಲಿ ಪ್ರತಿವರ್ಷ ನಡೆಸುತ್ತಾ ಬಂದಿರುವ ಶ್ರಾವಣ ಮಾಸದ ಕಾರ್ಯಕ್ರಮಗಳು ಅತ್ಯಂತ ಜನಪ್ರಿಯವಾಗಿವೆ'' ಎಂದಿದ್ದಾರೆ.

171. ಸರ್ಪಭೂಷಣ ಮಠದಲ್ಲಿ ಕಳೆದ ೧೯೯೫ರ ಮೇ ತಿಂಗಳಲ್ಲಿ ಶ್ರೀಸರ್ಪಭೂಷಣ ಶಿವಯೋಗೀಶ್ವರ ಸಾಂಸ್ಕೃತಿಕ ವೇದಿಕೆಯ ಪರವಾಗಿ ಸರ್ಪಭೂಷಣ ಶಿವಯೋಗಿಗಳವರ ದ್ವಿಶತಮಾನೋತ್ಸವ ಕಾರ್ಯಕ್ರಮಗಳನ್ನು ವಿಜೃಂಭಣೆಯಿಂದ ನಡೆಸುವ ಏರ್ಪಾಟುಗಳಾಗಿದ್ದವು. ಕಾರಣಾಂತರಗಳಿಂದ ಈ ಕಾರ್ಯಕ್ರಮವು ಸ್ಥಗಿತಗೊಂಡಿತು. ಈ ಸಂದರ್ಭದಲ್ಲಿ ವೇದಿಕೆಯ ಪರವಾಗಿ ಇದೇ ಗ್ರಂಥಮಾಲೆಯಲ್ಲಿ ನಾಲ್ಕು ಕೃತಿಗಳು ಬಿಡುಗಡೆಯಾಗಲು ಸಿದ್ಧವಾಗತೊಡಗಿದ್ದವು. ಅವುಗಳಲ್ಲಿ 'ಭೂಷಣ' ಎಂಬ ಬೃಹತ್ ಸ್ಮರಣ ಸಂಪುಟವೂ ಒಂದು. ಇದರಲ್ಲಿ ನಾಡಿನ ಗಣ್ಯ ಸಾಹಿತಿಗಳಿಂದ ವೀರಶೈವ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಒಂದು ನೂರು ಲೇಖನಗಳನ್ನು ಒಂದೆಡೆ ಕಲೆ ಹಾಕಲಾಗಿತ್ತು. ಈ ಉದ್ಗ್ರಂಥದ ಸಂಪಾದಕತ್ವವನ್ನು ಡಾ। ಎಂ. ಚಿದಾನಂದಮೂರ್ತಿ ಮತ್ತು ಡಾ। ಸಿ.ಯು. ಮಂಜುನಾಥ್ ಅವರು ವಹಿಸಿದ್ದರು. ಇದರ ಜೊತೆಗೆ ಡಾ। ಎಸ್. ವಿದ್ಯಾಶಂಕರ ಅವರ ಸಂಪಾದಕತ್ವದ 'ವಚನಕಾರರು-ಎರಡನೆಯ ಘಟ್ಟ', ಎಸ್. ಶಿವಣ್ಣನವರ ಸಂಪಾದಕತ್ವದ 'ಕೈವಲ್ಯಕಲ್ಪವಲ್ಲರಿ' ಸಂಗ್ರಹ ಹಾಗೂ ವಿಶೇಷ ಸ್ಮರಣ ಸಂಚಿಕೆಯೊಂದು ಸೇರಿದಂತೆ ಇವಿಷ್ಟೂ ಕೃತಿಗಳೂ ಮೇಲ್ಕಂಡ ಗ್ರಂಥಮಾಲೆಯ ಪರವಾಗಿ ಮುದ್ರಣವಾಗತೊಡಗಿದ್ದವು.

172. ಶ್ರೀ ಸರ್ಪಭೂಷಣಶಿವಯೋಗಿಗಳ ಮಠದ ಟ್ರಸ್ಟ್. ನಂ : ೨೨. ಕೆಂಪೇಗೌಡ ವೃತ್ತ. ಬೆಂಗಳೂರು-೯. (ಇದರ ಕಛೇರಿಯು ಸರ್ಪಭೂಷಣಮಠದ ಆವರಣದೊಳಗೇ ಇದೆ)
173. ಶ್ರೀ ಸರ್ಪಭೂಷಣಮಠದ ಆಡಳಿತ ವರ್ಗದ ವತಿಯಿಂದ ೧೯೯೫ರ ಅಕ್ಟೋಬರ್ ೨೭ ಮತ್ತು ೨೮ ರಂದು ನಗರದ ಜಯದೇವ ಹಾಸ್ಪಲಿನಲ್ಲಿ ಶ್ರೀ ಸರ್ಪಭೂಷಣಶಿವಯೋಗಿಗಳ ದ್ವಿತೀಯ ಶತಮಾನೋತ್ಸವ ಸಮಾರಂಭವನ್ನು ಅದ್ದೂರಿಯಾಗಿ ನಡೆಸಲಾಯಿತು. ಈ ಸಂದರ್ಭದಲ್ಲಿ ನಾಲ್ಕು ಕೃತಿಗಳನ್ನು ಹೊರತರಲಾಯಿತು.
174. ಸರ್ಪಭೂಷಣ ಮಠದ ಆಡಳಿತ ಮಂಡಳಿಯವರು ಪ್ರಕಟಿಸಿರುವ ಎಲ್ಲಾ ಕೃತಿಗಳೂ ಲಭ್ಯವಿದ್ದು, ಇವು ಮಠದ ಆವರಣದಲ್ಲಿರುವ ಆಡಳಿತ ಕಛೇರಿಯಲ್ಲಿ ಮಾರಾಟಕ್ಕೂ ದೊರೆಯುತ್ತವೆ.
175. ಈ ಮಾತುಗಳನ್ನು ಬಿ. ಶಿವಮೂರ್ತಿಶಾಸ್ತ್ರಿಗಳ ಅಭಿಪ್ರಾಯದಿಂದ ಸಂಗ್ರಹಿಸಿಕೊಳ್ಳಲಾಗಿದೆ. (ಸಿರಸಿ ಗುರುಶಾಂತ ಶಾಸ್ತ್ರಿಗಳ 'ಕನ್ನಡ ವೀರಶೈವಾನಂದ ಚಂದ್ರಿಕೆ'. ಪ್ರ : ಬೇಲಿಮಠದ ಸಿದ್ಧಲಿಂಗಸ್ವಾಮಿಗಳು. ಬೆಂಗಳೂರು. ೧೯೬೦ ಅಭಿಪ್ರಾಯ. ಪು. ೧೧)
176. ಹೇಳಿಕೆ : ಈಗಿನ ಬೇಲಿಮಠದ ಶಿವರುದ್ರಸ್ವಾಮಿಗಳು. ಬೆಂಗಳೂರು. (ಬೇಲಿಮಠದ ಪ್ರಕಟಣೆಗಳಲ್ಲಿ 'ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ' ಹಾಗೂ 'ಆತ್ಮ ವಿಚಾರ ಪತ್ರಿಕಾಕರ್ತರಿಗೆ ಎಚ್ಚರಿಕೆ' ಎಂಬ ಇವೆರಡೂ ಕೃತಿಗಳು ಲಭ್ಯವಾಗಿಲ್ಲ ಉಳಿದೆಲ್ಲಾ ಗ್ರಂಥಗಳೂ ಇದೇ ಮಠದಲ್ಲಿ ಲಭ್ಯವಾಗಿವೆ.)
177. 'ಸಿದ್ಧಾಂತ ಶಿಖೋಪನಿಷತ್' ಕೃತಿಯ ಮುಖಪುಟದಲ್ಲಿ - ಶ್ರೀಮದ್ವೀರಶೈವ ಶಿವಾದ್ವೈತ ಸಿದ್ಧಾಂತ ಬೋಧಿನೀ ''ಸಿದ್ಧಾಂತ ಶಿಖೋಪನಿಷತ್'' ಎಂಬ ಕೃತಿಯು ಶ್ರೀ ಜಗದ್ಗುರು ರೇಣಕಾದಿ ಪಂಚಾಚಾರ್ಯ ಕೃಪಾಪೋಷಿತ ವೀರಶೈವ ಧರ್ಮಗ್ರಂಥ ಭಂಡಾರದ ಪರವಾಗಿ, ಬೆಂಗಳೂರಿನ ಮೈಸೂರು ರಸ್ತೆಯ ಬೆಂಗಳೂರು ಪ್ರೆಸ್ಸಿನಲ್ಲಿ ೧೯೨೯ರಲ್ಲಿ ಪ್ರಕಟವಾದುದಾಗಿ ವಿವರಗಳಿವೆ.
178. ಕೆ.ಯಂ. ವಿಶ್ವನಾಥಶಾಸ್ತ್ರಿ. (ಸಂ) ಸಿದ್ಧಾಂತ ಶಿಖೋಪನಿಷತ್. ೧೯೨೯. ಪ್ರಸ್ತಾವನೆ. ಪು. iv
179. ಈ ಕೃತಿಯು ಅಲಭ್ಯವಾಗಿದ್ದು ಇದರ ಬಗೆಗಿನ ಮಾಹಿತಿಗಳನ್ನು ವಿಜಯನಗರದ ನಿವಾಸಿ ಜಿ.ವಿ. ಶಿವಸ್ವಾಮಿಯವರು (೫೬) (ಉಪನ್ಯಾಸಕ. ನಗರಪಾಲಿಕೆ ಕಿರಿಯ ಕಾಲೇಜು. ಶಿವಾಜಿನಗರ. ಬೆಂಗಳೂರು) ತಿಳಿಸಿರುತ್ತಾರೆ.
180. ಕೃತಿಯ ಅಂತ್ಯದಲ್ಲಿ ಶಿವಯೋಗಿ ಶಿವಾಚಾರ್ಯರು ನಿರೂಪಿಸಿದ ವೀರಶೈವ ಧರ್ಮ ನಿರ್ಣಯವಾದ ಸಿದ್ಧಾಂತ ಶಿಖಾಮಣಿ ಹೆಸರಿನ ರೇಣುಕಗೀತೆಯು.... ಎಂದು ನಮೂದಿಸಲ್ಪಟ್ಟಿದೆ. (ಡಾ। ಜ.ಚ.ನಿ. ರೇಣುಕಗೀತೆ. ಪು. ೭೧೪)
181. ಡಾ। ಸಾ.ಶಿ. ಮರುಳಯ್ಯ, ಷಣ್ಮುಖಯ್ಯ ಅಕ್ಕೂರಮಠ ಇನ್ನೂ ಮುಂತಾದವರು ತಮ್ಮ ಕೃತಿ ಪ್ರಕಟಣೆಗಾಗಿ ನಿಜಗುಣ ಜಂಗಮಮಠದಿಂದ ನೆರವು ಪಡೆದಿರುವುದಾಗಿ ಮಠದ ಗುರುಗಳೇ ಹೇಳುತ್ತಾರೆ.
182. ಹೇಳಿಕೆ : ಪಂ। ಚನ್ನಪ್ಪ ಎರೇಸೀಮೆ (೭೬) ವಿಜಯನಗರ. ಬೆಂಗಳೂರು.

# ಅಧ್ಯಾಯ - ಒಂಬತ್ತು

# ೯. ಉಪಸಂಹಾರ

ಸಂಶೋಧನೆಗಾಗಿ ಒಂದು ಸೂಕ್ತ ವಿಷಯವನ್ನು ಆಯ್ಕೆ ಮಾಡಿಕೊಳ್ಳುವಾಗ ಮೊದಲು ನನಗೆ ತುಸು ಗೊಂದಲವೆ ಉಂಟಾಗಿತ್ತು. ನನ್ನ ಗುರು ಹಿರಿಯರಲ್ಲಿ ಈ ಬಗ್ಗೆ ಸಮಾಲೋಚನೆ ನಡೆಸಿ, 'ವಚನ ಸಾಹಿತ್ಯ ಸಂಪಾದನೆಯಲ್ಲಿ ಫ.ಗು. ಹಳಕಟ್ಟಿಯವರ ಪಾತ್ರ'ವನ್ನು ಕುರಿತು ಸಂಶೋಧನೆ ನಡೆಸುವ ತೀರ್ಮಾನ ಕೈಗೊಂಡಿದ್ದೆ. ಆದರೆ ಕನ್ನಡ ಶಕ್ತಿಕೇಂದ್ರದ ಸದಸ್ಯನಾಗಿದ್ದ ನನಗೆ, ಪ್ರತಿ ಬುಧವಾರ ನಗರದ ಸರ್ಪಭೂಷಣ ಮಠದಲ್ಲಿ ನಡೆಯುತ್ತಿದ್ದ ಸಮಾಲೋಚನೆ ಸಭೆ ನನ್ನ ಸಂಶೋಧನೆಯ ದಿಕ್ಕನ್ನೆ ಬದಲಾಯಿಸಿತು.

ಒಮ್ಮೆ ನನ್ನ ಪೂಜ್ಯ ಗುರುಗಳಾದ ಡಾ। ಎಂ. ಚಿದಾನಂದಮೂರ್ತಿಯವರು ಇದೇ ಸಭೆಯಲ್ಲಿ "ಪ್ರಾಚೀನ ಕಾಲದಿಂದಲೂ ಬೆಂಗಳೂರಿನ ಮಠಗಳು ವಿಶೇಷವಾಗಿ ಸಮಾಜ ಸೇವೆ ನಡೆಸುತ್ತಾ ಬಂದಿವೆ. ರಾಜ ಮಹಾರಾಜರುಗಳು ಇಲ್ಲಿನ ಮಠಗಳಿಗೆ ವಿಶೇಷ ಪ್ರೋತ್ಸಾಹ ನೀಡಿದ್ದುದಾಗಿ ತಿಳಿದು ಬರುತ್ತದೆ. ನೀನು ಬೆಂಗಳೂರಿನ ಮಠಗಳನ್ನೇ ಕುರಿತು ಒಂದು ವಿಶೇಷ ಅಧ್ಯಯನ ನಡೆಸಿದರೆ, ಇದೊಂದು ಒಳ್ಳೆಯ ಸಂಶೋಧನೆ ಮಾಡಿದಂತಾಗುತ್ತದೆ", ಎಂಬುದಾಗಿ ಉತ್ತೇಜನ ನೀಡಿದ್ದರು. ಇದೇ ಮೂಲ ಕಾರಣವಾಗಿ ಬೆಂಗಳೂರಿನ ವೀರಶೈವ ಮಠಗಳ ಸಂಶೋಧನೆಗೆ ಬಹಳ ಹುಮ್ಮಸ್ಸಿನಿಂದಲೇ ಮುಂದಾದೆ. ಆದರೆ ಈ ನಿಟ್ಟಿನಲ್ಲಿ ನನ್ನ ನಿರೀಕ್ಷೆಗೆ ತಕ್ಕ ಪ್ರೋತ್ಸಾಹಕ್ಕೆ ಬದಲು ತಾತ್ಸಾರವೆ ಪ್ರಬಲವಾಗಿತ್ತು. ಪ್ರಾರಂಭದಲ್ಲಿ ನಾನು ಇಲ್ಲಿನ ಮಠಗಳಿಗೆ ಭೇಟಿ ನೀಡಿ ಪರಸ್ಪರ ವಿಚಾರ ವಿನಿಮಯಕ್ಕೆ ಇಳಿದಾಗ ಅಗತ್ಯ ಮಾಹಿತಿ ಸಂಗ್ರಹಣೆಗೆ ಬದಲಾಗಿ, ಸಂಶೋಧನೆಯ ವಿಷಯವನ್ನೇ ಬದಲಾಯಿಸಿಕೊಳ್ಳಲು ಸೂಚನೆ ಬರತೊಡಗಿದವು. ಹೀಗಾಗಿ ನನ್ನ ಪ್ರಥಮ ಹಂತದ ಸಂಶೋಧನ ಪ್ರಗತಿ ತೀರಾ ನಿರಾಶಾದಾಯಕವಾಗಿ ಬಿಟ್ಟಿತ್ತು.

ಇಂತಹ ಡೋಲಾಯಮಾನ ಸ್ಥಿತಿಯಲ್ಲಿ ಧೈರ್ಯ ತುಂಬಿ ಸೂಕ್ತ ತಿಳುವಳಿಕೆ ನೀಡಿದ ನನ್ನ ಮಾರ್ಗದರ್ಶಿಗಳಾದ, ಡಾ। ಎಂ.ಎ. ಜಯಚಂದ್ರ ಅವರು ಮಠಗಳಲ್ಲಿನ ಶೋಧವನ್ನು ಸದ್ಯಕ್ಕೆ ಪಕ್ಕಕ್ಕಿಟ್ಟು, ಹೊರಗಿನ ಬೇರೆಬೇರೆ ಇಲಾಖೆಗಳಲ್ಲಿ ದೊರೆಯಬಹುದಾದ ಆಕರ ಸಾಮಗ್ರಿಗಳ ಕಡೆಗೆ ನನ್ನ ಗಮನ ಸೆಳೆದರು. ನಂತರ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ವಿಪುಲವಾದ ಮಾಹಿತಿಗಳನ್ನುಳ್ಳ ಆಕರ ಸಾಮಗ್ರಿಗಳ ಕಣಜವೇ ತೆರೆದುಕೊಳ್ಳತೊಡಗಿತು. ತತ್ಫಲವಾಗಿ ಮುಂದಿನ ಮೂರುವರ್ಷಗಳಲ್ಲಿ ಅಪೂರ್ವದಾಖಲೆಗಳನ್ನೊಳಗೊಂಡ ವಿಭಿನ್ನ ಮೂಲಗಳ ಆಕರಗಳನ್ನು ಒಂದೆಡೆ ಸಂಗ್ರಹಿಸುವಲ್ಲಿ ಸಫಲನಾದೆ. ಆಗ ನಗರದ ಮಠಾಧೀಶರೂ ಕೂಡ ಮುಂದೆ ಸೂಕ್ತವಾದ ಸಹಕಾರವನ್ನು ದಯಪಾಲಿಸುವಲ್ಲಿ ಮುಂದಾದರು. ಇಷ್ಟೆಲ್ಲಾ ಪರಿಶ್ರಮದ ಫಲವಾಗಿ 'ಬೆಂಗಳೂರು ನಗರದ ವೀರಶೈವ ಮಠ' ಗಳನ್ನು ಕುರಿತು ಒಂದು ಸಮಗ್ರವೆನ್ನಬಹುದಾದ ಸಚಿತ್ರ ಸಂಗತಿಗಳನ್ನು ಒಂದೆಡೆ ಸಂಗ್ರಹಿಸಿಕೊಡುವ ಪ್ರಯತ್ನವಿಲ್ಲಿ ನಡೆದಿದೆ.

ಇಷ್ಟಾದರೂ ಈಗಲೂ ಈ ಕಾರ್ಯ ಪರಿಪೂರ್ಣವಾಗಿಲ್ಲ ಎನ್ನುವ ಕೊರಗು ನನಗೆ ಇದ್ದೇ ಇದೆ. ಏಕೆಂದರೆ ಬೆಂಗಳೂರಿನ ವೀರಶೈವ ಮಠಗಳನ್ನು ಕುರಿತ ಅಧ್ಯಯನಕ್ಕೆ ಮುಕ್ತಾಯ ಹಾಡುವುದು ಬಹಳ ಕಷ್ಟದ ಕೆಲಸ. ಕಾರಣ ನಗರದ ಇನ್ನೂ ಕೆಲವು ಮಠಾಧೀಶರು ತಮ್ಮ ಮಠಗಳಲ್ಲಿ ಇರಬಹುದಾದ ಅಮೂಲ್ಯ ದಾಖಲೆಗಳನ್ನು ಕುರಿತು ಮುಕ್ತಮನಸ್ಕರಾಗಿ ಸಂಶೋಧಕರೊಂದಿಗೆ

ಸಹಕರಿಸಬೇಕಾಗಿದೆ. ಜೊತೆಗೆ ಇಲ್ಲಿನ ಅನೇಕ ಭಕ್ತರ ಮನೆಗಳಲ್ಲೂ ಹಾಗೂ ಹಳೆಯ ಪೇಟೆಶೆಟ್ಟಿ ಯಜಮಾನರುಗಳ ವಂಶಸ್ಥರ ಮನೆಗಳಲ್ಲೂ ಇನ್ನೂ ಅಮೂಲ್ಯ ದಾಖಲೆಗಳಿರುವ ಸೂಚನೆಗಳಿವೆ. ಇದೇ ರೀತಿ ಇಲ್ಲಿನ ಮಹಾನಗರ ಪಾಲಿಕೆ, ನಗರದ ಮುಜರಾಯಿ ಇಲಾಖೆ, ತಾಲ್ಲೂಕು ಮತ್ತು ಜಿಲ್ಲಾ ಕಛೇರಿ ಇವೇ ಮುಂತಾದ ಇಲಾಖೆಯವರ ಪೂರ್ಣ ಸಹಕಾರ ಲಭ್ಯವಾಗಬೇಕಾಗಿದೆ. ಇವೆಲ್ಲಾ ಮೂಲಗಳಿಂದಲೂ ಪರಿಪೂರ್ಣವಾದ ಅಧ್ಯಯನವು ನಡೆದಾಗ ಮೇಲ್ಕಂಡ ವಿಷಯವಾಗಿ ಇನ್ನೂ ಹೆಚ್ಚಿನ ಮಾಹಿತಿಗಳನ್ನು ಒಂದೆಡೆ ಸಂಗ್ರಹಿಸಿಕೊಡಬಹುದಾದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಆದರೂಕೂಡ ಇಲ್ಲಿನ ಮಠಗಳನ್ನು ಕುರಿತಂತೆ ಅಪರಿಚಿತವೂ ಅಜ್ಞಾತವೂ ಆಗಿದ್ದ ಅನೇಕ ಕುತೂಹಲಕರ ಸಂಗತಿಗಳು ಇಲ್ಲಿ ಬೆಳಕು ಕಂಡಿವೆ ಎನ್ನುವ ಸಮಾಧಾನವಂತೂ ಇದ್ದೇ ಇದೆ.

ಪ್ರಸ್ತುತ ಅಧ್ಯಯನದಿಂದ ಇದೇ ನಿಟ್ಟಿನಲ್ಲಿ ಇನ್ನೂ ಕೆಲವು ಉಪಯುಕ್ತವಾದ ಹಾಗೂ ಹೆಚ್ಚಿನ ಸಂಶೋಧನೆಗೆ ಯೋಗ್ಯವಾದ ವಿಷಯಗಳ ಬಗೆಗೆ ಸೂಚನೆಗಳು ದೊರೆಯುತ್ತವೆ. ನಗರದ ಮುಜರಾಯಿ ಇಲಾಖೆ ಹಾಗೂ ಪತ್ರಾಗಾರ ಇಲಾಖೆಗಳಲ್ಲಿನ ದಾಖಲೆಗಳನ್ನು ಆಧರಿಸಿ 'ಪ್ರಾಚೀನ ಬೆಂಗಳೂರು' ಎಂಬ ವಿಷಯವಾಗಿ ಹಳೆಯ ಬೆಂಗಳೂರಿನ ಪ್ರಾಚೀನ ಕೋಟೆ, ಕೋಟೆಯೊಳಗಿದ್ದ ಹಳೆಯ ಪೇಟೆಗಳು, ಅವುಗಳ ಅಂದಿನ ಸಾಮಾಜಿಕ ಹಾಗೂ ಧಾರ್ಮಿಕ ಸ್ಥಿತಿಗತಿ ಇವೇ ಮೊದಲಾದ ವಿಚಾರಗಳನ್ನು ಕುರಿತಂತೆ ಒಂದು ವಿಶೇಷವಾದ ಅಧ್ಯಯನ ನಡೆಸಲು ಉತ್ತಮ ಅವಕಾಶಗಳಿವೆ. ಹಾಗೆಯೇ 'ಬೆಂಗಳೂರು ನಗರದ ಪ್ರಾಚೀನ ದೇವಾಲಯಗಳು,' ಮತ್ತು 'ಬೆಂಗಳೂರಿನ ಗ್ರಾಮಾಂತರ ಭಾಗದ ವೀರಶೈವ ಮಠಗಳು' ಇವುಗಳ ಸಾಂಸ್ಕೃತಿಕ ಅಧ್ಯಯನವನ್ನು ಕುರಿತಂತೆ ಪ್ರತ್ಯೇಕವಾದ ಸಂಶೋಧನೆಗಳನ್ನೇ ನಡೆಸಬಹುದಾಗಿದೆ. ಇದೇ ರೀತಿ ಮೇಲ್ಕಂಡ ಅಧ್ಯಯನದಲ್ಲಿ ದೊರಕಿರುವ ಸಮೃದ್ಧವಾದ ಮಾಹಿತಿಗಳನ್ನು ಆಧರಿಸಿ ನಗರದ ಬೇಲಿಮಠ, ಗಂಜಾಂಮಠ ಹಾಗೂ ಸರ್ಪಭೂಷಣಮಠಗಳನ್ನು ಕುರಿತು ಇನ್ನೂ ಹೆಚ್ಚಿನ ಸಂಶೋಧನೆಗಳನ್ನೇ ನಡೆಸಬಹುದಾದಷ್ಟು ಆಕರ ಸಾಮಗ್ರಿಗಳು ಇಂದು ನಮ್ಮ ಮುಂದಿವೆ. ಇದರ ಜೊತೆಗೆ ಬೆಂಗಳೂರಿನ ಸರ್ಪಭೂಷಣ ಶಿವಯೋಗಿಗಳ ಹಾಗೂ ಮಹಾಂತದೇಶಿಕರ ಸಾಹಿತ್ಯ ಕೃತಿಗಳು ಸಾಹಿತ್ಯಾಭ್ಯಾಸಿಗಳಿಗೆ ಉತ್ತಮ ವಸ್ತುಗಳಾಗಲಿವೆ. ಹಾಗೆಯೇ ವೀರಶೈವಮಠಗಳ ಧಾರ್ಮಿಕ ಆಚರಣೆಗಳು ಹಾಗೂ ವಿಧಿ-ವಿಧಾನಗಳನ್ನು ಕುರಿತು ಒಂದು ಔಚಿತ್ಯಪೂರ್ಣವಾದ ಅಧ್ಯಯನವನ್ನು ನಡೆಸಬಹುದಾಗಿದೆ. ಈ ರೀತಿ ಪ್ರಸ್ತುತ ಅಧ್ಯಯನವು ಮೇಲ್ಕಂಡ ರೀತಿಯ ವಿಭಿನ್ನ ಬಗೆಯ ಸಂಶೋಧನೆಗಳಿಗೆ ದಿಕ್ಸೂಚಿಯಾಗಬಲ್ಲದು ಎಂಬ ಆಶಾಭಾವನೆ ಇಲ್ಲಿದೆ.

ಒಟ್ಟಾರೆ ಬೆಂಗಳೂರು ನಗರದ ವೀರಶೈವ ಮಠಗಳನ್ನು ಕುರಿತಾದ ಇಲ್ಲಿನ ಸಾಂಸ್ಕೃತಿಕ ಅಧ್ಯಯನಕ್ಕೆ ಪೂರ್ಣ ಪ್ರಮಾಣದ ಸಹಕಾರವನ್ನಿತ್ತ ಅನೇಕ ಮಂದಿ ಗುರು-ಹಿರಿಯರು, ಮಠಾಧೀಶರು, ಭಕ್ತರು, ಅಭಿಮಾನಿಗಳು ಹೀಗೆ ಅಸಂಖ್ಯಾತ ಜನರ ಹಾರೈಕೆಯ ಫಲ ಇಲ್ಲಿದೆ. ನನ್ನೀ ಐದು ವರ್ಷಗಳ ಪರಿಶ್ರಮದ ಫಲ ಸಾಮಾಜಿಕವಾಗಿ ಕೊಂಚ ಮಟ್ಟಿಗಾದರೂ ಗಮನ ಸೆಳೆದರೆ ಅದೇ ಇಲ್ಲಿನ ಸಾರ್ಥಕತೆ ಎಂಬುದು ನನ್ನ ಭಾವನೆ.

# ಅನುಬಂಧ

೧. ದಾಖಲೆ ಪತ್ರಗಳು

೨. ರಾಜ್ಯ ಪತ್ರಾಗಾರ ಇಲಾಖೆಯ ಕಡತಗಳ ಸೂಚಿ

೩. ಆಕರ ಗ್ರಂಥ ಸೂಚಿ

೪. ವಿಶಿಷ್ಟ ಪದಕೋಶ

೫. ಶಬ್ದ ಸೂಚಿ

# ಅನುಬಂಧ

## ೧. ದಾಖಲೆ ಪತ್ರಗಳು

**ಸೂಚಿ-**

೧. ಬೆಂಗಳೂರಿನ ಪೇಟೆ ಶೆಟ್ಟಿ ಯಜಮಾನರುಗಳಿಗೆ ಮಹಾಂತರಮಠದ ಶಿವರುದ್ರಮರಿದೇವರ ತಂದೆ ಶಾಂತವೀರಯ್ಯನು ಬರೆಸಿಕೊಟ್ಟ ಕರಾರು-೧೮೮೪.

೨. ಮೈಸೂರು ಸಂಸ್ಥಾನದ ಮುಜರಾಯಿ ಇಲಾಖೆಗೆ ವಿಭೂತಿಪುರ ಮಠದ ಸಿದ್ಧವೃಷಭರಾಜೇಂದ್ರಸ್ವಾಮಿಗಳು ಬರೆದುಕೊಂಡ ಅರ್ಜಿ - ೧೯೦೯.

೩. ಗಂಜಾಂಮಠದ ನಂಜುಂಡಸ್ವಾಮಿಗಳು ಸೆನ್ಸಸ್ ವಿಚಾರವಾಗಿ ನಾಡಿನಾದ್ಯಂತ ಜಾಗೃತಿ ಉಂಟುಮಾಡಿದ ಪತ್ರ-೧೮೯೦.

೪. ಗಂಜಾಂಮಠದ ನಂಜುಂಡಸ್ವಾಮಿಗಳು ಸೆನ್ಸಸ್ ವಿಚಾರವಾಗಿ ಮಹಾರಾಜ ಶ್ರೀಚಾಮರಾಜೇಂದ್ರ ಒಡೆಯರ್ ಅವರನ್ನು ಭೇಟಿಯಾಗಿದ್ದ ಪತ್ರ - ೧೮೯೧.

೫. ಮುರಿಗಾ ಸಂಸ್ಥಾನದ ಬ್ಯಾಡಗಿ ಮುಪ್ಪಿನಪ್ಪನವರು ಗಂಜಾಂಮಠದ ನಂಜುಂಡಸ್ವಾಮಿಗಳಿಗೆ ಬರೆದಿರುವ ಪತ್ರ - ೧೮೯೪.

೬. ಗುರುವಣ್ಣದೇವರ ಮಠಕ್ಕೆ ಸಂಸ್ಥಾನದವರಿಂದ ಬರೆಸಿದ್ದ ಪತ್ರ - ೧೮೮೨.

೭. ಗುರುವಣ್ಣದೇವರ ಮಠದ ಇನಾಂ ಜಮೀನಿನ ನಕ್ಷೆ - ೧೯೧೩.

೮. ಹನುಮಂತಪುರ ಗ್ರಾಮದ ನಕ್ಷೆ-೧೯೦೪.

೯. Inam Certificate of Goduraiah Mutt-1876.

೧೦. ಬೇಲಿಮಠದ ಸಂಗನಬಸವಸ್ವಾಮಿಗಳು ಅರಳೆಪೇಟೆಯ ಶೆಟ್ರು ಯಜಮಾನರುಗಳಿಗೆ ಬರೆಸಿರುವ ಪತ್ರ.

೧೧. ಬೇಲಿಮಠದ ಭೂದಾನ ಸನ್ನದು-೧೮೨೨.

೧೨. ಬೇಲಿಮಠದ ಕೆಂಪುನಂಜೆಸ್ವಾಮಿಗಳಿಗೆ ಮುಮ್ಮಡಿಕೃಷ್ಣರಾಜಒಡೆಯರು ನೀಡಿರುವ ನಿರೂಪ - ೧೮೨೫.

೧೩. ಅರಳೆಪೇಟೆಯ ದೇಶದ ಕಳಸಪ್ಪ ಶೆಟ್ಟಿಯು ಸರಕಾರಕ್ಕೆ ಬರೆದುಕೊಂಡ ಅರ್ಜಿ - ೧೮೮೦.

೧೪. ಅರಳೆಪೇಟೆಯ ದೊಡ್ಡಮಠದ ಭೂದಾನ ಸನ್ನದು-೧೮೨೨.

೧೫. ದೊಡ್ಡಮಠದ ಚನ್ನವೀರದೇವರು ತಮ್ಮ ಉತ್ತರಾಧಿಕಾರಿ ಬಸವಲಿಂಗ ಮರಿದೇವರಿಗೆ ಬರೆಸಿದ ವಿಲ್-೧೮೭೭.

೧೬. ಶಿವನಹಳ್ಳಿ ಜಂಗಮಮಠದ ಭೂದಾನ ಸನ್ನದು-೧೮೨೨.

೧೭. ದೊಡ್ಡಪೇಟೆಯ ಕರಿಸಿದ್ಧೇಶ್ವರ ಮಠದ ಭೂದಾನ ಸನ್ನದು-೧೮೮೦.

೧೮. ಅರಳೆಪೇಟೆಯ ಕರಿಸಿದ್ಧೇಶ್ವರ ಮಠದ ತೋಟದಸ್ವಾಮಿಯವರಿಗೆ ದೇವಣಾಪುರ ಮಹಾಮಹಂತಿನ ಮಠದ ಪರುವತಸ್ವಾಮಿಗಳು ಒಪ್ಪಿಸಿರುವ ಭೂದಾನ ಸಮರ್ಪಣಾ ಪತ್ರ-೧೮೨೩.

೧೯. ಅರಳೆಪೇಟೆಯ ತೋಟದ ದೇವರಮಠದ ತೋಟದಸ್ವಾಮಿಯವರಿಗೆ ಸ್ಥಳ-ಪರಸ್ಥಳದ ಶೆಟ್ರು ಯಜಮಾನರುಗಳು ಬರೆಸಿಕೊಟ್ಟ ದಾನಶಾಸನ ಪತ್ರ-೧೮೨೭.

೨೦. ಸರ್ಪಭೂಷಣ ಮಠದ ಫಾಲಲೋಚನಸ್ವಾಮಿಗಳಿಗೆ ಹತ್ತೂ ಕುಲಬಾಂಧವರು ಒಪ್ಪಿಸಿದ್ದ ಸಮಾಖ್ಯ ಪತ್ರ - ೧೮೪೨.

೨೧. ಸರ್ಪಭೂಷಣಮಠದ ಫಾಲಲೋಚನಸ್ವಾಮಿಗಳಿಗೆ ಕ್ಲೋಸ್ ಪೇಟೆಯ ಶೆಟ್ಟಿಯಜಮಾನರುಗಳು ಒಪ್ಪಿಸಿದ್ದ ದಾನಶಾಸನಪತ್ರ-೧೮೪೪.

೨೨. ಮನೆವಾರ್ತೆಪೇಟೆಯ ಶಂಕರದೇವರಮಠಕ್ಕೆ ಅರಳೆಪೇಟೆಯ ಶಂಕರಪ್ಪನವರ ಮನೆತನದವರು ನೀಡಿರುವ ದಾನ-ಧರ್ಮಗಳ ವಿವರಣಾ ಪತ್ರ - ೧೯೨೭.

೨೩. ಸುಂಕೇನಹಳ್ಳಿಯ ಮೇಲಿನಮಠಕ್ಕೆ ಸಂಬಂಧಪಟ್ಟ ಪ್ರಥಮ ದಾಖಲೆ ಪತ್ರ - ೧೮೦೪.

೨೪. ಸುಂಕೇನಹಳ್ಳಿಯ ಮೇಲಿನ ಮಠಕ್ಕೆ ಸಂಬಂಧಪಟ್ಟ ಗೊತ್ತುವಳಿ ಪತ್ರ-೧೮೭೪.

೨೫. Inam Certificate of Sunkenahalli Jangama Matt-1875.

೨೬. ಸುಂಕೇನಹಳ್ಳಿಯ ಮೇಲಿನಮಠ ಮತ್ತು ಕೆಳಗಿನಮಠಗಳಿಗೆ ಸಂಬಂಧಪಟ್ಟಂತೆ ಲಾಯರ್ ನಂಜುಂಡಯ್ಯನವರು ಮುರಿಗಾ ಸಂಸ್ಥಾನದ ಜಗದ್ಗುರುಗಳಿಗೆ ಬಿನ್ನವಿಸಿಕೊಂಡ ಪತ್ರ - ೧೯೨೪.

## ಪತ್ರ - ೨ : ಮೈಸೂರು ಸಂಸ್ಥಾನದ ಮುಜರಾಯಿ ಇಲಾಖೆಗೆ ವಿಭೂತಿಪುರದ ಮಠದ ಸಿದ್ಧವೃಷಭರಾಜೇಂದ್ರ ಸ್ವಾಮಿಗಳು ಬರೆದುಕೊಂಡ ಅರ್ಜಿ-೧೯೦೯

ಮೈಸೂರು ಶ್ರೀಮನ್ ಮಹಾರಾಜರವರ ಗೌರ್ನಮೆಂಟ್ ಮುಜರಾಯಿ ಹುಜೂರು ಜನಾಬಿಗೆ- ವೀರಶೈವ ಲಿಂಗಾಯತ ಮತಕ್ಕೆ ಗುರುಗಳಾದ ಬೆಂಗಳೂರು ತಾಲ್ಲೂಕು ಕೃಷ್ಣರಾಜಪುರದ ಸಮ್ಮತು ವಿಭೂತಿಪುರದ ಮಠಾಧ್ಯಕ್ಷ ಸಿದ್ಧವೃಷಭರಾಜೇಂದ್ರ ಸ್ವಾಮಿಯು ಜಾಹಿರು ಮಾಡಿಕೊಳ್ಳುವ ಅರ್ಜಿ ಏನೆಂದರೆ-

ಈ ನಮ್ಮ ಮಠ ಮತ್ತು ದೇವಾಲಯಗಳಿಗೆ ಏನು ಮಾರ್ಗವಿಲ್ಲದೆ ಬಹಳ ಅನಾನುಕೂಲವಾಗಿ ಇರುವುದರಿಂದ ಇದರ ಪಡಿತರ ದೀಪಾರಾಧನೆಗೆ ಉಪಯುಕ್ತವಾಗಿ ತಮ್ಮ ಗೌರ್ನಮೆಂಟಿನಿಂದ ಯಾವುದಾದರು ಒಂದು ವಿಧವಾದ ಧರ್ಮ ಸಹಾಯ ಮಾಡಿಸಿಕೊಡಬೇಕೆಂದು ಅರ್ಜಿ ಕೊಟ್ಟು ಅರಿಕೆ ಪಡಿಸಿಕೊಂಡೆವು-

ನೀವು ಹುಜೂರಿಗೆ ಜಾಹಿರ್ಮಾಡಿಕೊಂಡ ಮಾರ್ಚಿ ಮಾಹೆ ೨೫ನೆ ಮರಕ್ಕುಂ ೩೮೮೭ನೆ ನಂಬರು ಅರ್ಜಿಯನ್ನ ರಿಪೋರ್ಟು ಬಗ್ಗೆ ಬೆಂಗಳೂರು ಡಿ-ಡೆ-ಕಮೀಷನರ್ ಬಳಿಗೆ ಕಳುಹಿಸಿದೆ-ಅವರಿಂದ ಜವಾಬು ಬಂದ ನಂತರ ವ್ಯವಸ್ಥೆ ಮಾಡಲಾಗುವುದೆಂದು ೨೮-೪-೯೦೮ನೆ ಮರಕ್ಕುಂ ೪೮೧೯ನೆ ನಂಬರು ಯಂಡಾರ್ಸ್ ಅಪ್ಪಣೆಯಾಗಿದೆ - ಈ ವಿಷಯದಲ್ಲಿ ಏನು ವ್ಯವಸ್ಥೆ ಆಗಿದೆಯೊ ದಾಖಲೆ ಪರಾಂಬರಿಸಿ ಆ ಬಗ್ಗೆ ಯಂಡಾರ್ಸ್ ಹುಕ್ಕುಂ ಅಪ್ಪಣೆ ಮಾಡಿಸಬೇಕೆಂದು ಧರ್ಮಪ್ರಭುಗಳಿಗೆ ಪ್ರಾರ್ಥಿಸುವೆ- ತಾ। ೬.೮.೯೦೯ಲ್ಲೂ

ಮಠದ ಮುದ್ರೆ

ರುಜುವು ಪಟ್ಟದ ಶಿದ್ದ ವೃಷಭರಾಜ ಸ್ವಾಮಿಗಳು.

## ಪತ್ರ - ೩ : ಗಂಜಾಂಮಠದ ನಂಜುಂಡಸ್ವಾಮಿಗಳು ಸೆನ್ಸಸ್ ವಿಚಾರವಾಗಿ ಜಾಗೃತಿ ಉಂಟುಮಾಡಿದ ಪತ್ರ-೧೮೯೦

ಶ್ರೀ ಗುರು ಮುರಿಗೇಂದ್ರ ಪ್ರಸಾದ.

ಗಂಜಾಂ ಮಠದ ನಂಜುಂಡಸ್ವಾಮಿಗಳು ಸೆನ್ಸಸ ವಿಚಾರವಾಗಿ ಜಾಗೃತಿ ಉಂಟುಮಾಡಿದ ಪತ್ರ-೧೮೯೦.



ಕಲ್ಯಾಣನಗರಾವಾಸಿ ನಂಜುಂಡಸ್ವಾಮೀಶ್ಶೃತಾ!
ಭೂಯಾದಾನ್ವೀರಿಯಂವೀರಶೈವಶ್ರೆಯೋವಿವರ್ಧಿನೀ॥
ಶ್ರೀಮದುದ್ರಾಪುರಾಧೀಶ ದ್ರಾಕ್ಷಾ ರಾಮ
ಕ್ಷೇತ್ರ ರಾಮನಾಥ ಲಿಂಗೋದ್ಭವ ಶ್ರೀಮಚ್ಛಿನ್ನಮಲಾದ್ರಿ
ಬೃಹನ್ಮಠಾಂತರಾಳಪರಿಶೋಭಿತ ಸತ್ಪ್ರಭುಮಂಡಿತೋರ್ವ ಹೃದಯಾ
ತ್ತಕದ್ವಾರಾವತೀ ಸಿಂಹಾಸನಾಧೀಶ್ವರ ಪರಂಪರಾಗತ ಶ್ರೀಮಚ್ಛಿವಾನುಭವಶಾ
ಸ್ತ್ರಪಾರಾವಾರರಾಕಾಸುಧಾಕರರಾದ ಬೆಂಗಳೂರು ಪೋಮೂಲ್ ಪ್ಯಾಟೆ ಪ್ರಮುಥಗಣ
( ಮನೋರಂಜನೀ ಸಂಸ್ಕೃತ ಪಾಠಶಾಲಾಂತರ್ಗತ ಗಂಜಾಂ ಮಠದ ನಂಜುಂಡಸ್ವಾಮಿಗಳವರು.)

ಶ್ರೀಮದುಮಾರಮಣ ಸುಂದರತರಾಂಘ್ರಿಪಾಥೋಜಯುಗಳ ಭೂಯಸ್ಸಮಾರಾಧನಸಫಲೀಕೃತಾನೇಕಜನುಸ್ಸಮಾಸಾದಿತ ಸಕಲಸಾರಸ್ವತಸಂಪತ್ಫಲಾಯಿತ ನಿರತಿಶಯನಿರವದ್ಯಚಿದ್ವಿದ್ಯೋಪಾಸ್ತಿಧೌರಂಧರ್ಯನಿರ್ವಾಹಕನ್ನಿಜಾಂತರಂಗಾಣಾಂ ಶ್ರೀಮದೈಶ್ವರ್ಯಮಂಡಿತಗುಣನಿಧಿ ಕೃತಪರೋಪಕಾರಿಣಾಂ. ಸಂಗ್ರಾಮನಗರದಲ್ಲಿರುವ ಸಮಸ್ತ ಮಾಹೇಶ್ವರರಿಗೆ ತ್ರಿಕಾಲಲಿಂಗಾರ್ಚನಾವಸರೆ ಭವಂತಸ್ಸಕಲಮನೋರಥಾನ್ ಪ್ರಾಪ್ನುವಂತೋ ಭವಂತ್ವಿತಿ ಕೃತಾನೇಕಾಶಿಷಸ್ಸಮುಲ್ಲಸಂತುತರಾಂ॥ ವಿಕೃತಿ ಸಂ|| ಕಾರ್ತಿಕ ಶು|| ದ್ವಿ|| ಗುರುವಾರ- ಪರ್ಯಂತಂ ಲಿಂಗಾನಂದಾರ್ಪಿತಾಂತಃಕರಣಾಃ ಕುಶಲಿನಸ್ಸ್ಮಃ॥ ಯುಷ್ಮದ್ವಿಜೃಂಭಮಾಣಾಭಿವೃದ್ಧಿಮನುಸಮಯಂ ಪತ್ರದ್ವಾರೇಣ ಪ್ರದರ್ಶ್ಯ ಮದೀಯಾಂತ್ಸರ್ವ ವಿಷಯಾನಪಿ ಪರಿಪಾಲಯಿತುಂ ಅರ್ಹಾಭವಂತಮ್ ॥ ಶಕಃ॥ ಹಿಂದಣ ಸೆನ್ಸಸ್ಸಿನಲ್ಲಿ ನಮ್ಮ ವೀರಶೈವ ಮತವನ್ನು ಅಥವಾ ನಮ್ಮ ಹಾದರ ಸಮಯದಲ್ಲಿ ಸೇರಿಸಿರುವ ವಿಷಯದಲ್ಲಿ ನಮಗುಂಟಾಗಿರುವ (ವಿಷಯದಲ್ಲಿ) ಕೊರತೆಗಳನ್ನು ಮೈಸೂರು ಸರ್ಕಾರಕ್ಕೆ ತಿಳಿಸಿ ಅಂಥಾ ಕೊರತೆಯನ್ನು ತಪ್ಪಿಸುವದಕ್ಕಾಗಿ ಪ್ರಯತ್ನಿಸಬೇಕೆಂದು ಅನೇಕ ಶಿವಭಕ್ತ ಜನರು ನಮ್ಮ ಮನೆ ಬಿನ್ನವನ್ನು ಬರೆದುಕೊಂಡಪ್ರಕಾರ ನಾವುಗಳು ಈ ವಿಷಯವಾಗಿ ಶ್ರೀಮನ್ಮಹಾರಾಜಾ ಸರ್ಕಾರಕ್ಕೆ ಕೊಡತಕ್ಕ ಅರ್ಜಿಗಳನ್ನು ತಯಾರು ಮಾಡಿಸಿ ಅವರುಗಳಿಗೆ ಕಳುಹಿಸಿರುವದಲ್ಲದೆ ಮತಾಭಿಮಾನಿಗಳಾದ ನಿಮಗಳಿಗೂ ಕಳುಹಿಸಿರುತ್ತೇವೆ. ನೀವುಗಳು ಈ ಅರ್ಜಿಗೆ ನಿಮ್ಮ ನಿಮ್ಮ ರುಜು ಮಾಡಿ ಜಾಗ್ರತೆಯಾಗಿ ಶ್ರೀಮನ್ಮಹಾರಾಜರವರ ಸನ್ನಿಧಿಗೆ ರಿಜಿಸ್ಟರ್ ಮೂಲಕ ರವಾನಿಸುವದಲ್ಲದೆ ಇದರ ರಶೀತಿಯೊಡನೆ ನಮಗೆ ಬಿನ್ನವನ್ನು ಶೀಘ್ರದಲ್ಲಿ ಕಳುಹಿಸಿಕೊಡುವಿರೆಂದು ನಂಬಿರುತ್ತೇವೆ-

The Sathsampradaya Kalanidhi Press, Bangalore, 2-10-99.

## ಪತ್ರ – ೪ : ಗಂಜಾಂಮಠದ ನಂಜುಂಡಸ್ವಾಮಿಗಳು ೧೮೯೧ರಲ್ಲಿ ಸೆನ್ಸಸ್ ವಿಚಾರವಾಗಿ ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರ್ ಅವರನ್ನು ಭೇಟಿಯಾಗಿದ್ದುದು.




ಪತ್ರ – ೪:

ಗಂಜಾಂಮಠದ ನಂಜುಂಡಸ್ವಾಮಿಗಳು 1891ರಲ್ಲಿ ಸೆನ್ಸಸ್ ವಿಚಾರವಾಗಿ ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರ್ ಅವರನ್ನು ಭೇಟಿಯಾಗಿದ್ದುದು.

– ೧೮೯೧.

ಶ್ರೀ.

ಶ್ರೀ ಮುರಿಗಾದೇಶಿಕೇಂದ್ರ ಪ್ರಸೀದ.

॥ಭದ್ರಂಭೂಯಾತ್॥

ಶ್ರೀಮಚ್ಚನ್ಮತ್ರಶೀಕಂಪಿಬುಧಜನಮನೋಽಭೀಷ್ಟಕಲ್ಪಾವನೀಜಂ ॥
ಹೇಮಾದ್ರಿಸ್ಥೈರ್ಯಧೈರ್ಯಾಕಲಿತಮುರುಭುಜಾವಿಕ್ರಮಾಕ್ರಾಂತಸೂರ್ಯಂ ॥
ಸೋಮನ್ಯಕ್ಕಾರಿಕೀರ್ತ್ಯಾವೃತದಶದಿಶಮುದ್ದಾಮವಿದ್ಯಾಸಪದ್ಯಂ ॥
ಸೀಮಾತೀತಾನುಕಂಪಂ ಪುರಗೆಧರಣಿಯಂ ನಿತ್ಯಮತ್ಯಂತಸಾಧ್ಯಂ ॥

ಸದ್ವಿಜಯಮೇತರಾಂ ॥

# ಪ್ರಸಿದ್ಧಪತ್ರಿಕಾ.

ವೀರಶೈವ ಬ್ರಾಹ್ಮಣರಾದ ಸಮಸ್ತ ಭಕ್ತ ಮಾಹೇಶ್ವರರಿಗೆ ಇದರಡಿ ಸಹಿಮಾಡಿರುವ ನಾವುಗಳು ವಿನಯಪೂರ್ವಕವಾಗಿ ಕೃತಪಡಿಸುವದೇನಂದರೆ– ೧೮೮೧ನೇ ಇಸವಿ ಸೆನ್ಸಸ್ಸು ಗ್ರೋಷ್ವಾರಿಯಲ್ಲಿ, ನಮ್ಮ ವೀರಶೈವ ಮತವನ್ನು ಶೂದ್ರ ತರಗತಿಯಲ್ಲಿ ಸೇರಿಸಿದ್ದಕ್ಕೆ ನಾವೆಲ್ಲರೂ ಈ ಅಪಮಾನದಿಂದುಂಟಾದ ದುಃಖವನ್ನು ತಪ್ಪಿಸಿಕೊಳ್ಳಬೇಕೆಂದು ಶ್ರೀಮತ್ ಮಹಾರಾಜಾ ಸರ್ಕಾರಕ್ಕೆ ಆ ಹವಾಲ್ ಅರ್ಜಿಗಳನ್ನು ಕೃತಪಡಿಸಿಕೊಳ್ಳುವದರ ಮೂಲಕ ಅನೇಕವಾಗಿ ಮೊರೆಯಿಟ್ಟರೂ ನಮ್ಮ ಅರ್ಜಿಗಳಿಗೆ ಇಂಡಾರ್ಸ್ ಹುಕುಂ ಅಪ್ಪಣೆ ಯಾಗದ್ದಕ್ಕೋಸ್ಕರ ನಾವುಗಳೇ ಮೊದಲಾದ ಅನೇಕ ವೀರಶೈವ ಬ್ರಾಹ್ಮಣರು ಶ್ರೀಮತ್ ಮಹಾರಾಜರವರ ಸನ್ನಿಧಿಯ ರೂಬು ರೂಬು ನಮ್ಮಗಳ ಆ ಹವಾಲನ್ನು ಕೃತಪಡಿಸಿಕೊಳ್ಳಬೇಕೆಂಬುವಷ್ಟರಲ್ಲಿಯೇ ದರಿದ್ರರಿಗೆ ನಿಕ್ಷೇಪ ದೊರದಂತೆಯೂ ತೃಷೆಯಿಂದ ಪೀಡಿತರಾದ ಹೊಲಪಲಬಳಿಗೆ ದೇವಗಂಗಾ ಪ್ರವಾಹವು ಬಂದಂತೆಯೂ, ಶ್ರೀಮತ್ ಮಹಾರಾಜರವರುಗಳ ಸವಾರಿಯು ಬೊಂಬಾಯಿಗೆ ದಯಮಾಡಿಸುವ ವೃದ್ಧಿಶ್ಯ ಸಕ್ ೧೮೯೧ನೇ ಇಸವಿ ಜನವರಿ ತಾರೀಖು ೧೭ನೇ ಭಾರ್ಗವವಾರದಿವಸ ಹರಿಹರದಲ್ಲಿ ಮೊಕ್ಕಾಂಮಾಡಿರುವ ಸಮಯದಲ್ಲಿ ಸುಮಾರು ಮೂರು ನಾಲ್ಕು ಸಾವಿರ ಸಂಖ್ಯೆಯುಳ್ಳ ವೀರಶೈವ ಬ್ರಾಹ್ಮಣ ಪ್ರಜೆಗಳೆಲ್ಲರೂ ಸೇರಿ ದುರ್ಗದ ಮುರಿಗಾ ಸಂಸ್ಥಾನದ ಚರ ಮೂರ್ತಿಗಳಾದ ಬೆಂಗಳೂರು ಮಾಮೂಲ್ ಪೇಟೆ ಗಂಜಾಂ ಮಠದ ಶ್ರೀ ನಂಜುಂಡ ಸ್ವಾಮಿಗಳವರನ್ನು ಸದರಿ ಮೊಕ್ಕಾಮಿಗೆ ದಯಮಾಡಿಸಿಕೊಂಡು ಹೋಗಿರಲು ಶ್ರೀಮತ್ ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಯಸ್. ಐ. ಯವರುಗಳ ರೂಬುರೂಬು ಶ್ರೀ ಸ್ವಾಮಿಗಳವರು ತಮ್ಮ ಶಿಷ್ಯಪರಿವಾರದೊಡನೆ ವೇದಮಂತ್ರಗಳಿಂದ ಫಲಾಶೀರ್ವಾದವಂ ಮಾಡಿದನಂತರ ಸೆನ್ಸಸ್ ಲೆಖ್ಖ ಬರಿಯಲಿಕ್ಕೆ ಬಂದ ಅಧಿಕಾರೀ ಜನರು ವೀರಶೈವಮತಸ್ಥರು ಹೇಳುವಂತೆ ಸದರೀ ಅಧಿಕಾರಿಗಳು ಜಾತಿಸ್ಥಾನದಲ್ಲಿ ಬ್ರಾಹ್ಮಣರೆಂದು ಬರದುಕೊಳ್ಳದೆ ಸಂಪೂರ್ಣ ತೊಂದರೆ ಕೊಡುತ್ತಾರೆಂದು ಅಪ್ಪಣೆ ಕೊಡಿಸದ್ದಕ್ಕಾಗಿ, ಶ್ರೀಮತ್ ದಿವಾನ್ ಬಹದ್ದೂರವರು ಅನೇಕ ಶಾಸ್ತ್ರಾಧಾರ ಮೊದಲಾದ ಸಂಗತಿಗಳನ್ನು ಕೇಳುವಲ್ಲಿ ಸದರೀ ಸ್ವಾಮಿಗಳವರು ವೇದದಲ್ಲಿಯೂ, ಭಾಷ್ಯದಲ್ಲಿಯೂ, ಅನೇಕ ಪುರಾಣಗಳನ್ನು ಅಪ್ಪಣೆ ಕೊಡಿಸಿದ ಭಾಗವು ಸದರೀಯವರ ಧೀನವಾಗಚಿತ್ತದಲ್ಲಿ ಚನ್ನಾಗಿ ನೆಲೆಗೊಂಡು ಶ್ರೀಮತ್ ಮಹಾರಾಜರವರ ಸನ್ನಿಧಿಯ ರೂಬುರೂಬು ತಮ್ಮ ಮತಸ್ಥರು ವೀರಶೈವ ಬ್ರಾಹ್ಮಣರೆಂದು ಬರಸಬೇಕೆಂತಲೂ ಜಾತಿ ಒಳಭೇದದಲ್ಲಿ ಅವರವರ ಬೆಡಗುಗಳನ್ನು ಸ್ಪಷ್ಟವಾಗಿ ಬರಸಬೇಕೆಂತಲೂ ಅಪ್ಪಣೆ ಕೊಡಿಸಿದರು ಆ ಕೂಡಲೆ ಚಿತ್ರದುರ್ಗದ ಡಿಪ್ಟೀ ಕಮಿಷನರವರಿಗೆ ಸದರೀ ಮೇರೆ ಅಂದರೆ ಈ ಮತಸ್ಥರು ವೀರಶೈವ ಬ್ರಾಹ್ಮಣರೆಂದು ಹೇಳುವಂತೆಯೆ ಚರ್ಚಿಸದೆ ಬರಸಬೇಕೆಂದು ಅಪ್ಪಣೆ ಕೊಟ್ಟರು ಕೃತಪಿರಬೇಕು.

**ಪತ್ರ - ೫ : ಮುರಿಗಾ ಸಂಸ್ಥಾನದಿಂದ ಗಂಜಾಂಮಠದ ನಂಜುಂಡಸ್ವಾಮಿಗಳಿಗೆ ಬಂದಿರುವ ಪತ್ರ-೧೮೯೪**




ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಮುರಿಗ್ಯಾ ರಾಜೇಂದ್ರ ಸ್ವಾಮಿನಾಂ । ಅ। ಪ್ರ। ಶ್ರೀ....

ಶ್ರೀ ಮಚ್ಛಿನ್ಮೂಲಾದ್ರಿ ಬೃಹನ್ಮಠ ಮಹಾ ॥ ಸಂಸ್ಥಾನದ ಖಾಸಾ ಚರಮೂರ್ತಿಗಳು ಮತ್ತು ಸರ್ವಾಧಿಕಾರಿಗಳು ಚನ್ನವೀರದೇಶಿಕೇಂದ್ರರು---

ಮಹಾ ॥ ॥ ಸನ್ನಿಧಿ ಆಜ್ಞಾಧಾರಕರಾದ ಬೆಂಗಳೂರು ಮಾಮೂಲ್‌ಪೇಟೆ ವಿರಕ್ತ ಗಂಜಾಂ ಮಠದ ಚ॥ ನಂಜುಂಡ ದೇಶಿಕೇಂದ್ರರಿಗೆ ಶ್ರೀ ತಾನೇಕ ಬಿನ್ನಹ ॥ ॥

ಅದಾಗಿ ಶ್ರೀಮನ್ನೃಪ ಶಾಲಿವಾಹನ ಶಕೆ ೧೮೧೬ನೆಯ ಪ್ರವರ್ಧಮಾನಕ್ಕೆ ಸಲ್ಲುವ ಜಯ ಸಂವತ್ಸರದ ಜೇಷ್ಟಬ । ೫ ರಲ್ಲೂ ಸ್ಥಿರವಾರ (ಶನಿವಾರ)ದವರೆಗೆ ಬೃಹನ್ಮಠದಲ್ಲಿ॥ ॥ ನಂದದೊಡನೆ॥ ॥ ಆನಂದಭರಿತರಾಗಿಯಿರುತ್ತೇವೆ - ಯುಷ್ಮತ್ತ ॥ ॥ ನಂದ ವೈಭವಕ್ಕೆ ವ್ಯಾಳೆ ವ್ಯಾಳೆ ಯಾಂ ಪತ್ರಿಕಾನನವಾಗಿ ಸೂಚ್ಯ ಪರಾಂಬರಿಷ ತೆಗೆದುಕೊಳ್ಳುವಲ್ಲಿ ಕೇವಲ ಗುರುಪುತ್ರರೇ ಇದ್ದೀರಿ-ತದುಪರಿ ಈಗ ಈ ಗುರು ಮಹಾ ॥ ॥ ಸಂಸ್ಥಾನದ ಮರಿಯಾಗಿರುವ ಮುರಿಗಿ ಮರಿಯನ್ನು ಅಪ್ಪಣೆಮಾಡಿ ನಿಮ್ಮ ಬಳಿಗೆ ಕಳುಹಿಸಿದೆ-ಈತನಿಗೆ ಇಷ್ಟರೊಳಗೆ ಕೆಲವು ಗ್ರಂಥಗಳು ಸಾಗಿದ್ದಾವೆ-ನಿಮ್ಮಲ್ಲಿ ಮುಂದೆ ನಡಿಯತಕ್ಕ ಗ್ರಂಥ ಅನುಕೂಲ ಮಾಡಿಸಿ ಅಭ್ಯಾಸ ಮಾಡಿಸಬೇಕು-ಶಿವಾಯಿ ಈ ಮರಿಗೆ-ಊಟದ ವಿಷಯ ವಗೈರೆ ಚೆನ್ನಾಗಿ ಪರಾಂಬರಿಷದಿಂದೆ ಕಾಪಾಡುತ್ತ ಈ ಬಗ್ಗೆ ಪದೇ ಪದೇ ಪತ್ರದ್ವಾರ ಸೂಚಿಸುತ್ತಾ ಇರಬೇಕು-ಯೆತದ್ವಿಷಯದಲ್ಲಿ ವಿಶೇಷ ಲಿಖಿಸಲು ಅಭಿಪ್ರಾಯವಿಲ್ಲಾ ಈ ಮೇಲ್ಕಮೂದಿರುವ ಅಭಿಪ್ರಾಯದಂತೆ ನೆರವೇರಿಸತಕ್ಕಂಥ ಕೇವಲ ಗುರು ವಾಂಛಲ್ಯ ಗುರುಪುತ್ರರಿಗೆ ಬಾಹುಳ್ಯವಾಗಿ ಲಿಖಿಸುವದೇನು ಇರುತ್ತೆ - ತಾ॥ ೨೩ನೇ ಮಾಹೆ ಜೂನ್ ೧೮೯೪ನೆ ಇಸವಿ ಮೊಕ್ಕಾಂ ಬೃಹನ್ಮಠ-----

ಇತ್ಯಾನೇಕ ಬಿನ್ನಹಾ ---------

## ಪತ್ರ - ೬ : ಗುರುವಣ್ಣದೇವರ ಮಠಕ್ಕೆ ಸಂಸ್ಥಾನದವರಿಂದ ಬರೆಸಿದ್ದ ಪತ್ರ - ೧೮೧೨




ರಾಜಶ್ರೀ ಕಸಬೆ ರಾಮ್ಮೆಯ್ಯನವರಿಗೂ
ಶೇಷಗಿರಿರಾವ ಕಚೇರಿ ಬೆಂಗಳೂರು
ನಮಸ್ಕಾರ। ಅದಾಗಿ। ಬೆಂಗಳೂರು
ಕಸಬೆಯಲ್ಲಿ ಗುರುವಣ್ಣನ ಮಠಕ್ಕೆ
ಗು ೫ (೦ ಐದು ವರಹಾದ ಹೊಲ ಸಾ
ಬಕ ಆರಭ್ಯ ನಡದು ಬರುತ್ತಾ ಯಿದ್ದು
ದಕ್ಕೆ ಮಧ್ವರಾಯರ ದಿವಸದಲ್ಲಿ ಪೈ
ಮಾಯಿಷಿ ಮಾಡಿ ಜಾಸ್ತಿ ಗು ೨(೧ ಹಾಕಿ
ಇದ್ದಾರಂತೆ ಜಾಸ್ತಿ ಹಾಕಿರುವ ಹಣ
ಕೊಡಲಾರೆವುಯೆಂದು ಹೇಳಿಕೊಂಡ
ದ್ದರಿಂದಾ ಪೈಮಾಯಿಷಿ ಮಾಡಿಸಿದ
ಲ್ಲಿ ರೂ ಬಾರಿ ಹೆಚ್ಚಿಗೆ ಆದಕಾರಣ ಜಾ
ಸ್ತಿ ಬಗೆ ೨(೧ ಯಿಪ್ಪತ್ತುವಂದು ಹಣವೂ
ಸೋಡಿ ಮಾಡಿಸಿಯಿದ್ದೀತು ಯಿ ಅಂಗಿರಸ
ಸಂವತ್ಸರದ ಆರಭ್ಯ----------ಯಿರು
ವ ಕಂದಾಯ ತೆಗದುಕ್ಕೊಳ ಕೆಲಸವಿಲ್ಲಾ
ಯಿ ವುತ್ರದ ನಕಲು ಶ್ಯಾನುಭಾಗರ
ಲೆಖ್ಖಕ್ಕೆ ಬರಶಿ ಅಸಲು ವುತ್ರವನ್ನು ಮ
ಟದ ಅಯ್ಯನವರಿಗೆ ಕೊಡುವುದು
ಅಂಗಿರಸ ಸಂ। ಚೈತ್ರ ಶುದ್ಧ ೧೦ ಲ್ಲು
ನಮಸ್ಕಾರಾ

## ಪತ್ರ - ೭: ಗುರುವಣ್ಣದೇವರ ಮಠದ ಇನಾಂ ಜಮೀನಿನ ನಕ್ಷೆ-೧೯೧೩



## ಪತ್ರ - ೮ : ಹನುಮಂತಪುರ ಗ್ರಾಮದ ನಕ್ಷೆ - ೧೯೦೪

[ಪತ್ರ-೮: ಹನುಮಂತಪುರ ಗ್ರಾಮದ ನಕ್ಷೆ-೧೯೦೪.]



# ಪತ್ರ - ೯ : Inam Certificate of Goduraiah Mutt-1876

[ಪತ್ರ-೯: Inam Certificate of Goduraiah Mutt-1876.]

General No. 41201
Quit-rent Register No. 757




INAM CERTIFICATE GRANTED TO The Managers for the time being of the Goduraiah's Mutt at Bangalore ....

On behalf of the Chief Commissioner for the Government of the Territories of His Highness the Maharaja of Mysore, I acknowledge the title of the Goduraiah's Mutt ....... to Inam, situated in the Village of Hanumantapura ............ in the Hobli of Halasuru ...... in the Taluk of Bangalore .......... of the Bangalore District, Nundydroog Division, as per particulars shewn in the annexed Schedule.

2. This Inam is confirmed to the Mutt subject to the payment of a Jodi as shewn in column 7 of the Schedule, so long as the conditions of the grant are duly fulfilled.

SCHEDULE.

| Description. | Old No. or Name of Fields. | Old Extent in Kandis. K. C. P. | Former Assessment. Rs. As. P. | [illegible] Rs. As. P. | Present Quit-rent. Rs. As. P. | Combined Quit-rent Rs. As. P. | Boundaries in the case of whole villages only. |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| Dry ... | Survey 23 | 0 " 8 " 2 Eight Coodoos and two poles | 14 " 3 " 7 | 5 " 12 " 0 | " | 6 " 0 " 0 | Six Rupees (avoiding fractions) |
| Wet ... | | | | | | | |
| Garden. ... | | | | | | | |

3. This Inam is moreover subject to the payment of general, local, and municipal taxes, and a proportionate share of the cost of the repairs of Government works of irrigation in common with ordinary kandayam ryots.

4. This certificate [illegible] provisionally and pending the issue of a formal title-deed which will be granted when the actual area and assessment have been finally determined by the Survey and Settlement Department, after the issue of which this document becomes cancelled.

INAM COMMISSIONER'S OFFICE,
Dated 1st January 1876
Case No. 4




For Inam Commissioner.

Exd.

## ಪತ್ರ - ೧೦: ಬೇಲಿಮಠದ ಸಂಗನ ಬಸವಸ್ವಾಮಿಗಳು ಅರಳೆಪೇಟೆಯ ಶೆಟ್ಟಿ ಯಜಮಾನರುಗಳಿಗೆ ಬರೆಸಿದ್ದ ಪತ್ರ

ಶ್ರೀ ಬಸವಲಿಂಗಾಯ ನಮಃ

ಶ್ರೀಮತ್ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ಸತ್ಯಸದಮಲ ನಿತ್ಯ ಸದ್ಗುಣ ಪರಿಪೂರ್ಣಭರಿತರಾದ ಧ್ಯಾನ ಧಾರಣ ಸಮಾಧ್ಯಷ್ಟಾಂಗಯೋಗ ಸಾಧ್ಯರಾದ ವೇದಪುರಾಣಾಗಮ ಶಾಸ್ತ್ರಕ್ಕೆ ನಿಲುಕದ ಅಗಂಮ್ಯರಾದ ಏಕವಾಕ್ಯ ಪ್ರತಿಷ್ಠಾಚಾರ್ಯರುಗಳಾದ ನಿಷ್ಕಳ ನಿರಂಜನ ನಿರಾಪೇಕ್ಷ ನಿರವಯ ನಿರ್ಭೇದ್ಯ ನಿಃಶೂನ್ಯ ನಿರ್ಮಾಯ ನಿಃಷ್ಪ್ರಪಂಚ ನಿರವಧ್ಯ ನಿತ್ಯತೃಪ್ತರಾದ ಷಡುಸ್ಥಲ ಚಕ್ರವರ್ತಿಗಳಾದ ಚಂನ್ನಬಸವೇಶ್ವರ ಸ್ವಾಮಿಯವರ ಸಾಂಪ್ರದಾಯಕರಾದ ಹೊಸಕೋಟೆ ಮಹಂತಸ್ವಾಮಿಯವರ ಪ್ರತಿಹಸ್ತರಾದಂತಾ ಸಂಗನಬಸವಸ್ವಾಮಿಯವರು -

ಶ್ರೀಮತ್ಸಜ್ಜನ ಶುದ್ಧ ಶಿವಾಚಾರ ಸಂಪ್ಪನ್ನರಾದ ಗುರುಲಿಂಗಜಂಗಮ ಪ್ರೇಮಿಗಳಾದ ಹರಗುರಭಕ್ತಿ ಪಾರಾಯಣರಾದ ವಿಭೂತಿ ಗುದ್ರಾಕ್ಷ ಮಾಲಿಕಾಭರಣ ಭೂಷಿತರಾದ ನಯವಿನಯ ದಯದಾಕ್ಷಂಣ್ಯ ಪರವುಪಕಾರಿಗಳಾದ ನಿತ್ಯಾಂನ್ನದಾನ ವಿನೋದಿಗಳಾದ ನಿಗರ್ವಶಿರೋಮಣಿಗಳಾದ ವೇದವಾಕ್ಯ ಪ್ರಮಾಣಿಗ್ನರಾದ ನಿತ್ಯ ಪಂಚಾಕ್ಷರಿ ಪಠನ ಪಾರಾಯಣರಾದ ನೀತಿಕಾರ್ಯ ಧುರಂಧುರರಾದ ಮಿತ್ರಜನಮನಃಕುಮುದ ಬಾಂಧವರಾದ ಆಶ್ರಿತಜನ ಕಲ್ಪವೃಕ್ಷ ಸ್ಥಾಯಿಗಳಾದ ಯಿವು ಮೊದಲಾದ ಅನೇಕ ಬಿರುದಾವಳಿಯುಕ್ತರಾದ ಶ್ರೀ ಬಸವೇಶ್ವರ ಸ್ವಾಮಿಯವರ ಸಾಂಪ್ರದಾಯಿಕರಾದಂಥ್ಥಾ ಬೆಂಗಳೂರ ಅಮೃತಸಾಗರ ಅರಳೆಪ್ಯಾಟೆ ಬಸವಲಿಂಗಶೆಟ್ರು ಗೌಡರ ಬೂದೆಪ್ಪ ಕಲ್ಲುಕುಡಿಕೆ ಮಲ್ಲಿಶೆಟ್ಟಿ ಗೌಡಪ್ಪನವರ ರಾಚಪ್ಪ ಶಂಕರಪ್ಪ ಕಪ್ಪಯ್ಯ ನರಗುಂದದ ಚೆಂನ್ನುವೀರಪ್ಪಾಯಿವರೂ ಮುಂತಾದ ಸ್ಥಳಪರಸ್ಥಳದ ಹತ್ತೂ ಶಿವಭಕ್ತರಿಗೂ ॥........॥ ತ್ರಿಸಂಧ್ಯಾ ಶಿವಪೂಜಾಕಾಲದಲ್ಲು ಪುತ್ರಪೌತ್ರಕಳತ್ರಾಭಿವೃದ್ಧಿಯಾಗಲೆಂದು ಸಕಲೈಶ್ವರ್ಯಾಭಿವೃದ್ಧಿಯಾಗಲೆಂದು ಸಕಲ ದುರಿತ್ತೋಪಶಮನವಾಗಲೆಂದು ಸರ್ವದಾ ಶಿವಪ್ರಸಾದ ಪ್ರಾಪ್ತವಾಗಲೆಂದು ಇತೊಧಿಕವಾಗಲೆಂದು ಹರಶಿಬರಶಿ ಕಳುಹಿಸಿದ ಅನೇಕಾಶೀರ್ವಾದಾ ॥ ಅದಾಗಿ ॥ ಆಷಾಡ ಶುದ್ಧ ೭ ಮಂಗಳವಾರದಲ್ಲು ನೆಲಮಂಗಲದ ಮಠದಲ್ಲಿ ಲಿಂಗಾನಂದ ಪರಿಣಾಮದಲ್ಲಿ ಯಿದ್ದೆವೆ ॥ ॥ ಅಲ್ಲಿಯಿರುವಂಥ್ಥಾ ನೀವು ಮುಂತಾದ ಶಿವಭಕ್ತರ ಕ್ಷೇಮಾತಿಶಯಂಗಳಿಗೆ ಆಗಾಗ್ಯೆ ಬರಶಿ ಕಳುಹಿಸುವ ಪ್ರಕಾರ ಮಾಡಿಸುವುದು ॥ ತರ್ವಾಯ ॥ ನಾ ಉ ಮುಂದೆ ಸಾಂಬಲೋಕಕ್ಕೆ ಹೋಗತಕ್ಕ ಪ್ರಕೃತಿಯಂನ್ನು ತಿಳಿದು, ಯಿಲ್ಲಿ ಯಿರುವಂಥ್ಥಾ ದೇವಭಕ್ತರು ನಂಮ್ಮ ಚರಂತಿಗೆಯಂನ್ನು ಶ್ರೀಮದ್ಬಸವಲಿಂಗಸ್ವಾಮಿಯವರಿಗೆ ನಿಷ್ಕರುರ್ಷೆಯಂನ್ನು ಗೊತ್ತುಮಾಡಿ ಮುಂದೆ ವುತ್ತರ ಕ್ರಿಯಕ್ಕೆ ಶ್ರೇಷವಾದಂಥ್ಥಾ ವಿಭೂತಿವೀಳ್ಯವಂನ್ನು ನಿಂನೆ ಜೇಷ ಬ ೧೪ ಸೋಮವಾರ ಆಗುಮಾಡಿ ಗಣಾರಾಧನೆ ಮೊದಲಾದ್ದ ಬರಿಸಿದಾದ್ದ ಪ್ರಯುಕ್ತ ನಂಮ್ಮ ಶಿವಯೋಗಾನಂದಕ್ಕೆ ನೀಉ ಸಕಲ ವಿಷಯದಲ್ಲೂ ಆಪ್ತಬಾಧ್ಯರಾದ ಕಾರಣ ಇ ವಿದ್ಯಾಮಾನ ನಿಂಮ್ಮ ಮನಸ್ಸಿಗೆ ತಿಳಿದು ಮುಂದೆ ಶ್ರೀ ಮದ್ಬಸವಲಿಂಗ ಸ್ವಾಮಿಗಳಂನ್ನು ನಂಮ್ಮ ಕಂಡು ಯಾವ ಪ್ರಕಾರ ನಡೆದುಕೊಳ್ಳುತ್ತಿದ್ದಿರೊ ಅದಕಿಂಥಾ ಸಹಸ್ರ ಮಡಿ ಅಧಿಕವಾಗಿಕಂಡು ಧ್ಯಾನಪೂಜಾಯುಕ್ತರಾಗಲೆಂದು ಯಿ ಆಶೀರ್ವಾದ ಪತ್ರಿಕೆಯನ್ನು ಬರಸಿ ಕಳುಯಿಶಿಯಿಧೀತು ಮುಂದೆ ಸಕಲ ವಿಷಯದಲ್ಲು ಯಾವ ಪ್ರಕಾರ ಧ್ಯಾನ ಪೂಜಾಯುಕ್ತರಾಗಿ ನಂಮ್ಮ ಪಾದಕ್ಕೆ ಕೀರ್ತಿಯನ್ನು ತರುತೀರೊ ಆಬಾರ ತಂಮ್ಮನ್ನೆ ಕೂಡಿತು ನಂಮ್ಮ ವಿಷಯದಲ್ಲಿ ಪರಮ ಆಪ್ತಬಾಧ್ಯರಾದ ನಿಂಮ್ಮಿಗೆ ನಾಉ ವಿಶೇಷವಾಗಿ ಬರೆಯುವಂತಾದ್ದು ಯೇನುಯಿಧೆ ಯಿ ವಿವರಗಳನ್ನು ನಿಂಮ್ಮ ಮನಸ್ಸಿಗೆ ಸರಿಕಂಡು ಆಗಿಂದಾಗ್ಯೆ ಶ್ರೀಮದ್ಬಸವಲಿಂಗಸ್ವಾಮಿಗಳು ಯಂದ್ದು ಭಾವಿಶಿ ಬರಶಿ ಕಳುಹಿಸುವ ಹಾಗೆ ಮಾಡಿಸುವುದು ಇಂತಿ ಆನೇಕಾಶೀರ್ವಾದ ॥ ......... ॥

## ಪತ್ರ - ೧೧ : ಬೇಲಿಮಠ ಭೂದಾನ ಸನ್ನದು - ೧೮೨೨

ಶ್ರೀ ರಾಮಪ್ರಸನ್ನ

ಮುದ್ರೆ

ರಾಜಶ್ರೀ ಕಸಬೆ ಶೆಕದಾರ ಪುಟ್ಟೈಯ್ಯನವರಿಗೆ-

ಪವುಜದಾರು ವೆಂಕಟರಾಜ್ಯೆಯ ಅರಶಿನವರು ಬರಶಿಕಳುಯಿಸ್ತಿವಿ...ರ್ಥ ಅದಾಗಿ ಕಸಬಾ ಬೆಂಗಳೂರಲ್ಲಿ ಇರುವ ಅರಳೆಪ್ಯಾಟಿ ಬೆಲಿಮಠದ ಕೆಂಪನಂಜ್ಯೆಗಳಿಗೆ ಕಸಬಾ ಬೆಂಗಳೂರಲ್ಲಿ ಕಂಠಿರಾಯಿ ಹನ್ನೆರಡುವರಾಹಾದ ಭೂಮಿಯನ್ನು ಯಿನಾಮಾಗಿ ನಡಶಿಕ್ಕೊಂಡು ಬರುವಂತೆ ವಿಷು ಸಂವತ್ಸರದ ಮಾಘ ಬ ೪ ಮರಕೂಮಿನ ಹಜೂರು ಬುದ್ದಿ ನಿರೂಪದಸಂನದು ಸಾದರಾಗಿ ಯಿರುವರಿಂದಾ ಬರಶಿಯಿದ್ದೆ ಸದರಿ ಅಯ್ಯಗಳಿಗೆ ನಡಸತಕ್ಕ ಭೂಮಿ ದೊಡ ಬಸವಂಣದೆವರ ದೆವಸ್ಥಾನಕ್ಕೆ ವುತ್ತರಾ ಕಸಬೆ ರಾಮ್ಮೆಯ ಮಾಡಿಯಿರುವ ಕಂದಾಯದ ಹೊಲಕೆ ವುತ್ರಾ ಪೂರ್ವಸಹಾ ಯಿ ಮಧ್ಯೆಯಿರುವ ಪಾಪಿರೆಡ್ಡಿ ಮಾಡಿಯಿದ್ದಾ ಹೊಲದ ಪೈಕಿ ಪೂರ್ವ ಪಶ್ಚಿಮ ಕಸಬೆ ರಾಮ್ಮೆಯನ ಕಂದಾಯದ ಹೊಲದ ಬದುವಿನ ಯಿಂದಾ ದೊಡ ಬಸವಂಣನದೆವರ ದೆವಸ್ಥಾನಕ್ಕೆ ಹೊಗುವ ದೊಡ್ಡ ಮಾರ್ಗದವರೆಗೆ ಗಜಾ ೧೭೧ ವುತ್ರದಕ್ಷಿಣ ಕಸಬೆ ರಾಮಯ್ಯನ ಕಂದಾಯದ ಹೊಲದ ಬದುವಿನ ಯಿಂದಾ ಮೂವತ್ತೊಂದು ಸಾವಿರದ ವಂಭೈನೂರು ಯಪ್ಪತ್ತೆಳಕ್ಕೆ ಮೊಕರಾದ ಕೃಷ್ಣರಾಜ ಬೀಜವರಿ ೧ಕೆ ಮೂರುಸಾವಿರದ ಯಿನ್ನೂರುಗಜದಲ್ಲು ಸಲೆ ಹತ್ತು ಕ್ಕೊಳಗ ಭೂಮಿಯನ್ನು ಚಕ್ಕುಬಂದಿ ಮಾಡಿಶಿಕೊಟ್ಟ ಹಜೂರ್ರು ಸಂನ್ನದು ಮೆರೆಗೆಯಿನಾಮಾಗಿ ನಡಶಿಕ್ಕೊಂಡು ಬರುವದೂ ಯಿ ಕ್ರಾವೆದಿ ನಕಲು ದಪ್ತರಕ್ಕೆ ಬರಶಿ ಅಸಲು ಕ್ರಾವೆದಿ ಕೆಂಪನಂಜಯ್ಯೆಗಳ ವಶಕ್ಕ ಕ್ಕೊಡಿಸುವ ಸೂಚಿ......ವುತ್ರದ ಆಷಾಡ ಬ ೧೦ ಲ್ಲೂ ಶ್ರೀರಾಮ....

## ಪತ್ರ- ೧೨ : ಬೇಲಿಮಠದ ಕೆಂಪುನಂಜೆಸ್ವಾಮಿಗಳಿಗೆ ಮುಮ್ಮಡಿ ಕೃಷ್ಣರಾಜ ಒಡೆಯರು ನೀಡಿರುವ ನಿರೂಪ- ೧೮೨೫

ಷಹಾ ನಿರೂಪ ಪಾರ್ಥಿವ ಸಂವತ್ಸರದ ಆಶ್ವೀಜ ಮಾಸ ಮಾಹೆ ಅಗಟೋಬರ್ ಸಂನ್ ೧೮೨೫ನೇ ಯಿಸವಿಯ ಶುದ್ಧ ೬ ಸೋಮವಾರ ತಾ. ೧೭ನೇ ಅಗಟೋಬರ್....

೧. ಬೆಂಗಳೂರು ಆಮಿಲಗೆ ಅದಾಗಿ ಐಜನ್ ಕಸಬೆ ಅರಳೆಪೇಟೆಯಲ್ಲಿರುವ ಬೇಲಿಮಠದ ಕೆಂಪುನಂಜೈಯಗಳು ತಮ ಮಟದ ಚರಂತ್ತಿಗೆ ಆಶ್ರಮವನತ್ತಾವು ಸಾಕಿಕೊಂಡುಯಿರುವ ಮರ್ರಿಗೆ ಕೊಡಬೇಕೆಂದು ಪ್ರಯತ್ನ ಮಾಡುವಲ್ಲಿ ಮೂರು ಪೇಟೆಯಲ್ಲಿರುವ ಶೆಟಿಯಜಮಾನರುಗಳು ಶೆರಿಕೊಂಡು ಯಿಲದ ಆಟಂಕ ಪಡಿಸುವುದಾಗಿ ಸದರಿ ಕೆಂಪುನಂಜೆಅಯಗಳು ಹುಜೂರಲ್ಲಿ ಬಂದು ಅರಿಕೆ ಮಾಡಿಕೊಂಡದರ್ರಿಂದಾ ಕಟ್ಲೆ ಮಾಡ್ಸಿದಿತ್ತು. ಯಿವು ಶಿಷ್ಯರು ಮಕಳು ಯಿರತಕ್ಕ ಮಟಗಳಲ್ಲಿ ವಂಟಿ ವಿರಕ್ತಿ ಮಟಗಳಾಗಿ ಯಿರುತ್ತಾವೆ... ಅಯ್ಯಗಳು ತ್ತಮ ಸ್ವಂತವಾಗಿ ಕಟಿಶಿಕೊಂಡು ಯಿದರಲ್ಲಿ ಕಾಲಕ್ಷೇಪ ಮಾಡಿಕೊಂಡು ಯಿರ್ರುವದರ್ರಿಂದಾ ಯಿಂಥಾವರ್ರುಗಳಿಗೆ ಯಿಲದ ಯಿಜಮಾಡುವದು ಸರ್ರಿಯಾಗಲ ಪೂರ್ರ್ವಾರಭ್ಯದಿಂದಾ ವಿರಕ್ತಮಟಗಳಿಗೆ ಆಶ್ರಮ ಕೊಡಬೇಕಾಗಿ ಯಿಥರೆ ಅಯ್ಯಗಳೆ ಸ್ವತಂತ್ರವಾಗಿ ಕೊಟ್ಟು ಕೊಳುವ ಪಥತ್ತಿಯಿರುವ ಪ್ರಕಾರ ಯಾಗಲು ಯಿವರು ಚರಂತ್ತಿಗೆ ಆಶ್ರಮವನ ಮಾಡಿಕೊಳಲು ಶೆಟಿಯಜಮಾನ ಮುಂತ್ತಾದ ಬಣಜಿಗರು ಅಡ್ಡಿ ಮಾಡದಂತ್ತೆ ಪೂರಾ ಬಂದೋಬಸ್ತು ಮಾಡುವದು. ಯಿ ನಿರ್ರುಪದ ನಕಲು ತ್ತಾಲುಕು ಮಜಕೂರು ಶಿರಸ್ತೆದಾರ್ರು ಲೆಖಕ್ಕೆ ಬರಿಶಿ ಅಸಲು ನಿರುಪ ಕೆಂಪುನಂಜಯಗಳ ವಶಕ್ಕೆ ಕೊಡುವದು.

## ಪತ್ರ -೧೩ : ಅರಳೆಪೇಟೆಯ ದೇಶದ ಕಳಸಪ್ಪ ಶೆಟ್ಟಿಯು ೧೮೮೦ರಲ್ಲಿ ಸರ್ಕಾರಕ್ಕೆ ಬರೆದುಕೊಂಡ ಅರ್ಜಿ

ಬೆಂಗಳೂರು ತಾಲ್ಲೂಕು ಕಚೇರಿಯಲ್ಲಿ ಸನ್ ೧೮೮೦ನೇ ಯಿಸವಿ ಆಗಸ್ಟು ತಾರೀಖು ೧೬ರಲ್ಲೂ ಅರಳೆಪ್ಯಾಟೆ ಶೆಟ್ಟಿ ಕಳಸಪ್ಪಶೆಟ್ಟಿ ವಾಂಗ್ಮೂಲಾ-

ಬೆಂಗಳೂರು ಷೆಹರುನಲ್ಲಿ ಯಿರುವ ನಮ್ಮ ಶಿವಾಚಾರದ ಜನಗಳು ಮೃತಪಟ್ಟ ಶವಗಳು ದಫನ್ ಮಾಡುತ್ತಾಯಿದ್ದಾ ನರಗುಂದಮಠಾ ೧- ದಿಗಂಬ್ರಶೆಟ್ರುಮಠಾ ೧ ಸಹಾ ಮೈಸೂರು ಸ್ಟೇಟು ರೈಲ್ವೆಗೆ ಶೇರಿಹೋಗಿರುತ್ತೆ-ಶಂಕರದೇವರಮಠಾ೧-ದೆಶದ ಮಠಾ೧-ಬೆಲಿಮಠಾ೧-ಸಹಾ ಮುನಸಪಲ್ ಸರಹದ್ದುನೊಳಗೆ ಶೇರಿರುವದರಿಂದಾ ಅದರಲ್ಲಿ ಶವಗಳನ್ನು ದಫನ್ ಮಾಡಕೂಡದೆಂದು ಬೊರಡಿನವರು ಅಡಿಮಾಡುತ್ತಾರೆ-ಯಿದಲ್ಲದೆ ಬ್ಯಾರೆ ಸ್ಥಳಗಳಾ ನೊಡಬೇಕಾದರೆ ಹನುಮಂತಾಪುರಾ-ಬರಿಗೆ ಮುದ್ದನಹಳ್ಳಿ-ಭೋಗನಹಳ್ಳಿ ಯಿ ಗ್ರಾಮಗಳ ಜಮೀನ್-ಸಮೀಪವಾಗಿರುವದರಿಂದಾ-ಆ ಪೈಕಿ ಯಾವ ಗ್ರಾಮದಲ್ಲಾದರೂ ವಂದು ಜಮೀನು ನಿವಡಾಯಿಸಿ ಕೊಟ್ಟರೆ ಅನುಕೂಲವಾಗಿರುತ್ತೆ-ಯಿನ್ಯಾವದಾದರೂ ಧೂರಗ್ರಾಮಗಳಲ್ಲಿ ಜಮೀನ್ ಕೊಟ್ಟಾಗ್ಯೂ ಪ್ರಯೋಜನವಿಲ್ಲ ಮ್ಯಾಲೆ ಕಂಡಗ್ರಾಮಗಳಲ್ಲಿ ಸರಕಾರಿ ಬಂಜರು ಜಮೀನು ದೊರಿಯದ ಪಕ್ಷಕ್ಕೆ ಯಾವದಾದರು ಕಂದಾಯ ಜಮೀನು ಸರಕಾರದಿಂದಾ ಬಿಡಿಸಿಕೊಡಬೇಕು. ಯಿಲ್ಲದೆ ಯಿದ್ದರೆ ಮಾಮೂಲ್ ನಾವು ದಫನ್ ಮಾಡುವ ಸ್ಥಳಕ್ಕೆ ಮುನಸಪಲ್ ಬೊರಡಿನವರು ಅಡಿಪಡಿಸದಂತ್ತೆ ಹುಕ್ಕುಂ ಆಗಬೇಕು ಯಿಷ್ಟೆ ಶಿವಾಯಿ ಸದರಿ ಗ್ರಾಮಗಳಲ್ಲಿ ಸರಕಾರಿ ಜಮೀನು ಯಿನ್ಯಾವದು ಯಿಲ್ಲವಾಗಿ ಚುನಾಯಿಸಿ ಹೇಳುವುದಕ್ಕೆ ಆಗುವದಿಲ್ಲಾ-ಸರಕಾರದವರು ಪ್ರಜೆಗಳ ಮ್ಯಾಲೆ ದಯವಿಟ್ಟು-ಸರಕಾರದಿಂದಾಲೆ ಯಿದಕ್ಕಾಗಿ ವಂದು ಸ್ಥಳ ನಿರ್ದೇಶವನ್ನ ಮಾಡ್ಸಿ ಕೊಡಬೇಕೆಂದು ಬೇಡುತ್ತೇನೆ ಮೈಸೂರು ಸ್ಟೇಟು ರೈಲ್ವೆಗೆ ದಾಖಲಾದ ದಿಗಂಬ್ರ ಶೆಟ್ರು ಮಠಾ-ನರಗುಂದ ಮಠದ ಕಂಪನ್‌ಶೆಷನ್ ಮೊಬಲಗು ಆ ಮಠಗಳ ವಾರಸದಾರ್ರಿಗೆ ಸಂದು ಹೋಗಿರುತ್ತೆ ಆ ಮೊಬಲಗಿನಿಂದಾ ನಾವು ವುಪಯೋಗಿಸುವದಕ್ಕೆ ಯಿಲ್ಲವಾಗಿಯಿಧೆ-ಅದರಿಂದಾ ಸರಕಾರದಿಂದಲೇ ವಂದು ಪ್ರದೇಶವಂನ್ನ ನಿವಡಾಯಿಸಿ ಕೊಡಿಸಬೆಕು ಯಿಷ್ಟೆ ನಾನು ಹೇಳತಕ್ಕದ್ದು.

ರುಜು ಕಳಸಪ್ಪಶೆಟ್ಟಿ, ರುಜು ಯಜಮಾನ್ ಬಸಪ್ಪ

## ಪತ್ರ - ೧೪ : ಅರಳೆಪೇಟೆಯ ದೊಡ್ಡಮಠದ ಭೂದಾನ ಸನ್ನದು - ೧೮೨೨

( ರಾಜಮುದ್ರೆ )

ಶ್ರೀ ಕೃಷ್ಣರಾಜ ಒಡೆಯರ್‌ರವರು

ವಿಷು ಸಂವತ್ಸರದ ಫಾಲ್ಗುಣ ಬಹುಳ ೪ ಸೋಮವಾರದಲ್ಲೂಶ್ರೀ ಮುತ್ತು......ಬೆಂಗಳೂರು ಪವಜುದಾರ ವೆಂಕಟರಾಜಯ್ಯನವರಿಗೆ ಬರೆಶಿ ಕಳುಹಿಸಿದ ನಿರೂಪ ಅದಾಗಿ ದೊಡ್ಡ ಅರಳೇಪೇಟೆಮಠದ ತೋಟದಪ್ಪನವರಿಗೆ ಕಂಠೀರಾಯಿಗು ಐದು ವರಹದಭೂಮಿಯು ಇನಾಮ್ ಆಗಿ ನಡೆಸಿಕೊಂಡು ಬರತಕ್ಕ ಬಗ್ಗೆ ಅಪ್ಪಣೆಕೊಡಿಸಿ ಇದ್ದಿತ್ತು. ಸದರಿ ತೋಟದಪ್ಪನವರಿಗೆ ಕಸಬಾ ಬೆಂಗಳೂರಲ್ಲೂಕಂಠಿರಾಯಿ ಐದು ವರಪದ ಭೂಮಿಗೆ ಸರಿಯಾಗಿ ಸಾಗುವಳಿ ಲಾಯಕ್ಕು ಖುಷ್ಕಿ ಭೂಮಿಯನ್ನು ಕೃಷ್ಣರಾಜ ಖಂಡಿ ಬೀಜವರಿ ಕಾಯಿದೆ ಮೇರೆಗೆ ಪೈಮಾಯಿಷಿ ಮಾಡಿಶಿ ಯಿ ಭೂಮಿಗೆ ಲಿಂಗಮುದ್ರೆ ಕಲ್ಲು ನೆಡಿಶಿ ಇವರ....ಮಾಡಿ ಚಿತ್ರಭಾನುಸಂವತ್ಸರದ ಆರಭ್ಯ ಪ್ರತಿ ವರ್ಷದಲ್ಲೂ ತಾಜ ಸನ್ನದನು ಹುಜೂರುಮಾಡದೆ ಇನಾಮಾಗಿ ನಡೆಶಿಕೊಂಡು ಬರುವುದು. ಸದರಿ ಭೂಮಿ ಪೈಮಾಯಿಷಿ ಮಾಡಿಶಿದ ಪಟ್ಟಿ ಬರೆಶಿ ರುಜೂ ಮೊಹರು ದಫ್ತಾರದಾಖಲೆಯಿಂದ ಹಜೂರಿಗೆ ಕಳುಹಿಸಿಕೊಡುವುದು. ಈ ಸನ್ನದು ನಕಲು ಸರಕಾರದ ದಫ್ತಾರಕ್ಕೆ ಬರೆಶಿ ಅಸಲು ಸಂನದ್ದು ಅವರ ವಶಕ್ಕೆ ವಾಪಸು ಕೊಡುವುದು. ಬ ತಾರೀಖು ೧೧ನೇ ಮಾಹೆ ಮಾರ್ಚಿ ಸನ್ ೧೮೨೨ನೆಯ ಇಸವಿ ಖತ್ತಿ ಅಶ್ವತ್ಥನಾರಾಯಣಯ್ಯ ಮುನಷಿಹಜೂರ ಸಾಲ್ಲಿ ಇನಾಮತಿ ಈ ಐದು ವರಹದ ಭೂಮಿಯ ಇನಾಮಾಗಿನಡೆಸಿಕೊಂಡು ಬರುವುದು.

ಶ್ರೀ ಕೃಷ್ಣ

## ಪತ್ರ - ೧೫ : ದೊಡ್ಡಮಠದ ಚನ್ನವೀರದೇವರು ತಮ್ಮ ಉತ್ತರಾಧಿಕಾರಿ ಬಸವಲಿಂಗಮರಿದೇವರಿಗೆ ಬರೆಸಿದ ವಿಲ್ - ೧೮೭೭

ಸನ್ ಸಾವಿರದ ಎಂಟುನೂರು ಎಪ್ಪತ್ತೇಳನೇ ಇಸವಿ ಡಿಸೆಂಬರ್ ತಾರೀಖು ಹತ್ತೊಂಬತ್ತಕ್ಕೆ ಸರಿಯಾದ ಈಶ್ವರ ನಾಮ ಸಂವತ್ಸರ ಮಾರ್ಗಶಿರ ಶುದ್ಧ ಹದಿನಾಲ್ಕು ಬುಧವಾರದಲ್ಲೂ ಬೆಂಗಳೂರು ಮನವಾರ್ತೆ ಪೇಟೆಯಲ್ಲಿರುವ ದೊಡ್ಡಮಠದ ಚನ್ನವೀರದೇವರು ಅವರು ನೆಲಮಂಗಲ ತಾಲೂಕು ನಿಡವಂದದಲ್ಲಿದ್ದ ನಂಜೇಮರಿ ಮಗ ಬಸವಲಿಂಗ ಮರಿದೇವರಿಗೆ ಬರಸಿಕೊಟ್ಟಉಯಿಲೇನೆಂದರೆ- ಈ ಮಠಕ್ಕೆ ನಾವು ಪದ್ಧತಿ ಅನುಸರಿಸಿ ನಿನ್ನ ದತ್ತು ಸ್ವೀಕಾರ ಮಾಡಿಕೊಂಡು ಇದ್ದಿದ್ದರಿಂದ ಈ ದಿನ ಉಯಿಲ್ ಬರೆಸಿ ಕೊಟ್ಟಿರುವುದೇನೆಂದರೆ ಈ ಲಾಗಾಯ್ತು ನಮ್ಮ ಈ ಮಠದ ಪದ್ಧತಿಯನ್ನು ಅನುಸರಿಸಿ ಶಿಷ್ಯಾ ಭಕ್ತಾರ್ಜನೆಯಿಂದ ಆರ್ಜಿಸಿ ಮಠಕ್ಕೆ ಸೇರಿದ ಚರ-ಸ್ಥಿರ ಸ್ವತ್ತುಗಳು ಮತ್ತು ಶಿವನಹಳ್ಳಿ ಮಠ ಸಹ ಅಭಿವೃದ್ಧಿ ಮಾಡುವುದಕ್ಕೂ ಈ ಮಠದ ಅಭಿವೃದ್ಧಿಗಾಗಿ ಕಂಬಿ ಮಠದ ನಂಜಯ್ಯ ಮಾರಿಪತ್ತು ಮಾಡಿದ ಋಣಬಾಧೆ ನಿವರ್ತಿಗಾಗಿ ಬೇಕಾದ ಕಾರುಬಾರು ಸ್ವತಂತ್ರ ಮಾಡುವುದಕ್ಕೂ ಕೇರುವುದಕ್ಕೂ ತೀರುವುದಕ್ಕೂ ಸಹ ಇದರಿಂದ ಸರ್ವ ಸ್ವತಂತ್ರಕೆ ಕೊಟ್ಟಿರುತ್ತೇವೆ. ಇದರ ಒಡನೆ ಇರುವ ಷೆಡ್ಯೂಲ್ ಪಟ್ಟಿಯಲ್ಲಿ ಕಂಡ ಸ್ಥಾವಿರ ಜಂಗಮ ಮೊದಲಾದದ್ದು ಸಹಸುಖವಾಗಿ ಅನುಭವಿಸಿಕೊಂಡು ಇರುವುದು ಇದಕ್ಕೆ ಸಂಬಂಧಪಟ್ಟ ಸನ್ನದು ಪತ್ರಗಳು ಪಟ್ಟಿಗಳು ಮೊದಲಾದ ಎಲ್ಲಾ ರಿಕಾರ್ಡು ನಿನ್ನ ವಶಕ್ಕೆ ಕೊಟ್ಟಿರುತ್ತೆವೆ.

ಈ ಮಠದ ಕೆಲಸದಲ್ಲಿ ನಿನ್ನ ಪೂರ್ವಾಶ್ರಮದ ತಮ್ಮನಾದ ಬಸಪ್ಪ ಇರಬೇಕು ಆತನ ಶುಭ ಶೋಭನ ಮೊದಲಾದ ವಿಶಿಷ್ಟವು ಈ ಆಸ್ತಿಯಿಂದಲೇ ಆಗಬೇಕು ಕ್ರಮವಾದ ಮಕ್ಕಳು ಪೈಕಿ ಲಾಯಕ್ಕೂ ಆದವನನ್ನು ಈ ಮಠದ ಆಶ್ರಮಕ್ಕೆ ತೆಗೆದುಕೊಳ್ಳುತ್ತ ಬರಬೇಕಾದ್ದು ಶಿಷ್ಯಾಶಿಷ್ಯ ಪಾರಂಪರ್ಯವಾಗಿಯೂ ಪುತ್ರ ಪೌತ್ರ ಪಾರಂಪರ್ಯವಾಗಿಯೂ ನಡೆಯುತ್ತಾನೆ ಬರಬೇಕು. ಇದರಿಂದ ನಮಗೆ ಇದ್ದ ಎಲ್ಲಾ ಅಧಿಕಾರ ಯಾವಾತ್ತು ನಿಮಗೆ ವಹಿಸಿ ಇರುವದರಿಂದ ನಮ್ಮ ಪೋಷಣೆ ಮಾಡುತ್ತಾ ಬರಬೇಕು ನಿಮ್ಮ ತಾಯಿ ಕಾಳಮ್ಮನ ಪೋಷಣೆ ನಿಮ್ಮಿಬ್ಬರದಾಗಿರುತ್ತೆ ಇದು ನಮ್ಮ ಮನಃಪೂರ್ವಕವಾಗಿ ತ್ರಿಕರಣ ತ್ರಿವಾಚಕವಾಗಿ ಬರಸಿಕೊಟ್ಟ ಉಯಿಲ್ - ದೊಡ್ಡಮಠದ ಚನ್ನವೀರದೇವರ ಸ್ವಹಸ್ತ ಬರಹದ ರುಜುವು. ಸಾಕ್ಷಿಗಳು : - ಬೇಲಿಮಠದ ಸಿದ್ಧಲಿಂಗಸ್ವಾಮಿಗಳ ರುಜುವು ಸಾಕ್ಷಿ, ಹುಣಸೇಮಾರನಹಳ್ಳಿ ನಂಜೇದೇವರ ಸಾಕ್ಷಿ ರುಜುವು, ಬಿಕ್ಲಂ ಬೆಂಗಳೂರು ಚಿಕ್ಕಪೇಟೆಯಲ್ಲಿರುವ ಚಪ್ಪಲ್ಲಿ ಬೈರಪ್ಪ ಶಾಸ್ತ್ರಿ ಬರಹ ಸನ್ ಸಾವಿರದ ಎಂಟುನೂರ ಎಪ್ಪತ್ತೆಂಟನೇ ಇಸವಿ ಮಾರ್ಚಿ ತಾರೀಖು ಐದನೇ ದಿವಿ ಮೂರು ಘಂಟೆಯಲ್ಲಿ ಬೆಂಗಳೂರು ಸಬ್ ರಿಜಿಸ್ಟ್ರಾರ್ ಆಫೀಸ್‌ನಲ್ಲಿ ಈ ಕೆಳಗೆ ರುಜು ಮಾಡಿರುವವನಿಂದ ಹಾಜರ್ ಮಾಡಲ್ಪಟ್ಟಿದೆ.

ಚನ್ನವೀರದೇವರ ರುಜುವು

ಇದರ ಕೆಳಗೆ ರುಜು ಮಾಡಿರುವವನು ಈ ಉಯಿಲು ಬರೆದುಕೊಟ್ಟದ್ದು ಉಂಟೆಂದು ಒಪ್ಪಿ ಇದ್ದಾನೆ.

ಚನ್ನವೀರ ದೇವರ ರುಜುವು

ಇದನ್ನು ಬರೆದುಕೊಟ್ಟ ದೊಡ್ಡಮಠದ ಚನ್ನವೀರದೇವರು ಉಪ್ಪಿನ ಸಿದ್ಧಲಿಂಗಶೆಟ್ಟಿ ಮಗ ಸಿದ್ಧವೀರಶೆಟ್ಟಿಗೆ ಚೆನ್ನಾಗಿ ತಿಳಿದವನಾಗಿದ್ದಾನೆ. ಬರೆದುಕೊಟ್ಟವನು ಇವನೇ ಎಂದು ಸದರಿ ಸಿದ್ಧವೀರ ಶೆಟ್ಟಿಯು ನನ್ನ ರೂಬು ರೂಬು ಸಾಕ್ಷಿ ನೀಡಿದ್ದು ಈತನೇ ರುಜು ಮಾಡಿರುತ್ತಾನೆ.

ಸಿದ್ದವೀರಪ್ಪ ಶೆಟ್ಟಿ ರುಜುವು
ಸಬ್ ರಿಜಿಸ್ಟ್ರರ್ ಆಫೀಸ್ 5-3-78

ಒಂದನೇ ಬುಕ್ಕು ಇಪ್ಪತ್ತೆರಡನೇ ಸಂಪುಟದ ಮುನ್ನೂರ ನಲ್ವತ್ತಾರು ಮುನ್ನೂರ ನಲ್ವತ್ತೇಳನೆ ಪುಟದಲ್ಲಿ ಸಾವಿರದ ಮೂವತ್ತಮೂರನೇನಂಬರ್‌ದಾಗಿ ರಿಜಿಸ್ಟರ್ ಮಾಡಲ್ಪಟ್ಟಿತು. ವಸೂಲಾದ ಫೀಜು ಐದು ರೂಪಾಯಿ ಎಂಟಾಣೆ ಮಾತ್ರ

ಸಬ್ ರಿಜಿಸ್ಟ್ರಾರ್ ಸಹಿ - 16-3-1878

ಮುದ್ರೆ

ಕಳಸಪ್ಪಶೆಟ್ಟಿ ಸಾಕ್ಷಿ, ಅರಳೆಪೇಟೆ,
ಯಜಮಾನ್ ಬಸಪ್ಪ ಸಾಕ್ಷಿ, ಅರಳೆಪೇಟೆ.
ನಿಟ್ಟೂರ್ ಶೆಟ್ಟಿ ಹೊನ್ನಪ್ಪನ ಸಾಕ್ಷಿ ರುಜು. ಮರ್ವೆ

## ಸ್ವತ್ತುಗಳ ಷೆಡ್ಯೂಲ್

ಸನ್ ಸಾವಿರದ ಎಂಟುನೂರ ಎಪ್ಪತ್ತೇಳು ಡಿಸೆಂಬರ್ ಹತ್ತೊಂಬತ್ತಕ್ಕೆ ಸರಿಯಾದ ಈಶ್ವರನಾಮ ಸಂವತ್ಸರದ ಮಾರ್ಗಶಿರ ಹದಿನಾಲ್ಕು ಬುಧವಾರದಲ್ಲೂ ಬೆಂಗಳೂರು ಮನವಾರ್ತೆಪೇಟೆಯಲ್ಲಿರುವ ದೊಡ್ಡಮಠದ ಚನ್ನವೀರದೇವರವರು ನೆಲಮಂಗಲ ತಾಲ್ಲೂಕು ನಿಡವಂದದಲ್ಲಿ ಇದ್ದ ನಂಜೇಮರಿಮಗ ಬಸವಲಿಂಗಮರಿದೇವರಿಗೆ ಹುಟ್ಟಿರುವ ಉಯಿಲ್‌ಗೆ ಸಂಬಂಧಪಟ್ಟ ಸ್ವತ್ತುಗಳ ತಪಶೀಲು - ಷೆಡ್ಯೂಲ್ ಪಟ್ಟಿ.

ಬೆಂಗಳೂರು ತಾಲ್ಲೂಕು ಯಶವಂತಪುರದ ಹೋಬಳಿ ಶಿವನಹಳ್ಳಿ ಗ್ರಾಮದಬಳಿ ಕೇತ್ತುಮಾರನಹಳ್ಳಿ ಗ್ರಾಮಕ್ಕೆ-ಸೇರಿದ್ದು ಸರ್ವೆ ನಂಬರ್ ೨೬ : ಬೆಂಗಳೂರು ಮನವಾರ್ತೆಪೇಟೆಯಲ್ಲಿರುವ ದೊಡ್ಡಮಠಕ್ಕೆ ಚೆಕ್ಕುಬಂಧಿ ಮುನಿಸಿಪಲ್ ಬೋರ್ಡ್‌ನಂ - ಪೂರ್ವಕ್ಕೆ ಸರ್ಕಾರದ ರೋಡು, ಪಶ್ಚಿಮಕ್ಕೆ ಸನ್‌ತುಂಮ್ಮನ ಸೊಪ್ಪಿನ ತೋಟ ವಿಗ್ನೇಶ್ವರ ಅರ್ಚಕ ನಂದಿಬಸವಯ್ಯನ ಮನೆ, ಉತ್ತರಕ್ಕೆ ಸರ್ಕಾರದ ರಸ್ತೆ, ದಕ್ಷಿಣಕ್ಕೆ ಮೇಸ್ತ್ರಿ ರಂಗಣ್ಣನ ಮನೆ, ನಶ್ಯದ ಅಂಗಡಿ ಮನೆ ಅಂಗಡಿ ಸಹ ಈ ಮಧ್ಯೆ ಇರುವ ಅಂಕಣದ ತಪಶೀಲುಗಳು - ೬೪ ಅಂಕಣ ಇದಕ್ಕೆ ಸೇರಿದ ಮೈದಾನ ಸಹ.

ನಂಬರ್ ೧೨೩ : ಕೇತ್ತುಮಾರನಹಳ್ಳಿ ಗ್ರಾಮದ ಬಳಿಯ ಮಾನ್ಯ ಚಕ್ಕುಬಂಧಿ ಸರ್ವೆ ಪೂರ್ವಕ್ಕೆ ದಾಸರ ವೆಂಕಟನ ಹೊಲ, ಪಶ್ಚಿಮಕ್ಕೆ ಅಗಸ ಈರನ ಹೊಲ, ಉತ್ತರಕ್ಕೆ ದೇಶದ ಮಠದ ಇನಾಮ್ತಿ, ದಕ್ಷಿಣಕ್ಕೆ ಕರಿಯನ ಹೊಲ, ಮಾದನಕುಂಟೆ ಈರಯ್ಯನ ಹೊಲ.

ದೊಡ್ಡಮಠದ ಚನ್ನವೀರದೇವರ ಸ್ವಹಸ್ತ ರುಜುವು

ಇದಕ್ಕೆ ಸಾಕ್ಷಿಗಳು
ಸಿದ್ಧಲಿಂಗಸ್ವಾಮಿಗಳವರ ರುಜುವು ಸಾಕ್ಷಿ ಬೇಲಿಮಠ
ಹುಣಸೇಮಾರನಹಳ್ಳಿ ನಂಜೇದೇವರ ಸಾಕ್ಷಿ ರುಜುವು
ಬಿಕ್ಕಲಂ ಬೆಂಗಳೂರು ಚಿಕ್ಕಪೇಟೆ ಚಪ್ಪಲ್ಲಿ ಬೈರಪ್ಪ ಶಾಸ್ತ್ರಿ ಬರಹ
ಕಳಸಪ್ಪಶೆಟ್ಟಿ ಸಾಕ್ಷಿ ಅರಳೆಪೇಟೆ
ಯಜಮಾನ್ ಬಸಪ್ಪನ ಸಾಕ್ಷಿ ಅರಳೆಪೇಟೆ
ನಿಟ್ಟೂರ್ ಶೆಟ್ಟಿ ಹೊನ್ನಪ್ಪನ ಸಾಕ್ಷಿ ಮರ್ವೆ

## ಪತ್ರ - ೧೬ : ಶಿವನಹಳ್ಳಿ ಜಂಗಮಮಠದ ಭೂದಾನ ಸನ್ನದು - ೧೮೨೨

( ರಾಜಮುದ್ರೆ )

ಶ್ರೀ ಕೃಷ್ಣರಾಜ ಒಡೆಯರ್‌ರವರು

ಚಿತ್ರಭಾನು ಸಂವತ್ಸರದ ಕಾರ್ತಿಕ ಶುದ್ಧ ೧೨ ಅಂಗಾರಕವಾರದಲ್ಲೂ ಶ್ರೀಮತ್ತು ಬೆಂಗಳೂರು ಪವಜುದಾರ ವೆಂಕಟರಾಜೆಯ್ಯನವರಿಗೆ ಬರಶಿ ಕಳುಹಿಶಿದ ನಿರೂಪ. ಅದಾಗಿ ಕಸಬೆ ಬೆಂಗಳೂರು ಒಳಿಕವಾದ ಯಲಹಂಕದ ತಾಲೂಕು ಶಿವನಹಳ್ಳಿಮಠದ ಮಲ್ಲೇದೇವರಿಗೆ ಕಂಠೀರಾಯಿ ೨೦ ಇಪ್ಪತ್ತು ಹಣದಭೂಮಿಯನ್ನು ಸರ್ವಮಾನ್ಯವಾಗಿ ನಡೆಸುವ ಬಗ್ಗೆ ಅಪ್ಪಣೆಕೊಟ್ಟು ಯಿದ್ದಿತ್ತು. ಸಾಗುವಳಿ ಭೂಮಿಯಲ್ಲಿ ಬೆದ್ದಲು ಭೂಮಿಯನ್ನು ಸರಕಾರದ ವಾರದ ಭೂಮಿಯಲ್ಲಿ ಆಗಲಿ ಯಿವರು ಮಾಡಿರುವ ಕಂದಾಯದ ಭೂಮಿಯಲ್ಲಿ ಆಗಲಿ ಇದರಲ್ಲಿ ಇವರು ಕೇಳಿದ ಬಳಿಯಲ್ಲಿ ಕಂಠಿರಾಯಿ ಇಪ್ಪತ್ತು ಹಣದ ಭೂಮಿಯನ್ನು ಗೊತ್ತು ಮಾಡಿಕೊಟ್ಟು ಚಿತ್ರಭಾನು ಸಂವತ್ಸರದ ಆರಭ್ಯ ವರುಷಂ ಪ್ರತಿಯಲ್ಲೂ ತಾಜಾ ಸನ್ನದು ಹುಜೂರು ಮಾಡದೇ ನಿರೂಪಾಧಿಕದಲ್ಲಿ ಸರ್ವ ಮಾನ್ಯವಾಗಿ ನಡೆಶಿಕೊಂಡು ಬರುವುದು. ಈ ಭೂಮಿಗೆ ಲಿಂಗಮುದ್ರೆ ಶಿಲಾ ಪ್ರತಿಷ್ಠೆ ಮಾಡಿಶಿಕೊಡುವದೂ. ಯಿಾ ಸನ್ನದಿನ ನಕಲು ತಾಲೂಕು ಮಜಕೂರ ಶಿರಸ್ತೆದಾರ ಲೆಖಿಕ್ಕೆ ಬರೆಶಿ ಅಸಲು ಸಂನ್ನದು ಶಿವನಹಳ್ಳಿ ಮಠದ ಮಲ್ಲೇದೇವರ ವಶಕ್ಕೆ ಕೊಡುವುದು ತಾರೀಖು ೨೬ನೇ ಮಾಹೆ ನವೆಂಬರ ಸನ್ ೧೮೨೨ನೇ ಇಸವಿ ಖತ್ತಿ ಅಪ್ಪಾಜಿರಾವ ಮುನಷಿ ಹಜೂರೂ....ಸಾಲಿ ಯಿಾ ಇಪ್ಪತ್ತು ಹಣದ ಭೂಮಿಯನ್ನು ಇನಾಮಾಗಿ ನಡಶಿಕೊಂಡು ಬರುವುದು ಶ್ರೀ ಕೃಷ್ಣ-

## ಪತ್ರ - ೧೭ : ದೊಡ್ಡ ಪೇಟೆಯ ಕರಿಸಿದ್ಧೇಶ್ವರ ಮಠದ ಭೂದಾನ ಸನ್ನದು - ೧೮೪೦

"ಶ್ರೀ ರಾಮ ಪ್ರಸನ್ನ"

( ರಾಜಮುದ್ರೆ )

ಶ್ರೀ ಕೃಷ್ಣರಾಜ ಒಡೆಯರ್ರೈಯ್ಯನವರು

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರಚಾರವೆ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೆ ॥ ಹರೇರ್ಲೀಲಾವರಾಹಸ್ಯ ದಂಷ್ಟ್ರಾದಂಡಸ್ಸಿಘಾತುನಃ ಹೇಮಾದ್ರಿಕಲಶಾಯ ತ್ರಿಧಾತ್ರಿ ಛತ್ರ ಶ್ರೀಯಂದಧೌ ॥

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷಂಗಳು ಕ್ರಿ.ಶ. ೧೭೬೩ನೆ ಸಂದವರ್ತಮಾನವಾದ ಶಾರ್ವರಿನಾಮ ಸಂವತ್ಸರದ ಶ್ರಾವಣ ಶು. ೧೫ರಲ್ಲು ಶ್ರೀಮದ್ರಾಜಾದಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ಸುರನರಪತಿ ಬಿರುದೆಂತೆಂಬರ ಗಂಡ ಲೋಕೈಕ ವೀರ ಯದುಕುಲ ಪ್ರಿಯ ಪಾರಾವಾರಕಳಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮಥ ಶರಭ ಸಾಳ್ವ ಗಂಡಬೇರುಂಡ ಧರಣೀವರಾಹ ಹನುಮದ್ಗರುಡಾದ್ಯನೇಕ ಬಿರುದಾಂಕಿತರಾದ ॥ ॥ ಮಹಿಶೂರು ನಗರದಲ್ಲೂ ರತ್ನ ಸಿಂಹಾಸನಾರೂಢರಾಗಿ ಪೃಥ್ವಿ ಸಾಮ್ರಾಜ್ಯಂಗೈಯ್ಯುತ್ತಿರಲೂ ಶ್ರೀವತ್ಸಗೋತ್ರದ ಆಶ್ವಲಾಯನ ಸೂತ್ರದ ಶಾಖಾನುವರ್ತಿಗಳಾದ ಚನ್ನಪಟ್ಟಣದ ತಿಮ್ಮಪ್ಪರಾಜಯ್ಯ ಅರಸಿನವರ ಪೌತ್ರರಾದ ಕೃಷ್ಣರಾಜಯ್ಯ ಅರಸಿನವರ ಪುತ್ರರಾದ ತಿಮ್ಮಪ್ಪರಾಜಯ್ಯ ಅರಸಿನವರು ಬೆಂಗಳೂರು ದೊಡ್ಡಪೇಟೆ ಕರಿಸಿದ್ಧೇಶ್ವರ ಮಠದ ಶ್ರೀ ಸಂಪಾದನೆ ಗುರುಪಾದಯ್ಯನವರಿಗೆ ಬರೆಶಿಕೊಟ್ಟ ಭೂದಾನ ಶಾಸನ ಕ್ರಮವೆಂತೆಂದರೆ ಅದಾಗಿ ನಮಗೆ ಸರ್ವಮಾನ್ಯವಾಗಿ ನಡೆಯುವ ಕುಲೂಸಪೆಟೆ ತಾಲೊಕು ಕಗ್ಗಲೀಪುರದಲ್ಲಿ ವೂರ ಮುಂದುಗಡೆ ಮಠಾಕಟ್ಟಿ ಬಂದಜನಗಳಿಗೆ ಅಂನ್ನೊದಕಗಳ ಕೊಡುವುದು ಯಿಾ ಪುಣ್ಯ ತಮಗೆ ಬರುತ್ತೆ ಈ ಮಠಕ್ಕೆ ಮಾನ್ಯವಾಗಿ ಭೂಮಿ ಕೊಡಿಸಬೇಕೆಂದು ನೀವು ಹೇಳಿಕೊಂಡಿದ್ದಕ್ಕೆ ನಾವು ಸಮ್ಮತಿಪಟ್ಟು ಲಿಂಗಮುದ್ರೆ ಶಿಲಾಪ್ರತಿಷ್ಠೆ ಮಾಡಿಶಿಕೊಟ್ಟುಯಿರುವ ಭೂಮಿ ಚತುಸೀಮೆ ವಿವರ-ಪೂರ್ವಕೆ ವೊಣಿ, ಪಶ್ಚಿಮಕ್ಕೆ ಒಳಗೆರೆ, ದಕ್ಷಿಣಕೆ ನರಸಿಂಹಯ್ಯನ ಹೊಲದ ಬದವೂ, ವುತ್ತರಕ್ಕೆ ನೇಯಿಗೆಯವರಿಗೆ ಮನೆ ಕಟ್ಟುವುದಕ್ಕೆ ಸ್ಥಳ ವಿಂಗಡಿಸಿ ಯಿರುವ ಹದ್ದುಸು ಯಿಾ ಮಧ್ಯೆ ಇರುವ ಭೂಮಿ ಖುಷ್ಕಿ ಬೀಜವರಿ ನಾಲ್ಕು ಕೊಳಗದ ವಂದುಬಳದ ವಂದೂಕಾಲು ಪಡಿ ಯಿಷ್ಟಕ್ಕೆ ಕಂದಾಯಾ ಕಂಠೀರಾಯಿ ಎರಡು ವರಾಹಾದ ಕಂದಾಯದ ಯಿ ಭೂಮಿಯನ್ನು ಯಿಾಶ್ವರಾರ್ಪಣವಾಗಿ ನಿಮ್ಮ ಮಠಕ್ಕೆ ದಾನವಾಗಿಕೊಟಿ ಇಧೇವೆ ಯಿಾ ಭೂಮಿಲಿ ಆಗತ್ಕ ಪೈರು ಮಾಡಿಶಿಕೊಂಡು ಬಂದ ಫಲದಲ್ಲಿ ಮಠಕ್ಕೆ ಬಂದ ಜನಗಳಿಗೆ ಅಂನ್ನೊದಕಗಳನ್ನು ಕೊಟ್ಟುಕೊಂಡು ನಿಮ್ಮ ಶಿಷ್ಯಾ ಪ್ರಶಿಷ್ಯಾ ಪಾರಂಪರ್ಯವಾಗಿ ಸುಖದಲ್ಲಿ ಅನುಭವಿಶಿ ಕೊಂಡು ಯಿರ್ರುವುದು ಎಂಬುದಾಗಿ ಬರಶಿಕೊಟ್ಟ ದಾನಶಾಸನ ಸಹಿ ॥ ಯಿದಕ್ಕೆ ಸಾಕ್ಷಿಗಳೂ ಆದಿತ್ಯ ಚಂದ್ರಾವನಿಲೋನಲಶ್ಚ ತ್ಯಾಭೂರ್ಮಿ ರಾಮೊಹೃದಯಂ ಯಮಶ್ಚ ಅಹಶ್ಚ ರಾತ್ರಶ್ಚ ಉಖೆಚ ಸಂಧ್ಯೆಧರ್ಮಸ್ಯ ಜಾನಾತಿ ನರಸ್ಯವೃತ್ತ ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ ಪರದತ್ತಾಪಹಾರಿಣ ಸ್ವದತ್ತೊ ನಿಶ್ಫಲಂ ಭವೇತ್ ॥ ಸ್ವದತ್ತಾ ಪುತ್ರಿಕಾಧಾತ್ರಿ ಪಿತೃದತ್ತಾ ಸಹೋದಪಿ ಅನ್ಯದತ್ತಾ ಚ ಮಾತಾ ಚ ದತ್ತಾಂಭೂಮಿಂಪರಿತ್ಯಜೇತ್ ॥ ರುಜು ಶ್ರೀರಾಮ-

## ಪತ್ರ - ೧೮ : ಅರಳೆಪೇಟೆಯ ತೋಟದದೇವರಮಠದ ತೋಟದಸ್ವಾಮಿಯವರಿಗೆ ದೇವಣಾಪುರ ಮಹಾ ಮಹಂತಿನ ಮಠದ ಪರುವತಸ್ವಾಮಿಗಳು ಒಪ್ಪಿಸಿರುವ ಭೂದಾನ ಸಮರ್ಪಣಾ ಪತ್ರ-೧೮೨೩

ಶ್ರೀ ಗುರುವೆ ಗತಿ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಖ ವರುಷಂಗಳು ೧೭೪೫ನೇ ನಡೆವ ಸ್ವಬಾನುನಾಮ ಸಂವತ್ಸರದ ಮಾರ್ಗ ಶುದ್ಧ ೭ನೇ ಸ್ಥಿರವಾರವರುವಣಿ ಮಹಾಪುಣ್ಯ ಕಾಲದಲ್ಲು ಶ್ರೀಮದ್ರಾಜಾದಿರಾಜ ಪರಮೇಶ್ವರಾಭಿವಂದಿತಾ ಶ್ರೀಮನ್ ಮಹಿಶೂರು ಕೃಷ್ಣರಾಜ ಕಂಠೀರವ ಒಡೆಯರಯ್ಯನವರೂ ರತ್ನ ಸಿಂಹಾಸನಾರೂಢರಾದ ಪೃಥ್ವೀ ಸಾಮ್ರಾಜ್ಯವಂ ಗೈವುತರಲ್ಲೂ, ಶ್ರೀಮನ್ ಮಹಾ ಆವತಿನಾಡ ಪ್ರಭುಗಳೈಯ್ಯನವರಿಂದಲೂ ದೇವಣಾಪುರ ಮಹಾಮಹಂತಿನ ಮಠದ ಧರ್ಮಸಿಂಹಾಸನಕ್ಕೆ ನಡದುಬರುವಂತಾ ಹುಣಸಮಾರನಹಳ್ಳಿ ಗ್ರಾಮದ ಬಳಿಯಲ್ಲೂ ಗ್ರಾಮಕ್ಕೆ ಉತ್ತರ ದಿಕ್ಕಿನಲ್ಲು ಇರುವ ಸಾರಿಗೆಯನ್ನು (ಶ್ಯಾನ ಬಾವಿಕೆ ಹೊಲಕೆ) ಪಡುವಲು ಇರುವ ಸದರಿ ಸಾರಿಗೆಯನ್ನು ಬೆಂಗಳೂರು ಅರಳೆಪೇಟೆಯಲ್ಲಿ ಇರುವ ಕೌವುದಿಚರ ಚೀಲಾಳ ಸಮಯದ ತೋಟಸ್ವಾಮಿಗಳವರ ಶಿಷ್ಯರಾದಂತಾ ಚನ್ನಬಸವಸ್ವಾಮಿಗಳವರ ಶಿಷ್ಯರು ತೋಟಸ್ವಾಮಿಯವರಿಗೆ ದೇವಣಾಪುರ ಮಹಾಮಹಂತಿನ ಅತೀತ ಧರ್ಮ ಸಿಂಹಾಸನಕ್ಕೆ ಕಾರಣಕರ್ತರಾದಂತಾ ಪಟ್ಟದಪರುವತಸ್ವಾಮಿಯವರ ಕರಕಮಲ ಸಂಜಾತರಾದಂತಾ ಪರುವತಸ್ವಾಮಿಯವರು ತ್ರಿಕರಣ ತ್ರಿವಾಚಕ ತ್ರಿಪೂರ್ವಕವಾಗಿ ಶಿವಾರ್ಪಿತಕ್ಕೆ ಧರ್ಮದಾಸೋಹ ನಡೆಯುವ ಬಗ್ಗೆ ಸಮರ್ಪಣೆ ಮಾಡಿ ಇರುವದು. ಸದರಿ ಮೇಲೆ ಬರೆದಿರುವ ಮ್ಯಾರೆಗೆ ಶ್ಯಾನಭಾವಿಕೆ ಹೊಲಕೆ ಪಡುವಲು ಇರುವ ಸಾರಿಗೆ ಒಂದಕೆ ಬೀಜವರಿ ೩ ಈ ಮಂಗಳ ಭೂಮಿಯನ್ನು ನಿರುಪಾಧಿಕ ಸರ್ವಮಾನ್ಯವಾಗಿ ನಮ್ಮ ಶಿಷ್ಯಾಶಿಷ್ಯ ಪಾರಂಪರ್ಯವಾಗಿ ನಿಮ್ಮ ಶಿಷ್ಯಾಶಿಷ್ಯ ಪಾರಂಪರ್ಯ ಆಚಂದ್ರಾರ್ಕಸ್ತಾಯುಗಳಾಗಿ ಅನುಭವಿಸಿಕೊಂಡು ತ್ರಿಸಂದ್ಯಾ ಶಿವಪೂಜಾಕಾಲದಲ್ಲೂ ನಮಗೆ ಆಶೀರ್ವಾದವನ್ನು ಮಾಡಿಕೊಂಡು ಸುಖದಲ್ಲಿ ಇರುವುದು ಎಂದು ಬರೆಶಿಕೊಟ್ಟ ದಾನಪತ್ರ ಸಹಿ, ಸ್ವದತ್ತಾ ದ್ವಿಗುಣಂಪುಣ್ಯಂ। ಪರದತ್ತಾನುಪಾಲನಂ। ಪರದತ್ತಾ ಪಾಹಾರಿಣ್ಯಾ ಸ್ವದತ್ತಂ ನಿಷ್ಪಲಂಭವೇತ್। ಸ್ವದತ್ತಾ ಪುತ್ರಿಕಾ ದಾತ್ರಿ ಪಿತ್ರು ದತ್ತ ಸಹೋದರೀ ಅನ್ಯದತ್ತಾ ಸ್ವಯಂಮಾತ್ರಾ। ದತ್ತಂ ಪರಿತ್ಯಜ್ಯತೋಯೇತ್। ಮದ್ವಂಶಜಾಃ।-----------------------------------------------------------------------

-----------------------------------------------------------------------------------------

-----------------------------------------------------------------------------------------

ಪರಿಪಾಲಯಂಕ್ತ ತತ್ಸತ್ಯಾಪಿ ಪದ್ಮಯುಗಳಂ ಶಿರಸಾನಮಾಮಿ।

ಪಟ್ಟದ ಪರುವತಸ್ವಾಮಿಯವರ ಒಪ್ಪಿತಾ

## ಪತ್ರ - ೧೯ : ಅರಳಿಪೇಟೆಯ ತೋಟದದೇವರಮಠದ ತೋಟದಸ್ವಾಮಿಯವರಿಗೆ ಸ್ಥಳ-ಪರಸ್ಥಳದ ಶೆಟ್ರುಯಜಮಾನರು ಬರೆಸಿಕೊಟ್ಟ ದಾನಶಾಸನ ಪತ್ರ - ೧೮೨೭

ಶ್ರೀ

ಕವುದಿ ಚರದ ತೋಟಸ್ವಾಮಿಯವರ ಕರಸಂಜಾತರಾದಂತ
ಚನ್ನಬಸವಸ್ವಾಮಿಗಳ ಕರಕಮಲೋದ್ಭವರಾದಂತ ತೋಟಸ್ವಾಮಿಯವರಿಗೆ-

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೆ ॥ ಹರೇರ್ಲೀಲಾವರಾಹಾಶ್ಚ ದೌಷ್ಟ್ರದಂಡಸ್ವಘಾತುನಃ। ಹೇಮಾದ್ರಿಕಲಶಾಯ ತ್ರಿಧಾತ್ರಿ ಛತ್ರ ಶ್ರೀಯಂದಧೌ॥

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷಂಗಳು ೧೭೪೯ನೆಯ ವರ್ತಮಾನಕ್ಕೆ ಸಲುವ ಸರ್ವಜಿತ್ತುನಾಮಸಂವತ್ಸರದ ಮಾರ್ಗಶಿರ ಶುದ್ಧ ೧೦ ಬುಧವಾರ ಪುಣ್ಯಕಾಲದಲ್ಲೂ ಬೆಂಗಳೂರು ಅಮೃತಸಾಗರದ ಅರಳಿಪೇಟೆಗೆ ಬರುವಂತಾ ಭಾರುಮಾರ್ಗದ ವೈರುದಾರುಸ್ಥಳ-ಪರಸ್ಥಳ ಶೆಟ್ರು ಯಜಮಾನರು ಮುಂತಾದ ದೇಶದವರು ಬರೆಶಿಕೊಟ್ಟ ದಾನಶ್ಯಾಸನ ಕ್ರಮ ಏನೆಂದರೆ ಆದಾಗಿ ಧರ್ಮಾಂಬುಧಿ ಕೆರೆ ಕೋಡಿ ಬಳಿಯಲ್ಲೂ ನರಗುಂದ ಡಮಾಮಿ ಮುದುಕಪ್ಪನವರು ಮಠ ಕಟ್ಟಿಶಿ ಆ ಬಗೆ ಮಠ ನಿಮಗೆ ವಪ್ಪಿಶಿ (ಒಪ್ಪಿಸಿ) ಇರುವಂತಾ ಮಠಕ್ಕೆ ಪರಸ್ಥಳದವರು ಇಂದಾ ಕೊಡವದ್ದು ಅರಲೆ ನಗ ೨೦ಕ್ಕೆ ಕೊಳು ೧, ಈ ಬಗೆ ಕೊಳು ೧ಕ್ಕೆ ಪರಸ್ಥಳದವರು ಯಿಂದಾನಾಮಿ ರೂಪಾಯಿ ಚಂಹ ೧/೦ ಈ ಸ್ಥಳದಲ್ಲಿ ಕೊಳಲು ಮತ್ತು ಇಲ್ಲಿ ಇರಲು ಮಾಡಿಕೊಟ್ಟ ರೂ ನಗ ೨೦ಕ್ಕೆ ಕೊಳು ೧ ಈ ಬಗೆ ಕೊಳಿಗೆನಾಮಿ ರೂಪಾಯಿ ಚಂ.ಹ ೧/೦ ಈ ಪ್ರಕಾರಕ್ಕೆ ನಮ್ಮ ನಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ ನಮ್ಮೆ ನಮ್ಮ ಹಿರಿಹಿರಿ(ಯರಿ)ಗೆ ಧರ್ಮ ಬರುವ ನಿಮಿತ್ಯವಾಗಿ ತ್ರಿಕರಣ ತ್ರಿವಾಚದಲ್ಲೂ ಒಪ್ಪಿಶಿ ಬರೆಶಿ ಕೊಟ್ಟ ದಾನಶಾಸನ ಸಹಿ ಈ ದಾನ ಶ್ಯಾಸ(ನ)ಕ್ಕೆ ಆದಿತ್ಯಾಚಂದ್ರಾವನಿಲೋನಶ್ಚ ಜಾವೂರ್ಭೂಮಿರಾವೋ ಹಠದಯಂ ಯಮಶ್ಚ ಆಹಶ್ಚ, ರಾತ್ರಿಶ್ಚ ಉಖೇಚ ಸಂಧ್ಯೆಧರ್ಮಶ್ಚ ಜಾನಾತಿ ನರಶ್ಚ ವೃತ್ತಂ ದಾನಪಾಲನಯೋಮದ್ಯೆ ದಾನಾಶ್ರಯೋ ನೃಪಾಲ ನಂದಾನ ಸ್ವರ್ಗಮಮಾ ಪ್ನೋತಿ ಪಾಲನ ದಶ್ಚುತಂ ಪರಂ। ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ। ಪರದತ್ತಾಪಹಾರಿಣ ಸ್ವದತ್ತಂ। ನಿಷ್ಫಲಂ ಭವೇತ್॥ ಈ ಧರ್ಮಕ್ಕೆ ಯಾರು ನಿಘಾತ್ತ ಮಾಡಿದಾಗ್ಯೂ ಕಾಶಿಯಲ್ಲಿ ಗೋಹತ್ಯೆ ಮಾಡಿದ ಪಾಪಕ್ಕೆ ಹೋಗಲುಳ್ಳವರು. ಇವರ ಸಮ್ಮತದಿಂದ ಬರೆದಿರುತ್ತದೆ. ಶರ ಶ್ಯಾನುಭೋಗ ಲಕ್ಷ್ಮೀನಾರಾಯಣಯ್ಯನ ಸ್ವಹಸ್ತ ಬರಹ॥

## ಪತ್ರ - ೨೦ : ಸರ್ಪಭೂಷಣಮಠದ ಫಾಲಲೋಚನಸ್ವಾಮಿಗಳಿಗೆ ಹತ್ತೂ ಕುಲಬಾಂಧವರು ಒಪ್ಪಿಸಿದ್ದ ಸಮಾಖ್ಯಿ ಪತ್ರ - ೧೮೪೨

ಶ್ರೀಮತ್‌ಸಚ್ಚಿದಾನಂದ ನಿತ್ಯಪರಿಪೂರ್ಣ ಪರಂಜ್ಯೋತಿಪರಾತ್ಪರ ಪರಬ್ರಹ್ಮ
ಪರಮಾನಂದ ಸ್ವರೂಪರಾದಂಥಾ ಶಿಮದ್ಗುರು ಸರ್ಪಭೂಷಣ
ಶಿವಯೋಗೀಶ್ವರ ಸ್ವಾಮಿಗಳವರ ಕರಕಮಲ ಸಂಜಾತರಾದಂಥಾ
ಶ್ರೀ ಫಾಲಲೋಚನ ಶಿವಯೋಗೀಶ್ವರ ಸ್ವಾಮಿಯವರ ಪಾದಕ್ಕೆ

ನೆಲಮಂಗಲ ತಾಲ್ಲೂಕು ಗೊಲ್ಲಹಳ್ಳಿಯೊಳಗೆ ಇರುವಂಥಾವರು ಶೆಟ್ಟರ ಮುನಿಯಪ್ಪಾ, ವೀರಪ್ಪನವರ ರುದ್ರಪ್ಪ, ಲಿಂಗಪ್ಪಾ, ಹೇಮಾಜಪ್ಪ, ಲಿಂಗಣ್ಣ, ರುದ್ರಪ್ಪನವರ ವೀರಣ್ಣ, ಕಣಿವೆ ಕೆಳಗಳ ಮುನಿಯಪ್ಪಾ, ಮೈಲನಹಳ್ಳಿ ನಂಜಪ್ಪನ ಕೊಮಾರ ಚಿಕ್ಕಬಸಪ್ಪ, ಭೂಮಣ್ಣ, ಚಿಕ್ಕಲಿಂಗಪ್ಪನ ಕೊಮಾರ ರುದ್ರಪ್ಪ, ಮೈಲನಹಳ್ಳಿಯಲ್ಲಿ ಇರುವಂಥಾವರು. ಯಜಮಾನ್ ಸಿದ್ಧರಾಮಪ್ಪ, ಬೆತ್ತಿನಗೆರೆ ಲಿಂಗಣ್ಣ, ಶಾಮಣ್ಣ, ಕಲ್ಲುಪಾಳ್ಯದ ಚಿಕ್ಕಣ್ಣ, ಜೋಳಂಬಳ್ಳಿ ನಂಜಪ್ಪ, ಹಿರಿಯಣ್ಣ, ತಿಮ್ಮಪ್ಪಾ, ನಾಗಮ್ಮನ ಕೊಮಾರ ಸಿದ್ಧರಾಮಣ್ಣ, ಬೈರಶೆಟ್ಟಿಹಳ್ಳಿ ಒಳಗೆ ಇರುವಂಥಾವರು. ಕಳೇದಶಂಭಪ್ಪ, ಜಕ್ಕಪ್ಪನಮಗ ಹೊಸಳಪ್ಪ, ಹನುಮಂತಯ್ಯನ ಮಗ ಹನುಮಂತಪ್ಪಾ, ಅರ್ಜುನ ಬೆಟ್ಟಹಳ್ಳಿ ಒಳಗೆ ಇರುವಂಥಾವರು. ಹಂಚಿಪುರದ ಜ್ಯೋತೆಪ್ಪ, ರಕಮಾಚಪ್ಪನ ಮಗ ಗಂಗಣ್ಣ, ಮದುರೆ ಕೋಡಿಹಳ್ಳಿಯಲ್ಲಿ ಇರುವಂಥಾವರು. ಮಾದಪ್ಪಾ, ಹುಣಸಾಪುರದಹಳ್ಳಿ ವಳಗೆ ಇರುವಂಥಾವರು. ಜೋತೆಪ್ಪನಮಗ ಲಿಂಗಣ್ಣ, ಸಾಯಪನಹಳ್ಳಿ ಒಳಗೆ ಇರುವಂಥಾವರು ಕಳಸದ ನಾಗಪ್ಪ, ಬೆತ್ತಿನಗೆರೆ ಒಳಗೆ ಇರುವಂಥಾವರು ಕೊತ್ಕಪ್ಪನಮಗ ನಂಜುಂಡಯ್ಯ, ಚಿಕ್ಕಣ್ಣ, ಸಿದ್ಧಪ್ಪನಪಾಳ್ಯದಲ್ಲಿ ಇರುವಂಥಾ ತಿಮ್ಮಾಜಪ್ಪ, ತಿರುಮಲ ರಾಯರ ಪಾಳ್ಯದ ನಂಜುಂಡಯ್ಯ, ಬೊಮ್ಮಶೆಟ್ಟಿಹಳ್ಳಿಯಲ್ಲಿರುವ ಅಣ್ಣಾಜಪ್ಪನಮಗ ಅಣ್ಣಯ್ಯ, ಹೆಗ್ಗಡಗೆರೆಯೊಳಗೆ ಇರುವಂಥಾ ನಾಗಣ್ಣ, ನಾಯ್ಕನಹಳ್ಳಿಯಲ್ಲಿ ಇರುವಂಥಾ ತಾಯಪ್ಪನ ಕೊಮಾರ ಮಲ್ಲಯ್ಯ, ಬಾಳೆಯ್ಯನಮಗ ನಂಜುಂಡಯ್ಯ, ಹಾರೋಹಳ್ಳಿಯ ನಂಜಯ್ಯ, ಗುಡೇಮಾರನಹಳ್ಳಿಯ ಚತ್ರದ ನಂಜಯ್ಯ, ಚಿಕ್ಕಸೋಲೂರಲ್ಲಿರುವ ರಾಯಪ್ಪ, ರಾಮನಹಳ್ಳಿ ಗೊರೂರು ನಂಜುಂಡಯ್ಯ, ಮಾಸ್ತಿ ಮಲ್ಲಾಜಪ್ಪನ ಮೊಮ್ಮಗ ನಾಗಣ್ಣ, ರಾಣಪ್ಪ, ಪ್ರಭಣ್ಣ, ಮಲ್ಲಾರು ಒಳಗೆ ವಾರದಲಿಂಗಪ್ಪನ ಕೊಮಾರ ಬಾಳಪ್ಪ, ಅರಿಶಿನಕುಂಟೆ ನರಸಪ್ಪನ ಮಗ ನಂಜುಂಡಯ್ಯ, ಸಿದ್ಧಪ್ಪನ ಮಗ ನರಸಯ್ಯ, ಮೊದಲಕೋಟೆ ರಾಯಪ್ಪಾ, ಹೆನ್ನಾಗರದಲ್ಲಿ ಇರುವಂಥಾ ಶಿವಪ್ಪನವರ ಮಗ ಸಿದ್ಧಣ್ಣ, ಕರಿಬಸಪ್ಪ, ನಂಜುಂಡಯ್ಯ, ಮಾಯನಾಯಕನಹಳ್ಳಿ ಭೀಮಣ್ಣನ ಮಗ ನಂಜುಂಡಪ್ಪ, ಇನ್ನೂ ಸ್ಥಳ ಪರಸ್ಥಳದಲ್ಲಿ ಇರುವಂಥಾ ಹತ್ತೂ ಕುಲಬಾಂಧವರೂ ಸಹ ಬರೆದು ಒಪ್ಪಿಸಿದ ಸಮಾಖ್ಯದ ಕಾಗದ ಕ್ರಮ ಹ್ಯಾಗೆಂದರೆ-ಅದಾಗಿ ಶೋಭಕೃತ್ ಸಂವತ್ಸರದ ಕಾರ್ತಿಕ ಶುದ್ಧ ಗುರುವಾರ ೧ ರಲ್ಲಿ ಬೆಂಗಳೂರು ಬಳೇಬಾಗಿಲು ಬಳಿ ಇರುವ ತಮ್ಮ ಮಠಕ್ಕೆ ನಿಮ್ಮ ಪಾದದ ಬಳಿಗೆ ನಮ್ಮೆಲ್ಲರನ್ನು ಬರಮಾಡಿಕೊಂಡು ತಾವು ನಮ್ಮೆಲ್ಲರನ್ನು ಕೇಳಿದ ಸಂಗತಿ ಏನೆಂದರೆ-ಇದೇ ಬೆಂಗಳೂರು ಕೆಂಪುನೂಲು ನಂಜುಂಡಯ್ಯ ಎಂಬುವನು ನಿಮ್ಮ ಕುಲಸ್ತ ನಿಮ್ಮ ವಂಶದ ಗೋತ್ರ ಸೂತ್ರಾದಿಗಳೆ ನಡೆನುಡಿ ಮುಂತಾದ ಸಂಗತಿಗಳು ಯಾವತ್ತೂ ನಿಮ್ಮಗೆ ತಗಲುವಣೆಯಾಗಿ ಇದ್ದನಲ್ಲಾ. ಇದರ ಸಂಗತಿ ಏನು? ಇದರ ವಿವರ ನೀವು ಎಲ್ಲರು ಚೆನ್ನಾಗಿ ಹೇಳಬೇಕು ಎಂಬುದಾಗಿ ಅಪ್ಪಣೆ ಆದದ್ದಕ್ಕೆ ನಾವೆಲ್ಲರೂ ಅರಿಕೆ ಮಾಡಿಕೊಂಡದ್ದು ಏನೆಂದರೆ ಸದರಿ ನಂಜುಂಡಯ್ಯನು ನಮ್ಮ ಸೂತ್ರ-ಗೋತ್ರ ಮುಂತಾದ ನಡೆ-ನುಡಿ ಯಾವತ್ತೂ ನಮ್ಮ ಕುಲಸ್ತನೆ ಸರಿ. ಆದರೆ ಸುಮಾರು ೧೦೦ ವರುಷದ ಕೆಳಗೆ ಈತನ ತಾತ ರಾಮಣ್ಣನ ದಿವಸದಲ್ಲಿ ರಾಜೀತದವಾಂತ್ರದಲ್ಲಿ ಈತನ ಸಂಗಾತ ನಾಲ್ಕು ಮನೆಯವರಿಗೆ ಇವರ ಜಿಂದಗಿ ಮುಂತಾದ ದೇವರುಗಳು ಶಿಥಿಲವಾಗಿ ಹೋದ ಕಾರಣ ಇವರು ನಮ್ಮೆಲ್ಲರ ಹತ್ತೂ ಕುಲಕ್ಕೆ ಹೇಳಿಕೊಂಡು, ಎಂದಿನಂತೆ ಏಕೀಭವಿಸಿಕೊಂಡು ಇರುವುದಕ್ಕೆ ಅನುಕೂಲವಿಲ್ಲದೆ ಸದರಿ ತಮ್ಮಂತೆ ಇರುವ ನಾಲ್ಕಾರು ಮನೆಗಳಲ್ಲಿ ತೀರುವಳಿಗಳು ಕೊಡುವಳಿಗಳು ಮಾಡಿಕೊಂಡು ಇದುವರೆವಿಗೂ ಈ ಮೇರೆಗೆ ಅರಿಯದೆ ಇದ್ದ ಕಾರಣ ನಮ್ಮಲ್ಲಿ ಈತನೂ ಮುಂತಾದವರು ಸಮರಸದ ವಿಲ್ಲದೆ ಇದ್ದೇವೆ ಎಂಬುದಾಗಿ ಅರಿಕೆ ಮಾಡಿಕೊಂಡಿದ್ದಕ್ಕೆ ಪುನಃ ಅಪ್ಪಣೆಯಾದದ್ದೇನೆಂದರೆ-ಸದರಿ ನಂಜುಂಡಯ್ಯನ ತಾತ ರಾಮಣ್ಣನ ದಿವಸದ ಆದಿಯಾಗಿ ಇದುವರೆವಿಗೂ ನೀವು ಹತ್ತೂ ಕುಲಸ್ತರಿಗೆ ನಮ್ಮ ಹಾಲು ಅಹವಾಲು ಹೇಳಿಕೊಳ್ಳುವುದಕ್ಕೆ ಯಾವ ಅನುಕೂಲವೂ ಇಲ್ಲದ್ದರಿಂದ ಇದುವರೆವಿಗೂ ಹಾಗೇ ಪ್ರತ್ಯೇಕವಾಗಿ ನಡೆದು ಬಂದದ್ದು ಆಯಿತು. ಈವಾಗ ಸದರಿ ನಂಜುಂಡಯ್ಯ ಮುಂತಾದವರುಗಳು ನಿಮ್ಮ ಹತ್ತೂ ಕುಲಕ್ಕೆ ಶರಣಾಗಿ ನಿಮ್ಮಂತೆ ನಮ್ಮನ್ನೂ ಮಾಡಿಕೊಂಡು ಸಂರಕ್ಷಣೆ ಮಾಡಿಸಬೇಕು ಎಂಬುದಾಗಿ ಬೇಡಿಕೊಂಡರೆ ನೀವು ಹತ್ತೂ ಕುಲಸ್ತರೂ ನಿಮ್ಮಂತೆ ಸದರಿ ನಂಜುಂಡಯ್ಯ ಮುಂತಾದವರನ್ನು ಮಾಡಿಕೊಳ್ಳಬಹುದಷ್ಟೆ, ಎಂಬುದಾಗಿ ಅಪ್ಪಣೆ ಆದದ್ದಕ್ಕೆ ನಾವೂ ಹತ್ತೂ ಕುಲಸ್ತರು ಸ್ವಾಮಿ ಪಾದಕ್ಕೆ ಅರಿಕೆ ಮಾಡಿಕೊಂಡದ್ದೇನೆಂದರೆ-ಸದರಿ ಮೇರೆಗೆ ನಂಜುಂಡಯ್ಯ ಮುಂತಾದವರು ಬಂದು ಹೇಳಿಕೊಂಡ ತತ್ಕಾಲದಲ್ಲಿ ನಮ್ಮ ಕುಲಸ್ತರಾದ ನಾವೆಲ್ಲರೂ ಒಂದು ಬಿನ್ನಹ ಪತ್ರಿಕೆಯನ್ನು ನಮ್ಮ ಕುಲಗುರುಸ್ವಾಮಿಯವರ ಬಳಿಗೆ ಬರೆದುಕೊಂಡೂ. ಈ ಗುರುಸ್ವಾಮಿಯವರನ್ನ ಬರಮಾಡಿಕೊಂಡು ಇವರ ಸನ್ನಿಧಾನದ ಬಳಿಯಲ್ಲಿ ನಮ್ಮ ಕುಲಾಚಾರದ ಪದ್ಧತಿಗಳು ಇದ್ದಂತೆ ನಡೆಸಿ ಸದರಿ ನಂಜುಂಡಯ್ಯ

ಮುಂತಾದವರನ್ನು ನಮ್ಮಂತೆ ಮಾಡಿಕೊಳ್ಳುತ್ತೇವೆ ಎಂದು ಅರಿಕೆ ಮಾಡಿಕೊಂಡಲ್ಲಿ, ಪುನಃ ಅಪ್ಪಣೆಯಾದದ್ದು ಏನೆಂದರೆ-ಈವಾಗ ನೀವು ಹತ್ತೂ ಕುಲಬಾಂಧವರೂ ಈವತ್ತು ಕೂತಿದ್ದೀರಿ, ಸದರಿ ನಂಜುಂಡಯ್ಯ ಮುಂತಾದವರು ಹಾಜರು ಇದ್ದಾರೆ, ಈವಾಗಲೇ ನೀವು ಹೇಳಿದ ಪ್ರಕಾರ ನಿಮಗೆ ಈ ನಂಜುಂಡಯ್ಯ ಮುಂತಾದವರು ಶರಣಾಗತರಾಗಿ ಹೇಳಿಕೊಂಡರೆ ಸದರಿ ನೀವು ಹೇಳಿದ ಪ್ರಕಾರ ನಡೆಸಬಹುದಲ್ಲಾ ಎಂಬುದಾಗಿ ಅಪ್ಪಣೆಯಾದದ್ದಕ್ಕೆ ಈ ತಕ್ಷಣವೇ ನಾವು ಹತ್ತೂ ಜನವೂ ನಡೆಸುತ್ತೇವೆ ಎಂಬುದಾಗಿ ಅರಿಕೆ ಮಾಡಿಕೊಂಡ ಕಾರಣ ಈ ದಿನವೇ ಸದರಿ ನಂಜುಂಡಯ್ಯನು ಮುಂತಾದವರು ಬಂದು ನಾವು ಹತ್ತೂ ಕುಲಸ್ತರಿಗೂ ಸಹ ಶರಣಾಗತರಾಗಿ ಹೇಳಿಕೊಂಡದಕ್ಕೆ, ಈ ನಂಜುಂಡಯ್ಯನು ಮುಂತಾದವರಿಗೆ ಸ್ವಾಮಿ ಪಾದದ ಮುಕ್ತಾ ನಾವೆಲ್ಲರೂ ಅಭಯವನ್ನು ಕೊಟ್ಟು ಹೇಳಿ ಇರುವುದು ಏನೆಂದರೆ-ಸದರಿ ನಮ್ಮ ಕುಲ ಗುರುಸ್ವಾಮಿಯವರ ಬಳಿಗೆ ನಾವು ಹತ್ತೂ ಕುಲಸ್ತರೂ ಬಿನ್ನಹಾ ಪತ್ರಿಕೆಯನ್ನು ಬರೆದುಕೊಂಡು ಈ ಸ್ವಾಮಿಯವರನ್ನು ಬರಮಾಡಿಸಿ ತತ್ಕಾಲದಲ್ಲೆ ನಿಮ್ಮನ್ನು ಕರೆಸಿಕೊಂಡು ನಮ್ಮ ಕುಲಾಚಾರದ ಪದ್ಧತಿಪ್ರಕಾರಕ್ಕೆ ಪರಿಶುದ್ದಿಮಾಡ್ಸಿ ನಿಮ್ಮನ್ನ ನಮ್ಮಂತೆ ಮಾಡಿಕೊಳ್ಳುತ್ತೇವೆ ಎಂಬುದಾಗಿ ನಮ್ಮ ನಮ್ಮ ರಾಜಿಯಿಂದಾ ಬರೆಯಿಸಿ ಸ್ವಾಮಿ ಪಾದಕ್ಕೆ ಒಪ್ಪಿಸಿದ ಸಮಾಖ್ಯದ ಕಾಗದಾ ಸಹಿ-

೧. ಶೆಟ್ಟಿ ಮುನಿಯಣ್ಣನ ರುಜುವು-
೨. ರಾಮಪ್ಪನ ರುಜುವು-
೩. ರುದ್ರಪ್ಪನ ರುಜುವು-
೪. ನಿಂಗಪ್ಪನ ರುಜುವು-
೫. ಹನುಮಂತಪ್ಪನ ರುಜುವು-
೬. ಲಿಂಗಪ್ಪನ ರುಜುವು-
೭. ಮುನಿಯಪ್ಪನ ರುಜುವು-
೮. ಮೈಲನಹಳ್ಳಿ ಚನ್ನಾಜಪ್ಪನ ರುಜುವು-
೯. ಜಗಲಿಂಗಪ್ಪನಮಗ ರುದ್ರಣ್ಣನ ರುಜುವು-
೧೦. ಕಣಿವೆ ಕೆಳಗಳ ಮುನಿಯಪ್ಪನ ರುಜುವು-
೧೧. ರುದ್ರಪ್ಪನವರ ಮಗ ಈರಣ್ಣನ ರುಜುವು-
೧೨. ಬೊಮ್ಮಣ್ಣನ ರುಜುವಿಗೆ ರುದ್ರಪ್ಪನ ಬರಹ-
೧೩. ಮೈಲನಹಳ್ಳಿ ಲಿಂಗಣ್ಣನ ರುಜುವು-
೧೪. ಮೈಲನಹಳ್ಳಿ ತಿಮ್ಮಪ್ಪನ ರುಜುವು-
೧೫. ಮೈಲನಹಳ್ಳಿ ನಾಗಮ್ಮನ ಮಗ ಸಿದ್ಧರಾಮಪ್ಪ-
೧೬. ಮೈಲನಹಳ್ಳಿ ಜಯಣ್ಣನ ರುಜುವು-
೧೭. ಕಲ್ಲುವಾನದ/ಕಲ್ಲುಪಾಳ್ಯದ ಚಿಕಣ್ಣನ ರುಜುವಿಗೆ ಗೊರೂರು ನಂಜುಂಡಪ್ಪನ ಬರಹ-
೧೮. ಜೋಳಂಬಳ್ಳಿ ನಂಜಪ್ಪನ ರುಜು-
೧೯. ಕೆಂಗಲ್ಲ ಹಿರಿಯಣ್ಣನ ರುಜು-
೨೦. ಬೈರಶೆಟ್ಟಿ ಪಾಳ್ಯದ ಸಾಂಭಪ್ಪನ ರುಜು-
೨೧. ಬೈರೇನಹಳ್ಳಿ ರಾಮಪ್ಪನ ರುಜು-
೨೨. ಮೊದಲಕುಪ್ಪೆ ರಾಯಪ್ಪನ ರುಜುವಿಗೆ ಲಿಂಗಣ್ಣನ ಬರಹ-
೨೩. ಮಾಯನಾಯ್ಕನಹಳ್ಳಿ ಮಲ್ಲಣ್ಣ-
೨೪. ಮಾಯನಾಯ್ಕನಹಳ್ಳಿ ಬಸಃಪ್ಪನ ಮಗ ನಂಜುಂಡಯ್ಯನ ರುಜು -
೨೫. ರಾಮನಹಳ್ಳಿ ನಂಜಯ್ಯನ ರುಜು-
೨೬. ರಾಮನಹಳ್ಳಿ ಪುಟ್ಟಯ್ಯನ ರುಜು-
೨೭. ಚತ್ರದ ನಂಜಯ್ಯನ ರುಜು-
೨೮. ಯನ್ನಾಗರದ ಕರಿಬಸಪ್ಪನ ರುಜು-
೨೯. ಯನ್ನಾಗರದ ಸಿದ್ಧಣ್ಣನ ರುಜುವಿಗೆ ಲಿಂಗಣ್ಣನ ಬರಹಾ-
೩೦. ಯನ್ನಾಗರದ ನಂಜುಂಡಯ್ಯನ ರುಜು-
೩೧. ಚಿಕ್ಕಸೋಲೂರಿನ ರಾಮಪ್ಪನ ರುಜು-
೩೨. ಭೀಮಣ್ಣನ ಮಗ ನಂಜುಂಡಯ್ಯನ ರುಜು-
೩೩. ಕೋಡಿಹಳ್ಳಿ ದೊಡ್ಡಯ್ಯನ ರುಜು-
೩೪. ಅರ್ಜುನ ಬೆಟ್ಟಹಳ್ಳಿಯ ಜ್ಯೋತೆಪ್ಪನ ರುಜುವಿಗೆ ನಂಜುಂಡಯ್ಯನ ಬರಹ-
೩೫. ಅರ್ಜುನ ಬೆಟ್ಟಹಳ್ಳಿ ಗಂಗಣ್ಣನ ರುಜು-
೩೬. ಯಂಗಂಡಗೆರೆ ನಾಗಣ್ಣನ ರುಜು-
೩೭. ಬೂದಿಗೆರೆ ಪಾಳ್ಯದ ಕೊಮಾರಯ್ಯ-
೩೮. ಬೆತ್ತಿಂಗೆರೆ ಚಿಕ್ಕಣ್ಣನ ರುಜು-
೩೯. ಬೆತ್ತಿಂಗೆರೆ ನಂಜುಂಡಯ್ಯನ ರುಜು-
೪೦. ಪಾಳ್ಯದ ನಂಜುಂಡಯ್ಯನ ರುಜು
೪೧. ಬೊಮ್ಮಶೆಟ್ಟಿ ಅಣ್ಣಯ್ಯನ ರುಜು-
೪೨. ಸಾಯಪ್ಪನಹಳ್ಳಿ ಗಂಗಪ್ಪನ ರುಜು-
೪೩. ಸಾಯಪ್ಪನಹಳ್ಳಿ ಹನುಮಂತಯ್ಯನ ರುಜು-
೪೪. ಸಾಯಪ್ಪನಹಳ್ಳಿ ಹನುಮಂತಪ್ಪನ ರುಜು-
೪೫. ರಾಮನಹಳ್ಳಿ ಗೊರೂರು ನಂಜುಂಡಪ್ಪನ ರುಜು-
೪೬. ರಾಣಪ್ಪನ ರುಜು-
೪೭. ಮಲ್ಲಾರಯ್ಯನ ರುಜು-
೪೮. ಮಾಸ್ತಿ ಮಲ್ಲಾಜಪ್ಪನ ರುಜು-
೪೯. ಹುಣಸೇಮಾರನಹಳ್ಳಿ ನಿಂಗಣ್ಣನ ರುಜುವಿಗೆ ರುದ್ರಯ್ಯನ ಬರಹ-
೫೦. ಅರಿಸಿನಕುಂಟೆ ನಂಜುಂಡಯ್ಯನ ರುಜು-
ರುದ್ರಯ್ಯನ ಬರಹ

## ಪತ್ರ - ೨೧ : ಸರ್ಪಭೂಷಣಮಠದ ಫಾಲಲೋಚನಸ್ವಾಮಿಗಳಿಗೆ ಕ್ಲೋಸ್‌ಪೇಟೆಯ ಶೆಟ್ಟಿಯಜಮಾನರುಗಳು ಒಪ್ಪಿಸಿದ್ದ ದಾನಶಾಸನಪತ್ರ - ೧೮೪೪

ಶ್ರೀ

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥ ಶ್ರೀಮದವಿರಳಾನಂದ ಬಂಧುರ ಸಮಸ್ತ ತತ್ವತಾತ್ವಿಕ ರಹಸ್ಯೋಪದೇಶ ಚರಣ ಚಾತುರೀ ಧುರೀಣ ನಿರಾಭಾರಿ ಗುರುಕುಲ ಕೇತನಾಯಮಾನ ಶ್ರೀ ಸ್ವತಂತ್ರ ಸಿದ್ಧಲಿಂಗಾರ್ಯ ಪರಾನ್ವಯಾನ್ವಿತ ಶ್ರೀಮದ್ಗುರು ಸರ್ಪಭೂಷಣ ಶಿವಯೋಗೀಶ್ವರ ಸ್ವಾಮೀನಾಂ ಕರಕಮಲ ಸಂಜಾತರಾದಂತಾ ಶ್ರೀಮನ್‌ಮಹಾ ಫಾಲಲೋಚನ ಶಿವಯೋಗೀಶ್ವರ ಸ್ವಾಮಿಯವರುಗಳಿಗೆ-

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಗಳು ೧೭೬೬ನೇ ವರ್ಷಮಾನಕೆ ಸಲ್ಲುವ ಕ್ರೋಧಿನಾಮ ಸಂವತ್ಸರದ ಆಶ್ವಿಜ ಶುದ್ಧ ೭ ಗುರುವಾರ ಪುಣ್ಯಕಾಲದಲ್ಲೂ ಕುಲೋಸುಪೇಟೆ ಶೆಟ್ರು ಯಜಮಾನರು ಮುಂತಾದ ಸ್ಥಳ ಪರಸ್ಥಳದ ಭಕ್ತರುಗಳು ತಮ್ಮ ತಮ್ಮ ಭಕ್ತಿಪೂರ್ವಕವಾಗಿ ಬರಹಿಶಿ ಒಪ್ಪಿಶಿದ ದಾನಶಾಸನ ಕ್ರಮ ಎಂತೆಂದರೆ ॥ ಅದಾಗಿ ॥ ಬೆಂಗಳೂರು ಬಳೆ ಬಾಗಿಲು ಉತ್ತರ ದಿಗ್ಭಾಗದ ದೊಡ್ಡಕೆರೆ ಬಳಿಯಲ್ಲೂ ಇರುವ ತಮ್ಮ ಖಾಸಾ ಮಠಕ್ಕೆ ದೀಪಾರಾಧನೆ ದಾಸೋಹ ಮುಂತಾದ ಸೇವೆ ನಡೆಯತಕ್ಕಬಗ್ಗೆ, ನಮ್ಮ ನಮ್ಮ ಭಕ್ತಿಯಿಂದ ಒಪ್ಪಿ ಬರೆಸಿಕೊಟ್ಟಿರುವ ದಾನಶಾಸನ ವಿವರ ವರುಷಂಪ್ರತಿ ವರ್ಷದಲ್ಲಿ ನಮ್ಮ ನಮ್ಮ ಶಕ್ತ್ಯಾನುಸಾರವಾಗಿ ನಾವು ಸ್ವದಸ್ತೂರು ರುಜುವು ಹಾಕಿಕೊಟ್ಟಿರುವ ತಪಶೀಲು ಪ್ರಕಾರಕ್ಕೆ ಸರ್‍ವರುಗಳೂ ಸ್ವಾಮಿಗಳವರ ಶಿಷ್ಯ ಪಾರಂಪರ್ಯ ನಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ ಸಲ್ಲಿಸುತ್ತಾ ಬರುವೆವು. ಸ್ವಾಮಿಗಳವರು ಸ್ವಧರ್ಮ ಆಚರಣೆಯಿಂದ ಲಿಂಗಪೂಜೆ, ಜಂಗಮ ದಾಸೋಹ ಮಾಡಿಕ್ಕೊಂಡು ನಮ್ಮ ವಂಶಪಾರಂಪರ್ಯಕ್ಕೆ ಕಲ್ಯಾಣ ಚಿಂತಿಸುತ್ತಾ ಪೂಜ್ಯರಾಗಿ ಇರಬೇಕೆಂಬುದಾಗಿ ನಮ್ಮ ನಮ್ಮ ಭಕ್ತಿಪೂರ್ವಕವಾಗಿ ಬರೆಶಿ ಒಪ್ಪಿಶಿದ ದಾನಶಾಸನ ಸಹಿ. (ಇಂಥಾ ದಾನಶಾಸನಕ್ಕೆ ಧರ್ಮ ಸಾಕ್ಷಿಯ ಶ್ಲೋಕ ಬರೆದಿದೆ.)

ಇವರುಗಳು ಸಮ್ಮತಿಯಿಂದಾ ಬರೆದದ್ದು-ದಕ್ಷಿಣ ಪಿನಾಕಿಮುಗಳೂರು ಕಪನಿಪತಪ್ಪ ಆರಾದ್ಯರ ಮುದ್ವೀರಪ್ಪ-ಮುದ್ವೀರಪ್ಪನ ಸ್ವದಸ್ತೂರು ಬರಹ - (ಇದಕ್ಕೆ ಅನೇಕರು ರುಜು ಮಾಡಿದ್ದಾರೆ.)

೧. ಶ್ರೀ ಶೆಟ್ಟಿ ಸಿದ್ದಲಿಂಗಪ್ಪ ಶೆಟ್ರು ರುಜುವು-
೧. ಶ್ರೀ ದಾನಪ್ಪನವರ ರುಜುವು ಭಕ್ತಿ-
೧. ಶ್ರೀ ವೀರಶೆಟ್ಟರ ರುಜುವು-
೧. ಶ್ರೀ ರೇವಣ್ಣನವರ ರುಜುವು-
೧. ಶ್ರೀ ಈರಣ್ಣನ ರುಜುವು-
೧. ಶ್ರೀ ಚನ್ನವೀರಪ್ಪನವರ ನಂಜುಂಡಯ್ಯನವರ ರುಜುವು-
೧. ಶ್ರೀ ರಾಚೂಟಪ್ಪನವರ ರುಜುವು-
೧. ಶ್ರೀ ಅರಳೇಪೇಟೆ ಚನ್ನಪ್ಪಶೆಟ್ಟರ ರುಜುವು-
೧. ಶ್ರೀ ಪಸಾರಿ ನಂಜುಂಡಪ್ಪನ ರುಜುವು-

೧. ಶ್ರೀ ಅರಳೇಪೇಟೆ ಹುಚ್ಚವೀರಯ್ಯನ ರುಜುವು-
೧ ಶ್ರೀ ಶಂಕರಪ್ಪನವರ ರುಜುವು-
೧. ಶ್ರೀ ವಸಳಯ್ಯನ ರುಜುವು
೧. ಶ್ರೀ ಶಿವಣ್ಣನ ರುಜುವು-
೧. ಶ್ರೀ ಸಿದ್ದಪ್ಪನ ರುಜುವು-
೧. ಶ್ರೀ ಹೈಜೂರು ಚಿಕ್ಕೀರಣ್ಣನ ರುಜುವು-
೧. ಶ್ರೀ ಹೈಜೂರು ಬಳೆಮಲ್ಲಸೆಟ್ಟರ ರುಜುವು-
೧. ಶ್ರೀ ಚನ್ನಮಲ್ಲಯ್ಯನ ರುಜುವು-

## ಪತ್ರ - ೨೨ : ಮನೆವಾರ್ತೆಪೇಟೆಯ ಶಂಕರದೇವರಮಠಕ್ಕೆ ಅರಳೆಪೇಟೆಯ ಶಂಕರಪ್ಪನವರ ಮನೆತನದವರು ನೀಡಿರುವ ದಾನ-ಧರ್ಮಗಳ ವಿವರಣಾ ಪತ್ರ-೧೯೨೭

ಸನ್ ೧೯೨೭ನೇ ಇಸವಿ ಡಿಸೆಂಬರ್ ೨೧ ರಲ್ಲೂ ಬೆಂಗಳೂರು ಸಿಟಿ ಮನೆವಾರ್ತೆಪೇಟೆ ಶಂಕರದೇವರ ಮಠದಲ್ಲಿ ಸಮಾದಿಸ್ತರಾಗಿರುವ ನಮ್ಮ ಮನೆತನಕ್ಕೆ ಗುರುಗಳಾಗಿರುವ ಶಂಕರ ಸ್ವಾಮಿಯವರ ಗದ್ದುಗೆಗೆ ಇದೇ ಸಿಟಿ ಅರಳೆಪೇಟೆಯ ಮಂಡಿ ಶಂಕರಪ್ಪನವರ ಮಕ್ಕಳು ೧ನೇ ಶಿವಪ್ಪ ೨ನೇ ಬಸಪ್ಪ ಬರೆಯಿಸಿಕೊಟ್ಟ ಭೂದಾನ ಪತ್ರದ ಕ್ರಮವೇನೆಂದರೆ-ನಮ್ಮಗಳ ತಂದೆಯವರಾದ ಶಂಕರಪ್ಪನವರು ಸದರೀ ಮಠದಲ್ಲಿ ನಡೆಯುವ ದೇವತಾರಾಧನೆಯ ಮತ್ತು ಅತಿಥಿ ಅಭ್ಯಾಗತರುಗಳಿಗೆ ಆದರಣೆ ಬಗ್ಗೆ ಉಪಯೋಗಾರ್ಥವಾಗಿ ಮಠಾಧಿಪತಿಗಳ ಕ್ರಯ ಭೋಗ್ಯ ವಗೈರೆ ಪರಭಾರೆ ಮಾಡಲು ಹಕ್ಕಿಲ್ಲದಂತೆ ೧೮೬೬ನೇ ಇಸ್ವಿ ಜೂನ್ ೬ರಲ್ಲು ಬೆಂಗಳೂರು ಸಬ್‌ರಿಜಿಸ್ಟ್ರಾರ್‌ರವರ ಆಫೀಸು, ಒಂದನೇ ಬುಕ್ ೨೫ನೇ ವಾಲ್ಯುಂ ೨೧೪ ರಿಂದ ೨೧೭ರ ವರೆಗಿನ ಪುಟಗಳಲ್ಲಿ ೩೦೭೬ನೇ ನಂಬರದಾಗಿ ರಿಜಿಸ್ಟರ್ ಆಗಿರುವ ದಸ್ತವೇಜು ಮೂಲಕ ಸಾಣೇಗುರವಿನಹಳ್ಳಿ ಗ್ರಾಮದ ಖುಷ್ಕಿ ೫ ಎಕರೆ ೧೫ ಗುಂಟೆಯುಳ್ಳ ಜಮಿನನ್ನು ದಾನವಾಗಿ ಕೊಟ್ಟಿರುವುದು ಸರಿಯಷ್ಟೆ. ಸದರಿ ಧರ್ಮವನ್ನು ವೃದ್ದಿಪಡಿಸುವುದಕ್ಕೂ ನಮ್ಮ ಮತ್ತು ನಮ್ಮ ವಂಶೀಯರ ಅಭಿವೃದ್ಧಿಗಾಗಿಯೂ ನಮ್ಮಗಳ ತಂದೆಯವರಾದ ಶಂಕರಪ್ಪನವರು ಬೆಂಗಳೂರು ಸಬ್ ರಿಜಿಸ್ಟ್ರಾರ್ ಆಫೀಸು ೧೮೮೦ನೇ ಇಸ್ವಿ ನವೆಂಬರ್ ೧೧ರಲ್ಲಿ ಮರ್ಕುಂ ಒಂದನೇ ಬುಕ್ ೧೦೨ ವಾಲ್ಯುಂ ೯೬-೯೭ನೇ ನಂಬರದಾಗಿ ರಿಜಿಸ್ಟರ್ ಆಗಿರುವ ದಸ್ತಾವೇಜು ಮೂಲಕ ಚಿಂತನಪಲ್ಲಿ ಸೀತಾರಾಮಯ್ಯನವರಿಂದ ಕ್ರಯಕ್ಕೆ ಪಡೆದು ತಹಲ್ ನಮ್ಮಗಳ ಸ್ವಾದಿನಾನುಭವದಲ್ಲಿರುವ ಇದೇ ಸಿಟಿ ಹಳೇ ತರಗುಪೇಟೆಯಲ್ಲಿ ಪೂರ್ವಕ್ಕೆ ನಮ್ಮ ಅಂಗಡಿ, ಪಶ್ಚಿಮಕ್ಕೆ ಕಾಡು ಮಲ್ಲಪ್ಪನವರ ಅಂಗಡಿ, ದಕ್ಷಿಣಕ್ಕೆ ರೋಡು, ಉತ್ತರಕ್ಕೆ ಹನುಮಂತಯ್ಯನ ಅಂಗಡಿ ಈ ಮಧ್ಯೆ ಮುನಿಸಿಪಲ್ ಮಾಜಿ ೩ ಹಾಲಿ ೪ನೇ ನಂಬರಾಗಿರುವ ಪೂರ್ವ ಪಶ್ಚಿಮಕ್ಕೆ ೪ ಗಜ ಉತ್ತರ ದಕ್ಷಿಣ ೬ ಗಜ ಅಳತೆಯುಳ್ಳ ನಿವೇಶನದಲ್ಲಿ ಕಟ್ಟಿರುವ ಮಳಿಗೆ ಅಂಕಣಗಳು ೮, ಮುಂದಿನ್‌ವಪ್ಪಾರು ಸಹವುಳ್ಳ ನಾಲ್ಕುಸಾವಿರ ರೂಪಾಯಿ ಅಂದಾಜು ಕಿಮ್ಮತ್ತಿನ ಅಂಗಡಿಯನ್ನು ಈ ಕೆಳಗೆ ನಮೂದಿಸಿರುವ ಷರತ್ತುಗಳಿಗೆ ಒಳಪಡಿಸಿ ದಾನವಾಗಿ ಕೊಟ್ಟಿರುತ್ತೆ. ಈ ಸ್ವತ್ತನ್ನು ಬಾಡಿಗೆ ವಗೈರೆ ಕೊಡುವುದಕ್ಕೂ ಇದರಿಂದ ಬರತಕ್ಕ ಬಾಡಿಗೆ ಉತ್ಪತ್ತಿಯಿಂದ ಮೇಲ್ಕಂಡ ಮಠದ ಹೂವಿನ ತೋಟಕ್ಕೆ ಅಭಿವೃದ್ಧಿ ಮಾಡುವುದಕ್ಕೆ ತಿಂಗಳಿಗೆ ಎಂಟು ರೂಪಾಯಿಯಂತೆ ತೊಂಬತ್ತಾರು ರೂಪಾಯಿಗಳನ್ನು ಪ್ರತಿ ಸಂವತ್ಸರದ ಶ್ರಾವಣ ಮಾಸದಲ್ಲಿ ಮೇಲ್ಕಂಡ ಗದ್ದುಗೆಯಲ್ಲಿ ನಡೆಯುವ ಆರಾಧನೆ ಮತ್ತು ಪಾದಪೂಜೆ ಇವುಗಳ ಖರ್ಚಿಗಾಗಿ ನೂರು ರೂಪಾಯಿಗಳನ್ನು ಉಪಯೋಗಿಸುತ್ತಾ ಬರುವುದಕ್ಕೂ ಈ ನೂರತೊಂಬತ್ತಾರು ರೂಪಾಯಿಗಳನ್ನು ಜಾತ  ಬಾಕಿ ಮೊಬಲಗನ್ನು ಅಂಗಡಿ ರಿಪೇರಿ ಖರ್ಚು, ಕಂದಾಯ ಸಹ ಹೋಗಲಾಗಿ ನಿಲ್ಲುವ ಮೊಬಲಗನ್ನು ನಮ್ಮ ಪೈಕಿ ಬಸಪ್ಪನಾದ ನಾನು ಜೀವಂತನಾಗಿರುವವರೆಗೂ ನನಗೆ ಇತರ ಧರ್ಮಕಾರ್ಯಕ್ಕೆ ಉಪಯೋಗಿಸಲು ಒಳಪಟ್ಟಿರುತ್ತೆ. ನಮ್ಮಗಳ ಅನಂತರ ಕಂದಾಯ ರಿಪೇರಿ ಖರ್ಚುಗಳು ಸಹ ಜಾತ ಬಾಕಿವಿಶಿಷ್ಟ ಮೊಬಲಗಿಗೂ ಮೇಲೆ ಉದಾಹರಿಸಿರುವ ಧರ್ಮಕಾರ್ಯಕ್ಕೋಸ್ಕರವೇ ಉಪಯೋಗಿಸಬೇಕು. ನಮ್ಮಗಳ ನಂತರವೂ ನಮ್ಮ ವಂಶೀಯರೇ ಮೇಲ್ಕಂಡ ಧರ್ಮಕಾರ್ಯವನ್ನು ನಡೆಸದೇ ಅಶ್ರದ್ಧೆ ಮಾಡಿದಲ್ಲಿ ಆಗ್ಯೆ ಇರಬಹುದಾದ ಸದರಿ ಮಠದಲ್ಲಿ ಉತ್ತರಾಧಿಕಾರಿಗಳೇ ಮೇಲೆ ನಮೂದಿಸಿರುವ ಧರ್ಮಕಾರ್ಯವನ್ನು ನಡೆಸಲು ಉಪಯೋಗಿಸುತ್ತಾ ಬರಬೇಕು. ನಮ್ಮ ವಂಶೀಯರೇ ಆಗಲಿ ಅಥವಾ ಮಠಕ್ಕೆ ಬರತಕ್ಕಂತ ಉತ್ತರಾಧಿಕಾರಿಯಾಗಲೀ ಮೇಲ್ಕಂಡ ಸ್ವತ್ತನ್ನು ಯಾವ ವಿಧದಲ್ಲಿಯೂ ಪರಭಾರೆ ಮಾಡುವುದಕ್ಕೂ ಅಧಿಕಾರ ಇರುವುದಿಲ್ಲ ಎಂಬುದಾಗಿ ನಾವು ನಮ್ಮ ಸಂತೋಷದಿಂದ ಬರೆಸಿಕೊಟ್ಟ ಭೂದಾನ ಪತ್ರ -

ಶಂಕರಪ್ಪನಮಗ ಶಿವಪ್ಪನ ರುಜು
ಶಂಕರಪ್ಪನ ಮಗ ಬಸಪ್ಪನ ರುಜು

ಸಾಕ್ಷಿಗಳು :
೧. ಗುರುಲಿಂಗ ಶಾಸ್ತ್ರಿ ನಂಜೇದೇವರಮಠ
೨. ಎಂ. ನಂಜುಂಡಯ್ಯ
ಬಿಕ್ಕಲಂ. ಚನ್ನಪಟ್ಟಣದ ರಂಗರಾವ್. ಸೀಗೆಬೇಲಿ. ಬೆಂಗಳೂರು.

## ಪತ್ರ - ೨೩ : ಸುಂಕೇನಹಳ್ಳಿಯ ಮೇಲಿನ ಮಠಕ್ಕೆ ಸಂಬಂಧಪಟ್ಟ ಪ್ರಥಮ ದಾಖಲೆ ಪತ್ರ-೧೮೦೪

ಶ್ರೀ

ದೆ

ರಕ್ತಾಕ್ಷಿ ಸಂವತ್ಸರದ ಆಶ್ವೀಜ ಶು ೫ ಲ್ಲು ಶ್ರೀ
ಮತ್ತು ಸುಭೆದಾರ್ರು ಮಧ್ವರಾಯರವರ।
ದೊಡಪೆಟೆ ಶಿದ್ದಪ್ಪ ಶೆಟ್ರಗೆ। ಬರೆಶಿಕೊಟ ಕೈ
ತೊಟದ ಸಾಗುವಳಿ ವುತ್ರಾ! ಅದಾಗಿ। ನೀವು ಮಾಡಿ
ಕೊಂಡು ಯಿರುವ ದೊಡಬಸವಂಣನ ಗುಡಿ
ಬಳಿಯಲ್ಲಿರೊ ತೊಟ ೧ ಕ್ಕೆ ಬೀಜವರಿ ೨ ಕೆ।
ವರುಷ ೧ ಕ್ಕೆ ಕಂದಾಯ ಕಂ। ಗುಂ ॥ ೩ಯ
ಂಟ್ಟು ಹಣ ಮೊಕರರು ಮಾಡಿಸಿ ಕೊಟು ಯಿ
ರುವದರಿಂದಾ। ಯಿಾ ಮೆರಿಗೆ । ಕಂದಾ
ಯವಂನ್ನು ವರುಷಂ ಪ್ರತ್ತಿಯಲ್ಲೂ
ಸರಕಾರಕ್ಕೆ ತೆತ್ತುಕೊಂಡು । ತೊಟದಲ್ಲಿ ಕೀಳ್
ಪೈರು ಹುವಿನಗಿಡ ಮುಂತ್ತಾದ್ದು ಹಾಕಿಶಿ ಕೊಂ
ಡು। ನೆಂಮ್ಮಧಿಯಲ್ಲಿ ಯಿರುವದೂ ಯಂ
ದು ಬರೆಶಿಕೊಟ್ಟ ಕೈ ತೊಟದ ಸಾಗುವಳಿ ವುತ್ರಾ
ಸಹೀ॥ ರುಜು ಶ್ರೀರಾಮ

## ಪತ್ರ - ೨೪ : ಸುಂಕೇನಹಳ್ಳಿಯ ಮೇಲಿನಮಠಕ್ಕೆ ಸಂಬಂಧಪಟ್ಟ ಗೊತ್ತುವಳಿಪತ್ರ - ೧೮೭೪

ಸನ್ ೧೮೭೪ನೇ ಯಿಸವಿ ಜೂನ್ನು ತಾರಿಕು ೧೭ನೇ ಮುಕಾಬತು ಭಾವಸಂವತ್ಸರದ ಅಧಿಕ ಆಷಾಢ ಶುಧದಲ್ಲೂ ಶ್ರೀಮತ್ತು ಬೆಂಗಳೂರು ದೊಡಪ್ಯಾಟೆ ಚಿಕಂಣಶೆಟ್ರು ಕೊಮಾರ ಗುರುಬಶೆಟ್ಟರಿಗೆ ಬೆಟಹಳ್ಳಿ ವೀರೈಯನಮಗ ವೀರಭದ್ರೈಯನು ಬರಸಿಕೊಟ ಕರಾರುಯೆನಂದ್ರೆ-ಅದಾಗಿ-ಯಿದೆ ಬೆಂಗಳೂರು ದೊಡಬಸವೇಶ್ವರನ ದೆವಸ್ತಾನಕ್ಕೆ ಪಶ್ಚಿಮದಲ್ಲಿ ಯಿರುವ - ನಿಂಮ್ಮ ಹಿರಿಯರು ಕಟಿಸಿಯಿರುವ ಮಟದಲ್ಲಿ ನೀವೂ ಯಿದಿನ- ನಂನ ಗೊತ್ತುಮಾಡಿ ಯಿಟುಯಿರುವದೆನೆಂದರೆ ಸದರಿಮಟಕೆ ಅತಿಥಿ-ಅಭ್ಯಾಗತ್ತರು ಯಾರು ಬಂದಾಗ್ಯೂ ಅಗಣೆ ವಿಭೂತಿ ಕೊಟುಕೊಂಡು ಮಟದ ಪವಳಿ-ಬೆಲಿ-ವಗೈರೆಯಾವತ್ತೂ ದುರಸ್ತು ಮಾಡಿಕೊಂಡು ಸದರಿ ಮಠಕ್ಕೆ ಸೆರಿದ ಹೊಲವಂನ್ನು ನಾನೆ ಮಾಡಿಕೊಂಡು-ಆದ ದವಸದಲ್ಲಿ-ಯರಡು ಭಾಗದವಸಾ ನಾನು ತ್ತೆಗೆದುಕೊಂಡು - ವಂದು ಭಾಗದವಸಾನಿಂಮಗೆ ಕೊಟುಕೊಂಡು ಬರಲುಳವನೂ-ಸದರಿ ಹೊಲದ ಜೊಡಿ ಸರಕಾರಕೆ ನೀವೆ ಕೊಡತಕ್ಕದು- ಸದರಿ ಮಟಕೆ ಸೆರಿದ ತೊಪಿನ ವುಸ್ತುವಾರಿ ನಾನೆ ನೊಡಿಕೊಂಡು ತೊಪಿನಲಿ ಮರ ಮುಟು ವಗ್ಯೆರೆ ಕಡಿಯದೆ-ವುಸ್ತುವಾರಿಯಿಂದಾ ಯಿರತಕ್ಕವನ್ನು-ಹಾಗೆ ವಂದು ವ್ಯಾಳೆ ನಿಂಮಗೆ ತ್ತಿಳಸದೆ-ನಾನು ಮರಗಳನೆನಾದರು ಕಡದೆ ಆದ್ರೆ ತಾವು ಯೆನು ಹೆಳಿದಾಗ್ಯೂ ನಷ್ಟ ಬಾಧ್ಯತೆಗೆ ನಾನು ವಳಪಡುತ್ತೆನೆ-ಮತ್ತು ತಂಮ್ಮ ಆಗ್ನೆ ಮ್ಯಾರಿಗೆ ನಡದು ಕೊಂಡು ಹೊಗಲುಳವನ್ನು - ಹಾಗೆ ನಿಂಮ್ಮ ಆಗ್ನೆಗೆ ವಿರೋಧವಾಗಿ ನಡೆದೆ ಆದ್ರೆ-ಆ ತ್ತಕ್ಷಣದಲೆ ಬಿಂನ ತಕರಾರು ಹರಕತ್ತು ಹೆಳದೆ - ಸದರಿ ನಿಂಮ್ಮ ಮಟವೂ-ಯಿದಕೆ ಸೆರಿದ ಹೊಲ-ತೊಪ್ಪು-ವಗ್ಯೆರೆ ಯಾವತ್ತಂನ್ನು ನಿಂಮ್ಮಿಗೆ ವಪಿಸಿ ಹೊಗಲುಳವನೂ-ಸದರಿಮಟ-ಹೊಲಾ - ತೊಪೂ-ವಗ್ಯೆರೆ-ಮ್ಯಾಲೆ ನಂನ್ನ ಹಕದಾರಿಯೆನು ಯಿರುವುದಿಲವೆಂಬದಾಗಿ ನಂನ ಕುದು ರಾಜಿಯಿಂದಾ ವಪಿ ಬರಸಿಕೊಟ ಕರಾರು ಸಹಿ-

ಯಿ ( ) ಜೋಳಿಗೆ ಗುರುತ್ತು ವೀರೈಯ್ಯನ ಮಗ ವೀರಭದ್ರೈಯ
ಆಕಿದ ರುಜುವಿಗೆ। ಶ್ಯಾಂ। ನಂಜಪ್ಪನ್ನ ಬರಹ

ಯಿದಕೆ ಸಾಕ್ಷಿಗಳು
। ಶ್ಯಾಂ। ನಂಜಪ್ಪನ್ನ ಸಾಕ್ಷಿ
। ಚೈವು ರುದ್ರಪನ ಸಾಕ್ಷಿ

ಬಿಕಲಂ ॥ ಮ ।ಪಾ ॥ ಬಸಪಾ

## ಪತ್ರ - ೨೫ : Inam Certificate of Sunkenahalli Jangama Mutt-1875

ಪತ್ರ - ೨೨೫; Inam Certificate of Sunkenahalli Jangama Mutt 1875.

AD-INTERIM CERTIFICATE.

ಪತ್ರ - ೨೨೫.

General No. 41033

Quit-rent Register No. 185




INAM CERTIFICATE GRANTED TO *The Managers for the time being of the Jangam Muth at Sunkenahalli*

On behalf of the Chief Commissioner for the Government of the Territories of His Highness the Maharaja of Mysore, I acknowledge the title of *the Jangam Muth* to Inam, situated in the Village of *Yadiyuru Nagasandra* in the Hobli of *Agara* ...... in the Taluk of *Bangalore* ...... of the *Bangalore* District, *Nundydroog* Division, as per particulars shewn in the annexed Schedule.

2. This Inam is confirmed to *the Muth Subject to the payment of a Jodi* ...... as shewn in Column 7 of the Schedule ......

| Description. | Old No. or Name of Fields. | Old Extent in Kandis. K. C. P. | Former Assessment. Rs. As. P. | Former Jodi. Rs. As. P. | Present Quit-rent. Rs. As. P. | Combined Quit-rent. Rs. As. P. | Boundaries in the case of whole villages only. |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| Dry ... | *Survey 53.* | *0-5-10½ Five Coodoos and ten and half padies* | *5-13-1* | *1-8-0* | " | *1-8-0* | *One Rupee and eight annas.* |
| Wet ... | | | | | | | |
| Garden. ... | | | | | | | |

3. This Inam is moreover subject to the payment of general, local, and municipal taxes, and a proportionate share of the cost of the repairs of Government works of irrigation in common with ordinary kandayam ryots.

4. This certificate is issued provisionally and pending the issue of a formal title-deed which will be granted when the actual area and assessment have been finally determined by the Survey and Settlement Department, after the issue of which this document becomes cancelled.

INAM COMMISSIONER'S OFFICE,

Dated *1st July 1875*

Case No. *1*




*For* Inam Commissioner.

EXD.

*C. Jada Row*

